




ಪಂಪ ಮಹಾಕವಿ ವಿರಚಿತ

# ಆದಿಪುರಾಣಂ

ಗದ್ಯಾನುವಾದ

ಕೆ.ಎಲ್.ನರಸಿಂಹ ಶಾಸ್ತ್ರಿ

ಮನುಷ್ಯ ಜಾತಿ
ತಾನೊಂದೆ ವಲಂ



ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು-೫೬೦೦೧೮

೮೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

ಪಂಪಮಹಾಕವಿ ವಿರಚಿತ

# ಆದಿಪುರಾಣಂ

ಗದ್ಯಾನುವಾದ

ಕೆ.ಎಲ್. ನರಸಿಂಹಶಾಸ್ತ್ರಿ




ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು - ೫೬೦ ೦೧೮.

PAMPA MAHAKAVI VIRACHITA **ADIPURANAM** Original text with prose rendering in Kannada by : **Sri. K.L.Narasimhashastry**
published by : **Kannada Sahitya Parishattu**, Pampa Mahakavi Road,
Chamarajapete, Bengaluru - 560018
Pages : 676 + iv Price : Rs. **300=00 ; 2016**

ಮುದ್ರಣ ವರ್ಷ : ೨೦೧೬
ಪ್ರತಿಗಳು : ೧೦೦೦
ಬೆಲೆ : ಮುನ್ನೂರು ರೂಪಾಯಿಗಳು





ಮುಖಪುಟ ಕಲಾವಿನ್ಯಾಸ : ಶ್ರೀ ಯು.ಟಿ. ಸುರೇಶ್

ಮುದ್ರಣ : ಬಿ.ಎಂ.ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೧೮

# ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತು ನಾಡು, ನುಡಿ, ಸಂಸ್ಕೃತಿಗಳ ಸಂರಕ್ಷಣೆ ಮತ್ತು ಸಂವರ್ಧನೆಗಾಗಿ ಶ್ರಮಿಸುತ್ತಿರುವ ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆ. ೧೯೧೫ ರಿಂದ ಇಲ್ಲಿಯವರೆಗಿನ ಸುದೀರ್ಘ ಇತಿಹಾಸದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ತನ್ನ ಕಾರ್ಯಕ್ಷೇತ್ರವನ್ನು ವೈವಿಧ್ಯಮಯವಾಗಿ ವಿಸ್ತರಿಸಿಕೊಂಡಿದೆ. ಅದರಲ್ಲಿ ಕನ್ನಡಿಗರಿಗೆ ಅತ್ಯುತ್ತಮ ಸಾಹಿತ್ಯವನ್ನು ಕಾಲಕಾಲಕ್ಕೆ ಒದಗಿಸಿಕೊಡುವುದೂ ಪ್ರಮುಖವಾದುದಾಗಿದೆ. ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ಒಳಗೊಳ್ಳುವಂಥ ಸಾವಿರಾರು ಕೃತಿಗಳನ್ನು ಪರಿಷತ್ತು ಹೊರತಂದಿದೆ. ಜನರಿಗೆ ಬೇಕಾದ ಉಪಯುಕ್ತ ಹಾಗೂ ಮೌಲಿಕ ಕೃತಿಗಳನ್ನು ಕನ್ನಡಿಗರಿಗೆ ಕೊಡಬೇಕೆನ್ನುವ ಎಚ್ಚರವನ್ನು ಪರಿಷತ್ತು ಕಾದುಕೊಂಡಿದೆ. ಕನ್ನಡ ಭಾಷೆ, ಲಿಪಿ, ಸಂಸ್ಕೃತಿ ಕುರಿತ ಗ್ರಂಥಗಳು, ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳ ಗದ್ಯಾನುವಾದಗಳು, ಕವಿಕಾವ್ಯ ವಿಚಾರ ಸಂಕಿರಣಗಳ ಪ್ರಬಂಧಗಳು, ಜೀವನ ಚರಿತ್ರೆ, ಜಾನಪದ, ಶಾಸನ, ಆರೋಗ್ಯ ವಿಜ್ಞಾನ, ಮನೋವಿಜ್ಞಾನದಂಥ ವಿಭಿನ್ನ ಪ್ರಕಾರಗಳ ಪುಸ್ತಕಗಳನ್ನು ಪ್ರಕಟಿಸುವಲ್ಲಿ ಆಸಕ್ತಿ ತೋರಿದೆ. ಬೇಡಿಕೆ ಹೆಚ್ಚಾಗಿರುವ ಮತ್ತು ಮಾರಾಟವಾದ ಪುಸ್ತಕಗಳನ್ನು ಮರುಮುದ್ರಣದ ಮೂಲಕ ಸಹೃದಯರಿಗೆ ತಲುಪಿಸುತ್ತಿದೆ.

ಪ್ರಸ್ತುತ ಪಂಪ ಮಹಾಕವಿ ವಿರಚಿತ **'ಆದಿಪುರಾಣಂ'** ಗ್ರಂಥವು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಅಖಿಲ ಭಾರತ ೮೨ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮರುಮುದ್ರಣವಾಗುತ್ತಿರುವುದು ಹೆಮ್ಮೆಯ ಸಂಗತಿ. ಎಂದಿನ ಪ್ರೀತ್ಯಾದರಗಳಿಂದ ಈ ಕೃತಿಯನ್ನು ಸಹೃದಯ ಕನ್ನಡಿಗರು ಸ್ವೀಕರಿಸುತ್ತಾರೆಂದು ನಂಬಿದ್ದೇನೆ. ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿದ ಬಿ.ಎಂ.ಶ್ರೀ. ಅಚ್ಚುಕೂಟದ ಸಿಬ್ಬಂದಿ ವರ್ಗಕ್ಕೂ, ಈ ಕೆಲಸದಲ್ಲಿ ಸಹಕರಿಸಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

೦೧-೧೦-೨೦೧೬

ಡಾ. ಮನು ಬಳಿಗಾರ್
ಅಧ್ಯಕ್ಷರು

# ವಿಷಯ ಸೂಚಿ

# ಪೀಠಿಕೆ

ಕನ್ನಡ ಸಾಹಿತ್ಯವು ಸುಮಾರು ಸಾವಿರ ವರ್ಷಗಳಿಂದಲೂ ಕ್ರಮಕ್ರಮವಾಗಿ ಬೆಳೆದು ಪುಷ್ಟಿಗೊಂಡು ಹೆಮ್ಮರವಾಗಿ ಬೆಳಗುತ್ತಿದೆ. ವಿವಿಧ ಕೃತಿಗಳೆಂಬ ರಸವತ್ಫಲಗಳಿಂದ ಶೋಭಿಸುತ್ತಿದೆ. ಬಗೆಬಗೆಯ ಕಾವ್ಯಫಲಗಳ ಮಾಧುರ್ಯಗಳಿಂದ ಸಹೃದಯರ ಮನವನ್ನು ಸಮಾಕರ್ಷಿಸುತ್ತಿದೆ. ಅದು ಬಗೆಬಗೆಯ ವರ್ಣನಾವೈಖರಿಗಳಿಂದಲೂ ರಸಭಾವ ಪ್ರದರ್ಶನಗಳಿಂದಲೂ ಉಕ್ತಿ ಚಾತುರ್ಯಗಳಿಂದಲೂ ಜ್ಞಾನಪಿಪಾಸುಗಳ ಹೃನ್ಮನಗಳನ್ನು ತಣಿಸುತ್ತಿದೆ.

ಧರ್ಮದೃಷ್ಟಿಯಿಂದಲೂ ಭಗವದ್ಭಕ್ತಿಯಿಂದಲೂ ಭರಿತವಾದ ಶ್ರೇಷ್ಠಕಾವ್ಯ ಆದಿಪುರಾಣ. ಇಲ್ಲಿ ಜೈನಧರ್ಮದ ಸಾರವು ಕನ್ನಡ ಕಾವ್ಯರೂಪದಿಂದ ಮೂರ್ತಿಮತ್ತಾಗಿ ಕಾಣಿಸಿಕೊಂಡಿದೆ. ಮಹಾಮಹಿಮನಾದ ಆದಿಜಿನಸ್ವಾಮಿಯ ಶ್ರೇಷ್ಠಮಯವೂ ತ್ಯಾಗಪೂರ್ಣವೂ ಆದ ಕಥೆಯು ಇದರ ಕಥಾವಸ್ತುವಾಗಿದೆ. ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರ ಮತ್ತು ಸಮ್ಯಗ್ದರ್ಶನಗಳಿಂದ ಸಮಾಕೃಷ್ಟನಾಗಿ ಆ ಮಾರ್ಗಗಳಿಂದಲೇ ಶುಚಿಜೀವನವನ್ನು ಕಲ್ಪಿಸಿಕೊಂಡ ಮಹಾಕವಿಯು ತನ್ನ ನಚ್ಚಿನ ಧರ್ಮದ ಪ್ರಚಾರಕಾರ್ಯವನ್ನು ತನ್ಮೂಲಕ ಕೈಗೊಂಡಿದ್ದಾನೆ. ಜಿನಧರ್ಮವನ್ನೂ ಕಾವ್ಯಧರ್ಮವನ್ನೂ ಮೇಳವಿಸಿ ಒಂದು ಪರಂಪರೆಯ ಸೃಷ್ಟಿಕರ್ತನಾಗಿ ಬೆಳಗುತ್ತಿದ್ದಾನೆ. ತತ್ಫಲವಾಗಿ ಆದಿಪುರಾಣವು ಪರಮೇಶ್ವರನ ದಿವ್ಯಸಾಕ್ಷಾತ್ಕಾರಕ್ಕೆ ಸಾಧನವಾದ ಮೆಟ್ಟಲಾಗಿದೆ. ಓದುಗರು ಯಾವುದೇ ದೃಷ್ಟಿಯಿಂದ ಈ ಕಾವ್ಯವನ್ನು ವೀಕ್ಷಿಸಿದರೂ, ಅವರವರ ದೃಷ್ಟಿಗೆ ತಕ್ಕುದಾದ ಭಗವದ್ಭಕ್ತಿಯನ್ನೋ, ತ್ರಿವರ್ಗಫಲವನ್ನೋ ಇಲ್ಲವೇ ಕಾವ್ಯರಸಾಸ್ವಾದನೆಯಿಂದ ಒದಗುವ ತುಷ್ಟಿಯನ್ನೋ ತಂದೀಯಲು ಸಮರ್ಥವಾಗಿದೆ.

**ಪಂಪನ ಕಾಲ**

ಪಂಪನು ಆದಿಪುರಾಣದ ಕರ್ತೃ. ಅವನು ಶಕವರ್ಷಮೆಂಟುನೂಱಕ್ಕೆ ಕಡೆಯೊಳಱವತ್ತುಮೂಱು ಸಂದಂದು ಪ್ಲವಸಂವತ್ಸರದ ಕಾರ್ತಿಕಮಾಸದಲ್ಲಿ ನಂದೀಶ್ವರದಲ್ಲಿ ಆದಿಪುರಾಣವನ್ನು ಬರೆದು ಪೂರ್ಣಗೊಳಿಸಿದಂತೆ ಹೇಳಿಕೊಂಡಿದ್ದಾನೆ. ಅದು - ಅಂದರೆ ಶಾಲಿವಾಹನಶಕ ೮೬೩ನೆಯ ಪ್ಲವಸಂವತ್ಸರವು ಕ್ರಿ.ಶ. ೯೪೧ಕ್ಕೆ ಸರಿಹೊಂದಿಕೊಳ್ಳುತ್ತದೆ. ಇದೇ ಪಂಪಮಹಾಕವಿಯ ಜೀವಿತಕಾಲವೆಂದು ವಿದ್ವಜ್ಜನರ ನಂಬುಗೆಯಾಗಿದೆ. ಆದರೆ "ಸಿತಪಕ್ಷದ ಪಂಚಮಿ ದಿನಪತಿವಾರಂ ಶುಭದ ಮೂಲನಕ್ಷತ್ರದೊಳನ್ವಿತಮಾಗೆ" ತಿಥಿ-ವಾರ-ನಕ್ಷತ್ರಗಳು ಕ್ರಿಸ್ತಶಕ ೯೪೧ಕ್ಕೆ ಸರಿಹೊಂದವೆಂದೂ, ೯೪೨ ಅಕ್ಟೋಬರ್ ೧೬ನೆಯ ಭಾನುವಾರಕ್ಕೆ ಸರಿಹೊಂದುವುದೆಂದೂ ಮಂಜೇಶ್ವರದ ಶ್ರೀ ಗೋವಿಂದಪೈರವರು ಲೆಖ್ಖ ಹಾಕಿ ನಿರ್ಣಯಿಸಿದ್ದಾರೆ.

ಆದಿಪುರಾಣದ ಮತ್ತೊಂದು ಪದ್ಯದಲ್ಲಿ ಪಂಪನು ತನ್ನನ್ನು 'ದುಂದುಭಿ

ಸಂವತ್ಸರೋದ್ಭವ'ನನ್ನಾಗಿ ಸಾರಿಕೊಂಡಿದ್ದಾನೆ. ಅದರಂತೆ ಆದಿಪುರಾಣವನ್ನು ರಚಿಸುತ್ತಿರುವ ಕಾಲಕ್ಕೆ ಪಂಪನಿಗೆ ೩೯ ವರ್ಷಗಳಾಗಿದ್ದಂತೆ ಕಂಡುಬರುತ್ತದೆ. ಪಂಪ ಹುಟ್ಟಿದ್ದು ಶಾಲಿವಾಹನಶಕ ೮೪೨ಕ್ಕೆ ಸಲ್ಲುವ ಕ್ರಿ.ಶ. ೯೦೨-೩ರಲ್ಲಿ ಎನ್ನಬಹುದಾಗಿದೆ, ಹುಟ್ಟಿದ ದಿನವನ್ನು ನಿಖರವಾಗಿ ಗೊತ್ತುಪಡಿಸಲಾಗಿಲ್ಲ.

ಪಂಪನು ಜನ್ಮತಃ ಜೈನನಾಗಿದ್ದರೂ ಅವನ ಪೂರ್ವಜರು ಕರ್ಮನಿಷ್ಠರಾದ ವೈದಿಕ ಬ್ರಾಹ್ಮಣರು. ಅವರೆಲ್ಲರೂ ತಮ್ಮೊಂದು ವೇದಾಧ್ಯಯನದಿಂದಲೂ ಯಜ್ಞ ಯಾಗಾದಿ ಕರ್ಮಾನುಷ್ಠಾನಗಳಿಂದಲೂ ಆ ಕಾಲದಲ್ಲಿ ಸದಾಚಾರಸಂಪನ್ನರೆಂದು ಹೆಸರಾಂತವರು.

ಅವನ ತಾತ ಮುತ್ತಾತಂದಿರು ನೆಲಸಿದ್ದುದು ವೆಂಗಿಮಂಡಲದ ವೆಂಗಿಪಳುವಿನಲ್ಲಿ. ಅದು ಕೃಷ್ಣಾ ಗೋದಾವರಿಗಳ ನಡುವೆ ಪೂರ್ವಸಮುದ್ರದ ತನಕ ಹರಡಿ ಹಬ್ಬಿದ್ದ ವಿಶಾಲವಾದ ನಾಡು.

**ನಯಶಾಲಿ ವತ್ಸಗೋತ್ರ**
**ಶ್ರಯಣೀಯನನೇಕ ಸಕಳ ಶಾಸ್ತ್ರಾರ್ಥವಿನಿ**
**ಶ್ಚಯಮತಿಕೃತಿ ಮಾಧವಸೋ**
**ಮಯಾಜಿ ಸಲೆ ನೆಗೞ್ದನಾ ಸಮುದ್ರಂಬರೆಗಂ**

ಸಕಲಶಾಸ್ತ್ರಾರ್ಥಪಾರಂಗತಮತಿಯಾದ ಮಾಧವಸೋಮಯಾಜಿಯು ತನ್ನೊಂದು ಮಂತ್ರಪ್ರಭಾವದಿಂದ ನಿಖಿಲ ಜನರ ಹೃದಯಗಳನ್ನು ಗೆದ್ದಿದ್ದನು. 'ಶಕ್ರ-ಶಶಾಂಕ-ಸೂರ್ಯಪವಮಾನ'ರೂ ಅವನ ಮಂತ್ರಶಕ್ತಿ ಪ್ರಭಾವಕ್ಕೆ ಒಳಗಾಗಿದ್ದರು. ಹೀಗೆ ಅವನು ಸರ್ವಾಧ್ವರಯಾಜಿಯಾಗಿ ಬೆಳಗಿದ್ದನು. ಆದರೂ ಅವನು,

**ವರದಿಗ್ವನಿತೆಗೆ ಮಾಟದ**
**ಕುರುಳಾ ತ್ರೈಭುವನಕಾಂತೆಗಂ ದಲ್ ಕಂಠಾ**
**ಭರಣಮೆನೆ ಪರೆದ ತನ್ನ**
**ಧ್ವರಧೂಮದೆ ಕರಿದುಮಾಡಿದಂ ನಿಜಯಶಮಂ**

ಸಕಲ ಯಜ್ಞಸೋಮಯಾಜಿಯಾಗಿ ಅನೇಕ ಯಜ್ಞಯಾಗಾದಿಗಳನ್ನು ಕೈಕೊಂಡು ಅವುಗಳ ಹೊಗೆಯಿಂದ (ಪ್ರಾಣಿಹಿಂಸೆಯಿಂದ) ತನ್ನ ಯಶಸ್ಸಿಗೆ ಕಳಂಕವನ್ನು ಹಚ್ಚಿಕೊಂಡನೆಂದು ಪಂಪನು ಶೋಕಿಸುತ್ತಾನೆ.

ಮಾಧವ ಸೋಮಯಾಜಿಯು ಪುತ್ರ ಅಭಿಮಾನಚಂದ್ರ. ಅವನು 'ಕರಿ ತುರಗೋತ್ತಮಮಣಿಕನಕ ಸಾರವಸ್ತು'ಗಳನ್ನು ಬೇಡಿಬೇಡಿದವರಿಗೆಲ್ಲ ದಾನ ಮಾಡಿ ಪ್ರಖ್ಯಾತಿಯನ್ನು ಪಡೆದಿದ್ದನು. 'ಅವನ ಮಗ ಕೊಮರಯ್ಯ. ಅವನು ವೇದವೇದಾಂಗ ಸಮುದ್ಯೋತಿತಮತಿಯುತನೂ, ಉಚಿತ ಪುರಾತನಚರಿತನೂ ಆಗಿದ್ದನು. ಅವನ ಮಗ ಅಭಿರಾಮ ದೇವರಾಯನು ಅವನಿತಕಲಾಕಾಶವ್ಯಾಪ್ತಕೀರ್ತಿಯೂ ನಿಜಗುಣಮಣಿ

ರತ್ನಾಕರನೂ ಅಜ್ಞಾನತಮೋನಿಕರನೂ ಆಗಿ ಪ್ರಕಾಶಿಸುತ್ತಿದ್ದನು. ಅವನು ತನ್ನ ಮುತ್ತಜ್ಜನಂತೆ ತನ್ನ ಕೀರ್ತಿಗೆ ಕಳಂಕವನ್ನೆಂದೂ ಹಚ್ಚಿಕೊಂಡವನಲ್ಲ. ಅಜ್ಞಾನವೆಂಬ ಕತ್ತಲನ್ನು ಬಡಿದೋಡಿಸಿ ತನ್ನ ಉತ್ತಮವಾದ ಜಾತಿಯನ್ನು ಮತ್ತಷ್ಟು ಉಜ್ವಲವನ್ನಾಗಿ ಮಾಡಿಕೊಂಡವನು.

**ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ ನಂಬಲೇ**
**ಮಾತೊ ಜಿನೇಂದ್ರಧರ್ಮಮೆ ವಲಂ ದೊರೆ ಧರ್ಮದೊಳೆಂದು ನಂಬಿ**
**ಜಾತಿಯನುತ್ತರೋತ್ತರಮೆ ಮಾಡಿ ನೆಗಟ್ಟೆದನಿಂತಿರಾತ್ಮವಿ**
**ಖ್ಯಾತಿಯನಾತನಾತನ ಮಗಂ ನೆಗಟ್ಟಿಂ ಕವಿತಾಗುಣಾರ್ಣವಂ**

ಶ್ರೇಷ್ಠವಾದ ಬ್ರಾಹ್ಮಣಕುಲದಲ್ಲಿ ಜನ್ಮವೆತ್ತಿದವನು ನೆಚ್ಚಲಿಕ್ಕೆ ಜೀವದಯಾ ಪೂರ್ಣವಾದ ಜೈನಧರ್ಮವೇ ತಕ್ಕುದೆಂದು ಪಂಪನ ದೃಢನಿರ್ಧಾರ. ಅಂಥ ಶ್ರೇಷ್ಠವಾದ ಧರ್ಮವೊಂದನ್ನು ತನ್ನ ತಂದೆ ಅಭಿರಾಮದೇವನಪ್ಪಿ ತನ್ನ ಜನ್ಮವನ್ನು ಸಾರ್ಥಕಗೊಳಿಸಿಕೊಂಡನಲ್ಲಾ ಎಂದು ಅವನ ಮೇಲೆ ಅಸದಳವಾದ ಗೌರವ.

ಪಂಪನು ವೇದ ವೇದಾಂತಶಾಸ್ತ್ರಗಳಲ್ಲಿ ನಿಷ್ಣಾತರಾಗಿ ತಾವಪ್ಪಿದ ಧರ್ಮತತ್ವಗಳನ್ನು ಮನಸಾರೆ ಪಾಲಿಸುತ್ತಿದ್ದವರ ವಂಶದಲ್ಲೊಗೆದು ಅವರ ಮೇಲೆ ಪೂರ್ಣಾಭಿಮಾನವನ್ನು ತಳೆದವನು. ಜೈನಮತದಲ್ಲಿನ ಸರ್ವೋತ್ಕೃಷ್ಟತೆಯನ್ನು ಮನಗಂಡು ಅದನ್ನಪ್ಪಿದವನ ಮಗನಾಗಿ, ಆ ಮತದಲ್ಲಿ ಅಪಾರವಾದ ಭಕ್ತಿಶ್ರದ್ಧೆಗಳನ್ನಿಟ್ಟಿರುವವನು. ಹೀಗೆ ಇವನಲ್ಲಿ ಬ್ರಾಹ್ಮಣ ಜೈನಮತಗಳೆರಡರ ಸಂಸ್ಕಾರವು ಸಮನಾಗಿ ಕಲೆತು ಅವನ ಜೀವನದಲ್ಲಿಯೂ ಕಾವ್ಯಗಳಲ್ಲಿಯೂ ಒಂದು ಲೋಕೋತ್ತರತೆಯನ್ನು ಕಾಣಿಸಿದೆ.

## ಅವನ ದೇಶ

ಪಂಪನ ತಾತ ಮುತ್ತಾತಂದಿರು ಬಾಳಿ ಬದುಕಿದ್ದೂ ಭುವನವಿಖ್ಯಾತರಾಗಿ ಮೆರೆದಿದ್ದೂ ವೆಂಗಿಪಳುವಿನಲ್ಲಿ. ಆದರೆ ಅವನ ತಂದೆಯಾದ ಅಭಿರಾಮದೇವನು ಜೈನಮತವನ್ನು ಅಪ್ಪಿದ ಕಾರಣದಿಂದಲೋ, ಅವನ ಬಂಧುಬಾಂಧವರ ಹೀಯಾಳಿಕೆಯ ಮಾತುಗಳಿಂದಲೋ, ಸುತ್ತುಮುತ್ತಿನ ಬ್ರಾಹ್ಮಣಜನರ ಲೇವಡಿಮಾತುಗಳಿಂದಲೋ ಏನೋ ದುಃಖಿತನಾಗಿ ತೆಲುಗುದೇಶವನ್ನು ಬಿಟ್ಟು ಕನ್ನಡನಾಡಿಗೆ ವಲಸೆಬಂದವನಾಗಿರಬೇಕು. ಹಾಗೆ ಬಂದವನು ಪ್ರಕೃತಿವಿಭೂಷಿತವಾದ ಬನವಾಸಿಯಲ್ಲಿ ನೆಲಸಿದವನಾಗಿರಬೇಕು. ಆದ್ದರಿಂದಲೇ ಬನವಾಸಿಯು ಪಂಪನ ಹುಟ್ಟುನೆಲೆಯಾಗಿರಬೇಕು. ಅಲ್ಲಿನ ಪ್ರಕೃತಿಮಾತೆಯ ಮಡಿಲಲ್ಲಿ ಪಂಪನು ತನ್ನ ಬಾಲ್ಯ ತಾರುಣ್ಯಗಳನ್ನು ಕಳೆದಿರಬೇಕು. ಅವನ ಕವಿತಾಶಕ್ತಿಯನ್ನು ಕುದುರಿಸಿ ಬೆಳೆಸಿ ಪೋಷಿಸಿದ ನಾಡು ಬನವಾಸಿಯೇ ಇರಬೇಕು. ಕವಿಯೂ ಕೂಡ ತನ್ನ ಭಾಷೆ ಪುಲಿಗೆರೆಯ ತಿರುಳ್ಗನ್ನಡವೆ ಎಂದು ಹೇಳಿಕೊಂಡಿದ್ದಾನೆ. ಪುಲಿಗೆರೆಯು ಬನವಾಸಿಯ ನೆರೆನಾಡು. ಆದ್ದರಿಂದ ಈ ಊಹೆಯಲ್ಲಿ ಸ್ವಲ್ಪ ತಥ್ಯಾಂಶವೂ ಉಂಟು.

ಪಂಪನ ಜನ್ಮಸ್ಥಳವು ಬನವಾಸಿಯಾದರೂ ಅವನ ಕಾರ್ಯಕ್ಷೇತ್ರವೆಲ್ಲ ಅಲ್ಲಿಂದ

ಬಹುದೂರವಾದ ಲೆಂಬುಳಪಾಟಕದಲ್ಲಿ. ಅದು ಅಂದು ಚಾಲುಕ್ಯಪ್ರಭುವಾದ ಅರಿಕೇಸರಿಯ ರಾಜಧಾನಿ. ಪಂಪನು ಪ್ರಾಯಶಃ ತನ್ನ ಜೀವನನಿರ್ವಾಹಕ್ಕಾಗಿ ಆ ರಾಜನಾಶ್ರಯವನ್ನು ಪಡೆದಿದ್ದನು. ಸೇನೆಯಲ್ಲಿ ಸಣ್ಣ ನೌಕರನಾಗಿ ಸೇರಿ ತನ್ನ ಕರ್ತೃತ್ವಶಕ್ತಿಯಿಂದ ಬಹುಬೇಗ ಉತ್ತರೋತ್ತರ ಉನ್ನತಾಧಿಕಾರಿಯಾಗಿರಬೇಕು. ಅವನ ಧೈರ್ಯ ಸಾಹಸಗಳೂ, ಅಪ್ರತಿಮ ಕವಿತಾಶಕ್ತಿಯೂ ರಾಜನ ಔದಾರ್ಯವನ್ನು ಸೆಳೆದಿರಬೇಕು. ಹೀಗೆ ರಾಜಕಟಾಕ್ಷಪಾತ್ರನಾದ ಪಂಪನು ಉನ್ನತೋನ್ನತ ಸ್ಥಾನವಡೆದು ಸೇನಾಪತಿಯಾಗಿ, ಮಂತ್ರಿಯಾಗಿ, ಆಸ್ಥಾನಕವಿಯಾಗಿ ಕಟ್ಟಕಡೆಯಲ್ಲಿ ರಾಜನ ಆಪ್ತ ಗೆಳೆಯನಾಗಿ ಮೆರೆದಂತೆ ತೋರುತ್ತದೆ.

ಪಂಪನು ನೆಲಸಿದ ಲೆಂಬುಳಪಾಟಕವು ಗಿಡಮರಗಳಿಂದ ವಿಹೀನವಾದ ಬೋಳು ಪ್ರದೇಶ. ಹಚ್ಚಹಸಿರುಗಳಿಂದ ಪರಿಶೋಭಿಸುತ್ತಿರುವ ಬನವಾಸಿಯ ಸುಂದರವನಗಳ ಸೊಬಗೂ, ಗಿರಿನಿರ್ಝರಗಳ ಮಂಜುಲನಿನದವೂ, ಕೋಗಿಲೆಗಳ ಕುಹೂಧ್ವನಿಗಳೂ, ನವಿಲುಗಳ ನರ್ತನವೂ ಪಂಪನ ಕವಿಹೃದಯದ ಮುಂದೆ ಆಗಾಗ ಸುಳಿದಾಡುತ್ತಿದ್ದಂತೆ ಭಾಸವಾಗುತ್ತದೆ. ಆತನ ಕಾವ್ಯರತ್ನಗಳಲ್ಲೊಂದಾದ ವಿಕ್ರಮಾರ್ಜುನ ವಿಜಯದಲ್ಲಿ ಬರುವ ಬನವಾಸಿಯ ವರ್ಣನೆಯನ್ನು ನೋಡಿದರೆ ಇದರ ಯಥಾರ್ಥತೆಯು ಸ್ಪಷ್ಟವಾಗುತ್ತದೆ. ಅದರ ಕಥಾಪುರುಷನಾದ ಅರ್ಜುನನು ದಿಗ್ವಿಜಯದ ನೆಪದಿಂದ ದೇಶವಿದೇಶಗಳನ್ನು ಪರ್ಯಟನ ಮಾಡುತ್ತಾ ಬನವಾಸಿಯ ಬಳಿಗೆ ಆಗಮಿಸುತ್ತಾನೆ. ಅದರ ಸುತ್ತಮುತ್ತಲಿನ ಕವಿಹೃದಯವನ್ನನುಭವಿಸಿದ ಸುಂದರ ಸನ್ನಿವೇಶಗಳ ವರ್ಣನೆಯನ್ನು ಅರ್ಜುನನ ಮೂಲಕ ಕವಿಯು ಹೊರಡಿಸುತ್ತಾನೆ.

**ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ಪೂತ ಜಾತಿ ಸಂ**
**ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಮೊಗಂ**
**ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಳ್ಪೊಡಾವ ಬೆ**
**ಟ್ಟುಗಳೊಳಂ ಆವ ನಂದನವನಂಗಳೊಳಂ ಬನವಾಸಿದೇಶದೊಳ್**

ಬನವಾಸಿಯ ಸುತ್ತುಮುತ್ತಲಿನ ಎಲ್ಲ ಪರ್ವತಗಳಲ್ಲಿಯೂ ಉದ್ಯಾನವನ ಗಳಲ್ಲಿಯೂ ಎಲ್ಲಿ ನೋಡಿದರಲ್ಲಿ ಸೊಗಸಾಗಿ ಫಲ ಬಿಟ್ಟ ಮಾವಿನಮರಗಳೂ, ಹಂದರವಾಗಿ ಹಬ್ಬಿರುವ ಎಲೆ ಬಳ್ಳಿಗಳೂ, ಹೂ ಕಾಣಿಸಿಕೊಂಡ ಜಾಜಿಸಂಪಗೆಗಳೂ, ಕುಹೂ ಎಂದು ಕೂಗಿಡುತ್ತಿರುವ ಕೋಗಿಲೆಗಳೂ, ಸಂಗೀತಗೈಯುತ್ತಿರುವ ತುಂಬಿಗಳೂ, ಮುಗುಳುನಗೆಯನ್ನು ಮುಖದಲ್ಲಿ ಬೀರುತ್ತಾ ಕೂಡುತ್ತಿರುವ ನಲ್ಲನಲ್ಲೆಯರೂ ಕಂಡುಬರುತ್ತಿದ್ದಾರೆ. ಅದೆಂತಹ ಆನಂದಮಯ ಸುಂದರ ಸನ್ನಿವೇಶ ಈ ಬನವಾಸಿಯದು! ಎಂದು ಹಿಗ್ಗುತ್ತಾನೆ. ಸುಕೃತಶಾಲಿಗಳು ಮಾತ್ರ ಇಂತಹ ಭೋಗಭಾಗ್ಯವನ್ನು ಎಟುಕಿಸಿ ಕೊಳ್ಳುತ್ತಾರೆ ಎಂದು ಆನಂದಿಸುತ್ತಾನೆ.

ನನಗೆ ಕೀರ್ತಿಯನ್ನು ಕುರಿತಾಗಲೀ, ವಿದ್ಯಾವೈದುಷ್ಯವನ್ನು ಕುರಿತಾಗಲೀ, ಸುಖವನ್ನು ಕುರಿತಾಗಲೀ, ವ್ಯಾಮೋಹವಿನಿತೂ ಇಲ್ಲ. ನನಗಿರುವ ವ್ಯಾಮೋಹವೆಂದರೆ

ಭಾರತದೇಶದಲ್ಲಿ ಜನ್ಮದಳೆಯಬೇಕೆಂಬುದು. ಎಲೈ ಪರಮಾತ್ಮ ! ನೀನದನ್ನನುಗ್ರಹಿಸಿ ನನಗೆ ಭಾರತದೇಶದಲ್ಲಿ ಜನ್ಮದಳೆಯಲವಕಾಶ ಕೊಡು. ಅದಾಗದಿದ್ದರೆ ಪಶುವಾಗಿ ಹುಟ್ಟಿಸು; ಅದೂ ಸಾಧ್ಯವಿಲ್ಲದಿದ್ದರೆ ಹಕ್ಕಿಯಾಗಿಯೋ, ಜಂತುವಾಗಿಯೋ, ಗಿಡಮರಗಳಾಗಿಯೋ, ಕೊನೆಗೆ ಕಲ್ಲಾಗಿಯೋ ಹುಟ್ಟುವಂತೆ ನನಗೆ ಅವಕಾಶವನ್ನು ಕೊಡು ಎಂದು ಸಂಸ್ಕೃತಕವಿಯೊಬ್ಬನು ಪ್ರಾರ್ಥಿಸುವಂತೆ[೧] ಪಂಪನೂ ಪ್ರಾರ್ಥಿಸಿದ್ದಾನೆ.

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರಮಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ
ನಾಗಿಯುಮೇನೊ ತೀರ್ದಪುದೇ ತೀರದೊಡಂ ಮಱಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿದೇಶದೊಳ್

ತ್ಯಾಗ, ಭೋಗ, ಸಾಹಿತ್ಯ, ಸಂಗೀತಾದಿ ಸರಸಪ್ರಸಂಗ ಗೋಷ್ಠಿಗಳಿಗೆ ಆಶ್ರಯರಾದ ಮಾನವರೆ ಮಾನವರು. ಅಂಥವರು ಮಾಡುವ ಎಲ್ಲ ಪ್ರಯತ್ನಗಳೂ ಶ್ಲಾಘ್ಯವಾದುವು. ಬನವಾಸಿಯ ಜನರೆಲ್ಲರೂ ಇಂತಹ ಪುಣ್ಯಶಾಲಿಗಳೇ. ಒಂದು ಪಕ್ಷ ಮನುಷ್ಯರಾಗಿ ಹುಟ್ಟುವ ಅದೃಷ್ಟವಿಲ್ಲದಿದ್ದರೆ ಬನವಾಸಿಯ ನಂದನವನದಲ್ಲಿ ದುಂಬಿಯಾಗಿಯೋ ಕೋಗಿಲೆಯಾಗಿಯೋ ಹುಟ್ಟಿದರೆ ಸಾಕು ಎಂದು ಹಂಬಲಿಸುತ್ತಾನೆ.

ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
ಯಂ ಕಿವಿವೊಕ್ಕಡಂ ಮಲ್ಲಿಗೆಗಂಡೊಡಮಾದ ಕೆಂದಲಂ
ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಶಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ

ಮಂದಮಾರುತವು ಮೆಲ್ಲಡಿಯಿಟ್ಟರೂ ಮೃದುಮಧುರವಾದ ಮಾತುಗಳನ್ನು ಕೇಳಿದರೂ, ಇಂಪಾದ ಸಂಗೀತವು ಕಿವಿಗೆ ಬಿದ್ದರೂ, ಅರಳಿದ ಮಲ್ಲಿಗೆಯು ಕಣ್ಣಿಗೆ ಬಿದ್ದರೂ, ಪ್ರಣಯಸುಖವನ್ನು ನೆನೆದರೂ, ವಸಂತದ ವೈಭವವು ಕಣ್ಣಿಗೆ ಬಿದ್ದರೂ ಮನಸ್ಸು ಮದ್ದಾನೆಯಂತೆ ತನ್ನನ್ನು ಯಾರೇ ಅಂಕುಶದಿಂದ ತಿವಿದರೂ ಜಗ್ಗದಂತೆ ಬನವಾಸಿದೇಶದತ್ತ ಮುನ್ನುಗ್ಗಿ ಹೋಗುತ್ತಿದೆ.

ಹೊರದೇಶದಲ್ಲಿ ನೆಲಸಿರುವ ಕವಿಗೆ ತನ್ನ ತಾಯ್ನಾಡಿನ ನೆನಪು ಬರುವ ಸನ್ನಿವೇಶಗಳನ್ನೂ ಅದರಿಂದ ಮೂಡಬಹುದಾದ ಭಾವಾವೇಶವನ್ನೂ ಕವಿಯಿಲ್ಲಿ ಓದುಗರ

---

೧. ನಮೋ ವಾಂಛಾಸ್ತಿ ಯಶಸಿ ವಿದ್ವತ್ತ್ವೇ ನಚವಾಸುಖೇ
.....ನೈವವಾಸ್ವಗೇ ಮೋಕ್ಷೇಪ್ಯಾನಂದದಾಯಕೇ
ಪರಂತ ಭಾರತೇ ಜನ್ಮ ಮಾನವಸ್ಯ ಚ ವಾ ಪಶೋಃ
ವಿಹಂಗಸ್ಯ ಚವಾ ಜಂತೋಃ ವೃಕ್ಷಪಾಷಾಣಯೋರಪಿ

ಹೃದಯದ ಮೇಲೆ ಸುಂದರವಾಗಿ ಮೂಡಿಸಿದ್ದಾನೆ. ಸ್ವಾನುಭವವಿಲ್ಲದೆಯೆ ಇಂಥ ಮಾತು ಖಂಡಿತ ಯಾರ ಹೃದಯದಿಂದಲೂ ಹೊರಬೀಳದು.

ಪಂಪನ ಹುಟ್ಟುಭೂಮಿಯು ಸೊಬಗಿಗೆ ತವರೂರಾದ ಮಲೆನಾಡಾಗಿದ್ದರೂ ಆತನು ಹೊಟ್ಟೆಪಾಡಿಗಾಗಿ ಬಿಸಿಲಿನ ಬೇಗೆಗೆ ಬಿರುಕೊಡೆಯುವ ಲೆಂಬುಳಪಾಟಕಕ್ಕೆ ಹೋಗಿ ಕೆಲಸಕ್ಕೆ ಸೇರಬೇಕಾಯಿತು. ಆದರೆ ಅದೊಂದೆ ಕಾರಣವಿರಲಾರದು. ಪಂಪನು ಸ್ವಭಾವತಃ ಅಭಿಮಾನಧನ, 'ಪೆಱರೀವುದೇಂ ? ಪೆಱರ್ ಮಾಡುವುದೇಂ ? ಪೆಱರಿಂದಮಪ್ಪುದೇಂ' ಎಂಬ ಧೋರಣೆಯುಳ್ಳವನವನು. ರಾಜರು ಅತಿಚಪಲರು, ಅವರು ಬೇಕಾದವರನ್ನು ಏರಿಸಿ ಕುಣಿಸುವರು, ಬೇಡದವರನ್ನು ಕೆಳಗಿಳಿಸಿ ಮೂದಲಿಸುವರು. ಅವರು ವಿಶ್ವಾಸಕ್ಕನರ್ಹರು ಎಂಬುದು ಪಂಪನಿಗೆ ಗೊತ್ತಿದ್ದ ವಿಷಯವಾಗಿತ್ತು ! ಅವರ ಮೇಲೆ ಅವನ ಗೌರವ ಅಷ್ಟಕಷ್ಟೆ.

**ಕಲಿಯನೆ ಪಂದೆ ಮಾಟ್ಟಿ ಕಡುಪಂದೆಯನೊಳ್ಗಲಿ ಮಾಳ್ಪ ತಕ್ಕನಂ**
**ಪೊಲೆಯನೆ ಮಾಳ್ಪ ಮುಂ ಪೊಲೆಯನಂ ನೆಱೆ ತಕ್ಕನೆ ಮಾಟ್ಪ ತಮ್ಮೊಳ**
**ಗ್ಗಲಿಸಿ ಪೊದಟ್ದು ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂ**
**ಚಲಮದರಿಂದಮೋಲಗಿಸಿ ಬಾಟ್ವುದೆ ಕಷ್ಟಮಿಳಾಧಿನಾಥನರಂ**

ಶೂರನನ್ನು ಹೇಡಿಯೆನ್ನುವರು, ಕಡುಹೇಡಿಯನ್ನು ವಿಕ್ರಾಂತಪುರುಷನನ್ನಾಗಿಸುವರು. ಯೋಗ್ಯನನ್ನು ಹೊಲೆಯನೆನ್ನುವರು. ಅತಿಕೆಟ್ಟವನನ್ನು ಯೋಗ್ಯನನ್ನಾಗಿ ಸಾರುವರು. ಹಬ್ಬಿ ಹರಡಿಕೊಂಡಿರುವ ಅವಿವೇಕದಿಂದ ನಡೆದುಕೊಳ್ಳುವ ರಾಜರ ಚಿತ್ತವೃತ್ತಿಯು ಸಂಚಲವಾದುದು. ಅವರ ಆಶ್ರಯದಿಂದ ಬಾಳ್ವಿಕೆ ನಡೆಸುವುದು ಅತಿ ಕಷ್ಟ ಎಂದು ಪಂಪನ ಭಾವನೆ. ಹೀಗಿದ್ದರೂ ಅರಿಕೇಸರಿಯನ್ನು ಆಶ್ರಯಿಸಲು ಅವನೊಡನೆ ವಿಶೇಷವಾಗಿ ಬೆಳೆಸಿದ್ದ ಗೆಳೆತನವೇ ಕಾರಣವಿರಬೇಕು. ರಾಷ್ಟ್ರಕೂಟರಾಜರ ಅಧೀನನಾಗಿದ್ದರೂ, ಅವರಲ್ಲಿ ಪ್ರಭಾವಶಾಲಿಯಾದ ವ್ಯಕ್ತಿಯಾಗಿ ಮೇಲಾಗಿ ಸಂಬಂಧಿಯಾಗಿ ಮೆರೆಯುತ್ತಿದ್ದ ಅರಿಕೇಸರಿಯಲ್ಲಿ ಪಂಚಪ್ರಾಣಗಳನ್ನಿಟ್ಟಿದ್ದನು ಪಂಪ. ಅರಿಕೇಸರಿಯೂ ಕೂಡ ಪೂರ್ಣಾನುಗ್ರಹದಿಂದ ಕೂಡಿದವನಾಗಿ ಕವಿತಾಗುಣಾರ್ಣವನೆಂಬ ಬಿರುದನ್ನೂ ವಿಪುಲ ಐಶ್ವರ್ಯ ಕೀರ್ತಿ ಪ್ರತಿಷ್ಠೆಗಳನ್ನೂ ನೀಡಿ ಅವನನ್ನು ಗೌರವಿಸಿದನು. ಕೇವಲ ಸಾಮಂತರಾಜನಾದ ಅರಿಕೇಸರಿಯೂ ಪಂಪನಿಂದ ಮಹಾಮಹಿಮಶಾಲಿಯೂ ಶೂರಾಗ್ರಣಿಯೂ ಆದ ಅರ್ಜುನನೊಡನೆ ಅಭಿನ್ನತೆಯಿಂದ ವರ್ಣಿತನಾಗಿ 'ವಿಕ್ರಮಾರ್ಜುನವಿಜಯ'ಯೆಂಬ ಕಾವ್ಯದಲ್ಲಿ ಕೀರ್ತಿತನಾದನು.

ಪಂಪನಿಗೆ ಐಶ್ವರ್ಯವೂ ರಾಜಾನುಗ್ರಹವೂ ಸಕಲ ಸಂಪತ್ತುಗಳೂ ದೈವಾನುಗ್ರಹದಿಂದ ಪ್ರಾಪ್ತವಾಗಿದ್ದುವು. ಅವುಗಳ ಜೊತೆಗೆ ಅವನಲ್ಲಿ ಶಾರೀರಿಕ ಸೌಂದರ್ಯವೂ ಮನೆಮಾಡಿತ್ತು.

ಕದಲೀಗರ್ಭಶ್ಯಾಮಂ
ಮೃದುಕುಟಿಲಶಿರೋರುಹಂ ಸರೋರುಹವದನಂ
ಮೃದು ಮಧ್ಯಮತನು ಹಿತಮಿತ
ಮೃದುವಚನಂ ಲಲಿತಮಧುರಸುಂದರವೇಷಂ

ಅವನ ಮೈಬಣ್ಣವು ಬಾಳೆಯ ದಿಂಡಿನ ಮಧ್ಯದಲ್ಲಿರುವ ನಸುಗಪ್ಪಿನಂತಿತ್ತು. ಕೂದಲು ಗುಂಗುರು ಗುಂಗುರಾಗಿತ್ತು. ಕಮಲದಂತೆ ಮುಖವು ದುಂಡಾಗಿತ್ತು. ದೇಹವು ಸುಕುಮಾರವಾಗಿ ಮಟ್ಟಸವಾಗಿತ್ತು. ಮಾತುಗಳು ಹಿತವಾಗಿಯೂ ಮಿತವಾಗಿಯೂ ಇದ್ದುವು. ಇವುಗಳ ಜೊತೆಗೆ ವೇಷಭೂಷಣಗಳು ಮನಮೋಹಕವಾಗಿದ್ದುವು. ಅಂದಮೇಲೆ ಇವನು 'ವನಿತಾಕಟಾಕ್ಷ ಕುವಲಯಚಂದ್ರ'ನಾಗಿದ್ದುದರಲ್ಲಿ ಏನು ಆಶ್ಚರ್ಯ. ಕೇವಲ ಕನ್ನಡಿತಿಯರಾದ ವನಿತೆಯರು ಮೋಹಿಸುವವರಲ್ಲ ಆತನನ್ನು !

ಕೇರಳವಿಟೀಕಟೀಸೂ
ತ್ರಾರುಣಮಣಿ ಮಲಯಯುವತಿದರ್ಪಣನಾಂಧ್ರೀ
ನೀರಂಧ್ರಬಂಧುರಸ್ತನ
ಹಾರನುದಾರಂ ಸರಸ್ವತೀಮಣಿಹಾರಂ

ಸರಸ್ವತಿಯ ಮಣಿಹಾರದಂತಿರುವ ತಾನು ಕೇರಳರಮಣಿಯರ ಒಡ್ಯಾಣದ ಅರುಣ ಮಣಿ, ಮಲಯದೇಶದ ಸ್ತ್ರೀಯರ ಕೈಗನ್ನಡಿ, ಆಂಧ್ರಯುವತಿಯರ ಹೃದಯದ ಮೇಲಿನ ಹಾರ.

ರಸಿಕಾಗ್ರೇಸರನಾದ ಪಂಪನಿಗೆ ಹೂಹಣ್ಣುಗಳ ಮೇಲೆ ಅತ್ಯಾಶೆ. ಅದರಲ್ಲಿಯೂ ಕನ್ನಡನಾಡಿನಲ್ಲಿ ಹೇರಳವಾಗಿ ದೊರಕುವ ಮಲ್ಲಿಗೆ ಹೂವು ಮತ್ತು ಮಾವಿನಹಣ್ಣುಗಳೆಂದರೆ ಅವನಿಗೆ ಇಷ್ಟ.

ಅಲರುಂ ಪಣ್ಣುಂ ಬೀ
ತೋವುವು ಗಡ ಬೀಯುವಿಲ್ಲಿ ಮಲ್ಲಿಗೆಗಳುಮಿ
ಮ್ಮಾವುಗಳುಮೆಂದೊಡಿಂ ಪೆಱ
ತಾವುದು ಸಂಸಾರಸಾರಸರ್ವಸ್ವಫಲಂ

ಅರಳುತ್ತಿರುವ ಹೂವುಗಳನ್ನು ಮುಡಿದು ಸಂತೋಷಿಸುವ ಸೌಭಾಗ್ಯವನ್ನೂ ಇಮ್ಮಾವುಗಳನ್ನು ಕಳಿಯುವುದಕ್ಕಿಂತ ಮುನ್ನ ತಿಂದು ತೃಪ್ತಿಹೊಂದುವ ಜಾಣ್ಮೆಯನ್ನೂ ತಳೆದಿದ್ದಾರೆ ಕನ್ನಡಿಗರು. ಆದ್ದರಿಂದ ಹೂಗಳು ಬಾಡಿ ನೆಲದ ಮೇಲೆ ಉದುರುವುದಾಗಲೀ, ಹಣ್ಣುಗಳು ಕಳಿತು ಮರದಿಂದ ಧೊಪ್ಪನೆ ಬೀಳುವ ಪ್ರಸಂಗವಾಗಲೀ ಇಲ್ಲ. ಅವನ್ನು ಸರಿಯಾದ ಕಾಲದಲ್ಲಿ ಬಳಸಿಕೊಂಡು ತೃಪ್ತಿಪಟ್ಟುಕೊಳ್ಳುವ ಜಾಣ್ಮೆ ಅವರಿಗಿದೆಯೆಂದು ಸೂಚಿಸಿದ್ದಾನೆ.

ಪಂಪನಿಗೆ ಐಶ್ವರ್ಯಪ್ರಯುಕ್ತವಾದ ಆನಂದ ತೃಪ್ತಿಗಳೂ, ರಾಜಾನುಗ್ರಹದಿಂದ ಲಭ್ಯವಾಗುವ ಗೌರವ ಪ್ರತಿಷ್ಠೆಗಳೂ ಸಂದಿದ್ದುವು. ಅವನಿಗೆ ಬೇಕಾಗಿದ್ದುದು ಕೇವಲ

ಈಶ್ವರಾನುಗ್ರಹ. ಅದಕ್ಕಾಗಿಯೇ ಅವನು ಕರ್ಣಾಮೃತಸ್ಯಂದಿಯೂ, ತ್ರಿದಶಸ್ತುತ್ಯವೂ, ಭವ್ಯಜನೋದ್ಧಾರಕವೂ ಆದ 'ಆದಿದೇವ ಚರಿತೆ'ಯನ್ನು ಬುಧಜನರ ಮಾತಿನಂತೆ ರಚಿಸಿದನು.

**ಪ್ರಾಣಿಹಿತಮಂ ವಿನೇಯ**
**ಪ್ರೀಣನಕರಮಂ ಜಗನತ್ತ್ರಯಪ್ರಕಟಿತ ಕ**
**ಲ್ಯಾಣಮನೀ ನೆಗಟ್ದಾದಿಪು**
**ರಾಣಮನಪರಿಮಿತಭಕ್ತಿಯಿಂ ವಿರಚಿಸುವೆಂ**

ಆದಿದೇವ ಚರಿತೆಯು ನಿಖಿಲ ಪ್ರಾಣಿಗಳಿಗೂ ಹಿತವನ್ನು ಬಯಸುವುದಂತೆ. ಭಕ್ತಜನರ ಹೃದಯಕ್ಕೆ ಸಂತೋಷವನ್ನುಂಟುಮಾಡಬಲ್ಲುದಂತೆ. ಆದ್ದರಿಂದಲೇ ಇದನ್ನು ಅಪರಿಮಿತ ಭಕ್ತಿಯಿಂದ ವಿರಚಿಸಿ ತನ್ನನ್ನೂ ವಿನೇಯಜನರನ್ನೂ ಪಾಪಸಂಕೋಲೆಗಳಿಂದ ದೂರಗೊಳಿಸುವನಂತೆ.

ವಿದ್ವಾವೈದುಷ್ಯ, ಸಂಪತ್ತು, ರಾಜಾನುಗ್ರಹ ಮುಂತಾದುವೆಲ್ಲವಿರುವಾಗ ಜನ ಸಾಮಾನ್ಯರೊಡನೆ ಧೃಷ್ಟನಾಗಿ ವ್ಯವಹರಿಸುವುದು ಅಚ್ಚರಿಯೇನಲ್ಲ, ಅವೆಲ್ಲ ದಿನ ಬಳಕೆಯಲ್ಲಿರುವ ಸಾಮಾನ್ಯ ಸಂಗತಿಗಳೆ. ಆದರೆ ಮಹಾಕವಿ ಪಂಪನಲ್ಲಿ ಇಂಥ ಅವಿನಯಗಳೊಂದೂ ಕಾಣಿಸದು.

**ಪುರುದೇವಾದಿ ಜಿನೇಂದ್ರಮಾಳೆ ಗಣಭೃತ್ಸಂತಾನಮೆಂದೀ ಪರಂ**
**ಪರೆಯಿಂ ವಿಶ್ರುತ ವೀರಸೇನ ಜಿನಸೇನಾಚಾರ್ಯಪರ್ಯಂತಮಾ**
**ಗಿರೆ ಬಂದೀ ಕಥೆ ಗುಣ್ಪುವೆತ್ತುದವರುಂ ಜ್ಞಾನರ್ಧಿಸಂಪನ್ನರೆಂ**
**ದಿರದಾಂ ಧೃಷ್ಟನೆನೀ ಕಥಾಬ್ಧಿಯು ಮನೇನೀಸಲ್ ಮನಂದಂದೆನೋ**

ಪುರುದೇವಾದಿಗಳು ತಮ್ಮ ಸಂಯಮದಿಂದ ಪ್ರಪಂಚವನ್ನೇ ಗೆದ್ದ ಜಿನೇಂದ್ರರು. ಅವರು ಮಹಾಮಹಿಮರಾದ ಗಣಧರರೇ ಮೊದಲಾದವರಿಂದ ಹಿಡಿದು ವೀರಸೇನ ಜಿನಸೇನಾಚಾರ್ಯಪರ್ಯಂತವಾಗಿ ಸ್ತುತರಾದವರು. ಅವರೆಲ್ಲ ಜ್ಞಾನರ್ಧಿಸಂಪನ್ನರು, ಅಂದಮೇಲೆ ಆ ಕಥಾಬ್ಧಿಯನ್ನು ಈಸಲು ನನಗೆ ಶಕ್ಯವೇ ? ಹಾಗೆ ಮನಸ್ಸು ಮಾಡಿ ನಾನು ಅಪಹಾಸ್ಯಕ್ಕೀಡಾದೆನಲ್ಲವೆ ಎಂದು ತನ್ನ ವಿನಯವನ್ನು ತೋರ್ಪಡಿಸಿಕೊಂಡು ಮೆರೆದಿದ್ದಾನೆ ಪಂಪ.

ಆದಿಪುರಾಣವು ಚಂಪೂಶೈಲಿಯಲ್ಲಿರುವ ಮಹಾಕಾವ್ಯ, ಪಂಪಕೃತ. ಅದು ಧರ್ಮಾಮೃತವನ್ನು ಸುರಿಸುವ ಆದಿತೀರ್ಥೇಶ್ವರನ ಚರಿತ, 'ಕರ್ಣಾಮೃತಸ್ಯಂದಿಯಕ್ಕಿದು' ಎಂದು ಹರಸಿದರೂ ಮುಖ್ಯವಾಗಿ ತನಗೆ ಪುಣ್ಯ ದೊರಕಲೆಂದೂ ಕರ್ಮನಿರ್ಜರೆಯಾಗಲೆಂದೂ ಬಯಸಿ ಅನಂತಸುಖಾಭಿಲಾಷಿಯಾಗಿ ಷೋಡಶಭಾವನೆಯಿಂದ ಬರೆದ ಷೋಡಶಾಶ್ವಾಸಗಳುಳ್ಳ ಪವಿತ್ರ ಗ್ರಂಥವಾಗಿದೆ.

ಆದಿಪುರಾಣವನ್ನು ಬರೆದು ಪುರಾಣಕವಿಯೆಂದು ಜೈನಸಮಾಜದಿಂದ ಈತನು ಕೀರ್ತಿತನಾಗಿದ್ದಾನೆ.

# ಜೈನಧರ್ಮ

ಜಿನನನ್ನು ದೇವರೆಂದು ಆರಾಧಿಸುವವರು ಜೈನರು. ಅವರಿಂದ ಆದೃತವಾದ ಧರ್ಮವು ಜೈನಧರ್ಮ. ಜಿನನಿಂದ ಬೋಧಿತವಾದ ಧರ್ಮವು ಜೈನಧರ್ಮ ಎನ್ನುವುದು ಹೆಚ್ಚು ಅರ್ಥಯುಕ್ತ. ಜಿನನು ತನ್ನ ತಪೋಬಲದಿಂದ ಜ್ಞಾನಾವರಣೀಯಾದಿ ಎಂಟುವಿಧ ಕರ್ಮಗಳನ್ನು ಗೆದ್ದು ಜಿನನೆನಿಸಿದನು. ಗೆಲ್ಲುವವನೆ ಜಿನ. ತಮ್ಮ ತಮ್ಮ ಕರ್ಮಗಳನ್ನು ಯಾರು ಯಾರು ಗೆಲ್ಲುವರೋ ಅವರೆಲ್ಲರೂ ಜಿನರೇ. ಜಿನನಾದೊಡನೆಯೇ ಪ್ರತಿಯೊಬ್ಬ ಜೀವನೂ ಸರ್ವಜ್ಞನಾಗುವನು, ವೀತರಾಗತೆಯನ್ನು ಪಡೆಯುವನು. ಈ ಅವಸ್ಥೆಯಲ್ಲಿ ಉಪದಿಷ್ಟವಾದ ಧರ್ಮವು ಪ್ರಾಮಾಣಿಕವಾಗಿಯೂ ಸಜ್ಜನಸಮಾದೃತವಾಗಿಯೂ ಇರಲು ಸಾಧ್ಯ. ಅಜ್ಞಾನವೂ, ರಾಗದ್ವೇಷಗಳೂ ಅಪ್ರಮಾಣಿಕತೆಗೆ ಕಾರಣಗಳು. ಅಜ್ಞಾನಕ್ಕೆ ತುತ್ತಾಗಿಯೋ, ವಿಷಯಸೌಖ್ಯಕ್ಕೆ ಬಲಿಬಿದ್ದೋ ರಾಗದ್ವೇಷಗಳಿಗೆ ವಶನಾಗಿಯೋ ಜ್ಞಾನಿಯಾದವನು ಅಪತ್ಯವನ್ನಾಡಲು ಇಲ್ಲವೆ ಕೆಟ್ಟದ್ದನ್ನು ಮಾಡಲು ಹಿಂಜರಿಯನು. ಇವನ್ನು ನಾಶಪಡಿಸಿಕೊಂಡು ಜಿನನೆನಿಸಿದವನು ಬೋಧಿಸುವ ಧರ್ಮವು ಸತ್ಯಧರ್ಮವಾಗಿರುವುದರಲ್ಲಿ ಅಚ್ಚರಿಯಿಲ್ಲ.

ಎಲ್ಲ ಧರ್ಮಗಳಿಗೂ ಮುಖ್ಯವಾಗಿ ಎರಡು ಅಂಗಗಳಿರುತ್ತವೆ. ಅವುಗಳಲ್ಲಿ ವಿಚಾರಶೀಲತೆಯು ಒಂದು ಮುಖವಾದರೆ ಮತ್ತೊಂದು ಮುಖವು ಆಚಾರವಾಗಿರುತ್ತದೆ. ಆಚಾರಕ್ಕೆ ಅಹಿಂಸೆಯು ಮೂಲಾವಲಂಬನ. ಯಾರ ವಿಚಾರಕ್ಕೂ ಅನ್ಯಾಯವಾಗಕೂಡದು, ಯಾವ ಪ್ರಾಣಿಯ ಜೀವನಕ್ಕೂ ಬಾಧೆ ತಟ್ಟಕೂಡದು ಎಂಬುದೇ ಜೈನಧರ್ಮದ ಮುಖ್ಯ ಉದ್ದೇಶ. ಎಲ್ಲರ ವಿಚಾರಗಳನ್ನು ತಿಳಿದುಕೊಳ್ಳುವುದು, ಎಲ್ಲ ಜೀವಿಗಳನ್ನು ಆಪತ್ತಿನಿಂದ ಸಂರಕ್ಷಿಸುವುದು, ಇವು ಜಿನೋಪದಿಷ್ಟ ಮೂಲಮಂತ್ರಗಳು.

ಧರ್ಮಶಬ್ದಕ್ಕೆ ಎರಡರ್ಥಗಳು, ಅಗ್ನಿಗೆ ಸುಡುವುದು ಧರ್ಮ, ಗಾಳಿಗೆ ಒಯ್ಯುವುದು ಧರ್ಮ. ಅಂತೆಯೆ ಆತ್ಮನಿಗೆ ಚೈತನ್ಯವು ಧರ್ಮ, ಆಚಾರವು ಚಾರಿತ್ರಧರ್ಮ. ಇವುಗಳಲ್ಲಿ ಸ್ವಭಾವಸ್ವರೂಪವಾದ ಧರ್ಮ ಜಡಚೇತನಗಳೆಲ್ಲದರಲ್ಲಿಯೂ ಕಾಣಲು ಬರುವುದು. ಏಕೆಂದರೆ ಸ್ವಭಾವವಿಲ್ಲದ ವಸ್ತುವೇ ಸಂಸಾರದಲ್ಲಿಲ್ಲ, ಆದರೆ ಆಚಾರರೂಪವಾದ ಧರ್ಮವು ಕೇವಲ ಚೈತನ್ಯಮಯ ಆತ್ಮಗಳಲ್ಲಿಯೇ ಇರುತ್ತದೆ. ಆ ಧರ್ಮಪ್ರವರ್ತಕರು ಈ ಎರಡು ಧರ್ಮರೂಪಗಳನ್ನು ಬೋಧಿಸಿದ್ದಾರೆ. ಅವು ಒಂದಕ್ಕೊಂದು ಪೂರಕ. ವಸ್ತುಸ್ವಭಾವ ನಿರೂಪಣವು ಆಯಾಧರ್ಮದ ದರ್ಶನವೆನಿಸಿದೆ. ಆ ಆದರ್ಶದಿಂದ ಸಿದ್ಧಿಯ ಜ್ಞಾನವು ದೊರಕುತ್ತದೆ. ಅದನ್ನು ಮುಟ್ಟಲು ಆಚಾರರೂಪಧರ್ಮವು ಸಾಧನ. ದರ್ಶನ ಆತ್ಮ ಪರಲೋಕ, ಪರಮಾತ್ಮ ಸ್ವರೂಪವೇ ಮುಂತಾದ ಪ್ರಶ್ನೆಗಳ ವಿವೇಚನೆಯಡಗಿದೆ. ಆಚಾರರೂಪಿ ಧರ್ಮದ ವಿವರಣೆಯಲ್ಲಿ ಜೀವಾತ್ಮನು ಪರಮಾತ್ಮನಾಗುವ ಮಾರ್ಗವನ್ನು ಕಾಣಿಸಿದೆ. ಯಾವಾಗಲೂ ವಿಚಾರದ ಪರಿಣಾಮವೆಲ್ಲ ಆಚಾರವನ್ನೇ ಅವಲಂಬಿಸಿದೆ. ಆದಕಾರಣವೇ ದರ್ಶನವು ಧರ್ಮವನ್ನು ನಿರೂಪಿಸಿರುವುದು, ಅದಕ್ಕಾಗಿಯೇ ಧರ್ಮದ

ವಿವೇಚನೆಯಲ್ಲಿ ದರ್ಶನ ಮತ್ತು ಚಾರಿತ್ರಗಳ ಸಮಾಲೋಚನೆಯು ಅತ್ಯಗತ್ಯ. ಜೈನದರ್ಶನವು ವಸ್ತುಸ್ವಭಾವನಿರೂಪಣೆಯಲ್ಲಿ ಅಂತರ್ಗತ, ಅದನ್ನು ಧರ್ಮವೆಂದೆ ತಿಳಿಯಲಾಗಿದೆ. ಏಕೆಂದರೆ ಆತ್ಮ-ಪರಮಾತ್ಮರಲ್ಲಿನ ಅಂತರದರಿವುಂಟಾದಾಗಲೇ ಚಾರಿತ್ರವನ್ನವಲಂಬಿಸಿ ಮಾನವನು ಮೋಕ್ಷದ ಸಾಧಕನಾಗುವನು. ಅದರಿಂದಾಗಿ ಜಿನದೇವನಿಂದ ಉಪದಿಷ್ಟವಾದ ಆಚಾರ-ವಿಚಾರಗಳೇ ಜಿನಧರ್ಮದ ಅರಿವನ್ನುಂಟು ಮಾಡುವುದು.

ಈ ಧರ್ಮದ ಆದ್ಯಪ್ರವರ್ತಕನು ಭಗವಾನ್ ಋಷಭದೇವನು. ಈತನು ಭಾಗವತವೇ ಮುಂತಾದ ಧರ್ಮಗ್ರಂಥಗಳಲ್ಲಿ ಮತಪ್ರತಿಷ್ಠಾಪಕನೆಂದು ಕೀರ್ತಿತನಾಗಿದ್ದಾನೆ. ಈತನು ನಾಭಿ ಮರುದೇವಿಯರ ಮಗ. ಈತನಿಂದ 'ಜಯಂತಿ'ಯಲ್ಲಿ ನೂರು ಜನ ಮಕ್ಕಳು ಹುಟ್ಟಿದರು. ಇವರಲ್ಲಿ ಭರತನು ಹಿರಿಯನು. ಇವನಿಗೆ ರಾಜ್ಯವನ್ನೊಪ್ಪಿಸಿ ಋಷಭನು ಸನ್ಯಾಸವನ್ನಪ್ಪಿ ದಿಗಂಬರನಾಗಿ ಕಾಲಕಳೆದನು. ನಗ್ನರೂಪದಿಂದ ವಿಹರಿಸುತ್ತಾ ಮೌನಿಯಾಗಿ ಯಾರೇ ಉಗಿಯಲಿ, ಹೊಡೆಯಲಿ, ಕಲ್ಲೊಗೆಯಲಿ- ಅವುಗಳೊಂದಕ್ಕೂ ಗಮನ ಹರಿಸದೆ ಆತ್ಮಧ್ಯಾನಪರನಾಗಿ ಕಾಲತಳ್ಳಿದನು, ದೇಹವು ಅಸತ್ಪದಾರ್ಥದಾಗರ ಎಂದು ಭಾವಿಸಿ ಅಹಂಕಾರ ಮಮಕಾರಗಳನ್ನು ತೊರೆದು ಪ್ರಾಣೋತ್ಕ್ರಮಣ ಮಾಡಿದನು.

**ಆತ್ಮ**

ಜೈನದಾರ್ಶನಿಕರು ಕರ್ಮವಿರಹಿತನಾದ ಶುದ್ಧಾತ್ಮನನ್ನೇ ಆತ್ಮನೆಂದೂ, ಕರ್ಮ ಸಹಿತನೂ, ಇಂದ್ರಿಯ ಬಲಿ, ಆಯುಸ್ಸು, ಶ್ವಾಸೋಚ್ಛ್ವಾಸ ಇವುಗಳಿಂದ ನಿಪೀಡಿತನೂ ಆದವನನ್ನು ಜೀವನೆಂದೂ[1] ಬಗೆಯುತ್ತಾರೆ. ಶುದ್ಧಾತ್ಮನು ಚೈತನ್ಯಲಕ್ಷಣ. ಇವನು ಅಮೂರ್ತ, ಶುಭಾಶುಭಕರ್ಮಗಳ ಕರ್ತೃ. ತನಗೆ ಪ್ರಾಪ್ತವಾಗುವ ದೇಹದ ಪ್ರಮಾಣವನ್ನು ಪಡೆಯಲು ಶಕ್ತಿಸಂಪನ್ನನಾದವನು. ಕರ್ಮಗಳಿಂದ ನಿರ್ಮುಕ್ತನಾಗಿ ತನ್ನ ಸ್ವಾಭಾವಿಕಗುಣ ದಿಂದ ಮೇಲೆ ಮೇಲೆ ಅಂದರೆ ಸಿದ್ಧಶಿಲೆಯ ತನಕ ಏರುವ ಸ್ವಭಾವಸಂಪನ್ನ.

ಆತ್ಮನಿಗೆ ವರ್ಣರಸಗಂಧಗಳಿಲ್ಲ. ಅವನು ಅಮೂರ್ತ. ಶುದ್ಧಭಾವಗಳಿಗೆ - ಅನಂತ ಜ್ಞಾನ, ಸುಖಾದಿಗಳಿಗೆ-ಕರ್ತೃವಾಗಿ ಬೆಳಗುವವನು. ದೀಪದ ಪ್ರಕಾಶವು ಚಿಕ್ಕಮನೆಯನ್ನೂ ದೊಡ್ಡಮನೆಯನ್ನೂ ಬೆಳಗಿಸುವಂತೆ, ಆತ್ಮನು ತನಗೆ ಪ್ರಾಪ್ತವೂ ಅಪೇಕ್ಷಣೀಯವೂ ಆದ ದೇಹದ ಪ್ರಮಾಣವನ್ನು ಹೊಂದಲು ಯೋಗ್ಯನು. ಅದರಿಂದ ಅವನು ಅಸಂಖ್ಯಾತ ಪ್ರದೇಶನು. ಶುದ್ಧದರ್ಶನಜ್ಞಾನಸ್ವರೂಪನಾದುದರಿಂದ ಅವುಗಳ ದೃಷ್ಟಿಯಿಂದ ಉಪಯೋಗಮಯ.

ಆತ್ಮನಲ್ಲಿ ಪುದ್ಗಲದ್ರವ್ಯಗಳಿಗನುಗುಣವಾಗಿ ಚೈತನ್ಯ ಪರಿಣಾಮಗಳುಂಟಾಗುತ್ತವೆ.

---

೧. ತಿಕ್ಕಾಲೇ ಚದುಪಾಣಾ ಇಂದಿಯ ಬಲಮಾಉ ಆಣಪಾಣೋಯ
ವವಹಾರಾ ಸೋ ಜೀವೋ ಣಿಚ್ಛಯಣಯದೋದು ಚೇದಣಾಜಸ್ಸ

ದ್ರವ್ಯ ಸಂಗ್ರಹ

ಇದು ಆತ್ಮನ ಸ್ವಭಾವ. ರಂಜಕವನ್ನು (Phosphorus) ಹವೆಯಲ್ಲಿಟ್ಟರೆ ಆಮ್ಲಜನಕದ (Oxygen) ಸಂಯೋಗದಿಂದ ಅದು ಉರಿಯತೊಡಗುವುದು. ಅದರಂತೆ ಆತ್ಮನಿಗೆ ಪುದ್ಗಲ ಕರ್ಮಾಣುಗಳ ಸಂಯೋಗವಾಗಲು ಅದರಲ್ಲಿ ಪರಿಸ್ಪಂದನವೇರ್ಪಡುತ್ತದೆ. ಇದೇ ಭಾವ ಕರ್ಮ (ರಾಗ-ದ್ವೇಷ-ಮೋಹಾದಿಗಳು). ಅದರ ಕರ್ತೃವು ಆತ್ಮ ಹವೆಯ ಸಂಯೋಗ ದಿಂದ ರಂಜಕದ ಉರಿಯುವ ಗುಣವು ಸ್ವಾಭಾವಿಕವಾದುದು. ಆದರೆ ಅದು ಉರಿಯುವಾಗ ರಂಜಕವನ್ನೂ ಹೀರಿಕೊಳ್ಳುವುದು. ಹಾಗೆ ಆತ್ಮಪ್ರದೇಶವು ಸ್ಪಂದನ ಹೊಂದುವ ಕಾಲಕ್ಕೆ ಕರ್ಮಾಣುಗಳು ಅಂಟಿಕೊಳ್ಳುವುವು. ಆಗ ಆತ್ಮನನ್ನು ಜೀವನೆಂದು ಕರೆಯುವರು.

ಆತ್ಮನು ಭಾವಕರ್ಮಗಳ ಆಸ್ರವದಲ್ಲಿ ಸಮರ್ಥನು. ಹಾಗೆಯೆ ಅವುಗಳ ಬಂಧನದಲ್ಲಿಯೂ ಶಕ್ತನು. ಅದರಂತೆ ಭಾವಕರ್ಮಗಳ ಸಂವರದಲ್ಲಿಯೂ ಸಮರ್ಥನು. ಅಲ್ಲದೆಯೆ ಭಾವಕರ್ಮಗಳ ನಿರ್ಜರ (ಕ್ಷಯ) ಮೋಕ್ಷ (ತ್ಯಾಗ)ದಲ್ಲಿಯೂ ಸಮರ್ಥನು. ಆದ್ದರಿಂದ ಆತ್ಮನು ಪ್ರಭುವೆನಿಸುವನು.

**ಮೋಕ್ಷ**

ಜೀವನು ಕರ್ಮಗಳನ್ನು ಕಳೆದುಕೊಂಡ ತರುವಾಯ ಲೋಕಾಂತ್ಯದವರೆಗೆ ಹೋಗ ಬಲ್ಲನು. ಈ ಊರ್ಧ್ವಗಮನಕ್ಕೆ ಪೂರ್ವಸಂಸ್ಕಾರವೂ ಆತ್ಮನ ಸ್ವಭಾವವೂ ಕಾರಣ. ಕರ್ಮ ಬಂಧನಾಶವೂ ಸರ್ವಸಂಗರಾಹಿತ್ಯವೂ ಸಹಾಯಕಗಳು. ಸೋರೆ ಬುರುಡೆಯು (ಕಾಯಿ) ಸ್ವಾಭಾವಿಕವಾಗಿ ನೀರಿನಲ್ಲಿ ತೇಲಬಲ್ಲುದು. ಅದಕ್ಕೆ ಜಡಪದಾರ್ಥದ ಲೇಪವನ್ನು ಮಾಡಿ ದಾರಗಳಿಂದೆಳೆದು ನೀರಿನ ತಳದಲ್ಲಿ ನಿಲ್ಲುವಂತೆ ಕಟ್ಟಿದರೆ ಅದು ಅಲ್ಲಿಯೇ ಉರುಳಾಡುತ್ತ ಇರುವುದು. ಇದರಂತೆಯೇ ಸಂಸಾರಿ ಜೀವನದ ಅವಸ್ಥೆ. ಸೋರೆಬುರುಡೆಯ ಕಟ್ಟುಗಳು ಹರಿದಂತೆ ಜೀವನ ಕರ್ಮಬಂಧಗಳ ನಾಶ. ಕಾಯಿಗೆ ಹಚ್ಚಿದ ಲೇಪನವಿಲ್ಲದಂತಾಗುವುದು. ಜೀವನ ಸರ್ವಸಂಗ ತ್ಯಾಗ. ನೀರಿನ ಮೇಲ್ಭಾಗಕ್ಕೆ ಕಾಯಿಯ ಬರುವಿಕೆಯು ಆತ್ಮನ ಊರ್ಧ್ವಗಮನದಂತೆ ಎಂದು ತಿಳಿಯಬೇಕು, ಅದು ಕಾಯಿಯ ಸ್ವಭಾವ - ಪೂರ್ವಸಂಸ್ಕಾರಗಳಿಂದ ನಡೆಯುವಂತೆ, ಆತ್ಮನ ಗುಣಗಳಿಂದ ನಡೆಯುವುದು.

ಮೇಲಕ್ಕೇರಿದ ಶುದ್ಧಾತ್ಮನು ಸಿದ್ಧಶಿಲೆಯ ಮೇಲೆ (ಅದು ಲೋಕದ ತುತ್ತತುದಿ) ಹೋಗಿ ನಿಲ್ಲುವನು. ಅಲ್ಲಿ ಅನೇಕ ಮುಕ್ತಜೀವರು ಸ್ಪರ್ಧೆ ಈರ್ಷ್ಯೆಗಳಿಲ್ಲದೆ ವಾಸಿಸುವರು. ಅಗುರುಲಘುಗುಣಗಳಿಂದ ಕೂಡಿರುವ ಕಾರಣ ಒಂದೇ ಕೋಣೆಯಲ್ಲಿ ಹಲವು ದೀಪಪ್ರಕಾಶಗಳು ಯಾವ ಆತಂಕವೂ ಇಲ್ಲದ ಹಾಗೆ ಸೇರಿರುವಂತೆ ಶುದ್ಧಾತ್ಮಗಳು ಸಿದ್ಧ ಶಿಲೆಯ ಮೇಲೆ ಒತ್ತಟ್ಟಿಗೆ ಇರುತ್ತವೆ. ಇಂಥ ಆತ್ಮಗಳಿಗೆ ಅನಂತ ದರ್ಶನಜ್ಞಾನಗಳು ಇರುತ್ತವೆ.

ಊರ್ಧ್ವಗಮನಶೀಲವಾದ ಆತ್ಮಗಳು ಸಿದ್ಧಶಿಲೆಯ ಮೇಲೆ ಏಕೆ ಗಮನ ಮಾಡವು? ಎಂಬೊಂದು ಪ್ರಶ್ನೆಯೇಳುವುದು.

ಇಡೀ ವಿಶ್ವದಲ್ಲಿ ಲೋಕಾಕಾಶ, ಅಲೋಕಾಕಾಶ ಎಂಬೆರಡು ವಿಭಾಗಗಳನ್ನು

ಜೈನ ದಾರ್ಶನಿಕರು ಒಪ್ಪಿಕೊಂಡಿದ್ದಾರೆ. ಲೋಕಾಕಾಶದಲ್ಲಿ ಧರ್ಮವೆಂಬ ದ್ರವ್ಯವಿದೆ. ಇದು ಜಗತ್ತಿನಲ್ಲಿ ಹವೆಯಿರುವಂತೆ ಇರುತ್ತದೆ. ಇದಕ್ಕೆ ರೂಪ-ರಸ-ಸ್ಪರ್ಶಗಳಿಲ್ಲ. ಇದು ಆತ್ಮನ ಗಮನಕ್ಕೆ ಸಹಾಯವೆಸಗುತ್ತದೆ. ನೀರು ಮೀನುಗಳ ಸಂಚಾರಕ್ಕೆ ಸಹಾಯಕವಾಗಿರುವಂತೆ, ಆತ್ಮನಿಗೂ, ಪುದ್ಗಲಾಣುಗಳಿಗೂ ಇದು ಸಹಾಯಕವಾಗಿರುವುದು. ಇಂಥ ದ್ರವ್ಯವು ಅಲೋಕಾಕಾಶದಲ್ಲಿ ಇಲ್ಲದಿರುವುದರಿಂದ ಮುಕ್ತಾತ್ಮಗಳೆಲ್ಲ ಸಿದ್ಧಶಿಲೆಯ ಮೇಲೆಯೇ ಸ್ಥಿರವಾಗಿ ನಿಲ್ಲಬಲ್ಲುವು.

**ಅಮೂರ್ತ**

ಆತ್ಮನು ಅಮೂರ್ತ, ಅವನ ಸಂಬಂಧವು ಕರ್ಮದೊಡನೆ ಅನಾದಿಯಾದುದು.

**ಅನಾದಿ ನಿತ್ಯಸಂಬಂಧಾತ್ಸಹ ಕರ್ಮಭಿರಾತ್ಮನಃ**
**ಅಮೂರ್ತಸ್ಯಾಪಿ ಸತ್ಯೈಕ್ಯೇಮೂರ್ತತ್ವಮವಸೀಯತೇ**

ಎಂದು ಸಾರುತ್ತಿದೆ ತತ್ವಾರ್ಥಸಾರ. ಹೀಗೆ ಕರ್ಮದೊಡನೆ ಐಕ್ಯಹೊಂದಿದ ಆತ್ಮನೇ ಮೂರ್ತಿಕನೆನಿಸುವನು. ಈ ವಾದಕ್ಕೆ ಅಕಲಂಕನ ತತ್ವಾರ್ಥ ರಾಜವಾರ್ತಿಕವು ಪುಷ್ಟಿಗೊಡುತ್ತದೆ.

**ಅನಾದಿಕರ್ಮಬಂಧ ಸಂತಾನ ಪರತಂತ್ರಸ್ಯಾತ್ಮನಃ ಅಮೂರ್ತಿಂ ಪ್ರತ್ಯನೇಕಾಂತೋ ಬಂಧಪರ್ಯಾಯಂ ಪ್ರತ್ಯೇಕತ್ವಾ ಸ್ಯಾನ್ಮೂರ್ತಂ ತಥಾಪಿ ಜ್ಞಾನಾದಿ ಸ್ವಲಕ್ಷಣಂ ಪರಿತ್ಯಾಗಾತ್ ಸ್ಯಾದಮೂರ್ತಿಃ ।** ತತ್ವಾರ್ಥರಾಜವಾರ್ತಿಕ, - ಪು. ೮೧

ಅನಾದಿಕಾಲದಿಂದ ಕರ್ಮಬಂಧಕ್ಕೆ ಸಿಲುಕಿದ ಆತ್ಮನ ಅಮೂರ್ತತ್ವದ ವಿಷಯವು ಅನೇಕಾಂತವಾಗಿದೆ. ಬಂಧಪರ್ಯಾಯದೊಡನೆ ಒಂದಾಗುವುದರಿಂದ ಆತ್ಮವು ಒಂದು ರೀತಿಯಿಂದ ಮೂರ್ತಿಕವೇ, ಆದರೆ ತನ್ನ ಜ್ಞಾನಾದಿ ಲಕ್ಷಣಗಳನ್ನು ಪರಿತ್ಯಜಿಸದ ಕಾರಣ ಅಮೂರ್ತಿಕವೂ ಆಗಿದೆ.

## ಜೈನರಲ್ಲಿ ಸೃಷ್ಟಿಕಲ್ಪನೆ

ಲೋಕದ ಸೃಷ್ಟಿಕರ್ತೃತ್ವವನ್ನು ದೇವರಿಗೆ ಜೈನರು ಒಪ್ಪುವುದಿಲ್ಲ. ದೇವರು ಅನಂತ ಆನಂದ, ಅನಂತಜ್ಞಾನ, ಅನಂತದರ್ಶನ ಮತ್ತು ಅನಂತಶಕ್ತಿಗಳಿಗೆ ಭಂಡಾರವಾದವನು. ಅವನು ಜನನ-ಮರಣಗಳಿಂದ ವಿಮುಕ್ತ. ಇಂಥವನು ಸೃಷ್ಟಿರಚನೆಯಲ್ಲಿ ಕೈಯಿಟ್ಟರೆ, ಅವನ ವೃತ್ತಿಯು ರಾಗ-ದ್ವೇಷಗಳಿಂದ ಕೂಡಿದುದಾಗುತ್ತದೆ, ತತ್ಫಲವಾಗಿ ದೇವ[೧]ರೊಬ್ಬನು (ಪರಮಾತ್ಮ) ಸಾಮಾನ್ಯ ವ್ಯಕ್ತಿಯಂತಾಗುತ್ತಾನೆ. ಆದರೆ ಸಮಸ್ತ ಶಕ್ತಿ ಸಂಪನ್ನನೂ ಸಮರ್ಥನೂ ಕುಶಲಿಯೂ ಆದ ಪರಮೇಶ್ವರನಿಂದ ನಿರ್ಮಿತವಾದ ಜಗತ್ತು ದುಃಖ-ಅಶಾಂತಿಗಳಿಂದ ಕೂಡಿದುದಾಗಲಾರದು, ವಿಶ್ವನಿರ್ಮಿತಿಯಲ್ಲಿ ಪರಮೇಶ್ವರ

೧. ಕ್ಲೇಶ ಕರ್ಮ ವಿಪಾಕಾಶಯೈರಪರಾಮೃಷ್ಟಃ ಪುರುಷವಿಶೇಷಃ ಈಶ್ವರಃ - *ಯೋಗಸೂತ್ರ ೧-೨೪*

ಕೈವಾಡವಿದ್ದರೆ ಚಿನ್ನಕ್ಕೆ ಸೌಗಂಧ್ಯವು ಕಬ್ಬಿಗೆ ಹಣ್ಣುಗಳೂ ಉಂಟಾಗಬೇಕಿತ್ತು, ಮೇಲಾಗಿ ಪವಿತ್ರನೂ ದಯಾಳುವೂ ಆದ ದೇವನು ಮಾನವದೇಹವನ್ನು ರಕ್ತಮಾಂಸಗಳಿಂದ ನಿರ್ಮಿಸುತ್ತಿರಲಿಲ್ಲ.

ಪರಮಾತ್ಮನು - ಬ್ರಹ್ಮ-ವಿಶ್ವದ ತುಂಬ ಪರಿಪೂರ್ಣವಾಗಿ ತುಂಬಿಕೊಂಡಿದ್ದರೆ, ಅವನಲ್ಲಿ ಉತ್ಪಾಧ, ವ್ಯಯ ಗಮನಾಗಮನಗಳೇ ಮೊದಲಾದ ಕ್ರಿಯೆಗಳು ನಡೆಯುವುದು ಸಾಧ್ಯವಿರುತ್ತಿರಲಿಲ್ಲ. ವ್ಯಾಪಕವಸ್ತುವಿನಲ್ಲಿ ಪರಿಸ್ಪಂದನಾತ್ಮಕ ಕ್ರಿಯೆಯು ಇರುವುದಿಲ್ಲ. ಅನಾದಿಕಾಲದಿಂದಲೂ ಜಡ-ಚೇತನಗಳ ಸ್ವಾಭಾವಿಕ ಸಂಯೋಗ-ವಿಯೋಗಗಳಿಂದ ಜಗತ್ತಿನ ಪದಾರ್ಥಗಳಲ್ಲಿ ಸ್ವಯಂ ಸಂಯುಕ್ತ-ವಿಯುಕ್ತವಾಗುವ ಶಕ್ತಿಯುಂಟು. ಅಂದಮೇಲೆ ವಿಶ್ವವಿಧಾತನೆಂಬ ಅನ್ಯಶಕ್ತಿಯ ಕಲ್ಪನೆಯ ಆವಶ್ಯಕತೆಯಿರದು.

ಪರಮಾತ್ಮನಲ್ಲಿ ಕರ್ತೃತ್ವದ ಆರೋಪವನ್ನು ಮಾಡಿದರೆ ಅವನು ವಂದನೀಯ ವಿಭೂತಿಯಾಗನು. ಮೇಲಾಗಿ ರಾಗ, ದ್ವೇಷ, ಮೋಹ ಮೊದಲಾದ ವಿಕಾರವಶನಾದ ವ್ಯಕ್ತಿಯೆನಿಸುವನು. ಇಂಥ ಸ್ಥಿತಿಯಲ್ಲಿ ಅವನು ದಿವ್ಯಾನಂದದಿಂದ ವಂಚಿತನಾಗುವನು, ಇದು ಪವಿತ್ರಾತ್ಮಗಳ ಆದರ್ಶವಾಗದು.

ಪರಮಾತ್ಮನು ಮಲಿನತೆಗೆ ಆಗರವೂ, ಅತ್ಯಂತ ಬೀಭತ್ಸ ಮಲ-ಮೂತ್ರ ಸ್ಥಾನವೂ ಆದ ಈ ಶರೀರದಲ್ಲಿ ಮಾನವನನ್ನು ನಿರ್ಮಿಸಿ ಅದರಲ್ಲಿಯೇ ಅವನನ್ನು ಬಂಧಿಸಿಡನು. ಅದನ್ನು ಸೃಷ್ಟಿಸಿದ ದೇವರು ಪರಮಪಿತನೂ ಪರಮದಯಾಳುವೂ ಬುದ್ಧಿಮಾನ್ ಪರಮಾತ್ಮನೂ ಆಗನು. ಇಂಥ ಕೃತಿಯು ಅವನ ನಿರ್ದಯತೆಯನ್ನೂ ದುರ್ಭಾವನೆಯನ್ನೂ ಸ್ಪಷ್ಟವಾಗಿ ಚಿತ್ರಿಸುತ್ತದೆ.

ತೀರ್ಥಂಕರರು 'ಸಮವಸರಣ'ವೆಂಬ ಧರ್ಮೋಪದೇಶಸಭೆಯಲ್ಲಿ ಸಮಾವಿಷ್ಟರಾಗಿದ್ದ ದೇವ, ಮನುಷ್ಯ, ಪಶು ಪಕ್ಷಿಗಳೇ ಮೊದಲಾದ ಎಲ್ಲ ಜೀವಸಮೂಹಕ್ಕೆ ಅರ್ಥವಾಗುವಂತಹ ಸರ್ವಭಾಷಾತ್ಮಕವಾದ ದಿವ್ಯಧ್ವನಿಯಿಂದ ಧರ್ಮತತ್ವಗಳನ್ನೂ ಪುರಾಣಾದಿಗಳನ್ನೂ ಉಪದೇಶ ಮಾಡಿದರು. ವಿನೇಯಜನರ ಮುಂದಾಳುಗಳಾದ ಗಣಧರರು ತೀರ್ಥಂಕರರ ಉಪದೇಶಗಳನ್ನು ವಿಸ್ತಾರವಾಗಿ ವಿವರಿಸಿ ಹೇಳಿದರು. ಅವರ ನಿರ್ವಾಣದ ಬಳಿಕ ಅವರ ಉಪದೇಶಗಳನ್ನು ಗಣಧರರ ಮೂಲಕ ಅವರ ಶಿಷ್ಯರೆಲ್ಲರೂ ತಿಳಿಯತೊಡಗಿದರು. ಈ ಸಂಪ್ರದಾಯವೇ ಆದಿತೀರ್ಥಂಕರನಿಂದ ಹಿಡಿದು ಮಹಾವೀರಸ್ವಾಮಿಯ ಕಾಲದವರೆವಿಗೂ ನಡೆದುಕೊಂಡುಬಂದಿತು.

ಜೈನಾಗಮಗಳೂ ವೇದಗಳಂತೆಯೇ ಕಿವಿಯಿಂದ ಕಿವಿಗೆ ನೆನಪಿನಿಂದ ನೆನಪಿಗೆ ಅನುಸ್ಯೂತವಾಗಿ ಬಂದಿವೆ. ಅವನ್ನಾರೂ ಬರೆದಿಡಲಿಲ್ಲ. ಮಹಾವೀರಸ್ವಾಮಿಯ ನಿರ್ವಾಣದ ಬಳಿಕ ಸಂದ ೬೨ ವರ್ಷಗಳ ತನಕ ಕ್ರಮವಾಗಿ ಮಹಾಮೇಧಾವಿಗಳಾದ ಗೌತಮಗಣಧರ, ಸುಧರ್ಮಾಚಾರ್ಯ, ಜಂಬುಸ್ವಾಮಿಗಳೆಂಬ ಕೇವಲ್ಯಗ್ರಣಿಗಳು ಸಕಲ ಜೈನಾಗಮಗಳನ್ನೂ ಶಾಸ್ತ್ರಪುರಾಣಗಳನ್ನೂ ಚಾಚೂ ತಪ್ಪದಂತೆ ಪ್ರಕಟಪಡಿಸಿದರು, ಅವರ

2

ನಂತರದ ನೂರು ವರ್ಷಗಳವರೆಗೆ ವಿಷ್ಣು, ನಂದಿಮಿತ್ರ, ಅಪರಾಜಿತ, ಗೋವರ್ಧನ, ಭದ್ರಬಾಹುಗಳೆಂಬ ಐವರು ಶ್ರುತಕೇವಲಿಗಳು ಜೈನಾಗಮಗಳಿಂದ ೧೧ ಅಂಗಗಳನ್ನೂ ೧೪ ಪೂರ್ವಗಳನ್ನೂ ಸಾಂಗೋಪಾಂಗವಾಗಿ ಪ್ರಚುರಪಡಿಸಿದರು. ಅನಂತರದ ೧೮೩ ವರ್ಷಗಳ ತನಕ ೧೧ ಜನ ಆಚಾರ್ಯರು ೧೧ ಅಂಗಗಳನ್ನೂ ೧೦ ಪೂರ್ವಗಳನ್ನೂ ಬಲ್ಲವರಾಗಿದ್ದರು, ಪುರಾಣಗಳನ್ನು ಮಾತ್ರ ಪೂರ್ಣವಾಗಿ ಅರಿತವರಾಗಿದ್ದರು. ಮುಂದಿನ ೨೨೦ ವರ್ಷಗಳಲ್ಲಿ ಬಾಳಿ ಬದುಕಿದ ಆಚಾರ್ಯರು ೧೧ ಅಂಗಗಳಲ್ಲಿ ಮಾತ್ರ ಪರಿಚಯವುಳ್ಳವರಾಗಿದ್ದರು, ಪುರಾಣಗಳಲ್ಲಿ ಮುಕ್ಕಾಲು ಪಾಲನ್ನು ಮಾತ್ರ ತಿಳಿದಿದ್ದರು. ಪೂರ್ವಶಾಸ್ತ್ರಗಳೆಲ್ಲ ಖಿಲವಾಗಿ ಹೋಗಿದ್ದುವು. ದಿನದಿನ ಕಳೆದಂತೆ ಜನರ ಸ್ಮೃತಿಶಕ್ತಿಯು ಕುಂಠಿತವಾಗಿ ಅಂಗಪುರಾಣಗಳ ತಿಳಿವು ಕುಂದಿಹೋಗಿ ಕ್ರಿ.ಶ. ೫೭ರ ಹೊತ್ತಿಗೆ ಅಂಗಶಾಸ್ತ್ರಾಭ್ಯಾಸಿಗಳಾರೂ ಉಳಿಯದಂತಾದರು. ಆಗ ಆಗಮಶಾಸ್ತ್ರಗಳನ್ನು ಬರೆದಿಡಬೇಕಾದವಸ್ಥೆಯೊದಗಿತು. ವರ್ಧಮಾನಸ್ವಾಮಿಯೂ ಕೆಲವು ಕೇವಲಿಗಳೂ ವಿವರಿಸಿದ ಸಿದ್ಧಾಂತಗಳಲ್ಲಿ ನೆನಪಿದ್ದಷ್ಟನ್ನು ಮಾತ್ರ ಸಂಗ್ರಹಿಸಿ ನಾಲ್ಕು ಅನುಯೋಗಗಳುಳ್ಳ ಶ್ರುತಸ್ಕಂಧವು ಬೆಳಕಿಗೆ ಬಂದಿತು, ಸಿದ್ಧಾಂತಗ್ರಂಥಗಳನ್ನು ಬರೆದಿಡುವ ಪ್ರಯತ್ನವು ಕ್ರಿ.ಪೂ. ೪ ನೆಯ ಶತಮಾನದ ಕೊನೆಯಲ್ಲಿ ಪ್ರಾರಂಭವಾಗಿ, ಸುಮಾರು ಕ್ರಿ.ಶ. ೪೫೪ರಲ್ಲಿ ವಲಭಿಯಲ್ಲಿ ದೇವರ್ಧಿಗಣಿಯ ಮುಖಂಡತ್ವದಲ್ಲಿ ನಡೆದ ಶ್ರಮಣಸಭೆಯಲ್ಲಿ ರೂಪುಗೊಂಡಿತೆಂದು ಶ್ವೇತಾಂಬರ ಸಂಪ್ರದಾಯದವರು ಹೇಳುತ್ತಾರೆ.

### ಶ್ರುತಸ್ಕಂಧ

ತೀರ್ಥಕರರಿತ್ತ ಉಪದೇಶಾಮೃತವೇ ಶ್ರುತಸ್ಕಂದ. ಇದರಲ್ಲಿ ೪ ವಿಭಾಗಗಳಿವೆ. ಮೊದಲನೆಯ ಅನುಯೋಗದಲ್ಲಿ ತೀರ್ಥಂಕರ, ಚಕ್ರವರ್ತಿ, ಬಲದೇವ, ವಾಸುದೇವ, ಪ್ರತಿವಾಸುದೇವ ಮತ್ತು ೬೩ ಶಲಾಕಾಪುರುಷರ ಚರಿತ್ರೆಗಳು ಉಕ್ತವಾಗಿವೆ. ಮಹಾಪುರಾಣವೇ ಮೊದಲಾದ ಪುರಾಣಗ್ರಂಥಗಳು ಪ್ರಥಮಾನುಯೋಗಕ್ಕೇ ಸಂಬಂಧಪಟ್ಟುವು. ಎರಡನೆಯದು ಕರಣಾನುಯೋಗ, ಸೂರ್ಯಪ್ರಜ್ಞಪ್ತಿ, ಚಂದ್ರಪ್ರಜ್ಞಪ್ತಿ, ಜಯಧವಳ ಮುಂತಾದ ಗ್ರಂಥಗಳು ಇದಕ್ಕೆ ಸಂಬಂಧಪಟ್ಟುವು, ಇದರಲ್ಲಿ ಲೋಕತ್ರಯಗಳ ಕ್ಷೇತ್ರ ಪರಿಮಾಣಾದಿ ವಿವರಗಳು ಲಬ್ಧವಾಗುತ್ತವೆ. ಮೂರನೆಯದು ಚರಣಾನುಯೋಗ- ಜೈನಮುನಿಗಳೂ ಶ್ರಾವಕರೂ ನಡೆದುಕೊಳ್ಳಬಹುದಾದ ಆಚಾರಶುದ್ಧಿಗಳು ನಿರುಕ್ತವಾಗಿವೆ. ನಾಲ್ಕನೆಯದು ದ್ರವ್ಯಾನುಯೋಗ. ತತ್ವಾರ್ಥಸೂತ್ರ, ಗೊಮ್ಮಟಸಾರ ಮೊದಲಾದುವು ದ್ರವ್ಯಾನುಯೋಗಕ್ಕೆ ಸೇರಿದುವು. ಇದರಲ್ಲಿ ಜೀವಾದಿ ದ್ರವ್ಯಗಳ ವಿವರಣೆಯು ವರ್ಣಿತವಾಗಿದೆ. ಪ್ರಥಮಾನುಯೋಗಕ್ಕೆ ಸಂಬಂಧಿಸಿದ ಪುರಾಣಗ್ರಂಥಗಳಲ್ಲಿ ಮತ್ತಿತರ ಅನುಯೋಗಗಳ ಮುಖ್ಯ ವಿಷಯಗಳನ್ನು ಅಲ್ಲಲ್ಲಿ ಪ್ರತಿಪಾದಿಸಿರುವುದನ್ನು ಕಾಣಬಹುದಾಗಿದೆ.

ಈ ನಾಲ್ಕು ಅನುಯೋಗಗಳಲ್ಲಿ ಪ್ರತಿಪಾದಿತವಾದ ವಿಷಯಗಳು ತೀರ್ಥಂಕರರಿಂದ ಈ ಮೊದಲೇ ದ್ವಾದಶಾಂಶ ಮತ್ತು ಚತುರ್ದಶ ಪೂರ್ವಗಳಲ್ಲಿ ಉಪದಿಷ್ಟವಾಗಿದ್ದುವು.

ಅವುಗಳಲ್ಲಿ ಪೂರ್ವಗ್ರಂಥಗಳು ಬಹಳ ಹಿಂದೆಯೇ ಖಿಲವಾಗಿ ಹೋದುವು. ಆ ಹನ್ನೆರಡು ಅಂಗಗಳಲ್ಲಿ ೧೧ ಅಂಗಗಳು ಮಾತ್ರ ಕೆಲವು ಕಾಲ ಪ್ರಚಾರದಲ್ಲಿದ್ದು ಕಾಲಕ್ರಮದಲ್ಲಿ ನಶಿಸಿಹೋದಂತೆ ದಿಗಂಬರರು ಬಗೆಯುತ್ತಾರೆ. ಶ್ವೇತಾಂಬರರು ಮಾತ್ರ ೧೧ ಅಂಗಗಳು ಉಳಿದುಬಂದಿವೆಯಾದರೂ, ೧೪ ಪೂರ್ವಶಾಸ್ತ್ರಗಳನ್ನೂ ಇತರ ಕೆಲವು ಗ್ರಂಥಗಳೊಡನೆ ಕಳೆದುಳಿದ ೧೨ನೆಯ ಅಂಗದಲ್ಲಿ ಅಡಕಗೊಳಿಸಲಾಗಿದೆಯೆಂದು ಅಭಿಪ್ರಾಯಪಡುತ್ತಾರೆ.

**ವಿವರಣೆಗಳು**

ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ, ಮೋಕ್ಷ, - ಇವು ಸಪ್ತತತ್ವಗಳು. ಇವುಗಳ ಜೊತೆಗೆ ಪುಣ್ಯ, ಪಾಪಗಳು ಸೇರಿದರೆ ಒಂಬತ್ತು ತತ್ವಗಳಾಗುವುವು. ಇವನ್ನು ನವಪದಾರ್ಥ ಎಂದೂ ಕರೆಯುತ್ತಾರೆ.

ಈ ನವಪದಾರ್ಥ(ತತ್ವ)ಗಳಲ್ಲಿ ಜೀವ ಮತ್ತು ಅಜೀವದ ಐದು ಬಗೆಗಳಾದ ಧರ್ಮ, ಅಧರ್ಮ, ಆಕಾಶ, ಪುದ್ಗಲ, ಕಾಲ- ಇವು ಆರು ದ್ರವ್ಯಗಳು.

ಈ ಷಡ್ದ್ರವ್ಯಗಳಲ್ಲಿ ಕಾಲವೊಂದನ್ನುಳಿದ ಐದು ಪಂಚಾಸ್ತಿಕಾಯಗಳು.

**ಜೀವ**

ದೇವ, ಮನುಷ್ಯ, ಪಶು, ಪಕ್ಷಿ, ಗಿಡ, ಮರ ಮೊದಲಾದುವುಗಳಲ್ಲೆಲ್ಲಾ ಚೈತನ್ಯ ಸ್ವರೂಪನಾಗಿರುವ ಜೀವನು ಇದ್ದಾನೆ. ಜೀವನು ಪರಿಶುದ್ಧ ಮತ್ತು ನಾಶರಹಿತ. ಜೀವಗಳು ಲೆಕ್ಕವಿಲ್ಲದಷ್ಟಿವೆ. ಇವುಗಳಲ್ಲಿ ಮುಕ್ತಜೀವ, ಸಂಸಾರಿಜೀವ ಎಂದು ಎರಡು ವಿಧ. ಸಿದ್ಧರೂ ಕೇವಲಿಗಳೂ ಮುಕ್ತರು. ಮುಕ್ತಜೀವರಿಗೆ ಅನಂತಜ್ಞಾನ, ದರ್ಶನ, ವೀರ್ಯ, ಸುಖಗಳಿವೆ. ಹೀಗೆ ಶಾಶ್ವತಸುಖಕ್ಕೆ ನೆಲೆಯಾದ ಜೀವವು ಹೇಗೋ ಅಜೀವದೊಡನೆ ಬೆರೆತು ಕ್ರಮದ ಕಟ್ಟಿಗೆ ಸಿಕ್ಕಿ ಬಿದ್ದು ಸಂಸಾರಿಯಾಗುತ್ತಾನೆ. ಇಂಥ ಬದ್ಧಜೀವನಿಗೆ ಅನಂತಜ್ಞಾನಾದಿಗಳು ಇರವು.

ಸಂಸಾರಿಯಾದ ಜೀವವು ಒಳ್ಳೆಯ ಕರ್ಮ ಮಾಡಿ ದೇವತೆಯಾಗಬಲ್ಲುದು. ಕೆಟ್ಟ ಕರ್ಮ ಮಾಡಿ ಪಶುಪಕ್ಷಿ ಮೊದಲಾದ ತಿರ್ಯಕ್ ಪ್ರಾಣಿಯಾಗುತ್ತದೆ. ಇಲ್ಲವೆ ನರಕದಲ್ಲಿ ಹುಟ್ಟಿ ದುಃಖವನ್ನು ಅನುಭವಿಸುತ್ತದೆ. ಶುಭಾಶುಭಕರ್ಮಗಳ ಸಮ್ಮಿಶ್ರಣದಿಂದ ಮನುಷ್ಯಜನ್ಮವನ್ನಪ್ಪುವುದು. ಹೀಗೆ ಎಡೆಬಿಡದೆ ಜೀವವು ಅಲೆದಾಡುತ್ತಿರುವ ದೇವ, ಮನುಷ್ಯ, ತಿರ್ಯಕ್, ನಾರಕ ಎಂಬ ನಾಲ್ಕು ನೆಲೆಗಳೇ ಚತುರ್ಗತಿಗಳು. ಈ ಅಲೆದಾಟವೇ ಸಂಸಾರ. ಒಳ್ಳೆಯ ಮತ್ತು ಕೆಟ್ಟ ಕರ್ಮಗಳೆರಡನ್ನೂ ಪೂರ್ಣವಾಗಿ ನಾಶಮಾಡಿದರೆ ಜೀವವು ಸಂಸಾರದಲೆತವನ್ನು ತಪ್ಪಿಸಿಕೊಂಡು ಶಾಶ್ವತಸುಖವನ್ನು ಹೊಂದುತ್ತದೆ. ಈ ಬಿಡುಗಡೆಯೇ ಮುಕ್ತಿ, ಮೋಕ್ಷ. ಇದನ್ನು ಪಂಚಮಗತಿಯೆಂದೂ ಹೇಳುತ್ತಾರೆ.

ಸಂಸಾರದಲ್ಲಿ ಅಲೆಯುತ್ತಿರುವಾಗ ಜೀವನಿಗೆ ಒಂಬತ್ತು ಗುಣಗಳುಂಟು. ೧) ಅದು ಜೀವಿಸುತ್ತದೆ, ಎಂದರೆ ಅದು ಹಿಂದೆಯೂ ಜೀವಿಸುತ್ತಿತ್ತು, ಇಂದೂ ಜೀವಿಸುತ್ತದೆ,

ಮುಂದೆಯೂ ಜೀವಿಸಿರುತ್ತದೆ. ೨) ಅದಕ್ಕೆ ಜ್ಞಾನದರ್ಶನಗಳುಂಟು. ೩) ಅದು ಅಮೂರ್ತವಾದುದು. ಅದಕ್ಕೆ ಸ್ಪರ್ಶ, ರುಚಿ, ಗಂಧ, ವರ್ಣಗಳಿಲ್ಲ. ೪) ಅದು ಕರ್ತೃ ಅಂದರೆ ಕರ್ಮ ಮಾಡುತ್ತದೆ. ೫) ಅದು ತಾನು ಧರಿಸಿರುವ ದೇಹದಷ್ಟು ಅಳತೆಯುಳ್ಳದ್ದು, ಯಾವ ದೇಹವನ್ನು ಪಡೆದರೂ ಅದು ಅರ್ಧ ತುಂಬ ವ್ಯಾಪಿಸಿಕೊಳ್ಳುತ್ತದೆ. ೬) ಅದು ಭೋಕ್ತೃ. ತಾನು ಮಾಡಿದ ಕರ್ಮಫಲವನ್ನು ತಾನೆ ಅನುಭವಿಸುತ್ತದೆ, ಸಂಸಾರದಲ್ಲಿ ಸುತ್ತುತ್ತಿರುತ್ತದೆ. ಅದು ಈ ಕರ್ಮಗಳನ್ನು ಕಳೆದುಕೊಂಡು ಶುದ್ಧಸ್ವರೂಪವನ್ನು ಪಡೆದು ಸಿದ್ಧನಾಗಬಲ್ಲುದು. ಅದು ಊರ್ಧ್ವಗಮನವುಳ್ಳುದು.

ಸಂಸಾರಿಯಾದ ಜೀವನನ್ನು ಪ್ರಧಾನವಾಗಿ ಸ್ಥಾವರ, ತ್ರಸ ಎಂದು ಎರಡು ಗುಂಪಾಗಿ ವಿಂಗಡಿಸುತ್ತಾರೆ. ಒಂದ ಕಡೆಯಿಂದ ಮತ್ತೊಂದೆಡೆಗೆ ಚಲಿಸಲಾರದೆ ಇದ್ದಲ್ಲಿಯೇ ಇರುವ ಜೀವಗಳು ಸ್ಥಾವರಗಳು. ಬೇರೆಡೆಗೆ ಚಲಿಸಬಲ್ಲುವು ತ್ರಸಜೀವಗಳು.

ಸ್ಥಾವರಗಳು ಏಕೇಂದ್ರಿಯಗಳು. ಸ್ಪರ್ಶವನ್ನು ಮಾತ್ರ ಅರಿಯಬಲ್ಲ ಒಂದು ಇಂದ್ರಿಯ ಜೀವಗಳು. ಇವುಗಳಲ್ಲಿ ಐದು ವಿಧವುಂಟು. ೧) ಪೃಥ್ವೀಕಾಯ-ಕಲ್ಲುನೆಲಗಳಲ್ಲಿರುವ ಜೀವ. ೨) ಅಬ್ಕಾಯ-ನೀರಿನಲ್ಲಿರುವ ಜೀವಗಳು. ೩) ತೇಜಃಕಾಯ - ಬೆಂಕಿಯಲ್ಲಿರುವ ಜೀವಗಳು ೪) ವಾಯುಕಾಯ-ಗಾಳಿಯಲ್ಲಿರುವ ಜೀವಗಳು, ವನಸ್ಪತಿಕಾಯ-ಗಿಡಮರಗಳಲ್ಲಿರುವ ಜೀವಗಳು.

ತ್ರಸಜೀವಗಳು ನಾಲ್ಕು ವಿಧ. ೧) ದ್ವೀಂದ್ರಿಯಗಳು- ಸ್ಪರ್ಶ, ರಸಗಳನ್ನು ಮಾತ್ರ ತಿಳಿಯಬಲ್ಲ ಜೀವಗಳು, ಶಂಖ ಮೊದಲಾದುವು, ೨) ತ್ರೀಂದ್ರಿಯಗಳು- ಸ್ಪರ್ಶ, ರಸ, ಗಂಧಗಳನ್ನು ತಿಳಿಯಬಲ್ಲ ಜೀವಗಳು ; ಇರುವೆ ಮೊದಲಾದುವು, ೩) ಚತುರಿಂದ್ರಿಯಗಳು- ಸ್ಪರ್ಶ, ರಸ, ಗಂಧ ಮತ್ತು ರೂಪಗಳನ್ನು ತಿಳಿಯಬಲ್ಲವು, ಜೇನು ಮೊದಲಾದುವು. ೪) ಪಂಚೇಂದ್ರಿಯಗಳು - ಸ್ಪರ್ಶ ರಸ ಗಂಧ ರೂಪ ಮತ್ತು ಶಬ್ದಗಳನ್ನು ತಿಳಿಯಬಲ್ಲ ಜೀವಗಳು, ಮನುಷ್ಯ ಮುಂತಾದವರು.

ಸ್ಥಾವರಗಳು ಪ್ರಪಂಚದಲ್ಲೆಲ್ಲಾ ವ್ಯಾಪಿಸಿಕೊಂಡಿವೆ. ತ್ರಸಜೀವಗಳು ಮಧ್ಯಮ ಲೋಕವೆಂಬ ಭೂಲೋಕ, ಮೇಲಿನ ದೇವಲೋಕ, ಕೆಳಗಿನ ನರಕಲೋಕ, ಇವುಗಳ ಮಧ್ಯೆ ಇರುವ ತ್ರಸನಾಡಿಯಲ್ಲಿ ವಾಸಿಸುತ್ತವೆ. ಮಧ್ಯಮಲೋಕದಲ್ಲಿ ಮನುಷ್ಯರೂ, ಪಶು ಪಕ್ಷಿ ಪ್ರಾಣಿಗಳೂ ಹುಟ್ಟುತ್ತವೆ. ಜೀವಗಳು ಪಾಪಫಲವಾದ ದುಃಖವನ್ನು ಅನುಭವಿಸುವುದು ಮಧ್ಯಮಲೋಕದ ಅಡಿಯಲ್ಲಿ ಒಂದರ ಕೆಳಗೊಂದರಂತೆ ಇರುವ ಏಳು ನರಕಗಳಲ್ಲಿ. ಸುಖಾನುಭವಕ್ಕಾಗಿ ದೇವತೆಗಳಾಗಿ ಹುಟ್ಟುವುದು ಮಧ್ಯಮಲೋಕದ ಮೇಲುಗಡೆ ಇರುವ ಊರ್ಧ್ವಲೋಕದಲ್ಲಿ.

ದೇವತೆಗಳಲ್ಲಿ ಭವನಪತಿ, ವ್ಯಂತರಿಕ, ಜ್ಯೋತಿಷ ಮತ್ತು ವಿಮಾನವಾಸಿಗಳೆಂದು ನಾಲ್ಕು ವಿಧ. ಇವರೇ ಚತುರ್ನಿಕಾಯಾಮರರು. ಭೂಲೋಕಕ್ಕೂ ಅದರ ಕೆಳಗಿನ

ಮೊದಲನೆಯ ನರಕಕ್ಕೂ ಮಧ್ಯೆ ಇರುವ ಅಕೃತ್ರಿಮ ಭವನಗಳಲ್ಲಿ ವಾಸಿಸುವ ದೇವತೆಗಳು ಭವನಪತಿಗಳು. ಗಿರಿ, ಗುಹೆ, ಸಮುದ್ರ ಮೊದಲಾದ ಪ್ರದೇಶಗಳಲ್ಲಿ ವಾಸಿಸುತ್ತಿರುವ ಕಿನ್ನರ, ಕಿಂಪುರುಷ, ಯಕ್ಷರೇ ಮೊದಲಾದವರು ವ್ಯಂತರ ದೇವತೆಗಳು. ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳಲ್ಲಿ ನೆಲಸಿರುವವರು ಜ್ಯೋತಿಷ್ಕದೇವತೆಗಳು. ಸ್ವರ್ಗವಿಮಾನಗಳಲ್ಲಿ ವಾಸಿಸುವವರು ವಿಮಾನವಾಸಿಗಳು. ಇವರಲ್ಲಿ ಕಲ್ಪವಾಸಿಗಳೆಂದೂ ಕಲ್ಪಾತೀತರೆಂದೂ ಎರಡು ವಿಧ. ಮೊದಲನೆಯ ಸೌಧರ್ಮಸ್ವರ್ಗದಿಂದ ೧೬ನೆಯ ಅಚ್ಯುತಸ್ವರ್ಗದವರೆಗೆ ದೇವತೆಗಳಲ್ಲಿ ಇಂದ್ರ ಸಾಮಾನಿಕ ಮೊದಲಾದ ಕಲ್ಪನೆಗಳಿರುವುದರಿಂದ ಆ ಸ್ವರ್ಗಗಳಿಗೆ ಕಲ್ಪಗಳೆಂದು ಹೆಸರು. ಅಲ್ಲಿ ನೆಲಸಿರುವವರು ಕಲ್ಪವಾಸಿಗಳು. ಅಲ್ಲಿಂದ ಮೇಲಿನ ಒಂಬತ್ತು ಗ್ರೈವೇಯಕ ವಿಮಾನಗಳಲ್ಲೂ ಇನ್ನೂ ಮೇಲಿನ ಐದು ಅನುತ್ತರ ವಿಮಾನಗಳಲ್ಲೂ ವಾಸಿಸುತ್ತಿರುವ ದೇವತೆಗಳಲ್ಲಿ ಇಂದ್ರಾದಿ ಕಲ್ಪನೆಗಳಿಲ್ಲ. ಅವರೆಲ್ಲ ಸಮಾನರು, ಸ್ವಯಂ ಇಂದ್ರರು ಅಹಮಿಂದ್ರರು. ಕಲ್ಪಗಳನ್ನು ಮೀರಿರುವ ಆ ದೇವತೆಗಳು ಕಲ್ಪಾತೀತರು.

ಸ್ವರ್ಗದಲ್ಲಿ ನೆಲಸಿರುವ ದೇವತೆಗಳ ಬೀಡುಗಳಿಗೆ ವಿಮಾನಗಳೆಂದು ಹೆಸರು. ಇಂದ್ರಕ, ಶ್ರೇಣೀಬದ್ಧ, ಪ್ರಕೀರ್ಣಕಗಳು ಅವುಗಳ ಭೇದವಾಗಿವೆ. ಇಂದ್ರಕಗಳು ಪ್ರಮುಖವಾದುವು. ಕಲ್ಪ ಮತ್ತು ಕಲ್ಪಾತೀತ ಸ್ವರ್ಗಗಳಲ್ಲಿ ಒಟ್ಟು ೬೩ ಇಂದ್ರಕ ವಿಮಾನಗಳುಂಟು. ಅವುಗಳು ತ್ರಿಷಷ್ಟಿಸ್ವರ್ಗಪಟಲಗಳೆಂದು ಹೆಸರಾಂತಿವೆ.

ವಿಮಾನವಾಸಿ ಮತ್ತು ಭವನವಾಸಿ ದೇವತೆಗಳಲ್ಲಿ ಇಂದ್ರ, ಸಾಮಾಜಿಕ, ತ್ರಾಯ, ಸ್ತ್ರಿಂಶ, ಪಾರಿಷದ, ಆತ್ಮರಕ್ಷ, ಲೋಕಪಾಲ, ಅನೀಕ, ಪ್ರಕೀರ್ಣಕ, ಅಭಿಯೋಗ್ಯ ಮತ್ತು ಕಿಲ್ಬಿಷಕ ಎಂದು ಹತ್ತು ವಿಧ ಪಂಗಡಗಳುಂಟು. ವ್ಯಂತರ ಮತ್ತು ಜ್ಯೋತಿಷ್ಕ ದೇವತೆಗಳಲ್ಲಿ ತ್ರಾಯಸ್ತ್ರಿಂಶ ದೇವತೆಗಳಿಲ್ಲ. ಇಂದ್ರರು ಅಣಿಮಾದಿ ಗುಣಗಳಿಂದ ಸಂಪನ್ನರಾದ ದೇವತೆಗಳ ಒಡೆಯರು. ಆಪ್ಪಣೆ, ಐಶ್ವರ್ಯ ಮುಂತಾದುವನ್ನುಳಿದು ಇತರ ಗುಣಗಳಲ್ಲಿ ಇಂದ್ರರಿಗೆ ಸಮಾನರಾಗಿ ಅವರಿಗೆ ತಂದೆ ತಾಯಿಗಳಂತಿರುವವರು ಸಾಮಾನಿಕರು. ಇಂದ್ರರಿಗೆ ಮಂತ್ರಿ ಪುರೋಹಿತರಂತೆ ಶೋಭಿಸುವವರು ತ್ರಾಯಸ್ತ್ರಿಂಶ ದೇವತೆಗಳು. ಸಂಗಡಿಗರಂತಿರುವವರು ಪಾರಿಷದರು. ಅಂಗರಕ್ಷಕರಂತಿರುವವರು ಆತ್ಮರಕ್ಷಕ ದೇವತೆಗಳು. ದುರ್ಗರಕ್ಷಕರಂತಿರುವವರು ಲೋಕಪಾಲಕರು. ದೇವರಾಜ ಮುಂತಾದ ಏಳು ಬಗೆಯ ಸೈನ್ಯದವರೇ ಅನೀಕ ದೇವತೆಗಳು. ಪೌರರಂತೆಯೂ ಪ್ರಜೆಗಳಂತೆಯೂ ಇರುವವರು ಪ್ರಕೀರ್ಣಕರು. ಸೇವಕರಂತೆ ಸೇವೆ ಮಾಡುವವರು ಅಭಿಯೋಗ್ಯರು. ಸ್ವರ್ಗದಲ್ಲಿ ಬಾಹ್ಯಪ್ರಜೆಗಳಂತಿರುವ ಅಲ್ಪಪುಣ್ಯರಾದ ಕೆಳದರ್ಜೆಯ ದೇವತೆಗಳು ಕಿಲ್ಬಿಷರು.

ಚತುರ್ಗತಿರೂಪವಾದ ಸಂಸಾರದಲ್ಲಿ ಸಿಕ್ಕಿಕೊಂಡು ತೊಳಲುತ್ತಿರುವ ಜೀವನು ಅಜ್ಞಾನಾವೃತನಾಗಿ ನಿಜಸ್ವರೂಪದರಿವನ್ನು ಮರೆತಿದ್ದರೂ, ಯಾವಾಗಲೂ ಸೌಖ್ಯವನ್ನರಸುತ್ತಾ ದುಃಖವನ್ನು ದೂರಗೊಳಿಸಲಾಶಿಸುತ್ತಿರುತ್ತಾನೆ. ಕರ್ಮಬಂಧವು ಎಷ್ಟೇ ಬಿಗುವಾಗಿದ್ದರೂ ಜೀವನನ್ನು ಅದು ನಾಶಗೊಳಿಸಲು ಶಕ್ತವಾಗದು. ತನ್ನನ್ನು ಸಂಸಾರದಲ್ಲಿ ಹಿಡಿದಿಟ್ಟಿರುವ ಕರ್ಮಬಂಧವನ್ನು ಹೆಚ್ಚಿಸಿಕೊಳ್ಳುವುದೂ ಇಲ್ಲವೇ ಅದರಿಂದ

ಬಿಡಿಸಿಕೊಳ್ಳುವುದೂ ಜೀವನ ಇಚ್ಛೆಗೆ ಒಳಪಟ್ಟದ್ದು, ಒಮ್ಮೆ ಕರ್ಮ ಮಾಡಿದರೆ, ಆ ಕರ್ಮಫಲವನ್ನು ಅನುಭವಿಸಿ ಮುಗಿಸುವವರೆಗೆ ಅದರಿಂದ ಜೀವಕ್ಕೆ ಬಿಡುಗಡೆಯಿಲ್ಲ.

**ಅಜೀವ**

ಚೇತನವಲ್ಲದ್ದು ಅಜೀವ. ಧರ್ಮ, ಅಧರ್ಮ, ಆಕಾಶ, ಪುದ್ಗಲ ಮತ್ತು ಕಾಲಗಳು ಅಜೀವ. ಇದರ ಸಂಬಂಧದಿಂದಲೇ ಜೀವನಿಗೆ ಸಂಸಾರಬಂಧವೊದಗುವುದು. ಅಜೀವವು ಮೂರ್ತ (ಆಕೃತಿಯುಳ್ಳದು), ಅಮೂರ್ತ (ಆಕೃತಿ ರಹಿತವಾದದ್ದು) ಎಂದು ಎರಡು ವಿಧ. ಪುದ್ಗಲವು ಮೂರ್ತ, ಉಳಿದ ನಾಲ್ಕು ಅಮೂರ್ತಗಳು.

**ಪುದ್ಗಲ**

ಯಾವುದು ಭೇದ (Division) ಸಂಘಾತ (union) ಗಳಿಂದ, ಇಲ್ಲವೇ ಭೇದ ಸಂಘಾತಗಳೆರಡರಿಂದ ಅನ್ಯಪದಾರ್ಥಗಳೊಡನೆ ಮಿಶ್ರಣ ಇಲ್ಲವೆ ಪೂರಣಗಳನ್ನುಂಟು ಮಾಡುತ್ತದೋ ಇಲ್ಲವೇ ವಿಘಟನವನ್ನೆಸಗುತ್ತದೋ ಅದು ಪುದ್ಗಲ. ಇದು ಮೂರ್ತವಾದುದು. ಇದರರಿವು ನಮಗೆ ರೂಪ, ರಸ, ಗಂಧ ಮತ್ತು ಸ್ಪರ್ಶಗಳಿಂದಾಗುತ್ತದೆ. ಈ ನಾಲ್ಕು ಗುಣಗಳು ಪುದ್ಗಲವೆಂದು ಹೆಸರುಗೊಂಡ ಎಲ್ಲ ಪದಾರ್ಥಗಳಲ್ಲಿಯೂ ಕಂಡುಬರುತ್ತವೆ. ಅವು ಕಪ್ಪು, ಬಿಳಿದು, ಕೆಂಪು, ಹಳದಿ, ನೀಲಿ, ಹುಳಿ, ಉಪ್ಪು, ಕಾರ, ಸಿಹಿ, ಕಹಿ, ಮಿದುವು, ಬಿರುಸು, ಹಗುರು, ಜಡ, ತಂಪು, ಕಾವು, ಹಸಿ ಮತ್ತು ಶುಷ್ಕ (ಒಣಗಿದ್ದು)ಗಳು. ಇವು (ಮೂಲ ಗುಣ) ಕೂಡ ಪ್ರತಿಯೊಂದು ಸಂಖ್ಯಾತ, ಅಸಂಖ್ಯಾತ ಮತ್ತು ಅನಂತವಾಗಿವೆ. ಜಗತ್ತಿನೊಳಗಿನ ಪೃಥ್ವಿ, ಜಲ, ವಾಯುಗಳೇ ಮೊದಲಾದ ಸಮಸ್ತ ದೃಶ್ಯಪದಾರ್ಥಗಳು ಪುದ್ಗಲ. ಶರೀರ, ವಚನ, ಮನಸ್ಸು, ಪ್ರಾಣ ಮತ್ತು ಶ್ವಾಸೋಚ್ಛ್ವಾಸಗಳು ಪುದ್ಗಲಗಳ ಕಾರ್ಯಗಳಾಗಿವೆ. ಜೀವನಿಗೆ ಸುಖ, ದುಃಖ, ಜೀವನ, ಮರಣಗಳ ಅನುಭವವು ಪುದ್ಗಲದಿಂದ ಆಗುತ್ತದೆ. ಇದೊಂದು ದ್ರವ್ಯ. ಅದರಿಂದಾಗಿದ್ದು ಉತ್ಪಾದ-ವ್ಯಯ-ಧ್ರೌವ್ಯಲಕ್ಷಣಯುಕ್ತವಾಗಿದೆ. ಈ ಪುದ್ಗಲವು ಶಬ್ದ, ಬಂಧ, ಸೌಕ್ಷ್ಮ ಸ್ಥೌಲ್ಯ, ಸಂಸ್ಥಾನ, ಭೇದ, ತಮ, ವಾಯಾ, ಆತಪ ಮತ್ತು ಉದ್ಯೋತ ರೂಪಗಳಲ್ಲಿ ಪ್ರತ್ಯಕ್ಷವಾಗುತ್ತದೆ. ಇದು ಬಹು ಸೂಕ್ಷ್ಮ

**ಧರ್ಮ**

ಧರ್ಮವು ಒಂದು ಶಕ್ತಿ. ಮೀನುಗಳ ಸಂಚಾರಕ್ಕೆ ನೀರು ಸಹಾಯಕವಾಗಿರುವಂತೆ ಜೀವ ಪುದ್ಗಲಗಳ ಸಂಚಾರಕ್ಕೆ ಧರ್ಮದ್ರವ್ಯವು ಸಹಾಯಕ. ಅದು ಜೀವ ಪುದ್ಗಲಗಳನ್ನು ಪ್ರೇರಿಸುವುದು ಇಲ್ಲ, ಇಲ್ಲವೇ ನಿರ್ಬಂಧಿಸುವುದೂ ಇಲ್ಲ. ಆದರೆ ಅವುಗಳ ಚಲನಕ್ಕೆ ಧರ್ಮವು ಇದ್ದೇತೀರಬೇಕು. ಅದರ ಸಹಾಯವಿಲ್ಲದೆ ಚಲನೆಯು ಜರುಗದು. ಅದರಿಂದಲೇ ಶುದ್ಧಾತ್ಮನು ಮೇಲುಮೇಲಕ್ಕೆ ತೆರಳಿ ಮುಕ್ತಿಯನ್ನು ಪಡೆದು ಸಿದ್ಧಶಿಲೆಯನ್ನೇರಬಲ್ಲನು. ಧರ್ಮದ್ರವ್ಯವಿಲ್ಲದ್ದರಿಂದಲೇ ಲೋಕಾಂತದಲ್ಲಿ ಅವನು ಚಲಿಸಲಾರನು.

**ಅಧರ್ಮ**

ಧರ್ಮವು ಜೀವ ಪುದ್ಗಲಗಳ ಗತಿಗೆ ಸಹಾಯಕವಾಗಿರುವಂತೆ ಅಧರ್ಮವು ಅವುಗಳ ವಿಶ್ರಾಂತಿಗೆ - ಗತಿನಿರೋಧಕ್ಕೆ ಸಹಾಯಕವಾಗಿರುತ್ತದೆ. ಧರ್ಮದಂತೆ ಇದೂ ಕೂಡ ವಿಶ್ರಾಂತಿಗೆ ಪ್ರೇರಕವಲ್ಲ, ಸಹಾಯಕ ಮಾತ್ರ, ವಸ್ತುಗಳು ನಿಲ್ಲಲು ಭೂಮಿ ಹೇಗೋ ಹಾಗೆ.

ಜೀವನಗತಿಗೂ ತನ್ನೊಡನೆ (ಜೀವನೊಡನೆ) ಸಂಬದ್ಧವಾದ ಪುದ್ಗಲದ ಚಲನೆಗೂ ಧರ್ಮದ್ರವ್ಯವು ನೆರವಾಗಿ ಬರುತ್ತದೆ. ಜೀವನು ತನ್ನ ಓಡಾಟವನ್ನು ನಿಲ್ಲಿಸಲಾಶಿಸಿದರಾಗಲೀ, ಕರ್ಮವು ಹಣ್ಣಾಗಿ ಪುದ್ಗಲದ ಹಿಡಿತದಿಂದ ಕಳಚಿಬೀಳುವ ಸಂದರ್ಭದಲ್ಲಾಗಲೀ ಅಧರ್ಮದ್ರವ್ಯವು ಸಹಾಯಕ್ಕೆ ಬರುತ್ತದೆ.

ಧರ್ಮಾಧರ್ಮಗಳೆರಡೂ ಲೋಕಾಕಾಶದಲ್ಲೆಲ್ಲಾ ವ್ಯಾಪಿಸಿಕೊಂಡಿವೆ. ಅಲೋಕದಲ್ಲಿ (ಲೋಕದ ಹೊರಗೆ) ಇಲ್ಲ. ಇವು ಅನಾದಿ ಅನಂತಗಳು. ಇವಕ್ಕೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಲ್ಲ.

**ಆಕಾಶ**

ಆಕಾಶವು ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಕಾಲಗಳಿಗೆ ಆಶ್ರಯಸ್ಥಾನವಾಗಿದೆ. ದ್ರವ್ಯಗಳಿಗೆ ಸ್ಥಳವನ್ನೊದಗಿಸಿಕೊಡುವುದೇ ಇದರ ಕಾರ್ಯವಾಗಿದೆ. ಇದು ಅಮೂರ್ತ. ಇದರಿಂದ ಧರ್ಮಾದಿದ್ರವ್ಯಗಳು ಏಕತ್ರ ವಾಸಿಸಲು ಸಾಧ್ಯವಾಗಿದೆ. ಇದು ನಿತ್ಯ ವ್ಯಾಪಕ ಮತ್ತು ಅನಂತ. ಲೋಕಾಕಾಶ, ಅಲೋಕಾಕಾಶ ಎಂದು ಇದು ಎರಡು ವಿಧ. ಲೋಕಾಕಾಶದಲ್ಲಿ ಮಾತ್ರ ಜೀವ ಪುದ್ಗಲಾದಿಗಳು ನೆಲಸಿರುತ್ತವೆ. ಅಲೋಕಾಕಾಶದಲ್ಲಿ ಯಾವ ಜೀವಗಳೂ ಇಲ್ಲ. ಆಕಾಶವು ಗತಿಸ್ಥಿತಿಗಳಿಗೆ ಮಾಧ್ಯಮ.

**ಕಾಲ**

ದ್ರವ್ಯಗಳ ಹಲವಾರು ಪರಿವರ್ತನೆಗಳಿಗೂ, ಅವುಗಳ ರೂಪಾಂತರಕ್ಕೂ ಕಾಲವು ಸಹಾಯಕವಾಗಿದೆ. ಇದೊಂದು ದ್ರವ್ಯ, ಅದರಿಂದಾಗಿ ದ್ರವ್ಯಲಕ್ಷಣಗಳಾದ ಉತ್ಪನ್ನ ವ್ಯಯ ಮತ್ತು ಧ್ರೌವ್ಯಗಳನ್ನು ಕಾಣಬಹುದು.

ಕಾಲವನ್ನು ಸಾಮಾನ್ಯವಾಗಿ ನಿಮಿಷ, ಘಂಟೆ, ತಿಂಗಳು, ವರ್ಷ ಮೊದಲಾಗಿ ಲೆಖ್ಖ ಹಾಕುವುದು ವಾಡಿಕೆ. ಅನಂತವಾದ ಕಾಲವನ್ನು ಲೆಖ್ಖಹಾಕುವುದು ತಾನೆ ಸಾಧ್ಯ. ಇದನ್ನು ಅಸಂಖ್ಯಕಲ್ಪಗಳನ್ನಾಗಿ ವಿಭಾಗಿಸಿದ್ದಾರೆ. ಉತ್ಸರ್ಪಿಣಿ ಅವಸರ್ಪಿಣಿ ಎಂದು ಒಂದೊಂದು ಕಾಲದಲ್ಲಿಯೂ ಎರಡು ವಿಧವುಂಟು. ಉತ್ಕರ್ಪಿಣಿ ಕಾಲದಲ್ಲಿ ಧರ್ಮ, ಸತ್ಯ, ನ್ಯಾಯ, ಆಯುಸ್ಸುಗಳೆ ಮೊದಲಾದುವು ವೃದ್ಧಿಗೊಳ್ಳುತ್ತಿರುತ್ತವೆ. ಅವಸರ್ಪಿಣಿಯಲ್ಲಿ ಅವು ಕ್ರಮಕ್ರಮವಾಗಿ ಕಡಮೆಗೊಳ್ಳುತ್ತವೆ. ಅನ್ಯಾಯಾದಿಗಳು ಹೆಚ್ಚಿ ಅವು ತಾವೇ ತಾವಾಗಿ ಮೆರೆಯುತ್ತವೆ. ಬಳಿಕ ಉತ್ಸರ್ಪಿಣಿಯಲ್ಲಿ ಅಧರ್ಮ ಅನ್ಯಾಯಗಳು ಕಡಮೆಗೊಂಡು

ಧರ್ಮ ನ್ಯಾಯಾದಿಗಳು ಹೆಚ್ಚಲು ಅವಕಾಶ ಮಾಡಿಕೊಡುತ್ತವೆ. ಹೀಗೆ ಅವುಗಳಲ್ಲಿ ವೃದ್ಧಿ ಹ್ರಾಸಗಳು ಒಂದನ್ನೊಂದು ಎಡಬಿಡದೆ ಹಿಂಬಾಲಿಸುತ್ತ ಹೋಗುತ್ತವೆ.

**ದ್ರವ್ಯ**

ಚೇತನಾಚೇತನಾತ್ಮಕವಾದ ಜೀವಪುದ್ಗಲಗಳೂ, ಧರ್ಮಾಧರ್ಮಗಳೂ, ಆಕಾಶ ಕಾಲಗಳೂ ದ್ರವ್ಯಗಳು. ಸಚೇತನವಾದ ಜೀವವು ಪರಿಸ್ಪಂದಾತ್ಮಕವಾದ ಕ್ರಿಯಾಶೀಲತೆಯನ್ನು ಪಡೆದಿದೆ. ಇನ್ನುಳಿದುವು ಅಚೇತನವಾದುವು. ಆದರೂ ಇವುಗಳ ಅಗುರು ಲಘು ಗುಣವಿರುವುದರಿಂದ ಷಡ್ಗುಣ ಹಾನಿವೃದ್ಧಿರೂಪವಾದ ಪರಿಣಮವು ತೋರಿಬರುತ್ತದೆ. ಸತ್ತಾಸ್ವರೂಪವಾದ ದ್ರವ್ಯವು ತನ್ನ ಸಹಜಸ್ಥಿತಿಯನ್ನು ಎಂದೂ ಕಳೆದುಕೊಳ್ಳದು.

ಚಿನ್ನದ ಗಡಿಗೆಯನ್ನು ಕರಗಿಸಿ ಕಿರೀಟವನ್ನು ಮಾಡಿಸಿದರೆ ಗಡಿಗೆಯ ಅಸ್ತಿತ್ವವು ನಾಶಗೊಳ್ಳುವುದು, ಕಿರೀಟವು ಉತ್ಪತ್ತಿಗೊಳ್ಳುವುದು ; ಚಿನ್ನದ ಸ್ಥಿತಿಯು ಇದ್ದಂತಾಗುವುದು. ಹೀಗೆ ಒಂದೇ ಚಿನ್ನವನ್ನು ಮೂರು ಅವಸ್ಥೆಗಳಲ್ಲಿರುವಂತೆ ಕಾಣುತ್ತೇವೆ. ಹೀಗೆಯೇ ಜೀವವು ಸಂಸಾರಸ್ಥಿತಿಯಲ್ಲಿರುವಾಗ ಒಂದು ದೇಹದಲ್ಲಿ ಹುಟ್ಟಿ ಕೆಲವುಕಾಲ ಬದುಕಿ ಬಾಳಿ ಸತ್ತು ಮತ್ತೊಂದು ದೇಹದಲ್ಲಿ ಹುಟ್ಟಿಕೊಳ್ಳುತ್ತದೆ. ಅದು ಬೇರೆ ಬೇರೆ ಜನ್ಮಗಳಲ್ಲಿ ತೋರಿಕೊಂಡಾಗ ಆಯಾ ದೇಹಲಕ್ಷಣಗಳನ್ನು ಪಡೆಯುತ್ತದೆ. ಹೀಗೆ ಒಂದೊಂದು ದೇಹವನ್ನೂ ಕುರಿತು ಯೋಚಿಸುವಾಗ ಜೀವನು ಹುಟ್ಟಿದಂತೆಯೂ ಸತ್ತಂತೆಯೂ ಕಾಣುತ್ತಾನೆ. ಇವು ಜೀವದ ಉತ್ಪಾದ ವ್ಯಯಗಳು. ಹಲವಾರು ದೇಹಗಳಲ್ಲಿ ಅನೇಕ ವಿಧ ಗುಣಲಕ್ಷಣಗಳನ್ನು ಪಡೆಯುತ್ತಾ ಸುತ್ತುತ್ತಿರುವವನು ಜೀವನೊಬ್ಬನೇ, ಈ ಸುತ್ತಾಟದಲ್ಲೆಲ್ಲಾ ಜೀವನ ವ್ಯಕ್ತಿತ್ವಕ್ಕಾಗಲೀ ಜೀವತ್ವಕ್ಕಾಗಲೀ ಏನೂ ಕುಂದಿಲ್ಲ. ಆಗಾಗ ಹಲವಾರು ಶರೀರಗಳನ್ನು ಹೊಂದುತ್ತಿದ್ದರೂ ತನ್ನ ಸಹಜವಾದ ಗುಣಗಳನ್ನು ಪ್ರಕಾಶಪಡಿಸಿಕೊಂಡು ಮುಕ್ತಿಪ್ರಾಪ್ತಿಯ ವರೆಗೂ ಆ ಜೀವನ ಜೀವತ್ವವು ಒಂದೇ ವಿಧದಲ್ಲಿರುತ್ತದೆ. ಇದು ಅವನ ಧ್ರುವತ್ವ. ಹೀಗೆ ಉಳಿದ ದ್ರವ್ಯಗಳಿಗೂ ಉತ್ಪಾದ ವ್ಯಯಗಳನ್ನು ಊಹಿಸಿಕೊಳ್ಳಬೇಕು.

**ಪುಣ್ಯ-ಪಾಪ**

ಜೀವದ ಶುಭದ ಪರಿಣಾಮವೇ ಪುಣ್ಯ, ಅಶುಭ ಪರಿಣಾಮವೇ ಪಾಪ. ಅಂದರೆ ಜೀವನ ಒಳ್ಳೆಯ ಇಲ್ಲವೆ ಕೆಟ್ಟ ಭಾವಗಳಿಗೆ ತಕ್ಕಂತೆ ಪುಣ್ಯ ಅಥವಾ ಪಾಪಕರ್ಮಗಳು ಅವನ ಕಡೆಗೆ ಪ್ರವಹಿಸುತ್ತವೆ. ಒಳ್ಳೆಯ ಕರ್ಮವು ಮೇಲ್ಗತಿಯನ್ನುಂಟುಮಾಡುತ್ತದೆ. ಕೆಟ್ಟಕರ್ಮವು ಕೆಳಗತಿಗೊಯ್ಯುತ್ತದೆ.

ಅರ್ಹದ್ಭಕ್ತಿಯುಳ್ಳ ಅನುಕಂಪಾಪ್ರಧಾನವಾದ ಚಿತ್ತಕಾಲುಷ್ಯವಿಲ್ಲದ ಜೀವನೆಡೆಗೆ ಪುಣ್ಯಕರ್ಮವು ಹರಿದುಬರುತ್ತದೆ. ಇದು ಪುಣ್ಯಾಸ್ರವ.

ಪ್ರಮಾದಯುಕ್ತವಾದ ನಡತೆ, ಕಲುಷತೆ, ವಿಷಯಲೋಲುಪತೆ, ಇತರರ ವಿಷಯದಲ್ಲಿ ಕೆಟ್ಟದ್ದನ್ನಾಡುವುದು. ಹಿಂಸೆ ಮಾಡುವುದು, ಇವು ಜೀವನಿದ್ದೆಡೆಗೆ ಪಾಪ ಹರಿದು ಬರುವಂತೆ ಮಾಡುತ್ತವೆ. ಇದು ಪಾಪಾಸ್ರವ.

ಪಾಪ ಜೀವನನ್ನು ಕೆಳಗತಿಗೊಯ್ಯುತ್ತದೆ. ಏಕೇಂದ್ರಿಯಾದಿ ಕೀಳುನೆಲೆಗಳಲ್ಲಿ ಹುಟ್ಟುವಂತೆಸಗುತ್ತದೆ, ನರಕದುಃಖವನ್ನು ತರುತ್ತದೆ, ಜೀವನ ಒಳ್ಳೆಯ ಗುಣಗಳು ಕುಂದುತ್ತಾ ಹೋಗುತ್ತವೆ.

ಪುಣ್ಯ ಜೀವನನ್ನು ಮೇಲಕ್ಕೇರಿಸುತ್ತದೆ, ಪುಣ್ಯದ ಫಲವಾಗಿ ಆರೋಗ್ಯ ಸೌಂದರ್ಯಾದಿ ಶುಭಗಳು ಲಭಿಸುತ್ತವೆ. ಪುಣ್ಯಬಲವು ಚಕ್ರವರ್ತಿತ್ವವನ್ನೂ ದೇವತಾತ್ವವನ್ನೂ ತಂದೊದಗಿಸುತ್ತದೆ, ತೀರ್ಥಂಕರತ್ವವನ್ನೂ ತರಬಲ್ಲುದು. ಆದರೆ ಇದರಿಂದ ಮುಕ್ತಿಯು ಮಾತ್ರ ದೊರೆಯದು. ಪಾಪಪುಣ್ಯಗಳೆರಡೂ ಬಂಧಪ್ರಾಪಕಗಳು.

**ಕರ್ಮ**

ಚೇತನವು ಅಚೇತನದೊಡನೆ ಕಲೆತಾಗ ಕಾರ್ಯವು ಪ್ರಾರಂಭಗೊಳ್ಳುತ್ತದೆ. ಅದೇ ಕರ್ಮ, ಅದೇ ಪುದ್ಗಲ. ಕರ್ಮದ ಫಲಗಳಾದ ಸುಖದುಃಖಗಳನ್ನೂ, ಕರ್ಮಕ್ಕೆ ಹೇತುವಾದ ಇಂದ್ರಿಯಗಳನ್ನೂ ಜೀವನು ಮೂರ್ತಿಮತ್ತಾದ ಇಂದ್ರಿಯಗಳ ಮೂಲಕ ಭೋಗಿಸುವುದರಿಂದ ಕರ್ಮವು ಮೂರ್ತ, ಕರ್ಮಪುದ್ಗಲವು ಜೀವನನ್ನು ವ್ಯಾಪಿಸಿಕೊಂಡು ಅವನಿಗೆ ಬಂಧವನ್ನುಂಟುಮಾಡುತ್ತದೆ. ಇದು ಜೀವನ ಸಹಜವಾದ ಊರ್ಧ್ವಗತಿಯನ್ನು ತಡೆಹಿಡಿದು ಕೆಳಗೆಳೆದು ಅವನನ್ನು ಸಂಸಾರದಲ್ಲಿ ದೂಡುತ್ತದೆ. ಜೀವನು ಕರ್ಮದ ಭಾರವನ್ನು ಹೊತ್ತುಕೊಂಡು ತನ್ನ ಸ್ವಾಭಾವಿಕವಾದ ಅನಂತ ಚತುಷ್ಟಯಗಳನ್ನು ಕಳೆದುಕೊಂಡು ಹುಟ್ಟುಸಾವುಗಳೆಂಬ ಸುಳಿಯಲ್ಲಿ ಸಿಕ್ಕಿಹಾಕಿಕೊಳ್ಳುತ್ತಾನೆ.

ಕರ್ಮವು ಘಾತಿ, ಅಘಾತಿಯೆಂದು ಎರಡು ವಿಧ. ಜೀವನಿಗೆ ಸಹಜಸ್ಥಿತವಾದ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ ಮತ್ತು ಅನಂತಸುಖಗಳಿಗೆ ಘಾತಿ ಯೆಂದರೆ ಕೇಡನ್ನು ಮಾಡುವ ಕರ್ಮಗಳು ಘಾತಿಕರ್ಮಗಳು. ಅವುಗಳಿಗೆ ಘಾತಿಯನ್ನುಂಟು ಮಾಡದ ಕರ್ಮಗಳು ಅಘಾತಿಕರ್ಮಗಳು.

ಘಾತಿಕರ್ಮಗಳು ಜೀವನ ಸಹಜಸ್ಥಿತವಾದ ಗುಣಗಳನ್ನು ಪಡೆಯದಂತೆ ಮಾಡುತ್ತದೆ. ಅಘಾತಿಕರ್ಮಗಳು ಆ ರೀತಿ ಕೇಡು ಮಾಡಲು ಹೋಗದೆಯೆ, ಜೀವನು ಸಂಸಾರಸ್ಥಿತಿಯನ್ನಪ್ಪಿರುವಾಗ ಅವನು ಹುಟ್ಟಿಬರುವ ಸಂದರ್ಭ, ಶರೀರ ಮೊದಲಾದುವನ್ನು ಮಾತ್ರ ನಿಶ್ಚಯಿಸುತ್ತವೆ.

ಜೀವನನ್ನು ಸಂಸಾರದಲ್ಲಿ ಕಟ್ಟಿಹಾಕಿರುವುದು ಕರ್ಮವಾದ್ದರಿಂದ, ಈ ಕರ್ಮ ಬಂಧನವನ್ನು ಕತ್ತರಿಸಿಹಾಕಿದರೆ ಜೀವನಿಗೆ ಮೋಕ್ಷವು ತಪ್ಪದೆ ದೊರಕುತ್ತದೆ. ಜ್ಞಾನಾವರಣವನ್ನು ನಾಶಗೊಳಿಸಿದರೆ ಕೇವಲಜ್ಞಾನವುಂಟಾಗುತ್ತದೆ. ದರ್ಶನಾವರಣವನ್ನು ಉನ್ಮೂಲನಗೊಳಿಸಿದರೆ ಕೇವಲದರ್ಶನವು ತಲೆಹಾಕುತ್ತದೆ. ವೇದನೀಯ ಕರ್ಮಗಳ ನಾಶದಿಂದ ಅವ್ಯಾಬಾಧಿತ್ವವುಂಟಾಗುತ್ತದೆ. ಅಂದರೆ ಯಾವ ಬಾಧೆಯೂ ಇಲ್ಲದೆ ಅನಂತಸುಖವು ಕೈಗೆಟಕುತ್ತದೆ. ಮೋಹನೀಯಕರ್ಮಗಳನ್ನು ದೂರಹಾಕಿದರೆ ನಿಶ್ಚಲವಾದ ಸಮ್ಯಕ್ತ್ವವು ಕಾಣಿಸಿಕೊಳ್ಳುತ್ತದೆ. ಆಯುಃಕರ್ಮದ ನಾಶದಿಂದ ಸೂಕ್ಷ್ಮತೆಯೂ,

ನಾಮಕರ್ಮಗಳ ಧ್ವಂಸದಿಂದ ಅವಗಾಹನತ್ವವೂ, ಗೋತ್ರಕರ್ಮಗಳ ನಾಶದಿಂದ ಅಗುರುಲಘುತ್ವವೂ, ಅಂತರಾಯವಿಧ್ವಂಸನದಿಂದ ಅನಂತವೀರ್ಯವೂ ಲಭಿಸುತ್ತವೆ.

**ಲೇಶ್ಯೆ**

ಜೀವನ ಪುಣ್ಯಾಪಾಪಗಳಿಗೆ ಅನುಗುಣವಾದ ಒಂದು ಬಗೆಯ ಬಣ್ಣ ಜೀವಕ್ಕೆ ಅಂಟುತ್ತದೆ. ಇದಕ್ಕೆ ಲೇಶ್ಯೆಯೆಂದು ಹೆಸರು.

ಲೇಶ್ಯೆಯಲ್ಲಿ ಕೃಷ್ಣ, ನೀಲ, ಕಪೋತ, ಪೀತ, ಪದ್ಮ ಮತ್ತು ಶುಕ್ಲಗಳೆಂದು ಆರು ವಿಧ. ಈ ಲೇಶ್ಯೆಗಳಿಂದ ಮಾನವನ ಭಾವನೆಗಳಲ್ಲಿಯೂ ಕ್ರಿಯೆಗಳಲ್ಲಿಯೂ ಅಪಾರ ವ್ಯತ್ಯಾಸವುಂಟಾಗುತ್ತದೆ.

**ಗುಣಸ್ಥಾನ**

ರಾಗ, ದ್ವೇಷ ಮತ್ತು ಮಿಥ್ಯಾತ್ತ್ವಗಳಿಗೆ ಮೋಹವೆನ್ನುವರು. ಮನಸ್ಸು, ಮಾತು ಮತ್ತು ದೇಹಗಳ ನಿಮಿತ್ತವಾಗಿ ಆತ್ಮಪ್ರದೇಶದಲ್ಲಿ ಚಾಂಚಲ್ಯವೊದಗಲಿಕ್ಕೆ ಯೋಗವೆನ್ನುವರು. ಮೋಹ ಹಾಗೂ ಯೋಗಗಳ ಫಲವಾಗಿ ದರ್ಶನ, ಜ್ಞಾನ ಮತ್ತು ಚಾರಿತ್ರರೂಪಗಳಾದ ಆತ್ಮಗುಣಗಳಲ್ಲಿ ಕ್ರಮಿಕರೂಪಗಳಾದ ಅವಸ್ಥೆಗಳು ಗುಣಸ್ಥಾನವೆನಿಸುವುವು.

ಈ ಗುಣಸ್ಥಾನಗಳು ಹದಿನಾಲ್ಕು. ೧ ಮಿಥ್ಯಾತ್ವ, ೨ ಸಾಸಾದನ, ೩ ಮಿಶ್ರ, ೪ ಅವಿರತಸಮ್ಯಕ್ತ್ವ, ೫ ದೇಶವಿರತ, ೬ ಪ್ರಮತ್ತವಿರತ, ೭, ಅಪ್ರಮತ್ತವಿರತ, ೮ ಅಪೂರ್ವಕರಣ, ೯ ಅನಿವೃತ್ತಿಕರಣ, ೧೦ ಸೂಕ್ಷ್ಮಸಂಪ್ರದಾಯ, ೧೧ ಉಪಶಾಂತ ಮೋಹ, ೧೨ ಕ್ಷೀಣಮೋಹ, ೧೩ ಸಂಯೋಗಕೇವಲಿ, ೧೪ ಅಯೋಗಕೇವಲಿ.

ಈ ಗುಣಸ್ಥಾನಗಳನ್ನು ಕ್ರಮಕ್ರಮವಾಗಿ ಏರಿಹೋದಂತೆಲ್ಲಾ ಜೀವನು ಅಚೇತನ ಸಂಬಂಧವನ್ನು ಕಡಿದುಕೊಳ್ಳುತ್ತಾನೆ. ತತ್ಫಲವಾಗಿ ಅವನ ಕರ್ಮದ ಕಟ್ಟುಗಳು ಸಡಿಲಗೊಳ್ಳುತ್ತವೆ. ಕೊನೆಗೆ ಹದಿಮೂರನೆಯ ಸ್ಥಾನದಲ್ಲಿ ಅರ್ಹತ್ವಪದವಿಯನ್ನಲಂಕರಿಸಿ ೧೪ನೆಯ ಸ್ಥಾನದಲ್ಲಿ ಸಿದ್ಧಶಿಲೆಯನ್ನೇರುತ್ತಾನೆ.

**ಆಸ್ರವ**

ರಾಗದ್ವೇಷಗಳಿಗೆ ತುತ್ತಾದ ಜೀವನ ಮನಸ್ಸು, ಮಾತು ಮತ್ತು ದೇಹಗಳಲ್ಲಿ ಸಂಭವಿಸುವ ಚಲನೆಗಳಿಂದಲೂ, ಜೀವನ ಶುಭಾಶುಭ ಕಾರ್ಯಗಳಿಂದಲೂ ಕರ್ಮ ಪುದ್ಗಲವು ಮೈದೋರಿಕೊಳ್ಳುತ್ತದೆ. ಈ ಕರ್ಮವು ಜೀವದೊಳಗೆ ಬಂದಂಟಿಕೊಳ್ಳುವುದೇ ಆಸ್ರವ, ಭಾವಾಸ್ರವ, ದ್ರವ್ಯಾಸ್ರವ ಎಂದು ಆಸ್ರವವು ಎರಡು ವಿಧ. ಕರ್ಮಪುದ್ಗಲವು ಜೀವದೊಳಕ್ಕೆ ಪ್ರವಹಿಸಲನುಕೂಲವಾದ ಸ್ಥಿತಿಯು ಭಾವಾಸ್ರವ. ಅಂಥ ಅನುಕೂಲಸ್ಥಿತಿಯೊದಗಲು ಜೀವದೊಳಗೆ ಪ್ರವಹಿಸುವ ನಾನಾವರ್ಣದ ಪುದ್ಗಲಗಳೇ ದ್ರವ್ಯಾಸ್ರವಗಳು. ಇವು ಅತಿಸೂಕ್ಷ್ಮವಾಗಿರುವುದರಿಂದ ಇಂದ್ರಿಯಗೋಚರಗಳಲ್ಲ.

ಐದು ಬಗೆಯ ಮಿಥ್ಯಾತ್ವದಿಂದಲೂ, ಐದು ಬಗೆಯ ಅವಿರತಿಯಿಂದಲೂ,

ಹದಿನೈದು ಬಗೆಯ ಯೋಗದಿಂದಲೂ, ನಾಲ್ಕು ಬಗೆಯ ಕಷಾಯಗಳಿಂದಲೂ - ಹೀಗೆ ಒಟ್ಟು ೩೨ ವಿಧಗಳಿಂದ ಆಸ್ರವವು ಶೋಭಿಸುತ್ತಿದೆ.

**ಬಂಧ**

ಹರಿದುಬಂದ ಕರ್ಮವು ಜೀವಕ್ಕೆ ಅಂಟಿಕೊಳ್ಳುವುದಕ್ಕೆ ಬಂಧ ಎಂದು ಹೆಸರು. ಭಾವಬಂಧ, ದ್ರವ್ಯಬಂಧ ಎಂದು ಅದು ಎರಡು ವಿಧ. ಕರ್ಮವು ಜೀವವನ್ನು ಬಂಧಿಸಲು ಸಾಧ್ಯವಾಗುವಂತಿರುವ ಜೀವದ ಸ್ಥಿತಿಗೆ ಭಾವಬಂಧವೆಂದೂ, ಕರ್ಮಪುದ್ಗಲವು ಜೀವದಲ್ಲೆಲ್ಲಾ ವ್ಯಾಪಿಸಿಕೊಂಡು ಅದಕ್ಕೆ ಅಂಟಿಕೊಳ್ಳುವುದಕ್ಕೆ ದ್ರವ್ಯಬಂಧವೆಂದೂ ಹೇಳುತ್ತಾರೆ.

ಕರ್ಮದ ಪ್ರಕೃತಿ, ಸ್ಥಿತಿ, ಅನುಭಾಗ, ಪ್ರದೇಶಗಳನ್ನು ಅನುಸರಿಸಿ ಬಂದ ನಾಲ್ಕು ಬಗೆ. ೧) ಹಿತಾಹಿತ ಕರ್ಮಗಳ ಸ್ವಭಾವವು ಪ್ರಕೃತಿ. ೨) ಕೆಲವು ಕರ್ಮಗಳು ಬೇಗ ಸವೆಯುವುವು ; ಮತ್ತೆ ಕೆಲವು ಬಹುಕಾಲ ನಿಲ್ಲುವುವು. ಹೀಗೆ ಕರ್ಮಗಳು ಜೀವಕ್ಕೆ ಅಂಟಿಕೊಂಡಿರಬಹುದಾದ ಕಾಲಾವಧಿಯೇ ಸ್ಥಿತಿ. ೩) ಪರಿಣಾಮದಲ್ಲಿ ಕೆಲವು ಕರ್ಮಗಳು ಬಹಳ ಪ್ರಬಲ. ಕೆಲವು ಮೃದು. ಕರ್ಮದ ಈ ಬಗೆಯ ಬಲಾಬಲಗಳಿಗೆ ಅನುಭಾಗ ಎಂದು ಸಂಕೇತ. ೪) ಜೀವಕ್ಕೆ ಅಂಟಿಕೊಳ್ಳುವ ಕರ್ಮಪುದ್ಗಲದ ಸಂಖ್ಯೆಯನ್ನು ಅನುಸರಿಸಿ ತೆಳುವಾಗಿಯೋ ದಟ್ಟವಾಗಿಯೋ ಹರಡುತ್ತದೆ ಅದೇ ಪ್ರದೇಶ.

**ಸಂವರ**

ಹೊಸ ಕರ್ಮಗಳನ್ನು ಹರಿದುಬರದಂತೆ ತಡೆಯುವುದೇ ಸಂವರ. ಇದು ಭಾವ ಸಂವರ, ದ್ರವ್ಯಸಂವರ ಎಂದು ಎರಡು ಬಗೆ. ಆಸ್ರವವನ್ನು ತಡೆಯಲು ಸಹಾಯಕವಾದ ಮನಸ್ಸಿನ ಪರಿಣಾಮಕ್ಕೆ ಭಾವಸಂವರ ಎಂದೂ, ಕರ್ಮದ ಅಂತಃಸ್ರವವನ್ನು ನಿಲ್ಲಿಸುವ ಕಾರ್ಯಕ್ಕೆ ದ್ರವ್ಯಸಂವರವೆಂದೂ ಹೆಸರು.

ಕರ್ಮಗಳು ಹರಿದುಬರಲು ಯೋಗಕಷಾಯಗಳು ಕಾರಣಗಳು. ಅವನ್ನು ತಡೆಗಟ್ಟುವುದರಿಂದ ಕರ್ಮಗಳ ಹರಿತವನ್ನು ನಿಲ್ಲಿಸಬಹುದು. ಐದು ವ್ರತಗಳು, ಐದು ಸಮಿತಿಗಳು, ಮೂರು ಗುಪ್ತಿಗಳು, ಹತ್ತು ಧರ್ಮಗಳು, ಹನ್ನೆರಡು ಅನುಪ್ರೇಕ್ಷೆಗಳು, ಇಪ್ಪತ್ತೆರಡು ಪರೀಷಹಜಯಗಳು, ಹಲವು ಬಗೆಯ ಚಾರಿತ್ರಗಳು - ಇವುಗಳಿಂದ ಸಂವರವನ್ನು ಸಾಧಿಸಬಹುದು.

**ನಿರ್ಜರೆ**

ಹೊಸ ಕರ್ಮಗಳು ಹರಿದುಬರುವುದು ತಪ್ಪಿಹೋದರೂ ಈಗಾಗಲೇ ಅಂಟಿಕೊಂಡಿರುವ ಕರ್ಮಗಳು ಉಳಿದೇ ಇರುವುವಷ್ಟೆ. ಅವು ಜೀರ್ಣವಾಗಿ ಕಳಚಿಬೀಳುವುದಕ್ಕೆ ನಿರ್ಜರೆಯೆಂದು ಹೆಸರು.

ಕರ್ಮಗಳು ಕಾಲ ಬಂದಾಗ ಪರಿಪಕ್ವವಾಗಿ ಅನುಭೂತವಾದೊಡನೆ ತಮ್ಮಷ್ಟಕ್ಕೆ

ತಾವೆ ಕಳಚಿಬೀಳುತ್ತವೆ. ಹೀಗೆ ಸಹಜವಾಗಿ ಕರ್ಮಕ್ಷಯವಾಗುವುದಕ್ಕೆ ಸವಿಪಾಕ ನಿರ್ಜರೆಯೆಂದು ಹೆಸರು. ಕರ್ಮಗಳು ಪಕ್ವವಾಗಲು ಬಹುಕಾಲ ಹಿಡಿಯುವುವು. ಈ ಅಪಕ್ವ ಕರ್ಮಗಳನ್ನು ತಪಸ್ಸಿನಿಂದ ಪಕ್ವವಾಗುವಂತೆ ಮಾಡಬಹುದು. ಮಾವಿನಕಾಯಿ ಮೊದಲಾದುವನ್ನು ಅಡಹಾಕಿ ಹಣ್ಣಾಗುವಂತೆ ಮಾಡುವ ಹಾಗೆ ಪಕ್ವಗೊಳಿಸಿ ಅನುಭವಿಸುವಂತೆಸಗಿ ಕರ್ಮಕ್ಷಯಗೊಳಿಸುವುದಕ್ಕೆ ಅವಿಪಾಕ ನಿರ್ಜರೆಯೆಂದು ಹೆಸರು. ಶುಕ್ಲಧ್ಯಾನವು ಸಾಕ್ಷಾತ್ತಾಗಿ ಮುಕ್ತಿಗೆ ಸಾಧನ.

**ರತ್ನತ್ರಯ**

ಸಾಧಕನು ಸಿದ್ಧನಾಗಲು, ಮುಕ್ತನಾಗಲು ತನ್ನ ಆತ್ಮನನ್ನು ಉಜ್ವಲಗೊಳಿಸಿ ಕೊಳ್ಳಬೇಕಾಗುತ್ತದೆ. ಇದಕ್ಕೆ ಸಾಧನ ತತ್ವಜ್ಞಾನ. ಈ ಜ್ಞಾನವು ಪುದ್ಗಲರೂಪಿಯಾದ ಕರ್ಮದೇಹವನ್ನೂ,ಅನಂತ ಶಕ್ತಿನಿಧಿಯಾದ ಆತ್ಮನನ್ನೂ ವಿಶ್ಲೇಷಿಸಿ ನಿಜವಾದದ್ದನ್ನು ನಂಬಲು ಸಹಾಯಕವಾಗಿ ನಿಲ್ಲುತ್ತದೆ. ಇಂಥ ನಂಬುಗೆಯನ್ನು ಸಮ್ಯಗ್ದರ್ಶನವೆನ್ನುವರು. ಈ ಬಗೆಯ ಆತ್ಮಶಕ್ತಿಯ ಮೇಲೆ ಸಂಪೂರ್ಣ ಶ್ರದ್ಧೆಯವನ ಜ್ಞಾನಕ್ಕೇನೇ ಸಮ್ಯಗ್‌ಜ್ಞಾನವೆನ್ನುವರು. ಈ ಜ್ಞಾನದಿಂದ ಆತ್ಮಕಲ್ಯಾಣಕ್ಕಾಗಿ ಉಂಟಾಗುವ ಪ್ರವೃತ್ತಿಗಳಿಗೆ ಸಮ್ಯಕ್ಚಾರಿತ್ರವೆಂದು ಹೇಳುತ್ತಾರೆ. ಇದನ್ನೇ ತತ್ವಾರ್ಥಸೂತ್ರವು "ಸಮ್ಯಗ್ದರ್ಶನಜ್ಞಾನಚಾರಿತ್ರಾಣಿ ಮೋಕ್ಷಮಾರ್ಗಃ" ಎಂದಿದೆ.

**ಸಮ್ಯಗ್ದರ್ಶನ**

ಆಪ್ತರೆನಿಸಿದ ತೀರ್ಥಂಕರರಲ್ಲಿಯೂ, ಅವರಿಂದುಕ್ತವಾದ ಆಗಮಗಳಲ್ಲಿಯೂ ಗುರುಗಳಲ್ಲಿಯೂ ಸಂಪೂರ್ಣವಾದ ನಂಬುಗೆಯನ್ನಿಡುವುದು, ಜೀವ ಮೊದಲಾದ ನವತತ್ವಗಳಲ್ಲಿ ಶ್ರದ್ಧಾಳುಗಳಾಗಿರುವುದು, ಈ ಬಗೆಯ ನಂಬುಗೆಯೇ ಸಮ್ಯಗ್‌ದರ್ಶನ. ಇದಕ್ಕೆ ಎಂಟು ಅವಯವಗಳಿವೆ.

೧. ಜಿನಮತದ ಮೇಲೆ ನಂಬುಗೆ. ೨. ಭೋಗಗಳಲ್ಲಿ ಅನಾಸಕ್ತಿ. ೩. ದೇಹವನ್ನು ಪ್ರೀತಿಸದೆಯೂ ದ್ವೇಷಿಸದೆಯೂ ಇರುವುದು. ೪. ಮುಬ್ಬಗೆಯಾದ ಮೂಢತೆಗಳನ್ನು ದೂರೀಕರಿಸುವುದು. ೫. ಪರಿಪೂರ್ಣ ಶ್ರದ್ಧೆಯಿಲ್ಲದವರಿಗೆ ಪೂರ್ಣಶ್ರದ್ಧೆಯನ್ನುಂಟು ಮಾಡಿಸುವುದು. ೬. ಸಮ್ಯಗ್ದರ್ಶನದಲ್ಲಿ ಜೀವಿಗಳನ್ನು ನೆಲೆಗೊಳಿಸುವುದು. ೭. ಸಾಧುಗಳಲ್ಲಿ ವಾತ್ಸಲ್ಯಭಾವವನ್ನಿಡುವುದು. ೮. ಜೈನಧರ್ಮದ ಪ್ರಭಾವವನ್ನು ಬೆಳಗುವುದು. ೯. ತನ್ನ ಕುಲ, ಜಾತಿ, ಬಲ, ಸೌಂದರ್ಯ, ಧನ, ಆಜ್ಞೆ, ತಪಸ್ಸುಗಳ ಮೇಲೆ ಅಹಂಕಾರಪಡದಿರುವುದು. ೧೦. ಶಾಂತಿಯಿಂದಿರುವುದು, ಭೂತದಯೆ, ಧರ್ಮಾನುರಾಗ ಮುಂತಾದುವು ಸಮ್ಯಗ್ದರ್ಶನದ ಲಕ್ಷಣಗಳು.

**ಮೂಢತ್ರಯ**

೧. ತನಗೆ ಒಳ್ಳೆಯದಾಗಲೆಂದು ಮಿಥ್ಯಾದೇವತೆಗಳನ್ನು ಪೂಜಿಸುವವನು

ದೇವತಾಮೂಢ. ೨. ಗಂಗಾಸ್ನಾನಾದಿಗಳಿಂದ ಪಾಪ ಪರಿಹಾರವಾಗುತ್ತದೆಂದು ಮಿಥ್ಯಾಕ್ಷೇತ್ರಗಳ ಮೇಲೆ ನಂಬುಗೆಯಿಡುವವನು ಲೋಕಮೂಢ ೩. ಮಿಥ್ಯಾಗುರುಗಳನ್ನು ಪೂಜಿಸುವವನು ಪಾಷಂಡಿಮೂಢ.

**ಸಮ್ಯಗ್ಜ್ಞಾನ**

ಇದು ಐದು ವಿಧ : ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃಪರ್ಯಾಯ ಜ್ಞಾನ, ಕೇವಲಜ್ಞಾನ ಎಂದು.

ಇಂದ್ರಿಯಗಳ ಅಥವಾ ಮನಸ್ಸಿನ ಮೂಲಕ ಪಡೆಯುವ ಜ್ಞಾನವು ಮತಿಜ್ಞಾನ. ಓದಿ, ಕೇಳಿ ತಿಳಿದ ಜ್ಞಾನಕ್ಕೆ ಶ್ರುತಜ್ಞಾನ. ಮತಿಜ್ಞಾನದ ಆಧಾರದ ಮೇಲೆ, ಆ ಮತಿಜ್ಞಾನಕ್ಕೆ ನೇರವಾಗಿ ವಿಷಯವಾಗಿರದ ಬೇರೆ ಬೇರೆ ವಸ್ತುಗಳ ಸಂಗತಿಯನ್ನು ತಿಳಿಸಿಕೊಡುವುದು ಶ್ರುತಜ್ಞಾನ. ಇಂದ್ರಿಯಗಳ ನೆರವಿಲ್ಲದೆಯೇ ಆತ್ಮಶಕ್ತಿಯಿಂದ ಆಕಾರರೂಪಗಳುಳ್ಳ ವಸ್ತುಗಳ ಜ್ಞಾನ ಮಾಡಿಕೊಡುವುದು ಅವಧಿಜ್ಞಾನ. ಅದರಂತೆಯೆ ಅನ್ಯರ ಮನಸ್ಸನ್ನು ಇಂದ್ರಿಯಗಳ ನೆರವಿಲ್ಲದೆಯೆ ತಿಳಿಯುವುದು ಮನಃಪರ್ಯಾಯಜ್ಞಾನ. ಲೋಕಾಲೋಕ ತ್ರಿಲೋಕ - ಇವುಗಳಲ್ಲಿನ ಸಮಸ್ತ ವಸ್ತುಗಳ ಸಮಗ್ರ ಜ್ಞಾನವಾಗುವುದು ಕೇವಲಜ್ಞಾನದಿಂದ.

**ಸಮ್ಯಕ್ಚಾರಿತ್ರ**

ಸಮ್ಯಗ್ದರ್ಶನದಿಂದ ಕಂಡು ಸಮ್ಯಕ್‌ಜ್ಞಾನದಿಂದ ತಿಳಿದದ್ದನ್ನು ಆಚರಣೆಗೆ ತರುವುದು, ತನಗೆ ದೊರೆತ ಜ್ಞಾನಕ್ಕೆ ತಕ್ಕಂತೆ ನಡೆದುಕೊಳ್ಳುವುದು ಸಮ್ಯಕ್ಚಾರಿತ್ರ. ಇದೇ ಸದಾಚಾರ. ತಿಳಿವು ನಡತೆಗಳಲ್ಲಿ ಅಶುಭವಾದುದನ್ನು ತೊರೆದು ಶುಭವಾದದ್ದನ್ನು ಪರಿಗ್ರಹಿಸುವುದು, ವ್ರತ-ಸಮಿತಿ-ಗುಪ್ತಿಗಳನ್ನು ಆಚರಣೆಯಲ್ಲಿಟ್ಟುಕೊಳ್ಳುವುದು,ಇದು ವ್ಯಾವಹಾರಿಕವಾದ ಸಮ್ಯಕ್ಚಾರಿತ್ರ. ಆದರೆ ಸಂಸಾರಬೀಜವಾದುದನ್ನು ಸಂಪೂರ್ಣ ನಾಶಪಡಿಸಲಿಕ್ಕಾಗಿ ಬಾಹ್ಯಾಭ್ಯಂತರ ಕ್ರಿಯೆಗಳನ್ನೆಲ್ಲ ತಡೆಯುವುದು ಜಿನೋಕ್ತಪರಮೋತ್ತಮ ವಾದ ಸಮ್ಯಕ್ಚಾರಿತ್ರ.

**ಲೋಕಾಕಾರ**

ಲೋಕವು ಆಕಾಶದ ನಡುವೆಯಿದೆ. ಎಲ್ಲ ಜೀವಾಜೀವಗಳ ಪರಿವರ್ತನೆಗಳಿಗೆ ಇದು ಸ್ಥಾನ.ಲೋಕಕ್ಕೆ ಆದಿಯಾಗಲೀ ಅಂತ್ಯವಾಗಲೀ ಇಲ್ಲ. ಇದು ಯಾರಿಂದಲೂ ಸೃಷ್ಟವಾಗಿಲ್ಲ.

ಲೋಕದ ಆಕಾರವು ಕಿಸುಗಾಲು ಹಾಕಿಕೊಂಡು ಸೊಂಟದ ಮೇಲೆ ಕೈಯಿಟ್ಟು ನಿಂತಿರುವ ಮನುಷ್ಯನನ್ನು ಹೋಲುತ್ತದೆ. ಈ ಲೋಕದ ಕೆಳಭಾಗವು ವೇತ್ರಾಸನ (ಬೆತ್ತದ ಪೀಠ)ದಂತೆಯೂ ಮಧ್ಯಭಾಗವು ಝಲ್ಲರಿಯಂತೆಯೂ ಮೇಲ್ಭಾಗವು ಮೃದಂಗದಂತೆಯೂ ಪರಿಶೋಭಿಸುತ್ತಿವೆ. (ಮುಂದಣ ನಕ್ಷೆಯನ್ನು ಗಮನಿಸಿ)

ಲೋಕವು ಪೂರ್ವಪಶ್ಚಿಮದಲ್ಲಿ ೭ ರಜ್ಜುವುಳ್ಳುದಾಗಿಯೂ, ದಕ್ಷಿಣೋತ್ತರದಲ್ಲಿ

೭ ರಜ್ಜುವುಳ್ಳುದಾಗಿಯೂ, ೧೪ ರಷ್ಟು ಎತ್ತರವುಳ್ಳುದಾಗಿಯೂ ಕಂಗೊಳಿಸುತ್ತಿದೆ. ಇದರ ಒಟ್ಟು ಪ್ರಮಾಣ ೩೪೩ ಘನ ರಜ್ಜುಗಳು.

## ಲೋಕಾಕಾರ ಸಿದ್ಧಶಿಲೆ




ಲೋಕವು ಕೆಳಗಿನಿಂದ ಕ್ರಮಕ್ರಮವಾಗಿ ಕಿರಿದಾಗುತ್ತ ೭ ರಜ್ಜುಗಳಷ್ಟು ಎತ್ತರದಲ್ಲಿ ಒಂದೇ ಒಂದು ರಜ್ಜು ಅಗಲವುಳ್ಳುದಾಗಿದೆ. ಅನಂತರ ಹೆಚ್ಚುತ್ತಾ ಹೆಚ್ಚುತ್ತಾ ಮುಂದಿನ ಮೂರೂವರೆ ರಜ್ಜುಗಳಷ್ಟು ಎತ್ತರದಲ್ಲಿ ೫ ರಷ್ಟು ಅಗಲವಾಗುತ್ತದೆ. ಅಲ್ಲಿಂದ ಮುಂದೆ

ಮತ್ತೆ ಕಿರಿದಾಗುತ್ತಾ ನೆತ್ತಿಯ ಬಳಿ ಒಂದೇ ರಜ್ಜು ಅಗಲವಾಗುತ್ತದೆ. ಮಧ್ಯಲೋಕವು ಒಂದೇ ಅಗಲವುಳ್ಳ ಸೊಂಟಭಾಗದಲ್ಲಿದೆ. ಅದರ ಕೆಳಗಿದೆ ಅಧೋಲೋಕ. ಮೇಲಿನದು ಊರ್ಧ್ವಲೋಕ. ಈ ಮೂರು ಲೋಕಗಳನ್ನೂ ವ್ಯಾಪಿಸಿಕೊಂಡು ಲೋಕಾಕಾಶದ ಮಧ್ಯಭಾಗದಲ್ಲಿ ಒಂದು ರಜ್ಜು ಅಗಲ, ಒಂದು ರಜ್ಜು ಉದ್ದ, ೧೪ ರಜ್ಜು ಎತ್ತರವುಳ್ಳ ತ್ರಸನಾಡಿಯಿದೆ. ತ್ರಸಜೀವಿಗಳು ಇದರ ಹೊರಗೆ ಜೀವಿಸಲಾರವು.

ಲೋಕದ ಹೊರವಲಯಗಳಲ್ಲಿ ಅದನ್ನು ಸುತ್ತಿಕೊಂಡು ಘನೋದಧಿ, ಘನವಾತವಲಯ, ತನುವಾತವಲಯ ಎಂಬ ಮೂರು ಗಾಳಿಯ ಆವರಣಗಳಿವೆ.

## ಅಧೋಲೋಕ

ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಪ್ರಭೆ, ಮಹಾತಮಃಪ್ರಭೆಯೆಂಬ ೭ ಏಳು ನರಕಗಳಿವೆ. ಇವುಗಳಲ್ಲಿ ೨ ೧/೨ ರಷ್ಟು ಭೂಭಾಗವು ಶೈತ್ಯವುಳ್ಳುದಾಗಿಯೂ ೪ ೧/೨ ಭೂಭಾಗವು ಅತ್ಯುಷ್ಣವಾಗಿಯೂ ಇರುವುವು. ಇವುಗಳಲ್ಲಿ ೪೯ ಪಟಲಗಳೂ ಇಂದ್ರಕಗಳೂ ಶ್ರೇಡೀಬದ್ಧಕಗಳೂ ನೆಲಸಿವೆ. ಈ ನರಕಗಳ ನಡುವೆ ನಿಗೋದವೆಂಬ ನರಕವು ಅತಿದುಃಖಪ್ರದವಾದುದು. ಜೀವಗಳು ತಮ್ಮ ಪಾಪದ ಫಲಗಳನ್ನು ಇಲ್ಲಿ ಅನುಭವಿಸುತ್ತವೆ.

ನರಕಭೂಮಿಗೂ ನರಲೋಕಕ್ಕೂ ನಡುವೆ ನಾಗಲೋಕದಲ್ಲಿ ಭವನವಾಸಿಗಳೂ ಅರ್ಹತ್ಪರಮೇಶ್ವರರ ಆಲಯಗಳೂ ಇವೆ.

## ಮಧ್ಯಮಲೋಕ

ನಮ್ಮ ಅಸ್ತಿತ್ವಕ್ಕೆ ಆಧಾರವಾದ ಈ ಲೋಕವೇ ಭೂಲೋಕ. ಇದು ಝಲ್ಲರಿಯಂತೆ ಗುಂಡಾಗಿದೆ (ವರ್ತುಲ). ಈ ಲೋಕದ ನಡುವೆ ಮಂದರಪರ್ವತವಿದೆ. ಇದಕ್ಕೆ ಮೇರುವೆಂದು ನಾಮಾಂತರ. ಜಂಬೂದ್ವೀಪವು ಇದನ್ನು ಸುತ್ತುವರಿದಿದೆ. ಜಂಬೂದ್ವೀಪವನ್ನು ಲವಣಸಮುದ್ರವೂ, ಲವಣಸಮುದ್ರವನ್ನು ಧಾತಕೀದ್ವೀಪವೂ ಅದನ್ನು ಕಾಳೋದಧಿಯೂ ಸುತ್ತುವರಿದಿವೆ. ಅದನ್ನು ಸುತ್ತುವರಿದು ಪುಷ್ಕರದ್ವೀಪವೂ ಅದನ್ನು ಬಳಸಿಕೊಂಡು ಪುಷ್ಕರವರ ಸಮುದ್ರವೂ ಇವೆ. ಹೀಗೆ ಹಲವಾರು ದ್ವೀಪಗಳನ್ನು ಒಂದಕ್ಕೊಂದು ಬಳಸಿಕೊಂಡು ವರ್ತುಲಾಕಾರದಲ್ಲಿ ನೆಲಸಿಕೊಂಡಿವೆ. ಇವುಗಳಲ್ಲಿ ಮೊದಲೆಂಟು ದ್ವೀಪಗಳು- ಜಂಬೂದ್ವೀಪ, ಲವಣಸಮುದ್ರ, ಧಾತಕೀದ್ವೀಪ, ಕಾಳೋದಧಿ, ಪುಷ್ಕರವರದ್ವೀಪ - ಪುಷ್ಕರವರಸಮುದ್ರ, ವಾರುಣೀವರದ್ವೀಪ - ವಾರುಣೀವರಸಮುದ್ರ, ಕ್ಷೀರವರದ್ವೀಪ- ಕ್ಷೀರವರಸಮುದ್ರ, ಘೃತವರದ್ವೀಪ - ಘೃತವರಸಮುದ್ರ, ಇಕ್ಷುವರದ್ವೀಪ - ಇಕ್ಷುವರಸಮುದ್ರ, ನಂದೀವರದ್ವೀಪ - ನಂದೀವರಸಮುದ್ರಗಳು ಒಂದಕ್ಕಿಂತ ಒಂದು ಎರಡರಷ್ಟು ವಿಸ್ತಾರವಾದುವು. ಎಲ್ಲಕ್ಕಿಂತ ಕೊನೆಯದು ಸಮುದ್ರ ಸ್ವಯಂ ಭೂಮರಣ.

ಪುಷ್ಕರವರದ್ವೀಪದ ಮಧ್ಯದಲ್ಲಿ ಮಾನುಷೋತ್ತರ ಪರ್ವತವಿದೆ. ಇದರ ಸುತ್ತಲೂ ಒಂದಕ್ಕಿಂತ ಮತ್ತೊಂದು ಎರಡರಷ್ಟು ವಿಸ್ತಾರವಿರುವ ಅನೇಕ ದ್ವೀಪ ಸಮುದ್ರಗಳು ಒಂದು ರಜ್ಜುದೂರದವರೆಗೆ ಹಬ್ಬಿವೆ. ಈ ದ್ವೀಪಗಳಲ್ಲಿ ಮಾತ್ರ ಮನುಷ್ಯರು ವಾಸ ಮಾಡುತ್ತಾರೆ. ಮಾನುಷೋತ್ತರದ ಹೊರಗೆ ತಿರ್ಯಕ್‌ಪ್ರಾಣಿಗಳು ಮಾತ್ರ ವಾಸಿಸುತ್ತವೆ. ಅದರ ವಿಸ್ತಾರವು ೪೫ ಯೋಜನ.

**ಜಂಬೂದ್ವೀಪ**

ಈ ದ್ವೀಪಗಳ ಮಧ್ಯಭಾಗದಲ್ಲಿ ಜಂಬೂದ್ವೀಪವು ಧ್ರುವತಾರೆಯಂತೆ ಮಿರುಗುತ್ತಿದೆ. ಪೂರ್ವ ಪಶ್ಚಿಮವಾಗಿ ಹಬ್ಬಿಕೊಂಡಿರುವ ಕುಲಪರ್ವತಗಳು ಈ ದ್ವೀಪವನ್ನು ಏಳು ದ್ವೀಪಗಳನ್ನಾಗಿ ಇಲ್ಲವೇ ವರ್ಷಗಳನ್ನಾಗಿ ವಿಂಗಡಿಸಿವೆ. ಇವು ದಕ್ಷಿಣದಿಂದ ಉತ್ತರಕ್ಕೆ ಹಿಮವಾನ್, ಮಹಾಹಿಮವಾನ್, ನಿಷದ, ನೀಲ, ರುಕ್ಮಿ ಮತ್ತು ಶಿಖರಿ ಎಂದು. ಇವುಗಳಿಂದಾದ ವರ್ಷಗಳು (ಕ್ಷೇತ್ರ) ಕ್ರಮವಾಗಿ ಭರತ, ಹೈಮವತ್, ಹರಿ, ವಿದೇಹ, ರಮ್ಯಕ, ಹೈರಣ್ಯವತ ಮತ್ತು ಐರಾವತ. ವಿದೇಹಕ್ಷೇತ್ರಕ್ಕೆ ನಡುವೆ ಮಂದರಪರ್ವತವು ವಿರಾಜಿಸುತ್ತಿದೆ.

**ಊರ್ಧ್ವಲೋಕ**

ಭೂಲೋಕದ ಮೇಲೆ ೭೯೦ ಮಹಾಯೋಜನದ ದೂರದಲ್ಲಿ ತಾರಾ ಮಂಡಲವಿದೆ. ಇದಕ್ಕೆ ಜ್ಯೋತಿರ್ಲೋಕವೆಂದೂ ಹೆಸರುಂಟು. ಇದು ಮೊದಲಿನಿಂದ ತುದಿಯವರೆಗೆ ೧೧೦ ಯೋಜನ ದಪ್ಪವಾಗಿಯೂ ೧ ರಜ್ಜು ಸುತ್ತಳತೆಯುಳ್ಳದ್ದಾಗಿಯೂ ಇದೆ. ಇಲ್ಲಿ ದೇವತೆಗಳು ನೆಲಸಿದ್ದಾರೆ.

ತಾರಾಮಂಡಲವನ್ನು ಮೀರಿ ನಿಂತ ಮೇರುವಿನ ಮೇಲೆ ದಕ್ಷಿಣೋತ್ತರವಾಗಿ ೧೬ ಸ್ವರ್ಗಗಳು ಎರಡು ಸಾಲಾಗಿ ನಿಂತಿವೆ. ಅವುಗಳ ತುದಿಯಲ್ಲಿ ಒಂದೇ ಸಾಲಿನಲ್ಲಿ ಮೂರು ಮೂರಾಗಿ ಸೇರಿರುವ ೯ ಗ್ರೈವೇಯಕ ವಿಮಾನಗಳೆಂಬ ಇಂದ್ರನ ಚಿತ್ರಕ ವಿಮಾನಗಳಿವೆ. ಗ್ರೈವೇಯಕದ ಮುಂದೆ ನವಾಣುದಿಕವೆಂಬುದಿದೆ. ಅದರ ಎಂಟು ದಿಕ್ಕುಗಳಿಗೆ ಎಂಟು ವಿಮಾನಗಳೂ ನಡುವೆ ಒಂದು ವಿಮಾನವೂ ಇವೆ. ಅದರ ಮೇಲೆ ಪಂಚಾಣುತ್ತರೆಯಿದೆ. ಅದಕ್ಕೆ ಐದು ವಿಮಾನಗಳಿವೆ. ನಾಲ್ಕು ದಿಕ್ಕುಗಳಲ್ಲಿಯೂ ವಿಜಯ, ವೈಜಯಂತ, ಜಯಂತ ಮತ್ತು ಅಪರಾಜಿತ ಎಂಬ ನಾಲ್ಕು ವಿಮಾನಗಳುಂಟು. ಮಧ್ಯದಲ್ಲಿ ಸರ್ವೋತ್ಕೃಷ್ಟವಾದ ಸರ್ವಾರ್ಥಸಿದ್ಧಿಯೆಂಬ ವಿಮಾನವಿದೆ. ಅಲ್ಲಿಂದ ಮೇಲೆ ಸ್ವರ್ಗಗಳಿಲ್ಲ.

ಸ್ವರ್ಗಗಳು-ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಆರಣ, ಅಚ್ಯುತ.

ಈ ಹದಿನಾರು ಕಲ್ಪಗಳಲ್ಲಿಯೂ ಸ್ತ್ರೀಯರಿರುವರು. ಇವುಗಳಲ್ಲಿ ಕೆಳಗಿನಿಂದ ಮೇಲುಮೇಲಕ್ಕೆ ಸುಖ ಆಯುಷ್ಯಗಳು ಹೆಚ್ಚುತ್ತ ಹೋಗುತ್ತವೆ.

ಸರ್ವಾರ್ಥಸಿದ್ಧಿಯಿಂದ ಮೇಲೆ ಈಷತ್ಪ್ರಾಗ್ಭಾರವೆಂಬ ಸಿದ್ಧಕ್ಷೇತ್ರವಿದೆ. ಅಲ್ಲಿ ಶುದ್ಧ ಸ್ಫಟಿಕಮಯವಾದ ಸಿದ್ಧಶಿಲೆಯಿದೆ. ಇದು ಬಿಚ್ಚಿದ ಬಿಳಿಯ ಕೊಡೆಯ ಆಕೃತಿಯಲ್ಲಿದೆ. ಘನೋದಧಿ, ಘನವಾತ, ತನುವಾತಗಳೆಂಬ ಮೂರು ವಾಯುಗಳು ಮಾತ್ರವಿವೆ. ತನುವಾತವಲಯದಲ್ಲಿ ಸಿದ್ಧಪರಮೇಷ್ಠಿಗಳು ನಿಶ್ಚಲರಾಗಿ ವಾಸಿಸುತ್ತಾರೆ. ಇವರ ಎತ್ತರದಳತೆಯು ಹೆಚ್ಚುಕಡಿಮೆಯಿದ್ದರೂ ತಲೆಗಳೆಲ್ಲ ಸಮಾನ ಎತ್ತರವಾಗಿ ಕಾಣುತ್ತವೆ. ಅವರು ಸಂಪಾದಿಸಿದ ಜ್ಞಾನ, ಸುಖ, ಶಕ್ತಿಗಳೆಲ್ಲ ಸಮಾನವಾಗಿರುತ್ತವೆ. ಇವರಿಗೆ ಶರೀರವೆಂಬುದಿಲ್ಲ, ವರ್ಣರಸಗ್ರಂಥಗಳಿಲ್ಲ. ಇವರೆಲ್ಲ ಜ್ಞಾನಮೂರ್ತಿಗಳು.

## ಜೈನಪುರಾಣಗಳ ಇತಿವೃತ್ತ

ಅರವತ್ತುಮೂರು ಶಲಾಕಾಪುರುಷರ ಚರಿತ್ರೆಯಲ್ಲದೆಯೆ, ಮುನಿಗಳ ಮಹಿಮೆಯೂ, ಷಡ್ದ್ರವ್ಯಗಳೂ, ನವಪದಾರ್ಥಗಳೂ, ಲೋಕಸ್ವರೂಪವೂ, ಕಾಲದ ಪರಿವರ್ತನೆಯೂ, ಸೃಷ್ಟಿಸಂಹಾರಗಳೂ, ಚತುರ್ಗತಿಗಳೂ, ಮೋಕ್ಷಮಾರ್ಗವೂ, ಅವುಗಳಿಂದೊದಗುವ ಫಲವೂ ವಿಪುಲವಾಗಿ ಜೈನಪುರಾಣಗಳಲ್ಲಿ ಚರ್ಚಿತವಾಗಿವೆ. ಲೋಕಾಕಾರ ಕಥನ, ದೇಶನಿವೇಶೋಪದೇಶ, ನಗರಸಂಪರಿವರ್ತನ, ತಪೋದಾನ ವಿಧಾನ ನಿರೂಪ, ತತ್ಫಲಪ್ರಾಪ್ತಿ ಪ್ರಕಟನಗಳು ಜೈನಪುರಾಣದ ಎಂಟು ಅವಯವಗಳು.

ಜೀವನು ಅಜೀವದ ಸಂಬಂಧವನ್ನು ಪಡೆದು ಕರ್ಮಗತಿಯಿಂದ ಬದ್ಧನಾಗಿ ಚತುರ್ಗತಿ ರೂಪವಾದ ಸಂಸಾರದಲ್ಲಿ ದಿಕ್ಕೆಟ್ಟು ಓಡಾಡುತ್ತಾನೆ. ಕರ್ಮಬಂಧನವನ್ನು ಹೆಚ್ಚಿಸಿಕೊಳ್ಳುವುದಕ್ಕೂ, ಅದನ್ನು ಸಡಿಲಿಸಿ ಕಳಚಿಕೊಂಡು ಮುಕ್ತನಾಗುವುದಕ್ಕೂ ಜೀವನು ಸ್ವತಂತ್ರ. ಆದರೆ ಕಷಾಯಾದಿಗಳಿಂದ ಆಕೃಷ್ಟನಾದ ಜೀವನು ಅವುಗಳಿಂದ ಪರಾಙ್ಮುಖನಾಗುವುದು ತುಂಬ ಕಷ್ಟ. ಇಂದ್ರಿಯಸುಖಕ್ಕೆ ಬಲಿಬಿದ್ದು ಕರ್ಮಬಂಧನವನ್ನು ವೃದ್ಧಿಪಡಿಸಿಕೊಳ್ಳಲಿಕ್ಕೇ ಅವನಿಗೆ ಅತ್ಯಾಶೆ. ಕರ್ಮದ ಹೊರೆಯನ್ನು ಅತಿ ಹೊತ್ತಾಗ ಜೀವನು ಸಂಸಾರಬದ್ಧನಾಗಿ ಅಭವ್ಯನಾಗುವನು. ಇಂಥ ಜೀವನು ಪುಣ್ಯಕರ್ಮದ ಬಲದಿಂದ ಉತ್ತಮಜನ್ಮವನ್ನು ಪಡೆಯಬಲ್ಲನು. ಆಗ ಅವನು ದೇವತೆಯಾಗಿ ಹುಟ್ಟಿ ದೇವಲೋಕದ ಸುಖವನ್ನೂ ಅನುಭವಿಸಬಲ್ಲನು. ಆದರೆ ಸಮ್ಯಕ್ತ್ವ ಪಡೆದು ಮುಕ್ತಿಯನ್ನು ಹೊಂದಲು ಅರ್ಹನಾಗುವುದಿಲ್ಲ. ಆದರೆ ಅವನು ಮುಂದೆಂದಾದರೂ ಮುಕ್ತಿ ಹೊಂದಬಹುದಾದ ಯೋಗ್ಯತೆಯನ್ನು ಮಾತ್ರ ಕಳೆದುಕೊಳ್ಳನು. ಇಂಥ ಜೀವನು ಭವ್ಯ. ಇವನು ಪುಣ್ಯಪಾಪ ಫಲಗಳಿಂದಾಗಿ ದೇವ, ಮನುಷ್ಯ, ತಿರ್ಯಕ್ ಮತ್ತು ನಾರಕಗತಿಗಳಲ್ಲಿ ಸಂಚರಿಸುತ್ತಾ ಕ್ರಮಕ್ರಮವಾಗಿ ಪುಣ್ಯವನ್ನು ಹೆಚ್ಚಿಸಿಕೊಂಡು ದೇವ ಮನುಷ್ಯಜಾತಿಗಳಲ್ಲಿ ಹುಟ್ಟುವಂತೆ ಅರ್ಹತೆಯನ್ನು ಸಂಪಾದಿಸಿಕೊಳ್ಳುವನು. ಆಗ ಪುಣ್ಯಕರ್ಮಗಳ ಸಂಚಯದಿಂದ ಸದ್ಗತಿ ಪಡೆಯುವ ಆಶೆಯೊಂದು ಮೊಳೆಯುತ್ತದೆ. ತತ್ತ್ವಯುಕ್ತವಾದ ಕರ್ಮಗಳಿಂದಲೋ ಗುರೂಪದೇಶದಿಂದಲೋ ಅವನಿಗ ಸಮ್ಯಕ್ತ್ವಜ್ಞಾನವು ತಲೆ ಹಾಕುತ್ತದೆ. ಹೀಗೆ ಕಾಲವು ಲಭ್ಯವಾಗುವುದೇ ಕಾಲಲಬ್ಧಿ, ಸಮ್ಯಕ್ತ್ವವು ಬೇಗ ಬಂದರೆ ಆ ಜೀವನು ಆಸನ್ನಭವ್ಯ, ನಿಧಾನವಾಗಿ ಬರುವುದಕ್ಕೆ ತುಂಬಕಾಲ ಹಿಡಿದರೆ ಅವನು ದೂರಭವ್ಯ. ಹೀಗೆ ಜೀವನು

ಜಾಗ್ರತೆಯಾಗಿಯೋ ದೂರವಾಗಿಯೋ ಸಮ್ಯಕ್ತ್ವವನ್ನೆಟುಕಿಸಿಕೊಂಡ ಮೇಲೆ ಮುಕ್ತಿಮುಖನಾಗಿ ಸಂಚರಿಸುತ್ತಾ ತನ್ನನ್ನು ಸಂಸಾರಕ್ಕೊಯ್ಯುವ ಕಟ್ಟುಗಳೊಂದೊಂದನ್ನೂ ಕತ್ತರಿಸಿಕೊಂಡು ಬಿಡುಗಡೆಹೊಂದುತ್ತಾನೆ. ಸಿದ್ಧನಾಗಿ ಅನಂತಸುಖದಲ್ಲಿ ಲೀನನಾಗುತ್ತಾನೆ.

ಹೀಗೆ ಸಂಸಾರಸಾಗರದಲ್ಲಿ ಬಿದ್ದು ಒದ್ದಾಡುತ್ತಿರುವ ಜೀವನು ರತ್ನತ್ರಯವನ್ನು ಮರೆಹೊಕ್ಕು ಸಂಸಾರವನ್ನು ದಾಟಿ ಮುಕ್ತಿಗೆ ನಡೆದ ಹಲವು ಜನ್ಮಗಳ ನೀಳ್ಗತೆಯನ್ನು, ಜೀವನ ಕ್ರಮವಿಕಾಸವನ್ನು ವಿವರಿಸುವುದೇ ಜೈನಪುರಾಣಗಳ ತೀರ್ಥಂಕರ ಚರಿತ್ರೆಗಳ ಮುಖ್ಯಗುರಿ. ಜೀವವಿಕಾಸದ ಕೊನೆಯ ಹಂತವೇ ತೀರ್ಥಂಕರತ್ವ. ಇದನ್ನು ದಾಟಿ ನಡೆದೆಡೆಯಲ್ಲಿ ಪರಮಪದ.

**ಪಂಚಕಲ್ಯಾಣ**

ಕೊನೆಯ ಹಂತದ ಮೇಲೆ ಕಾಲೂರಿದ ಜೀವರ ಚರಿತ್ರೆಯು ಹೆಚ್ಚು ಕಡಿಮೆ ಒಂದೆ ರೀತಿಯದು. ತೀರ್ಥಂಕರರ ಚರಿತ್ರೆಗಳಲ್ಲಿ ವೈಯಕ್ತಿಕ ವ್ಯತ್ಯಾಸಗಳು ಅತಿವಿರಳ. ಅವುಗಳಲ್ಲಿ ಸುರಲೋಕಾವರಣೋತ್ಸವಂ, ಪರಿಕ್ರುತಂ ಜನ್ಮಾಭಿಷೇಕೋತ್ಸವಂ, ಪರಿನಿಷ್ಕ್ರಾಂತಿ ಮಹೋತ್ಸವಂ, ಪ್ರವಿಮಲಂ ಕೈವಲ್ಯಬೋಧೋತ್ಸವಂ, ಪರಿನಿರ್ವಾಣ ಮಹೋತ್ಸವಂ, ಜಿನಕಲ್ಯಾಣಮಯ್ದುಂ ಸವಿಸ್ತರದಿಂದಿರ್ಪುವು.

ಎಂದು ಕವಿ ರನ್ನನ್ನು ಹೇಳಿರುವಂತೆ ಪಂಚಕಲ್ಯಾಣಗಳ ವರ್ಣನೆಯಿರುವುದು ಅತ್ಯಾವಶ್ಯಕ, ತೀರ್ಥಂಕರರೆಲ್ಲರಿಗೂ ಸಮಾನವಾಗಿರುವ ಪಂಚಕಲ್ಯಾಣಗಳಲ್ಲಿ ಯಾವ ವಿಧವಾದ ತಾರತಮ್ಯವಿಲ್ಲ. ತೀರ್ಥಂಕರತ್ವವನ್ನಪ್ಪುವ ಆ ಆ ಜೀವನು ಪ್ರಾಕ್ತನ ಜನ್ಮಗಳಲ್ಲಿ ನಡೆಸಿದ ಸಿದ್ಧತೆಯನ್ನು ಪ್ರಕಾಶಪಡಿಸುವ ಭವಾವಳಿಯು ಮಾತ್ರ ಒಬ್ಬೊಬ್ಬರಿಗೆ ಒಂದೊಂದು ವಿಧ.

**ಭವಾವಳಿಯ ಗುರಿ**

ಜೈನಪುರಾಣಗಳಲ್ಲಿ ಜನ್ಮಾಂತರ ಕಥಾಪುಂಜಗಳು ಸಿಕ್ಕುಸಿಕ್ಕಾಗಿರುವ ಸಂಸಾರದ ಪ್ರತಿಬಿಂಬ. ಓದುವವರಿಗೆ ಜನನ ಮರಣಗಳ ಪರಿಭ್ರಮಣದಲ್ಲಿ ಬೇಸರ ಹುಟ್ಟಿಸಿ ಮುಕ್ತಿಯ ಕಡೆಗೆ ಗಮನ ಹರಿಯಿಸುವಂತಾಗಲೆಂಬುದೇ ಈ ಕಥಾಗಹನದ ಉದ್ದೇಶ. ಪುರಾಣಗಳು ಸಂಸಾರದಲ್ಲಿ ಜೀವಯೆತ್ತುವ ಹಲವಾರು ಜನ್ಮಗಳನ್ನೆಲ್ಲ ವಿವರಿಸಹೋಗದೆ ಆ ಜೀವಕ್ಕೆ ಕಾಲಲಬ್ಧಿಪ್ರಾಪ್ತವಾದ ಜನ್ಮದಿಂದ ಮಾತ್ರ ಅದರ ಚರಿತ್ರೆಯನ್ನು ನಿರೂಪಿಸುತ್ತಿದೆ.

**ಭವಾವಳಿಯ ಸ್ವರೂಪ**

ಒಂದು ಜೀವದ ಕಥೆಯಲ್ಲಿ ಅನೇಕ ಜೀವಗಳ ಕಥೆಯು ಹೆಣೆದುಕೊಂಡಿರುವುದುಂಟು. ರಾಗದ್ವೇಷಗಳು ಒಂದೇ ಜನ್ಮದಲ್ಲಿ ತೀರಿಹೋಗುವುದಿಲ್ಲ. ಅವು ಬೆನ್ನು ಹತ್ತಿಕೊಂಡು ಮುನ್ನುಗ್ಗುತ್ತಿರುತ್ತವೆ. ಈ ರಾಗದ ಮೋಹವು ಜೀವಗಳನ್ನು ಸಂಕೋಲೆಗಳಂತೆ ಬಂಧಿಸಿರುತ್ತವೆ. ಅದರ ಕಟ್ಟು ವಜ್ರಲೇಪದಂತೆ ಬಹುಬಿಗಿ,

ಮೋಹನಿಗಳವನ್ನು ಕತ್ತರಿಸಿಕೊಳ್ಳಲು ಜೀವಗಳು ಬಹಳವಾಗಿ ಹೆಣಗಾಡಬೇಕು. ಅನ್ಯೋನ್ಯ ಪ್ರೀತಿಯಿಂದ ಒಟ್ಟಿಗೆ ಸೇರಿಕೊಂಡು ಒಬ್ಬರಿಗೊಬ್ಬರು ನೆರವಾಗಿ ನಿಂತು ಶ್ರೇಯಸ್ಸನ್ನು ಸಾಧಿಸಿಕೊಂಡ ಹಲವು ಜೀವಗಳ ಕಥೆಗಳು ಆದಿಪುರಾಣದಲ್ಲಿ ತಲೆಹಾಕುತ್ತವೆ. ಹಿತಪರಿಣಾಮದಿಂದ ಕೂಡಿದ ಈ ಭವಾವಳಿಯ ಪ್ರತಿಯೊಂದು ಜೀವವೂ ಮುನ್ನಿನ ಭವಂ, ಈ ಭವಂ, ಈ ಭವಂ, ಮರುಭವಂ ಸಫಲಂ ಎಂದು ಹಿಗ್ಗಿ ಹೇಳಿಕೊಳ್ಳಲೂ ಬಹುದು. ಇದಕ್ಕೆ ದ್ವೇಷವು ಜನ್ಮದಿಂದ ಜನ್ಮಕ್ಕೆ ಹರಿದು ಹೆಚ್ಚುತ್ತಾ ಬಂದದ್ದನ್ನೂ, ಅಪೂರ್ವವೈರದಿಂದ ಒಂದು ಜೀವ ಮತ್ತೊಂದು ಜೀವಕ್ಕೆ ಕೇಡಿನ ಮೇಲೆ ಕೇಡು ಮಾಡುತ್ತಾ ಬಂದದ್ದನ್ನೂ, ಆ ಕೇಡಿಗೆ ಗುರಿಯಾದ ಜೀವ ಪುಟಕ್ಕಿಟ್ಟ ಚಿನ್ನದಂತೆ ತನ್ನ ಕಳೆಯನ್ನು ಕಳೆದುಕೊಂಡು ಬಹುಬೇಗ ಸದ್ಗತಿ ಪಡೆದದ್ದನ್ನೂ, ಅದನ್ನು ಕಂಡ ಕೇಡಿನ ಜೀವವೂ ಕಡೆಗೆ ಸನ್ಮಾರ್ಗಕ್ಕೆ ತಿರುಗಿದ್ದನ್ನೂ ಪಾರ್ಶ್ವನಾಥಪುರಾಣವು ಹೃದಯಂಗಮವಾಗಿ ಚಿತ್ರಿಸಿದೆ.

**ಆದಿಪುರಾಣ**

ರಾಷ್ಟ್ರಕೂಟದ ರಾಜನಾದ ಅಮೋಘವರ್ಷನ ಗುರುವೆನಿಸಿದ ಜಿನಸೇನಾಚಾರ್ಯರು ತತ್ಕಾಲದಲ್ಲಿ ಲಭ್ಯವಾಗಿದ್ದ ಜಿನಧರ್ಮಪ್ರಚಾರಕರ ವಿಷಯಗಳನ್ನೆಲ್ಲ ಸಂಗ್ರಹಿಸಿ ಮಹಾಪುರಾಣವನ್ನು ಸಂಸ್ಕೃತಭಾಷೆಯಲ್ಲಿ ವಿರಚಿಸಿದರು. ಪ್ರಪ್ರಥಮ ತೀರ್ಥಕರನೆಂದು ಹೆಸರಾಂತ ಋಷಭ ಮತ್ತು ಚಕ್ರವರ್ತಿ ಭರತರಿಗೆ ಸಂಬಂಧಿಸಿದ ಕಥೆಗಳನ್ನೆಲ್ಲ ಬರೆಯುವಷ್ಟರಲ್ಲಿಯೇ ೪೨ ವರ್ಷಗಳು ಸಂದು ಜಿನಸೇನಾಚಾರ್ಯರು ತೀರಿಕೊಂಡರು. ಉಳಿದ ಶಲಾಕಾಪುರುಷರ ಚರಿತ್ರೆಗಳನ್ನು ಅವರ ಶಿಷ್ಯರಾದ ಗುಣಭದ್ರಾಚಾರ್ಯರು ಬರೆದು ಆ ಗ್ರಂಥವನ್ನು ಪೂರ್ಣಗೊಳಿಸಿದರು. ಈ ಇಬ್ಬರು ಮಹಾಕವಿಗಳಿಂದ ವಿನಿರ್ಮಿತವಾದ ದೊಡ್ಡ ಗ್ರಂಥವೇ ಮಹಾಪುರಾಣ. ಇದೇ ಪಂಪನ ಆದಿಪುರಾಣಕ್ಕೆ ಮೂಲ.

ಆದಿಪುರಾಣದಲ್ಲಿ ಆದಿತೀರ್ಥಕರನಾದ ವೃಷಭ, ಆದಿ ದಾನತೀರ್ಥ ಪ್ರವರ್ತಕ ಶ್ರೇಯಾಂಸ, ಪ್ರಥಮ ಚಕ್ರವರ್ತಿ ಭರತ, ಪ್ರಥಮ ಕಾಮದೇವನಾದ ಬಾಹುಬಲಿ, ಪ್ರಥಮಗಣಧರನಾದ ವೃಷಭಸೇನ, ವೃಷಭನ ಮತ್ತೈವರು ಮಕ್ಕಳು - ಇಷ್ಟು ಜನ ಜೀವರ ಜನ್ಮಾಂತರ ಕಥೆಗಳು ನಿರೂಪಿತವಾಗಿವೆ. ಇವರೆಲ್ಲರೂ ಹಲವಾರು ಜನ್ಮಗಳಲ್ಲಿ ಸಹ ಸುಖ-ದುಃಖಭಾಗಿಗಳಾಗಿ ಕೊನೆಗೆ ಒಟ್ಟಿಗೆ ಮುಕ್ತಿಭಾಜನರಾಗುತ್ತಾರೆ. ಇವರ ಕಥಾ ಪ್ರವರ್ತನೆಯ ಕಾಲದಲ್ಲಿ ಮತ್ತೆ ಹಲವಾರು ಜೀವಿಗಳ ವಿಷಯಗಳೂ ಸುಳಿಯುತ್ತವೆ. ಇವರಲ್ಲದೆ ವೃಷಭನ ಮಹಾಬಲಭವದಲ್ಲಿ ಸಚಿವರಾಗಿದ್ದ ನಾಲ್ವರು, ವಜ್ರಜಂಘಭವದಲ್ಲಿ ಮಾವನಾಗಿದ್ದವನು, ಅವನ ಜನ್ಮಾಂತರದ ತಾಯಿಯೊಬ್ಬಳು, - ಇವರ ಭವಾವಳಿಗಳು ಉಕ್ತವಾಗಿವೆ. ಯುಗಂಧರ ತೀರ್ಥಕರನ ಭವಾವಳಿಯೂ ಪ್ರಾಸಂಗಿಕವಾಗಿ ಕಾಣಿಸಿಕೊಂಡಿದೆ. ಮತ್ತೆ ಕೆಲವು ಸಾಧುಗಳ ಮತ್ತು ಕೇವಲಿಗಳ ಕಥೆಗಳೂ ಇಣಕಿಹಾಕಿವೆ. ಈ ಎಲ್ಲ ಕಥೆಗಳಿಗೂ ನಾಯಕಮಣಿಯಾಗಿ ಶೋಭಿಸುತ್ತಿದ್ದಾನೆ, ಆದಿತೀರ್ಥಂಕರ, ಉಳಿದೆಲ್ಲವೂ ತೀರ್ಥಂಕರನ ಕಥೆಗೆ ಅಂಗಗಳಾಗಿವೆ.

ಆದಿತೀರ್ಥಂಕರನು ಹಿಂದಿನ ಜನ್ಮದಲ್ಲಿ ಭೋಗಲಾಲಸನಾಗಿದ್ದನು. ಕ್ರಮಕ್ರಮವಾಗಿ ಭೋಗಲಾಲಸತೆಯನ್ನು ದೂರಸರಿಸಿ ಧರ್ಮವನ್ನಾಶ್ರಯಿಸಿ ಸಂಸಾರವನ್ನು ದಾಟಿತು. ಧರ್ಮಬೋಧೆಮಾಡಿ ಮತ್ತಿತರರನ್ನೂ ದಾಟಿಸಿತು. ಈ ಪರಿವರ್ತನೆಯು ಆ ಜೀವದಲ್ಲಾಗಲು ಬಹುಕಾಲ ಹಿಡಿಯಿತು. ಕಾಲಲಬ್ಧಿಯು ಪ್ರಾಪ್ತವಾದೊಡನೆ ಆ ಜೀವ ಎತ್ತಿದ ಎಂಟು ಹತ್ತು ಜನ್ಮಗಳಲ್ಲಿ ಮೂರು ನಾಲ್ಕು ತೀರ್ಥಂಕರರ ಅವತಾರಗಳೂ ಕಳೆದುಹೋದುವು. ಈ ನೀಳ್ಗತೆಯನ್ನು - ಜೀವವಿಕಾಸವನ್ನು- ಹೇಗೆ ಚಿತ್ರಿಸಿದೆಯೆಂಬುದು ಪರಿಶೀಲಿಸಬೇಕಾದ ಅಂಶ.

ಆದಿನಾಥನು ತನ್ನ ಹನ್ನೊಂದನೆಯ ಜನ್ಮದಲ್ಲಿ ಜಯವರ್ಮನೆಂಬ ರಾಜಪುತ್ರನಾಗಿ ಹುಟ್ಟಿದನು. ಪ್ರಥಮಪುತ್ರನಾಗಿ ಹುಟ್ಟಿದ ತನಗೆ ಪಟ್ಟಕಟ್ಟದೆ ಕಿರಿಯವನಿಗೆ ಪಟ್ಟಕಟ್ಟಿದ್ದರಿಂದ ದುಃಖಿತನಾಗಿ ಜನ್ಮಾಂತರದಲ್ಲಾದರೂ ತನಗೆ ರಾಜನಾಗುವ ಸೌಭಾಗ್ಯವೊದಗಲಿ ಎಂದಾಶಿಸಿ ಸನ್ಯಾಸವನ್ನು ಸ್ವೀಕರಿಸಿದನು. ದೀಕ್ಷೆ ಹೊತ್ತ ಕಾಲದಲ್ಲಿ ಕಿತ್ತ ಕೂದಲನ್ನು ಹುತ್ತದಲ್ಲಿಡಲು ಹೋದಾಗ ಹಾವು ಕಚ್ಚಿ ಸಾಯುವುದರಲ್ಲಿದ್ದನು. ಅಷ್ಟರಲ್ಲಿ ಕಣ್ಣಿಗೆ ಬಿದ್ದ ಆಕಾಶಾಚಾರಿಯಾದ ವಿದ್ಯಾಧರನಿಗೂ ಅವನ ವೈಭವಕ್ಕೂ ಮರುಳಾದನು. ತನಗೆ ತಪಃಫಲವಿರುವುದಾದರೆ ಮುಂದಿನ ಜನ್ಮದಲ್ಲಿ ಹುಟ್ಟಿ ವಿದ್ಯಾಧರತ್ವವೊದಗಲಿ ಎಂದುಕೊಂಡು ಸತ್ತು ವಿದ್ಯಾಧರರಾಜನಾಗಿ ಹುಟ್ಟಿದನು.

ಆಗ ಅವನು ತಾನು ಬಯಸಿ ಪಡೆದ ವಿದ್ಯಾಧರ ರಾಜ್ಯಭೋಗಗಳನ್ನು ಆನಂದದಿಂದುಣ್ಣುತ್ತಾ ಮೈಮರೆತನು. ಅಷ್ಟರಲ್ಲ ಸ್ವಯಂಬುದ್ಧನೆಂಬ ಮಂತ್ರಿಯು ಸಮಯ ಕಾಯ್ದು ನಿನ್ನ ಈ ಸಂಪತ್ತು ಭಾಗ್ಯಾಯತ್ತವಾದುದು. ಸಂಸಾರಸಾಗರನಿಮಗ್ನರನ್ನು ಎತ್ತಿ ಕಾಪಾಡುವುದು ಧರ್ಮವೊಂದೇ. ಕ್ಷಮೆ, ದಾನ, ದಮ, ತಪಸ್ಸು, ಶೀಲ- ಇವೇ ಧರ್ಮದ ಸ್ವರೂಪ. ಧರ್ಮದ ಫಲವು ಮುಕ್ತಿ. ರಾಜ್ಯಪದವಿಯಾಗಲೀ ದೇವೇಂದ್ರಪದವಿಯಾಗಲೀ ಶಾಶ್ವತವಲ್ಲ ಎಂದುಪದೇಶಿಸಿದನು. ಉಳಿದ ಮೂರು ಮಂತ್ರಿಗಳು ಜೀವ, ಜನ್ಮಾಂತರ, ಪಾಪ ಪುಣ್ಯ, ಪರಲೋಕಗಳು ಅರ್ಥವಿಲ್ಲದ ಮಾತುಗಳು ಇದನ್ನು ನಂಬಿ ಜನ ಮೋಸ ಹೋಗುತ್ತಾರೆ. ಇಹಲೋಕದ ಸುಖಗಳನ್ನು ಕಳೆದುಕೊಳ್ಳುತ್ತಾರೆ. ಇವರು ಜೀವಿಸಿರುವ ವರೆಗೂ ಇಂದ್ರಿಯಗಳ ಇಚ್ಛೆಗಳನ್ನು ಪೂರೈಸಿ ತಣಿಸಬೇಕು ಎಂದು ಭೋಗಾಭಿಲಾಷೆಗೇ ಪ್ರೋತ್ಸಾಹಗೊಟ್ಟರು. ಸ್ವಯಂಬುದ್ಧನು ಅವರ ಈ ವಾದವನ್ನು ಯೋಗ್ಯವಾದ ಉತ್ತರಗಳಿಂದ ಅಲ್ಲಗಳೆದು ಧರ್ಮದ ಹಿರಿಮೆಯನ್ನೇ ಎತ್ತಿಹಿಡಿದನು.

ಮಹಾಬಲನಿಗೆ ಸ್ವಯಂಬುದ್ಧನ ಮಾತುಗಳು ಹಿತವೆನಿಸಿದರೂ ಭೋಗತೃಷ್ಣೆಯು ಕುಂದಲಿಲ್ಲ. ಮುಪ್ಪಡರಿದರೂ ಸುಖಾಭಿಲಾಷೆಯು ಹಿಂಗಲಿಲ್ಲ. ಸ್ವಯಂಬುದ್ಧನಿಗೆ ತುಂಬ ಚಿಂತೆ. ಆದರೇನು ಮಾಡಿಯಾನು ? ಕೊನೆಗೆ ಮಹಾಬಲನಿಗೆ ಒಂದು ತಿಂಗಳು ಆಯಸ್ಸು ಉಳಿದಿರುವಾಗ ಸ್ವಯಂಬುದ್ಧನು ಪುನಃ ಹಿತೋಪದೇಶಿಸಲು ಅವನಿಗೆ ಜ್ಞಾನೋದಯವಾಯಿತು. ಆತನು ಜಿನಧರ್ಮಕ್ಕೆ ಮನಸೋತು ರಾಜ್ಯಬಿಟ್ಟು ಜೈನದೀಕ್ಷೆಯನ್ನು ವಹಿಸಿದನು. ಅನಶನವ್ರತವನ್ನಪ್ಪಿ ಅರ್ಹತ್ಪದವನ್ನು ಸ್ಮರಿಸುತ್ತಾ ಪ್ರಾಣಬಿಟ್ಟನು.

ಬಳಿಕ ಈಶಾನಕಲ್ಪದಲ್ಲಿ 'ದಿವಿಜೇಂದ್ರರುಂದ್ರಲೋಕದಲ್ಲಿ' ಸಾರವಾದ ಶ್ರೀಪ್ರಭ ವಿಮಾನದಲ್ಲಿ ಲಲಿತಾಂಗದೇವನಾಗಿ ಜನಿಸಿದನು. ಅಲ್ಲಿ ಅವನು ತನ್ನ ಹೆಂಡತಿ ಸ್ವಯಂಪ್ರಭೆಯೊಡನೆ ಅನುಭವಿಸದ ಸುಖವಿಲ್ಲ. ಅವನ ಜೀವನವೂ ಸಾರವತ್ತಾಗಿ ಕಂಡುದು ಸ್ವಯಂಪ್ರಭೆಯಿಂದಲೇ, ಅರೆಗಳಿಗೆಯೂ ಅವಳನ್ನು ಬಿಡದೆಯೆ ವಿಷಯಸುಖದಲ್ಲಿ ನಿಮಗ್ನನಾದನು. ಹೀಗೆ ಸಾವಿರ ವರ್ಷಗಳ ಕಾಲವನ್ನು ಭೋಗಾಭಿಲಾಷೆಯಲ್ಲಿಯೇ ಕಳೆದನು. ಇನ್ನಾರು ತಿಂಗಳ ಆಯುಷ್ಯ ಉಳಿದಿರಲು, ಮುಡಿದ ಹೂವು ಬಾಡಿ ಕಾಂತಿಗುಂದಿ ಮರಣಕಾಲವು ಸಮೀಪಿಸಿತೆಂದು ಸೂಚನೆಗೊಟ್ಟಿತು ಅವನಿಗೆ. ಭೋಗಾನುಭವಕ್ಕೆ ನೆಲೆವೀಡಾದ ಸ್ವರ್ಗವನ್ನು ತೊರೆದು ಹೋಗಬೇಕಾಯಿತಲ್ಲ ಎಂದು ಅವನಿಗೆ ಚಿಂತೆ. ಆಗ ಸಮೀಪದಲ್ಲಿದ್ದ ಗಿಡಮರಗಳನ್ನೆಲ್ಲ ತನ್ನನ್ನು ಉಳಿಸಿಕೊಳ್ಳುವಂತೆ ಅಂಗಲಾಚಿ ಬೇಡಿಕೊಂಡನು. ಮೈ ಎರಡು ಜೀವ ಒಂದು ಎಂಬಂತಿದ್ದ ಸ್ವಯಂಪ್ರಭೆಯನ್ನು ಕುರಿತು ನೀನಾದರೂ ನನ್ನನ್ನು ಉಳಿಸಿಕೊ ಎಂದು ಕೂಗಿಕೊಂಡನು. ಹೀಗೆ ಅಳಲಾಡುತ್ತಿದ್ದ ಲಲಿತಾಂಗದೇವನನ್ನು ಕುರಿತು ಸಾಮಾನಿಕ ದೇವರು 'ನಿನಗೊಬ್ಬನಿಗೇ ಅಲ್ಲ; ದೇವಾಧಿದೇವತೆಗಳಿಗೂ ಸಾವುಂಟು. ಸುಮ್ಮನೆ ಗೋಳಾಡುವುದು ಯೋಗ್ಯವಲ್ಲ. ಸಂಸಾರದಲ್ಲಿ ಹುಟ್ಟು ಸಾವು ನೋವುಗಳು ತಪ್ಪಿದ್ದಲ್ಲ. ರಕ್ಷಣೆಗೊಡತಕ್ಕುದು ಧರ್ಮವೊಂದೇ' ಎಂದು ಹಿತವಚನಗಳನ್ನಿತ್ತರು. ತರುವಾಯ ಲಲಿತಾಂಗನು ಶಾಂತಚಿತ್ತನಾಗಿ ಆರುದಿಂಗಳವರೆಗೂ ಜಿನಪೂಜೆಮಾಡಿ ಜಿನಪಾದಾಬ್ಜವನ್ನು ಸೇರಿದನು. ; ಸ್ವರ್ಗದಿಂದ ಚ್ಯುತನಾಗಿ ವಜ್ರಜಂಘನೆಂಬ ರಾಜಪುತ್ರನಾಗಿ ಜನಿಸಿದನು.

ವಜ್ರಜಂಘನು ಸ್ವರ್ಗಲೋಕದ ಗೆಳತಿಯಾದ ಸ್ವಯಂಪ್ರಭೆಯನ್ನು ನೆನೆಯುತ್ತಾ ಯಾವ ಕನ್ಯೆಯನ್ನೂ ಮದುವೆಯಾಗಲೊಲ್ಲದೆ ಅವಿವಾಹಿತನಾಗಿದ್ದನು. ಅಷ್ಟರಲ್ಲಿ ಸ್ವಯಂಪ್ರಭೆಯು ಗಂಡನಾದ ಲಲಿತಾಂಗನ ಅಗಲಿಕೆಯಿಂದ ತಪ್ತಳಾಗಿ ಜಿನಪದಧ್ಯಾನ ದಲ್ಲಿಯೇ ಕಾಲಕಳೆದು ಆಯುಸ್ಸು ತೀರಲು ಸ್ವರ್ಗದಿಂದ ಪ್ರಚ್ಯುತಳಾಗಿ ವಜ್ರಜಂಘನ ಮಾತುಲನಾದ ವಜ್ರದಂತಚಕ್ರವರ್ತಿಗೆ ಶ್ರೀಮತಿಯೆಂಬ ಮಗಳಾಗಿ ಹುಟ್ಟಿ ಬೆಳೆದಳು. ಒಂದು ದಿನ ದೇವಾಗಮಲಬ್ಧ ಸ್ಮೃತಿಯಿಂದ ಪೂರ್ವಜನ್ಮಜ್ಞಾನವುಂಟಾಗಿ ಅವಳು ಲಲಿತಾಂಗನ ಜನ್ಮವು ಎಲ್ಲಾಗಿರಬಹುದೆಂಬುದನ್ನು ತಿಳಿಯಲಾಗದೆಯೆ ತಾನು ಕನ್ಯಾವ್ರತದಲ್ಲಿಯೆ ನಿಲ್ಲುವೆನೆಂದು ನಿಶ್ಚಯಿಸಿದಳು. ಪಂಡಿತೆಯೆಂಬ ದಾದಿಯು ಈ ರಹಸ್ಯವನ್ನರಿತು ಅವಳು ಬರೆದಿಟ್ಟುಕೊಂಡಿದ್ದ ಪೂರ್ವಜನ್ಮಸಂಬಂಧವಾದ ಚಿತ್ರಪಟವನ್ನು ಸಂಪಾದಿಸಿಕೊಂಡು ಅದರ ನೆರವಿನಿಂದ ವಜ್ರಜಂಘನೇ ಶ್ರೀಮತಿಯ ಪೂರ್ವಜನ್ಮದ ಪತಿಯೆಂದು ಕಂಡುಹಿಡಿದಳು. ಶ್ರೀಮತೀ ವಜ್ರಜಂಘರಿಗೆ ವಿವಾಹವಾಯಿತು. ಹಿಂದಿನ ಜನ್ಮದ ಪ್ರೀತಿಯಿಂದ ನಮಗೀಗ ಮೇಳನವುಂಟಾಯಿತು, ಈ ಪ್ರೀತಿಯೊದಗಿತು. ಈ ಜನ್ಮದ ವಾಸನೆಯು ಮುಂದಿನ ಜನ್ಮಕ್ಕೂ ಹರಿದುಬರುವುದು. ಆದ್ದರಿಂದ ನಮಗೆ ಈ ಜನ್ಮ ಹಿಂದಿನ ಜನ್ಮ ಮುಂದಿನ ಜನ್ಮಗಳು - ಎಲ್ಲವೂ ಸಫಲವಾದುವೇ ಎಂದು ಹಿಗ್ಗಿದರು.

ಶ್ರೀಮತಿಯ ಹೊಟ್ಟೆಯಲ್ಲಿ ೪೯ ಜನ ಮಕ್ಕಳು ಹುಟ್ಟಿದರು. ವಜ್ರಜಂಘನ ತಂದೆಯು ಮಗನಿಗೆ ರಾಜ್ಯವನ್ನು ಕೊಟ್ಟು ವೈರಾಗ್ಯದಿಂದ ತಪಸ್ಸಿಗೆ ಹೊರಟಾಗ ಆ ಮಕ್ಕಳೆಲ್ಲರೂ ತಾತನೊಡನೆ ದೀಕ್ಷೆ ವಹಿಸಿದರು. ಶ್ರೀಮತೀ ವಜ್ರಜಂಘರಿಗೆ ಮಾತ್ರ ವೈರಾಗ್ಯದ ಕಡೆಗೆ ಮನಸ್ಸು ಹರಿಯಲಿಲ್ಲ. ಅವರು ರಾಜ್ಯಸುಖದಲ್ಲಿಯೇ ಓಲಾಡುತ್ತಾ ಕಾಲ ಕಳೆಯುತ್ತಿರಲು, ವಜ್ರದಂತಚಕ್ರವರ್ತಿಯು ಮಕ್ಕಳೊಡನೆ ತಪೋವನಕ್ಕೆ ತೆರಳಿದರೆಂದೂ, ರಾಜ್ಯಭಾರದ ಹೊರೆಯನ್ನು ಹೊತ್ತ ಕಿರಿಯ ಮೊಮ್ಮಗನಿಗೆ ಸಾಮಂತರು ತಲೆಬಾಗಿ ನಡೆಯದೆ ಹಿಂಸೆಗೊಡಲಾರಂಭಿಸಿರುವರೆಂದೂ ಸುದ್ದಿ ಬಂದಿತು. ಸೋದರಳಿಯನ ರಾಜ್ಯವನ್ನು ವ್ಯವಸ್ಥೆಗೊಳಿಸುವುದಕ್ಕಾಗಿ ವಜ್ರಜಂಘನು ಶ್ರೀಮತಿಯೊಡನೆ ಸೈನ್ಯಸಮೇತನಾಗಿ ಹೊರಟನು. ಮಾರ್ಗಮಧ್ಯದಲ್ಲಿ ಒಂದು ಕಡೆ ಶಿಬಿರ ಬಿಟ್ಟಿದ್ದಾಗ ಚಾರಣಮುನಿಗಳಿಬ್ಬರಿಗೆ ಆಹಾರದಾನ ಮಾಡಿದರು. ವಜ್ರಜಂಘನ ಪುರೋಹಿತ, ಮಂತ್ರಿ, ಸೇನಾನಾಯಕ, ಶ್ರೇಷ್ಠಿಗಳಾದ ಅಕಂಪನ, ಮತಿವರ, ಆನಂದ, ಧನಮಿತ್ರರು ಅದನ್ನು ಅನುಮೋದಿಸಿದರು. ಆಗ ಅಲ್ಲಿ ಉಪಸ್ಥಿತರಾದ ಒಂದು ಹುಲಿ, ಒಂದು ಹಂದಿ, ಒಂದು ಕೋಡಗ ಮತ್ತು ಮುಂಗುಸಿಗಳೂ ಅನುಮೋದನೆಮಾಡಿ ಉಪಶಾಂತರಾದರು. ವಜ್ರಜಂಘನು ಚಾರಣಮುನಿಗಳ ಮೂಲಕ ತನ್ನ ನಾಲ್ವರು ಮಿತ್ರರ ಮತ್ತು ನಾಲ್ಕು ಪ್ರಾಣಿಗಳ ವಿಷಯವನ್ನು ಕೇಳಿ ತಿಳಿದುಕೊಂಡನು. ಅವರೆಲ್ಲರೂ ತನ್ನೊಡನೆ ಹಲವಾರು ಜನ್ಮಗಳಲ್ಲಿ ದಿವ್ಯಮಾನುಷ ಭೋಗಗಳನ್ನು ಪಡೆಯುತ್ತ ಬರುವರೆಂಬುದನ್ನು ಕೇಳಿ ಸಂತೋಷಿಸಿದನು.

ಸೋದರಳಿಯನ ರಾಜ್ಯವನ್ನು ವ್ಯವಸ್ಥೆಗೊಳಿಸಿ ರಾಜಧಾನಿಗೆ ಹಿಂದಿರುಗಿ ಹಲವು ವರ್ಷಗಳವರೆಗೆ ಇಷ್ಟಸುಖಗಳನ್ನು ಅನುಭವಿಸಿದರು. ಒಂದು ದಿನ ರಾತ್ರಿ ಶ್ರೀಮತೀ ವಜ್ರಜಂಘರು ಶಯ್ಯಾಗೃಹದಲ್ಲಿ ಮಲಗಿರುವಾಗ ಸೆಜ್ಜೆವಳನು ಕೇಶಸಂಸ್ಕಾರಕ್ಕಾಗಿ ಧೂಪಪಾತ್ರೆಯಲ್ಲಿ ಅತಿಯಾಗಿ ಧೂಪಹಾಕಿ ಕಿಟಕಿ ತೆರೆಯುವುದನ್ನು ಮರೆತುಹೋದದ್ದರಿಂದ ಹೊಗೆ ಸುತ್ತಿಕೊಂಡು ಉಸಿರು ಕಟ್ಟಿ ಇಬ್ಬರೂ ಸತ್ತುಹೋದರು. ಹೀಗೆ ಒಟ್ಟಿಗೆ ಪ್ರಾಣತೆತ್ತ ಶ್ರೀಮತೀ ವಜ್ರಜಂಘರು ಉತ್ತರಕುರುವೆಂಬ ಭೋಗಭೂಮಿಯಲ್ಲಿ ಆರ್ಯರಾಗಿ ಜನ್ಮತಳೆದರು. ಮತಿವರರೇ ಮುಂತಾದವರು ತಪಃಪ್ರವೃತ್ತರಾಗಿ ಸತ್ತು ಅಧೋಗ್ರೈವೇಯಕದಲ್ಲಿ ಅಹಮಿಂದ್ರರಾದರು.

ಶ್ರೀಮತೀ ವಜ್ರಜಂಘರು ಭೋಗಭೂಮಿಯ ಕಾಮತಂತ್ರಗಳಲ್ಲಿ ನಿಮಗ್ನರಾಗಿ ಮೈಮರೆತರು. ಹೀಗಿರಲು ಸ್ವಯಂಬುದ್ಧನು ಪ್ರೀತಿಂಕರಮುನಿಯಾಗಿ ಹುಟ್ಟಿ ಬಂದು ಪೂರ್ವಜನ್ಮದ ಗೆಳೆಯನಾದ ವಜ್ರಜಂಘನನ್ನು ಪ್ರೀತಿಯಿಂದ ಎಚ್ಚರಿಸಿದನು. ಪ್ರಿಯಗೆಳೆಯ ನಿನಗಿನ್ನೂ ಭೋಗಾಸಕ್ತಿಯು ತಗ್ಗಲಿಲ್ಲ. ಸಮ್ಯಕ್ತ್ವದ ಕಡೆಗೆ ಮನ ಹರಿಯಲಿಲ್ಲವಲ್ಲಾ ! ಈಗ ಕಾಲ ಪ್ರಾಪ್ತವಾಗಿದೆ. ಸಮ್ಯಕ್ತ್ವವನ್ನು ಗ್ರಹಿಸು. ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರಗಳು ಮುಕ್ತಿಗೆ ಸಾಧಕಗಳು-ಎಂದು ಉಪದೇಶಿಸಿ ಹೋದನು. ಶ್ರೀಮತ್ಯಾರ್ಯೆಯೂ ಉಳಿದ ನಾಲ್ವರು ಸಂಗಡಿಗರೂ ಸಮ್ಯಕ್ತ್ವವನ್ನು ಪರಿಗ್ರಹಿಸಿದರು.

ಮುಂದೆ ಆದೀತೀರ್ಥಂಕರನ ಜೀವಕ್ಕೆ ಭೋಗಾಭಿಲಾಷೆಯು ಕಡಮೆಯಾಯಿತು. ಮೋಹಬಂಧವು ಶಿಥಿಲಗೊಂಡಿತು. ಭೋಗಭೂಮಿಯ ಆಯಸ್ಸು ತೀರಿದೊಡನೆ ವಜ್ರಜಂಘಾರ್ಯನು ಶ್ರೀಧರನೆಂಬ ದೇವನಾದನು. ಶ್ರೀಮತ್ಯಾರ್ಯೆಯು ಸಮ್ಯಕ್ತ್ವದ ಮಹಿಮೆಯಿಂದ ಹೆಣ್ಣುರೂಪವನ್ನು ಕಡಿದುಕೊಂಡು ಶ್ರೀಧರದೇವನಿಗೆ ಸ್ವಯಂಪ್ರಭನೆಂಬ ಸಾಮಾನಿಕದೇವನಾದನು. ಶಾರ್ದೂಲಾದಿಗಳು ಅವನ ಸಹಚರರಾದ ದೇವತೆಗಳಾದರು. ಶ್ರೀಧರದೇವನು ಅವರೆಲ್ಲರೊಡನೆ ಸಂತೋಷದಿಂದ ಸ್ವರ್ಗದಲ್ಲಿದ್ದಾಗ ಪ್ರೀತಿಂಕರಮುನಿಗೆ ಕೇವಲಜ್ಞಾನವುಂಟಾಯಿತು. ಅದನ್ನು ತಿಳಿದು ಶ್ರೀಧರನು ದೇವನಿಕಾಯದೊಡನೆ ಹೋಗಿ ಕೇವಲಜ್ಞಾನ ಪೂಜೆ ಮಾಡಿದನು. ಅಷ್ಟುಹೊತ್ತಿಗೆ ಅವನಲ್ಲಿ ಧರ್ಮಶ್ರದ್ಧೆಯೂ ಕಾಣಿಸಿಕೊಂಡಿತು. ಮಹಾಬಲಭವದಲ್ಲಿ ತನಗೆ ಮಂತ್ರಿಗಳಾಗಿದ್ದವರ ಗತಿಯೇನಾಯಿತೆಂದು ಕೇಳಿ ತಿಳಿದುಕೊಂಡನು. ಅವರು ನರಕದಲ್ಲಿ ತೊಳಲುತ್ತಿರುವುದನ್ನು ಕೇಳಿ ಮರುಗಿದನು. ಎರಡನೆಯ ನರಕದಲ್ಲಿದ್ದ ಶತಮತಿಯ ಬಳಿಗೆ ಹೋಗಿ ಧರ್ಮೋಪದೇಶಮಾಡಿ ಅವನ ಉದ್ಧಾರಕ್ಕೆ ಕಾರಣನಾದನು.

ಶ್ರೀಧರನು ಸ್ವರ್ಗಪ್ರಚ್ಯುತನಾಗಿ ಸುವಿಧಿಯೆಂಬ ಹೆಸರಿನಿಂದ ಮೆರೆದನು. ಭೋಗಾಭಿಲಾಷೆಯಲ್ಲಿ ಮತ್ತಷ್ಟು ವಿರಕ್ತನಾದನು. ತಂದೆಗೆ ಅಸಮಾಧಾನವನ್ನು ತಪ್ಪಿಸಲು ಮದುವೆಯಾಗಿ ರಾಜತ್ವವನ್ನಂಗೀಕರಿಸಿದನು. ಶ್ರೀಮತಿಯಾಗಿದ್ದ ಸ್ವಯಂಪ್ರಭದೇವನು ಸ್ವರ್ಗದಿಂದಿಳಿದು ಸುವಿಧಿಗೆ ಕೇಶವನೆಂಬ ಹೆಸರಿನಿಂದ ಪುತ್ರನಾಗಿ ಹುಟ್ಟಿದನು. ಸುವಿಧಿಯು ದೀಕ್ಷಾಭಿಲಾಷೆಯುಳ್ಳವನಾಗಿದ್ದರೂ ಮಗನ ಮೇಲಿನ ವ್ಯಾಮೋಹದಿಂದ ಉಪಾಸಕನಾಗಿಯೇ ಉಳಿದುಕೊಂಡು ಅಣುವ್ರತಧಾರಿಯಾದನು. ಏಕಾದಶನಿಲಯಸ್ಥಿತನಾಗಿ ಸಮಾಧಿವಿಧಿಯಿಂದ ದೇಹವನ್ನು ತ್ಯಜಿಸಿ ಅಚ್ಯುತೇಂದ್ರನಾದನು.

ಮುಂದಿನದು ಅವನಿಗೆ ವಜ್ರನಾಭಿಯ ಜನ್ಮ. ಸಾಮ್ರಾಜ್ಯಭೋಗಾನುಭವದಲ್ಲಿ ಅವನಿಗೆ ತೀವ್ರ ನಿರಾಸಕ್ತಿಯೊದಗಿತು.

ಅನಿತ್ಯವಾದ ಸಂಸಾರದ ಸುಖವನ್ನೆಳಸಿ ನಿತ್ಯವಾದ ನಿರ್ವಾಣಸೌಖ್ಯವನ್ನು ತೃಣೀಕರಿಸುವುದು ತರವೇ ? ಎಂದುಕೊಂಡು ರಾಜ್ಯವನ್ನು ಮಗನಿಗೆ ಪ್ರತ್ಯರ್ಪಿಸಿ ತಾನು ದೀಕ್ಷೆಗೊಂಡನು. ಮಹಾವ್ರತಗಳನ್ನೂ, ಬಾಹ್ಯಾಭ್ಯಂತರ ತಪಸ್ಸುಗಳನ್ನೂ, ಪರೀಷಹಗಳನ್ನೂ ಗೆದ್ದು ಷೋಡಶ ಭಾವನೆಗಳನ್ನು ಭಾವಿಸಿ ಶುಕ್ಲಧ್ಯಾನರತನಾಗಿ ಪ್ರಾಣತ್ಯಾಗ ಮಾಡಿ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾದನು.

ಹೀಗೆ ಕ್ರಮವಾಗಿ ಪರಿಶುದ್ಧನಾದ ಜೀವನು ಸರ್ವಾರ್ಥಸಿದ್ಧಿಯಲ್ಲಿ ಆಯುಸ್ಸನ್ನು ಕಳೆದುಕೊಂಡು ಭರತವರ್ಷದಲ್ಲಿ ಆದೀತೀರ್ಥಂಕರನಾಗಿ ಜನ್ಮವೆತ್ತು ಧರ್ಮಕ್ಷೀರವನ್ನು ಹಂಚಿ ಲೋಕೋದ್ಧಾರಕನಾದನು.

ಭರತಕ್ಷೇತ್ರದಲ್ಲಿ ಈ ಅವಸರ್ಪಿಣೆಯಲ್ಲಿ ಆ ಧರ್ಮದ ಆದಿಪ್ರಚಾರಕನಾಗಿ ಕಂಗೊಳಿಸಿದ್ದು, ಪ್ರಜಾಜೀವನೋಪಾಯಗಳನ್ನು ಏರ್ಪಡಿಸಿ ಸಮಸ್ತ ವಿದ್ಯೆಗಳನ್ನು ಕಲಿಸಿ

ಸಮಾಜ ರಾಜ್ಯವ್ಯವಸ್ಥೆಗಳನ್ನು ಸ್ಥಿರಗೊಳಿಸಿ ಯುಗಪ್ರವರ್ತಕನಾದದ್ದು ಆದಿ ತೀರ್ಥಂಕರನ ಒಂದು ಮಹತ್ವ.

ಭರತಖಂಡದಲ್ಲಿ ಭೋಗಭೂಮಿಸ್ಥಿತಿಯುರುಳಿ ಕರ್ಮಭೂಮಿಸ್ಥಿತಿಯು ಮೊದಲುಗೊಂಡಿತು. ಹದಿನಾಲ್ಕನೆಯ ಮನುವಾದ ನಾಭಿರಾಜನ ಪುತ್ರನಾಗಿ ಆದಿತೀರ್ಥಂಕರನಾಗಿ ಜನ್ಮತಳೆದನು. ಬಾಲ್ಯವು ಕಳೆದು ಯೌವನವು ಮೂಡಲು ಪಿತೃವಿನ ನಿರ್ಬಂಧದಿಂದಲೂ ಲೋಕಾನುಗ್ರಹಬುದ್ಧಿಯಿಂದಲೂ ಮದುವೆಯಾಗಿ ಭರತ, ಬಾಹುಬಲಿ, ಬ್ರಾಹ್ಮಿ ಮತ್ತು ಸುಂದರಿಯರೇ ಮೊದಲಾದ ಮಕ್ಕಳನ್ನು ಹೊಂದಿದನು. ಸ್ವಮತಿ ಕಲ್ಪನೆಯಿಂದ ತನಗೂ ನಾಭಿರಾಜನಿಗೂ ಮಕ್ಕಳಿಗೂ ನಾನಾ ವಿಧಂಗಳಪ್ಪ ಮಣಿ ಭೂಷಣಗಳನ್ನು ಮಾಡಿಸಿದನು. ದೊಡ್ಡವರಾದ ಮಕ್ಕಳಿಗೆ ವಿದ್ಯೋಪದೇಶ ಮಾಡಲು ಬಯಸಿ ಮೊದಲು ಹೆಣ್ಣು ಮಕ್ಕಳನ್ನು ಕರೆದನು. ಬ್ರಾಹ್ಮಿಗೆ ಸಿದ್ಧನಮಸ್ಕಾರದೊಡನೆ ಅಕ್ಷರಾಭ್ಯಾಸವನ್ನೂ ಸುಂದರಿಗೆ ಗಣಿತವನ್ನೂ ಉಪದೇಶಿಸಿದನು. ಉಳಿದ ಮಕ್ಕಳೊಬ್ಬೊಬ್ಬರಿಗೂ ಒಂದೊಂದು ಶಾಸ್ತ್ರವನ್ನು ಹೇಳಿಕೊಟ್ಟನು.

ಅಷ್ಟರಲ್ಲಿಯೇ ಕಲ್ಪವೃಕ್ಷಗಳ ಶಕ್ತಿಯುಡುಗಿಹೋಯಿತು. ಕೃಷಿಮಾಡದೆಯೆ ಬೆಳೆಯುತ್ತಿದ್ದ ಧಾನ್ಯಾದಿಗಳು ನಿಂತುಹೋದುವು. ದಿಕ್ಕುಕಾಣದೆಯೆ ದಿಗ್ಭ್ರಾಂತರಾದ ಜನರು ನಾಭಿರಾಜನನ್ನು ಮರೆಹೊಕ್ಕರು. ಅವನು ಅವರನ್ನು ಆದಿನಾಥನ ಬಳಿಗೆ ಕಳುಹಿಸಿದನು. ಅವನು ವಿದೇಹಕ್ಷೇತ್ರದ ಸ್ಥಿತಿಯನ್ನು ಸ್ಮರಿಸಿ, ಅಲ್ಲಿನಂತೆ ಇಲ್ಲಿಯೂ ಜನಪದ ಗ್ರಾಮಾದಿಗಳನ್ನು ವಿಂಗಡಿಸಿದನು. ಜನರನ್ನು ಕ್ಷತ್ರಿಯ ವೈಶ್ಯ ಶೂದ್ರರೆಂದು ಮೂರು ವರ್ಣಗಳಾಗಿ ವ್ಯವಸ್ಥೆಗೊಳಿಸಿ ಅವರವರಿಗೆ ಉಚಿತವಾದ ವೃತ್ತಿಗಳನ್ನು ನಿರೂಪಿಸಿ ವರ್ಣಸಂಕರವಾಗದಂತೆ ನಡೆದುಕೊಳ್ಳಬೇಕೆಂದು ವ್ಯವಸ್ಥೆ ಮಾಡಿದನು. ಅಂದಿನಿಂದ ಕೃತಯುಗ ಮೊದಲುಗೊಂಡಿತು. ಭರತಚಕ್ರವರ್ತಿಯು ಆಳತೊಡಗಿದ ಮೇಲೆ ಬ್ರಾಹ್ಮಣ ಜಾತಿಯು ಸ್ಪಷ್ಟವಾಗಿ ಅವರಿಗೆ ಅಧ್ಯಯನ ಅಧ್ಯಾಪನಾದಿ ಕರ್ಮಗಳು ವಹಿಸಲ್ಪಟ್ಟುವು.

ಯುಗಪ್ರತಿಷ್ಠಾಪಕನಾದ ಆದಿದೇವನಿಗೆ ನಾಭಿರಾಜನು ಇಂದ್ರಾದಿ ದೇವತೆಗಳು ಪಟ್ಟ ಕಟ್ಟಿದರು. ತರುವಾಯ ಆದಿನಾಥನು ಯೋಗ್ಯರಾದ ದಂಡಧರರು ಇಲ್ಲದಿದ್ದರೆ ಪ್ರಜೆಗಳು ತಮ್ಮ ತಮ್ಮ ವೃತ್ತಗಳನ್ನು ಮೀರಿ ನಡೆಯುವರೆಂದು, ಪ್ರಬಲರಾದವರು ನಿರ್ಬಲರನ್ನು ಹಿಂಸಿಸುವರೆಂದು ತಿಳಿದು ಅದಕ್ಕವಕಾಶವಿಲ್ಲದಿರಲೆಂದು ಕುರುವಂಶ, ಹರಿವಂಶ, ನಾಥವಂಶ, ಉಗ್ರವಂಶ ಎಂಬ ಕ್ಷತ್ರಿಯ ವಂಶಗಳನ್ನು ನೆಲೆಗೊಳಿಸಿ ಅವರನ್ನೂ ಇತರ ಹಲವು ರಾಜರನ್ನೂ ಲೋಕರಕ್ಷಣೆಗಾಗಿ ನಿಯಮಿಸಿದನು.

ಆದಿತೀರ್ಥಂಕರನ ಧರ್ಮವಿಜಯದೊಂದಿಗೆ ಭರತಚಕ್ರವರ್ತಿಯ ದಿಗ್ವಿಜಯವೂ ಈ ಪುರಾಣದಲ್ಲಿ ಪ್ರಸ್ತಾಪಿತವಾಗಿದೆ. ಅವೆರಡಕ್ಕೂ ಇರುವ ಅಂತರವು ಅಜಗಜಾಂತರದಷ್ಟು. ತೀರ್ಥಂಕರನ ಧರ್ಮವಿಜಯದ ಮುಂದೆ ಚಕ್ರವರ್ತಿಯ ದಿಗ್ವಿಜಯವು ಸಪ್ಪೆ, ಹಿಂಸಾಮಯ ಮತ್ತು ಗರ್ವೋದ್ವಿಜೃಂಭಿತ.

ತೀರ್ಥಂಕರನ ದಿಗ್ವಿಜವು ದಯಾಮೂಲವಾದುದು. ಜನೋದ್ಧಾರಕವಾದ ಧರ್ಮವೇ ಅದರ ಚಕ್ರ. ಭಕ್ತಿಯಿಂದ ಕಾಲುಗಳ ಮೇಲೆ ಬೀಳುವವರಿಗೆ ಸಿಕ್ಕುವ ಫಲ ಕೈವಲ್ಯ. ಇಂಥ ಧರ್ಮಚಕ್ರವರ್ತಿಯನ್ನು ಮಮತೆಯಿಂದ ಆಶ್ರಯಿಸಿ ಉದ್ಧಾರ ಹೊಂದದವರು ಯಾರು? ಭರತನು ಭಯಂಕರವಾದ ಚಕ್ರರತ್ನವನ್ನು ಮುಂದುಮಾಡಿ ಕೊಂಡು ದೇಶವಿದೇಶಗಳ ಮೇಲೆ ದಾಳಿಯಿಟ್ಟು, ಎದುರಾದವರನ್ನು ನಿರ್ದಯದಿಂದ ತುಂಡರಿದು, ಲೂಟಿಮಾಡಿ ಹಣವನ್ನು ಸಂಪಾದಿಸಿಕೊಂಡು ಷಟ್ಖಂಡಗಳನ್ನು ಗೆದ್ದುಕೊಂಡನು. ಇವನ ಬಲೆಗೆ ಬಿದ್ದವರೆಲ್ಲ ತಮ್ಮ ಸ್ವಾತಂತ್ರ್ಯವನ್ನು ಕಳೆದು ನಿಸ್ತೇಜಸ್ಕರಾಗಿ ನಿಂತರೂ ಭರತನಿಗಾದರೂ ಮೇಲುಂಟಾಯಿತೆ ? ಇಲ್ಲ. ಗರ್ವೋದ್ರೇಕದಿಂದ ತನ್ನ ದಿಗ್ವಿಜಯ ಪ್ರಶಸ್ತಿಯನ್ನು ವೃಷಭಾಚಲದ ಕಲ್ಲುಗಳ ಮೇಲೆ ಕೆತ್ತಿಸಲು ಹೋದಾಗ ಅಲ್ಲಿ ಸ್ಥಳಾವಕಾಶವಿಲ್ಲದುದನ್ನು ಕಂಡು ದಿಗ್ಭ್ರಾಂತನಾದನು. ಅಲ್ಲಿನ ಕಲ್ಲುಗಳ ಮೇಲೆ ಎಲ್ಲೆಡೆಯಲ್ಲಿಯೂ ಹಿಂದಿನ ಕಲ್ಪಶತಕೋಟಿಗಳಲ್ಲಿ ಬಾಳಿ ಬದುಕಿದ ಚಕ್ರಿಸಮೂಹದ ಪ್ರಶಸ್ತಿಗಳನ್ನು ಕಂಡು ಆಶ್ಚರ್ಯಗೊಂಡನು. ಅಷ್ಟಕ್ಕೆ ನಿಲ್ಲದೆ ಹಿಂದಿನ ಚಕ್ರವರ್ತಿಯೊಬ್ಬನ ಪ್ರಶಸ್ತಿಯನ್ನು ಅಳಿಸಿಹಾಕಿ ತನ್ನ ಪ್ರಶಸ್ತಿಯನ್ನು ಕೆತ್ತಿಸಿಕೊಂಡನಲ್ಲಿ.

ಷಟ್ಖಂಡ ಭೂಮಂಡಲವನ್ನು ಗೆದ್ದು ಭರತನು ರಾಜಧಾನಿಗೆ ಹೆಮ್ಮೆಯಿಂದ ಬಂದರೆ, ಚಕ್ರರತ್ನವು ಪಟ್ಟಣವನ್ನು ಒಳಹೊಗದೆಯೆ ಬಾಗಿಲಲ್ಲೇ ನಿಂತುಬಿಟ್ಟಿತು. ಲೋಕವೆಲ್ಲ ತನಗೆ ತಲೆವಾಗಿದರೂ ಬಾಹುಬಲಿಯೇ ಮೊದಲಾದ ತಮ್ಮಂದಿರು ತನಗೆ ತಲೆಮಣಿಯಲಿಲ್ಲವೆಂದು ಅವನಿಗೆ ದುಃಖ. ತಲೆಮಣಿಯದ ಮೇಲೆ ಆ ಸಾಮ್ರಾಜ್ಯದಿಂದ ತನಗೇನು ಫಲ ಎಂಬ ಕೊರಗು. ತತ್ಫಲವಾಗಿ ಅವರನ್ನು ಎರಗಿಸಲೇಬೇಕೆಂಬ ಹಟ. ಅದರಲ್ಲಿ ಸೋದರಪ್ರೀತಿಯೂ ಕಾಣದಾಯಿತು. ಬಂದು ತಲೆವಾಗಬೇಕೆಂದು ಹೇಳಿಕಳುಹಿಸಿದರೂ ಅಭಿಮಾನಿಗಳಾದ ತಮ್ಮಂದಿರು

**ಪಿರಿಯಣ್ಣಂಗೆಱಗುವುದೇಂ**
**ಪರಿಭವವೇ ಕೀೞೆ ನೆತ್ತಿಯೊಳ್ ಬಾಳಂ ನಿ**
**ರ್ನೆರಮೂೞೆ ಚಲದಿನೆಱಗಿಸ**
**ಲಿರೆ ಭರತಂಗೆಱಗುವೆಱಕಮಂಜುವೆಯಲ್ತೇ**

ಎಂದು ಭಾವಿಸಿ, ಆಳರಸೆಂಬ ಬುದ್ಧಿಗೆ ಜುಗುಪ್ಸೆಗೊಂಡರು. ಭರತನ ತಮ್ಮಂದಿರೆಲ್ಲರೂ ಅಣ್ಣನೊಡನೆ ಹೋರಾಟಕ್ಕೆ ನಿಲ್ಲಲಾಶಿಸದೆಯೆ ರಾಜ್ಯವನ್ನು ತೊರೆದು ತಂದೆಯ ಬಳಿ ಸಾರಿ ದೀಕ್ಷೆಗೊಂಡರು. ಆದರೂ ಬುದ್ಧಿ ಬರಲೇ ಇಲ್ಲ ಭರತನಿಗೆ. ಬಲತಾಯ ಮಗನಾದ ಬಾಹುಬಲಿಯನ್ನೂ ಕೆಣಕಿದನು. ಅವನು ಭರತನ ಸಾಹಸ ಕಾರ್ಯಗಳನ್ನು ಗಮನಕ್ಕೆ ತಂದುಕೊಳ್ಳದೆಯೆ ಹಾಸ್ಯಮಾಡಿ ನಕ್ಕು ಸೆಟೆದು ನಿಂತನು. ಯುದ್ಧವು ಅನಿವಾರ್ಯವಾಗಿ ಮೇಲೆರಗಿತು. ಮಂತ್ರಿಗಳ ಸಲಹೆಗೆ ಅವರಿಬ್ಬರೂ ಕಟ್ಟುಬಿದ್ದು ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧಗಳಲ್ಲಿ ಪಾತ್ರ ತೆಗೆದುಕೊಂಡರು. ಎಲ್ಲದರಲ್ಲಿಯೂ ಅಣ್ಣನಾದ ಭರತನೇ ಸೋತುಹೋದನು. ಕುಸ್ತಿಯಲ್ಲಿ ಭರತನನ್ನು ಬಾಹುಬಲಿಯು

ಎತ್ತಿಹಿಡಿದು ಹಿರಿಯಣ್ಣನೆಂಬ ಸದ್ಭಾವನೆಯಿಂದ ನೆಲಕ್ಕಪ್ಪಳಿಸದೆ ಮೆಲ್ಲನೆ ಕೆಳಕ್ಕಿಳಿಸಿದನು. ಷಟ್ಖಂಡ ವಿಜೇತೃವಾದ ತನಗೆ ಸೋಲುಂಟಾಯಿತೆಂಬ ಅವಮಾನದಿಂದ ತಮ್ಮನ ಮೇಲೆಯೇ ಚಕ್ರವನ್ನುಪಯೋಗಿಸಿದನು. ಅದು ಬಾಹುಬಲಿಯನ್ನು ಘಾತಿಸದೆಯೆ ಪ್ರದಕ್ಷಿಣೆ ಮಾಡಿ ಪಕ್ಕದಲ್ಲಿ ನಿಂತಿತು. ಭರತನು ನಾಚಿಕೆಯಿಂದ ತಲೆತಗ್ಗಿಸಿದನು. ಅಣ್ಣನಲ್ಲಿ ದೊಡ್ಡ ಅವಿನಯವೆಸಗಿದೆನಲ್ಲಾ ಎಂದು ಪಶ್ಚಾತ್ತಪ್ತನಾಗಿ 'ಸೋದರರೊಳ್ ಸೋದರರಂ ಕಾದಿಸುವ' ರಾಜ್ಯ ಬೇಡವೆಂದು ಬಾಹುಬಲಿಯು ವಿರಕ್ತನಾದನು. ತಂದೆ ಕೊಟ್ಟ ರಾಜ್ಯವನ್ನು ತ್ಯಜಿಸಿ 'ಮರೆವುದೆನ್ನ ದುರ್ವಿಳಸನಮಂ' ಎಂದು ಹೇಳಿ ತಪಸ್ಸಿಗೆ ಹೋದನು.

ಭರತನು ಪಶ್ಚಾತ್ತಪ್ತನಾಗಿ 'ನೀನೊರ್ಬನೈ ಮನುವಂಶಕ್ಕೆ ಲಲಾಮನಪ್ಪನುಜನೈ, ಬೇಡಮ್ಮ, ನೀನುಂ ತಪೋವನಮಂ ಸಾರ್ವುದುಂ, ಆನಾರ್ಗೆ ಮೆಱೆವೆಂ ಮತ್ತಾಜ್ಯ ಸಾಮ್ರಾಜ್ಯಮಂ' ಎಂದು ಹೇಳಿ ತಮ್ಮನ ಕಾಲಿಗೆ ಬಿದ್ದು ಕಣ್ಣೀರು ಕರೆಯಲಾರಂಭಿಸಿದನು. ಆದರೆ ಬಾಹುಬಲಿಯು ತನ್ನ ನಿಶ್ಚಯವನ್ನು ತಿಳಿಸಿ ತಂದೆಯನ್ನು ಸಾರಿ ದೀಕ್ಷೆವಹಿಸಿದನು.

ಭರತನ ರಾಜ್ಯದಲ್ಲಿ ತಾನು ಕಾಲೂರಿ ನಿಂತಿರುವೆನಲ್ಲಾ ಎಂಬ ಮನಃಕಷಾಯ ಕಾರಣವಾಗಿ ಬಾಹುಬಲಿಗೆ ಕೇವಲಜ್ಞಾನ ಹುಟ್ಟಲಿಲ್ಲ. ಆಗ ಭರತನು ಹೋಗಿ ಕಾಲ್ಗೆರಗಿ ಈ ನೆಲ ನಿನ್ನದು, ನೀನು ಕೊಟ್ಟದ್ದರಿಂದ ನನಗೆ ಬಂತು. ಬೇರೊಂದನ್ನೂ ನೆನೆಯದೇ ಆತ್ಮಧ್ಯಾನ ಮಾಡೆಂದು ಬಿನ್ನವಿಸಿಕೊಂಡನು. ಆಗ ಬಾಹುಬಲಿಗೆ ಕೇವಲಜ್ಞಾನ ಬಂದಿತು. ದೇವತೆಗಳೆಲ್ಲರೂ ಪೂಜಿಸಿದರು. ಭರತನೂ ಕೇವಲಿಯನ್ನು ಪೂಜಿಸಿ ರಾಜಧಾನಿಗೆ ಬಂದನು. ಪಟ್ಟಾಭಿಷಿಕ್ತನಾಗಿ ಧರ್ಮದಿಂದ ರಾಜ್ಯವಾಳಿದನು.

ಆದಿತೀರ್ಥಂಕರನ ಪರಿನಿರ್ವಾಣಾನಂತರ ಭರತ ಮೊದಲಾದವರೆಲ್ಲರೂ ಮುಕ್ತಿಗೆ ಸಂದರು.

**ಜೈನಧರ್ಮದ ಆಸ್ತಿಕತೆ**

ಋಷಭನು ಶ್ರೀವಿಷ್ಣುವಿನ ಅವತಾರವೆಂದೂ ಭರತನು ಯೋಗಿಶ್ರೇಷ್ಠನೆಂದೂ ವಿಖ್ಯಾತರಾಗಿದ್ದಾರೆ. ಋಷಭನ ಚರಿತ್ರೆ ಮತ್ತು ಉಪದೇಶಗಳಲ್ಲಿ ಜೈನಧರ್ಮದ ಸಾರಗಳು ಸ್ವಲ್ಪ ಮಟ್ಟಿಗೆ ವ್ಯಕ್ತವಾಗುತ್ತಿವೆ.

ಬೌದ್ಧಧರ್ಮದಂತೆ ಜೈನಧರ್ಮವೂ ವೈದಿಕಧರ್ಮೋಕ್ತವಾದ ಯಜ್ಞಯಾಗಾದಿ ಗಳನ್ನು ಎದುರಿಸಿ ನಿಂತ ಸಂಸ್ಕಾರಕ ಧರ್ಮ, ವೈದಿಕಧರ್ಮಾವಲಂಬಿಗಳಲ್ಲಿ ಕೆಲವರು ಈ ಬಗೆಯ ಬುದ್ಧಿಯುಳ್ಳವರಿರಬಹುದು. ಕಾಲಕ್ರಮೇಣ ಈ ಭಾವನೆಗಳು ಬಲಿತು ವೈದಿಕ ಯಜ್ಞಕರ್ಮಗಳನ್ನೊಪ್ಪದ ಅಹಿಂಸಾಪ್ರಧಾನವಾದ ಆದರೆ ತೀವ್ರ ತಪಶ್ಚರ್ಯೆಯನ್ನುಸುರುವ ಜೈನಧರ್ಮವು ತಲೆಯೆತ್ತಿರಬೇಕು.

ವೇದಗಳನ್ನೂ ಅವುಗಳಿಂದ ಪ್ರತಿಪಾದ್ಯವಾದ ಕರ್ಮಗಳನ್ನೂ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕರ್ತನಾದ ಈಶ್ವರನನ್ನೂ ಒಪ್ಪದ ಕಾರಣ ಜೈನಮತವು ನಾಸ್ತಿಕಮತವೆಂದು ಖ್ಯಾತವಾಗಿದೆ. ಆದರೆ ಜೀವನಂಟು, ಅವನು ಕರ್ಮಕ್ಷಯವನ್ನು ಮಾಡಿಕೊಂಡು

ಸಂಸಾರನಿರ್ಮುಕ್ತನಾಗಿ ಮುಕ್ತಿ ಪಡೆಯುತ್ತಾನೆ, ಪಡೆಯಬೇಕು ಎನ್ನುವ ಜೈನಧರ್ಮವನ್ನು ನಾಸ್ತಿಕಧರ್ಮ ಎನ್ನುವುದರಲ್ಲಿ ಔಚಿತ್ಯವಿಲ್ಲ.

## ಹಿರಿಯರ ಧರ್ಮಸಮನ್ವಯ ದೃಷ್ಟಿ

ಧರ್ಮಾವಲಂಬನೆಗೆ ಸಾಧಕವಾದ ಮುಖ್ಯತತ್ವಗಳಲ್ಲಿ ಜೈನಮತಕ್ಕೂ ವೈದಿಕ ಮತಕ್ಕೂ ಭಿನ್ನತೆಯಿದ್ದರೂ ಸಾಮ್ಯವುಂಟು. ಇದನ್ನರಿತೇ ಧರ್ಮಸಮನ್ವಯಪ್ರಜ್ಞೆಯುಳ್ಳ ಹಿರಿಯರು,

**ಆಕಾಶಾತ್ ಪತಿತಂ ತೋಯಂ ಯಥಾಗಚ್ಛತಿ ಸಾಗರಂ**
**ಸರ್ವದೇವನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥**

ಆಕಾಶದಿಂದ ಬಿದ್ದ ನೀರು ಸಾಗರವನ್ನು ಸೇರುವಂತೆ ದೇವತೆಗಳೆಲ್ಲರಿಗೂ ಮಾಡಿದ ನಮಸ್ಕಾರವು ಕೇಶವನನ್ನು ಕೂಡುವುದು ಎನ್ನುತ್ತಾರೆ. ಈ ಸಮಬುದ್ಧಿಯನ್ನೇ ಮುಂದಿಟ್ಟುಕೊಂಡು

**ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ**
**ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।**
**ಅರ್ಹನ್ ಇತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ**
**ಸೋಽಯಂ ವೋವಿದಧಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ ॥**

ನಮ್ಮೆಲ್ಲರ ವಾಂಛಿತ ಫಲಗಳನ್ನು ಸಲ್ಲಿಸುತ್ತಿರುವ ಏಕೈಕ ವ್ಯಕ್ತಿಯು ಕೇಶವೇಶ. ಅವನೇ ಶೈವರು ಕರೆಯುವ ಶಿವ, ವೇದಾಂತಿಗಳೆನ್ನುವ ಬ್ರಹ್ಮ, ಬೌದ್ಧರು ಹೇಳುವ ಬುದ್ಧ, ತಾರ್ಕಿಕರೆನ್ನುವ ಕರ್ತೃ, ಜೈನರೆನ್ನುವ ಜಿನ, ಮೀಮಾಂಸಕರು ಭಾವಿಸುವ ಕರ್ಮ. ಹೀಗೆ ನಮ್ಮೆಲ್ಲರ ಅಂತರಾತ್ಮನೊಬ್ಬ. ನಾವು ಅಣ್ಣತಮ್ಮಂದಿರಂತೆ ಜೀವನಯಾತ್ರೆಯನ್ನು ನಡೆಸಬೇಕಲ್ಲದೆ ಪರಸ್ಪರ ಬಡಿದಾಟದಿಂದಲ್ಲ ಎಂದು ಕೂಗಿ ಹೇಳಿದ್ದಾರೆ. ಅದೇ ಧ್ಯೇಯವನ್ನು ಮನಸ್ಸಿನಲ್ಲಿಟ್ಟು ಜೀವನ ನಡೆಸಬೇಕೆಂದು ತಿಳಿಸಲಿಕ್ಕೆ ಮೇಲಿನ ಪದ್ಯವನ್ನು ಬೇಲೂರಿನ ಚೆನ್ನಕೇಶವ ದೇವಾಲಯದ ಕಲ್ಲಿನ ಮೇಲೆ ಕೊರೆಯಿಸಿದ್ದಾರೆ.

ಮೇಲಿನ ಅಭಿಪ್ರಾಯಪ್ರದವಾದ ಜೈನವಿದ್ವಾಂಸರ ಕೆಲವು ಶ್ಲೋಕಗಳನ್ನು ಪರಿಶೀಲಿಸೋಣ.

**ಭವಬೀಜಾಂಕುರಜನನಾ ರಾಗಾದ್ಯಾಃ ಕ್ಷಯಮುಪಗತಾಯಸ್ಯ**
**ಬ್ರಹ್ಮಾವಾ ವಿಷ್ಣುರ್ವಾ ಹರೋ ಜಿನೋ ವಾ ನಮಸ್ತಸ್ಮೈ ॥**

ಸಂಸಾರವೆಂಬ ಬೀಜಕ್ಕೆ ಮೊಳಕೆ ತರುವ ರಾಗಾದಿಗಳನ್ನು ನಾಶಪಡಿಸಿ ಕೊಂಡಿರುವವನು ಬ್ರಹ್ಮನಾಗಿರಲಿ, ವಿಷ್ಣುವಾಗಿರಲಿ, ಹರನಾಗಿರಲಿ ಅಥವಾ ಜಿನನಾಗಿರಲಿ ಅವನಿಗೆ ನನ್ನ ನಮಸ್ಕಾರಗಳು.

**ಯೋ ವಿಶ್ವಂ ವೇದವೇದ್ಯಂ ಜನನ ಜಲನಿಧೇರ್ಭಂಗಿನಃ ಪಾತದೃಶ್ವಾ**
**ಪೌರ್ವಾಪರ್ಯಾವಿರುದ್ಧಂ ವಚನಮನುಪಮಂ ನಿಷ್ಕಲಂಕಂ ಯದೀಯಂ ।**

ತಂ ವಂದೇ ಸಾಧುವಂದ್ಯಂ ಸಕಲಗುಣನಿಧಿಂ ಧ್ವಸ್ತಮೋಹದ್ವಿಷಂತಂ
ಬುದ್ಧಂ ವಾ ವರ್ಧಮಾನಂ ಶತದಲನಿಲಯಂ ಕೇಶವಂ ವಾ ಶಿವಂ ವಾ ॥

ಅವನು ಬುದ್ಧನಾಗಿರಲಿ, ವರ್ಧಮಾನನಾಗಿರಲಿ, ಕಮಲಾಸನನಾದ ಬ್ರಹ್ಮನಾಗಿರಲಿ, ಕೇಶವನಾಗಿರಲಿ, ಇಲ್ಲವೇ ಶಿವನಾಗಿರಲಿ ನನಗೆ ವಂದ್ಯ. ಏಕೆಂದರೆ ಅವನು ವಿಶ್ವದಲ್ಲಿ ತಿಳಿಯಬೇಕಾದುದನ್ನೆಲ್ಲ ತಿಳಿದವನು,ಹುಟ್ಟು ಸಾವುಗಳೆಂಬ ಕಡಲಿನ ಕೊನೆಯನ್ನು ಕಂಡವನು. ಅವನ ಮಾತುಗಳು ಪೂರ್ವಾಪರವಿರೋಧವಿಲ್ಲದುವು ಮತ್ತು ದೋಷರಹಿತವಾದುವು. ಮೋಹವೆಂಬ ಶತ್ರುವನ್ನು ಗೆದ್ದವನು, ಸಾಧುವಂದ್ಯನು ಮತ್ತು ಸಕಲ ಗುಣನಿಧಿಯು. ಹೀಗೆ ಸಕಲ ಮತಗಳ ವಿಭಿನ್ನತೆಯಲ್ಲಿ ಏಕತೆಯನ್ನು ಕಾಣುವುದು ವಿದ್ವಜ್ಜನಾದರಣೀಯ.

**ಪಂಪನ ಪುರಾಣಮಾರ್ಗ**

ನೆಗೞ್ದ ಆದಿಪುರಾಣದೊಳ್- ಅಱಿವುದು ಕಾವ್ಯಧರ್ಮಮಂ ಧರ್ಮಮುಮಂ ಎಂದು ಹೇಳಿಕೊಂಡು ಜೊತೆಜೊತೆಗೆ 'ಕಾವ್ಯಧರ್ಮ-ಧರ್ಮ'ಗಳೆರಡನ್ನೂ ಸಾಧಿಸಬೇಕೆಂಬುದು ಪಂಪನ ಪ್ರಯತ್ನವಾಗಿದೆ. ಅದರಲ್ಲಿ ನಾವು ಕಾಣುವುದು ಕಾವ್ಯಧರ್ಮಕ್ಕಿಂತ ಹೆಚ್ಚಾಗಿ ಧರ್ಮವನ್ನೆ. ಏಕೆಂದರೆ ಪಂಪನು ತೀರ್ಥಂಕರ ಚರಿತ್ರೆಯನ್ನು ಕಾವ್ಯವಸ್ತುವನ್ನಾಗಿ ಆರಿಸಿರುವುದರಿಂದ ಧರ್ಮದ ಸಂಪ್ರದಾಯಕ್ಕನುಗುಣವಾಗಿಯೇ ಬರೆಯಬೇಕಾಗಿದೆ. ತತ್ಫಲವಾಗಿ ಈ ಕಾವ್ಯದಲ್ಲಿ ಕಲ್ಪನಾಶಕ್ತಿ, ಚಮತ್ಕಾರಕರವಾದ ಕಥಾಸಂವಿಧಾನರಚನೆ ಮೊದಲಾದುವುಗಳಲ್ಲಿ ಸ್ವಾತಂತ್ರ್ಯವಿಲ್ಲ. ಇಷ್ಟೆಲ್ಲಕ್ಕೂ ಜಿನಸೇನಾಚಾರ್ಯರ ಪೂರ್ವಪುರಾಣದ ಕಥಾವಸ್ತುವಿಗೆ ಪಂಪನು ಮಾರುಹೋಗಿರುವುದೇ ಕಾರಣ. ಆದರೂ ಪಂಪನ ಸ್ವತಂತ್ರ ಪ್ರತಿಭೆಯಿಂದಲೇ ಪ್ರತಿಫಲಿಸಿದ ಕಾವ್ಯಾಂಶವಿಲ್ಲದಿಲ್ಲ. ಅವನು ತನ್ನ ಅಪಾರವಾದ ಸಾಹಿತ್ಯಾನುಭವವನ್ನೂ ಲೋಕಾನುಭವವನ್ನೂ ಇಲ್ಲಿ ಮೆರೆಯಿಸಿದ್ದಾನೆ. ಇಲ್ಲಿನಂತೆ ನಿರ್ಬಂಧಗಳಿಲ್ಲದ ವಿಕ್ರಮಾರ್ಜುನವಿಜಯದಲ್ಲಿ ಅವನ ಕವಿತಾಪ್ರವಾಹವು ತಾನೇ ತಾನಾಗಿ ಹರಿದಿದೆ. ಪ್ರತಿಭೆಯ ಪರಾಕಾಷ್ಠೆಯು ಅಲ್ಲಿ ಎದ್ದು ಕಾಣುತ್ತದೆ. ಆದಿಪುರಾಣದ ನೀರಸವಾದ ವರ್ಣನೆಗಳನ್ನೂ ಧರ್ಮವಿವರಗಳನ್ನೂ ಬಿಟ್ಟರೆ ಇದೊಂದು ಉತ್ತಮಕಾವ್ಯ.

ಆದಿಪುರಾಣದ ಕಥಾನುವಾದ ಕಾರ್ಯದಲ್ಲಿ ನನ್ನ ಮಿತ್ರರಾದ ವಿದ್ವಾನ್ ಜಿ.ಆರ್. ಶ್ರೀನಿವಾಸಯ್ಯಂಗಾರರ ನೆರವು ಅತ್ಯಗಾಧವಾದದ್ದು. ಅವರ ಸಹಾಯವಿಲ್ಲದಿದ್ದರೆ ಈ ಕಾರ್ಯ ನಿರ್ವಹಿಸುವಲ್ಲಿ ಕಷ್ಟವಾಗುತ್ತಿತ್ತೇನೋ. ಪೀಠಿಕಾರಚನೆಗೆ ಸಹಾಯಕ ಗ್ರಂಥಗಳು ಮಿರ್ಜಿ ಅಣ್ಣಾರಾಯರ 'ಜೈನದರ್ಶನ'ವೂ ಮತ್ತು ಎಲ್. ಗುಂಡಪ್ಪನವರ ಆದಿಪುರಾಣದ ಪೀಠಿಕೆಗಳೂ ಮಾರ್ಗದರ್ಶಕ ದೀಪಗಳಾಗಿವೆ. ಅವುಗಳ ಬೆಳಕಿನಲ್ಲಿ ನನ್ನೀ ಕಾರ್ಯವನ್ನು ನಿರ್ವಹಿಸಿದ್ದೇನೆ. ಅದಕ್ಕಾಗಿ ನಾನು ಅವರಿಗೆ ಕೃತಜ್ಞ ಮತ್ತು ಋಣಿ.

**ಕೆ.ಎಲ್. ನರಸಿಂಹಶಾಸ್ತ್ರಿ**

# ಪ್ರಥಮಾಶ್ವಾಸಂ

ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ[೧] ಜಗತ್ಸ್ವಾಮಿ ಸಂ
ದಾದಿಬ್ರಹ್ಮನಗಾಧಬೋಧನಿಳಯಂ ದುರ್ವಾಸಂಸಾರವಿ
ಚ್ಛೇದೋಪಾಯನಿಯುಕ್ತಸೂಕ್ತಿ ವೃಷಮಾರ್ಗಾಗ್ರೇಸರಂ[೨] ಪಾಪಹೃ
ತ್ಪಾದಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ ೧

ಪೆಸೆದೆಂಟುಂ[೩] ಕಿಲ್ಬಿಷಂಗಳ್ಕಿಡೆ ಕಿಡದ ಗುಣಂ ಪೊರ್ದೆ ಬಂದೆಂಟುಮಾದಂ
ತಣಿವಂ ಕೈಕೊಂಡಮೂರ್ತರ್ಚರತನುಸಮಾಕಾರರುದ್ಧೂತಲೇಪರ್
ಪ್ರಣುತರ್ನಿತ್ಯರ್ಜಗನ್ಮಂಗಳನಿಳಯರನಂತರ್ತ್ರಿಲೋಕೈಕಚೂಡಾ
ಮಣಿಗಳ್ಸಿದ್ಧರ್ ಸ್ವಕೀಯಪ್ರಭುತೆಯನೆಮಗಂ ಮಾಳ್ಕೆತಿಪ್ರೀತಿಯಿಂದಂ ೨

ಮೂವತ್ತಾಱು ಗುಣಂಗಳ್ತಮಗಮರ್ದಿರೆ ಸಂದೈದುಮಾಚಾರದೊಳ್ಸ
ದ್ಭಾವಂ ಕೈಗಣ್ಮೆ ಶಿಷ್ಯಾಚರಣವಿಧಿಗಳಂ ತಿರ್ದಿ ಕಾರುಣ್ಯದಿಂದಂ
ಸಾವದ್ಯಂ ಸಾರದಂತಾಗಿರೆ ನಿಯಮಿಸುವಾಚಾರ್ಯರಿನ್ನೆಮ್ಮನೇನೋ
ದಾವಂ ತಳ್ತಟ್ಟಿದಂ[೪]ತೋಸರಿಸಿ ಕಳೆಗೆ ಸಂಸಾರಕಾಂತಾರದಿಂದಂ ೩

೧. ಜಗದೊಡೆಯನೂ ಪ್ರಖ್ಯಾತನೂ ಆದ ಆದಿಬ್ರಹ್ಮನು[1] ನಮಗೆ ಮುಕ್ತಿಶ್ರೀ ಸುಖದ ಲಾಭವನ್ನು ದಯೆಗೈಯಲಿ. ಅವನ ಗುಣವ್ರಾತವು ದೇವೇಂದ್ರನಿಂದಲೂ ಮುನೀಂದ್ರರಿಂದಲೂ ವಂದಿತವಾಗಿದೆ[2]. ಆಳವಾದ ಜ್ಞಾನಕ್ಕೆ ಅವನು ಆಕರ. ಅನಿವಾರ್ಯವಾದ ಸಂಸಾರದ ವಿನಾಶಕ್ಕೆ ಯೋಗ್ಯವೆನಿಸಿದ ಸೂಕ್ತಿಯುಳ್ಳವನು. ಧರ್ಮಮಾರ್ಗಗಳಲ್ಲಿ ಮುಂದಾದವನು. ಅವನ ಪಾದಕಮಲವು ಪಾಪವಿನಾಶಕವಾದುದು. ೨. ಶ್ರೀ ಸಿದ್ಧರು ಸ್ವಪ್ರಭುತ್ವವನ್ನು ಅತಿಪ್ರೀತಿಯಿಂದ ನಮ್ಮ ಮೇಲೆ ನೆಲೆಗೊಳಿಸಲಿ. ಅವರಲ್ಲಿ ಎಂಟು ಕಿಲ್ಬಿಷಗಳೂ ನಾಶಗೊಂಡಿವೆ. ಕೆಡದ ಎಂಟು ಗುಣಗಳು ಬಂದು ಅವರಲ್ಲಿ ಆಕೃತಿಯುಳ್ಳವರು, ಪಾಪವನ್ನು ಕಳೆದುಕೊಂಡವರು, ಸ್ತುತ್ಯರೂ ನಿತ್ಯರೂ ಅನಂತರೂ ಮೂರು ಲೋಕಗಳಲ್ಲಿಯೂ ಅತಿಶ್ರೇಷ್ಠರೆಂದು ಖ್ಯಾತಿವೆತ್ತವರೂ ಆಗಿದ್ದಾರೆ. ೩. ಮೂವತ್ತಾರು ಗುಣಗಳು ಆಚಾರ್ಯರಲ್ಲಿ ನೆಲಸಿದ್ದುವು. ಪ್ರಖ್ಯಾತವಾದ ಐದು ಆಚಾರಗಳಲ್ಲಿ ಅವರಿಗೆ ಸದ್ಭಾವವು (ಶ್ರದ್ಧೆ) ಮೂಡಿತ್ತು. ಶಿಷ್ಯರ ನಡವಳಿಕೆಗಳ ಕ್ರಮವನ್ನು ತಿದ್ದಿ ದಯೆಯಿಂದ ದೋಷಗಳು ಸಮೀಪಕ್ಕೆ ಸುಳಿಯದಂತೆ ನೋಡಿಕೊಂಡು ಸನ್ಮಾರ್ಗದಲ್ಲಿ ನಡೆಯಿಸತಕ್ಕವರು ಅವರು. ಪಾಪವೆಂಬ ಕಾಳ್ಗಿಚ್ಚು ಹತ್ತಿಕೊಂಡು ಉರಿಯುವಂತೆ

---

೧ ಖ.ಗ.-ಬ್ರಾತಂ  ೨ ಗ-ಸ್ವರಂ  ೩ ಗ-ದೆಂಮುಂ  ೪ ಕ.ಗ-ತಳ್ತಳುರದಂ

1 ಆದಿಬ್ರಹ್ಮ = ಆದಿತೀರ್ಥಂಕರನಾದ ವೃಷಭದೇವ.

2 ದೇವೇಂದ್ರನೆಂಬ ಮುನೀಂದ್ರನಿಂದ ವಂದಿತ ಎಂದೂ ಇನ್ನೊಂದು ಅರ್ಥ. ದೇವೇಂದ್ರ ಮುನಿಯು ಪಂಪನ ಗುರುವೆಂದು ತಿಳಿಯಬರುತ್ತದೆ.

ಹೇಯಂಗಳ್ ಖಳಕರ್ಮಬಂಧನಕರ[1]ಕ್ರೋಧಾದಿಗಳ್ ಮತ್ತುಪಾ[2]
ದೇಯಂಗಳ್ ದುರಿತೇಂಧನಾನಳಲಸದ್ರತ್ನತ್ರಯಂಗಳ್ ಸುಖೋ
ಪಾಯಂಗಳ್ಗಡಿವೆಂದು ಭವ್ಯಜನಮಂ ಕಣ್ಣೂಡೆ ಕಲ್ಪಿಪ್ಪುಪಾ
ಧ್ಯಾಯರ್ಜ್ಯೋತಿಸು[3]ಗೆಮ್ಮ ಚಿತ್ತಗೃಹದೊಳ್ರತ್ನತ್ರಯಜ್ಯೋತಿಯಂ ೪

ಬಗೆಯೊಳ್ಪೊಣ್ಮೆ ದಯಾರಸಂ ಚರಿತದೊಳ್ಕೈಗಣ್ಮೆ ಚಾರಿತ್ರಮಾ
ವಗಮಾವಶ್ಯಕದೊಳ್ತಗುಳ್ದು ಪಲವುಂ ಶೀಲಂಗಳಂ ತಾಳ್ದಿ ದಂ
ದುಗಮೆಂದುಂ[4] ತಮಗಾಗದಂತೆಸಗುವರ್ಸರ್ವೋತ್ತಮರ್ಸರ್ವಸಾ
ಧುಗಳೋರಂತೆ ಕಟಿಲ್ಚುಗೆಮ್ಮ ಮನದಿಂ ದುರ್ಮೋಹ[5]ಸಂದೋಹಮಂ ೫

ಕಾರ್ಯಮೆಮಗಿದುವೆ ಶಿವಪದ
ಪರ್ಯಂತಂಬರಮಮೋಘಮುದ್ಧರಿಸುಗೆ ತಾ
ತ್ಪರ್ಯದಿನರ್ಹತ್ಸಿದ್ಧಾ
ಚಾರ್ಯೋಪಾಧ್ಯಾಯಸರ್ವಸಾಧುಗಳೆಮ್ಮಂ ೬

ವರದಂ ಪದ್ಮಾಂಕಿತಂ ತೋಳೆರಡು ನಿಶಿತವಜ್ರಪ್ರಭಾಭಾಸುರಂ ತೋ
ಳೆರಡುದ್ಯಚ್ಚಕ್ರಚಕ್ರೋಜ್ಜ್ವಳತರತರಳ[6]ಜ್ಯೋತಿ ತೋಳೆಂಟಗುರ್ವಾ
ಗಿರೆ ಬಣ್ಣಂ ಪೊನ್ನ ಬಣ್ಣಕ್ಕೆಣೆಯೆನೆ ಗರುಡಂ ವಾಹಮಾಗಿರ್ಪ ಚಕ್ರೇ
ಶ್ವರಿ ಭಾಸ್ವದ್ಧರ್ಮಚಕ್ರಾಕ್ರಮಿಗಳನಲೆದಾಟಕ್ಕೆ ವಿಕ್ರಾಂತದಿಂದಂ ೭

ಸಂಸಾರವೆಂಬಡವಿಯಿಂದ ಆ ಆಚಾರ್ಯರು ನಮ್ಮನ್ನುಳಿಸಿ ರಕ್ಷಿಸಲಿ. ೪. "ದುಷ್ಟವಾದ ಕರ್ಮಗಳೂ ಬಂಧನಕ್ಕೊಳಪಡಿಸುವ ಕ್ರೋಧಾಧಿಗಳೂ ಹೇಯವಾದುವು. ಪಾಪವೆಂಬ ಕಟ್ಟಿಗೆಯನ್ನು ಸುಡುವ ಬೆಂಕಿಯಾಗಿ ಬೆಳಗುತ್ತಿರುವ ರತ್ನತ್ರಯಗಳು ಉಪಾದೇಯಗಳು ಮತ್ತು ಸುಖೋಪಾಯಗಳು" ಎಂದು ಭವ್ಯಜನರ ಮೇಲೆ ಕಣ್ಣಲ್ಲಿ ಕಣ್ಣಿಟ್ಟು ಎಚ್ಚರಿಸುತ್ತಿರುವ ಉಪಾಧ್ಯಾಯರು ನಮ್ಮ ಮನವೆಂಬ ಮನೆಯಲ್ಲಿ ರತ್ನತ್ರಯಗಳ ಬೆಳಕನ್ನು ಬೆಳಗಿಸಲಿ. ೫. ತಮಗೆಂದೂ ಕಷ್ಟವೊದಗದಂತೆ ನೋಡಿಕೊಳ್ಳುವ ಸರ್ವೋತ್ತಮರೆನಿಸಿದ ಸಕಲಸಾಧುಗಳೂ ನಮ್ಮ ಮನದಿಂದ ಭ್ರಾಂತಿಸಮೂಹವನ್ನು ದೂರಗೊಳಿಸಲಿ. ಅವರ ಮನಸ್ಸಿನಲ್ಲಿ ದಯೆಯು ಹೊರಹೊಮ್ಮಿತು. ತಮ್ಮ ನಡವಳಿಕೆಗಳಲ್ಲಿ ಚಾರಿತ್ರವನ್ನು ಹೆಚ್ಚಿಸಿಕೊಂಡರು. ಸಂಸಾರಬಾಧೆ ತಮಗಾಗದಂತೆ (ಸಾಮಯಿಕ, ತೀರ್ಥಂಕರಸ್ತುತಿ, ಮತ್ತು ವಂದನೆ ಮುಂತಾದ) ಆವಶ್ಯಕತೆಗಳಿಂದ ಶೀಲಗಳನ್ನು ದೊರಕಿಸಿಕೊಂಡರು. ೬. ಮುಕ್ತಿಯು ಸಿಗುವವರೆಗೆ ನಮಗಿದುವೆ ಅಮೋಘವಾದ ಕಾರ್ಯ. ಈ ದೃಷ್ಟಿಯಿಂದಲೇ ಅರ್ಹನ್, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸರ್ವಸಾಧುಗಳೂ ನಮ್ಮನ್ನುದ್ಧರಿಸಲಿ. ೭. ಗರುಡವಾಹನೆಯಾದ ಚಕ್ರೇಶ್ವರಿಯು[1] ಧರ್ಮಚಕ್ರದ ಎದುರಾಳಿಗಳನ್ನು ಪರಾಕ್ರಮದಿಂದ ಅಲೆದಾಡಿಸಲಿ. ಅವಳೆರಡು ತೋಳು ಕ್ರಮವಾಗಿ ವರದ ಪದ್ಮಮುದ್ರೆಗಳಿಂದ

---

೧. ಕ.ಖ-ನರಕ ೨. ಕ-ತಳ್ತುಪಾ ೩ ಗ -ದ್ಯೋತಿಸು ೪ ಕ.ಗ.-ಮೊಂದುಂ ೫ ಗ-ದೆಂದುಂ ಮೋಹ ೬. ಗ-ತರಳತರ

1. ಈ ದೇವತೆಗೆ ೧೨ ತೋಳುಗಳಿವೆ.

ಪರಶುಫಳಾಕ್ಷಸೂತ್ರವರದೋಚಿತಚಿಹ್ನಚತುರ್ಭುಜಂ ಮನೋ
ಹರವೃಷಲಾಂಛನಂ ವೃಷಮುಖಂ ವೃಷವಾಹನನಿಂದುಕುಂದಸುಂ
ದರ[೧]ತರವರ್ಣನೀವೃಷಭನಾಥಕಥಾರಚನೋಕ್ತಿಯಲ್ಲಿ ಮಾ
ಟ್ಕೆರದೆಮಗಾಗಳುಂ[೨] ವೃಷಭಯಕ್ಷನವಿಘ್ನಮನಃಪ್ರವೃತ್ತಿಯಂ ೮

ಪರಮಜಿನೇಂದ್ರವಾಣಿಯ[೩] ಸರಸ್ವತಿ ಬೇಱದು ಪೆಣ್ಣರೂಪ[೪]ಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ
ದರಿಸುವ ಭವ್ಯಕೋಟಿಗೆ ನಿರಂತರಸೌಖ್ಯಮನೀವುದಾನದ
ರ್ಕೆರೆದಪೆನಾ ಸರಸ್ವತಿಯೆ ಮಾಟ್ಕೆಮಗಿಲ್ಲಿಯೆ ವಾಗ್ವಿಳಾಸಮಂ ೯

ಅನುಯೋಗಕುಸುಮಪಾದಪ
ಮನೋಕನಯಲತಿಕಮಂಗಫಲಮಹಿಜಂ ಸ
ದ್ವನಜವನಮೆಮಗೆ ವಿಶ್ರಮ[೫]
ವನಮಕ್ಕತಿವಿಶ್ರುತಶ್ರುತಸ್ಕಂಧವನಂ ೧೦

ಕೂಡಿವೆ. ಮತ್ತೆರಡು ತೋಳುಗಳು ಹರಿತವಾದ ವಜ್ರಾಯುಧಗಳ ಪ್ರಭೆಗಳಿಂದ ಭೂಷಿತವಾದುವು. ಚಕ್ರೇಶ್ವರಿಯ ಉಳಿದ ಮತ್ತೆಂಟು ತೋಳುಗಳು ಚಕ್ರವರ್ತಿಯ ಚಕ್ರಗಳ ಹೊಳಪಿನ ಜ್ಯೋತಿಗಳಿಂದ ಭಯಂಕರ. ಅವಳ ಬಣ್ಣವು ಸುವರ್ಣದ ವರ್ಣಕ್ಕೆಣೆ. ೮. ವೃಷಭನಾಥನ ಕಥಾರಚನೆಯಲ್ಲಿ ವೃಷಭಯಕ್ಷನು ನಮಗೆ ಎಂದೂ ಎಡರೊದಗಿಸದ ಮನಃಪ್ರವೃತ್ತಿಯನ್ನುಂಟುಮಾಡಲಿ. ಅವನ ನಾಲ್ಕು ಭುಜಗಳು ಕೊಡಲಿ (ಪರಶು), ಫಲ, ಜಪಮಾಲೆ ಮತ್ತು ವರದಮುದ್ರೆಗಳಿಂದ ಕೂಡಿವೆ. ಅವನು ಮನಃಪ್ರೀತಿದಾಯಕವಾದ ಧರ್ಮಧ್ವಜದಿಂದ ಭೂಷಿತ. ಅವನು ವೃಷಭಮುಖ ಮತ್ತು ವೃಷಭವಾಹನ. ಅವನಿಗೆ ಚಂದ್ರನಂತೆಯೂ ಕುಂದಪುಷ್ಪದಂತೆಯೂ ಸುಂದರವಾದ ವರ್ಣವುಂಟು. ೯. ಉತ್ಕೃಷ್ಟ ನೆನಿಸಿದ ಜಿನೇಂದ್ರನ ಮಾತೇ ಸರಸ್ವತಿ. ಅದು ಹೆಣ್ಣಿನ ರೂಪದಿಂದ ಬೇರೆಯಾಗಿ ತೋರುತ್ತಿಲ್ಲ. ಅದನ್ನರಿತೋದುವ, ಕೇಳುವ, ಪೂಜಿಸುವ ಮತ್ತು ಆದರಿಸುವ ಭವ್ಯಜನಕ್ಕೆ ಸತತವಾಗಿ ಸೌಖ್ಯವನ್ನು ಕೊಡುವುದು. ಈ ಜಿನೇಂದ್ರವಾಣಿಯು ನಮಗೆ ವಾಕ್ಸಂಪತ್ತನ್ನು ಕರುಣಿಸಲೆಂದು ನಾನದನ್ನು ಬೇಡಿಕೊಳ್ಳುವೆನು. ೧೦. ಅನುಯೋಗಗಳೆಂಬ ಪುಷ್ಪಿತ ವೃಕ್ಷಗಳಿಂದಲೂ, ಅನೇಕ ನಯಗಳೆಂಬ ಬಳ್ಳಿಗಳಿಂದಲೂ, ಅಂಗಗಳೆಂಬ ಫಲಭರಿತ ಪಾದಪಗಳಿಂದಲೂ, ಸಜ್ಜನರೆಂಬ ಕಮಲವನಗಳಿಂದಲೂ ಕೂಡಿದ ಪ್ರಸಿದ್ಧವಾದ ಶ್ರುತಸ್ಕಂಧವನವು[1] ನಮಗೆ ವಿಶ್ರಾಂತಿಸ್ಥಾನವಾಗಿ ಪರಿಣಮಿಸಲಿ.

---

೧ ಖ-ಸಾಂದರ ೨ ಖ-ಳ್ಕೆಮಗಿರದಾಗಳುಂ ೩ ಖ-ವಾಣಿಯೆ ೪ ಕ.ಗ-ರೂಪು ೫ ಕ-ವಿಶ್ರುತ

1. ಅನುಯೋಗ= ದ್ವಾದಶಾಂಗಸೂತ್ರಗಳ ನಾಲ್ಕು ವಿಭಾಗಗಳು

ನಯ = ನೈಗಮ ಮುಂತಾದ ಏಳು ನಯಗಳು

ಅಂಗ = ಶ್ರುತದ ದ್ವಾದಶಾಂಗಗಳು

ಶ್ರುತಸ್ಕಂಧ = ಗಣಧರರು ರಚಿಸಿದ ಜೈನಶಾಸ್ತ್ರ

ಶ್ರೀಮತ್ಸಮಂತಭದ್ರ
ಸ್ವಾಮಿಗಳ ಜಗತ್ಪ್ರಸಿದ್ಧ ಕವಿಪರಮೇಷ್ಠಿ
ಸ್ವಾಮಿಗಳ ಪೂಜ್ಯಪಾದ
ಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಂ ೧೧

ಆರ್ಯನುತಗೃಧ್ರಪಿಂಛಾ
ಚಾರ್ಯ ಜಟಾಚಾರ್ಯ ವಿಶ್ರುತಶ್ರುತಕೀರ್ತ್ಯಾ
ಚಾರ್ಯಪುರಸ್ಸರಮಪ್ಪಾ
ಚಾರ್ಯಪರಂಪರೆಯೆ ಕುಡುಗೆ ಭವ್ಯೋತ್ಸವಮಂ ೧೨

ಎಮಗೆ ಮಲಧಾರಿಸಿದ್ಧಾಂ
ತಮುನೀಶ್ವರಚರಣಸರಸಿಜಾತಂ ದೇವೇಂ
ದ್ರಮುನಿಪದಾಬ್ಜಂ ಜಯನಂ
ದಿಮುನಿಕ್ರಮಕಮಳಮೀಗೆ ಬೋಧೋದಯಮಂ ೧೩

ಮುನಿಜನದೋದಿಸಿದೋಜೆಯೊ
ಳೆನುವದಿಪುದಿದೊಂದೆ[೧] ಕೊಂಡಕುಂದಾನ್ವಯನಂ
ದನವನಶುಕಮೆಂದೆನಗಿನಿ
ಸನುಗ್ರಹಂಗೆಯ್ಗೆ ಕರುಣದಿಂ ಮುನಿನಿವಹಂ ೧೪

೧೧. ಸಮಂತಭದ್ರಸ್ವಾಮಿಗಳ, ಪ್ರಸಿದ್ಧರಾದ ಕವಿಪರಮೇಷ್ಠಿಸ್ವಾಮಿಗಳ ಮತ್ತು ಪೂಜ್ಯಪಾದಸ್ವಾಮಿಗಳ ಪಾದಗಳು ನಮಗೆ ಮೋಕ್ಷವನ್ನು ಅನುಗ್ರಹಿಸಲಿ. ೧೨. ಆರ್ಯಸ್ತುತರಾದ ಗೃಧ್ರಪಿಂಛಾಚಾರ್ಯರೂ (ಉಮಾಸ್ವಾತಿಗಳು), ಜಟಾಚಾರ್ಯರೂ, ವಿಖ್ಯಾತರಾದ ಶ್ರುತಕೀರ್ತ್ಯಾಚಾರ್ಯರೇ ಮೊದಲಾದ ಆಚಾರ್ಯ ಪರಂಪರೆಯು ನಮಗೆ "ಭವ್ಯೋತ್ಸವ"ವನ್ನು ನೀಡಲಿ. ೧೩. ಮಲಧಾರಿ ಮುನೀಶ್ವರನ ಅಡಿದಾವರೆಯೂ ದೇವೇಂದ್ರಮುನಿಯ ಅಡಿದಾವರೆಯೂ ಜಯನಂದಿಮುನಿಯ ಪಾದಕಮಲವೂ ನಮಗೆ ಜ್ಞಾನೋದಯವನ್ನು ಮಾಡಲಿ. ೧೪. ಮುನಿಜನರೋದಿಸಿದ ಕ್ರಮದಿಂದಲೇ ಉಚ್ಚರಿಸುವುದು. ಕೊಂಡಕುಂದ[1]ವಂಶದ ನಂದನವನದ ಗಿಣಿಯ ಕಾರ್ಯ ಎಂದು ತಿಳಿದು ನನಗೆ ಮುನಿಗಳ ಗುಂಪು ಕರುಣದಿಂದ ಅನುಗ್ರಹಿಸಲಿ.

---

೧ ಕ.-ದೊಂದು

1. ಕೊಂಡಕುಂದ ಅಥವಾ ಕುಂದಕುಂದ ಎಂಬ ಆಚಾರ್ಯರು ಜೈನಪರಂಪರೆಯಲ್ಲಿ ಸುಪ್ರಸಿದ್ಧರು. ತಾನು ಅವರ ವಂಶದವನೆಂದು ಪಂಪನು ಇಲ್ಲಿ ಸೂಚಿಸುವಂತೆ ಕಾಣುತ್ತದೆ.

ಪರಮಜಿನಮಾಲೆ ವರಗಣ
ಧರಮಾಲೆ ಮುನೀಂದ್ರಮಾಲೆ ಮುನಿಮಾಲೆ ನಿರಂ
ತರಮೀಗೆ ಭವ್ಯಮಾಲೆಗೆ
ಪರಾರ್ಥ್ಯಗುಣರತ್ನಮಾಲೆಯಂ ದಯೆಯಿಂದಂ ೧೫

ತಮಮಂ ದ್ಯುಮಣಿಮಯೂಖೋ
ದ್ಗಮಮಲೆವವೊಲಲೆಗೆ ಜಗದ ಮಿಥ್ಯಾತ್ವತಮ
ಸ್ತಮಮನಕಳಂಕದೇವ
ಪ್ರಮಾಣರತ್ನಪ್ರದೀಪರಶ್ಮಿಕಳಾಪಂ ೧೬

ಮೃದುಪದಗತಿಯಿಂ ರಸಭಾ
ವದ ಪೆರ್ಚಿಂ ಪಣ್ಯವನಿತೆವೋಲ್[1] ಕೃತಿ ಸೌಂದ
ರ್ಯದ ಚಾತುರ್ಯದ ಕಣಿಯೆನೆ
ವಿದಗ್ಧ ಬುಧಜನದ ಮನಮನಲೆಯಲೆ ವೇಡಾ[2] ೧೭

ಕಿವಿಯಿಂ[3] ಬಗೆವುಗುವೊಡೆ ಕೊಂ
ಕುವೆತ್ತ ಪೊಸನುಡಿಯೆ ಪುಗುಗುಮುಳಿದುದು ಸಜುಸ್ಸೆ
ತವಚಜನೆ ಮಾಡಿ ಸಜುಸ್ಸೆ
ತುವೋಕುಮೇಂ ಬಗೆಯ ಬಟ್ಟೆಯಂ ಮುಟ್ಟುಗುಮೇ ೧೮

೧೫. ಉತ್ಕೃಷ್ಟರೆನಿಸಿದ ಜಿನೇಂದ್ರರ ಸಮೂಹವೂ ಶ್ರೇಷ್ಠರಾದ ಗಣಧರರ ಗುಂಪೂ ಮುನೀಂದ್ರಸಮೂಹವೂ ಮುನಿಗಳ ಗುಣವೂ ಸತತವಾಗಿ ಭವ್ಯಜನರ ಗುಂಪಿಗೆ ಅನರ್ಘ್ಯವಾದ ಗುಣರತ್ನಮಾಲೆಯನ್ನು ದಯೆಗೈಯಲಿ. ೧೬. ಸೂರ್ಯನ ಕಿರಣಗಳ ಉದಯವು ಕತ್ತಲೆಯನ್ನು ಬಡಿದೋಡಿಸುವಂತೆ ಜಗದ ಮಿಥ್ಯಾತ್ವವೆಂಬ ಕತ್ತಲೆಯನ್ನು ಅಕಲಂಕದೇವನ ಪ್ರಮಾಣಗಳೆಂಬ ರತ್ನದೀಪಗಳ ಕಿರಣಸಮೂಹವು ಕಳೆಯಲಿ. ೧೭. ಮೃದುವಾದ ನಡಗೆಗಳಿಂದಲೂ ಹಾವಭಾವಗಳ ಪೆರ್ಚಿನಿಂದಲೂ ಕೂಡಿರುವ ಪುಣ್ಯವನಿತೆಯಂತೆ ಮೃದುಪದಸಂಚಾರದಿಂದಲೂ ರಸಭಾವಗಳ ಆಧಿಕ್ಯದಿಂದಲೂ ಈ ಕೃತಿ(ಕಾವ್ಯ)ಯು ಸೌಂದರ್ಯ ಚಾತುರ್ಯಗಳಿಗೆ ಗಣಿಯಾಗಿದೆ. ಇದು ರಸಿಕರಾದ ವಿದ್ವಜ್ಜನರ ಮನವನ್ನು ಸೆಳೆಯದೆ ಇದ್ದೀತೇ? ೧೮. ಕಿವಿಯ ಮೂಲಕ ಮನಸ್ಸನ್ನು ಮುಟ್ಟುವುವು ಕೊಂಕುವೆತ್ತ ಪೊಸನುಡಿ (ವಕ್ರೋಕ್ತಿ)ಗಳು ಮಾತ್ರ. ಉಳಿದುದು ಕಂದರದ ಪೊಳೆ. ಆ ಹೊಳೆ ಬೇಸರವನ್ನುಂಟುಮಾಡಿ ಸುಮ್ಮನೆ ಹರಿದುಹೋಗುವುದಲ್ಲದೆ ಮನದ

೧ ಕ.-ಪುಣ್ಯವನಿತೆಯೊಲ್ ೨ ಖ-ನಲೆಯಲ್ವೇಡಾ ೩ ಗ-ಕಿವಿಗಿಂ

ಮೃದುಮಧುರವಚನರಚನೆಯೊ
ಳು[೧]ದಾತ್ತಮರ್ಥಪ್ರತೀತಿಯಂ ಕೇಳ್ವ ಜನ
ಕ್ಕಿದಿರೊಳ್ಕು[೨]ಡದಂದದು[೩] ಕ
ಬ್ಬದೊಳಿರ್ದುಂ ಕವಿಯ ಮನದೊಳಿರ್ದಂತೆ ವಲಂ[೪] ೧೯

ಕವಿತಾರಹಸ್ಯಮಂ ಸ
ತ್ಕವಿಯಱಿಗುಮನೇಡಮೂಕನೇಡಂ ಜಡನೆಂ
ಬವನಱಿಗುಮೆ ವಿಟನಱಿಗುಂ
ಕುವಿಟಂ ಸ್ತ್ರೀರತರಹಸ್ಯದೊಳಗಱಿದಪನೇ ೨೦

ಭಾಷಾವಿದರ್ಕವಿತ್ವವಿ
ಶೇಷಜ್ಞರ್ನಿಕಷರಪ್ಪೊಡಪ್ಪುದು ಸಭೆಯೊಳ್
ಮಾಷಮುಖದಂತೆ[೫] ದೋಷಗ
ವೇಷಣಪರರಪ್ಪರೆಂದೊಡದು ತೆಗಟಲ್ತೇ ೨೧

ಧಿಷಣರ ಕೃತಿಗಳೊಳೆಸೆವಭಿ
ಲಷಿತಗುಣಂಗಳನೆ ಬಿಸುಟು ಮಾತ್ಸರ್ಯಮಹಾ
ವಿಷಮಮತಿಯಿಂದೆ ದೋಷಾ
ವಿಷಮನೆ[೬] ಪೊರ್ದಿರ್ಪುವಲ್ತೆ ಕುಕವಿಬಕಂಗಳ್ ೨೨

ದಾರಿಯನ್ನು ಮುಟ್ಟುವುದೇ? ೧೯. ಮೃದುವೂ ಮಧುರವೂ ಆದ ವಚನ ರಚನೆಯಲ್ಲಿ ಉದಾತ್ತವಾದುದು ಕೇಳುವ ಜನಕ್ಕೆ ನೇರವಾಗಿ ಅರ್ಥಪ್ರತೀತಿಯನ್ನು ಮಾಡಿಸದಿದ್ದಲ್ಲಿ ಅದು[1] ಕಾವ್ಯದಲ್ಲಿದ್ದರೂ ಕವಿಯ ಮನಸ್ಸಿನಲ್ಲಿದ್ದಂತೆಯೇ ಸರಿ! ೨೦. ಕವಿತೆಯ ರಹಸ್ಯವನ್ನು ಸತ್ಕವಿಯು ಮಾತ್ರ ಅರಿಯಬಲ್ಲನು. ಕಿವುಡನಾದ ಮೂಕ, ಕಿವುಡ ಮತ್ತು ಜಡರು ಅದನ್ನರಿಯಬಲ್ಲರೇ? ಸ್ತ್ರೀಯ ರತರಹಸ್ಯವನ್ನು ರಸಿಕನಾದ ವಿಟನಲ್ಲದೆ ಮತ್ತಾರು ತಿಳಿಯಬಲ್ಲರು? ೨೧. ಭಾಷಾವಿಶಾರದರೂ ಕವಿತಾವಿಶಿಷ್ಟತೆಯನ್ನು ಮನಗಂಡವರೂ ಸಭೆಯಲ್ಲಿ ಕವಿತೆಯ ಗುಣಮಟ್ಟವನ್ನರಿಯಲು ತೊಡಗುವುದು ಯೋಗ್ಯವೇ ಸರಿ. ಅವಿವೇಕಿಗಳ ಹಾಗೆ ದೋಷಾನ್ವೇಷಣೆಯಲ್ಲಿ ತೊಡಗುವುದು ತೆಗಳೇ ಸರಿ. ೨೨. ಪ್ರಜ್ಞಾವಂತರಾದ ವಿದ್ವಾಂಸರ ಕೃತಿಗಳಲ್ಲಿ ಎದ್ದು ಕಾಣುವ "ಅಭಿಲಕ್ಷಿತ ಗುಣಂ"ಗಳನ್ನೇ ಗಣನೆಗೆ ತಂದುಕೊಳ್ಳದೆಯೆ, ಮಾತ್ಸರ್ಯದುರಾಗ್ರಹಗಳಿಂದ ಕುಕವಿಗಳೆಂಬ ಬಕಪಕ್ಷಿಗಳು ತಮಗೆ ಪ್ರಿಯವಾದ ದೋಷವನ್ನೇ ಅರಸುತ್ತವೆಯಲ್ಲವೆ?

---

೧ ಖ-ಯನು ೨ ಖ-ದಿರ್ಗೊಳಕು; ದಿಱಕೊಳಕು ೩. ಕ-ದಂದುಂ ೪ ಕ-ವೊಲಂ ೫ ಕ-ಮಾಷಮುಖರಂತೆ; ಗ-ಮೇಷಮುಖದಂತೆ. ೬ ಖ-ಮಹಾ । ವಿಷಮತೆಯಿಂ ಪೊಸಯಿಸಿ ತಾಂ। ವಿಷಮನೆ.....

1. 'ಉದಾತ್ತಂ' ಎಂದರೆ ಯಾವುದು? ಅರ್ಥಪ್ರತೀತಿಯನ್ನು ಕೊಡತಕ್ಕದ್ದು ವಚನರಚನೆ. ಆದ್ದರಿಂದ ಈ ಪದ್ಯದ ಮೊದಲಿನ ಸಾಲು 'ಮೃದುಮಧುರ ವಚನವಿರಚನೆ' ಎಂದು ಇರಬಹುದು.

*ಕೋಗಿಲೆಯ ಸರವರಣ್ಯದೊ
ಳೇಗೆಯ್ವುದೊ ಮೂರ್ಖಜಡಜನಾರಣ್ಯದೊಳಿಂ
ಪೋಗಡಿಸಿದ ಕವಿಶಬ್ದಮ
ದೇಗೆಯ್ವುದರಣ್ಯರುದಿತಮದು ಬಗೆವಾಗಳ್ ೨೩.

ಇರು ಮರುಳೆ ಶುಷ್ಕವೈಯಾ
ಕರಣಂಗಂ ಶುಷ್ಕತಾರ್ಕಿಕಂಗಂ ಬೆಳ್ಳ
ಕ್ಕರಿಗಂಗಂ ವಿಷಯಮೆ ಕಾ
ವ್ಯರತ್ನಮತಿಚತುರಕವಿಕದಂಬಕವಿಷಯಂ ೨೪

ಗುರು ದೇವೇಂದ್ರಮುನೀಂದ್ರನಿಂದ್ರನಮಿತಂ ದೇವಂ ಕಥಾನಾಯಕಂ
ಪುರುದೇವಂ ಕಥೆಯುಂ ತದಾದಿಪುರುಷಪ್ರಸ್ತುತ್ಯಜನ್ಮಾಳಿಬಂ
ಧುರಮೆಂದಂದೆ ಮದೀಯವಾಗ್ವಿಭವವಿನ್ಯಾಸಂ ಬಲಂಬೆತ್ತುದಿ
ನ್ನರು ಬಲ್ಲಿತ್ತಜ ಕೋಡು ಕೂರಿತದನಂತಿಂತುತೆನಲ್ತ[1]ರ್ಕಮೇ ೨೫

ವಿದಿತಂ ಪ್ರಾತೀತಿಕಂ[2] ಕೋಮಳಮತಿಸುಭಗಂ ಸುಂದರಂ ಸೂಕ್ತಿಗರ್ಭಂ
ಮೃದುಸಂದರ್ಭಂ ವಿಚಾರಕ್ಷಮಮುಚಿತಪದಂ ಶ್ರವ್ಯಮವ್ಯಾಕುಳಂ ವ್ಯಾ
ಪ್ತದಿಗಂತಂ ಕಾವ್ಯಮೆಂದನ್ವಿತಸುಕವಿಜನಂ ಮೆಚ್ಚೆ ನಿಚ್ಚಂ ಮನಂಗೊ
ಳ್ವುದಜೆಂದಂ ನೆಟ್ಟನೀತಂ ಸುಕವಿಜನಮನೋಮಾನಸೋತ್ತಂಸಹಂಸಂ ೨೬.

೨೩. ಕೋಗಿಲೆಯ ಕಮನೀಯವಾದ ಕೂಗು ಕಾಡಿನಲ್ಲೇನು ಮಾಡಬಲ್ಲುದು? ಮೂರ್ಖರೂ ಜಡರೂ ಆದ ಜನರಿಂದ ತುಂಬಿದ ಅರಣ್ಯದಲ್ಲಿ ಇಂಪುಗೆಟ್ಟ ಆ ಕವಿಯ ಕವಿತೆಯು ಏನನ್ನು ತಾನೆ ಮಾಡಬಲ್ಲುದು? ಅದು ಅರಣ್ಯರುದಿತಕ್ಕೆ ಸಮಾನ. (ಈ ಪದ್ಯವು ಕೆಲವು ಪ್ರತಿಗಳಲ್ಲಿಲ್ಲ) ೨೪. ಮರುಳೆ, ಇರು! ಒಣವೈಯಾಕರಣನಿಗೂ ಒಣ ತಾರ್ಕಿಕನಿಗೂ ಗುಂಪನಿಗೂ ಕಾವ್ಯವು ವಿಷಯವಾಗದು. ಅದು ಅತಿಚತುರರಾದ ಕವಿಗಳ ಗುಂಪಿಗೆ ಮಾತ್ರ ವಿಷಯವಾಗಬಲ್ಲದು. ೨೫. ದೇವೇಂದ್ರಮುನೀಂದ್ರನು ಗುರು. ಇಂದ್ರ ವಂದಿತನಾದ ಪುರುದೇವನು ಕಥಾನಾಯಕ. ಪುರುದೇವನೇ ಮೊದಲಾದವರ ಜನ್ಮಾಂತರ ಕಥೆಗಳಿಂದ ಬಂಧುರವಾದುದೀ ಕಥೆ. ಇವೇ ನನ್ನ ವಾಗ್ವಿಭವಕ್ಕೆ ನೆರವಾದುವು. ಬಲಿಷ್ಠರ ಕೋಡು ಉನ್ನತಗೊಂಡಿತು. ಅದನ್ನು ಹಾಗೆ ಹೀಗೆ ಎನ್ನಲಾಗದು. (ಪ್ರಗಲ್ಭವಾದ ಬಲಿಷ್ಠರ ಮಾತನ್ನು ಉದಾಸೀನ ಮಾಡಲಾಗದು). ೨೬. ಈ ಕಾವ್ಯವು ಎಲ್ಲರಿಗೂ ತಿಳಿದುದು. ವ್ಯಂಗ್ಯಾರ್ಥಗರ್ಭಿತವಾದುದು, ಕೋಮಲವೂ ಸುಭಗವೂ ಆದುದು. ಸುಂದರವಾದ ಸೂಕ್ತಿಗಳಿಂದಲೂ, ಮೃದುಸಂದರ್ಭಗಳಿಂದಲೂ ಸಂಗತವಾದದ್ದು. ವಿಮರ್ಶೆಗೆ ಯೋಗ್ಯ ವಾದುದು. ಉಚಿತ ಪದಗಳಿಂದ ಕೂಡಿ ಶ್ರವ್ಯವೂ ಮಧುರವೂ ಪ್ರಸಾದಗುಣಯುಕ್ತವೂ ಆದದ್ದೂ, ದೋಷರಹಿತವಾದುದು. ಇದರ ಕೀರ್ತಿಯು ದಿಗಂತವನ್ನು ಮುಟ್ಟಿದೆ ಎಂದು

* ಈ ಪದ್ಯವು ಬಿ.ಗ.ಗಳಲ್ಲಿಲ್ಲ. ೧ ಕ-ನಂತಿಂತೆಂದನಲ್ಲ ೨ ಗ-ವಿದಿತ ಪ್ರಾತೀತಿಕಂ.

ಇದು ನಿಚ್ಚಂ ಪೊಸತರ್ಣವಂಬೊಲತಿಗಂಭೀರಂ ಕವಿತ್ವಂ ಜಗ
ಕ್ಕದಱಿಂದಂ ಕವಿತಾಗುಣಾರ್ಣವನಿಳಾಲೋಕೈಕವಿಖ್ಯಾತನ
ಭ್ಯುದಯಪ್ರಾಪ್ತಿನಿಮಿತ್ತಮುತ್ತಮಯಶಂ ಸಂಸಾರದೊಳ್ಸಾರಮ
ಪ್ಪುದಱಿಂ[೧] ಧರ್ಮಮದಂ ನಿಮಿರ್ಚುವುದಱಿಂ ಸಂಸಾರಸಾರೋದಯಂ ೨೭

ಅತಿಸುಭಗೆಗೆ ಸಂದಂ ಸರ
ಸ್ವತಿಗೀತನ ಲಲಿತವಾಗ್ವಿಳಾಸಮೆ ದಲಲಂ[೨]
ಕೃತಿಯವೊಲೆಸೆದಪುದು ಜಗ
ತ್ಪ್ರತೀತನೀತನೆ ಸರಸ್ವತೀಮಣಿಹಾರಂ ೨೮

*ಕದಳೀಗರ್ಭಶ್ಯಾಮಂ
ಮೃದುಕುಟಿಲಶಿರೋರುಹಂ ಸರೋರುಹವದನಂ
ಮೃದುಮಧ್ಯಮತನು ಹಿತಮಿತ
ಮೃದುವಚನಂ ಲಲಿತಮಧುರಸುಂದರವೇಷಂ ೨೯

ಈ ಕಾವ್ಯದ ಮಹತ್ವವನ್ನು ಕವಿಜನರೆಲ್ಲ ಮೆಚ್ಚಿಕೊಂಡಿದ್ದಾರೆ. ನಿತ್ಯವೂ ಮನಸ್ಸನ್ನು ವಶಪಡಿಸಿಕೊಳ್ಳುತ್ತದೆ. ಆದಕಾರಣ ಸುಕವಿಜನರ ಮನಸ್ಸೆಂಬ ಮಾನಸಸರಸ್ಸಿನಲ್ಲಿ ಉತ್ಕೃಷ್ಟವಾದ ಹಂಸದಂತೆ ಬೆಳಗುತ್ತಿರುವ ಈ ಕವಿಯು ಸುಕವಿಜನಮನೋಮಾನಸೋತ್ತಂಸಹಂಸ. ೨೭. ಇದು ನಿತ್ಯನೂತನವಾದುದು. ಸಮುದ್ರದಂತೆ ಈ ಕವಿತ್ವವು ಜಗಕ್ಕೆ ಅತಿಗಂಭೀರ. ಆದ್ದರಿಂದಲೇ ಇವನು (ಈ ಕವಿ) ಕವಿತಾಗುಣಾರ್ಣವನೆಂದು ಪ್ರಖ್ಯಾತ. ಇವನು ಲೋಕೈಕವಿದಿತ ಅಭ್ಯುದಯಪ್ರಾಪ್ತಿಗೂ ಉತ್ತಮ ಯಶಸ್ಸಿಗೂ ಪಾತ್ರ[1]. ಸಂಸಾರದಲ್ಲಿ ಸಾರವಾದದ್ದು ಧರ್ಮ. ಅದನ್ನು ಹರಡುವುದರಿಂದ ಈ ಕವಿ ಸಂಸಾರಸಾರೋದಯ. ೨೮. ಅತಿಸುಭಗಳೂ ಪ್ರಖ್ಯಾತಳೂ ಆದ ಸರಸ್ವತಿಗೆ ಈ ಕವಿಯ ಲಲಿತವಾಗ್ವಿಲಾಸವು ದಿಟವಾಗಿಯೂ ಅಲಂಕಾರದಂತೆಸೆಯುವುದು. ಲೋಕಪ್ರಸಿದ್ಧನಾದೀತನು ಸರಸ್ವತಿಯು ಮಣಿಹಾರದಂತೆ ಮೆರೆಯುತ್ತಿದ್ದಾನೆ (ಈತನು ಸರಸ್ವತೀಮಣಿಹಾರ). ೨೯. ಪಂಪನು ಬಾಳೆಯ ದಿಂಡಿನಂತೆ ನಸುಗಪ್ಪಾದ[2] ಮೈಬಣ್ಣವುಳ್ಳವನು. ಮೃದುವೂ ವಕ್ರವೂ ಆದ ಕೂದಲುಗಳುಳ್ಳವನು. ಅವನ ಮುಖವು ಕಮಲದಂತೆಯೂ ದೇಹವು ಮಧ್ಯಮದರ್ಜೆಯಲ್ಲಿಯೂ ಇದ್ದುವು. ಅವನ ಮಾತುಗಳು ಹಿತಮಿತವಾಗಿದ್ದುವು. ವೇಷವು ಸುಂದರವೂ ಮಧುರವೂ ಆಗಿತ್ತು.

---

೧ ಕ.-ಮಪ್ಪುದು ತಾಂ. ೨ ಕ.-ಸದಲಂ

* ಕ. ಪದ್ಯಗಳು ೩೧, ೩೨, ೩೦, ೨೯ ಈ ಕ್ರಮದಲ್ಲಿವೆ. ಗ. ಪದ್ಯಗಳು ೩೧, ೩೨, ೨೯, ೩೦ ಈ ಕ್ರಮದಲ್ಲಿವೆ.

1. ಅಭ್ಯುದಯಪ್ರಾಪ್ತಿನಿಮಿತ್ತಂ, ಉತ್ತಮಯಶಂ-ಇವೆರಡನ್ನು ಧರ್ಮಕ್ಕೆ ವಿಶೇಷಣವಾಗಿಯೂ ಅನ್ವಯಿಸಬಹುದು.

2. ವಿದ್ವಾಂಸರು ಹೀಗೆಯೇ ಅರ್ಥವನ್ನು ಹೇಳುತ್ತಿದ್ದಾರೆ. ಆದರೆ ಬಾಳೆದಿಂಡು ಕಪ್ಪಾಗಿರುವುದೆ? 'ಬಾಳೆದಿಂಡಿನಂತೆ ಸುಂದರವಾದ ಗೌರವರ್ಣದವನು' ಎಂದು ವಿವಕ್ಷಿತವಾಗಿರಬಹುದು.

ವತ್ಸಕುಲತಿಲಕನಭಿಜನ
ವತ್ಸಳನಭಿಮಾನಮೂರ್ತಿ ಸುಕವಿಯಶೋನಿ
ರ್ಮತ್ಸರನಮೃತಮಯೋಕ್ತಿ ಶ
ರತ್ಸಮಯಸುಧಾಂಶುವಿಶದಕೀರ್ತಿವಿತಾನಂ ೩೦

ವನಿತಾಕಟಾಕ್ಷಕುವಲಯ
ವನಚಂದ್ರಂ ಯುವತಿಜಘನಕಾಂಚೀರತ್ನಂ
ಸ್ತನಭರವಿನಮ್ರಗಣಿಕಾ
ಸ್ತನತಟ[೧]ಹಾರಂ ಸರಸ್ವತೀಮಣಿಹಾರಂ ೩೧

ಕೇರಳವಿಟೀಕಟೀಸೂ
ತ್ರಾರುಣಮಣಿ ಮಲಯಯುವತಿದರ್ಪಣನಾಂಧ್ರೀ
ನೀರಂಧ್ರಬಂಧುರಸ್ತನ
ಹಾರನುದಾರಂ ಸರಸ್ವತೀಮಣಿಹಾರಂ ೩೨

ದುಂದುಭೀಗಭೀರನಿನದಂ
ದುಂದುಭಿಸಂವತ್ಸರೋದ್ಭವಂ ಪ್ರಕಟಯಶೋ
ದುಂದುಭಿ ಸಿಂಹಾಸನಸುರ
ದುಂದುಭಿಪತಿಚರಣಕಮಳಭೃಂಗಂ ಪಂಪಂ ೩೩

೩೦. ಪಂಪನು ವತ್ಸಕುಲಕ್ಕೆ ತಿಲಕಪ್ರಾಯನು. ಅಭಿಜನರನ್ನು ಪ್ರೀತಿಸತಕ್ಕವನು. ಅವನು ಅಭಿಮಾನಮೂರ್ತಿ. ಕುಕವಿಗಳ ಯಶಸ್ಸಿನ ಮೇಲೆ ಅವನಿಗೇನೂ ಮಾತ್ಸರ್ಯವಿಲ್ಲ. ಅವನ ಮಾತುಗಳು ಅಮೃತಕ್ಕೆಣೆಯಾದವು. ಅವನು ಶರತ್ಕಾಲದ ಚಂದ್ರನಂತೆ ಶುಭ್ರವಾದ ಕೀರ್ತಿಯುಳ್ಳವನು. ೩೧. ವನಿತೆಯರ ಕಟಾಕ್ಷಗಳೆಂಬ ಕುಮುದವನಕ್ಕೆ ಅವನು ಚಂದ್ರ. ಯುವತಿಯರ ಸೊಂಟದ ಮುಂಭಾಗಕ್ಕೆ ಕಾಂಚೀರತ್ನ. ಸ್ತನಗಳ ಭಾರದಿಂದ ಬಾಗಿದ ಗಣಿಕೆಯರ ಸ್ತನತಟಕ್ಕೆ ಹಾರಪ್ರಾಯ, ಈ ಸರಸ್ವತೀ ಮಣಿಹಾರ. ೩೨. ಕೇರಳದ ವಿಟವನಿತೆಯರ ಸೊಂಟದ ದಾರಕ್ಕೆ ಪಂಪನು ಅರುಣಮಣಿ. ಮಲಯ ತರುಣಿಯರ ನೋಟದ ಕನ್ನಡಿ, ಆಂಧ್ರಿಯರ ಸಾಂದ್ರಸುಂದರ ಸ್ತನಗಳಿಗೆ ಹಾರ. ಉದಾರನಾದ ಪಂಪನು ಸರಸ್ವತಿಗೆ ಮಣಿಹಾರದಂತೆಸಗುತ್ತಾ ಸರಸ್ವತೀ ಮಣಿಹಾರನಾಗಿದ್ದಾನೆ. ೩೩. ಅವನ ಧ್ವನಿಯು ದುಂದುಭಿಯ ಸ್ವನದಂತೆ ಗಭೀರ. ಅವನು ದುಂದುಭಿ[1] ಸಂವತ್ಸರದಲ್ಲಿ ಜನಿಸಿದವನು. ಅವನ ಯಶೋದುಂದುಭಿಯು ಮೊಳಗುತ್ತಿರುವುದು. ಸಿಂಹಾಸನಕ್ಕೂ ಸುರದುಂದುಭಿಗೂ ಒಡೆಯನಾದ ಜಿನನ ಪಾದಪದ್ಮದ ದುಂಬಿ ಪಂಪ.

---

೧ ಕ.-ಸ್ತನಮಣಿ.

1. ಇದು ಕ್ರಿ.ಶ. ೯೦೨ಕ್ಕೆ ಸರಿಹೋಗುವುದೆಂದು ತಿಳಿದುಬರುತ್ತದೆ.

ಎಂದಿಂತು ತಮ್ಮ ತಮ್ಮಣು
ಗಿಂದಂ ಪೆಸರಿಟ್ಟು ಬುಧಸಮೂಹಮಿದಂ ಪೇ
ೞೆಂದೊಡೆ ಪೇೞಲ್ಕಾಂ ಬಗೆ
ದಂದೆನಿದೆನ್ನಳವೆ ಗಣಧರೋದಿತಚರಿತಂ ೩೪

ಪುರುದೇವಾದಿಜಿನೇಂದ್ರಮಾಳೆ ಗಣಭೃತ್ಸಂತಾನಮೆಂದೀ ಪರಂ
ಪರೆಯಿಂ ವಿಶ್ರುತವೀರಸೇನಜಿನಸೇನಾಚಾರ್ಯಪರ್ಯಂತಮಾ
ಗಿರೆ ಬಂದೀ ಕಥೆ ಗುಣ್ಪುವೆತ್ತುದವರುಂ ಜ್ಞಾನರ್ಧಿಸಂಪನ್ನರೆಂ
ದಿರದಾಂ ಧೃಷ್ಟನೆ[1]ನೀ ಕಥಾಬ್ಧಿಯುಮನೇನೀಸಲ್ಕನಂದಂದೆನೋ ೩೫

ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗೞ್ತೆ ಲಾಭಮೆಂ
ಬಿವೆ ಫಲಮಿಂದ್ರಪೂಜೆ ಭುವನಸ್ತುತಮಪ್ಪ ನೆಗೞ್ತೆ ಮುಕ್ತಿ ಸಂ
ಭವಿಸುವ ಲಾಭಮೆಂಬಿವೆ ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ
ರವೆ ಪೆಱರೀವುದೇಂ ಪೆಱರ ಮಾಡುವುದೇಂ ಪೆಱರಿಂದಮಪ್ಪುದೇಂ ೩೬

ಪೆಸರ್ಗೊಂಡಿಂದ್ರನರೇಂದ್ರವಂದ್ಯನನೊಂದಲ್ದತ್ತಾನುಮೋರೊರ್ಮೆ ಚಿಂ
ತಿಸಿದೊಂಗಂ ಪವಣಿಲ್ಲ ಪುಣ್ಯಮೆನೆ ಪೂಣ್ಕೊಳ್ವಿಂದಮೋರಂತೆ ಭಾ
ವಿಸಿ ತಾಂ ತನ್ಮಯನಾಗಿ ತಚ್ಚರಿತಮಂ ಕಾವ್ಯಂಗಳೊಳ್ಪೊಡೆ ಬ
ಣ್ಣಿಸಿ ಪೇೞ್ವಾತನ ಕರ್ಮನಿರ್ಜರೆಯಸಂತಿಂತುಂತೆನಲ್ಬರ್ಕುಮೇ[2] ೩೭

೩೪. ಹೀಗೆ ತಮ್ಮ ತಮ್ಮ ಪ್ರೀತಿಗನುಗುಣವಾಗಿ ಹೆಸರಿಟ್ಟು ವಿದ್ವಜ್ಜನಸಮೂಹವು ಆದಿಪುರಾಣವನ್ನು ಹೇಳೆಂದು ಕೇಳಿಕೊಂಡಿತು. ಆದ್ದರಿಂದ ನಾನು ಅದನ್ನು ಹೇಳಲು ಮನವಿತ್ತೆನು. ಗಣಧರೋಕ್ತವಾದ ಈ ಚರಿತ್ರೆಯನ್ನು ಹೇಳಲು ನನಗೆ ಸಾಮರ್ಥ್ಯ ಉಂಟೆ? ೩೫. ಪುರುದೇವಾದಿ ಜಿನೇಂದ್ರರು ಗಣಧರರು ಇವರ ಪರಂಪರೆಯಿಂದ ವೀರಸೇನಾಚಾರ್ಯರ ಮತ್ತು ಜಿನಸೇನಾಚಾರ್ಯರ ಪರ್ಯಂತವಾಗಿ ಬಂದ ಈ ಕಥೆಯು ಅಗಾಧವಾದುದು. ಮೇಲಿನ ಈ ಆಚಾರ್ಯರೆಲ್ಲರೂ ಜ್ಞಾನಸಂಪದ್ಭರಿತರು. ನಾನು ಈ ಕಥಾಸಮುದ್ರವನ್ನು ಈಜಲೇಕೆ ಮನತೊಟ್ಟೆನೋ? ನಾನು ಉದ್ಧತನೇ ಸರಿ. ೩೬. ಕವಿತೆಯಿಂದ ಕೈಸೇರುವ ಫಲಗಳು ಯಾವುವು? ಗೌರವ, ಕೀರ್ತಿ, ಲಾಭ-ಇವೇ ಫಲಗಳು, ಜಿನೇಂದ್ರಸ್ತುತಿಯಿಂದ ಇಂದ್ರಕೃತವಾದ ಪೂಜೆಯೂ, ಲೋಕಸ್ತುತವಾದ ಪ್ರಸಿದ್ಧಿ (ನೆಗೞ್ತೆ)ಯೂ ಮುಕ್ತಿಯೆಂಬ ಲಾಭವೂ ತಮ್ಮಷ್ಟಕ್ಕೆ ತಾವೇ ಕೈಸೇರುವುವಲ್ಲವೆ? ಅಂದ ಮೇಲೆ ಇತರರು ಕೊಡುವುದೇನು? ಇತರರು ಮಾಡುವುದೇನು? ನಿಶ್ಚಯವಾಗಿ ಇತರರಿಂದಿವು ಕೈಸೇರಬಲ್ಲುವೇ? ೩೭. ಹೆಸರಾಂತ ಇಂದ್ರನರೇಂದ್ರರಿಂದ ವಂದಿತನಾದ ಆದಿತೀರ್ಥಂಕರನನ್ನು ಒಂದು ಬಾರಿ ಒರಲ್ದು ಧ್ಯಾನಿಸಿದರೂ ಅಸದಳವಾದ ಪುಣ್ಯವು ಕೈಸೇರುವುದು. ಅದನ್ನೊಂದೇ ತೆರನಾಗಿ ಭಾವಿಸಿಕೊಂಡು ತನ್ಮಯನಾಗಿ ಆತನ ಚರಿತ್ರೆಯನ್ನು ಕಾವ್ಯಗಳಲ್ಲಿ ತೊಡಗಿಸಿದವನ ಕರ್ಮವು ಕರಗಿಹೋಗುವುದು. ಅದನ್ನು ಹಾಗೆ ಹೀಗೆಂದು

---

೧ ಬ-ದಿರದೊೞ್ದೃಷ್ಟನೆ. ೨ ಕ.ಗ.-ತಿಂತೆಂದು ಪೇೞ್ವಿಂತುಟೇ.

ಇದುವೆ ಸುಕವಿಪ್ರಮೋದ
ಪ್ರದಮಿದುವೆ ಸಮಸ್ತಭವ್ಯಲೋಕಪ್ರಮುದ
ಪ್ರದಮೆನೆ ನೆಗೞ್ದಾದಿಪುರಾ
ಣದೊಳಱಿವುದು ಕಾವ್ಯಧರ್ಮಮುಮಂ ಧರ್ಮಮುಮಂ ೩೮

ನೆಱಪಂ ತಾಳ್ದಿದಪಾಸ್ತದುರ್ನಯತಮೋಬಂಧಂ ಶ್ರುತಸ್ಕಂಧವಾ
ದಱಿಂದಂ ಗಣನಾಯಕರ್ಕಱಿ ಭವ್ಯಶ್ರೇಣಿಗವ್ಯಾಜದಿಂ
ದಱಿಯ[೧]ಲ್ನಾಲ್ಕನುಯೋಗಮಾದುದದಱೊಳ್ಪೂರ್ವಾನುಯೋಗಾಬ್ಧಿಯಿಂ[೨]
ಪೊಱಪೊಣ್ಮಿತ್ತದು ವೇಳೆಯಂತೆ ಕಥೆ ಲಂಘೋದ್ದಾಮವೀಚೀಚಯಂ ೩೯

ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ ಮಹಾ
ಷ್ಟಾಪದಶೈಲದೊಳ್ವಿಜಿತಘಾತಿಚತುಷ್ಟಯನತ್ಯುದಾರರಾ
ಗೋಪನತಾಮರೇಂದ್ರದನುಜೇಂದ್ರನರೇಂದ್ರಪದಂ ಸಮಸ್ತ ವಿ
ದ್ಯಾಪತಿ ನಾಭಿನಂದನಸಮುಪಾಶ್ರಿ[೩]ತಭವ್ಯಜನಾಭಿನಂದನಂ ೪೦

ಇರೆ ಹರಿಪೀಠದೊಳ್ಭರತನಾದರದಿಂ ಬೆಸಗೊಂಡುದಂ ಜಿನೇ
ಶ್ವರಮತದಿಂದಮಾ ವೃಷಭ[೪]ಸೇನಗಣಾಗ್ರಣಿ ಪೇೞ್ದುದಂ ಸವಿ
ಸ್ತರದೊಳೆ ವರ್ಧಮಾನಜಿನ[೫]ಸಂನಿಧಿಯೊಳ್ವಿಪುಳಾದ್ರಿಯೊಳ್ವಿಜಾ
ದರದೊಳೆ ಗೌತಮರ್ಮಗಧನಾಯಕನುಂ ತಿಳಿವಂತು ಪೇೞ್ದುದಂ ೪೧

ಬಣ್ಣಿಸಲು ಶಕ್ಯವೇ? ೩೮. ಕವಿಜನರ ಹೃದಯಕ್ಕೆ ನಲವನ್ನು ತರಬಲ್ಲುದೆಂದೂ ಸಮಸ್ತ ಭವ್ಯಜನಕ್ಕೆ ಸಂತೋಷದಾಯಕವಾದುದೆಂದೂ ಪ್ರಸಿದ್ಧಗೊಂಡಿದೆ ಆದಿಪುರಾಣ. ಅದರಲ್ಲಿ ಕಾವ್ಯಧರ್ಮವನ್ನೂ ಧರ್ಮವನ್ನೂ ಕಾಣಬಹುದು. ೩೯. ಶ್ರುತಸ್ಕಂಧವು ದುರ್ನಯ (ದುಸ್ಸಿದ್ಧಾಂತ)ಗಳೆಂಬ ಕತ್ತಲೆಯ ಕಟ್ಟನ್ನು ಕತ್ತರಿಸಿ ಎಸೆದಿದೆ. ಗಣಧರರು ಅದರಿಂದಾದ ಜ್ಞಾನವನ್ನು ಭವ್ಯಶ್ರೇಣಿಗೆ ಅವ್ಯಾಜದಿಂದೊದಗಿಸಿದರು. ನಾಲ್ಕು ಅನುಯೋಗಗಳು ಅದರಿಂದಾದುವು. ಅದರಲ್ಲಿ (ಶ್ರುತಸ್ಕಂಧದಲ್ಲಿ) ಮೊದಲನೆಯ ಅನುಯೋಗವೆಂಬ ಸಾಗರದಿಂದ ದೊಡ್ಡ ಅಲೆಗಳು ದಡವನ್ನು ಮೀರುವಂತೆ ಕಥೆಗಳು ಹೊಮ್ಮಿದುವು. ೪೦. ನಾಭಿಪುತ್ರನಾದ ವೃಷಭನು ಪಾಪಗಳನ್ನು ಪರಿಹರಿಸಿದವನು. ಧರ್ಮವನ್ನು ಪ್ರಕಾಶಪಡಿಸಿದವನು. ಮೇರುಪರ್ವತದಲ್ಲಿ ಘಾತಿಚತುಷ್ಟಯಗಳನ್ನು ಗೆದ್ದನು. ಸುರೇಂದ್ರ, ದನುಜೇಂದ್ರ, ನರೇಂದ್ರರು ಅವನಿಗೆ ಪ್ರೀತಿಯಿಂದೆರಗಿದರು. ಸಮಸ್ತವಿದ್ಯೆಗಳಿಗೂ ಅಧಿಪತಿಯಾದ ಆತನು ತನಗೆ ಶರಣಾದ ಭವ್ಯಜನರನ್ನು ಸಂತೋಷಗೊಳಿಸಿದನು. ೪೧. ಭರತನು ಸಿಂಹಾಸನದಲ್ಲಿ ಕುಳಿತಿದ್ದನು. ಅವನು ಕೇಳಿದ ಪ್ರಶ್ನೆಗಳಿಗೆ ಜಿನೇಶ್ವರನ ಮತಾನುಗುಣವಾಗಿ ವೃಷಭಸೇನ ಗಣಾಗ್ರಣಿಯು ಉತ್ತರಿಸಿದನು. ಅದನ್ನೇ ವಿಸ್ತರಿಸಿ ವರ್ಧಮಾನಜಿನಸನ್ನಿಧಿಯಲ್ಲಿ ಮಗಧನಾಯಕನಿಗೆ[1] ಗೌತಮಗಣಧರರು ವಿಪುಲಾದ್ರಿಯಲ್ಲಿ

೧ ಕ.-ಪ. ೨ ಕ-ಯಿಂ. ೩ ಕ.-ರ್ಜಿ. ೪ ಕ.-ಮತಮಾರ್ಗಮಂ. ೫ ಕ.-ಮಾನಮುನಿ.

1 ಶ್ರೇಣಿಕರಾಜನಿಗೆ.

ಪ್ರಾಣಿಹಿತಮಂ ವಿನೇಯ
ಪ್ರೀಣನಕರಮಂ ಜಗತ್ತ್ರಯಪ್ರಕಟತಕ
ಲ್ಯಾಣಮನೀ ನೆಗಳ್ದಾದಿಪು
ರಾಣಮನಪರಿಮಿತಭಕ್ತಿಯಿಂ ವಿರಚಿಸುವೆಂ ೪೨

ವಚನ॥ ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ತಿ ವರ್ಣನಮುಂ ರಾಜ್ಯರಮಣೀಯತಾಖ್ಯಾನಮುಂ ತೀರ್ಥಮಹಿಮಸಮರ್ಥನಮುಂ ಚತುರ್ಗತಿಸ್ವರೂಪ ನಿರೂಪಣಮುಂ ತಪೋದಾನವಿಧಾನವರ್ಣನಮುಂ[೧] ತತ್ಫಳಪ್ರಾಪ್ತಿಪ್ರಕಟನಮುಮೆಂದಿಂತವಯವಂ ಗಳೆಂಟಕ್ಕುಂ

ಅವಱೊಳ್ಲೋಕಮದೆಂತುಟೆಂದೊಡೆ ಸಮಂತಾವಂಗಮೆತ್ತೆತ್ತ ನೋ
ಡುತ್ತಿರ್ದಂ ನೋಡಲನಂತಮಪ್ಪ ವಿಭುವಪ್ಪಾಕಾಶಪದ್ಮಕ್ಕೆ ತಾ
ನೆ ವಲಂ ಕರ್ಣಿಕೆಯಂದಮಾಯ್ತನೆ ವಿಯನ್ಮಧ್ಯಮಂತಸ್ವಕ
ರ್ಮವಶಭ್ರಾಮ್ಯದನೇಕಜೀವನಿವಹಕ್ರೋಡೀಕೃತಾಭ್ಯಂತರಂ ೪೩

ಅದನಾದ್ಯನಿಧನ[೨]ಗುಣಯುತ
ಮದಕೃತ್ರಿಮಮದು ಮರುತ್ತ್ರಿಕಾವೇಷ್ಟಿತಮಂ
ತದು ಸುಪ್ರತಿಷ್ಠ[೩]ಕೋಪಮ
ಮದು ಜಿನಮತದೊಳ್ ದ್ವಿಸಪ್ತರಜ್ಜೂತ್ಸೇಧಂ ೪೪

ತಿಳಿಯುವಂತೆ ಹೇಳಿದರು. ೪೨. ನಾನು ಈ ಆದಿಪುರಾಣವನ್ನು ಅತಿಭಕ್ತಿಯಿಂದ ರಚಿಸುವೆನು. ಅದು ಪ್ರಾಣಿಗಳಿಗೆ ಹಿತಕರವಾದುದು. ಶಿಷ್ಯಜನರಿಗೆ ಸಂತೋಷಪ್ರದ ವಾದುದು. ಇದು ಮೂರು ಲೋಕಗಳಿಗೂ ಕಲ್ಯಾಣವನ್ನೇ ಕೋರತಕ್ಕುದು. ವ॥ ಪುರಾಣಕ್ಕೆ ಲೋಕಾಕೃತಿಯ ವರ್ಣನೆ, ದೇಶನಿವೇಶಗಳನ್ನುಪದೇಶಿಸುವುದು, ನಗರಸಂಪತ್ತಿನ ವರ್ಣನೆ, ರಾಜ್ಯಸೌಂದರ್ಯ ಕಥನ, ತೀರ್ಥಮಹಿಮೆಯನ್ನುಸುರುವುದು, ಚತುರ್ಗತಿಸ್ವರೂಪವನ್ನು ಸಾರುವುದು, ತಪೋದಾನವರ್ಣನೆ, ತತ್ಫಲಪ್ರಾಪ್ತಿ ಕಥನ-ಎಂದು ಎಂಟು ಅವಯವಗಳು ಇವೆ. ೪೩. ಅವುಗಳಲ್ಲಿ ಮೊದಲನೆಯದಾದ ಲೋಕವು ಹೇಗಿದೆಯೆಂದರೆ, ಲೋಕವು ಅನಂತವೂ ವಿಭುವೂ ಆದ ಆಕಾಶಪದ್ಮಕ್ಕೆ ಕರ್ಣಿಕೆಯೋ ಎಂಬಂತೆ ಆಕಾಶಮಧ್ಯದಲ್ಲಿ ಬೆಳಗುತ್ತದೆ. ಲೋಕದ ಮಧ್ಯಭಾಗವು ತಮ್ಮ ತಮ್ಮ ಕರ್ಮಗಳ ಕಟ್ಟಿಗೆ ಸಿಕ್ಕಿಕೊಂಡು ತೊಳಲುತ್ತಿರುವ ಜೀವಸಮೂಹಗಳಿಂದ ತುಂಬಿಹೋಗಿದೆ. ೪೪. ಆ ಲೋಕವು ಅನಾದಿ ಮತ್ತು ನಾಶವಿಲ್ಲದುದು, ಸ್ವತಃಸಿದ್ಧವಾದುದು. (ಘನೋದಧಿ, ಘನವಾತ, ತನುವಾತಗಳೆಂಬ) ಮೂರು ವಾತವೇಷ್ಟನಗಳಿಂದ ಕೂಡಿ ಸುಪ್ರತಿಷ್ಠಕ[1]ತುಲ್ಯ ವಾದದ್ದು. ಅದು ಜಿನಸಂಪ್ರದಾಯದಂತೆ ಹದಿನಾಲ್ಕು ರಜ್ಜುಗಳಷ್ಟು ಎತ್ತರವಾದದ್ದು.

೧ ಕ.-ತಪೋಧನವ್ಯಾವರ್ಣನಮುಂ. ೨ ಕ.-ದಿ ನಿಧನ. ೩ ಕ-ಸುಪ್ರತಿಷ್ಠ.

1. ಮೂರು ವಸ್ತ್ರಗಳಿಂದ ಸುತ್ತಲ್ಪಟ್ಟ ಒಂದು ಮಂಗಳದ್ರವ್ಯ

ಸ್ಫುಟವೈಶಾಖಸ್ಥಾನಂ
ಕಟಿತಟವಿನ್ಯಸ್ತಹಸ್ತಯುಗನಾಗಿ ಮಹಾ
ಲಟಹಂಬೆರಸಿರ್ದೊಪ್ಪುವ
ನಟನಾಕೃತಿ ತಾನೆ ಲೋಕ[೧]ದೊಂದಾಕಾರಂ ೪೫

ಮಾಡುವ ಕಿಡಿಸುವ ಗಸಣಿಗೆ
ನಾಡೆಯುಮದು ಪೊಱಗು ಸಹಜನಿಯತಸ್ಥಿತಿ ನಾ
ಡಾಡಿಯ ನರರ್ಗಮ ಬಗೆಯಲ್
ಕೂಡದಧಸ್ತಿರ್ಯಗೂರ್ಧ್ವಭೇದವಿಭಿನ್ನಂ ೪೬

ವಿತ್ರಸ್ತಕರ್ಮರಿಪುವ ಜ
ಗತ್ತ್ರಯದೀಪಕನ ಕಾಣ್ಕೆಗೊಳಗಾದುದು ಲೋ
ಕತ್ರಯಮದನುಕ್ರಮದೊಳ್
ವೇತ್ರಾಸನಝಲ್ಲರೀಮೃದಂಗಸಮಾನಂ ೪೭

ವ|| ಆ ಲೋಕತ್ರಯಮಧ್ಯದೊಳ್ ಮಧ್ಯಮಲೋಕಮೆಂಬ ಪೆಸರಂ ಪಡೆದು,

ಪರ್ಯಾಯಂದಪ್ಪದೇಂ ಸುತ್ತಿಱಿದುವೊ ವಳಯಾಕಾರದೊಂದೊಂದನತ್ಯಾ
ಶ್ಚರ್ಯಂ ದ್ವೀಪಾಬ್ಧಿವರ್ಗಕ್ರಮಮದುವುಮಸಂಖ್ಯಾತಮಾ ಸಂಖ್ಯೆಯೊಳ್ತಾ
ತ್ಪರ್ಯಂಗೆಯ್ವನ್ನವೆಂಬಗ್ಗಳಿಕೆಯಿನೆಸೆದತ್ತೇಕರಜ್ಜುಪ್ರಮಾಣಂ
ತಿರ್ಯಗ್ಲೋಕಂ ಸ್ವಯಂಭೂರಮಣಜಲಧಿಪರ್ಯಂತಮಂತಾಗುವನ್ನಂ ೪೮

೪೫. (ಎರಡೂ ಪಾದಗಳನ್ನು ಬಿಡಿಸಿ ಕಿಸುಗಾಲಿನಲ್ಲಿ ನಿಲ್ಲುವುದು ವೈಶಾಖಸ್ಥಾನ). ಅದರ ಹಾಗೆ ನಿಂತು ತನ್ನ ಎರಡೂ ಕೈಗಳನ್ನು ಸೊಂಟದ ಮೇಲಿಟ್ಟುಕೊಂಡು ಎದ್ದು ನಿಂತಿರುವ ಸುಂದರ ನಟನ-ಆಕೃತಿಯಂತಿದೆ ಈ ಲೋಕದ ಆಕಾರ. ೪೬. ಅದು ಸೃಷ್ಟಿ, ಲಯಗಳ ಗೊಡವೆಯಿಂದ ದೂರವಾದುದು. ಸಹಜವೂ ನಿಯತವೂ ಆದ ಸ್ಥಿತಿಯುಳ್ಳದ್ದು, ನಾಡಾಡಿ ಜನರಿಂದ ತಿಳಿಯಲಾಗದ್ದು. ಅದು ಅಧೋಲೋಕ, ತಿರ್ಯಗ್ಲೋಕ ಮತ್ತು ಊರ್ಧ್ವಲೋಕಗಳಿಂದ ಯುಕ್ತವಾದದ್ದು. ೪೭. ಕರ್ಮವೆಂಬ ಶತ್ರುವನ್ನು ಗೆದ್ದ, ಜಗತ್ತ್ರಯದೀಪಕನಾದ ಜಿನೇಶ್ವರನಿಗೆ ಗೋಚರವಾದುದು ಲೋಕತ್ರಯ. ಅಧೋಲೋಕ, ಮಧ್ಯಲೋಕ, ಊರ್ಧ್ವಲೋಕಗಳು ಕ್ರಮವಾಗಿ ವೇತ್ರಾಸನ, ಝಲ್ಲರೀ (ಒಂದು ಬಗೆಯ ವಾದ್ಯ) ಮತ್ತು ಮೃದಂಗಗಳ ಸಮಾನವಾಗಿವೆ. ವ|| ಆ ಮೂರು ಲೋಕಗಳ ನಡುವೆ ಮಧ್ಯಮಲೋಕವೆಂದು ಹೆಸರನ್ನು ಪಡೆದು, ೪೮. ತಿರ್ಯಗ್‌ಲೋಕವು ಸ್ವಯಂಭೂರಮಣವೆಂಬ ಸಮುದ್ರಪರ್ಯಂತವಾಗಿ ವಿರಾಜಿಸುತ್ತಿದೆ. ಅದು ಒಂದು ರಜ್ಜುಪ್ರಮಾಣವುಳ್ಳದ್ದು. ಅದರಲ್ಲಿರುವ ದ್ವೀಪಸಮುದ್ರಗಳು ವಲಯಾಕಾರದಿಂದ ಕ್ರಮವಾಗಿ ಒಂದನ್ನೊಂದು ಸುತ್ತುವರಿದಿವೆ. ಇವು ಅಸಂಖ್ಯಾತವಾಗಿರುವುದರಿಂದ ಅಸಂಖ್ಯಾತವೆಂಬ

---

೧ ಗ.-ಭುವನ.

ವ|| ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ, ಹೈಮವತ, ಹರಿವರ್ಷ, ವಿದೇಹ, ರಮ್ಯಕ, ಹೈರಣ್ಯವತೈರಾವಂತಗಳೆಂಬೇೞು ಪೂರ್ವಾಪರಾಯತಂಗಳುಂ, ಹೇಮಾರ್ಜುನ ತಪನೀಯವೈಡೂರ್ಯ ವಜ್ರರಜತಹೇಮಮಯಂಗಳುಂ, ಮಣಿವಿಚಿತ್ರಪಾರ್ಶ್ವಂಗಳು ಮಧಸ್ಸ್ಥೋಪರಿಮತಳಸಮಾನವಿಸ್ತಾರಂಗಳುಮಪ್ಪ ಹಿಮವನ್ಮಹಾಹಿಮವನ್ನಿಷಧನೀಳರುಗ್ಮಿ ಶಿಖರಿಗಳೆಂಬ ವರ್ಷಧರಮಹೀಧರಂಗಳಿಂದಂ ಇನ್ನೂಱು ಕನಕಗಿರಿಗಳಿಂದಂ ನಾಲ್ಕು ನಾಭಿನಗಂಗಳಿಂದಂ ಮೂವತ್ತನಾಲ್ಕು[೧] ವಿಜಯಾರ್ಧಪರ್ವತಂಗಳಿಂದಮನಿತೆ ವೃಷಭಾದ್ರಿಗಳಿಂದಂ ಚತುರ್ದಶಮಹಾವಾಹಿನಿಗಳಿಂದಮೆಸೆದು,

ಅತಿವೃತ್ತದೆ ರವಿಬಿಂಬಾ
ಕೃತಿ ಯೋಜನಶತಸಹಸ್ರವಿಷ್ಕಂಭಂ ವಿ
ಶ್ರುತಜಂಬೂವೃಕ್ಷಮದಾ
ಕೃತೀತಿಯಿಂ ನೆಗೞ್ದುದಿಳೆಗೆ ಜಂಬೂದ್ವೀಪಂ ೪೯

ವ|| ಆ ಜಂಬೂದ್ವೀಪದ ನಟ್ಟನಡುವೆ ನವನವತಿಯೋಜನಸಹಸ್ರೋತ್ಸೇಧಮುಂ ಯೋಜನಸಹಸ್ರಾವಗಾಹಮುಂ ಸರ್ವರತ್ನಜಾಂಬೂನದವೈಡೂರ್ಯಮಯಮುಂ ಅಂತರಾಂತರನಿರಂತರವಾಂತ

ಸಂಖ್ಯೆಯಲ್ಲಿ ತಾತ್ಪರ್ಯವನ್ನು ಸೂಚಿಸುತ್ತದೆಯೋ ಎಂಬಂತೆ (ಒಂದಕ್ಕಿಂತ ಒಂದು ದ್ವಿಗುಣವಾದ ದ್ವೀಪಸಮುದ್ರ ಉಳ್ಳದ್ದಾಗಿ) ಈ ಲೋಕವು ಒಂದು ಅಗ್ಗಳಿಕೆಯಿಂದ ಶೋಭಿಸುತ್ತದೆ. ವ|| ಆ ತಿರ್ಯಗ್‌ಲೋಕದ ನಡುವೆ ಲವಣಸಮುದ್ರದಿಂದ ಪರಿವೃತವಾದ ಜಂಬೂದ್ವೀಪವಿದೆ. ಅದರಲ್ಲಿ ಭರತ, ಹೈಮವತ, ಹರಿವರ್ಷ, ವಿದೇಹ, ರಮ್ಯಕ, ಹೈರಣ್ಯವತ, ಐರಾವತಗಳೆಂಬ ಏಳು ಜನಪದಗಳಿವೆ. ಅಲ್ಲದೆ ಪೂರ್ವದಿಂದ ಪಶ್ಚಿಮಕ್ಕೆ ವಿಸ್ತರಿಸಿದವೂ ಕ್ರಮವಾಗಿ ಹೇಮವರ್ಣ (ಚೀನಾಂಶುಕವರ್ಣ), ಬಿಳಿಯಬಣ್ಣ, (ಸೂರ್ಯನಂತಹ) ಚಿನ್ನದ ಬಣ್ಣ, ವೈಡೂರ್ಯದಂತಹ ನೀಲವರ್ಣ, ರಜತದಂತಹ ಬಿಳಿಯ ಬಣ್ಣ ಮತ್ತು ಹೇಮವರ್ಣಗಳುಳ್ಳವೂ ಮಣಿಗಳಿಂದ ವಿಚಿತ್ರವರ್ಣದ ಪಾರ್ಶ್ವವುಳ್ಳವೂ ಕೆಳಭಾಗ ಮೇಲ್ಭಾಗಗಳಲ್ಲಿ ಸಮಾನ ವಿಸ್ತಾರವುಳ್ಳವೂ ಆದ ಹಿಮವಾನ್, ಮಹಾಹಿಮವಾನ್, ನಿಷಧ, ನೀಲ, ರುಕ್ಮಿ, ಶಿಖರಿಗಳೆಂಬ ಆರು ವರ್ಷಧರಪರ್ವತಗಳಿವೆ. ಅಲ್ಲದೆ ಇನ್ನೂರು ಕನಕಗಿರಿಗಳಿಂದಲೂ ನಾಲ್ಕು ನಾಭಿಪರ್ವತಗಳಿಂದಲೂ ಮೂವತ್ತು ನಾಲ್ಕು ವಿಜಯಾರ್ಧಪರ್ವತಗಳಿಂದಲೂ ಅಷ್ಟೇ ಸಂಖ್ಯೆಯ (ಮೂವತ್ತುನಾಲ್ಕು) ವೃಷಭಾದ್ರಿಗಳಿಂದಲೂ ಹದಿನಾಲ್ಕು ಮಹಾನದಿಗಳಿಂದಲೂ (ಗಂಗಾ, ಸಿಂಧು, ರೋಹಿತ್, ರೋಹಿತಾಸ್ಯಾ-ಇತ್ಯಾದಿ) ಜಂಬೂದ್ವೀಪವು ಪ್ರಕಾಶಿಸುತ್ತಿದೆ. ೪೯. ಸೂರ್ಯ ಬಿಂಬದಂತೆ ಜಂಬೂವೃಕ್ಷವು ಅತಿಶಯವಾಗಿ ಗುಂಡಾಗಿತ್ತು. ಅದರ ವಿಸ್ತಾರ ಒಂದು ಲಕ್ಷ ಯೋಜನ. ತತ್ಫಲವಾಗಿ ಈ ದ್ವೀಪವು ಜಂಬೂದ್ವೀಪವೆಂದು ಹೆಸರ್ಗೊಂಡಿತು. ವ|| ಆ ಜಂಬೂದ್ವೀಪದ ನಡುವೆ ತೊಂಬತ್ತೊಂಬತ್ತು ಸಾವಿರ ಯೋಜನದಷ್ಟು ಎತ್ತರವಿರುವ ಒಂದು ಸಾವಿರ ಯೋಜನದಷ್ಟು ಅಗಲವಿರುವ ನಾನಾ ಬಗೆಯ ರತ್ನಗಳಿಂದಲೂ,

೧ ಕ.-ಮೂವತ್ತಾಱು

ಸೋ[1]ಮಯಮವರುಣಕುಬೇರಪ್ರಮುಖಲೋಕಪಾಲಾಭಿಯೋಗ್ಯ ದಿಗ್ಗಜೇಂದ್ರದೇವವಿಹಾರ ಪ್ರಾಸಾದಾಭಿರಾಮಮುಮಂ[2] ಅನೇಕ ನಾಕನಾಯಕಲೋಕಪಾಳಲೀಲಾಭವನಾಧ್ಯಾಸಿತಮುಮಂ ಪದ್ಮವೇದಿಕಾಪರಿವೃತರತ್ನತೋರಣಾಂಚಿತ ಜಿನಭವನಪರಿವೃತಮುಮಂ ಪಂಚರತ್ನಮಯ ಸುಶ್ಲಿಷ್ಟಾಷ್ಟಾದಶ ಸಹಸ್ರಲಕ್ಷಣವ್ಯಂಜನಾಂಕಿತಾಷ್ಟಶತಕಳಶಭೃಂಗಾರಾದ್ಯುಪಕರಣೋಪಶೋಭಿತಮುಮಂ ವೈಡೂರ್ಯದಂಡ ಮುಕ್ತಾಮಣಿಜಾಳಾಳಂಕೃತರತ್ನಶಲಾಕಾ ಶತಕಾಂಚನಕುಂಭಬಿಂಬ ರಜತಚ್ಛತ್ರವಿಚಿತ್ರಜಿನೇಂದ್ರ ಪ್ರತಿಕೃತಿಪ್ರಕೀರ್ಣಮುಮಂ ಭದ್ರಾಸಾಲಾನಂದನಸೌಮನಸಪಾಂಡುಕವನವಿರಾಜಿತಮುಮಂ ಪಾಂಡುಕಪಾಂಡು ಕಂಬಳ ರಕ್ತಕಂಬಳಾತಿರಕ್ತಕಂಬಳ ವಿಶಾಲರತ್ನಶಿಲಾತಳಪ್ರತಿಷ್ಠಿತ ಭಗವಜ್ಜನ್ಮಾಭಿಷೇಕಸಿಂಹಾಸನಾಳಂಕೃತ ಮುಮಾಗಿ,

ನೆಲಸಿರ್ದಪ್ಪುದಧಸ್ಥಳಂಬಿಡದಧೋಲೋಕಂ ಸಮಂತೆಯ್ದೆ ಸು
ತ್ತಲುಮಿರ್ದಪ್ಪುದು ಮಧ್ಯಲೋಕಮೆಸೆದಿರ್ದ[3] ಚೂಳಿಕಾಭಾಗದಾ
ದಲೆಯೊಳ್ನಿಂದಪ್ಪುದೂರ್ಧ್ವಲೋಕಮೆನೆ ಮೂಲೋಕಕ್ಕೆ ಪೆಂಪಿಂದಗುಂ
ದಲೆಯಾಗಿರ್ದುದು ದೇವದಂಪತಿರತಶ್ರೀಸುಂದರಂ ಮಂದರಂ ೫೦

ವ॥ ಆ ಮಂದಾರದ ಪೂರ್ವಾಪರದಿಗ್ವಿಭಾಗಂಗಳೊಳ್ ವಿದೇಹಂಗಳಿರ್ದುವಲ್ಲಿ

ಸುವರ್ಣಗಳಿಂದಲೂ ವೈಡೂರ್ಯಗಳಿಂದಲೂ ತುಂಬಿದ ನಡುನಡುವೆ ಅತ್ಯಂತ ಸುಂದರವಾಗಿಯೂ ಸೋಮ, ಯಮ, ವರುಣ, ಕುಬೇರ ಎಂಬ ಪ್ರಸಿದ್ಧಲೋಕಪಾಲರಿಗೆ ಅಭಿಯೋಗ್ಯರೆನಿಸಿದ ದಿಗ್ಗಜೇಂದ್ರದೇವತೆಗಳ ವಿಹಾರಭೂಮಿಯೂ ಆದ ಪ್ರಾಸಾದಗಳಿಂದ ಅಭಿರಾಮವಾಗಿಯೂ ಸ್ವರ್ಗಾಧಿಪಲೋಕಪಾಲರ ಲೀಲಾಭವನಗಳಿಂದಲೂ ಕೂಡಿ, ಪದ್ಮವೇದಿಕೆಗಳಿಂದಲೂ ರತ್ನಮಯ ತೋರಣಗಳಿಂದಲೂ ಕೂಡಿದ ಜಿನಾಲಯಗಳಿಂದಲೂ ಪರಿವೃತವಾದ, ಪಂಚರತ್ನಗಳಿಂದ ಕೂಡಿ ಎಂಟು ಸಾವಿರ ಲಕ್ಷಣಗಳಿಂದ ಸಹಿತವಾದ ಎಂಟುನೂರು ಸುವರ್ಣ ಕಲಶಾದ್ಯುಪಕರಣಗಳಿಂದ ಯುಕ್ತವಾದ, ವೈಡೂರ್ಯದಂಡಗಳಿಂದಲೂ ಮುತ್ತಿನ ಗೊಂಚಲುಗಳಿಂದಲೂ ಶೋಭಿತವಾಗಿ ನೂರಾರು ಸುವರ್ಣಕುಂಭಗಳಿಂದಲೂ ಬೆಳ್ಳಿಯ ಕೊಡೆಗಳಿಂದಲೂ ರಾಜಿಸುವ ಜಿನೇಂದ್ರಪ್ರತಿಮೆಗಳಿಂದ ಯುಕ್ತವಾದ ಭದ್ರಶಾಲ, ನಂದನ, ಸೌಮನಸ, ಪಾಂಡುಕ-ಎಂಬ ವನಗಳಿಂದ ರಾಜಿತವೂ ಪಾಂಡುಕ, ಪಾಂಡುಕಂಬಲ, ಅತಿರಿಕ್ತ ಕಂಬಲಗಳಿಂದ ವಿಶಾಲವಾದ ರತ್ನಶಿಲಾತಲದಲ್ಲಿ ಭಗವಜ್ಜಿನೇಂದ್ರನ ಜನ್ಮಾಭಿಷೇಕ ಮಾಡುವ ಸಿಂಹಾಸನದಿಂದ ಅಲಂಕೃತವೂ ಆಗಿ-೫೦. ಮಂದರಪರ್ವತವಿದೆ. ಅದರ ಅಧಃಸ್ಥಳವನ್ನು ಆಶ್ರಯಿಸಿಕೊಂಡಿದೆ ಅಧೋಲೋಕ, ಮಂದರದ ಸುತ್ತಲೂ ಇದೆ ಮಧ್ಯಮ ಲೋಕ, ತಲೆಯ ಮೇಲೆ ನಿಂತಿದೆ ಊರ್ಧ್ವಲೋಕ-ಎಂಬಂತೆ ಅದು ಮೂರು ಲೋಕಗಳಿಗೂ ಅತಿಶಯವಾಗಿ ಬೆಳಗುತ್ತಿದೆ. ಅದು ದೇವದಂಪತಿಗಳ ರತಿಯಿಂದ ಸುಂದರವಾಗಿದೆ. ವ॥ ಆ ಮಂದರದ ಪೂರ್ವಾಪರ ದಿಗ್ವಿಭಾಗಗಳಲ್ಲಿ (ಎರಡು) ವಿದೇಹ

೧ ಕ.-ಸ್ತೋ. ೨ ಗ-ದಾರಾಮಮುಮಂ. ೩ ಕ.-ಮೆನಿಸಿರ್ದ.

ಪದಸಂ ಕಾಣಿಸಿಕೊಳ್ವವಲ್ಲಿ ಮೞೆಗಳ್ ಷಡ್ಭಾಗಮಂ ಕೊಂಡು ತ
ಪ್ಪದೆ ಭೂಪರ್ ಪ್ರತಿಪಾಳಿಪರ್ ಪ್ರಜೆಗಳಂ ಶ್ರೀಜೈನಧರ್ಮಂ ಪೊದ
ೞ್ದದವುತ್ತಿರ್ಪುದು ಮತ್ತಿನನ್ಯಸಮಯಕ್ಕುತ್ಪತ್ತಿಯಿಲ್ಲೊಂದಱೊಳ್
ಪದಿನಾಱಾಗಿ ನಿರಂತರಂ ಸೊಗಯಿಕುಂ ಮೂವತ್ತೆರಟ್ನಾಡುಗಳ್ ೫೧

ತೊಲಗದು[1] ಪುಬ್ಬಕೋಟಪರಿಸಂಖ್ಯೆವರಂ ಪರಮಾಯು ಕಳ್ಳರಾ
ಯಿಲಮಱೆಯೇಱು ಮಾರಿ ಪಸವಿಟ್ಟಿ ಬಱಂ ಪೆಱವುಂ ಭಯಂಗಳಾ
ಕುಲಿತೆಗಳಿಲ್ಲ ಧಾತ್ರಿ ಪುಸಿವೋಗದು ಪಂಚಧನುಶ್ಶತಂ ಪವ
ಣ್ಣಲೆ[2] ನರರ್ಗೆಂದೊಡಿನ್ನಿಮಿರೆ[3] ಬಣ್ಣಿಸಲಾನಱಿಯೆಂ ವಿದೇಹಮುಂ ೫೨

ಉತ್ತಮತಪಂಗಳಿಂದ
ತ್ಯುತ್ತಮದೇಹರ್ ವಿದೇಹರಪ್ಪುದಱಿಂ[4] ಮೆ
ಯ್ವೆತ್ತನ್ವರ್ಥತೆಯಂ ತಾ
ಳ್ದಿತ್ತು ವಿದೇಹಂ ವಿದೇಹಮೆಂಬೀ ಪೆಸರಂ ೫೩

ವ|| ಅಲ್ಲಿ ಪಶ್ಚಿಮವಿದೇಹಮಧ್ಯಭೂಭಾಗ[5]ಕ್ಕಳಂಕಾರಮಾಗಿ ಪಂಚಶತಯೋಜನಪ್ರಮಾಣ ವಿಸ್ತೀರ್ಣಮುಮಪ್ಪ

ದೇಶಗಳಿದ್ದುವು. ೫೧. ಅಲ್ಲಿ ಮಳೆಗಳು ಚೆನ್ನಾಗಿ ಬೀಳುವುವು. ರಾಜರು ಉತ್ಪತ್ತಿಯ ಆರರಲ್ಲಿ ಒಂದು ಭಾಗವನ್ನು ಪಡೆದುಕೊಂಡು ಪ್ರಜೆಗಳನ್ನು ಕಾಪಾಡುತ್ತಿರುವರು. ಅಲ್ಲಿ ಜೈನಧರ್ಮವು ತಾನೇತಾನಾಗಿ ವ್ಯಾಪ್ತವಾಗಿದೆ. ಅಲ್ಲಿ ಮತ್ತಿತರ ಧರ್ಮಗಳಿಗೆ ಅವಕಾಶವಿಲ್ಲ. ಆ ಪೂರ್ವಾಪರ ವಿಭಾಗಗಳಲ್ಲೊಂದೊಂದರಲ್ಲಿಯೂ ಹದಿನಾರು ನಾಡುಗಳಿರುವುವು. ಹೀಗೆ ವಿದೇಹದಲ್ಲಿ ಒಟ್ಟು ಮೂವತ್ತೆರಡು ನಾಡುಗಳಿದ್ದುವು. ೫೨. ಹಲವಾರು ಪೂರ್ವಗಳಷ್ಟು ಕಾಲ ಅವರ ಆಯುಸ್ಸು ತೊಲಗುವುದಿಲ್ಲ. ಕಳ್ಳರ ಕಾಟ, ಹೊಡೆತದಿಂದಾದ ಗಾಯ, ಸಾಂಕ್ರಾಮಿಕರೋಗ, ಹಸಿವು, ದರೋಡೆ (?), ಬರ, ಕೆಲವು ವಿಧ ಭಯ ಮುಂತಾದ ವ್ಯಾಕುಲತೆಗಳಿಲ್ಲ. ಭೂಮಿಯೆಂದೂ ಬಂಜರಾಗದು. ಅಲ್ಲಿಯ ಜನರಿಗೆ ಐದುನೂರು ಧನುಸ್ಸುಗಳು ಎತ್ತರದ ಪ್ರಮಾಣ ಎಂದ ಮೇಲೆ ಆ ವಿದೇಹವನ್ನು ವರ್ಣಿಸಲು ಸಾಧ್ಯವೇ? ೫೩. ಅಲ್ಲಿ ಅತ್ಯುತ್ತಮರೆನಿಸಿದವರು ಶ್ರೇಷ್ಠವಾದ ತಪಸ್ಸುಗಳಿಂದ ದೇಹವನ್ನು ಕಳೆದುಕೊಂಡು ವಿದೇಹರಾಗುವರು. ಆದ್ದರಿಂದ ವಿದೇಹವೆಂಬ ಹೆಸರನ್ನು ವಿದೇಹ ದೇಶವು ಅನ್ವರ್ಥವಾಗಿ ಪಡೆದಿದೆ. ವ|| ಅಲ್ಲಿ ಪಶ್ಚಿಮವಿದೇಹದ ನಡುವಣ ಭೂಮಿ ಭಾಗಕ್ಕೆ ಅಲಂಕಾರಪ್ರಾಯವಾಗಿ ಐದುನೂರುಯೋಜನಪ್ರಮಾಣವಿಸ್ತಾರದಲ್ಲಿ

---

೧ ಕ.-ಗದೆ ೨ ಖ.-ಶ್ಯತಪ್ರಮಾಣ್ಣಲೆ. ೩ ಖ.-ಡಿನ್ನರಿಯೆ ಬಣ್ಣಸ. ೪ ಕ.-ಪ್ಪುದರೊಳ್ಮೆ ೫ ಖ.ಗ-ಮಧ್ಯಮಭೂಮಿಭಾಗ.

ಪ್ರಿಯಹಂಸೀಯುತಹಂಸನಾದೆಯ ಮಹಾಕುತ್ಕೀಲಕೂಟಪ್ರಭೇ
ದೆಯ ತೀರಸ್ಥಲವಂಗಚೂತಲವಲೀಪುಷ್ಪಾಸವಾಸ್ವಾದಿತೋ
ದ[1]ಯುತೋನ್ಮಾದೆಯ ತದ್ವಿದೇಹಜನತಾಸ್ವಾಂತಾರ್ಪಿತೋದ್ಯತ್ಪ್ರಮೋ
ದೆಯ ಸೀತೋದೆಯ ಪೋಲ್ವೆಗಿಲ್ಲ[2] ತೊಱೆಗಳ್ ವಿಶ್ವಂಭರಾಭಾಗದೊಳ್ ೫೪

ಅದು ನೀರೇಭಕರಾಭಿಘಾತವಿಚಳದ್ವಾ[3]ರಾಶಿಯೊಳ್ ಪೋಗಿ ಕೂ
ಡಿದೊಡಾ ವಾರ್ಧಿಯ ಪೆಂಪುಮಾತೊಱೆಯೊಳಾ[4]ಯ್ತಂತಾ[5]ದ ಪೆಂಪಿಂದಮು
ರ್ಬಿದ[6] ಗುಣ್ಪಿಂದಮಿದಬ್ಧಿಗಗ್ಗಳಮೆನಲ್ ಕುಂದೊಂದು ಕಣ್ಗೆತ್ತಿದಂ[7]
ತಿದು ದಲ್ ನೇರ್ಗಿಱಿದೆಂದೊಡಾವ ತೊಱೆಯುಂ ಸೀತೋದೆಯಂ ಪೋಲ್ಗುಮೇ[8] ೫೫

ವ॥ ಆ ಸೀತೋದಾ ನದಿಯ ತೆಂಕಣ ಬಡಗಣ ತಡಿವಿಡಿದಿರ್ದುವೆಂಟುನಾಟ್ಕಳ್, ಅಲ್ಲಿ-

ಬಡಗಣ ತಡಿಯೊಳಮೇೞನೆ
ಯೆಡೆಯದು ನೀಳಾಚಳಕ್ಕೆ ತೆಂಕಣದ ಬೆಡಂ
ಗೊಡರಿಪ ವಕ್ಷಾರಾದ್ರಿಗೆ
ಪಡುವಣದದು ಸುಜನನಿಳಯಮಪಗತವಿಳಯಂ ೫೬

ಅಳಿಕುಳರುತಿ[9]ಗಳಿನವನತ
ಫಳತರುಗಳಿನುಚಿತಕುಸುಮಗಂಧದಿನಬಳಾ
ವಿಳಸನದಿಂದೀವುದು ಗಂ
ಧಿಳವಿಷಯಂ ಸಕಳವಿಷಯರಸರಸಿಕತೆಯಂ ೫೭

೫೪. ಈ ಭೂಭಾಗದಲ್ಲಿ ಸೀತೋದಾನದಿ ಇದೆ. ಅಲ್ಲಿ ಅದರ ಹೋಲಿಕೆಗೆ ಬರುವ ತೊರೆಗಳಾವುವೂ ಇಲ್ಲ. ಅದು ಹಂಸೀಸಹಿತವಾದ ಹಂಸಗಳ ನಾದಗಳಿಂದ ಭರಿತವಾಗಿದೆ. ಅದು ಮಹಾಪರ್ವತಗಳ ಶಿಖರಗಳನ್ನು ಮುರಿದೊಗೆಯಲು ಸಮರ್ಥವಾದುದು. ಅದು ದಂಡೆಯಲ್ಲಿನ ಲವಂಗ, ಮಾವು ಮತ್ತು ಅರನೆಲ್ಲಿಗಳ ಬಂಡಿನಿಂದ ದೃಪ್ತವಾದ ದುಂಬಿವಿಂಡಿನ ಝೇಂಕಾರದಿಂದ ಉನ್ಮತ್ತವಾಗಿದೆ. ಅದು ವಿದೇಹದ ಜನತೆಯ ಮನಸ್ಸಿಗೆ ಪ್ರಮೋದವನ್ನು ತರುತ್ತದೆ. ೫೫. ನೀರಾನೆಯ ಸೊಂಡಿಲಿನ ಹೊಡೆತದಿಂದ ಅಲ್ಲಾಡುವ ಸಮುದ್ರದೊಡನೆ ಸೀತೋದೆಯು ಕೂಡಿತು. ಅದರಿಂದಾಗಿ ಸಮುದ್ರದ ಪೆಂಪು ಸೀತೋದೆಯಲ್ಲಿ ತೋರಿಕೊಂಡಿತು. ತತ್ಫಲವಾಗಿ ಆಳವಡೆದ ಆ ನದಿಯು ಅಬ್ಧಿಗೂ ಅಗ್ಗಳವೆನಿಸಿತು. ಸಮುದ್ರವು ಕಣ್ಣಿಗೆ ಕಾಣುವಂತೆ ಈ ನದಿಗಿಂತ ಕಿರಿದು ಎನ್ನಲಾಗಿ, ಯಾವ ನದಿಯು ಸೀತೋದಾನದಿಯನ್ನು ಹೋಲೀತು? ವ॥ ಆ ಸೀತೋದೆಯ ದಕ್ಷಿಣೋತ್ತರದಂಡೆಗಳಲ್ಲಿ ಎಂಟೆಂಟು ನಾಡುಗಳಿದ್ದುವು. ೫೬. ಉತ್ತರದ ದಂಡೆಯಲ್ಲಿ ಇದ್ದ ಏಳನೆಯ ನಾಡು ಗಂಧಿಲದೇಶ. ಅದು ನೀಲಾಚಲಕ್ಕೆ ದಕ್ಷಿಣದಲ್ಲಿಯೂ ಸುಂದರವಾದ ವಕ್ಷಾರಾದ್ರಿಗೆ ಪಶ್ಚಿಮದಲ್ಲಿಯೂ ಉಂಟು. ಅದು ಸುಜನರಿಗೆ ಆಶ್ರಯವೂ ನಾಶರಹಿತವೂ ಆದದ್ದು. ೫೭. ದುಂಬಿವಿಂಡಿನ ಝೇಂಕಾರಗಳಿಂದಲೂ ಹಣ್ಣುಗಳ ಭಾರದಿಂದ ಬಗ್ಗಿದ ಗಿಡಗಳಿಂದಲೂ ಹೂಗಳ ಸುವಾಸನೆಗಳಿಂದಲೂ ಸ್ತ್ರೀಯರ ವಿಲಾಸಗಳಿಂದಲೂ

೧ ಗ.-ಸ್ವಾದಿತಾಳಿ. ೨ ಗ-ಪೋಲ್ವುದಿಲ್ಲ. ೩ ಗ-ವಿಳಸದ್ವಾ. ೪ ಗ-ತೊಱೆಯಿನಾ. ೫ ಕ-ಯ್ತಂತಾ. ೬ ಕ.-ದಗುರ್ಬಿದ. ೭ ಕ.ಗ-ಕುಂದೇಂದು ಕಣ್ಗೆತ್ತಿದಂ. ೮ ಕ.-ಪೋಲ್ಗುಮೆ ೯ ಗ.-ತತಿ.

ಬಕಕುರರ[1]ಪಕ್ಷವಿಕ್ಷಿ
ಪ್ತಕಂಜಕಿಂಜಲ್ಕಪುಂಜಪಿಂಜರಿತಾಚ್ಛೋ
ದಕಪರಿಪೂರ್ಣತಟಾಕ
ಪ್ರಕರಸರೋನಿಕರರಂಜಿತಾಶಾವಳಯಂ ೫೮

ಪಸರಿಸಿ ದುಗ್ಧಾಬ್ಧಿಜಳ
ಪ್ರಸರಮನೊಡ್ಡವೇಱೆ ಬಂದು ಕಱೆವುವು ಮೇಘ
ಪ್ರಸರಂಗಳಲ್ಲಿಯೆನೆ ರಸ
ಮೊಸರ್ವುವು ಪುಂಡ್ರೇಕ್ಷುವಾಟಕೋಟಿಗಳದಱೊಳ್ ೫೯

ಮಡಿಗೆ[2]ಳೊಳಗಲರ್ದ ನೆಯ್ದಿಲ
ಕಡುಗಂಪುಮನಿವಱ ಕಂಪು[3] ಗೆಲ್ದುವು ಸಾಸಿ
ರ್ಮಡಿಯೆನೆ ಪೊಂಬಣ್ಣದ ಕೆಂ
ಪಿಡಿದಿರೆ ಸೊಗಯಿಪ್ಪುವು[4] ಗಂಧಶಾಳಿವನಂಗಳ್ ೬೦

ವ॥ ಮತ್ತಮಲ್ಲಿ –

ಕೊಂಕಿದ ಕೊಂಕು ತದ್ವಿಷಯಕಾಂತೆಯ ಪುರ್ವಿನ ಕೊಂಕಿನಂತೆ ಚೆ
ಲ್ವಂ ಕುಡೆ ತಳ್ತೆರಟ್ಟೆಡಿಯ ಪೂಮರದಿಂ ಕಱೆವೂಗಳತ್ತಮಿ
ತ್ತಂ ಕವಿದಲ್ಲಿ ಮೆಲ್ಲನುಗೆ ತೇಂಕುವ ಪೂವಿನ ಪಂಕರಂಗಳಂ
ನೂಂಕುವುವೂರ್ಮಿಮಾಳಿನಿಯ ತುಂಗತರತ್ತರಳೋರ್ಮಿಮಾಲೆಗಳ್ ೬೧

ಗಂಧಿಲದೇಶವು ಸ್ರಕ್‌ಚಂದನಾದಿ ವಸ್ತುಗಳಲ್ಲಿನ ರಸಿಕತೆಯನ್ನು ಪ್ರಕಾಶಿಸುತ್ತಿತ್ತು. ೫೮. ಬಕ, ಕುರರಪಕ್ಷಿಗಳ ರೆಕ್ಕೆಗಳಿಂದ ಎರಚಲ್ಪಟ್ಟ ಕಮಲಗಳ ಕೇಸರಗಳಿಂದ ಪಿಂಜರವರ್ಣವಾದ ಕೆಂಪಾದ ನಿರ್ಮಲ ನೀರುಗಳಿಂದ ಪೂರ್ಣವಾದ ಕೆರೆಗಳಿಂದಲೂ ಸರೋವರಗಳ ಸಮೂಹದಿಂದಲೂ ದಿಗ್ವಲಯವು (ಆ ದೇಶವು) ರಂಜಿತವಾಗಿತ್ತು. ೫೯. ಕ್ಷೀರಸಾಗರದ ಜಲಸಮೂಹವನ್ನು ತುಂಬ ತುಂಬಿಕೊಂಡು ಮೇಘಸಮೂಹಗಳು ಮಳೆಗರೆಯುತ್ತಿರುವುವೋ ಎಂಬಂತೆ ಕೋಟಿಗಟ್ಟಲೆ ಕಬ್ಬಿನ ಗದ್ದೆಗಳು ಗಂಧಿಲನಾಡಿನಲ್ಲಿ ರಸವನ್ನು ಸುರಿಸುತ್ತಿದ್ದವು. ೬೦. ಮಡುಗಳಲ್ಲಿರುವ ತಾವರೆಗಳ ಕಡುಗಂಪನ್ನು ಸಾಸಿರ್ಮಡಿಯಾಗಿ ತಮ್ಮ ಕಂಪಿನಿಂದ ಗೆದ್ದುವೋ ಎಂಬಂತಿದ್ದುವು, ಪೊಂಬಣ್ಣದ ಕೆಂಪಿಡಿದ ಗಂಧಯುಕ್ತವಾದ ಬತ್ತದ ಗದ್ದೆಗಳು. ವ॥ ಮತ್ತೆ ಆ ದೇಶದಲ್ಲಿ ೬೧. ಅಂಕುಡೊಂಕಾಗಿ ಹರಿದು ಬರುತ್ತಿರುವ ಸೀತೋದೆಯ ಕೊಂಕು ಆ ದೇಶದ ಕಾಂತೆಯ ಹುಬ್ಬಿನ ಕೊಂಕಿನಂತೆ ಚೆಲ್ವಾಗಿತ್ತು. ಅದರ ಎರಡೂ ದಂಡೆಗಳ ಮೇಲೆ ಬೆಳೆದಿರುವ ಹೂಮರಗಳಿಂದ ಹೂಗಳುದುರುತ್ತಿದ್ದುವು. ಅವನ್ನು ಅತ್ತ ಇತ್ತ ಹರಡುವಂತೆಸಗಿ ಪುನಃ ಒಟ್ಟುಗೂಡಿಸಿ

೧ ತ.-ಕುರವ ೨ ಗ- ಮಡುಗ. ೩ ಗ.-ಕಂಪ. ೪ ಖ.ಗ.-ಸೊಗಯಿಸುವ

ಕನಕಾಂಭೋಜರಜಂ ನಿಜಾಂಗರುಚಿಯಂ ಕನ್ನೆಯ್ದಲಿಂದಂ ಕಬ
ಳ್ದನಿಸಂ ತೂಳ್ದಿ ತೆರಳ್ದಿಸಳ್ವಯನಮಂ ಕಂಪಂ ಕೊಳಲ್ಬರ್ಪ ಭೃಂ
ಗನಿಕಾಯಂ ನಿಜಕೇಶಪಾಶರುಚಿಯಂ ಕೈಕೊಳ್ವಿನಂ ಮೆಲ್ಲಮೆ
ಲ್ಲನೆ ನೋಟಕ್ಕೆ ಸದೇಹಮಾಗಿ ಸುಳಿಯುತ್ತಿರ್ಕುಂ ವಿದೇಹಾನಿಳಂ ೬೨

ವ।। ಅಂತನೇಕನದ್ಯುದ್ಯಾನ ನಾನಾಜನಪದಜನಾನುರಾಗರಸರಮಣೀಯಮಪ್ಪ ಗಂಧಿಳವಿಷಯದ ನಡುವೆ ತನ್ನಹೀವಿಳಾಸಿನಿಯ ಮೇಲ್ಗೊಂಡ ದುಕೂಲಮುಮಂ ಅರ್ಹತ್ಪರಮೇಶ್ವರನ ವಿಶದಯಶಃ ಪುಂಜಮುಮಂ ಅನುಕರಿಸಿ ವಿವಿಧವಿದಗ್ಧ[೧] ವಿದ್ಯಾಧರಜನಕ್ರೀಡಾನೀಡಂಗಳಾಗಿ ದಕ್ಷಿಣೋತ್ತರಶ್ರೇಢಿಗಳ್ಗೆ ರಾಜಧಾನಿಗಳಾಗಿರ್ದ ರಥನೂಪುರಚಕ್ರವಾಳಗಗನವಲ್ಲಭಾದಿಗಳಪ್ಪ ನೂಱುಪತ್ತುಂ ಪೊಱಲ್ಗಳನೊಳ ಕೊಂಡು ಸಪಾದಷಡ್ಯೋಜನಾವಗಾಹದೊಳಂ ಪಂಚಷಡ್ಯೋಜನಾಧೋವಿಸ್ತಾರದೊಳಂ ತದರ್ಧಯೋಜನೋತ್ಸೇಧದೊಳಂ ದಶಯೋಜನೋಪರಿಮತಳಸಮಾನವಿಸ್ತಾರದೊಳಂ ವಿದ್ಯಾಧರಾಭಿಯೋಗ್ಯದಿಗ್ಗಜೇಂದ್ರ ವಿಜಯಾರ್ಧಕುಮಾರನಿವಾಸಾದಿ ಮೇಖಳಾತ್ರಯದೊಳಂ ಸಿದ್ಧಾಯತನಪ್ರಭೃತಿ ನವಕೂಟಂಗಳೊಳಂ ಸೆಜೆದು,[೨]

ಉತ್ಕಲಿಖಂಡಿತಾರ್ಣವಮನೋಹರಮುಜ್ಜ್ವಳರತ್ನರಾಜಿರಾ
ಜತ್ಕಟಕಂ ಸರಃಕನಕ[೩]ಪದ್ಮಪರಾಗಪಿಶಂಗಿತಾಂಗರಂ
ಗತ್ಕಳಹಂಸನಾದರಮಣೀಯತರಂ ಮದದಂತಿದಾನಗಂ
ಧೋತ್ಕಟಮೊಪ್ಪುಗುಂ ಕುಮುದಪಾಂಡುರಮಾ ವಿಜಯಾರ್ಧಪರ್ವತಂ ೬೩

ತರಲತರಂಗೆಯಾದ ಸೀತೋದೆಯ ಉನ್ನತವೂ ಚಂಚಲವೂ ಆದ ಅಲೆಗಳು ಅವನ್ನು ನೂಕುತ್ತಿದ್ದವು. ೬೨. ವಿದೇಹಾನಿಲಯ ಮೆಲ್ಲಮೆಲ್ಲನೆ ಮೈದೋರಿ ನೋಟಕ್ಕಾಗಿ ಸುಳಿದಂತೆ ಕಂಡನು. ಕನಕಕಮಲದ ಧೂಳಿಯು ಅವನ ಅಂಗದ ಕಾಂತಿಯನ್ನೂ ಕನ್ನೈದಿಲೆಯಿಂದ ಕಳಚಿಸಿದ್ದ ಅದರರಸಳು ಅವನ ಕಣ್ಣುಗಳನ್ನೂ ಸುವಾಸನೆಯನ್ನು ಸ್ವೀಕರಿಸಲು ಬಂದ ದುಂಬಿವಿಂಡು ಅವನ ಕೇಶಪಾಶಗಳ ಕಾಂತಿಯನ್ನೂ ಕೈಕೊಂಡುವು. ವ।। ಅನೇಕ ನದಿಗಳಿಂದಲೂ ಉದ್ಯಾನಗಳಿಂದಲೂ ನಾನಾ ದೇಶಗಳ ಜನರ ಪ್ರೀತಿಪ್ರದವಾಗಿತ್ತು ಗಂಧಿಲವಿಷಯ. ಅದರ ನಡುವೆ ಆ ಭೂರಮಣಿಯು ಹೊದೆದ ದುಕೂಲವನ್ನೂ ಅರ್ಹತ್ಪರಮೇಶ್ವರನ ಸ್ವಚ್ಛ ಯಶಸ್ಸಮೂಹವನ್ನೂ ಅನುಕರಿಸಿ ನಾನಾ ವಿದ್ಯಾಧರರ ಕ್ರೀಡಾ ನೀಡಗಳಾಗಿ ದಕ್ಷಿಣೋತ್ತರ ಶ್ರೇಣಿಗಳಿಗೆ ರಾಜಧಾನಿಗಳಾಗಿದ್ದವು. ರಥನೂಪುರ ಚಕ್ರವಾಳ, ಗಗನವಲ್ಲಭ ಮೊದಲಾದ ಒಂದುನೂರಾಹತ್ತು ಪಟ್ಟಣಗಳು ಇದ್ದವು. ಅವನ್ನೊಳಗೊಂಡು ಆರೂಕಾಲು ಯೋಜನಾವಗಾಹದಿಂದಲೂ ಐವತ್ತು ಯೋಜನೋತ್ಸೇಧ ವಿಸ್ತಾರದಿಂದಲೂ ಇಪ್ಪತ್ತೈದು ಯೋಜನೋತ್ಸೇಧದಿಂದಲೂ[1] ವಿದ್ಯಾಧರಾಭಿಯೋಗ್ಯ ದಿಗ್ಗಜೇಂದ್ರ ವಿಜಯಾರ್ಧ ಕುಮಾರನಿವಾಸಾದಿ ಯುಕ್ತ ಮೇಖಲಾತ್ರಯಗಳಲ್ಲಿ ಸಿದ್ಧಾಯತನವೇ ಮೊದಲಾದ ನವಕೂಟಗಳಲ್ಲಿ ನೆರೆದು ೬೩. ಕುಮುದದಂತೆ ಬೆಳ್ಳಗಿರುವ ವಿಜಯಾರ್ಧಪರ್ವತವು ಉತ್ಕಂಠಿತ ನವಿಲುಗಳ ಕುಣಿತದಿಂದ ಅಂದವಾಗಿತ್ತು.

---

೧ ಕ.-ವಿವಿಧವಿದ್ಯಾವಿದಗ್ಧ. ೨ ಕ.-ಬೆಜೆದು. ೩. ಕ.-ಕನತ್ಕನಕ.

1. ನೋಡಿ : ತಿಲೋಯಪಣ್ಣತ್ತಿ ೪-೧೦೫

ಎಳನೀರೊತ್ತಿನೊಳೊತ್ತಿ ಬರ್ಪ ಪೊನಲೊಳ್ಚಾಂದ್ರೇಂದುಕಾಂತೋಪಳೋ
ಚ್ಛಳಿತಾಚ್ಛಾಚ್ಛಜಲಪ್ರವಾಹಭರದೊಳ್ ಮಂದಾನಿಳಾಂದೋಳನಾ
ಕುಳಿತಾರಾಮಫಲಾಮೃತೋಪಮ ರಸಸ್ರೋತಂಗಳೊಳ್ ಸಾಲ್ವಿನಂ
ಬೆಳೆದೋರಂತೊಱಗಿರ್ದ[೧]ಶಾಳಿವನದಿಂ ಸೇವ್ಯಂ ನಗೋಪತ್ಯಕಂ ೬೪

ನನೆಯನೆ ಪೇಱೆ ಕೆಂದಳಿರೊಳೆಯ್ದೆ ಬೞಲ್ದೆಳಮಾವು ಬಂದ ಮಾ
ವನೆ ಮಱಿಗೊಂಡು ಬಗ್ಗಿಸುವ ಕೋಗಿಲೆ ಕೋಗಿಲೆಯಿರ್ಕೆದಾಣದೊಳ್
ಜಿನುಗುವ ತುಂಬಿ ತುಂಬಿಯೊಳಲರಲ್ದಲರೆಂಬಿವಱಿಂ ಬಸಂತರಾ
ಜನ ಮನೆಯಂತೆ ಕಣ್ಗೆಸೆದು ತೋಱುಗುಮಲ್ಲಿಯ[೨] ನಂದನಾಳಿಗಳ್[೩] ೬೫

ಪೊಸನನೆಯೊಳ್ ಪಸುರ್ಪಲರೊಳಂಚಿರಮಲ್ಲದ ಬೆಳ್ಪು ಪಲ್ಲವ
ಪ್ರಸರದೊಳೆಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು ತುಂಬಿಯೊಳ್
ಮಿಸುಗುವ ಕರ್ಪು ಬರ್ಣಿಸಿದವೊಲ್ ಬಗಗೊಳ್ವಿನೆಗಂ ಬಸಂತದೊಳ್
ಬಸದಿಯ ಬಾಗಿಲಂ ತೆಱೆದ ಮಾೞ್ಕೆಯೊಳಿರ್ದುವು ಬಂದ ಮಾವುಗಳ್ ೬೬

ಅಲರ್ದಂಭೋರುಹಷಂಡಮುಳ್ಳಲರ್ದ ಚೆನ್ನೆಯ್ದಿಲ್ಗೊಳಂ ತೂಗಿ ಬಿ
ಣ್ಗೊಲೆಯಿಂ ಬಳ್ಕುವ ಕೌಂಗು ಕಾಯ್ದುಱುಗಲಂ ಪೇಱಿರ್ದ ಚೆಂದೆಂಗು ಕ
ಟ್ಟಲಿಸುತ್ತಿರ್ಪೆಲೆವಳ್ಳಿ ಪಣ್ತೊಲೆವ ನಾರಂಗಂ ಫಲವ್ರಾತದಿಂ
ನೆಲನಂ ಮೋದುವ ಮಾತುಳಂಗಮೆಸೆಗುಂ ವಿದ್ಯಾಧರೋದ್ಯಾನದೊಳ್ ೬೭

ಉಜ್ವಲವಾದ ರತ್ನರಾಶಿಗಳಿಂದ ರಾರಾಜಿಸುತ್ತಿತ್ತು. ಅದರ ಕಟಕ (ನಡುಬೆಟ್ಟ) ಸುವರ್ಣಮಯವಾದ ಪದ್ಮಗಳ ಧೂಳಿಗಳಿಂದ ನಸುಗೆಂಪಾದ ಜಾಗಗಳಲ್ಲಿ ಕುಣಿಯುತ್ತಿರುವ ಕಲಹಂಸಗಳಿಂದ ರಮ್ಯವಾಗಿತ್ತು. ಮದ್ದಾನೆಗಳ ಮದೋದಕದ ಸೊವಡಿನಿಂದ ಸೊಗಸುವಡೆದಿತ್ತು. ೬೪. ಎಳನೀರಿನಂತಿರುವ ಸಿಹಿಬುಗ್ಗೆಗಳಿಂದ ಹರಿದುಬರುತ್ತಿರುವ ಹೊನಲುಗಳಿಂದಲೂ ಚಂದ್ರಕಾಂತಶಿಲೆಗಳಿಂದ ಸ್ರವಿಸುತ್ತಿರುವ ಸ್ವಚ್ಛ ಜಲಪ್ರವಾಹದಿಂದಲೂ ಮಂದಾನಿಲನ ಬೀಸಾಟದಿಂದ ಬಿದ್ದ ಉದ್ಯಾನಫಲಗಳ ಅಮೃತಕ್ಕೆಣೆಯಾದ ರಸಪ್ರವಾಹಗಳಿಂದಲೂ ಬೆಳೆದೊರಗಿರುವ ಬತ್ತದ ಗದ್ದೆಗಳ ಸಮೂಹದಿಂದಲೂ ಪರ್ವತದ ತಪ್ಪಲು ಸೇವ್ಯವಾಗಿತ್ತು. ೬೫. ಕೆಂದಳಿರಿನಲ್ಲಿರುವ ಮೊಗ್ಗುಗಳ ಭಾರದಿಂದ ಎಳೆಮಾವಿನಮರ ಬಹಳವಾಗಿ ಬಳಲಿತ್ತು. ಫಲಿಸಿದ ಮಾವುಗಳ ಮರೆಯಲ್ಲಿ ಕೋಗಿಲೆಗಳು ಕೂಗುತ್ತಿದ್ದವು. ಕೋಗಿಲೆಯಿರುವೆಡೆಗಳಲ್ಲಿ ದುಂಬಿಗಳು ಗುನುಗುಟ್ಟುತ್ತಿದ್ದುವು. ದುಂಬಿಗಳಿರುವೆಡೆಗಳಲ್ಲಿ ಅರಳಿದ ಹೂವುಗಳಿದ್ದುವು. ಅದರಿಂದಾಗಿ ಉದ್ಯಾನಗಳು ವಸಂತರಾಜನ ಮನೆಯಂತೆ ಕಂಗೊಳಿಸುತ್ತಿದ್ದುವು. ೬೬. ಹೊಸ ಮೊಗ್ಗುಗಳಲ್ಲಿಯೂ ಹೊಸ ಹೂವುಗಳಲ್ಲಿಯೂ ಬಹು[1] ಕಾಲವಿರುವ ಬಿಳುಪೂ ಎಳೆಚಿಗುರುಗಳಲ್ಲಿ ಬಿತ್ತರಗೊಂಡು ಎದ್ದುಕಾಣುವ ಕೆಂಪೂ ದುಂಬಿಗಳಲ್ಲಿ ಮಿಸುಗುವ ಕಪ್ಪೂ ಬಣ್ಣಗೊಟ್ಟಂತೆ ಮನಸೆಳೆಯುತ್ತಿದ್ದುವು. ಆದ್ದರಿಂದ ಹಣ್ಣುಬಿಟ್ಟ ಮಾವಿನ ಗಿಡಗಳು ವಸಂತದಲ್ಲಿ ಬಸದಿಯ ಬಾಗಿಲನ್ನು ತೆರೆದಂತೆ ತೋರುತ್ತಿದ್ದುವು. ೬೭. ಅರಳಿದ ಕಮಲಗಳ ಸಮೂಹವೂ ಅರಲ್ದ ತಾವರೆಗಳ

೧ ಗ.-ತೆಱಗಿರ್ದ. ೨ ಕ.-ತೋಱುವುವಲ್ಲಿಯ. ೩ ಕ.-ನಾದಿಗಳ್.

1. ಅಂಚಿರ = ಅಸ್ಥಿರ, ಚಂಚಲ

ಮಲರ್ದಲರ್ದ ನಾಗಸಂಪಗೆ
ಯಲರ್ಗಳೊಳಗ್ಗಳಿಸಿ ಬರಿವ ಪೊಂಬಾಳೆಯ[೧] ತ
ಣ್ಮಲೆವ ಪೊಸಗಂಪಿನೊಳ್ ಪುದಿ
ದಲೆವೆಲರಾಜಿಪುದು ಖಚರದಂಪತಿಶತಮಂ ೬೮

ಬೆಸನಂ ಪಾರ್ವುವು ಮನ್ತ್ರದೇವತೆಗಳಾದೇಶಾರ್ತೆಗಂ[೨] ಬೇಗಮಾ
ಗಸದೊಳ್ ವಿದ್ಯೆಗಳೆಯ್ದೆ ಬರ್ಪುವು ಜಗಕ್ಕಾಶ್ಚರ್ಯಮೈಶ್ವರ್ಯಮಾ
ವಸಥಂ ರೂಪ್ಯಮಹೀಧರೇಂದ್ರಮೆನೆ ಪೂಣ್ದಾವಂಗಮಂತೆಯ್ದೆ ಬ
ಣ್ಣಿಸಲೇಂ ಬರ್ಕುಮೆ ಬಾರದಂಬರಚರಶ್ರೀಯಂ ಪುರಶ್ರೀಯುಮಂ[೩] ೬೯

ಜಿನಪೂಜೋತ್ಸವಮಂಗಳಾನಕಮೃದುಪ್ರಧ್ವಾನದೊಳ್ ಗಾಯಕೀ
ಜನಗೀತಾ[೪]ನ್ವಿತವಲ್ಲಕೀಕ್ವಣಿತದೊಳ್ ವಿದ್ಯಾಧರೀರಮ್ಯನ
ರ್ತನರಾಗೋತ್ಥಿತಪಾರಿಹಾರ್ಯರಶನಾಮಂಜೀರಿಕೋದ್ದಾಮನಿ
ಸ್ವನದೊಳ್ ಪೊಂಪುಳಿವೋಗುತಿರ್ಪುವೆರಡುಂ ವಿದ್ಯಾಧರಶ್ರೇಢಿಗಳ್ ೭೦

ವ॥ ಅವಱೊ[೫]ಳುತ್ತರಶ್ರೇಢಿಯೊಳುದಗ್ರಹಿಮಶಿಖರಿಶಿಖರಶಾರದನೀರದಾಕಾರಸುಧಾಧವಳಿತೋತ್ತುಂಗಪ್ರಾಸಾದಕೂಟಕೋಟಿಸಂಕೀರ್ಣಮುಂ ಆತ್ಮೀಯಜಾತ್ಯನುರೂಪಾಚರಣ[೬]ಪರಿಣತಚತುರಜನಪರಿಪೂರ್ಣಮುಂ ಅನೇಕವಿದ್ಯಾಧರರಾಜರಾಜದ್ರಾಜವೀಥೀವಿಸ್ತೀರ್ಣ[೭]ಮುಮಾಗಿ,

ಕೊಳಗಳೂ ಗೊನೆಗಳ ಭಾರದಿಂದ ಬಳುಕುತ್ತಿರುವ ಅಡಕೆಯ ಮರಗಳೂ ಕಾಯ್ತುಂಬಿದ ತೆಂಗಿನ ಗಿಡಗಳೂ ಕತ್ತಲೆಯನ್ನುಂಟುಮಾಡುವ ಎಲೆಬಳ್ಳಿಗಳೂ ಹಣ್ಣುಗಳಿಂದ ತುಂಬಿದ ಕಿತ್ತಳೆಗಳೂ ಫಲಾಧಿಕ್ಯದಿಂದ ಭೂಮಿಯನ್ನು ಮುಟ್ಟಿರುವ ಮಾದಲಗಿಡಗಳೂ ವಿದ್ಯಾಧರೋದ್ಯಾನದಲ್ಲಿ ಪ್ರಕಾಶಿಸುತ್ತಿದ್ದುವು. ೬೮. ಅರಳಿದ ನಾಗಸಂಪಗೆಯ ಮೇಲೆ, ಬಿರಿದ ಹೊಂಬಾಳೆಯ ಹೊಸಗಂಪಿನ ಮೇಲೆ ಬೀಸಿದ ಗಾಳಿಯು ಸಹಸ್ರಾರು ಖಚರದಂಪತಿಗಳ ಆಯಾಸವನ್ನು ಕಳೆವುದು. ೬೯. ಯಾವುದೇ ಸುದ್ದಿಯನ್ನು ಮುಟ್ಟಿಸಲು ಮಂತ್ರದೇವತೆಗಳು ಆಜ್ಞೆಯನ್ನು ಕಾಯುತ್ತಿವೆ. ವಿದ್ಯಾಧರವಿದ್ಯೆಗಳು ಆಗಸದಿಂದ ಬೇಗ ಬರುತ್ತವೆ. ಅವರ ಮಹಿಮೆ ಜಗತ್ತಿಗೆ ಆಶ್ಚರ್ಯಕರ. ಆ ಬೆಳ್ಳಿಯ ಪರ್ವತವು ಜಗತ್ತಿಗೆ ಆವಾಸಸ್ಥಾನ. ಹೀಗಿರಲಾಗಿ ವಿದ್ಯಾಧರಶ್ರೀಯನ್ನೂ ಆ ಪುರಶ್ರೀಯನ್ನೂ ಯಾರಿಂದಲೂ ವರ್ಣಿಸಲು ಸಾಧ್ಯವಿಲ್ಲ. ೭೦. ಜಿನಪೂಜೆಯ ಕಾಲದಲ್ಲಿ ಬಾರಿಸಲ್ಪಟ್ಟ ಢಕ್ಕಾವಾದ್ಯದ ಮೃದುಧ್ವನಿಗಳಿಂದಲೂ ಗಾಯಕೀಜನರ ಗೀತೆಗಳೊಡನೆ ಬೆರೆತ ವೀಣಾಕ್ವಣಿತದಿಂದಲೂ ವಿದ್ಯಾಧರಿಯರ ರಮ್ಯನರ್ತನಕಾಲದಲ್ಲಿನ ರಾಗಕ್ಕನುಗುಣವಾದ ಕಡಗ, ಒಡ್ಯಾಣ, ಕಾಲಂದುಗೆಗಳ ಸ್ವನದಿಂದಲೂ ಆ ಎರಡೂ ವಿದ್ಯಾಧರಶ್ರೇಣಿ[1]ಗಳು ರೋಮಾಂಚನಗೊಳ್ಳುತ್ತಿದ್ದುವು. ವ॥ ಅವುಗಳ ನಡುವೆ ಉತ್ತರದ ಶ್ರೇಣಿಯಲ್ಲಿ ಹಿಮವತ್ಪರ್ವತದ ಶಿಖರದಂತೆಯೂ ಶರತ್ಕಾಲದ ಮೋಡದಂತೆಯೂ ಅಸಂಖ್ಯಾತವಾಗಿ ಪ್ರಾಸಾದ

---

೧ ಕ.-ಪೂಂಬಳೆಯ. ೨ ಗ.-ಬಾಳ್ತೆಗಂ. ೩ ಗ-ಶ್ರೀಯಂ ಮನೋಹಾರಿಯುಂ. ೪ ಗ.-ಗಾಯಿನೀಜನಗೀತಾ. ೫ ಕ-ಅದಱೊ ೬ ಗ-ರೂಪಾಭರಣ. ೭ ಕ-ರಾಜರಾಜ ವಿವಿಧವಿಸ್ತೀರ್ಣ.

1 ಉತ್ತರಶ್ರೇಣಿ, ದಕ್ಷಿಣಶ್ರೇಣಿ

ಬಳಸಿದ ಪೊನ್ನ ಕೋಂಟೆ ಪುರಲಕ್ಷ್ಮಿಯ ಕೈಗೆಯಲಿರ್ದ ತಾಣದೊಳ್
ಬಳಸಿದ ಪೊನ್ನಕಾಂಡಪಟ[1]ದಂತಿರೆ ರುಂದ್ರನರೇಂದ್ರಗೇಹಮಾ
ಲಳಿತೆಯ[2]ವಕ್ತ್ರಪಂಕಜವಿಳಾಸಮನಾಂತಿರೆ ರಮ್ಯರಾಜತಾ
ಚಳತಿಳಕೋಪಮಾನಮೆನೆ ಸಂದಳಕಾಪುರಮೊಪ್ಪಿ ತೋಱುಗುಂ ೭೧

ವ॥ ಅದನಾಳ್ವನಖಿಳಖಚರಪತಿಮುಕುಟಮಣಿ[3]ಗಣಕಿರಣರಾಗರಂಜಿತ ಚರಣನಳಿನಯುಗಳಂ ಉದಿತೋದಿತನಿಜಕುಲಮಂದರಾಚಳಮಂದಾರಪಾದಪಂ ಅನೇಕ ಸಮರಸಮ್ಮರ್ದನನಿರ್ಜಿತೋರ್ಜಿತಾರಾತಿಬಳಂ ಅತಿಬಳನೆಂಬಂ; ಆತನ ಮಹಾದೇವಿ ನಯನಮನೋಹರಿ ಮನೋಹರಿಯೆಂಬಳ್,

ಒಲಿಸುವ ರೂಪು ಗಾಡಿಯೊಳೊಡಂಬಡೆ ಗಾಡಿ ವಿಳಾಸದೇೞ್ಗೆಯೊಳ್
ನೆಲಸೆ ವಿಳಾಸಮಂಬರಚರಾಮರಕಾಂತೆಯರೆಲ್ಲರಂ ಪಳಂ
ಚಲೆಯೆ ನೆಗೞ್ತೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯು
ಗ್ಗಲದ ಪೊಗೞ್ತೆ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ ೭೨

ಹಾವವಿಳಾಸವಿಭ್ರಮಸಮನ್ವಿತರೂಪಕಳಾಪದಾ ಮಹಾ
ದೇವಿಗಮಾ ವಿಯಚ್ಚರಗಣಾಗ್ರಣಿಗಂ ಗುಣರತ್ನವಾರ್ಧಿ ನಾ
ನಾವಿಧಸೌಖ್ಯಭಾಜನನುಪಾರ್ಜಿತಖೇಚರರಾಜಹೃದ್ಯವಿ
ದ್ಯಾವಿಭವಂ ಮಗಂ ಜಿತವಿರೋಧಿನರೇಂದ್ರಬಳಂ ಮಹಾಬಳಂ ೭೩

ಕೋಟೆಗಳು ಬೆಳಗುತ್ತಿದ್ದುವು. ತಮ್ಮ ತಮ್ಮ ಜಾತ್ಯನುಗುಣವಾದ ಆಚರಣೆಗಳನ್ನು ನಡಸುವುದರಲ್ಲಿ ಪರಿಣತರಾದ ಪರಿಜನರಿಂದಲೂ ವಿದ್ಯಾಧರರಾಜರಿಂದ ತುಂಬಿದ ರಾಜವೀಥಿಗಳಿಂದಲೂ ಅಂತಃಪುರವು ತುಂಬಿತ್ತು. ೭೧. ಸುತ್ತುವರಿದ ಅಲ್ಲಿಯ ಚಿನ್ನದ ಕೋಟೆಯು ಪುರಲಕ್ಷ್ಮಿಯು ಶೃಂಗರಿಸಿಕೊಳ್ಳುವ ಸ್ಥಳದಲ್ಲಿದ್ದ ಚಿನ್ನದ ತೆರೆಯಂತೆ ಬೆಳಗುತ್ತಿತ್ತು. ವಿಸ್ತಾರವಾದ ರಾಜಗೃಹವು ಪುರಲಲನೆಯ ಮುಖಕಮಲದ ವಿಳಾಸವನ್ನು ತಳೆದಿತ್ತು. ಅಲಕಾಪುರವು ರಜತಾಚಲವೆನಿಸಿದ ವಿಜಯಾರ್ಧಪರ್ವತದ ತಿಲಕದಂತೆ ಮೆರೆಯುತ್ತಿತ್ತು. ವ॥ ವಿದ್ಯಾಧರೇಂದ್ರರೆಲ್ಲರ ಕಿರೀಟಗಳ ಕಿರಣಗಳ ಬಣ್ಣದಿಂದ ರಂಜಿತಪಾದನಾದ ಅತಿಬಲನೆಂಬವನು ಅದನ್ನು ಆಳುತ್ತಿದ್ದನು. ಅವನು ತನ್ನ ಕುಲವೆಂಬ ಮಂದರಪರ್ವತದ ಮಂದಾರವೃಕ್ಷ. ಅವನು ಅನೇಕ ಯುದ್ಧಗಳಲ್ಲಿ ಭಾಗವಹಿಸಿ ಶತ್ರುಬಲವನ್ನು ಮರ್ದಿಸಿದ್ದನು. ಅವನ ಮಡದಿ ನಯನಮನೋಹರೆಯಾದ ಮನೋಹರಿ. ೭೨. ಅವಳ ಸಂತೋಷಪ್ರದವಾದ ರೂಪು ಸೌಂದರ್ಯದಲ್ಲೊಪ್ಪಿತ್ತು. ಅದು ವಿಲಾಸದೇಳ್ಗೆಯಲ್ಲಿ ಕೂಡಿತ್ತು. ಆ ವಿಲಾಸವು ಖೇಚರಾಮರ ಕಾಂತೆಯರೆಲ್ಲರನ್ನು ಮೀರಿಸಿತ್ತು. ಪತಿಭಕ್ತಿಯ ಪ್ರಯುಕ್ತವಾದ ಮಹಿಮೆಯ ಹಿರಿಮೆಯು ಮನೋಹರಿಗಲ್ಲದೆ ಮತ್ತಾರಿಗೆ ತಾನೇ ಬರುವುದು? ೭೩. ಹಾವ, ವಿಲಾಸ, ವಿಭ್ರಮಗಳಿಗೆ ಆಗರಳೂ ರೂಪಕಲಾಪದಿಂದೊಡಗೂಡಿದವಳೂ ಆದ ಮನೋಹರಿಗೂ ವಿದ್ಯಾಧರೋತ್ತಮನಾದ ಅತಿಬಲನಿಗೂ ಮಹಾಬಲನು ಮಗನಾಗಿ ಹುಟ್ಟಿದನು. ಅವನು ಗುಣಗಳೆಂಬ ರತ್ನಗಳಿಗೆ ಆಗರ. ನಾನಾವಿಧ

೧ ಖ. ಗ-ಕನ್ನವಡ. ೨ ಗ.-ಲಲನೆಯ. ೩ ಕ-ಪತಿಮಣಿಮಕುಟರಾಗಮಣಿ

ವ|| ಆ ಮಹಾಬಳಂ ಬಾಲಕಾಲದಿಂ[1]ತಗುಳ್ದಭ್ಯಸ್ತ ಸಮಸ್ತ ವಿದ್ಯಾಧರವಿದ್ಯಾಪಾರಗನುಂ ಪರಿಸಮಾಪ್ತಸಕಳಕಳಾವಿಜ್ಞಾನನುಂ ಅಧಿಗತಾಶೇಷ[2]ಶಾಸ್ತ್ರನುಂ ಪರಿಣತಸಕಳಶಸ್ತ್ರನುಮಾಗಿ ಯೌವನಂ ನೆಱಿಯೆನೆಱಿಯೆ.

ಮೊಗಮುತ್ಫುಲ್ಲಸರೋಜಹಾಸಿ ನಯನಂ ನೀಲಾಂಬುಜಸ್ಪರ್ಧಿ ಬಾ
ಹುಗಳಾಜಾನುವಿಳಂಬಿಗಳ್ ತೊಡೆಗಳುಂ ರಂಭಾಮೃದುಸ್ತಂಭಶೋ
ಭೆಗಳಂ ಗೆಲ್ದುವು ವಕ್ಷಮಂಬರಚರಶ್ರೀಗೇಹಮೆಂಬೊಂದೆ ರೂ
ಪೆ ಗಡಂ ನೋಡಲೊಡಂ ಮರುಳ್ಗೊಳಿಸುಗುಂ ವಿದ್ಯಾಧರಸ್ತ್ರೀಯರಂ ೭೪

ಮನಮೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ ಪೂವಿನಂ
ಬಿನ ಕೋಳ್ಗಂ ತಳಿವಾಲಿನೀರ್ಗಮಲರ್ವಾಸಿಂಗಂ ಕುಳಿರ್ಕೋಟ್ಟಿ ನಂ
ದನಕಂ ಚಂದನಕಂ ಪಸುರ್ಪೆಸೆವ ಬಾಳ್ಗೊಂಪಕ್ಕಮೊಂದೊಂದೆ[3]ತ
ಣ್ಣನಿಯೊಳ್ಕೋಡಿಸುತಿರ್ಪ[4] ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ ೭೫

ವ|| ಅಂತು ಮಹಾಬಳಕುಮಾರಂ ಕುಮಾರಕೇಳೀವಿಳಾಸವಿಶ್ರಾಂತಸ್ವಾಂತಂ ಯುವರಾಜಪದವಿಗೆ ಯೋಗ್ಯನಾಗೆ,

ಬಳವದ್ವಿದ್ವಿಷ್ಟವಿದ್ಯಾಧರಕಟಿಶಿರಶ್ಶುಕ್ತಿಸಂಭೂತಮುಕ್ತಾ
ವಳಿಯೊಳ್ಕಣ್ಗೆಟ್ಟು ತನ್ನೊಳ್ನೆರೆಯಲಿದು ಜಯಶ್ರೀಯ ಮುಂದಟ್ಟಿದೆಕ್ಕಾ
ವಳಿಯೆಂಬಂತಿರ್ದುದಂ ಕಂಠಿಕೆಯನುಭಯವಿದ್ಯಾಧರಶ್ರೇಣಿಗಳ್ ಮಂ
ಗಳಗೀತಾತೋದ್ಯನಾದಂಗಳೊಳೆ ಪುದುವಿನಂ ಕಟ್ಟಿದಂ ಖೇಚರೇಂದ್ರಂ ೭೬

ಸೌಖ್ಯಗಳಿಗೆ ಭಾಜನ. ಅವನು ವಿದ್ಯಾಧರರಾಜನ ಹೃದ್ಯವಿದ್ಯಾವೈಭವವನ್ನು ಗಳಿಸಿದವನು. ಶತ್ರುರಾಜರ ಬಲವನ್ನು ಗೆದ್ದವನು. ವ|| ಮಹಾಬಲನು ಬಾಲ್ಯದಲ್ಲಿಯೇ ವಿದ್ಯಾಧರರ ವಿದ್ಯೆಗಳೆಲ್ಲವನ್ನೂ ಕಲಿತನು. ಸಕಲ ಕಲೆಗಳಲ್ಲಿಯೂ ವಿಜ್ಞಾನದಲ್ಲಿಯೂ ಕುಶಲ. ಸಮಸ್ತಶಾಸ್ತ್ರಗಳಲ್ಲಿಯೂ, ಶಸ್ತ್ರಗಳಲ್ಲಿಯೂ ಪರಿಣತನಾಗಿ ಯೌವನವನ್ನಡರಿದನು. ೭೪. ಅವನ ಮುಖವು ಅರಳಿದ ಕಮಲಕ್ಕೆ ಸಮನಾಗಿತ್ತು. ಕಣ್ಣುಗಳು ಕನ್ನೈದಿಲೆಗಳೊಡನೆ ಮೇಲಾಟ ಹೂಡಿದ್ದುವು. ತೋಳುಗಳು ಮೊಣಕಾಲುಗಳವರೆಗೆ ನೀಳವಾಗಿದ್ದುವು. ತೊಡೆಗಳು ಬಾಳೆಕಂಬಗಳ ಕಾಂತಿಯನ್ನು ಪಡೆದಿದ್ದವು. ಅವನ ಎದೆಯು ಅಂಬರಚರರ ಶ್ರೀಗೇಹ. ವಿದ್ಯಾಧರಸ್ತ್ರೀಯರನ್ನು ಮರುಳ್ಗೊಳಿಸಲು ಅವನ ಇದೊಂದೆ ರೂಪು ಸಾಕಾಗಿತ್ತು. ೭೫. ಹೃದಯಸ್ಪರ್ಶಿಯಾದ ಅವನ ಸೌಂದರ್ಯವನ್ನು ಕಂಡವರಾರು ತಾನೆ, ಮನ್ಮಥನ ಬಾಣಗಳಿಗೂ ಆಲಿಕಲ್ಲ ನೀರಿಗೂ ಹೂವಿನ ಹಾಸುಗೆಗೂ ಶೀತಲವಾದ ತೋಟಕ್ಕೂ ಚಂದನಕ್ಕೂ ಹಸುರಾದ ಲಾವಂಚದ ಗೊಂಚಲಿಗೂ (?) ನೀರ್ಬನಿಗೊಡುವ ಬೀಸಣಿಗೆಗೂ ಪಕ್ಕಾಗರು? ವ|| ಹೀಗೆ ಮಹಾಬಲಕುಮಾರನು ಬಾಲಕ್ರೀಡೆಗಳಿಂದ ವಿಶ್ರಾಂತಚಿತ್ತನಾಗಿ ಯುವರಾಜಪದವಿಗೆ ಯೋಗ್ಯನಾದನು. ೭೬. ಉಭಯ ವಿದ್ಯಾಧರಶ್ರೇಣಿಗಳ ಮಂಗಳಗೀತಭೇರೀನಾದಗಳ ನಡುವೆ ಖಚರೇಂದ್ರನು

---

೧ ಗ.-ಕಾಲದೊಳ್ ೨ ಕ.-ಅಧೀತಾಶೇಷ; ಗ-ವಿದಿತಾಶೇಷ ೩ ಗ.-ಮೋರೊಂದೆ. ೪ ಖ-ಯೊಳ್ಕೊಡಿರಿಸಿರ್ಪ.

ವ|| ಅಂತು ಕಟ್ಟಿದಾಗಳ್,

ಹಿಮಶೈಳದೊಳಂ ಜಲಧಿಯೊ
ಳಮೆಂತಭಿನ್ನಾಂಗಿ[೧] ಗಂಗೆ ಸಂಗತೆ ಖಚರೋ
ತ್ತಮನೊಳಮಾ ವಿದ್ಯಾಧರ
ಕುಮಾರನೊಳಮಂತೆ ಲಕ್ಷ್ಮೀಸಂಗತೆಯಾದಳ್ ೭೭

ಪೆಸರ್ಗಳ್ಕಿತ್ತು ಸಮಸ್ತಖೇಚರಬಲಂ ತೇಜಕ್ಕೆ ಬೆರ್ಚಿತ್ತು ಮುಂ
ಪೊಸಪೊಚ್ಚಂ[೨] ಬೆರಸಿರ್ಪ ಭೂಚರಬಲಂ ಮೆಲ್ಪಿಂಗೆ ಮೆಚ್ಚಿತ್ತು ತ
ನ್ನ ಸಮಸ್ತಂ ಪರಿವಾರಮೆಂಬ ಗುಣಸಂಘಾತಂ[೩]ಗಳಂ ತಾಳ್ದಿ ಪೆಂ
ಪೆಸಕಂಬೆತ್ತಿರೆ ಸಂತನಿಂತತಿಬಳಂ ರಾಜ್ಯಂಗೆಯುತ್ತಿರ್ಪಿನಂ ೭೮

ತೊಡರ್ದೀ ಪುತ್ರಕಳತ್ರಮೋಹದೊಳಿದೇಕಟ್ಟಿರ್ದಪೈ ನಿನ್ನ ಮೆ
ಳ್ಪಡಿದೇಕಾರಣಮಂತಕಂ ಕಡುಪಿನಿಂ ಕಂಠಗ್ರಹಂಗೆಯ್ಯದಿಂ
ತಡೆಯಂ ಚೇತರಿಸೆಂದು ಬಂದು ಕಿವಿಯೊಳ್ಪೇಳ್ವಂತೆವೊಲ್ಕೆನ್ನೆಯಿಂ
ದೊಡೆದೋರೊಂದೊಗೆ[೪]ತಂದುವಂದು ನರೆಗಳ್ ವಿದ್ಯಾಧರಾಧೀಶನಾ ೭೯

ವ|| ಅಂತು ಮೇಲೆ ಬಂದ ಕೃತಾಂತರಾಜವಾಹಿನಿಯ ಸಿತಪತಾಕೆಗಳನನುಕರಿಸುವ ಪಳಿತಂಗಳಂ ದರ್ಪಣದೊಳ್ನೋಡಿ[೫]ಕಂಡು ಪರಪತಾಕಿನೀ[೬]ಪತಾಕೆಯಂ ಕಂಡು ಸೆರಗಿಲ್ಲದ ಗಂಡನಂತಿನಿ[೭]ಸಪ್ಪೊಡಂ ಮಾಣದಮವೆ ಸಂಸಾರನಿರ್ವೇಗಕಾರಣಮಾಗೆ;

ಯುವರಾಜಪದವಿಗರ್ಹನಾದ ಮಹಾಬಲನಿಗೆ ಕಂಠಹಾರವನ್ನು ಕಟ್ಟಿದನು. ಅದು ಶತ್ರುಗಳಾದ ವಿದ್ಯಾಧರರ ಆನೆಗಳ ತಲೆಯಲ್ಲೊಗೆದ ಮುಕ್ತಾವಳಿಯನ್ನು ಮೊದಲೇ ಬಯಸಿ, ಅವನೊಡನೆ ಕೂಡಲು ಜಯಲಕ್ಷ್ಮಿಯು ಮೊದಲೇ ಕಳುಹಿಸಿದ ಏಕಾವಳಿಯಂತೆ ಇದ್ದಿತು. ವ|| ಹಾಗೆ ಕಟ್ಟಿದಾಗ ೭೭. ಹಿಮವಂತನಲ್ಲಿಯೂ, ಸಮುದ್ರದಲ್ಲಿಯೂ ಗಂಗೆಯು ಅಭಿನ್ನಾಂಗಿಯಾಗಿ ಸೇರಿಕೊಂಡಿರುವಂತೆ ಖಚರೋತ್ತಮನಲ್ಲಿಯೂ ಆ ವಿದ್ಯಾಧರ ಕುಮಾರನಲ್ಲಿಯೂ ರಾಜ್ಯಲಕ್ಷ್ಮಿಯು ಸಮಾನವಾಗಿ ಸಂಗತೆಯಾದಳು. ೭೮. ಅತಿಬಲನು ಮಹಾವೈಭವದಿಂದ ರಾಜ್ಯವಾಳುತ್ತಿರುವಾಗ ಎಲ್ಲ ಖೇಚರಸೈನ್ಯವೂ ಅವನ ಹೆಸರಿಗೆ ಅಳುಕಿತ್ತು. ಅವನ ತೇಜಸ್ಸಿಗೆ ಭೂಚರ ಬಲವು ಬೆರಗುಗೊಂಡಿತ್ತು. ಅವನ ಮಾರ್ದವವನ್ನು ಮೆಚ್ಚಿತ್ತು ಸಮಸ್ತ ಪರಿವಾರ. ಸತ್ಪುರುಷನಾದ ಅತಿಬಲನು ಈ ರೀತಿಯಾಗಿ ಹಿರಿಮೆಯನ್ನೂ ಕಾಂತಿಯನ್ನೂ ಪಡೆದು ರಾಜ್ಯವಾಳುತ್ತಿದ್ದನು. ೭೯. "ಈ ಪುತ್ರಕಳತ್ರ ವ್ಯಾಮೋಹದಲ್ಲಿ ಏಕೆ ಮುಳುಗಿರುವೆ? ನಿನ್ನ ಭ್ರಾಂತಿಗೇನು ಕಾರಣ? ಯಮನು ಇನ್ನು ನಿನ್ನ ಕತ್ತುಹಿಡಿಯದೆ ಬಿಡನು! ಎಚ್ಚರಿಕೆ ವಹಿಸು" ಎಂದು ಕಿವಿಯಲ್ಲಿ ಉಸುರುತ್ತಿದೆಯೋ ಎನ್ನುವಂತೆ ನರೆಗಳು ಅವನ ಕೆನ್ನೆಗಳಿಂದ ಹೊರಬಂದುವು! ವ|| ಹಾಗೆ ಮೇಲೆ ಬಂದ ಯಮನ ಸೈನ್ಯದ ಬಿಳಿಯ ಬಾವುಟಗಳನ್ನು ಹೋಲುವ ನರೆಗೂದಲನ್ನು ಕನ್ನಡಿಯಲ್ಲಿ ಕಂಡರೂ ಶತ್ರುಸೈನ್ಯದ

---

೧ ಖ-ಭಿನ್ನಾಂಗೆ. ೨ ಖ.-ಪೊಸಪೊರ್ತಂ. ೩ ಗ.-ಸಂದೋಹಂ. ೪ ಕ.ಖ.-ದೋರಂತೊಗೆ. ೫ ಖ.ಗ.-ಪಳಿತಂಗಳಂ ನೋಡಿ, ೬ ಕ.ಖ.-ಪರಬಲಪತಾಕಿನೀ. ೭ ಕ-ಗಂಡಗಲಿಯಂತಿನಿ.

ಕರೆದಾಗಳ್ನಿಜಮನ್ತ್ರಿಮಂಡಳಮಹಾಸಾಮಂತಶುದ್ಧಾಂತಮು
ಖ್ಯರನಾವೃತ್ತಕಮೆಲ್ಲಮಂ ತಿಳಿಯೆ ಪೇಟ್ದುಶಾಂತಮಂ ತಾಗೆ ತೂ
ರ್ಯರವಂ ಪೊಣ್ಮೆ ಮಹಾಬಳಂಗತಿಬಳಂ ಕೊಟ್ಟಂ ಸಿತಚ್ಛತ್ರಚಾ
ಮರಸಿಂಹಾಸನಚಿಹ್ನ ಭಾಸುರ[೧]ವಿಯದ್ಗಾಮೀಶ್ವರೈಶ್ವರ್ಯಮಂ ೮೦

ವ॥ ಅಂತು ಮಹಾಬಳಂಗೆ ಮಹಾವಿಭೂತಿಯಿಂದಮಂಬರಚರಶ್ರೀಯನಿತ್ತು ಭವ್ಯಸಾರ್ಥಪ್ರಾರ್ಥನೀಯಮುಕ್ತಿಶ್ರೀಯನಾಸೆವಟ್ಟು ಸಕಳಮಳನಿರ್ಜರಣಕರಣಕಾರಣಮಮಂ ತಪಶ್ರೀಯಂ ಕೈಕೊಳಲ್ಬಗೆದು ಸಾಸಿರ್ವರರಸುಮಕ್ಕಳುಮಯ್ನೂರ್ವರರಸಿಯರುಂಬೆರಸು ಗುಣಧರ[೨]ಕೇವಳಿಗಳ ಪಾದಪದ್ಮ ಮೂಲದೊಳ್,

ಅತಿತೃಷ್ಣಾಪರನಾಗಿ ಮುನ್ನೆ ತೊಡರ್ದಿರ್ದಾ ಗಾಂಪೆ ಸಾಲ್ಗುಂ ಮದಾ
ಕೃತಿಯಂ ಮಾಸಿಸಿ ಮುಪ್ಪುಚಪ್ಪರಿಸೆಯುಂ ಚೀ ಕೆಮ್ಮಿನೊಳ್ಕುಂಮಿ ಸಂ
ಸೃತಿಯೊಳ್ತತ್ತೆ ಗಡಂ ಕಡಂ[೩]ಗಿ ತೊಡರ್ದಾಂ ಮಾಣ್ದಿರ್ಪೆನೆಂದಣ್ಮಿ ಘೋ
ರತಪೋವೃತ್ತಿಯನಾಂತ ಪೆಂಪತಿಬಳಂಗಕ್ಕುಂ ಪೆಱರ್ಗಕ್ಕುಮೇ[೪] ೮೧

ವ॥ ಮತ್ತಿತ್ತ ಮಹಾಬಳಖಚರಪತಿಯುಮಾತ್ಮೀಯಗುರುನಿರೂಪಿತ ಗಗನಚರರಾಜ್ಯಭಾರಮನಾ ಶೈಶವಪ್ರಭೃತಿಪ್ರರೂಢನಿರ್ಭರಪ್ರೇಮರಸರುಮನೇಕಾರ್ಥಶಾಸ್ತ್ರಪ್ರಯೋಗಕುಶಲರುಂ ಸಕಳಕಳಾವಗಾಹನ ಸಮಾಹಿತಮತಿಗಳುಮಾಗಿ ನಾಲ್ಕುಮುಪಧೆಗಳೊಳಂ[೫] ಶುದ್ಧರಾಗಿ ನಾಲ್ಕುಮುಪಾಯಂಗಳಿರ್ಪಂತಿರ್ದ

ಬಾವುಟವನ್ನು ಕಂಡು ಭಯವಿಲ್ಲದ ಶೂರನಂತೆ ಆತನಿದ್ದನು. ಆ ನರೆಗೂದಲೇ ಸಂಸಾರ ನಿರ್ವೇಗಕ್ಕೆ ಕಾರಣವಾಯಿತು. ೮೦. ಒಡನೆಯೆ ಅತಿಬಲನು ತನ್ನ ಮಾಂಡಲಿಕರನ್ನೂ ಮಹಾಸಾಮಂತರನ್ನೂ ಅಂತಃಪುರದ ಅಧಿಕಾರಿಗಳನ್ನೂ ಕರೆಯಿಸಿ ಎಲ್ಲ ವೃತ್ತಾಂತವನ್ನೂ ತಿಳಿಯಪಡಿಸಿದನು. ತೂರ್ಯಧ್ವನಿಗಳು ಮೊಳಗಿ ದಿಕ್ಕುಗಳನ್ನೆಲ್ಲ ವ್ಯಾಪಿಸಿರಲು, ಅತಿಬಳನು ಮಗನಾದ ಮಹಾಬಳನಿಗೆ ಶ್ವೇತಚ್ಛತ್ರಿಯನ್ನೂ ಚಾಮರಗಳನ್ನೂ ಸಿಂಹಾಸನವನ್ನೂ ಖೇಚರೈಶ್ವರ್ಯವನ್ನೂ ಕೊಟ್ಟನು. ವ॥ ಹೀಗೆ ಮಹಾಬಲನಿಗೆ ಅತಿವೈಭವದಿಂದ ವಿದ್ಯಾಧರೈಶ್ವರ್ಯವನ್ನು ಒಪ್ಪಿಸಿದನು. ಮೋಕ್ಷಾರ್ಥಿಗಳಿಂದ ಬಯಸಲ್ಪಡುವ ಮುಕ್ತಿಶ್ರೀಗೆ ಆಸೆ ಪಟ್ಟನು. ಸಕಲ ಕರ್ಮಕ್ಷಯಕ್ಕೂ, ರತ್ನತ್ರಯಪ್ರಾಪ್ತಿಗೂ ನಿಧಾನವಾದ ತಪಃಶ್ರೀಯನ್ನು ಪಡೆಯಲು ಒಂದು ಸಾವಿರ ಅರಸುಮಕ್ಕಳೊಡನೆಯೂ ಐದುನೂರು ಅರಸಿಯರೊಡನೆಯೂ ಕೂಡಿ ಗಣಧರಕೇವಲಿಗಳ ಪಾದಮೂಲವನ್ನು ಅತಿಬಲನು ಸೇರಿದನು. ೮೧. "ಅತಿತೃಷ್ಣಾಪರನಾದ ನನ್ನಲ್ಲಿ ಕೂಡಿಕೊಂಡಿದ್ದ ದಡ್ಡತನವೇ ಸಾಕು. ಅದು ನನ್ನ ಆಕೃತಿಯನ್ನು ಮರೆಮಾಚಿಸಿ ಮುಪ್ಪು ಚಪ್ಪರಿಸುವಂತೆಸಗಿತು. ಚೀ, ಕೆಮ್ಮಿನಲ್ಲಿ ನರಳುತ್ತಿರುವಂತೆ ಮಾಡಿ ನಿಷ್ಕಾರಣವಾಗಿ ನನ್ನನ್ನು ಸಂಸಾರದಲ್ಲಿ ದೂಡಿತು. ಆದ್ದರಿಂದ ನನಗೆ ಅದರಿಂದ ಬಿಡುಗಡೆಯಿಲ್ಲ" ಎಂದರಿತು ಘೋರತಪೋವೃತ್ತಿಯನ್ನಪ್ಪಿದ ಹಿರಿಮೆಯು ಅತಿಬಲನಿಗಲ್ಲದೆ ಮತ್ತಾರಿಗೆ ಬಂದೀತು? ವ॥ ಬಳಿಕ ಮಹಾಬಲನು ವಿದ್ಯಾಧರಪತಿಯಾಗಿ ಗುರುಪ್ರೇರಣೆಯಿಂದ ಖೇಚರರಾಜ್ಯಭಾರವನ್ನು ಬಾಲ್ಯದಿಂದ ಬೆಳೆದುಬಂದ ಪ್ರೀತಿಗೆ

---

೧ ಗ.-ಭಾಸ್ವರ. ೨ ಗ-ಗಣಧರ ೩ ಕ.ಗ.-ತೊಡಂಕಿ. ೪ ಗ.-ಪೆಱಂಗಕ್ಕುಮೇ, ೫ ಕ.-ನಾಲ್ಕು ಮುಪದೇಶಂಗಳೊಳಂ.

ಜಗತ್ಪ್ರಸಿದ್ಧ ಸ್ವಯಂಬದ್ಧ ಮಹಾಮತಿ ಸಂಭಿನ್ನಮತಿ ಶತಮತಿ[೧]ಗಳೆಂಬ ನಾಲ್ವರುಮಮಾತ್ಯರ ಮೆಯ್ಯೊಳ್ನಿಱಿಸಿ ನಿರಾಕುಳಸ್ವಾಂತನಪಗತರಾಜ್ಯಚಿಂತನಮರಸೌಂದರೀವಿಳಾಸೋಪಹಾಸಿ ಗಗನಚರಸೌಂದರೀ ಮನೋನಯನಸೌಂದರನಾಗಿ ವಿದ್ಯಾಧರಶ್ರೀಯನನುಭವಿಸಿ,

ಪೊಸತಂ ಸ್ತ್ರೀರಾಜ್ಯಮಂ ಮೇಣ್ಪಡೆದನೊ ಬದಿ ಲಾವಣ್ಯಸಿಂಧುಪ್ರವಾಹಂ
ಪೊಸತೀಗಳ್ಬಂದು ಬೆಳ್ಳಂಗೆಡೆದುದೊ ಗಣಿಕಾಸೃಷ್ಟಿಯಂ ಪುಷ್ಪಚಾಪಂ
ಪೊಸತಂ ಮಾಡಿಟ್ಟನೋ ನಿಪ್ಪೊಸತು ದಲಿದಱೊಂದಂದಮೆಂಬಂತದೇಂ ರಂ
ಜಿಸಿತೋ ವಿದ್ಯಾಧರಾಧೀಶ್ವರನ ಕೆಲದ ವಿದ್ಯಾಧರಸ್ತ್ರೀಸಮೂಹಂ ೮೨

ವನರಾಜೀ[೨]ಕ್ರೀಡೆಯಂ ಯೌವನವನದೊಳೆ ತೋಱಲ್ಜಲಕ್ರೀಡೆಯಂ ನೂ
ತನಲಾವಣ್ಯಾಚ್ಛತೋಯಾಶಯದೊಳೆ ಮೆಱೆಯಲ್ ನರ್ತನಕ್ರೀಡೆಯಂ ನ
ಚ್ಚಿನ ನಾನಾಭಾವರತ್ಯುತ್ಸವದೊಳೆ ಪಡೆಯಲ್ ಬಲ್ಲ ವಿದ್ಯಾಧರಸ್ತ್ರೀ
ಜನದಿಂದಂ ಕಣ್ಗೆವಂದಂ ಸುಕವಿಜನಮನೋಮಾನಸೋತ್ತಂಸಹಂಸಂ ೮೩

ಲಳಿತಾಳಂಕರಣಪ್ರಸನ್ನರಸವದ್ಗೇಯಂಗಳೊಳ್ ಮೂಡುತುಂ
ಮುಳುಗುತ್ತುಂ ಖಚರೀಜನಾನನನವಾಂಭೋಜಂಗಳೊಳ್ ಕಂಪನೀ[೩]
ಟಿೞ್ಕೊಳುತುಂ ನಂದನರಾಜಿಯೊಳ್ನಲಿಯುತುಂ ತದ್ರಾಜಹಂಸಂ ನಿರಾ
ಕುಳಮೀ ಮಾಟ್ಕೆಗಳಿಂದೆ ಪೊೞ್ತುಗಳೆವಂ ಸಂಸಾರಸಾರೋದಯಂ ೮೪

ಪಾತ್ರರೂ ನಾನಾ ವಿಷಯಗಳಲ್ಲಿ ನಿಷ್ಣಾತರೂ ಅನೇಕ ಶಾಸ್ತ್ರಗಳಲ್ಲಿ ಪರಿಣತರೂ ನಾಲ್ಕು ಉಪಧೆಗಳಲ್ಲಿ[1] ಪರೀಕ್ಷಿತರೂ ಆದ ನಾಲ್ಕು ಉಪಾಯಗಳೋ ಎಂಬಂತಿರುವ ಸ್ವಯಂಬುದ್ಧ, ಮಹಾಮತಿ, ಸಂಭಿನ್ನಮತಿ ಮತ್ತು ಶತಮತಿ ಎಂಬ ಸಚಿವರಲ್ಲೊಪ್ಪಿಸಿ ಚಿಂತಾವಿರಹಿತನಾಗಿ ವಿದ್ಯಾಧರಸ್ತ್ರೀಯರ ಕಣ್ಮನಗಳನ್ನು ತಣಿಸುತ್ತಾ ವಿದ್ಯಾಧರಶ್ರೀಯನ್ನನುಭವಿಸಿದನು. ೮೨. ಹೊಸತಾದ ಸ್ತ್ರೀರಾಜ್ಯವನ್ನೇ ಬ್ರಹ್ಮನು ಸೃಷ್ಟಿಸಿದನೋ? ಅಥವಾ ಹೊಸತಾದ ಲಾವಣ್ಯವೆಂಬ ತೊರೆಯ ಹೊನಲು ಹರಿಯಿತೊ? ಇಲ್ಲವೆ ಕಾಮನು ಹೊಸತಾದ ಗಣಿಕಾಸೃಷ್ಟಿಯನ್ನು ಮಾಡಿಟ್ಟನೋ? ಇವುಗಳಲ್ಲಿ ಒಂದೊಂದೂ ನಿಪ್ಪೊಸತು ಎಂಬಂತೆ ವಿದ್ಯಾಧರಾಧೀಶ್ವರನ ವಿದ್ಯಾಧರಸ್ತ್ರೀ ಸಮೂಹವು ಅತಿಯಾಗಿ ರಂಜಿಸಿತು. ೮೩. ವನಕ್ರೀಡೆಯನ್ನು ಯೌವನವೆಂಬ ವನದಲ್ಲಿಯೆ ತೋರಿಸಲಿಕ್ಕೂ ಜಲಕ್ರೀಡೆಯನ್ನು ಲಾವಣ್ಯವೆಂಬ ಬೆಳ್ನೀರಿನಲ್ಲಿ ಮೆರೆಯಿಸಲಿಕ್ಕೂ ನರ್ತನ ಕ್ರೀಡೆಯನ್ನು ನಚ್ಚಿನ ನಾನಾ ರತ್ಯುತ್ಸವಗಳಲ್ಲಿ ಕಾಣಿಸಲಿಕ್ಕೂ ಬಲ ವಿದ್ಯಾಧರಸ್ತ್ರೀಯರಿಂದ ಸುಕವಿಜನಮನೋಮಾನಸೋತ್ತಂಸಹಂಸನಾದ ಮಹಾಬಲನು ವಿರಾಜಿಸಿದನು. ೮೪. ಲಲಿತಾಲಂಕಾರಗಳಲ್ಲಿಯೂ ಭಾವಪೂರ್ಣವಾದ ಗೇಯಗಳಲ್ಲಿಯೂ ಅವನ ಚಿತ್ತವು

---

೧ ಕ.ಗ.-ಶತಬುದ್ಧಿ. ೨ ಖ.-ನವರಾಜ್ಯ. ೩ ಕ-ಗಳೊಳ್ತಂಪ.

1. ಉಪಧಾ = ಪ್ರಾಮಾಣಿಕತೆಯ ಪರೀಕ್ಷಾ ವಿಧಾನ. ೧. ರಾಜಭಕ್ತಿ ೨. ಸ್ವಾರ್ಥರಾಹಿತ್ಯ ೩. ಇಂದ್ರಿಯಜಯ ೪. ಧೈರ್ಯ-ಈ ನಾಲ್ಕು ವಿಷಯಗಳಲ್ಲಿ ಪರೀಕ್ಷೆ.

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರವಾಕ್ಚಂದ್ರಿಕಾ
ಪ್ರಸರ ಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಮಹಾಬಳಕುಮಾರೋದಯ ವರ್ಣನಂ
**ಪ್ರಥಮಾಶ್ವಾಸಂ**

ಮೂಡಿ ಮುಳುಗಿತು. ವಿದ್ಯಾಧರಸ್ತ್ರೀಯರ ಮುಖಗಳೆಂಬ ನವಕಮಲಗಳ ಕಂಪನ್ನು ಸೆಳೆದುಕೊಳ್ಳಲು ಆಶಿಸಿದನು. ನಂದನವನರಾಜಿಯಲ್ಲಿ ಸಂಸಾರಸಾರೋದಯನಾದ ಆ ರಾಜಹಂಸನ ಚಿತ್ತವು ನಲಿಯಿತು. ಈ ಪ್ರಕಾರ ಆ ರಾಜಶ್ರೇಷ್ಠನು ಕಾಲಕಳೆದನು. ಇಂತು ಆದಿಪುರಾಣದಲ್ಲಿ ಮಹಾಬಲಕುಮಾರೋದಯ ವರ್ಣನೆಯೆಂಬ

ಒಂದನೆಯ ಆಶ್ವಾಸ

# ದ್ವಿತೀಯಾಶ್ವಾಸಂ

ಶ್ರೀವಿಜಯಾರ್ಧಾಚಳಖಚ
ರಾವಳಿಮಣಿಮಕುಟಮಕರಿಕಾನಿಕಷಣಲೇ
ಖಾ[೧] ವಿಳಸಿತಪದಕಮಳನಿ
ಳಾವಂದ್ಯಯಶಂ ಸರಸ್ವತೀಮಣಿಹಾರಂ ೧

ಕಟಕಕಟಿಸೂತ್ರಕುಂಡಲ
ಹಟತ್ಕಿರೀಟಾಂಗದಾದಿ ಮಣಿಭೂಷಣಭಾ
ಜಟಳಿತಮೂರ್ತ್ಯುತ್ಕರ್ಷಂ
ಸ್ಫುಟಹರ್ಷಂ ತನ್ನ ವರ್ಷವರ್ಧನದಿನದೊಳ್ ೨

**ವ॥ ಆಸ್ಥಾನಮಂಡಪದೊಳ್ ಅತಿಪ್ರಚಂಡಮಂಡಳಿಕಮಹಾಸಾಮಂತಮಂತ್ರಿಪ್ರಧಾನ ಪುರೋಹಿತಾಂತರ್ವಂಶಿಕಾದಿ ಪರಿವಾರಪರಿವೃತಂ ಉತ್ತುಂಗ ಸಿಂಹಾಸನಾಸೀನಂ ಅಧಸ್ಸ್ಥಿತಮಣಿಮಯಪೀಠ ವೇದಿಕಾವಿನ್ಯಸ್ತವಾಮಪಾದಂ ಅಂಬರಚರಾಂಗನಾಕರತಳಪಲ್ಲವೋಲ್ಲಸಿತ ಹೇಮಚಾಮರಪವನವಿಲೋಲ ದುಕೂಲವಸನಪರಿವೃತ[೨] ಪಂಚರತ್ನಪ್ರಭಾಭಾಸುರ ವಿವಿಧಭೂಷಣ ವಿರಚಿತ ಸುರಶರಾಸನಂ ಒಡ್ಡೋಲಗಂಗೊಟ್ಟರೆ;**

೧. ವಿಜಯಾರ್ಧಪರ್ವತದಲ್ಲಿ ನೆಲೆಸಿದ ವಿದ್ಯಾಧರಸಮೂಹದ ಮಣಿಮಯವಾದ ಕಿರೀಟಗಳಲ್ಲಿರುವ ಮಕರಿಕೆಗಳ ಉಜ್ಜಾಟದ ಫಲವಾಗಿ ಮಹಾಬಲನ ಕಮಲದಂತಿರುವ ಪಾದಗಳಲ್ಲಿ ರೇಖೆಗಳು ಮೂಡಿದ್ದವು. ಸರಸ್ವತೀಮಣಿಹಾರನಾದ ಅವನ ಯಶಸ್ಸು ಭೂಮಿಯಿಂದ ವಂದಿತವಾಗಿತ್ತು. ೨. ಕಡಗ, ಉಡಿದಾರ, ಕುಂಡಲ, ಕಾಂತಿಯುಗುವ ಕಿರೀಟ, ಬಾಹುಮುರಿಯೇ ಮುಂತಾದ ಮಣಿಮಯಾಭರಣಗಳ ಕಾಂತಿಗಳಿಂದ ಮಹಾಬಲನ ದೇಹವು ಉತ್ಕರ್ಷಗೊಂಡಿತ್ತು. ಜನ್ಮೋತ್ಸವದ ದಿನದಲ್ಲಿ ಅವನು ಹರ್ಷಾತಿರೇಕದಿಂದ ವಿಜೃಂಭಿಸುತ್ತಿದ್ದನು. ವ॥ ಆಸ್ಥಾನಮಂಟಪದಲ್ಲಿ ಅತಿಸಮರ್ಥರಾದ ಮಾಂಡಲಿಕರಿಂದಲೂ ಮಹಾಸಾಮಂತರಿಂದಲೂ ಮಂತ್ರಿಪ್ರಧಾನರಿಂದಲೂ ಪುರೋಹಿತರಿಂದಲೂ ಅಂತಃಪುರದ ಅಧಿಕಾರಿಗಳಿಂದಲೂ ಮತ್ತಿತರ ಪರಿಜನವರ್ಗದಿಂದಲೂ ಕೂಡಿದವನಾಗಿ ಆ ಮಹಾಬಲನು ಉನ್ನತ ಸಿಂಹಾಸನವನ್ನೇರಿದ್ದನು. ಕೆಳಗಿದ್ದ ಮಣಿಮಯವಾದ ಪಾದಪೀಠದ ಮೇಲೆ ತನ್ನ ಕಾಲುಗಳನ್ನಿಟ್ಟಿದ್ದನು. ವಿದ್ಯಾಧರಸ್ತ್ರೀಯರು ತಮ್ಮ ಕರಪಲ್ಲವಗಳಲ್ಲಿ ಹಿಡಿದ ಸುವರ್ಣಚಾಮರಗಳಿಂದ ಗಾಳಿಯನ್ನು ಬೀಸುತ್ತಿದ್ದರು. ಆಗ ಅವನ ದುಕೂಲವು ಅಲುಗಾಡುತ್ತಿತ್ತು. ಅವನು ಧರಿಸಿದ್ದ ಪಂಚರತ್ನಪ್ರಭಾರಂಜಿತ ನಾನಾಭೂಷಣಗಳ ಕಾಂತಿಯು ಕಾಮನಬಿಲ್ಲಿನ ಬಣ್ಣವನ್ನುಂಟುಮಾಡುತ್ತಿದ್ದಿತು.

---

೧ ಕ.ಖ.-ರೇಖಾ, ೨ ಕ-ವಸನಪರಿಮಿತ.

ಎರಡುಂ ವಿದ್ಯಾಧರಶ್ರೇಣಿಯ ಖಚರಮಹೀಪಾಳಕರ್ ಸುತ್ತಲುಂ ಬಂ
ದಿರೆ ನಾನಾತೋದ್ಯವಾದ್ಯಂಗಳನೆ[೧] ಮೆಱೆದು ಮೆಚ್ಚಂಕೊಳಲ್ವಾದಕರ್ಬಂ
ದಿರೆ ಗೀತಾರಾವದಿಂದಂ[೨] ನೆಱೆಯೆ ನೆಱಗೊಳಲ್ ರಕ್ತಕಂಠೀಜನಂ ಬಂ
ದಿರೆ ವಂದಿವ್ರಾತಮತ್ತಂ ಬಗೆಗೊಳಲಿರೆ ಚೆಲ್ವಾದುದಾಸ್ಥಾನರಂಗಂ ೩

ನುಡಿ ಮೊಗರಾಗಮಂ ಪಡೆಯೆ ನೋಟಮನಂಗನ ಬಿಲ್ಲ ಬಲ್ಮೆಯಂ
ಪಡೆಯೆ ನಯಂ ನಯಂಬಡೆಯೆ ಕಲ್ಪಮಹೀಜದ ಪಕ್ಕದಿರ್ಕೆಲಂ
ಬಿಡಿದು ಮಡಲ್ತು ತೋಱುವ ಲತಾವಳಿಗಳ್ಗೆಣೆಯಾಯ್ತೆರಟ್ಕೆಲಂ
ಬಿಡಿದು ಖಗೇಂದ್ರನೋಲಗದೊಳಿರ್ದ ವಿಳಾಸವಿಳಾಸಿನೀಜನಂ ೪

ನಿರುಪಮದೇಹದೀಪ್ತಿಗಳೊಳೆಕ್ಕೆಯಿನೆಯ್ದೆ ಪಳಂಚಿ ಮಿಂಚುವಾ
ಭರಣದ ಮಿಂಚು ಕಪ್ಪುರದ ಪಾಱುವ ಸುಟ್ಟುರೆ ಪೂವಿನುರ್ಬು ಕ
ತ್ತುರಿಯ ತಗುಳ್ದು[೩] ಪೊಯ್ಲ ಸೊವಡಾ ಸೊವಡೊಳ್ ಕಡುಸೋರ್ಕು ಸೋರ್ಕಿ[೪]ಗಾ
ವರಿಸುವ ತುಂಬಿ ಚೆಲ್ವೆಸೆಯೆ ಕಣ್ಗೆಸೆದತ್ತು ಖಗೇಂದ್ರನೋಲಗಂ ೫

ವ|| ಅಂತೊಡ್ಡೋಲಗಂಗೊಟ್ಟಿರ್ದ ವಿದ್ಯಾಧರರಾಜನಂ ಸ್ವಯಂಬುದ್ಧಂ ಅಭ್ಯುದಯಪರಂಪರಾನಿಮಿತ್ತಂ ಸದ್ಧರ್ಮೋಪದೇಶಲಬ್ಧಾವಸರನಾಗಿ,

೩. ಎರಡೂ ಗುಂಪಿನ (ಶ್ರೇಣಿ) ವಿದ್ಯಾಧರರಾಜರು ಬಂದು ನೆರೆದಿದ್ದರು, ಆತೋದ್ಯವಾದ್ಯಗಳನ್ನು ಬಾರಿಸಿ ಮೆಚ್ಚುಗೊಳ್ಳಲು ವಾದಕರು ಕುತೂಹಲದಿಂದ ಕೂಡಿದ್ದರು. ತಮ್ಮ ಹಾಡಿನ ಪ್ರೌಢಿಮೆಯನ್ನು ಪ್ರದರ್ಶಿಸಿ ಬಹುಮಾನ ಗಳಿಸಿಕೊಳ್ಳಲು ಇನಿದನಿಯ ನಲ್ಲೆಯರು ಕಾತುರರಾಗಿದ್ದರು. ಹೊಗಳುಭಟ್ಟರು ತಮ್ಮೊಂದು ಹೊಗಳಿಕೆಗಳಿಂದ ಮನಸೆಳೆಯುತ್ತಿದ್ದರು. ಹೀಗೆ ಆಸ್ಥಾನವು ಚೆಲ್ವಾಗಿ ರಂಜಿಸುತ್ತಿತ್ತು. ೪. ಎರಡೂ ಪಾರ್ಶ್ವಗಳಲ್ಲಿ ವಿದ್ಯಾಧರರಾಜನ ಓಲಗವನ್ನು ಆಶ್ರಯಿಸಿಕೊಂಡಿದ್ದ ವಿಲಾಸಿನೀಜನವು ಕಲ್ಪವೃಕ್ಷದ ಪಾರ್ಶ್ವಗಳೆರಡರಲ್ಲಿಯೂ ಚಿಗುರಿ ಹಬ್ಬಿಕೊಂಡು ತೋರಿಕೊಳ್ಳುತ್ತಿರುವ ಬಳ್ಳಿಗಳ ಗುಂಪಿಗೆಣೆಯಾಗಿತ್ತು. ಆ ವಿಲಾಸಿನಿಯರ ನುಡಿಯು ಮುಖದ ಪ್ರಸನ್ನತೆಯನ್ನೂ ನೋಟವು ಮನ್ಮಥನ ಬಿಲ್ಲಿನ ಬಲ್ಮೆಯನ್ನೂ ತಳೆದಿದ್ದುವು. ಸೌಕುಮಾರ್ಯವು ಮತ್ತಷ್ಟು ಕೋಮಲತೆಯನ್ನು ತಳೆದಿತ್ತು. ೫. ನಿರುಪಮವಾದ ದೇಹಕಾಂತಿಗಳೊಡನೆ, ಆಭರಣಗಳ ಮಿಂಚು ಮೇಲಾಟ ಹೂಡಿತ್ತು. ಬೀಸುವ ಕರ್ಪೂರದ ಗಾಳಿಯೂ ಹೂಗಳ ಪರಿಮಳವೂ ಕಸ್ತೂರಿಯ ಸುಗಂಧವೂ ಸೇರಿ ಅತಿಶಯವಾದ ಪರಿಮಳವನ್ನು ಬೀರುತ್ತಿದ್ದವು. ಆ ಅತಿಶಯದ ಸೊಕ್ಕಿಗೆ ದುಂಬಿಗಳು ಮುತ್ತಿಕೊಂಡು ಚೆಲುವನ್ನುಂಟುಮಾಡಿದುವು. ಹೀಗೆ ಖಗೇಂದ್ರನ ಒಡ್ಡೋಲಗವು ಕಣ್ಗೆಸೆದಿತ್ತು. ವ|| ಹೀಗೆ ಆಸ್ಥಾನಮಂಟಪದಲ್ಲಿ ಮಂಡಿತನಾಗಿದ್ದ ಮಹಾಬಲನೆಂಬ ವಿದ್ಯಾಧರರಾಜನಿಗೆ ಅಭ್ಯುದಯಪರಂಪರೆಯನ್ನೊದಗಿಸಲು

---

೧ ಕ-ನಾನಾವಾದ್ಯನಾದಂಗಳನೆ, ೨ ಕ-ರವದಿಂಪಂ. ೩ ಕ.-ಪೊದಳ್ದು, ೪ ಕ-ಸೋರ್ಕುಸೋರ್ಕಿ.

ಲಾವಣ್ಯಾಬ್ಧಿತರಂಗಭಂಗಲಲಿತಭ್ರೂಭಂಗದಿವ್ಯಾಂಗನಾ
ಭಾವಾಪಾಂಗನಿರೀಕ್ಷಣಾಮೃತಕೃತಾನಂಗೋತ್ಸವಂ ಚೋದ್ಯವಿ
ದ್ಯಾವಷ್ಟಂಭವಿಜೃಂಭಿತಾಂಬರಚರೇಶಾರಾಧ್ಯನಾಗಿರ್ದ ನಿ
ನ್ನೀ ವಿದ್ಯಾಧರಲಕ್ಷ್ಮಿಪುಣ್ಯಜನಿತಂ ವಿದ್ಯಾಧರಾಧೀಶ್ವರಾ ೬

ಭವವಾರಾಶಿನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂ
ಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ ಮುಕ್ತಿಪ
ರ್ಯವಸಾನಂಬರಮಾನುಷಂಗಿಕಫಲಂ ಭೂಪೇಂದ್ರದೇವೇಂದ್ರರಾ
ಜ್ಯವಿಳಾಸಂ ಪೆಱತಲ್ತು[1] ನಂಬು ಖಚರಕ್ಷ್ಮಾಪಾಲಚೂಡಾಮಣೀ ೭

*ವ|| ಎಂದು ಧರ್ಮಪ್ರಭಾವಮುಮಂ ತತ್ಫಲಸ್ವಭಾವಮುಮಂ ತಿಳಿಪುವವಸರದೊಳುಱಿದ ಮಹಾಮತಿ ಸಂಭಿನ್ನಮತಿ ಶತಮತಿ[2]ಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತವಿತಥಾಭಿಧಾಯಿಗಳ್ ಜೀವಾಭಾವ[3]ಮನೆ ಪಿಡಿಯಚ್ಚುವಿಡಿದು;

ಒಡಲೊಳೆ ಜೀವಮಿರ್ದು ಗಡ ಸಂಚಿಸುತಿರ್ಪುದು ಪುಣ್ಯಪಾಪಮಂ
ಗಡ ಬಟಿಕತ್ತ ಬೇಱೆ ಪೆಱತೊಂದೊಡಲೊಳ್ಗಡ ತಾನೆ ನಿಂದೊಡಂ
ಬಡುವುದು ಧರ್ಮಕರ್ಮಫಲಮಂ ಗಡ ಸತ್ತನೆ ಮತ್ತೆ ಪುಟ್ಟುವಂ
ಗಡ ಪುಸಿ ಕಾಣ ಡಂಬಮಿದು ಖೇಚರ ನೀನಿದನೆಂತು ನಂಬಿದೋ ೮

ಸ್ವಯಂಬುದ್ಧನು ಧರ್ಮೋಪದೇಶಕ್ಕಾಗಿ ಅವಕಾಶ ಪಡೆದು ಹೀಗೆಂದನು: ೬. "ಹೇ ವಿದ್ಯಾಧರೇಶ್ವರ, ಲಾವಣ್ಯವೆಂಬ ಸಮುದ್ರದ ತರಂಗಭಂಗವೆಂಬ ಭ್ರೂಭಂಗವನ್ನು ಪಡೆದ ದಿವ್ಯಾಂಗನೆಯರ ಭಾವಾಪಾಂಗನಿರೀಕ್ಷಣವೆಂಬ ಅಮೃತದಿಂದ ಕಾಮೋತ್ಸವವನ್ನು ಪಡೆದಿದ್ದೀಯೆ. ವಿದ್ಯೆಯ ಆಸರೆಯಿಂದ ವಿಜೃಂಭಿತರಾದ ವಿದ್ಯಾಧರರಿಂದ ಆರಾಧ್ಯವಾದ ಈ ವಿದ್ಯಾಧರಲಕ್ಷ್ಮಿಯು ನಿನ್ನ ಪುಣ್ಯದಿಂದಲ್ಲದೆ ಮತ್ತೇನೂ ಅಲ್ಲ. ೭. ಸಂಸಾರಸಾಗರದಲ್ಲಿ ನಿಮಗ್ನರಾದವರನ್ನು ದಯೆ, ದಮ, ದಾನ, ತಪ ಮತ್ತು ಶೀಲಗಳ ರೂಪದಿಂದ ಮೈವಡೆದ ಧರ್ಮವೇ ಮುಕ್ತಿಯು ಕೈಗೆಟಕುವವರೆಗೆ ಮೇಲಕ್ಕೆತ್ತುವುದು. ಭೂಪೇಂದ್ರ, ದೇವೇಂದ್ರ ರಾಜ್ಯವಿಲಾಸವೂ ಈ ಧರ್ಮದ ಗೌಣಫಲವೇ ಹೊರತು ಮುಖ್ಯ ಫಲವಲ್ಲ, ಇದನ್ನು ನಂಬು" ವ|| ಎಂದು ಧರ್ಮದ ಪ್ರಭಾವವನ್ನೂ ಅದರ ಫಲಸ್ವರೂಪವನ್ನೂ ತಿಳಿಯಪಡಿಸಿದನು. ಆ ಸನ್ನಿವೇಶದಲ್ಲಿ ಲೋಕಾಯತಿಕ, ಯೋಗಾಚಾರ ಮತ್ತು ಮಾಧ್ಯಮಿಕ ಮತಗಳ ಆ ಯಥಾರ್ಥವಾದಿಗಳಾದ ಮಹಾಮತಿ, ಸಂಭಿನ್ನಮತಿ ಮತ್ತು ಶತಮತಿಗಳೆಂಬ ವಿದ್ವಾಂಸರು "ಜೀವವಿಲ್ಲ" ಎಂಬ ವಾದವನ್ನು ಮುಂದಿಟ್ಟರು. ೮. ಮಹಾಮತಿ ಹೇಳಿದನು: ಒಡಲಲ್ಲಿಯೇ ಜೀವನಿದ್ದಾನಂತೆ! ಅವನು ಪುಣ್ಯಪಾಪಗಳನ್ನು ಸಂಗ್ರಹಿಸುತ್ತಿದ್ದಾನಂತೆ! ಅವನು ಬೇರೊಂದು ಒಡಲಲ್ಲಿ ಹುಟ್ಟುತ್ತಾನಂತೆ! ಅದು ತಾನೇ ನಿಂತು

---

೧ ಕ-ಪೆಱವಲ್ತು; ಖ-ಪೆಱದಲ್ತು, ೨ ಖ-ಶತಬುದ್ಧಿ ೩ ಖ-ಜೀವಭಾವ,

* ಈ ವಚನವು ಡಾ|| ಬಸವರಾಜು ಅವರು ಸಂಪಾದಿಸಿದ ಪ್ರತಿಯಲ್ಲಿ ಇಲ್ಲವಾದ್ದರಿಂದ ವಾಕ್ಯವು ಅಪೂರ್ಣವಾಗಿದೆ. ಸಂದರ್ಭಶುದ್ಧಿ ಇಲ್ಲವಾಗಿದೆ.

ತಲೆವಱಿದುಟ್ಟುದಿಕ್ಕಿ ಸುರಲೋಕಸುಖಂಗಳನುಣ್ಬೆವೆಂಬ ಬ
ತ್ತಲೆಗರ ಮಾತುಗೇಳದಿರು[1] ಬಾೞ್ವಿನಮಿಂದ್ರಿಯವರ್ಗದಿಚ್ಛೆಯಂ
ಸಲಿಸಿ ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ
ನಲಿವುದು ಕಂಡರಾರ್ ಮಱುಭವಂಗಳನಿಲ್ಲಿ ವಿಯಚ್ಚರೇಶ್ವರಾ ೯

ವ॥ ಅದಲ್ಲದೆಯುಂ ಸ್ನಾಯ್ವಲಾಬೂದಂಡಾಂಗುಷ್ಠಾಂಗುಳಿಪ್ರಯತ್ನದಿಂ ಶ್ರವಣರಮಣೀಯ ಕ್ವಣಿತಮೆಂತು ನೆಗಟ್ಟಿಪ್ಪುದು; ಪಿಷ್ಟೋದಕಗುಡಧಾತಕೀಸಂಯೋಗದಿಂದಮೆಂತು ಮದವಿಕಾರಮೆಸೆದಪ್ಪುದು; ಅಂತೆ, ಕಾಯಾಕಾರಪರಿಣತಪೃಥ್ವಪ್ತೇಜೋವಾಯುಗಳತ್ತಣಿಂ[2] ಬಂದು ಗರ್ಭಾದಿ ಮರಣಪರ್ಯಂತಂ ತದಾತ್ಮಕಂ ಚೈತನ್ಯಂ ಪುಟ್ಟುಗುಂ ; ಅದಱಿಂ ಪರಲೋಕಮಿಲ್ಲ; ಪರಲೋಕಮಿಲ್ಲದಂದು ತಲ್ಲೋಕಸುಖಾನುಭವಾಪೇಕ್ಷೆಯಿನೈಹಿಕಸುಖವಿಮುಖನಾಗಿ ಶರೀರಾರ್ಥವ್ಯಯಂಮಾಡುವಾತಂ ಕಯ್ಯದಂ ಬಿಟ್ಟು ಕಾಲದರ್ಕೆಱಗುವಾತನಂ ಪೋಲ್ಗುಂ – ಎಂದು ಬೃಹಸ್ಪತಿಮತಾನುಸಾರಿಯಪ್ಪ ಮಹಾಮತಿ ನುಡಿದು ಮಾಣ್ದ ತದನಂತರದೊಳ್; ವಿಜ್ಞಾನವಾದಮನಾಶ್ರಯಿಸಿ, ಪೂರ್ವಪೂರ್ವಚಿತ್ತ ವಿಶೇಷಪ್ರಭವಂಗಳುತ್ತರೋತ್ತರ

ಧರ್ಮಕರ್ಮಫಲಗಳನ್ನುಣಿಸುತ್ತದಂತೆ! ಸತ್ತವನೇ ಮತ್ತೆ ಪುನಃ ಹುಟ್ಟುತ್ತಾನಂತೆ, ಇವೆಲ್ಲ ಹುಸಿಮಾತುಗಳು, ಡಾಂಭಿಕಾಚಾರಗಳು. ಎಲೇ ಖೇಚರ! ನೀನಿದನ್ನೆಲ್ಲ ಎಂತು ನಂಬುವೆ? ೯. "ತಲೆಗೆ ಕೇಶಲುಂಚನ ಮಾಡಿಸಿಕೊಳ್ಳುವೆವು. ಬಟ್ಟೆಗಳುಡುವುದನ್ನು ಬಿಡುವೆವು. ಅದರಿಂದ ಸ್ವರ್ಗಸುಖವನ್ನುಣ್ಣುವೆವು." ಎಂಬ ದಿಗಂಬರರ ಮಾತನ್ನು ನಂಬದಿರು. ಇರುವವರೆಗೆ ಇಂದ್ರಿಯವರ್ಗದಲ್ಲಿ ಇಚ್ಛೆಯನ್ನು ಸಲ್ಲಿಸು. ವಸಂತದಲ್ಲಿ ಚಿಗುರನ್ನು ಕಚ್ಚುವ ಕೋಗಿಲೆಯಂತೆ ವಿಶೇಷವಾಗಿ ನಲಿ. ಎಲೈ ಖಚರೇಶ್ವರ! ಅದೆಂತು ಜನ್ಮಾಂತರಗಳನ್ನು ನಂಬಲು ಸಾಧ್ಯ? ವ॥ ನರ, ಸೋರೆಬುರುಡೆ, ಕೋಲು, ಹೆಬ್ಬೆರಳುಗಳ ಪ್ರಯತ್ನದಿಂದ ಕಿವಿಗಿಂಪಾದ (ತಂಬೂರಿಯ) ಧ್ವನಿಯುಂಟಾಗುವಂತೆ ಹಿಟ್ಟು, ನೀರು, ಬೆಲ್ಲ, ಧಾತಕೀಪುಷ್ಪ (ಮರಾಟಮೊಗ್ಗು)ಗಳ ಸಂಯೋಗದಿಂದ ಮದವಿಕಾರವುಂಟಾಗುವಂತೆ, ದೇಹದ ರೂಪದಿಂದ ಕಾಣಿಸಿಕೊಂಡ ಮಣ್ಣು, ನೀರು, ತೇಜಸ್ಸು ಮತ್ತು ಗಾಳಿಗಳಿಂದ ಗರ್ಭಾದಿಯಿಂದ ಹಿಡಿದು ಮರಣಪರ್ಯಂತ ಪೃಥಿವ್ಯಾದ್ಯಾತ್ಮಕವಾದ ಚೈತನ್ಯವು ಹುಟ್ಟಿಕೊಳ್ಳುತ್ತದೆ. ಆದಕಾರಣ ಪರಲೋಕವಿಲ್ಲ. ಪರಲೋಕವಿಲ್ಲದಿರುವಾಗ ಪರಲೋಕ ಸುಖಾನುಭವಪ್ರಾಪ್ತಿಗಾಗಿ ಐಹಿಕಸುಖವಿಮುಖನಾಗಿ ಶರೀರವನ್ನು ಸವೆಸುವವನು, ಕೈಗೆ ಸಿಕ್ಕಿದ್ದನ್ನು ಬಿಟ್ಟು ಕಾಲಿಂದ ದೂರಹೋಗಿ ಪಡೆಯಬಹುದಾದ್ದಕ್ಕೆ ಆಶಿಸತಕ್ಕವನನ್ನು ಹೋಲುವನು"- ಎಂದು ಬೃಹಸ್ಪತಿ ಮತಾನುಸಾರಿಯಾದ ಮಹಾಮತಿಯು ನುಡಿದನು. ಬಳಿಕ ಸಂಭಿನ್ನಮತಿಯು ವಿಜ್ಞಾನವಾದವನ್ನವಲಂಬಿಸಿ ಹೀಗೆಂದನು: "ಹಿಂದು ಹಿಂದಿನ ವಿಜ್ಞಾನವಿಶೇಷಗಳಿಂದ ಮುಂದು ಮುಂದಿನ ವಿಜ್ಞಾನಗಳು ಹುಟ್ಟುತ್ತವೆ. ಕಾರ್ಯಕಾರಣಕ್ಷಣಗಳೊಡನೆ ಸೇರಿಕೊಂಡು ಬೀಜವುಳಿಯದಂತೆ ಪ್ರತಿಕ್ಷಣದಲ್ಲಿ

೧ ಕ-ಗೊಳ್ಳದಿರು. ೨ ಕ-ತೇಜೋವಾಯ್ವಾಕಾಶಂಗಳತ್ತಣಿಂ.

**ಚಿತ್ತಕ್ಷಣಂಗಳುಪಾದಾನೋಪಾದೇಯಕ್ಷಣಸಂಪೃಕ್ತಂಗಳ್ ನಿರನ್ವಯ ಪ್ರತಿಕ್ಷಣವಿಶರಾರುಗಳ್ ನಿರಂಶಂಗಳಾಗಿಯುಂ ಭ್ರಾಂತಿವಶದಿಂ ಗ್ರಾಹ್ಯಗ್ರಾಹಕಸಂವೇದನಾಕಾರತ್ರಯಾಕ್ರಾಂತಂಗಳ್ವಿಜಾತೀಯಾ ವ್ಯವಧಾನಲಘೂತ್ಪತ್ತಿಶಾಪರಾಪರೋತ್ಪತ್ತಿಯೆಂಬಿವಱಿಂ ವಿಪ್ರಲಬ್ಧಬುದ್ಧಿಗೆ ಸಂತಾನರೂಪದಿಂ ಪುಟ್ಟುತ್ತಿರ್ದ ವಿಜ್ಞಾನಲಕ್ಷಣಂಗಳಾತ್ಮಾಭಿಧಾನಮುಂ ಪುಟ್ಟಿಸುಗುಂ, ತದೇಕತ್ವಗ್ರಾಹಕಪ್ರತ್ಯ[1]ಭಿಜ್ಞಾನಮುಂ ಲೂನಪುನರ್ಜಾತನಖಕೇಶಾದಿಗಳೊಳ್ ಪೂರ್ವಾಪರೈಕತ್ವಮಿಲ್ಲದಲ್ಲಿಯುಂ ಕಾಣಲಕ್ಕುಂ; ಅಪ್ಪುದಱಿಂದದುವುಂ ತ್ರಿಕಾಲಾನುಯಾಯಿ ಜೀವಾಸ್ತಿತ್ವಮನಱಿಪಲಾಱದು; ಅದಱಿಂ ಪರಲೋಕಸುಖಾರ್ಥ ಮಾತ್ರಾಸ್ತಿತ್ವಾಭಿನಿವೇಶದಿಂ ತನುಧನನಿಧನಂಮಾಡಿ ಸೇದೆಗಿಡಲ್ವೇಡೆಂದು ಸಂಭಿನ್ನಮತಿ ನಿಜವಿಜ್ಞಾನವಾದ ಪುರಸ್ಸರಮಾತ್ಮನಿರಾಕರಣಮನೆ ನುಡಿದು ಮಾಣೆ ; ಶೂನ್ಯವಾದಪ್ರಕಾಶನಪರಂ, ಆವುದಂತರ್ಬಹೀ ರೂಪದಿಂ ವಿಶದದರ್ಶನಾವಗಮ್ಯಂ ಅದೆಲ್ಲಮಸತ್ಯಾವಭಾಸಿ; ಎಂತು ಮರುಮರೀಚಿಕಾಸ್ವಪ್ನೇಂದ್ರ ಜಾಲಾದಿಗಳೊಳ್ ವಿಶದದರ್ಶನಾವಗಮ್ಯ ಜಲಕರಿತುರಗನರಾದಿಗಳ್, ಅಂತೆ ಜಾಗ್ರದ್ದಶಾವಭಾಸ ಮಾನಾಂತರಂಗಬಹಿರಂಗವಸ್ತುಗಳುಂ, ಅದಱಿಂ ಜೀವಮೆಂಬುದೆಲ್ಲಿತ್ತು, ಪರಲೋಕಮೆಂಬುದಾ ವೆಡೆಯದು, ಅದರ್ಕೆ ಕಾರಣಮಪ್ಪ ಪಾಪಪುಣ್ಯಂ[2]ಗಳೆತ್ತಣಿಂಬಂದುವು? ಇವೆಲ್ಲಂ ಗಂಧರ್ವನಗರ ವಿಳಾಸವಿಳಸಿತಂಗಳ್, ಅದನಱಿಯದಬೋಧ[3]ಬೋಧಿತ ತಪೋದಾನವಿಧಾನದಿಂ ಮುಧಾಕ್ಲೇಶಾಯಾಸ ನಿರತರಾಗಿ ನವೆವರೆಂದು ಶತಮತಿಯುಮೀಮಾಱ್ಕೆಯೊಳೆ ಜೀವಾಭಾವಮನೆ[4] ಸಮರ್ಥಿಸೆ;**

ನಾಶವಾಗುತ್ತಲೂ ಅಂಶರಹಿತವಾಗಿದ್ದರೂ ಭ್ರಾಂತಿಮಾತ್ರದಿಂದ ಜ್ಞೇಯ, ಜ್ಞಾತೃ, ಜ್ಞಾನಗಳ ಆಕಾರಗಳಿಂದ ವ್ಯಾಪ್ತವಾಗಿಯೂ ವಿಜಾತೀಯತೆ, ನೈರಂತರ್ಯ, ಶೀಘ್ರೋತ್ಪತ್ತಿ, ಸಾದೃಶ್ಯವುಳ್ಳ ಪೂರ್ವಾಪರೋತ್ಪತ್ತಿಯುಳ್ಳದಾಗಿರುವುದರಿಂದ ಭ್ರಾಂತಿಗೊಂಡ ಬುದ್ಧಿಗೆ ಸಂತಾನ (ಅವಿಚ್ಛಿನ್ನ) ರೂಪದಿಂದ ಹುಟ್ಟುತ್ತಿರುವ ವಿಜ್ಞಾನಗಳೇ "ಆತ್ಮ" ಎಂಬ ಹೆಸರು ಪಡೆಯುವುದು. ಅವುಗಳಲ್ಲಿ ಏಕತ್ವವನ್ನುಂಟುಮಾಡುವ ಪ್ರತ್ಯಭಿಜ್ಞಾನವು (ಅದೇ ಇದು ಎಂಬ ಜ್ಞಾನ) ಕತ್ತರಿಸಲ್ಪಟ್ಟು ಪುನಃ ಹುಟ್ಟಿಕೊಂಡ ಉಗುರು ಕೂದಲುಗಳಲ್ಲಿ ಹಿಂದುಮುಂದಿನ ಏಕತ್ವವಿಲ್ಲದಿದ್ದರೂ ಬರಬಹುದು. ಆದ್ದರಿಂದ ಅದೂ ತ್ರಿಕಾಲಾನುವರ್ತಿಯಾದ ಜೀವಾಸ್ತಿತ್ವವನ್ನು ಸಮರ್ಥಿಸಲು ಶಕ್ತವಾಗದು. ಆ ಕಾರಣ ಪರಲೋಕದ ಅಪೇಕ್ಷೆಯಿಂದ ತನುಧನಗಳನ್ನು ಸವೆಸಿ ಬಳಲಬೇಡ" ಎಂದು ವಿಜ್ಞಾನವಾದವನ್ನು ಮುಂದಿಟ್ಟು ಆತ್ಮನಿರಾಕರಣವನ್ನು ಮಾಡಿ ಸುಮ್ಮನಾದನು. ಒಡನೆ ತಲೆಯಿಕ್ಕಿ ಶತಮತಿಯು ಶೂನ್ಯವಾದವನ್ನು ಪ್ರಸ್ತಾಪಿಸಿದನು. ಯಾವುವು ಒಳಗೂ ಹೊರಗೂ ಇರುವಂತೆ ಸ್ಪಷ್ಟವಾಗಿ ತೋರುವುವೋ ಅವೆಲ್ಲವೂ ಅಸತ್ಯ. ಬಿಸಿಲುಗುದುರೆ, ಸ್ವಪ್ನ ಮತ್ತು ಇಂದ್ರಜಾಲಾದಿಗಳಲ್ಲಿ ಸ್ಪಷ್ಟವಾಗಿ ಪ್ರತ್ಯಕ್ಷವಾಗಿರುವಂತೆ ಕಾಣಿಸುವ ನೀರು, ಆನೆ, ಕುದುರೆ ಮತ್ತು ಮನುಷ್ಯಾದಿಗಳ ಹಾಗೆ ಸತ್ಯವಾಗಿರುವಂತೆ ತೋರುವುವು. ಹಾಗೆಯೇ ಜಾಗೃದ್ದಶೆಯಲ್ಲಿ ತೋರುವ ಅಂತರಂಗ ಬಹಿರಂಗ ವಸ್ತುಗಳು. ತತ್ಫಲವಾಗಿ ಜೀವವೆಂಬುದೆಲ್ಲಿದೆ? ಪರಲೋಕವೆಂಬುದು ಯಾವುದು? ಅವಕ್ಕೆ ಕಾರಣವೆನಿಸಿದ

---

೧ ಕ.-ತದೇಕತ್ವಗ್ರಾಹಕತ್ವಗ್ರಾಹಕಪ್ರತ್ಯ. ೨ ಖ.-ಪುಣ್ಯಪಾಪಂ. ೩ ಕ.-ಯದಗಾಧಬೋಧ. ೪ ಕ.- ಜೀವಾಭಾಸಮನೆ.

ತದುಪನ್ಯಸ್ತಕುಹೇತು ಕುದೃಷ್ಟಾಂತಾನರ್ಥಕ ವಚನರಚನಾಪ್ರಳಾಪಮನವ್ಯಗ್ರಕುಶಾಗ್ರೀಯಬುದ್ಧಿಸಮೃದ್ಧಂ ಸ್ವಯಂಬುದ್ಧನವಧಾರಿಸಿ,

ಅನುವದಿಸಿದಪುದು ನುಡಿ ನುಡಿ
ದನಿತುಮನೆನೆ ತೊದಳ ತೊದಳ ದೆ[೧]ಸೆಯಿಲ್ಲೆನೆ ಮಾ
ತಿನ ಪಸುಗೆ ಪಸುಗೆವಡೆದ
ತ್ತೆನೆ ನುಡಿದಂ ಮಧುರಮೃದುಗಭೀರಧ್ವನಿಯಿಂ ೧೦

ವ|| ನಿಮ್ಮ[೨] ಮುನ್ನೆ ನುಡಿದ ಕಾಯಾಕಾರಪರಿಣತಭೂತಸ್ವಭಾವ[೩]ಮೆ ಚೈತನ್ಯಮರ್ಥಾಂತರ ಭೂತಮಲ್ಲೆಂಬ ನುಡಿ ಕಾಯಾಕಾರಪರಿಣತಭೂ[೪]ತ ಚೈತನ್ಯಂಗಳ್ ಬಹಿರಂಗಮರ್ುಖಾವಭಾಸಿಗಳ್ ಬಾಲ್ಯಾದಿ ರಾಗಾದಿವಿರುದ್ಧಧರ್ಮಾಧ್ಯಾ[೫]ಸಿತಂಗಳುಮೊರ್ಬನಿಂದೊಂದೆಸಮಯದೊಳ್ ನಿಯಮದಿಂ ದ್ರವ್ಯಾಂತರಭಾವದಿಂ ಭಿನ್ನಪ್ರ[೬]ಮಾಣಗ್ರಾಹ್ಯಂಗಳಪ್ಪುದಱಿಂ ಕೂ[೭]ಡಿಬಾರದು. ದೇಶಭೇದದಿಂ ಬೇಱವೇಱ ಕಾಣ[೮]ಲಾಗದದಱಿಂದದರ್ಕೆ ಭೇದಮೆಂಬೆಯಪ್ಪೊಡೆ ಶರೀ[೯]ರರೂಪಪರಿಣತಾವನಿಪ ವನಸಖಿಪವನಂಗಳ್ಗೆ ದೇಶಭೇದಮಿಲ್ಲ, ಅವರ್ಕಮೇಕತ್ವಮಾಗಿ 'ಚತ್ವಾರ್ಯೇವತತ್ವಾನಿ'ಯೆಂಬ ನಿನ್ನ ಮಾತು ವಿಘಟಿಸುಗುಂ, ಪಿಷ್ಟೋದಕಾದಿದ್ರವ್ಯಾನ್ವಯವ್ಯತಿರೇಕಾನುವಿಧಾಯಿಯಪ್ಪ ಮದಶಕ್ತಿ ಎಂತು ತತ್ಕಾರ್ಯಮಂತೆ

ಪುಣ್ಯಪಾಪಗಳೆಲ್ಲಿಂದ ಬಂದುವು? ಇವೆಲ್ಲವೂ ಗಂಧರ್ವನಗರದ ವಿಲಾಸದಂತೆ ತಟಕ್ಕನೆ ತೋರಿಕೊಂಡು ಕಣ್ಮರೆಯಾಗತಕ್ಕವು. ಇದನ್ನರಿಯದೆ ಅಜ್ಞಾನದಿಂದ ಉಪದಿಷ್ಟವಾದ ತಪೋದಾನಾದಿಗಳಿಂದ ವೃಥಾಯಾಸವನ್ನು ಏಕೆ ಕೈಗೊಳ್ಳುವಿರಿ? ಈ ಎಲ್ಲ ಕಾರಣಗಳಿಂದ ಜೀವವೆಂದಿಗೂ ಇಲ್ಲ" ಎಂದನು. ಈ ಮೇಲಿನ ಪ್ರತಿವಾದಿಗಳ ಕುಹೇತು, ಕುದೃಷ್ಟಾಂತ ಮತ್ತು ಅನರ್ಥಕ ಮಾತುಗಳನ್ನು ಗಮನಿಸಿ ಕುಶಲತೆಯಿಂದ ಸ್ವಯಂಬುದ್ಧನು, ೧೦. ಹಿಂದೆ ತಾನಾಡಿದ ಮಾತನ್ನು ಈಗಿನ ನುಡಿ ಅನುವಾದಿಸುವುದೋ ಎಂಬಂತೆಯೂ ಇಂಪಾದ ನುಡಿ ಸುಳ್ಳಿನ ಸುಳಿವೂ ಇಲ್ಲದಂತೆ ಮಾಡುತ್ತಲೂ ನುಡಿಯ ವಿಭಾಗವು ವಿವೇಕವನ್ನು ಸೂಸುತ್ತಲೂ ಇರುವಂತೆ ಮೃದು ಮಧುರ ಗಂಭೀರಧ್ವನಿಯಿಂದ ಮಾತಾಡಿದನು. ವ|| "ನೀವು ಹೇಳಿದಂತೆ ದೇಹಾಕೃತಿಯನ್ನಪ್ಪಿದ ಭೂತ-ಸಮುದಾಯವೇ ಚೈತನ್ಯ. ಅದು ಬೇರೊಂದಲ್ಲ-ಎಂಬ ಮಾತು ಸರಿಯಲ್ಲ. ಏಕೆಂದರೆ ದೇಹವು ಬಹಿರಿಂದ್ರಿಯ ಗೋಚರ. ಜೀವವು ಅಂತರಿಂದ್ರಿಯ ಗೋಚರ. ಚೈತನ್ಯವು ಭೌತಿಕವಾದರೆ ಒಬ್ಬನಲ್ಲಿಯೇ ಒಂದೇ ಸಮಯದಲ್ಲಿಯೇ ಅನ್ಯೋನ್ಯ ವಿರುದ್ಧಗಳಾದ ಬಾಲ್ಯ, ತಾರುಣ್ಯ, ವೃದ್ಧತ್ವಾದಿ ಧರ್ಮಗಳನ್ನೊಪ್ಪಲು ಸಾಧ್ಯವಿಲ್ಲದೆ ಹೋಗುವುದು. ಅಲ್ಲದೆ ಚೈತನ್ಯವು ಅನ್ಯಪದಾರ್ಥವೇ ಆಗಿದೆ. ಶರೀರವು ನೇತ್ರಾದಿ ಇಂದ್ರಿಯಗೋಚರ. ಚೈತನ್ಯವು ಮಾನಸಗೋಚರ. ಇವು ಭಿನ್ನಪ್ರಮಾಣ ಗ್ರಾಹ್ಯಗಳು. ಶರೀರವನ್ನೂ ಜೀವವನ್ನೂ ಬೇರೆ ಬೇರೆ ಸ್ಥಳದಲ್ಲಿ ಕಾಣಲು ಸಾಧ್ಯವಿಲ್ಲವಾದ್ದರಿಂದ ಭಿನ್ನಪ್ರಮಾಣಗ್ರಾಹ್ಯವೆನ್ನುವುದು ಸರಿಯಲ್ಲವೆಂದರೆ ಶರೀರರೂಪವನ್ನಪ್ಪಿದ ಭೂಮಿ ಜಲಾಗ್ನಿ ವಾಯುಗಳಿಗೆ ಏಕತ್ವವೊದಗಿ "ಚತ್ವಾರ್ಯೇವ

೧ ಕ.-ದೆಸ. ೨ ಕ-ನಿನ್ನ ೩ ಕ.-ವಮೆ. ೪ ಖ-ಭೂತಮೆ. ೫ ಗ-ಧ್ಯಾಸಿಗಳುಂ. ೬ ಖ.-ಪ್ರಮಾಣಮೆಗ್ರಾಹ್ಯಂಗಳುಮಪ್ಪುದರಿಂ; ಕ.-ಣಮೆಗ್ರಾಹ್ಯಂಗಳಪ್ಪುದರಿಂ ೭ ಕ.-ಕೂಡುದದುವೆ. ೮ ಖ-ಕಾಣಲಾದುದರಿಂ. ೯ ಕ-ವಿಶವರೂಪ.

ತಚ್ಚೈತನ್ಯಮುಂ ಭೂತಾನ್ವಯವ್ಯತಿರೇಕಾನುಕಾರಿಯಪ್ಪುದಱಿಂ ಭೂತೋಪಾದಾನಕಾ[೧]ರಣಕಾರ್ಯಮೆಂಬೀ ವಚನಮುಪಾದಾನವಿಕಾರ*ಮನಲ್ಲದೆ ವಿ[೨]ಕಾರಮಂ ಕೈಕೊಳ್ಳದು, ಉಪಾದೇ*ಯಂ[೩] ತಂನ ವಿಕಾರಮನುಪಾದೇಯಕೊಪ್ಪಿಸುವ ಪೂರ್ವಾಕಾರಮಂ ಬಿಸುಟ್ಟುತ್ತರಾಕಾರಮಂ ಕೈಕೊಳ್ವುಪಾದಾನ ಧರ್ಮಮುಂ ಭೂತಚೈತನ್ಯಂಗಳೊಳ್ ಕಾಣಲಾಗದುದಱಿಂ ಕೂ[೪]ಡಿಬಾರದು ; ಬಾಲ್ಯಾದಿವಯೋ ವಿಶೇಷಂಗಳೊಳ್ ಶರೀರಂ ಬಳೆಯೆ ಚೈತನ್ಯಂ ಬಳೆವುದಱಿಂ ಭೂತೋಪಾದಾನ ಕಾರಣಕಾರ್ಯ ಚೈತನ್ಯಮೆಂಬೆಯಪ್ಪೊಡೆಯದುವುಂ ಹಿತಾಹಿತ ವಿವೇಕವಿಕಳತೆಯಿಂ ತಮ್ಮಂ ತಾಮೆ ಕಟ್ಟಿ[೫]ಸುವ ಮಹಾಕಾಯಂಗಳಪ್ಪ ಕರಿಪತಿಗ[೬]ಳಿಂದಂ ಅನೈಕಾಂತಿಕಂ ಕೆಲರ್ತನುತರತನುಗಳೊಳಮತಿ ವಿಶದಪ್ರಜ್ಞಾತಿಶಯಮಂ ಕಾಣಲಾದಪ್ಪುದು, ಶರೀರವೃದ್ಧಿಯೊಳ್ ಚೈತನ್ಯವೃದ್ಧಿಯೆಂಬುದುದಕ ವೃದ್ಧಿಯೊಳಂಕುರ ವೃದ್ಧಿಯೆಂತಂತೆ ಸಹಕಾರಿಕಾರಣಮೆಂದನೇಕ ಯುಕ್ತ್ಯೋಕ್ತಿಗಳಿಂ ಭೂತವಾದಿಯಪ್ಪ ಮಹಾಮತಿಯಂ ನಿರಾಕರಿಸಿ, ವಿಶ್ವವಿಜ್ಞಾನವಾದಮೆಂಬಿದಂ ವಿಜ್ಞಾನದಿಂದೆ ನೀಂ ಸಾಧಿಸುವೆಯಪ್ಪೊಡೆ ಸಾ[೭]ಧ್ಯಸಾಧನಂಗಳ ವ್ಯಕ್ತಮಪ್ಪುದಱಿಂ ಸಾಧ್ಯಂ ನಿಶ್ಚಯಮಾಗದು, ವಿಜ್ಞಾನವ್ಯತಿರಿಕ್ತಸಾಧನವಾಕ್ಯೋಪನ್ಯಾಸದಿಂ ಸಾಧಿಸುವೊಡಾ ವಾಕ್ಯಮುಂ[೮] ಬಹಿರರ್ಥಮಪ್ಪುದಱಿಂ ಬಾಹ್ಯಾರ್ಥಸಿದ್ಧಿಯಕ್ಕುಂ; ಆ ವಾಕ್ಯಮುಂ ವಿಜ್ಞಾನಮೆಂಬೆಯಪ್ಪೊಡೆ ಪೂರ್ವೋಕ್ತದೋಷಪಾಷಾಣಸಂಚೂರ್ಣಿತಮತಿಯೈ ಏನನೇತಱಿೊಳ್ನಿಶ್ಚಯಿಸುವೈ; ಮತ್ತಂ ವಿಜ್ಞಾನಂ

ತತ್ತ್ವಾನಿ" ಎಂಬ ನಿನ್ನ ಮಾತು ಸುಳ್ಳಾದೀತು. ಪಿಷ್ಟೋದಕಾದಿ ದ್ರವ್ಯಗಳು ಕಲೆತರೆ ಮದಶಕ್ತಿಯುಂಟಾಗುವುದು. ಅವಿಲ್ಲದಿದ್ದರೆ ಮದಶಕ್ತಿಯುಂಟಾಗದು. ಹಾಗೆಯೇ ಹಿಟ್ಟು ನೀರು ಇವುಗಳ ಅನ್ವಯ ವ್ಯತಿರೇಕಾನುಸಾರಿಯಾದ ಮದಶಕ್ತಿಯಂತೆ ಭೂತಸಮುದಾಯ ವಿದ್ದರೆ ಚೈತನ್ಯ; ಅದಿಲ್ಲದಿದ್ದರೆ ಚೈತನ್ಯವಿಲ್ಲ. ಆದ್ದರಿಂದ ಭೂತೋಪಾದಾನಗಳ ಕಾರ್ಯವೇ ಚೈತನ್ಯ-ಎಂಬುದು ಸರಿಯಲ್ಲ. ಏಕೆಂದರೆ ಉಪಾದೇಯವು ಉಪಾದಾನಧರ್ಮವಾದ ಜಡತ್ವವನ್ನಲ್ಲದೆ ಬೇರೆ ಧರ್ಮವನ್ನು ಪಡೆಯದು. ಉಪಾದೇಯಧರ್ಮವಾದ ಚೈತನ್ಯವು ಭೂತಗಳಲ್ಲಿಯೂ, ತನ್ನ ಧರ್ಮವನ್ನು ಉಪಾದೇಯಕ್ಕೆ ಒಪ್ಪಿಸುವ ಉಪಾದಾನಧರ್ಮ ವಾದ ಜಡತ್ವವು ಚೈತನ್ಯದಲ್ಲಿಯೂ ಕಾಣಬರದಿರುವುದರಿಂದ ಭೂತಗಳ ಕಾರ್ಯಚೈತನ್ಯ-ಎಂಬುದು ಸರಿಯಲ್ಲ. ಪೃಥಿವ್ಯಾದಿ ಭೂತಗಳಲ್ಲಿ ಚೈತನ್ಯವಿಲ್ಲ. ಅವು ತಮ್ಮ ಸ್ವರೂಪವನ್ನು ಬಿಟ್ಟು ಇನ್ನೊಂದು ರೂಪವನ್ನುಂಟುಮಾಡುವ ಧರ್ಮವನ್ನು ಪಡೆದಿಲ್ಲ. ಬಾಲ್ಯ ತಾರುಣ್ಯ ಮತ್ತು ವಾರ್ಧಕ್ಯವೆಂಬ ವಯೋವಿಶೇಷರೂಪವಾದ ಶರೀರವು ಬೆಳೆದಂತೆಯೆ ಚೈತನ್ಯವೂ ಬೆಳೆಯುವುದರಿಂದ ಭೂತೋಪಾದಾನ ಕಾರಣಕಾರ್ಯವೇ ಚೈತನ್ಯ. ಎಂದರೆ ಅದೂ ಹಿತಾಹಿತ ವಿವೇಕವಿಲ್ಲದೆ ತಮ್ಮನ್ನು ತಾವೇ ಕಟ್ಟಿಸಿಕೊಳ್ಳುವ ಮಹಾದೇಹಗಳಾದ ಆನೆಗಳಂತೆ ಆಗಿ ವ್ಯಭಿಚರಿತವಾಗುವುದು. ಹೇಗೆಂದರೆ, ಅತಿಸೂಕ್ಷ್ಮವಾದ ದೇಹಗಳಲ್ಲಿಯೂ ಅತಿಸ್ವಚ್ಛವಾದ ಪ್ರಜ್ಞಾವಿಶೇಷವನ್ನು ಕಾಣಬಹುದಾಗಿದೆ. ಶರೀರವೃದ್ಧಿಯಿದ್ದರೆ ಚೈತನ್ಯವೂ ವೃದ್ಧಿಯಿಂದಿರುವುದು. ನೀರು ಹೆಚ್ಚಾಗಿದ್ದರೆ ಮೊಳಕೆ ಬೆಳೆಯುವಂತೆ ಸಹಕಾರಿ ಕಾರಣದ

---

೧ ಕ.-ಕಾರ್ಯಕಾರಣ. ೨ ಸಾಕಾರಮಂ. ೩ ಮುಂ ೪ ಕ.-ಕೂಡದು. ೫ ಕ.-ಕಟ್ಟಿಸಿಕೊಳ್ವ. ೬ ಕ.-ಳಿಂದವೆಕಾಂತಿ. ೭ ಖ-ಸಾಧ್ಯಸಾಧನಂಗಳಿವೈಕ್ಯಮಪ್ಪುದರಿಂ. ೮ ಕ.-ಗಳ್ಗೆಸೆಬ್ಯಂಮಾರ್ವುದರಿಂ. ಕ.-ಮೆ.

* 'ವಿಕಾರಮಲ್ಲದೆ' ಅನ್ಯತ್ರ. * 'ಉಪಾದೇಯಧರ್ಮಮುಂ' ಅನ್ಯತ್ರ

ವಿಜ್ಞಾನಾಂತರಗ್ರಾ[೧]ಹಕಮಕ್ಕುಮಪ್ಪೊಡಾವ ಮಾಟಿಕ್ಕೆಯೊಳ್ ವಿಜ್ಞಾನಾಂತರಮಪ್ಪುದಾ ಮಾಟಿಕ್ಕೆಯೊಳೆ ಬಹಿರರ್ಥಸಿದ್ಧಿಯಾಗಿ ಸರ್ವಪ್ರತ್ಯಯ ನಿರಾಲಂಬನವಾದಂ ಕಿಡುಗುಂ ಅದುವುಂ ವಿಜ್ಞಾನಾಂತರಗ್ರಾ[೨]ಹಿಯಾಗದಪ್ಪೊಡೆ ಸಂತಾನಾಂತರ ನಿರಸನಮಕ್ಕುಂ ಅನುಮಾನದಿಂ ಸಂತಾನಾಂತರಮಂ ಸಾಧಿಸುವೆನೆಂಬೆಯು[೩]ಪ್ಪೊಡಂ ಬಹಿರರ್ಥಸಿದ್ಧಿಯಕ್ಕುಂ; ಮತ್ತಂ ವಿಜ್ಞಾನಮಾತ್ರಮಲ್ಲದೆ ಪೆಱತಿಲ್ಲಕ್ಕುಮಪ್ಪೊಡೆ ವಿಜ್ಞಾನಮಾತ್ರಮೆ ತತ್ವಮೆಂಬೀ ವಚನವಿಜ್ಞಾನಂಗಳ್, ಬಾಹ್ಯಾರ್ಥ ಶೂನ್ಯಂಗಳಪ್ಪುದಱಿನನಂ[೪]ತ್ಯಂಗಳಕ್ಕುಮಾದಂದಸತ್ಯೇತರ ವಿಭಾಗಂಗಳಂ ಪಡೆಯಲಾಗದು, ಅದು ಸಾಧನದೂಷಣಪ್ರಯೋಗಾನ್ಯಥಾನುಪಪತ್ತಿಯಿಂ ಬಹಿರರ್ಥಸಿದ್ಧಿಯಕ್ಕುಮದಱಿಂ ವಿಜ್ಞಾನಮಾತ್ರಮೆ ತತ್ವಮಾತ್ಮಾದಿ ತತ್ವಮಿಲ್ಲೆಂಬ ನಿನ್ನಮಾತು ಭಿನ್ನಭಾಜನಸಮಾನಮೆಂದು ಸಂಭಿಂನಮತಿಗಂ ಪ್ರತಿ[೫]ಭಾಭಂಗಮಂ ಮಾಡಿ; ಸಕಳಬಹಿರಜ್ಞಾನ್ತರಜ್ಞ[೬]ತತ್ವಂಗಳ್ ಶೂನ್ಯಂಗಳೆಂಬಿದನಱಿಪುವ ಭವತ್ಪ್ರತ್ಯಯಾಭಿಧಾನಂಗಳ್ ಶೂನ್ಯಂಗಳೆ ಅಕ್ಕುಮಪ್ಪೊಡೆ ಸರ್ವಶೂನ್ಯಮೆಂಬೀ ನಿನ್ನ ಮಾತು ಕೆಟ್ಟು ಪೋಕುಂ ತತ್ಪ್ರತ್ಯಯಾಭಿಧಾನಂಗಳುಳ್ಳೊಡೆ ಅವೆಂತೊಳವಂತೆ ವಸ್ತುಗಳೆಲ್ಲಮೊಳವಪ್ಪುದಱಿನ ನಾದ್ಯನಿಧನಸ್ವಭಾವನುಂ ಸುಕೃತದುಷ್ಕೃತಕರ್ಮೋಪಾರ್ಜನನುಂ ತತ್ಫಲಭಾಜನನುಂ ಸೂಕ್ಷ್ಮರೂಪನು ಮನಂತಜ್ಞಾನಾದಿಗುಣರೂ[೭]ಪನುಂ ಸಂಹರಣವಿಸರ್ಪಣಾಸ್ವರೂಪನುಮಾತ್ಮೋಪಾತ್ತ ಶರೀರಪ್ರಮಾಣ ನುಮುತ್ಪಾದವ್ಯಯಧ್ರುವ್ಯಾತ್ಮಕನುಂ ಸಕಳಕರ್ಮನಿರ್ಮೂಲನಕರನುಂ ತ್ರಿಲೋಕ ಶಿಖರಿಶೇಖರನುಮಪ್ಪ

ಪುಷ್ಕಳತೆಯಿಂದ ಆಗಿದೆ" ಎಂದು ಹೇಳಿ ಅನೇಕ ಯುಕ್ತಿಗಳಿಂದ ಮಹಾಮತಿಯ ವಾದವನ್ನು ತಿರಸ್ಕರಿಸಿದನು. ಅನಂತರ, "ವಿಶ್ವಂ ವಿಜ್ಞಾನಂ ವಿಜ್ಞಾನತ್ವಾತ್" ಎಂಬ ಅನುಮತಿಯಿಂದ ವಿಶ್ವ ವಿಜ್ಞಾನವಾದವನ್ನು ಸಾಧಿಸಲಾಗದು. ಸಾಧ್ಯ ಹೇತುಗಳಿಗೆ ಐಕ್ಯವುಂಟಾಗುವುದರಿಂದ ಸಾಧ್ಯವು (ವಿಜ್ಞಾನ) ನಿಶ್ಚಯಗೊಳ್ಳದು. "ವಿಶ್ವಂ ವಿಜ್ಞಾನಂ ಆಪ್ತವಾಕ್ಯತ್ವಾತ್" ಎಂದು ಹೇತುವನ್ನು ಹೇಳಿ ಸಾಧಿಸುವೆನೆಂದರೆ, ಆಪ್ತವಾಕ್ಯವು ವಿಜ್ಞಾನ ವ್ಯತಿರಿಕ್ತಾರ್ಥವಾಗುವುದರಿಂದ ಬಾಹ್ಯಾರ್ಥಸಿದ್ಧಿಯಾಗುವುದು. ಅದನ್ನೂ ವಿಜ್ಞಾನವೆಂದೇ ಹೇಳುವುದಾದರೆ, ಪೂರ್ವೋಕ್ತ ದೋಷ ಪಾಷಾಣಗಳಿಂದ ಚೂರ್ಣಿತಬುದ್ಧಿಯಾದ ಎಲೈ ಮೂಢನೇ! ಏನನ್ನು ಏತರಿಂದ ಸಾಧಿಸುವೆ? ವಿಜ್ಞಾನವನ್ನು ಮತ್ತೊಂದು ವಿಜ್ಞಾನದಿಂದ, ಅದನ್ನು ಮತ್ತೊಂದರಿಂದ ಸಾಧಿಸುವೆನೆಂದರೆ, ಬಹಿರರ್ಥವನ್ನು ಸಾಧನೆ ಮಾಡಿದಂತಾಗಿ ಸರ್ವಪ್ರತ್ಯಯ ನಿರಾಲಂಬನವಾದವು ಕೆಡುವುದು. ಅದು ಬೇರೊಂದು ವಿಜ್ಞಾನದಿಂದ ತಿಳಿಯಲಾಗದ್ದೆಂದರೆ ವಿಜ್ಞಾನ ಸಂತಾನಂತರವನ್ನು ನಿರಸನ ಮಾಡಿದಂತಾಗುವುದು. ಅನುಮಾನದಿಂದ ಸಂತಾನಾಂತರವನ್ನು ಸಾಧನೆ ಮಾಡುವೆನೆಂದರೆ, ಬಹಿರರ್ಥ ಸಿದ್ಧಿಯಾದಂತಾಗುತ್ತದೆ. ತತ್ಫಲವಾಗಿ "ವಿಜ್ಞಾನಮಾತ್ರವೇ ಸತ್ಯ; ಆತ್ಮಾದಿಗಳು ಅನಿತ್ಯ" ಎಂಬ ನಿನ್ನ ಮಾತುಗಳು ಒಡೆದ ಮಡಕೆಗೆಣೆಯಾಗುವುವು- ಎಂದು ಹೇಳಿ ಸಂಭಿನ್ನಮತಿಯ ಪ್ರತಿಜ್ಞೆಯನ್ನು ಖಂಡಿಸಿದನು. "ಬಹಿರಂತಸ್ತತ್ವಗಳೆಲ್ಲ ಶೂನ್ಯವಾದುವೆನ್ನುವ ನಿನ್ನ ಮಾತುಗಳೂ ಶೂನ್ಯವಾದುವೇ. ಆಗ ಸರ್ವವೂ ಶೂನ್ಯ ಎಂಬ ನಿನ್ನ ಮಾತುಗಳು ಅರ್ಥವಿಲ್ಲದಾಗುವುವು. ಬಹಿರಂತಸ್ಸತ್ವಗಳಿರುವುವಾದರೆ, ಅವುಗಳಂತೆಯೆ ಇತರ ವಸ್ತುಗಳೂ ಇದ್ದೇ ಇರುವುವು. ಆದ್ದರಿಂದ ಹುಟ್ಟುಸಾವುಗಳಿಲ್ಲದವನೂ ಪುಣ್ಯಕರವೂ ಪಾಪಕರವೂ

೧ ಕ.-ಗ್ರಾಹಿಯಕ್ಕು. ೨ ಕ.-ಗ್ರಾಹಿಯಪ್ಪುದಪ್ಪೊಡೆ. ೩ ಖ-ಯೆಪ್ಪೊಡಂತುಂ. ೪ ಖ.-ವಿಜ್ಞಪ್ತಿ. ೫ ಕ.ಖ.-ಪ್ರತಿಭಂಗಂ. ೬ ಕ.-ತತ್ವದೊಳ್. ೭ ಕ.-ಸಂಪೂರ್ಣನುಂ.

ಜೀವನುಂಟೆಂದು ಶತಮತಿವೆರಸು ಮೂವರುಂ ಪ್ರತಿವಾದಿಗಳನಪ್ರತಿಹತಪ್ರತಿಭೆ[೧]ಯಿನಪಗತ ಪ್ರತಿಭ[೨]ರ್ಮಾಡಿ ಸಭಾಪತಿಯಾಗಿರ್ದ ಮಹಾಬಳನುಮಂ ಪ್ರಾಶ್ನಿಕರಾಗಿರ್ದ ವಿದ್ವಜ್ಜನಮುಮಂ ಸಭಾಜನಮುಮಂ ತಿಳಿಪಿ.

ಪುಸಿಯಪರಾಂಗನಾರತದ ಮದ್ಯದ ಮಾಂಸದ ಮೆಯ್ಯೊಳ್ಜಿಲ್ದ[೩] ದು
ರ್ವ್ಯಸನಿಯ ಮಾಡಿದೋದೆ[೪]ನಿಮಗಾಗಮಮಾಗಿರಸತ್ಯ[೫]ವಾದಮಂ
ಪೊಸಯಿಸಿ ಜೀವನಿಲ್ಲ ಮೋಕ್ಷಿಯಿಲ್ಲಜಿನಿಲ್ಲ ಪರತ್ರೆಯಿಲ್ಲೆನಲ್
ಕಸಕಳಿ[೬]ಯಂತು ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್ ೧೧

ವ|| ಎಂದು ಮತ್ತಮವರನೆ ತಿಳಿಪುವ ಬಗೆಯಿಂ ದೃಷ್ಟಶ್ರುತಾನುಭೂತಕಥೆಗಳಂ ತದನ್ವಯಸಂಬಂಧಿಗಳನಿಂತೆಂದು ಪೇಱಲ್ತಗುಳ್ದಂ. ಈತನ ಸಂತತಿಯೊಳರವಿಂದನೆಂಬನಂಬರಚರಂ ನಿಜಮನೋವಿಜಯಿ ವಿಜಯಿಯೆಂಬಳ್ಗೆ ಪುಟ್ಟಿದ ಹರಿಶ್ಚಂದ್ರ ಕುರುವಿಂದರೆಂಬ ನಿಜತನೂಜರೊಡನೆ ಖೇಚರ ಗೋಚರ[೭]ವಿಭವಮನನುಭವಿಸಿ ಬಹ್ವಾರಂಭಸಂರಂಭರೌದ್ರಧ್ಯಾನಪರಿಣತನುಪಾರ್ಜಿತ ನರಕಾಯುಷ್ಯಂ ಪ್ರತ್ಯಾಸನ್ನಮೃತ್ಯುವಾಗಿ,

ಆದ ಕರ್ಮಗಳನ್ನು ಸಂಪಾದಿಸಿಕೊಳ್ಳುವವನೂ ಆಯಾ ಫಲಗಳನ್ನುಣ್ಣುವವನೂ ಸೂಕ್ಷ್ಮರೂಪನೂ ಅನಂತ ಜ್ಞಾನಾದಿಗುಣಪೂರ್ಣನೂ ಸಂಹರಣ ವಿಸರ್ಪಣ ಸ್ವರೂಪನೂ ತಾನು ಸ್ವೀಕರಿಸಿದ ಶರೀರಕ್ಕನುಗುಣವಾದ ಪ್ರಮಾಣವುಳ್ಳವನೂ ಉತ್ಪಾದ-ವ್ಯಯ-ದ್ರವ್ಯಸ್ವರೂಪನೂ ಸಕಲ ಕರ್ಮಗಳನ್ನೂ ನಿರ್ಮೂಲಗೊಳಿಸುವವನೂ ತ್ರಿಲೋಕವೆಂಬ ಪರ್ವತಕ್ಕೆ ಶಿಖರಪ್ರಾಯನೂ ಆದ ಜೀವನು (ಆತ್ಮ) ಇದ್ದಾನೆಂ"ದು ಹೇಳಿ ಶತಮತಿಯೇ ಮೊದಲಾದ ಪ್ರತಿವಾದಿಗಳನ್ನು ದಿಙ್ಮೂಢರನ್ನಾಗಿ ಮಾಡಿದನು. ಸಭಾಪತಿಯಾಗಿದ್ದ ಮಹಾಬಲನನ್ನೂ ಪ್ರಾಶ್ನಿಕರಾಗಿದ್ದ ವಿದ್ವಜ್ಜನರನ್ನೂ ಸಭಾಜನವನ್ನೂ ಒಪ್ಪಿಸಿದನು. ಆಮೇಲೆ ಮತ್ತೆ ಸ್ವಯಂಬುದ್ಧನು- ೧೧. "ಸುಳ್ಳು, ಪರಾಂಗನಾರತ, ಮದ್ಯ, ಮಾಂಸ ಮತ್ತು ದುರ್ವ್ಯಸನಗಳನ್ನು ಕಲಿಸಿಕೊಡುವ ಓದೇ ನಿಮಗೆ ಆಗಮ. ಅಸತ್ಯವಾದವನ್ನು ಬಲಗೊಳಿಸಿ ಜೀವನಿಲ್ಲ, ಪ್ರಾರ್ಥನೆಯಿಲ್ಲ, ಧರ್ಮವಿಲ್ಲ, ಪರವಿಲ್ಲ-ಎಂದು ಹೇಳಿದರೆ ಕಸಬರಿಗೆಯಂತೆ ರಾಜಸಭೆಯಲ್ಲಿ ನಾಲಗೆ ಹೊರಳುವುದು" ಎಂದನು. ವ|| ಪುನಃ ಅವರಿಗೆ ಮನದಟ್ಟು ಮಾಡಿಸಲು ತಾನು ಕೇಳಿ, ನೋಡಿ ಮತ್ತು ಅನುಭವಿಸಿದ ಅದೇ ವಂಶಕ್ಕೇ ಸಂಬಂಧಿಸಿದವರ ಕಥೆಗಳನ್ನು ಹೇಳಲಾರಂಭಿಸಿದನು. "ಈತನ (ಮಹಾಬಲನ) ವಂಶದಲ್ಲಿಯೇ ಅರವಿಂದನೆಂಬ ಅಂಬರಚರನು ತನ್ನ ಮನದನ್ನೆಯಾದ ವಿಜಯಿಗೆ ಹುಟ್ಟಿದ ಹರಿಶ್ಚಂದ್ರ ಕುರುವಿಂದರೆಂಬ ಮಕ್ಕಳೊಡನೆ ಖೇಚರವಿಭವವನ್ನು ಚಿರಕಾಲ ಅನುಭವಿಸಿದನು. ಕೊನೆಗೆ ಬಹ್ವಾರಂಭ ಸಂರಂಭ ರೌದ್ರಧ್ಯಾನಪರಿಣತನಾಗಿ ನರಕಾಯುಷ್ಯವನ್ನು ಸಂಪಾದಿಸಿಕೊಂಡನು. ಆತನಿಗೆ

---

೧ ಕ.-ಜ್ಞೆ, ೨ ಕ.-ಜ್ಞ. ೩. ಗ. ಖ-ಯ್ಯೊಳ್ಗಜಿಲ್ದು. ೪ ಖ-ಮಾಡಿದೋದು. ಕ-ಮಾಡಿದೋಜೆ ೫ ಕ ಗಿರಸತ್ಯ. ೬ ಗ-ಗಳೆ ೭ ಕ.-ಭೂಚರ

ಉರಿಯಳುರ್ವಂತತಿ[1] ದಾಹ
ಜ್ವರಮಳುರೆ[2] ಪೊರಳ್ದು ನಾಡೆಯುಂ ಕೊರಗಿದನಂ
ದರವಿಂದಂ ಕೊಳದಿಂದಂ
ಕರಿಪತಿ ಕಿೞ್ತಿಕ್ಕೆ ಕೊರಗಿದರವಿಂದದವೊಲ್ ೧೨

ವಾರಿಜಮಳಯಜಮಳಯಸ
ಮೀರಣಚಂದ್ರಾಂಶುಚಂದ್ರಕಾಂತದ್ರವಕ
ರ್ಪೂರಮೃಣಾಳಾದಿಗಳುಂ
ಬಾರಿಸಲಾರಥವೆ ದಲವನ[3] ದಾಹಜ್ವರಮಂ ೧೩

ಕುಳಿರ್ವ ತಿಳಿನೀರನುಡುಗದೆ
ತಳಿ ತಳಿರಂ ಪಾಸು ಜಳದೆಯಿಂ ಬೀಸೆಂದು
ಮ್ಮಳಿಸಿ ಕಳವಳಿಸಿ[4] ವಿರಹಾ
ಕುಳನವೊಲಾ ಖಚರನಿಂತು ತಳವೆಳಗಾದಂ ೧೪

ವ|| ಅಂತನೇಕಪ್ರಕಾರಶೀತಳಕ್ರಿಯಗಳಿಂ ಶರೀರಸಂತಾಪಮನೆಂತುಂ ಮಾಣಿಸಲಾಱದೆ[5] ಪುಣ್ಯಕ್ಷಯದೊಳ್ತನ್ನವಿದ್ಯೆಗಳುಂ ತನಗೆ ಬೆಸಕೆಯ್ಯದಿರೆ ಹರಿಶ್ಚಂದ್ರನೆಂಬ ತನ್ನ ಪಿರಿಯಮಗನಂ ಕರೆದು ತನ್ನ ದುಸ್ಸಹಾವಸ್ಥಾಂತರಮನಱಿಪಿ ನೀನೆನ್ನಂ ನಿನ್ನ ಗಗನಗಾಮಿನೀವಿದ್ಯೆಯನುತ್ತರಕುರುವನೆಯ್ದಿಸು; ಆಲ್ಲಿಯ ಸುರತರುಗಳ ತಣ್ಣೞಲ್ಗಳೊಳಂ ಕಲ್ಪಲತೆಯ ಜೊಂಪಂಗಳೊಳಂ ಸೀತಾನದೀತರಙ್ಗಾಲಿಂಗಿತ

ಮರಣಕಾಲವು ಪ್ರಾಪ್ತವಾಗಲಾಗಿ, ೧೨. "ಉರಿಯಂತೆ ವ್ಯಾಪಿಸಿಕೊಂಡ ಅತಿದಾಹಜ್ವರವು ಅರವಿಂದನನ್ನು, ಆನೆಯು ಕೊಳದಿಂದ ಕಿತ್ತೆಸೆದ ಕಮಲದಂತೆ ಹೊರಳಿಸಿ ಕೊರಗಿಸಿತು. ೧೩. "ಕಮಲಗಳೂ ಶ್ರೀಗಂಧವೂ ಮಲಯಮಾರುತವೂ ಚಂದ್ರಕಿರಣಗಳೂ ಚಂದ್ರಕಾಂತಮಣಿಗಳ ದ್ರವಗಳೂ ಕರ್ಪೂರ ಮೃಣಾಲಾದಿಗಳೂ ಅರವಿಂದನ ದಾಹಜ್ವರವನ್ನು ಉಡುಗಿಸಲಾರದಾದವು. ೧೪. "ತಣ್ಣನೆಯ ತಿಳಿನೀರನ್ನು ಸಿಂಪಡಿಸು; ಚಿಗುರುಗಳನ್ನು ಹಾಸು; ಬೀಸಣಿಗೆಯಿಂದ ಬೀಸು" ಎಂದು ಉಗ್ಗಡಿಸುತ್ತಾ ಖಚರನು ವಿರಹಾಕುಲನಂತೆ ಸಂತಪ್ತನಾದನು. ವ|| ಹೀಗೆ ಅನೇಕ ಶೈತ್ಯೋಪಚಾರಗಳಿಂದ ಶರೀರಸಂತಾಪವನ್ನು ನೀಗಿಕೊಳ್ಳಲಾಗಲಿಲ್ಲ. ಪುಣ್ಯಕ್ಷಯದ ಫಲವಾಗಿ ತನ್ನ ವಿದ್ಯೆಗಳೂ ಕೆಲಸಕ್ಕೆ ಬಾರದಾದವು. ತನ್ನ ಮಗ ಹರಿಶ್ಚಂದ್ರನನ್ನು ಕರೆಯಿಸಿಕೊಂಡು ತನ್ನ ದುಸ್ಸಹನೀಯವಾದ ಅವಸ್ಥೆಯನ್ನು ತಿಳಿಯಪಡಿಸಿದನು; ಮಗು ಹರಿಶ್ಚಂದ್ರ! ನೀನು ನಿನ್ನ ಗಗನಗಾಮಿನೀವಿದ್ಯೆಯಿಂದ ನನ್ನನ್ನು ಉತ್ತರ ಕುರುದೇಶಕ್ಕೆ ಸೇರಿಸು. ಅಲ್ಲಿನ ಸುರತರುಗಳ ತಣ್ಣೆಳಲಲ್ಲಿಯೂ, ಕಲ್ಪಲತೆಗಳ ಲತಾಗೃಹಗಳಲ್ಲಿಯೂ ಮಂದಾರವನ ವೀಥಿಗಳಲ್ಲಿ ಸಂಚರಿಸಿ ದಣಿದ ಗಾಳಿಗಳಲ್ಲಿಯೂ ತನ್ನ ದೇಹದುರುಪರಿತಾಪವನ್ನು ತಣಿಸೆಂದು

---

೧ ಕ-ತಿರೆ. ೨ ಖ-ಜ್ವರಮಡರೆ. ೩ ಖ.-ಬಾರಿಸುವುವೆನೋಡಲವನ. ೪ ಕಗ.-ತಳಮಳಿಸಿ. ೫ ಕ.ಗ-ಸಂತಾಪಮನೆಂತುಮಾಜಿಸಲಾರದೆ.

ಸಂತಾನಲತಾಲತಾಂತಸುರಭಿತರ[೧] ಮಂದಾರವನವೀಥೀವಿಹಾರಪರಿಶ್ರಾಂತಪವಮಾನಸ್ಪರ್ಶನದಿಂ ಮದೀಯಾಂಗಸಂಗತಪರಿತಾಪವನಾಱಿಸುವೆನೆಂದು ನಿಜನಂದನಂಗೆ ಪೇೞ್ದಾತನುಂ ತನ್ನ ಪಯೋಧರಪಥಗಾಮಿನೀವಿದ್ಯೆಯಂ ಬೆಸಸಿದೊಡೆ ನರಕಗಮನಾಭಿಮುಖನಾಗಿರ್ದರವಿಂದಂಗುಪಕಾರಂಗೆಯ್ವುದೆನಗಶಕ್ಯಮೆನೆ ವಿದ್ಯಾವಚನದಿನಾತನನಾಸನ್ನಮೃತ್ಯುವನಱಿದು ವಿಷಣ್ಣಮನನುದಾಸೀನನಾಗಿರ್ದಂ; ಅನ್ನೆಗಂ[೨] ಪರಸ್ಪರಕಲಹಕಲುಷಿತಗೃಹಕೋಕಿಳ*ಂಗಳೊಂದೊಂದು ತಿನೆ[೩] ಪನಿತಶೋಣಿತಬಿಂದುಗಳ್ ತನ್ನ ಮೆಯ್ಗೆ ಪಾಪಪರಿಪಾಕದಿಂ ತಣ್ಪಂ ಪಡೆಯೆ ಪರಮೌಷಧಮಂ ಪಡೆದೆ[೪]ನೆಂದು ಕರಮೊಸೆದರವಿಂದಂ ಕುರುವಿಂದನಂ ಕರೆದುತ್ಪನ್ನವಿಭಂಗಜ್ಞಾನದಿಂ[೫] ಮೃಗಂಗಳಿರ್ದೆಡೆಯನಱಿದು ನಿಷ್ಕರುಣನವಱರುಣ ಜಳದೊಳೆನಗೆ ಲೀಲಾಸರೋವರಮುಂ ನೀಡಿಲ್ಲದೆ ಮಾಡೆಂದು ಪೇೞ್ದೊಡವನಾ ನಿಸ್ತ್ರಿಂಶಕರ್ಮಕ್ಕೆ ಕೊಕ್ಕರಿಸಿ ಪಾಪಭೀರುವಪ್ಪುದಱಿಂ ತಂದೆಯ ತದುಪರೋಧದಿಂ ಮನಮಲ್ಲದ ಮನದೊಳ್ ತದುದ್ದಿಷ್ಟ ಮೃಗಾವಾಸಮನೆಯ್ದಿ ದಿವ್ಯಜ್ಞಾನಿಗಳನಲ್ಲಿರ್ದರಂ ಕಂಡು ನಿವೇದಿತನಿಜಜನಕವೃತ್ತಾಂತನವರ[೬] ವಚನದಿನಾತ್ಮೀಯಪಿತೃಮರಣಮುಮನಾತನ ನರಕಗತಿ[೭] ಗಮನಮುಮನಱಿದು ಕರುಣಾರಸಾರ್ದ್ರಹೃದಯನದಂ ಮಾಡಲಾಱದೆ ಲಾಕ್ಷಾದ್ರವಾದಿಕಾರಿತಮಾಯಾರುಣಜಲ[೮] ಪರಿಪೂರ್ಣವಾಪಿಯಂ ಸಮೆಯಿಸಿದೊಡದಂ ಕಂಡು ರಾಗಿಸಿ ಪೊಕ್ಕು ನೀಡುಮೋಲಾಡಿ ಮುಕ್ಕುಳಿಸಿ

ಬೇಡಿಕೊಂಡನು. ಗಗನಗಾಮಿನೀವಿದ್ಯೆಯೂ ನರಕಾಭಿಮುಖನಾದ ಅರವಿಂದನಿಗೆ ತಾನೇನೂ ಸಹಾಯ ಮಾಡಲಾರೆನೆಂದು ಹೇಳಿತು. ಹರಿಶ್ಚಂದ್ರನೂ ತನ್ನ ತಂದೆಯ ಆಸನ್ನಮೃತ್ಯುವನ್ನು ವಿದ್ಯಾವಚನದಿಂದರಿತು ಉದಾಸೀನನಾದನು. ಅಷ್ಟರಲ್ಲಿ ಮನೆಯ ಕೋಗಿಲೆಗಳೆರಡು[1] (?) (ಹಲ್ಲಿಗಳೆರಡು) ಪರಸ್ಪರವಾಗಿ ಕಲಹಗೈದು ಒಂದನ್ನೊಂದು ಕಚ್ಚಿತು. ಆಗ ಬಿದ್ದ ರಕ್ತಬಿಂದುಗಳು ಅರವಿಂದನ ಮೈಗೆ ತಗುಲಿ ಪಾಪಪರಿಪಾಕದಿಂದ ತಂಪುವಡೆದನು. ಒಡನೆ ಮಹೌಷಧವು ದೊರಕಿತೆಂದು ಹಿಗ್ಗಿ ಅರವಿಂದನು ಮೃಗಾವಾಸದಲ್ಲಿ ಅವುಗಳ ರಕ್ತದಿಂದ ಲೀಲಾಸರೋವರವೊಂದನ್ನು ನಿರ್ಮಿಸುವಂತೆ ಮಗನಾದ ಕುರುವಿಂದನಿಗೆ ಆಜ್ಞೆಮಾಡಿದನು. ಅವನೂ ಕೂಡ ಕ್ರೂರಕರ್ಮಕ್ಕೆ ಹೇಸಿ ಮನಸ್ಸಿಲ್ಲದ ಮನಸ್ಸಿನಿಂದ ಮೃಗಾವಾಸಕ್ಕೆ ತೆರಳಿ ಅಲ್ಲಿದ್ದ ದಿವ್ಯಜ್ಞಾನಿಗಳ ಮೂಲಕ ತನ್ನ ತಂದೆಯ ಮರಣವನ್ನೂ ಅವನ ನರಕಗಮನವನ್ನೂ ನಿಶ್ಚೈಸಿ ರಕ್ತಪೂರ್ಣ ಸರೋವರವನ್ನು ಮಾಡಿಸಲೊಪ್ಪದೆಯೆ ಲಾಕ್ಷಾರಸಾದಿಗಳಿಂದ ಕೆಂಪುಜಲದ ಸರೋವರವನ್ನು ಮಾಡಿಸಿದನು. ಅರವಿಂದನು ಸಂತೋಷದಿಂದ ಅದನ್ನು ಪ್ರವೇಶಿಸಿ ಓಲಾಡಿ ನೀರನ್ನು ಮುಕ್ಕಳಿಸಿ ನೋಡಿ "ಕೃತಕಜಲವಿದು, ಈ ಬೂತೂ ನನ್ನನ್ನು ವಂಚಿಸಿತು" ಎಂದುಕೊಂಡು ಸಾಲದ ನರಕಾಯುಷ್ಯವನ್ನು ಪೂರ್ಣಮಾಡುವನೋ ಎಂಬಂತೆ ಕೋಪೋದ್ರೇಕದಿಂದ ರಕ್ತಾಂತನಯನನಾಗಿ ಕತ್ತಿಯನ್ನು ಹಿರಿದು ತಡಬಡಿಸುತ್ತ ಮಗನನ್ನಿರಿಯಲೋಡಿ ಬಾವಿಯ ಮೆಟ್ಟಿಲನ್ನು ಹತ್ತಿ ಜಾರಿಬಿದ್ದನು. ಆಗ ಕತ್ತಿಯು ಎದೆಯಲ್ಲಿ ಚುಚ್ಚಿಕೊಂಡು ಬೆನ್ನಲ್ಲಿ

---

೧ ಕ.ಗ-ತರಂಗಾಲಿಂಗಿತ ಲತಾಲತಾಂತಸಂತಾನಸುರಭಿಸಾರಮಂದಾರ ೨ ಕ.-ಗಿರ್ಪಿನಂ. ೩ ಗ.-ಒಂದನೊಂದ ತಿನೆ. ೪ ಗ.-ಪರಮೌಷಧಿವಡೆದೆ. ೫ ಗ.-ದುತ್ಪನ್ನ ವಿಭಂಗದಿಂ. ೬ ಖ-ವೃತ್ತಾಂತಮವಧಿ. ೭ ಕ.-ನಾತನಧೋಗತಿ. ೮ ಕ.-ದ್ರವದಿನರುಣಜಲಾನುಕಾರಿಯಪ್ಪ.

*'ಗೃಹಗೋಧಿಂಗಳ್' ಎಂದು ಶುದ್ಧಪಾಠವಿರಬಹುದು. ನೋಡಿ ಪೂ. ಪು. ೫-೧೦೨.

1 ಗೃಹಗೋಧಿಕಾ = ಹಲ್ಲಿ.

ನೋಡಿ ಕೃತಕರುಧಿರಮಪ್ಪುದನಱಿದೀ ಬೂತೆನ್ನಂ ಬಂಚಿಸಿದನೆಂದು ನೆಱಿಯದ ನರ್ತಕಾಯುಷ್ಯಮಂ ನೆಱಿಪುವನೆಂಬಂತೆ ಮುಳಿದು ಘೂರ್ಣಮಾನಲೋಹಿತಲೋಚನಂ ದಶನನಿಪೀಡಿತದಶನವಸನನಸಿ ಧೇನುವಂ ಕಿೞ್ತು ನಡನಡನಡುಗಿ ತಡದಡಿಸುತ್ತುಮಿಱಿಯಲ್ ಪರಿವಾತಂ ವಾಪೀಸೋಪಾನಮನಡರುತ್ತುಂ ಜಾಱಿವರಿದು ಕೆಡೆದುರದೊಳ್ ನಟ್ಟ ಸುರಿಗೆ ಬೆನ್ನೊಳ್ಮೂಡೆ ಗತಜೀವಿತನಾಗಿ ನರಕಕ್ಕಿೞಿದನಿದನೀಗಳುಮೀ ಪುರಜನಂಗಳ್ಪೇೞೆ ಕೇಳಲಕ್ಕುಂ, ಮತ್ತಮೀತನ ವಂಶದೊಳೀ[೧]ಪೊಟಲೊಳ್[೨] ನೆಗೞ್ತೆವೆತ್ತಂ ದಂಡಿತಾರಾತಿಮಂಡಳಂ ದಂಡಕನೆಂಬನಾತನ ಮನೋನಯನಸೌಂದರಿ ಸೌಂದರಿಯೆಂಬಳವರ್ಗೆ ಪುಟ್ಟಿದ ಮಗನುಗ್ರಪ್ರತಾಪವಿಜಿತಾಂಶುಮಾಳಿ[೩] ಮಣಿಮಾಳಿಯೆಂಬೊನಾಗೆ ಪಲಕಾಲಮರಸುಗೆಯ್ದು.

ಇಳೆಯಂ ಘಾತಿಸಿ ತಕ್ಕರಂ ಕವರ್ದು ಕೊಂಡಾದರ್ಥಮಂ ಪೂೞ್ದು ಮಿ
ಳ್ಮಿಳನೋಡುತ್ತುಮುದಗ್ರಲೋಭವಶದಿಂ ತನ್ನುಂಡುದುಂ ತಪ್ಪುದೆಂ
ದಳವಂ ಮಾಣಿಸಿ[೪]ಸತ್ತು ದಂಡಕನೃಪಂ ಲೋಭಾಭಿಭೂತಂ ವಿಷಾ
ವಿಳದಂಷ್ಟ್ರಂ ಶ್ವಯುವಾಗಿ ಪುಟ್ಟ ಸುಟೆಗುಂ ಮುಂಬಯ್ತ ಭಂಡಾರದೊಳ್ ೧೫

ವ॥ ಅಂತಾರ್ತಧ್ಯಾನದೊಳಜಗರನಾಗಿ ತನ್ನ ಮುನ್ನಿನ ಸಂಚಿತ[೫] ವಸ್ತುಗಳಂ ಕಾವಂದು ಮಗಂ ಮಣಿಮಾಳಿಯಂ ಕಂಡು ಜಾತಿಸ್ಮರನಾಗಿ ಮಣಿಮಾಳಿಯಲ್ಲದುೞಿದರಾರುಮಂ ಸಾರಲೀಯದೆ ಭಂಡಾರಮಂ ಕಾದುಕೊಂಡಿರ್ಪುದುಮೊಂದು[೬] ದಿವಸಂ ಮಣಿಮಾಳಿ ರತಿ[೭]ಚಾರಣರೆಂಬ ಚಾರಣರನವಧಿಜ್ಞಾನಿಗಳಂ ಕಂಡಜಗರವೃತ್ತಾಂತಮಂ ಬೆಸಗೊಂಡು ವಿಷಮವಿಷಧರನಾತ್ಮೀಯಜನಕನೆಂದಱಿದು[೮] ತತ್ಸಮೀಪಕೆ ವಂದು,

ಕಾಣಿಸಿಕೊಂಡಿದ್ದರಿಂದಾಗಿ ಅರವಿಂದನು ಮಡಿದು ನರಕಕ್ಕಿಳಿದನು. ಈಗಲೂ ಪುರಜನರು ಹೇಳುವ ಈ ಕಥೆಯನ್ನ ಕೇಳಬಹುದು. ಈ ರಾಜವಂಶದಲ್ಲೊಗೆದ ಶತ್ರುಮಂಡಲ ವಿನಾಶಕನಾದ ದಂಡಕನಿಗೂ ಅವನ ಮನೋನಯನ ಸುಂದರಿಯಾದ ಸೌಂದರಿಗೂ ಉಗ್ರಪ್ರತಾಪದಿಂದ ವಿಜಿತಾಂಶುಮಾಲಿಯಾದ ಮಣಿಮಾಲಿ ಎಂಬುವನು ಹುಟ್ಟಿದನು. ಅವನು ರಾಜ್ಯಭಾರ ಮಾಡುತ್ತ ೧೫. ಇಳೆಯನ್ನು ಘಾತಿಸಿ ಅರ್ಹರನ್ನು ಸುಲಿಗೆ ಮಾಡಿದನು. ಆ ದಂಡಕನು ಕೈಗೆ ಸಿಕ್ಕ ಹಣವನ್ನು ಭೂಮಿಯಲ್ಲಿ ಬೈತಿಟ್ಟು ಮಿಳಮಿಳನೆ ನೋಡತೊಡಗಿದನು. 'ನಾನು ಉಂಡರೂ ವ್ಯರ್ಥವಾಗುವುದು' ಎಂದು ಲೋಭಕ್ಕೆ ಒಳಗಾಗಿ, ಕಡೆಗೆ ಶಕ್ತಿಗುಂದಿ ಸತ್ತನು. ಲೋಭಿಯಾದ ಆತನು ಬಳಿಕ ವಿಷಾವಿಲದಂಷ್ಟ್ರನಾದ ಹೆಬ್ಬಾವಾಗಿ ಹುಟ್ಟಿ, ಹೂತಿಟ್ಟ ಭಂಡಾರವನ್ನು ಕಾಯ್ದಿರತೊಡಗಿದನು. ವ॥ ಹಾಗೆ ಆರ್ತಧ್ಯಾನದಿಂದ ಹೆಬ್ಬಾವಾಗಿ ದಂಡಕನು ಹುಟ್ಟಿದನು. ಅವನು ಹಿಂದಿನ ಜನ್ಮದಲ್ಲಿ ಗಳಿಸಿದ ವಸ್ತುಗಳನ್ನೂ ಮಗ ಮಣಿಮಾಲಿಯನ್ನೂ ನೆನಪಿಗೆ ತಂದುಕೊಂಡನು. ಮಣಿಮಾಲಿಯನ್ನುಳಿದು ಮತ್ತಾರನ್ನೂ ಭಂಡಾರದ ಸಮೀಪಕ್ಕೆ ಸುಳಿಯಲವಕಾಶವೀಯನು. ಒಂದು ದಿನ ಮಣಿಮಾಲಿಯು ಅವಧಿಜ್ಞಾನಿಗಳಾದ ಮತಿಚಾರಣರನ್ನು ಸೇರಿ ಅಜಗರವೃತ್ತಾಂತವನ್ನೂ ಅಜಗರನೇ ತನ್ನ ತಂದೆಯೆಂಬುದನ್ನೂ ತಿಳಿದು ಅವನ ಸಮೀಪಕ್ಕೆ

---

೧ ಗ.-ಸಂತತಿಯೊಳೀ. ೨ ಗ.-ಪುರದೊಳೆ. ೩ ಕ-ಪ್ರತಾಪಿಜೀವಿತಾಂಶಮಾಳಿ; ಖ-ಪ್ರತಾಪ ವಿಸ್ಫುರಿತಾಂಶುಮಾಳಿ, ೪ ಕ-ಮಾಸಿಸಿ, ೫ ಮುನ್ನ ಸಂಚಿಸಿದ, ೬ ಕ-ಕೊಂಡಿರ್ಪಿನಮೊಂದು, ೭ ಕ-ಮತಿ, ೮ ಗ-ಬೆಸಗೊಳೆ.... ದಱಿಪೆ

ನೀನತಿಲೋಭದೊಳಿಲ್ಲಿ ಕು
ಯೋನಿಯೊಳಜಗರನೆಯಾದೆಯಾ ಮೋಹಮದೇ
ನೇನಂ ಮಾಡದೊ ಬಿಡಿಸುವ
ನಾನಿನ್ನೇನೆಂಬೆನೆಂಬುದಂ ಕೈಕೊಳ್ಳಾ ೧೬

ವಿಷಯಾಮಿಷಲಂಪಟತೆಯೆ
ವಿಷಧರನೆನಿಸಿದುದು ನಿನ್ನನೆಲೆ ವಿಷಧರ ನೀಂ
ವಿಷಧರನಾಗದೆ ಬೇಗಂ
ವಿಷಯಾಮಿಷವಿಷಮನುಗುಳ್ದು ನಿರ್ವಿಷನಾಗಾ ೧೭

ವ॥ ಎಂದು ತನ್ನಂ ಪ್ರತಿಬೋಧಿಸಿದ ನಿಜತನೂಜನ ವಚನತಿಗ್ಮರೋಚಿರುಚಿನಿಚಯ ದಿನಾತ್ಮೀಯಚೇತೋನಿಚಿತಮೋಹಾಂಧಂ ತಮಸ್ತೋಮಮಂ[1] ಕಳೆದು ಕೃತಾನುಶಯನನಶನ ವಿಧಾನದಿನಸುವಂ ವಿಸರ್ಜಿಸಿ ಸೌಧರ್ಮಕಲ್ಪದೊಳ್ ದೇವನಾಗಿ,

ನೆನೆದಾಗಳ್ ನಿಜನಂದನೋಪಕೃತಮಂ ತದ್ದೇವನೆಯ್ತಂದು ದೇ
ವನಿಕಾಯಂ ಬೆರಸಪ್ಪಿಕೊಂಡು ದಿವದೊಳ್ ಮೇಲಪ್ಪ ರತ್ನಂಗಳಿಂ
ತನಿತಂ ಮುಂ ಮಣಿಮಾಳಿಗಿತ್ತನವು ತಮ್ಮಾಮ್ನಾಯದಿಂ ಬಂದೊಡೀ
ತನುಮೀಗಳ್ ನೆಱೆ ತೊಟ್ಟು ಬಂದನಿದನೇಂ[2] ನೀಮೆಲ್ಲರುಂ ಕಾಣಿರೇ ೧೮

ವ॥ ಇದನ್ನೆಗಮನುಭೂತ[3]ಮಿದಲ್ಲದೆಯುಂ ವಯೋಧಿಕವ್ಯೋಮಚರ ಪ್ರತ್ಯಕ್ಷಮೀ

ಬಂದನು. ೧೬. "ಅತಿಲೋಭದಿಂದಾಗಿ ನೀನು ಕುಯೋನಿಯಲ್ಲಿ ಅಜಗರನಾಗಿ ಜನ್ಮವಡೆದೆ. ಮೋಹವೇನನ್ನು ಮಾಡಿಸದು? ಈ ಲೋಭವನ್ನು ಬಿಡು. ನಾನು ಹೇಳಿದುದನ್ನು ಇನ್ನಾದರೂ ನೀನು ಕೈಕೊಳ್ಳು. ೧೭. ಸ್ರಕ್-ಚಂದನ ವನಿತಾದಿ ವಸ್ತುಗಳ ಮೇಲಿನ ಆಶೆಯೇ ನಿನ್ನೀ ಅಜಗರತನಕ್ಕೆ ಕಾರಣ. ಎಲೈ ವಿಷಧರ! ನಿನ್ನ ವಿಷಯಾಮಿಷ ವಿಷವನ್ನುಗುಳಿ ನಿರ್ವಿಷನಾಗು ಮೊದಲು!" ಎಂದನು. ವ॥ ಎಂದು ತನ್ನನ್ನು ಎಚ್ಚರಿಸಿದ ತನ್ನ ಮಗನ (ಮಣಿಮಾಲಿ) ಮಾತುಗಳೆಂಬ ಸೂರ್ಯಕಿರಣಗಳ ಸಮೂಹದಿಂದ ತನ್ನ ಹೃದಯದಲ್ಲಿ ಹುದುಗಿದ್ದ ಮೋಹಾಂಧಕಾರವನ್ನು ದಂಡಕನು ಕಳೆದುಕೊಂಡನು. ಆ ದಂಡಕನು ಪಶ್ಚಾತ್ತಾಪನಾಗಿ ಅನ್ನವನ್ನು ಬಿಟ್ಟು ಸೌಧರ್ಮಕಲ್ಪದಲ್ಲಿ ದೇವನಾಗಿ ಜನಿಸಿದನು. ೧೮. "ಮಣಿಮಾಲಿಯು ಮಾಡಿದುಪಕಾರವನ್ನು ಆತನು ನೆನೆದನು. ದೇವನಿಕಾಯದೊಡನೆ ಬಂದು ಮಗನನ್ನು ಪ್ರೀತಿಯಿಂದಪ್ಪಿಕೊಂಡನು. ಆ ಕಲ್ಪದಲ್ಲೇ ಉತ್ಕೃಷ್ಟವೆನಿಸಿದ ರತ್ನಗಳನ್ನು ಪ್ರೀತಿಯಿಂದ ಅರ್ಪಿಸಿದನು. ಅವನ್ನೀಗಲೂ (ಈ ಮಹಾಬಲರಾಜನು) ಧರಿಸಿರುವುದನ್ನು ನೀವೆಲ್ಲರೂ ಕಂಡಿರುವಿರಷ್ಟೆ? ವ॥ "ಇದು ಅನುಭೂತವಾದುದು ಮಾತ್ರವಲ್ಲ, ವಯೋಧಿಕರಾದ ವಿದ್ಯಾಧರರೆಲ್ಲರ ಅನುಭವಕ್ಕೆ ಬಂದುದು. ಈ ಮಹಾಬಲನ

೧ ಕ-ತಮಸ್ತಮಮಂ, ೨ ಖ-ನಿವುವಂ; ಕ-ನವನಿಂ, ೩ ಗ-ಮನುಯಾತ.

ಮಹಾಬಳನ ಪಿತೃಪಿತಾಮಹಂ ಸಹಸ್ರಬಳನೆಂಬನಂಬರಚರಸಾಮ್ರಾಜ್ಯಶ್ರೀಯನನುಭವಿಸಿ ವಿಷಯವಿರಕ್ತನಾಗಿ ನಿಜರಾಜ್ಯಪದವಿಯೊಳ್ ತನ್ನ ಪಿರಿಯಮಗನಪ್ಪ,

ಶತಬಳನಂ ಸಹಸ್ರಬಳಖೇಚರನಿಟ್ಟು ತಪೋನಿಯೋಗನಿ
ಶ್ಚಿತಮನನಾಗಿ ಸಂದನಪವರ್ಗಪದಕ್ಕೆ ಬಳಿಕ್ಕೆ ಧಾತ್ರಿಯಂ
ಶತಬಳನಾತ್ಮಜಂಗೆ ನೆಗಟ್ದ ಖಚರೇಂದ್ರನ ತಂದೆಯಪ್ಪ ಸಂ
ದತಿಬಳಖೇಚರಂಗೆ ತೊದಳಿಲ್ಲದೆ ಕೊಟ್ಟುಪಶಾಂತ ಮಾನಸಂ ೧೯

ವ॥ ಗೃಹೀತೋಪಾಸಕ[೧] ವ್ರತನನಶನಾವಮೋದರ್ಯಾದ್ಯಾಚರಣಪರಿಣತಂ ಯಥೋಚಿತವಿಧಿಯಿಂದಾಯುರವಸಾನದೊಳೆ ಸಂಸಾರಕ್ಷಪಕನಾಗಿ ಸಮಾಧಾನಪುರಸ್ಸರಂ ಸನ್ಯಸನವಿಧಾನದಿಂ ಪರಿತ್ಯಕ್ತಜೀವಿತಂ[೨] ಮಾಹೇಂದ್ರಕಲ್ಪದೊಳಣಿಮಾದ್ಯಷ್ಟಗುಣೈಶ್ವರ್ಯೋಪೇತನುಂ ಸಪ್ತಸಾಗರಪ್ರಮಿತಜೀವಿತನುಂ ಲಬ್ಧಾತ್ಮಲಾಭನುಮಾಗೆ[೩], ನಮ್ಮ ಕುಮಾರಕಾಲದಂದು ನೀಮುಮಾಮುಂ ಮಹಾಬಳನುಂ ಕ್ರೀಡಾನಿಮಿತ್ತಂ ಪೋಗಿ ಮಂದರಮಹೀಧರದ ನಂದನವನದೊಳ್ ವನ[೪]ಕ್ರೀಡೆಯನಾಡುತ್ತ ಮಿರ್ಪಿನಮಲ್ಲಿಯ[೫] ಕೃತ್ರಿಮಚೈತ್ಯಾಲಯಮಂ ಬಂದಿಸಲಾ ಮಹೇಂದ್ರಕಲ್ಪಜನುಂ ಮಹಾವಿಭೂತಿಯಿಂ ಬಂದು,

ಜಿನಪಾದಾಂಭೋಜಮಂ ಪೂಜಿಸಿ ಪೊಱಮಡುತುಂ ಸಾರೆವಂದೀತನಂ ಭೋಂ
ಕೆನೆ ಕಂಡಟ್ಕರ್ತು ನೋಟಂ ಬೆರಸು ಪರಸಿ ತಟ್ಕೈಸಿಕೊಂಡಮ್ಮ ನೀಂ ಮ
ಮ್ಮನೆಯಪ್ಪೈ ನೋಡು ನಣ್ಪಿಂ ನಿಮಗಮೆಮಗಮಾಮ್ನಾಯದಿಂ ಬಂದುದಿಂತೀ
ಜಿನಧರ್ಮಂ ಪ್ರಾಣಿಗಾರ್ಮಂ ಮಱೆಯದಿರಿದು ನಿನ್ನೆಂದುದುಂಟಲ್ತೆ ಪೇೞೆಂ ೨೦

ಮುತ್ತಜ್ಜನಾದ ಸಹಸ್ರಬಲನು ವಿದ್ಯಾಧರ ರಾಜ್ಯಶ್ರೀಯನ್ನು ಅನುಭವಿಸಿ, ವಿಷಯವಿರಕ್ತನಾಗಿ, ವಿದ್ಯಾಧರರಾಜ್ಯಪೀಠದಲ್ಲಿ ತನ್ನ ಹಿರಿಯಮಗನಾದ ಶತಬಲನನ್ನು ಕುಳ್ಳಿರಿಸಿದನು. ೧೯. "ಸಹಸ್ರಬಲನೆಂಬ ಆ ವಿದ್ಯಾಧಿರಾಜನು ಮಗನಾದ ಶತಬಲನನ್ನು ವಿದ್ಯಾಧಿರಾಜಪೀಠದಲ್ಲಿ ನೆಲೆಗೊಳಿಸಿ, ತಪಃಕಾರ್ಯದಲ್ಲಿ ದೃಢಚಿತ್ತನಾಗಿ ಮೋಕ್ಷವನ್ನಪ್ಪಿದನು. ಶತಬಲನೂ ಕೂಡ ಖಚರೇಂದ್ರಪದವಿಯನ್ನು ಮಗನಾದ ಅತಿಬಲನಿಗೊಪ್ಪಿಸಿ ಉಪಶಾಂತಚಿತ್ತನಾದನು. ವ॥. "ಅವನು (ಶತಬಲನು) ಉಪಾಸಕವ್ರತವನ್ನಪ್ಪಿ ಅನಶನ, ಅವಮೋದರ್ಯ (ಅರ್ಧಹೊಟ್ಟೆ ಭೋಜನ) ಮುಂತಾದ ವ್ರತಗಳಲ್ಲಿ ಸಿದ್ಧಹಸ್ತನಾದನು. ಉಚಿತವಿಧಾನಗಳಿಂದ ಆಯುಸ್ಸಿನಂತ್ಯದಲ್ಲಿ ಸಂಸಾರವನ್ನು ಕ್ಷೀಣಗೊಳಿಸುತ್ತಾ ಸಮಾಹಿತ ಮನಸ್ಕನಾಗಿ ಸಂನ್ಯಸನ ವಿಧಾನದಿಂದ ಜೀವದೊರೆದನು. ಬಳಿಕ ಅವನು ಮಾಹೇಂದ್ರಕಲ್ಪದಲ್ಲಿ ಅಣಿಮಾದ್ಯಷ್ಟೈಶ್ವರ್ಯಗುಣಸಂಪನ್ನನಾಗಿ, ಸಪ್ತಸಾಗರ ಪರಿಮಿತವಾದ ಆಯುಷ್ಯವುಳ್ಳವನಾಗಿ, ಆತ್ಮಲಾಭವನ್ನು ಪಡೆದು ಬಾಳಿದನು. ನಮ್ಮ ಬಾಲ್ಯದಲ್ಲಿ ನೀವೂ ನಾವೂ ಮಹಾಬಲನೂ ಕ್ರೀಡೆಗಾಗಿ ತೆರಳಿ ಮಂದರಪರ್ವತದಲ್ಲಿ ವನಕ್ರೀಡೆಯಲ್ಲಿ ಆಸಕ್ತರಾಗಿದ್ದಾಗ ಆ ಮಹೇಂದ್ರಕಲ್ಪಜನು ಅಲ್ಲಿನ ಅಕೃತಿಯ ಚೈತ್ಯಾಲಯಗಳನ್ನು ನಮಸ್ಕರಿಸಲು ವೈಭವದಿಂದ ಬಂದಿದ್ದನು. ೨೦. "ಪೂಜ್ಯನಾದ ಜಿನನ ಪಾದಕಮಲಗಳನ್ನು ಭಕ್ತಿಯಿಂದೆರಗಿ ಮಹೇಂದ್ರಕಲ್ಪಜನು (ಶತಬಲನು) ಮಹಾಬಳನ

---

೧ ಕ-ತೋಪವಾಸಕ, ೨ ಕ-ಮೋಹನಾಗಿ, ೩ ಕ-ಜೀವಿತನುಪಲಬ್ಧಾವಧಿಲೋಚನನುಮಾಗಿ; ಖ-ಜೀವಿತನುಂ ಲಬ್ಧಾತ್ಮಭಾವನಾಗಿ, ೪ ಕ-ಜಲ, ೫ ಗ-ರ್ಪಿನಮೊಂದುದಿವಸಮಲ್ಲಿಯ.

ಅತಿಬಳಖೇಚರೇಂದ್ರನಿವರಮ್ಮನುಮೀತನನೂರ್ಜಿತಾತ್ಮ ಸಂ
ತತಿಯೊಳನಾಕುಳಂ ನಿಜಿಸಿ ಸಂಯಮಸಾರಥಿಯಾಗಿ ಕರ್ಮಸಂ
ತತಿಯನನಂತರಂ ಕಿಡಿಸಿ ಕೇವಳಿಯಾಗಿರೆ ಬರ್ಪ ದೇವಸಂ
ತತಿಯೊಡವೋಗಿ ನಾವುಮೊಸೆದರ್ಚಿಸಿ ಬಂದಿಸಿ[೧] ಬಂದೆಮಲ್ಲಮೇ ೨೧

ಅನುಭೂತಶ್ರುತದೃಷ್ಟಖೇಚರಕಥಾನೀಕಂಗಳಿಂ ಮುಕ್ತಿ[೨]ಯಿಂ
ದಿನಿತಂ ಸಾಧಿಸಿ ಜೀವಸಿದ್ಧಿಯನಿದಂ ನಿಶ್ಚೈಸಿ ವಿದ್ವತ್ಸಭಾ
ಜನಮೆಲ್ಲಂ ತಿಳಿದತ್ತು [೩]ನಿಮ್ಮ ಮನದಿಂ ಮಿಥ್ಯಾಕಳಂಕಂ ತೆರ
ಳ್ದನಿತುಂ[೪] ಪೋಗದು ಕಾಲಲಬ್ಧಿ ದೊರೆಕೊಂಡಂದಲ್ಲದೇಂ ಪೋಕುಮೇ ೨೨

ವ|| ಎಂದು ಪರಪಕ್ಷದೂಷಣಪುರಸ್ಸರಮನೇಕೋಪಪತ್ತಿಗಳಿಂ ಸ್ವಪಕ್ಷಸ್ಥಾಪನಂಗೆಯ್ದು ಸನ್ಮಾರ್ಗ ಪ್ರಕಾಶದಿಂ[೫] ಮಾರ್ಗಪ್ರಭಾವನೆಯಂ ಮಾಡಿ ಸಭಾಸದರಿಂ ಲಬ್ಧಪ್ರಶಂಸ[೬]ನಾಗಿ

ಪರವಾದಿಗಳ ಮೊಗಂಗಳ್
ಕರಿಂಕುವರಿದಂತೆ ಕಂದಿ ಕುಂದಿರೆ ಖಚರೇ
ಶ್ವರನೀಯೆ ಪಡೆದನತ್ಯಾ
ದರದಿಂ ಜಯಪತ್ರಮಂ ಸ್ವಯಂಬುದ್ಧಬುಧಂ ೨೩

ಬಳಿಗೆ ಬಂದನು. ಇವನನ್ನು ಕಣ್ತುಂಬ ನೋಡಿ ಅಪ್ಪಿಕೊಂಡನು. "ಎಲೈ ಖಚರೇಂದ್ರ! ನೀನು ನನ್ನ ಮೊಮ್ಮಗ. ನನಗೂ ನಿನಗೂ ಪ್ರಾಣರಕ್ಷಣಪ್ರಧಾನವಾದ ಜಿನಧರ್ಮವು ವಂಶಪಾರಂಪರ್ಯದಿಂದ ಬಂದಿದೆ. ಇದನ್ನೆಂದಿಗೂ ಮರೆಯದಿರು" ಎಂದನು. ೨೧. "ಈ ಮಹಾಬಲನ ತಂದೆಯಾದ ಅತಿಬಲ ಖಚರೇಂದ್ರನೂ ಇವನನ್ನು ಆತ್ಮಸಂತತಿಪ್ರಧಾನನನ್ನಾಗಿ ನಿಶ್ಚಿಂತೆಯಿಂದಿರಿಸಿದನು. ಅತಿಬಲನು ಸಂಯಮ ಸಾರಥಿಯಾಗಿ ಕರ್ಮಸಂತತಿಯನ್ನು ಕಳೆದುಕೊಂಡು ಕೇವಲಿಯಾಗಿ ದೇವತೆಗಳೊಡನೆ ಸಂಚರಿಸಿದನು. ನಾವೆಲ್ಲರೂ ಅವನನ್ನರ್ಚಿಸಿ ವಂದಿಸಿ ಬಂದೆವಲ್ಲವೇ?" ೨೨. ಹೀಗೆ ಸ್ವಯಂಬುದ್ಧನು ಅನುಭವಿಸಿದ, ಕೇಳಿದ ಮತ್ತು ಕಂಡ ಖೇಚರರ ಕಥೆಗಳಿಂದಲೂ ಅನೇಕ ಯುಕ್ತಿಗಳಿಂದಲೂ ಜೀವಸಿದ್ಧಿಯನ್ನು ಸಾಧಿಸಿದನು. ವಿದ್ವಾಂಸರಾದ ಸಭಿಕರ ಮನವನ್ನು ಮೆಚ್ಚಿಸಿದನು. ಕಾಲಲಬ್ಧಿ ಎಟಕುವವರೆಗೆ ನಿಮ್ಮ ಮನದಿಂದ ಮಿಥ್ಯಾಕಲಂಕವು ದೂರಸರಿಯದೆಂದೆಚ್ಚರಿಸಿದನು. ವ|| ಹೀಗೆ ಪ್ರತಿವಾದಿಯ ಪಕ್ಷವನ್ನು ನಿಂದಿಸಿ ಅನೇಕ ಯುಕ್ತಿಗಳಿಂದ ಸ್ವಪಕ್ಷಸ್ಥಾಪನೆಯನ್ನು ಮಾಡಿದನು. ಸನ್ಮಾರ್ಗಪ್ರಕಾಶನದ ದ್ವಾರಾ ಮಾರ್ಗ-ಪ್ರಭಾವನೆಮಾಡಿ ಸಭಾಸದರ ಪ್ರಶಂಸೆಗೆ ಪಾತ್ರನಾದನು. ೨೩. ಪ್ರತಿವಾದಿಗಳ ಮುಖಗಳು ಕರಿಕುವಡೆದು ಕಂದಿ ಕುಂದಿದವು. ಆಗ ಖಚರೇಂದ್ರನು ಸ್ವಯಂಬುದ್ಧನಿಗೆ ಅತ್ಯಾದರದಿಂದ ಜಯಪತ್ರ ನೀಡಿದನು.

೧ ಖ, ಗ-ಪೂಜಿಸಿ, ೨ ಕ-ಳಿಂದುಕ್ತಿ, ೩ ಖ-ತಿಳಿವಂತು, ೪ ಕ.ಗ-ಳ್ವನಿಸುಂ, ೫ ಖ-ಸನ್ಮಾರ್ಗಾವಕಾಶನದಿಂ, ೬ ಕ-ಪ್ರಸನ್ನ; ಗ-ಪ್ರಸಂಗ.

ವ॥ ಅಂತು ಮಹಾಬಳಖಚರೇಂದ್ರಂ[೧] ಸ್ವಯಂಬುದ್ಧನೆ ತನಗೆ ಪರಮವಿಶ್ವಾಸಭೂಮಿಯಾಗೆ[೨] ತತ್ಪರ್ಯಾಳೋಚಿತಕಾರ್ಯಪರ್ಯವಸಾನನುಂ ಮನೋಭಿಲಷಿತವಿಷಯಸುಖಾನುಭವನಿರತನುಮಾಗಿ ಮೂವತ್ತಾಱುಲಕ್ಕೆ ಪುರ್ಬಂ ರಾಜ್ಯಂಗೆಯ್ಯೆ,

ಪೊಡರದೆ ಕಪ್ಪಮೀವ ಪರಮಂಡಳಿಕರ್ ಮನೆದೀವಿ ಮಕ್ಕಳಂ
ಪಡೆದಬಳಾಜನಂ ನೆರೆದ[೩] ಮಕ್ಕಳ ಮಕ್ಕಳ ನೀಳ್ದದೊಂದು ದಾಂ
ಗುಡಿವಿಡಿದೀವ ಚಾಗಮೆಡಱೋಡುವಿನಂ ಪೊರೆದೊಳ್ಗಿಗಟ್ಟಿ[೪]ಯೊಳ್
ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೊ ನಭಶ್ಚರೇಂದ್ರನಾ ೨೪

ವ॥ ಮತ್ತೊಂದುಪುಣ್ಯದಿನದೊಳ್ ಸ್ವಯಂಬುದ್ಧಂ ಅಗಣ್ಯಪುಣ್ಯೋಪಾರ್ಜನಕರಸಪರ್ಯಾಸಮೇತಂ ಅಪರಿಮಿತಭಕ್ತಿಯಿಂ ಪರಿಮಿತಪರಿಜನ ಪರಿವೃತನಾಗಿ ಪೋಗಿ,

॥ಪೃಥ್ವೀವೃತ್ತಂ॥

ಅನೇಕ ರಸಭಂಗಿಸಂಗತ ಸುರಾಂಗನಾಪಾದಚಂ
ಕನತ್ಕನಕಕಿಂಕಿಣೀಮೃದುನಿನಾದವಿಭ್ರಾಜಿಯಂ
ಕನತ್ಕನಕತುಂಗಶೃಂಗಕುಳಮಂ ಮನೋವೇಗದೆ
ಯ್ದಿ ನೋಡಿದನೊಱಲ್ದು ಪುಷ್ಪಿತ ನಮೇರುವಂ ಮೇರುವಂ ೨೫

ವ॥ ಅಂತು ನೋಡಿ

ವ॥ ಮಹಾಬಲ ಖಚರೇಂದ್ರನಿಗೆ ಸ್ವಯಂಬುದ್ಧನು ವಿಶ್ವಾಸಪಾತ್ರನಾದನು. ಅವರೊಡನೆ ಸಮಾಲೋಚಿಸಿದ ಕಾರ್ಯಗಳನ್ನು ಕಾರ್ಯರಂಗಕ್ಕಿಳಿಸುತ್ತಿದ್ದನು. ಇಷ್ಟವಾದ ವಿಷಯಸುಖಗಳನ್ನು ಅನುಭವಿಸುತ್ತಾ ಮೂವತ್ತಾರುಲಕ್ಷ ಪೂರ್ವಗಳ ಕಾಲ ರಾಜ್ಯಭಾರಮಾಡಿದನು. ೨೪. ಶತ್ರುರಾಜರು ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸದೆಯೆ ಕಪ್ಪಕಾಣಿಕೆಗಳನ್ನು ಕೊಟ್ಟರು. ಅಬಲಾಜನವು ಮನೆತುಂಬ ಮಕ್ಕಳನ್ನು ಪಡೆಯಿತು. ಮಕ್ಕಳಿಗೆ ಮಕ್ಕಳಾಗಿ ವಂಶವೃದ್ಧಿಯಾಯಿತು. ಎಲ್ಲರೂ ತ್ಯಾಗಬುದ್ಧಿಯುಳ್ಳವರಾದರು. ಕಷ್ಟವು ಪರಿಹಾರವಾಗುವವರೆಗೆ ಕಾರ್ಯಶೀಲರಾಗಿದ್ದರು. ಹೀಗೆ ಈ ನಭಶ್ಚರೇಂದ್ರನ ರಾಜ್ಯವು ಸಂಪತ್ಸಮೃದ್ಧವಾಗಿ ರಾಜಿಸಿತು. ವ॥ ಮತ್ತೊಂದು ಪುಣ್ಯದಿನದಲ್ಲಿ ಸ್ವಯಂಬುದ್ಧನು ಹೆಚ್ಚಿನ ಪುಣ್ಯಜನಕವಾದ ಪೂಜೆಯಲ್ಲಿ ಆಸಕ್ತನಾಗಿ ಅಪರಿಮಿತ ಭಕ್ತಿಯಿಂದ ಪರಿಮಿತ ಪರಿಜನರಿಂದ ಕೂಡಿ ಮೇರುಪರ್ವತಕ್ಕೆ ಹೋದನು. ೨೫. ಸ್ವಯಂಬುದ್ಧನು ಅರಳಿದ ನಮೇರುವೃಕ್ಷಗಳಿಂದ ಸುಂದರವಾದ ಮೇರುವಿಗೆ ಮನೋವೇಗದಿಂದ ಹೋಗಿ ಪ್ರೀತಿಯಿಂದ ನೋಡಿದನು. ಅದು ರಸಭಂಗಿಯುಕ್ತವಾದ ಸುರಾಂಗನೆಯರ ಪಾದಗಳಲ್ಲಿನ ಕಿಂಕಿಣಿಗಳ ಮೃದುಸ್ವನಗಳಿಂದ ಭೂಷಿತವಾಗಿತ್ತು. ಚಿನ್ನದ ಉನ್ನತವಾದ ಶಿಖರಗಳ ಸಮೂಹದಿಂದ ಕೂಡಿತ್ತು. ವ॥ ಹಾಗೆ ಅದನ್ನು ನೋಡಿ, (ಹೀಗೆಂದನು).

---

೧ ಗ-ಗಗನಚರೇಂದ್ರಂ, ೨ ಗ-ವಿಶ್ವಾಸಿಯಾಗೆ. ೩ ಖ-ನೆರೆಯೆ, ೪ ಖ-ಪೊರೆದಾ ನೆಗಳ್ತೆ

ಇದು[೧] ಶಾಲ್ಮಲಿಪಾದಪಮಿಂ
ತಿದು ಜಂಬೂವೃಕ್ಷಮಿದುವೆ[೨] ಕುರುಭೂಮಿಗಳೊ
ಪ್ಪಿದುವರ್ಧಚಂದ್ರವೃತ್ತಾಂ
ಗದಿ[೩]ನುಚಿತದಶಾಂಗಕಲ್ಪಕುಜನಿಳಯಂಗಳ್ ೭೬

ಗಜದಂತಾಕಾರಂಗಳ್
ಗಜದಂತಾದ್ರಿಗಳಿವಲ್ತೆ ತೋರ್ಪುವು ಮಧುಪ
ವ್ರಜಪರಿವಾರಿತಮಾದ್ಯ
ದ್ಗಜಕಟಕರ್ಷಪ್ರಭಗ್ನ[೪] ಚಂದನತರುಗಳ್ ೭೭

ನೀಲನಿಷಧಮುಮನೆಯ್ದಿದ
ನೀಲದ ಗಜದಂತಗಿರಿಗಳಾಳ್ದುವು ಪಿರಿದುಂ[೫]
ಲೀಲೆಯನದಂತೆ ಮಾಡದೆ[೬]
ಲೀಲೆಗಳಂ ಪಾದಸೇವೆ ಭೂಭೃತ್ಪತಿಯಾ ೭೮

ಇದು ಭದ್ರಶಾಲಿನಂದನ
ಮದು[೭] ನಂದನವನಮದಲ್ತೆ ಸೌಮನಸಮದೇಂ[೮]
ತುದಿಯೊಳ್ ಪಾಂಡುಕವೆಸೆದಿ
ರ್ದುದೊ ಜಿನಪತಿಸವನವಾರಿಪೂತಗ್ರಾವಮ್ ೭೯

೭೬. "ಇದು ಬೂರಗದ ಮರ. ಇದು ಜಂಬೂವೃಕ್ಷ, ಅರ್ಧಚಂದ್ರಾಕೃತಿಯಿಂದ ಕುರುಭೂಮಿಗಳು ಕಂಗೊಳಿಸುತ್ತವೆ. ಇದು ದಶಾಂಗ ಕಲ್ಪವೃಕ್ಷಗಳಿಗೆ ನಿಲಯವಾಗಿದೆ. ೭೭. ದುಂಬಿಗಳ ಹಿಂಡಿನಿಂದ ಸುತ್ತುವರಿಯಲ್ಪಟ್ಟ ಮದಗಜಗಳು ತಮ್ಮ ಗಂಡಸ್ಥಳಗಳಿಂದ ತೀಡಿ ಚಂದನವೃಕ್ಷಗಳನ್ನು ಉರುಳಿಸಿವೆ. ಅಂಥ ವೃಕ್ಷಗಳುಳ್ಳ ಗಜದಂತ ಪರ್ವತಗಳು ಗಜದಂತಗಳಂತೆ ವಿರಾಜಿಸುತ್ತಿವೆ. ೭೮. ನೀಲನಿಷಧಗಿರಿಗಳವರೆಗೆ ಹಬ್ಬಿದ ನೀಲಗಜದಂತಗಿರಿಗಳು ಹೆಚ್ಚು ಲೀಲೆಗಳನ್ನು ತಳೆದುವು. ಭೂಭೃತ್ಪತಿಯ (ಮೇರುಗಿರಿಯ-ರಾಜನ) ಪಾದಸೇವೆಯು ಅಂತೆ ಲೀಲೆಯನ್ನು ತಳೆಯದೆ? ೭೯. ಇದು ಭದ್ರಕಾಲಿವನ. ಅದು ನಂದನವನ. ಅದಲ್ಲವೇ ಸೌಮನಸವನ? ಅದರ ತುದಿಯಲ್ಲಿ ಪಾಂಡುಕವೆಂಬ ವನವುಂಟು. ಅದು ಜಿನೇಂದ್ರನ ಅಭಿಷೇಕದಿಂದ ಪವಿತ್ರವಾದ ಶಿಲೆಯುಳ್ಳದ್ದು[1]

---

೧ ಖ.ಗ-ಅದು, ೨ ಖ-ಮಿವಿವೆ, ೩ ಕ-ಚಂದ್ರಕೃತ ವೃತ್ತದಿ; ಗ-ಚಂದ್ರವೃತ್ತಾಂಗದಿ ೪ ಕ.ಖ-ಕರ್ಷಣಪ್ರಭಗ್ನ, ೫ ಖ-ಗಿರಿಗಳಾದುವೆ ಪಲವುಂ. ೬ ಖ-ಲೀಲೆಯನಳಂಕೆ ಮಾಡಿದ. ೭ ಖ ಶಾಲವೇದಿಕೆಯಿದು. ೮ ಖ-ಸೌಮನಸವನಂ.

1. ಇದಕ್ಕೆ ಪಾಂಡುಕಶಿಲೆಯೆಂಬ ಹೆಸರು. (ನೋಡಿ ೭-೭೪)

ಆಗ್ರಹಮಂ ಬಿಸುಟಿದುವೆ ನ
ಗಾಗ್ರಣಿಯೆಂದಿದನೆ ನೋಡೆ* ಬಲಗೊಳ್ವುವು ನಿ
ರ್ವ್ಯಗ್ರತೆಯಿಂ ಚಂದ್ರಾದಿ
ತ್ಯಗ್ರಹನಕ್ಷತ್ರತಾರಕಾನಿಕರಂಗಳ್ ೩೦

ಇದು ರಿತು ವಿಮಾನಮಂ ತ
ನ್ನುದಗ್ರ ಚೂಳಿಕೆಯೊಳಾಂತುಕೊಂಡಿರೆ ಸಗ್ಗ
ಕ್ಕಿದು ನಿಚ್ಚಣಿಗೆಪ್ಪವೊಲಿ
ರ್ದುದಲ್ತೆ ಜಿನಸವನಜಳಪವಿತ್ರಿತಕಟಕಂ ೩೧

ಸ್ಫುರಿತಮಣಿಕಳಶವಿರಚಿತ
ಪರಭಾಗಂಗಳ್ ಮನೋಹರಂಗಳ್ ವಿದ್ಯಾ
ಧರವಿಬುಧವಂದಿತಂಗಳ್
ಕರಮೆಸೆದಪುವಿದಱ ನೆಲೆಯ ಚೈತ್ಯಗೃಹಂಗಳ್ ೩೨

ವ|| ಎಂದು[೧] ನಿಜಪರಿಜನಕೆಲ್ಲಂ ಪೊಗಟುತ್ತಂ[೨] ಭದ್ರಶಾಲದಿಂ ತಗುಳ್ದು ಪಾಂಡುಕವನಂಬರಮದಱ ನೆಲೆಯೊಳಿರ್ದ[೩]ಕೃತ್ರಿಮಚೈತ್ಯಾಲಯಂಗಳನಖಿಳಜಗತ್ಪಾವನಕರಸರಸ್ಸರಸೀಸರಿನ್ನಾಥತೀರ್ಥಜಲಂಗಳಿಂದಮತಿಮಸೃಣಘುಸೃಣಗೋಶೀರ್ಷ ಚಂದನಾಗುರುಕರ್ಪೂರಸಂಮಿಶ್ರಿತಸುರಭಿಗಂಧಂಗಳಿಂದಮಗಣ್ಯಪುಣ್ಯಪುಂಜಾಂ ಕುರಾನುಕಾರಿಕಳಮಾಕ್ಷತಂಗಳಿಂದಮಾಮೋದಮೋದಿತೋದ್ದಾಮವಾಚಾಲ

೩೦. ಇದು ನಮ್ಮೆಲ್ಲರಿಂದ ಪ್ರಾರ್ಥಿತವಾದ ಪರ್ವತಶ್ರೇಷ್ಠ ಎಂದು, ಆಗ್ರಹವನ್ನುಳಿದು ಅದನ್ನೇ ನೋಡುವುದಕ್ಕಾಗಿ ಪ್ರದಕ್ಷಿಣೆ ಮಾಡುತ್ತಿರುವುವು, ಚಂದ್ರಸೂರ್ಯಗ್ರಹನಕ್ಷತ್ರಾದಿಗಳು. ೩೧. ಇದು ತನ್ನ ಎತ್ತರರಾದ ಶಿಖರದಲ್ಲಿ ರಿತು ವಿಮಾನ[1]ವನ್ನು ತಳೆದಿದೆ. ಈ ಗಿರಿಯು ಜಿನನ ಅಭಿಷೇಕದಿಂದ ಪವಿತ್ರವಾದ ಕಟಕವನ್ನು ಧರಿಸಿ ಸ್ವರ್ಗದ ನಿಚ್ಚಣಿಗೆಯಂತಿದೆ. ೩೨. ಈ ಪರ್ವತದ ನೆಲೆಯಲ್ಲಿರುವ ಚೈತ್ಯಗೃಹಗಳು ಪ್ರಕಾಶಮಾನವಾದ ಮಣಿಮಯ ಕಲಶಗಳಿಂದ ವಿರಚಿತವಾಗಿ ಮನೋಹರವಾಗಿವೆ. ವಿದ್ಯಾಧರರಿಂದಲೂ ದೇವತೆಗಳಿಂದಲೂ ವಂದಿತವಾಗಿವೆ." ವ|| ಹೀಗೆ ಸ್ವಯಂಬುದ್ಧನು ತನ್ನ ಪರಿಜನರಿಗೆ ವಿವರಿಸುತ್ತ ಭದ್ರಶಾಲದಿಂದ ಹಿಡಿದು ಪಾಂಡುಕವನದವರೆಗೆ ಅದರ ಸಮೀಪದಲ್ಲಿರುವ ಚೈತ್ಯಾಲಯಗಳನ್ನೆಲ್ಲಾ ಸಂದರ್ಶಿಸಿದನು. ಅಲ್ಲಿನ ಅಕೃತ್ರಿಮ ಚೈತ್ಯಾಲಯಗಳನ್ನು, ನಿಖಿಲ ಜಗತ್ತನ್ನೇ ಪವಿತ್ರಗೊಳಿಸಬಲ್ಲ ಕೊಳ, ಕಲ್ಯಾಣಿ, ನದಿ ಮತ್ತು ಸಮುದ್ರಗಳೇ ಮೊದಲಾದ ತೀರ್ಥಜಲಗಳಿಂದಲೂ ಗೋಶೀರ್ಷ, ಚಂದನ, ಅಗುರು, ಕರ್ಪೂರಗಳೊಡನೆ ಮಿಶ್ರಗೊಂಡ ಸುಗಂಧ ದ್ರವ್ಯಗಳಿಂದಲೂ ಹೆಚ್ಚಿನ ಪುಣ್ಯಾಂಕುರಗಳನ್ನು ಅನುಕರಿಸುತ್ತಿರುವುವೋ

* ನಾಡೆ ಎಂದು ಶುದ್ಧಪಾಠವಿರಬಹುದು. ನಾಡೆ = ವಿಶೇಷವಾಗಿ.

೧ ಕ-ಎಂದಿಂತು, ೨ ಕ-ಜನಕೆಲ್ಲಂ ಪೇಳ್ದು ಪೊಗಳುತ್ತುಂ, ೩ ಖ-ನೆಟಿಲೊಳಿರ್ದ.

1. ಋತು ವಿಮಾನ = ಸೌಧರ್ಮೇಂದ್ರ ವಿಮಾನ.

ಷಟ್ಚರಣಕುಳಾಕುಳಕುಸುಮದಾಮಂಗಳಿಂದಂ ಅನೇಕ ಭಕ್ಷ್ಯೋಪದಂಶ[1]ರಸಪ್ರಚುರಚಾರು ಚರುಕಂಗಳಿಂದಂ ಆಕಾಶ ಸ್ಫಟಿಕಶಕಲ[2]ಸ್ಥೂಲಕರ್ಪೂರಪಾಳೀಪ್ರದೀಪಂಗಳಿಂದಂ ಅತಿಬಹಳದಹ್ಯಮಾನ ಕಾಳಾಗುರುಧೂಪಧೂಮಯಷ್ಟಿಘಟಿತಘನಶ್ಯಾಮಳಿತವ್ಯೋಮತಳ ಧೂಪಂಗಳಿಂದಂ ಅತಿಸುರಭಿಸುರಸ ಸುರುಚಿರಫಲನಿಚಯಂಗಳಿಂದಂ ಮತ್ತಮುತ್ತಪ್ತ ಜಾಂಬೂನದಕುಸುಮದಾಮಂಗಳಿಂದುದ್ದೀಪಿತ ರತ್ನಪ್ರದೀಪಂಗಳಿಂದಂ ಅತಿತರಳಮುಕ್ತಾಮಣಿಪ್ರಲಂಬಂಗಳಿಂದಂ ಅನೇಕಪ್ರಕಾರದೇವಾಂಗ ವಸ್ತ್ರವಿಸ್ತಾರಿತರತ್ನಸಂಚಿತಮಣಿವಿತಾನಂಗಳಿಂದಂ ಅನುಕ್ರಮಂದಪ್ಪದರ್ಚಿಸಿ ನಿರ್ವರ್ತಿತ ದೇವತಾರ್ಚನ ನಾಗಿ ಸೌಮನಸವನದ ಪಾಲಸ್ಥಜಿನಭವನಧೂಳಿನಿಸಾನುಂಬೇಗಮಿರ್ಪನ್ನೆಗಂ;

ಭಾನುದ್ಯುತಿತನುರುಚಿಯೆ ದಿ
ಶಾನೀಕಮನೊಡನೆ ಬೆಳಗೆ ಮಿಂಚೆರಡು ನಭ
ಸ್ಸ್ಥಾನದಿನಿಟಿದಪುವೆನೆಯೆನೆ
ತಾನಿಟಿದುದು ಜಿನಗೃಹಕ್ಕೆ ಚಾರಣಯುಗಳಂ ೩೩

ವ|| ಅಂತು ಪೂರ್ವವಿದೇಹದ ಸೀತಾನದಿಯ ಬಡಗಣ ತಡಿಯ ಮಹಾಕಚ್ಛವಿಷಯದ ಅರಿಷ್ಟಪುರದಿಂದಂ ಯುಗಂಧರತೀರ್ಥಸರಸೀ[3]ಹಂಸನಾಯಕರೆನಿಸಿದ ಗಗನಚಾರಣರಾದಿತ್ಯಗತಿಗಳುಮರಿಂ ಜಯರುಮೆಂಬರ್ ಅವಧಿಜ್ಞಾನಿಗಳ್[4] ಪವನಮಾರ್ಗದಿಂದಿಟಿವುದಂ ಕಂಡು ಪಾದಮಾರ್ಗದೊಳ್ ಕಿಜಿದಂತರ[5]ದೊಳ್ ಅವನತಿಪುರಸ್ಸರಮಿದಿರ್ಗೊಂಡು ತತ್ಕ್ರಿಯಾಪರಿಸಮಾಪ್ತಿ ಪ್ರತೀಕ್ಷಣಪರನವರಂ ಗುರುಭಕ್ತಿಪೂರ್ವಕಂ ಬಂದಿಸಿ ಸಕಳಶ್ರಾವಕವ್ರತಾರೋಪಣಪವಿತ್ರನಾಗಿ ಧರ್ಮಕಥಾಪ್ರಸಂಗದೊಳಂ ಲಬ್ಧಪ್ರಸ್ತಾವಂ[6] ಅವರೊಳಾದಿತ್ಯಗತಿಗಳಂ

ಎಂಬಂತಿರುವ ಅಕ್ಷತೆಯ ಕಾಳುಗಳಿಂದಲೂ ಸಂತೋಷದಿಂದ ಝೇಂಕರಿಸುತ್ತಿರುವ ದುಂಬಿಗಳಿಂದಾಕುಲವಾದ ಹೂಮಾಲೆಗಳಿಂದಲೂ ಅನೇಕ ಭಕ್ಷ್ಯವ್ಯಂಜನ ರಸಾನ್ನಾದಿಗಳಿಂದಲೂ ಆಕಾಶ ಸ್ಫಟಿಕದ ಚೂರು, ಸ್ಥೂಲಕರ್ಪೂರಗಳಿಂದಾದ ಸಾಲುದೀಪಗಳಿಂದಲೂ ಅತಿಯಾಗಿ ಸುಡಲ್ಪಡುತ್ತಿರುವ ಕಾಲಾಗುರುಧೂಪ ಧೂಮಗಳಿಂದ ಮೇಘಯುಕ್ತವಾದ ಆಕಾಶವೋ ಎಂಬಂತೆ ಆಕಾಶವನ್ನು ಕಪ್ಪುಗೊಳಿಸಿದ ಧೂಪಗಳಿಂದಲೂ ಸುಗಂಧಪೂರ್ಣವೂ ರಸಮಯವೂ ರುಚಿಯುಕ್ತವೂ ಆದ ಫಲಸಮೂಹದಿಂದಲೂ ಸುವರ್ಣದ ಕುಸುಮಗಳಿಂದಲೂ ರತ್ನಪ್ರದೀಪಗಳಿಂದಲೂ ಥಳಥಳನೆ ಹೊಳೆಯುವ ಮುತ್ತಿನ ಗೊಂಡೆಗಳಿಂದಲೂ ದೇವಾಂಗವಸ್ತ್ರಗಳಿಂದ ರಚಿತವಾದ ಮಣಿಮಯವಿತಾನ ಗಳಿಂದಲೂ ಕ್ರಮವಾಗಿ ಅರ್ಚಿಸಿ ದೇವತಾರ್ಚನೆಯನ್ನು ಮುಗಿಸಿ ಸೌಮನಸವನದ ಪೂರ್ವ ದಲ್ಲಿರುವ ಜಿನಭವನಕ್ಕೆ ಶೀಘ್ರವಾಗಿ ಬಂದನು. ೩೩. ಆಗ ಸೂರ್ಯನ ಕಾಂತಿಯಂತೆ ದೇಹಕಾಂತಿವಡೆದ ಚಾರಣಯುಗ್ಮವು ಜಿನಗೃಹದ ಕಡೆಗೆ ಇಳಿದುಬಂದಿತು. ಆಗ ದಿಕ್ಸಮೂಹವನ್ನು ಒಡನೆ ಬೆಳಗಿಸಿದ ಮಿಂಚೆರಡು ನಭಸ್ಥಳದಿಂದ ಇಳಿದಂತೆ ತೋರಿತು. ವ|| ಹಾಗೆ ಪೂರ್ವದೇಹದಲ್ಲಿನ ಸೀತಾನದಿಯ ಉತ್ತರತಟದ ಮಹಾಕಚ್ಛದೇಶದ

---

೧ ದಾಮಂಗಳಿಂದತಿಸುರಭಿನಾನಾಭಕ್ಷ್ಯೋಪದಂಶ. ೨ ಕಖ-ಸ್ಫಟಿಕಕಲಶ. ೩ ಖ.-ತೀರ್ಥಕರ ಸರಸೀ. ೪ ಕ-ದಿವ್ಯಜ್ಞಾನಿಗಳ್. ೫ ಕ.-ಕಿಜಿದಂತರು. ೬ ಕ.ಗ-ಕಥಾಪ್ರಸ್ತಾವದೊಳುಪಲಬ್ಧಿಪ್ರಸ್ತಾವಂ.

ಮನ್ನಿಸಿ ಮನ್ತ್ರಿಮುಖ್ಯನತಿಭಕ್ತಿಭರಾನತಮೂರ್ಧನಟ್ಟೆಯಿಂ
ಬಿನ್ನವಿಕುಂ ಮುನೀಂದ್ರಗಣಮುಖ್ಯ ಮಹಾಬಳನಸ್ಮದೀಶನಿ
ನ್ನುನ್ನಿಜಭೋಗಕಾಂಕ್ಷೆಯನಣಂ ಬಿಸುಡಲ್ ಬಗೆದಾರನಾತನ
ತ್ಯುನ್ನತಬೋಧ ನೀಂ ಬೆಸಸಭವ್ಯನೊ ಭವ್ಯನೊ ದೂರಭವ್ಯನೋ ೩೪

ಪೋದುದು ಜೌವನಂ ಕ್ರಮದಿನಾದುದು ಮುಪ್ಪಿನಿಸಾದೊಡಂ ಸ್ಮರೋ
ನ್ಮಾದದೊಳೀವಿಮೋಹದೊ[1]ಳದೇಕೆ ಗಡಂ ಬಗೆಯಂ ತಗುಳ್ಚಿ ಬೆ
ಳ್ಳಾದಪನಕ್ಕಟಾ ಖಚರನೆಂದೆನಗಿಂತಿದೆ ನಾಡೆಯುಂ ಮನಃ
ಖೇದಮಿದಂ ಪ್ರಬೋಧಿಸಿ ನಿಜಾವಧಿಯಿಂ ಕಳೆಯಿಂ ಮುನೀಶ್ವರಾ ೩೫

**ವ|| ಎಂದು ಬೆಸಗೊಂಡೊಡೆ ಆತನಭವ್ಯನಲ್ಲಂ ಭವ್ಯನೇ, ಭವ್ಯನಾಗಿಯುಮಾಸನ್ನಭವ್ಯಂ; ಎಂತೆಂದೊಡೆ ಜಂಬೂದ್ವೀಪದ ಅಪರವಿದೇಹದೊಳ್ ಗಂಧಿಳಮೆಂಬುದು ವಿಷಯಂ ; ಆ ವಿಷಯವಿಳಾಸಿನಿಗೆ ತಿಳಕಮಿರ್ಪಂತಿರ್ದುದು ವಿಜಿತಸುರಪುರಂ ಸಿಂಹಪುರಮೆಂಬುದು ಪುರಂ, ಅದನಾಳ್ವನತುಳಭುಜಬಳಸಂಚೂರ್ಣಿತಾರಾತಿಪಾಷಾಣಂ ಶ್ರೀಷೇಣನೆಂಬರಸಂ ; ಆತಂಗೆ,**

ಅರಿಷ್ಟಪುರದಿಂದ ಯುಗಂಧರತೀರ್ಥ[1]ವೆಂಬ ಸರೋವರದ ಹಂಸನಾಯಕರೂ ಆಕಾಶಚಾರಿಗಳೂ ಆದ ಆದಿತ್ಯಗತಿ, ಅರಿಂಜಯರೆಂಬ ಅವಧಿಜ್ಞಾನಿಗಳು ಆಕಾಶಮಾರ್ಗದಿಂದ ಇಳಿದುದನ್ನು ಕಂಡನು. ಸ್ವಯಂಬುದ್ಧನು ಅವರ ಪಾದಮಾರ್ಗದ ಸಮೀಪದಲ್ಲಿ ಅವರಿಗೆ ನಮಸ್ಕರಿಸಿ ಇದಿರ್ಗೊಂಡನು. ಅವರ ಕ್ರಿಯಾಸಮಾಪ್ತಿಯವರೆಗೆ ಕಾಯ್ದಿದ್ದು ಅವರನ್ನು ಗುರುಭಕ್ತಿಯಿಂದ ವಂದಿಸಿ, ಸಕಲ ಶ್ರಾವಕವ್ರತಾರೋಪಣಪವಿತ್ರನಾಗಿ ಧರ್ಮಕಥಾಪ್ರಸಂಗದಲ್ಲಿ ಲಬ್ಧಾವಸರನಾದನು. ಆದಿತ್ಯಗತಿಗಳನ್ನು ೩೪. ಮನ್ನಿಸಿ ಭಕ್ತಿಭರದಿಂದ ತಲೆಬಾಗಿ ವಂದಿಸಿ ಮಂತ್ರಿಮುಖ್ಯನಾದ ಸ್ವಯಂಬುದ್ಧನು 'ಹೇ ಮುನೀಂದ್ರಗಣಮುಖ್ಯ! ನನ್ನ ರಾಜ ಮಹಾಬಲ. ಅವನಿನ್ನೂ ಸ್ವಲ್ಪವೂ ಭೋಗಾಭಿಲಾಷೆ ಯಿಂದ ಪರಿಚ್ಯುತನಾಗದಿದ್ದಾನೆ. ಅವನು ಭವ್ಯನೋ ಅಭವ್ಯನೋ ದೂರಭವ್ಯನೋ ಎಂಬುದನ್ನರಿತು ಹೇಳಿ" ಎಂದು ವಿಜ್ಞಾಪಿಸಿಕೊಂಡನು. ೩೫. "ಯೌವನವು ಕಳೆಯಿತು. ಕ್ರಮವಾಗಿ ಮುಪ್ಪಡರಿತು. ಆದರೂ ಕಾಮೋನ್ಮಾದದಲ್ಲಿ ಮುಗ್ಧನಾಗಿ ಬೇಯುತ್ತಿದ್ದಾನೆ, ಈ ರಾಜ. ಇದು ನನಗೆ ಅತಿದುಃಖವನ್ನುಂಟುಮಾಡುತ್ತಿದೆ. ನಿಮ್ಮ ಅವಧಿಜ್ಞಾನದಿಂದ ಇದನ್ನು ತಿಳಿಸಿ ನನ್ನನ್ನು ದುಃಖದಿಂದ ಪಾರುಮಾಡಿರಿ" ಎಂದು ಕೇಳಿಕೊಂಡನು. ವ|| ಆಗ ಮುನಿಮುಖ್ಯನು ಹೇಳಿದನು: "ಈ ಮಹಾಬಲನು ಅಭವ್ಯನಲ್ಲ, ಭವ್ಯನೇ. ಅದರಲ್ಲಿಯೂ ಈತನು ಆಸನ್ನಭವ್ಯನೇ. ಹೇಗೆಂದರೆ ಜಂಬೂದ್ವೀಪದ ಅಪರವಿದೇಹದಲ್ಲಿ ಗಂಧಿಲವೆಂಬ ದೇಶವೊಂದುಂಟು. ಆ ದೇಶವನಿತೆಗೆ ತಿಲಕಪ್ರಾಯವಾದುದು (ಸೌಂದರ್ಯದಲ್ಲಿ) ಸುರಪುರವನ್ನು ಗೆದ್ದ ಸಿಂಹಪುರ. ಅದನ್ನಾಳುವವನು ಶತ್ರುಗಳೆಂಬ

೧ ಖ.-ಳೀವಿನೋದದೊ

1. ಯುಗಂಧರ ತೀರ್ಥಂಕರರ ಸಮವಸರಣವೆಂಬ ತೀರ್ಥ

ಸೌಂದರಿಯರ ಗಾಡಿಗಳೊಳ
ಗೊಂದೊಂದನೆ ನೆರಪಿ[1] ಮಾಡಿದಂ ಬದಿಯೆನೆ ಹ್ಯ
ತ್ಸೌಂದರಿ ಜಿತಾಮರಾಧಿಪ
ಸೌಂದರಿ ಸೌಂದರಿಯೆ ಪೆಸರೊಳಂ ರೂಪಿನೊಳಂ ೩೬

ಒರ್ಮೆಯುಮವಚಱದೊಲವಿನ
ಕೂರ್ಮೆಯ ತತ್ಪತಿಗಮಾಕೆಗಂ ನಿಜವಂಶ
ಕ್ಕಾರ್ಮೆಮೆನೆ ಪುಟ್ಟಿದರ್ ಜಯ
ವರ್ಮ ಶ್ರೀವರ್ಮರೆಂಬ[2]ರಿರ್ವರ್ ತನಯರ್ ೩೭

ವ|| ಅವರೊಳ್[3] ಕಿಱಿಯಾತನೆ ನೃಪತಿಗಂ ಪರಿವಾರಕ್ಕಮಣುಗನಾಗಿ ಬಳೆಯೆ ಪಲಕಾಲಂ ಶ್ರೀಷೇಣನರಸುಗೆಯ್ದು ;

ಎಡೆವೆತ್ತೊರ್ಮೆಯೆ ಮುಪ್ಪು ಕುತ್ತದೊಳೊಡಂಬಟ್ಟೊತ್ತೆ ಮತ್ತಲ್ಲಿ ಮೆ
ಳ್ಪಡದಾರ್ತಣ್ಕೆ ತಪಕ್ಕೆ ಪೋಪ ಪದದೊಳ್ ತನ್ನಗ್ರಪುತ್ರಂ ಕ್ರಮಂ
ಬಿಡಿದಿರ್ದಂ ಜಯವರ್ಮನಿರ್ದೊಡಮವಂ ಮುಟ್ಟಲ್ಲ[4]ನೆಂದೊಲ್ದೊಡಂ
ಬಡುವನ್ನಂ ಕಿಱಿಯಾತನಂ ನಿಱಿಸಿದಂ ಶ್ರೀವರ್ಮನಂ ರಾಜ್ಯದೊಳ್ ೩೮

ವ|| ಆ ಜಯವರ್ಮನುಮವಮಾನಪವಮಾನಾವಧೂತನಾಗಿ ಪೋಗಿ

ಕಲ್ಲುಗಳನ್ನು ಪುಡಿಪುಡಿಮಾಡಿದ ಶ್ರೀಷೇಣನೆಂಬ ರಾಜ. ಅವನಿಗೆ-೩೬. "ಹೆಂಡತಿ ಸೌಂದರಿ. ಅವಳು ಸುಂದರಸ್ತ್ರೀಯರ ಸೌಂದರ್ಯದಲ್ಲಿನ ಒಂದೊಂದು ಉತ್ಕೃಷ್ಟ ಅಂಶವನ್ನು ಸೇರಿಸಿಕೊಂಡು ಬ್ರಹ್ಮನು ಸೃಷ್ಟಿಸಿರುವನೋ ಎನ್ನುವಂತೆ ಇದ್ದಳು. ತನ್ನೊಂದು ಸೌಂದರ್ಯದಿಂದ ಗಂಡನ ಮನ ಸೆಳೆದಳು. ಅವಳು ದೇವೇಂದ್ರನ ಮಡದಿಯ ಚಲ್ವನ್ನು ಗೆದ್ದವಳು. ರೂಪಿನಿಂದಲೂ ಹೆಸರಿನಿಂದಲೂ ಅವಳು ಸೌಂದರಿಯೇ ಅಹುದು. ೩೭. "ಅವಳ ಒಲುಮೆ ಎಂದೂ ಅವಳ ಗಂಡನ ಅಸಡ್ಡೆಗೆ ತುತ್ತಾಗಿರಲಿಲ್ಲ. ಅವರಿಬ್ಬರಿಗೂ ತಕ್ಕವರೋ ಎನ್ನುವಂತೆ ಜಯವರ್ಮ ಶ್ರೀವರ್ಮರೆಂಬಿಬ್ಬರು ಮಕ್ಕಳು ಜನಿಸಿದರು. ವ|| "ಅವರಿಬ್ಬರಲ್ಲಿ ಕಿರಿಯನಾದ ಶ್ರೀವರ್ಮನು ರಾಜನಿಗೂ ಅವನ ಸೇವಕವರ್ಗಕ್ಕೂ ಪ್ರೀತಿಪ್ರದನಾಗಿ ಬಳೆದನು. ಕೆಲವು ಕಾಲ ಶ್ರೀಷೇಣನು ರಾಜ್ಯಭಾರಮಾಡುತ್ತಿರಲಾಗಿ, ೩೮. "ಶ್ರೀಷೇಣನಿಗೊಮ್ಮೆ ಮುಪ್ಪುಬಂದಿತು. ಅದು ರೋಗದಲ್ಲಿ ಪರ್ಯವಸಾನಗೊಂಡಿತು. ಶ್ರೀಷೇಣನು ಭ್ರಾಂತನೂ ಆರ್ತನೂ ಆಗಿ ತಪಸ್ಸಿಗೆ ತೆರಳಲನುವಾದನು. ಅಗ್ರಪುತ್ರನಾಗಿ ಜಯವರ್ಮನು ಜನಿಸಿದ್ದರೂ ಅವನು ಅಸಮರ್ಥನು ಎಂದು ಕಿರಿಯವನಾದ ಶ್ರೀವರ್ಮನೇ ಅರಸುಗೈಯಲೆಂದು ಹೇಳಿ ಪ್ರೀತಿಯಿಂದ ಅವನನ್ನು ಪಟ್ಟಕ್ಕೆ ಕುಳ್ಳಿರಿಸಿದನು. ವ|| "ಜಯವರ್ಮನು ಅಪಮಾನವೆಂಬ ಗಾಳಿಯಿಂದ ಕಂಪಿತನಾಗಿ-

---

೧ ಕ.-ಪಡೆದು ೨ ಕ.-ಜಯವರ್ಮಂ ಶ್ರೀವರ್ಮನೆಂಬ ೩ ಕ.-ಅಂತವರೊಳಗೆ ೪ ಖ.-ಮುದ್ದಲ್ಲ

ಪ್ರಭು ಕಿಱಿಯಾತನಂ ನಿಱಿಸಿ ರಾಜ್ಯದೊಳೆನ್ನನವಸ್ತು ಮಾಡಿ[೧] ಪೂ
ಣ್ದಭಿಭವಮೀಗಳೀಭವದೊಳಿಂತಿದು ನೀಗದು ರಾಜ್ಯಲಕ್ಷ್ಮಿ ಗ
ನ್ಯಭವದೊಳಪ್ಪೊಡಂ ನೆಱೆಯೆ ನೋಂಪೆನೆನುತ್ತೆ ಜಗನ್ನುತ ಸ್ವಯಂ
ಪ್ರಭ[೨]ಗುರುಪಾದಮೂಲದೊಳೆ ಕೊಂಡನಖಂಡಿತಜೈನದೀಕ್ಷೆಯಂ ೩೯

ವ|| ಅಂತು ಜಾತರೂಪಧರನಾಗಿ ತನ್ನ ಪಱಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮಳ್ದಿಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದುಯ್ವಂತುಯ್ದು

ಮಡಗಿಡಲೆಂದು ಪುತ್ತಿನೊಳಗೊಯ್ಯನೆ ಕುತ್ತಿದ ಕಯ್ಯನಾಗಳಾ
ಗಡೆ ಪಸವಟ್ಟು ನೀಳ್ದ ಪೊಗೆಯುಂ ಕಿಡಿಯುಂ ಬಿಸುಸುಯ್ಯ ಗಾಳಿಯೊಳ್
ತೊಡರ್ದೊಡನುಣ್ಮೆ ಭೋಂಕನೊಗೆತರ್ಪ ಮಹೋರಗನೆಯ್ದೆ ಪಲ್ಗಳ
ೞ್ದಿಡೆ ಕಿಡಿವೀೞೆ ನೆತ್ತರೊಱೆದುರ್ಚುಗೆ ಕೊಂಡುದು ತತ್ತಪಸ್ವಿಯಂ ೪೦

ವ|| ಆ ಪ್ರಸ್ತಾವದೊಳ್,

ಎಸೆವ ವಿಮಾನಘಂಟೆಗಳ ಮೆಲ್ಲುಲಿ ಕಿನ್ನರಗೇಯದೊಳ್ ಪೊದ
ೞ್ದೆಸೆಯೆ ವಿಚಿತ್ರಪಾತ್ರಪರಿನರ್ತನಮುಣ್ಮುವ ತೂರ್ಯನಾದದೊಳ್
ಪೊಸಯಿಸೆ ಸೋಂಕಿನೊಳ್ ನಲಿವ ನಲ್ಲಳಲಂಪನೊಡರ್ಚೆ ಲೀಲೆ ಕ
ಣ್ಗಸದಳಮಾಗೆ ಪಾಱುವ[೩] ಮಹೀಧರನೆಂಬ ವಿಯಚ್ಚರೇಂದ್ರನಂ ೪೧

೩೯. "ಪ್ರಭುವಾದ ನನ್ನ ತಂದೆಯು ಕಿರಿಯನಾದ ಶ್ರೀವರ್ಮನನ್ನು ರಾಜನನ್ನಾಗಿ ಮಾಡಿ ನನ್ನನ್ನು ಬೆಲೆಯಿಲ್ಲದವನನ್ನಾಗಿ ಮಾಡಿದನು. ಈ ತಿರಸ್ಕಾರವು ಈ ಭವದಲ್ಲಿ ನೀಗದು. ಮತ್ತೊಂದು ಭವದಲ್ಲಾದರೂ ರಾಜ್ಯಲಕ್ಷ್ಮಿಯು ತನ್ನ ಕೈಸೇರಲು ವ್ರತತೊಡುವೆನೆಂದು ನಿಶ್ಚೈಸಿದನು. ಸ್ವಯಂಪ್ರಭನೆಂಬ ಗುರುವಿನ ಪಾದಮೂಲದಲ್ಲಿ ಜೈನದೀಕ್ಷೆಯನ್ನಪ್ಪಿದನು. ವ|| ಹೀಗೆ ದಿಗಂಬರನಾಗಿ ಹರಿದು ಬಿಸುಟ ಕೂದಲುಗಳನ್ನು ತನ್ನ ಕೈಯಲ್ಲಿ, ದುಂಬಿ ವಿಂಡನ್ನು ಕೆಂದಾವರೆಹೂವುಗಳಲ್ಲಿ ತುಂಬಿಕೊಂಡೊಯ್ಯುವಂತೊಯ್ದು ೪೦. "ಹುತ್ತದಲ್ಲಿ ಆ ಕೂದಲನ್ನು ಮರೆಮಾಡಿ ಹಾಕಲಿಕ್ಕಾಗಿ ಕೈಗಳನ್ನು ಒಳಕ್ಕೆ ಚಾಚಿದನು. ಆಗ ನೀಳ್ದ ಹೊಗೆಯನ್ನೂ ಕಿಡಿಗಳನ್ನೂ ನಿಟ್ಟುಸಿರನ್ನೂ ಗಾಳಿಯಲ್ಲಿ ಬಿಡುತ್ತಾ ರಭಸದಿಂದ ಹಾವೊಂದು ಮೇಲೇರಿ ಬಂತು. ಅದು ಹಲ್ಲುಗಳನ್ನೂರಿ ಕಿಡಿಕಾರುತ್ತಾ ರಕ್ತ ಸುರಿಯುವಂತೆ ಆ ತಪಸ್ವಿಯನ್ನು ಕಚ್ಚಿತು. ವ|| ಆ ಅವಸರದಲ್ಲಿ, ೪೧. "ವಿಮಾನದ ಗಂಟೆಗಳ ಮೆಲ್ದನಿಯು ಕಿನ್ನರರ ಗಾನಗಳೊಡನೆ ಹೊಂದಿಕೊಂಡೆಸೆಯಿತು. ವಿಚಿತ್ರಪಾತ್ರಗಳ ನರ್ತನವು ತೂರ್ಯನಾದಗಳೊಡನೆ ಕಲೆತು ಹೊಸತನವನ್ನು ತಂದಿತು. ನಲ್ಲನ ಸೋಂಕಿನಿಂದ ನಲಿವ ನಲ್ಲಳ ಸಂತೋಷವನ್ನುಕ್ಕಿಸಿತು. ಅಸದೃಶಲೀಲೆಯು ಕಣ್ಣಿಗೆ ಗೋಚರಿಸಲು ಲೀಲೆಯಿಂದಿದ್ದ ಮಹೀಧರನೆಂಬ ವಿಯಚ್ಚರೇಂದ್ರನನ್ನು ಜಯವರ್ಮನು ಕಂಡನು.

---

೧ ಖ-ನವಜ್ಞೆಮಾಡಿ ೨ ಕ.-ಪ್ರಭು ೩ ಕ-ಪಾಡುವ

ವ|| ಭೋಂಕೆನೆ ಕಂಡು ವಿಷಮವಿಷಧರವಿಷಪೂರಿತಶರೀರಮನೊಯ್ಯನೊಯ್ಯನೆ ಆಱೆಸಿ[೧] ಬಂದು ಕಿವಿಯೊಳ್ ಪಳಂಚಲೆರ್ದೆಯಂ ಪಿಡಿದಲುಗುವ ಸೀಯನಪ್ಪ ಗೀತಾತೋದ್ಯನಾದಕ್ಕಮಿದಿರೊಳೆ ಕಣ್ಗೆವಂದು ಬಗೆಯನುೞಿ ಸೆೞೆವಿಡಿದ ವಿದ್ಯಾಧರವಿಳಾಸಕ್ಕಂ ಬೆಕ್ಕಸಂಬಟ್ಟೀಗಳೆನ್ನ ತಪಂಬಟ್ಟ ಫಲಮುಂಟಕ್ಕುಮಪ್ಪೊಡೆ ವಿದ್ಯಾಧರನಪ್ಪೆನಕ್ಕೆಂದಾ ವಿದ್ಯಾಧರವಿಮಾನಮಂ ನೋಡಿ,

ಅಲ್ಲಿಯೆ ಕಣ್ ಪಳಂಚೆ ಮನಮಲ್ಲಿಯೆ ಕೀಲಿಸೆ ನೆಚ್ಚು ಮೆಚ್ಚು[೨] ತ
ಳ್ತಲ್ಲಿಯೆ ಸೋಲ್ತು ಪತ್ತೆ ಗತಜೀವಿತನಾಗವಿವೇಕದಿಂ[೩] ತಪೋ
ವಲ್ಲಿಯೊಳಪ್ಪನಲ್ಪಸುಖಮೆಲ್ಲಮನಲ್ಪಸುಖಕ್ಕೆ ಮಾಱೆ ಬಂ
ದಿಲ್ಲಿ ನಿದಾನದಿಂದತಿಬಳಂಗೆ ಮಹಾಬಳನಾಗಿ ಪುಟ್ಟಿದಂ ೪೨

ವ|| ಅಂತು ಮುನ್ನಿನ ಭವದೊಳಾದಲಂಪು ಪೊಂಪುಟೆವೋಗೆ ಬಯಸಿ ಪಡೆದ ವಿದ್ಯಾಧರಶ್ರೀಯನಿನ್ನೆಗಂ ಬಿಸುಡಲಾರದಿರ್ದೊಡಮೇನಾದುದು.

ಕನಸಿನೊಳಿಂದು ಮೂವರುಮಮಾತ್ಯರಸುಂಗೊಳೆ ಕಟ್ಟಿತಂದಗು
ರ್ವಿನ ಕೊಟಿನಾರ್ಪ ಕೋೞ್ಸಿಸಿಱ ಬಾವಿಯೊಳರ್ದೆ ಕಡಂಗಿ ಬಂದು ನೀ
ನನಿಬರುಮಂ ಕರಂ ಕಟಿಲೆ ಬಗ್ಗಿಸಿ ತನ್ನನುದಗ್ರಮಪ್ಪ ಕಾಂ
ಚನಹರಿಪೀಠದೊಳ್ ಮಿಸಿಸುವಂದಮನೆೞ್ದುರಿ ನಂದುವಂದಮಂ ೪೩

ವ|| ಕಂಡು ತದಶುಭಸ್ವಪ್ನದರ್ಶನಕ್ಕೆ ಕೊಕ್ಕರಿಸಿ ಭವದಾಗಮನಪ್ರತೀಕ್ಷಣಪರನಾಗಿರ್ದಂ ಆತಂಗೆ ತದುತ್ಥಿತ[೪]ಶಿಖಿಶಿಖಾಕಳಾಪಪ್ರಶಮನದರ್ಶನದಿಂದೊಂದು ತಿಂಗಳಾಯುಷ್ಯಂ, ಆತನಿಂ ಮುನ್ನಂ

ವ|| "ಭೋಂಕನೆ ಅದನ್ನು ನೋಡಿ ಜಯವರ್ಮನು ಸರ್ಪವಿಷಾವೃತವಾದ ದೇಹವನ್ನು ಸೈರಿಸಿಕೊಂಡು, ಕಿವಿಯನ್ನು ಬಂದು ಮುಟ್ಟಿ ಹೃದಯತಾಗಿದ ಗೀತಾತೋದ್ಯನಾದಗಳಿಗೂ ಮನಸೆಳೆದ ವಿದ್ಯಾಧರವಿಲಾಸಕ್ಕೂ ಬೆರಗಾಗಿ ತಪಃಫಲವಿದ್ದಲ್ಲಿ ವಿದ್ಯಾಧರನಾಗಿಯೇ ತೀರುವೆನೆಂದುಕೊಂಡನು ಮತ್ತು ವಿದ್ಯಾಧರವಿಮಾನವನ್ನು ನೋಡಿದನು. ೪೨. ಅಲ್ಲಿಯೇ ಕಣ್ಣು ನೆಟ್ಟಿತು. ಮನಸ್ಸು ನೆಟ್ಟಿತು. ನೆಚ್ಚೂ ಮೆಚ್ಚೂ ಉಂಟಾದುವು. ಮನ ಸೋತಿತು. ಗತಜೀವಿತನಂತೆ ಅವಿವೇಕದಿಂದ ತಪೋವಲ್ಲಿಯಲ್ಲಿ ಸಿಕ್ಕ ಅನಲ್ಪಫಲವನ್ನು ಅಲ್ಪಫಲಕ್ಕಾಗಿ ಮಾರಿದನು, ಅವನೇ ಈಗ ಅತಿಬಲನಿಗೆ ಮಹಾಬಲನೆಂಬ ಮಗನಾಗಿ ಹುಟ್ಟಿದನು! ವ|| "ಹಿಂದಿನ ಜನ್ಮದಲ್ಲಾದ ಸಂತೋಷಾಧಿಕ್ಯದಿಂದ ಬಯಸಿಪಡೆದ ವಿದ್ಯಾಧರಶ್ರೀಯನ್ನು ಬಿಡಲಾರದೆಯೇ ಇದ್ದಾನೆ. ಅದರಿಂದೇನು? ೪೩. "ಇಂದು ಅವನು ಕನಸಿನಲ್ಲಿ ಮೂವರು ಮಂತ್ರಿಗಳು ತನ್ನನ್ನು ಕಟ್ಟಿ ದುರ್ಗಂಧಯುಕ್ತವಾದ ಬಾವಿಯಲ್ಲಿ ಮುಳುಗಿಸಿ ಅದ್ದಿದಂತೆಯೂ, ನೀನು ಆ ಮೂವರನ್ನು ಮಣಿಯುವಂತೆಸಗಿ ಅವರಿಂದ ಬಿಡಿಸಿ ತಂದು ಅವನನ್ನು ಸುವರ್ಣಸಿಂಹಾಸನದಲ್ಲಿ ಕುಳ್ಳಿರಿಸಿ ಅಭಿಷೇಕ ಮಾಡಿದಂತೆಯೂ ಒಂದು ದಳ್ಳುರಿಯು ನಂದಿದಂತೆಯೂ ಕಂಡನು. ವ|| "ಆ ಅಮಂಗಳಕರವಾದ ಕನಸಿನ ದರ್ಶನಕ್ಕೆ ಹೆದರಿ ಆತನು ನಿನ್ನ ಆಗಮನಪ್ರತೀಕ್ಷಣೆಯಲ್ಲಿದ್ದಾನೆ. ಆ ದಳ್ಳುರಿಯ ಪ್ರಶಮನದಿಂದಾಗಿ ಆತನಿಗೆ

---

೧ ಖ-ಅಳಱೆಸಿ ೨ ಕ.-ಮೆಚ್ಚೆ ೩ ಕ.-ನಂತವಿವೇಕದಿಂ ೪ ಖ.-ತದುದ್ಭುತ

ನಿನ್ನೀ ಕನಸುಗಳಂ ಪೇಟು ; ಪೇಟಲೊಡಮಾತಂ ನಿನ್ನ ಮಾತನೆ ಪವಣ್ಮಾಡಿ ಪೇಟ್ದುದಂ ಕೈಕೊಳ್ಗುಂ ಅಂತು ಕೈಕೊಂಡು,

||ಪಿರಿಯಕ್ಕರಂ||

ಈಗಳ್ ನೀನಿರ್ದು ನೋಂಪಿಸೆ ನೋಂತು ಮಹಾಬಳಂ ಲಲಿತಾಂಗಂ ವಜ್ರಜಂಘಂ
ಭೋಗಭೂಮಿಜಂ ಶ್ರೀಧರದೇವಂ ಸುವಿಧಿನರಾಧಿಪನಚ್ಯುತೇಂದ್ರಂ
ಸಾಗರಾಂತಂ ನೆಲನೆನಿತನಿತುಮಂ ಚಕ್ರದಿಂ ಬೆಸಕೆಯ್ಸಿ ವಜ್ರನಾಭಿ
ಯಾಗಿ ಸರ್ವಾರ್ಥಸಿದ್ಧಿಯೊಳ್ಪುಟ್ಟಿ ಭರತದೊಳಿನ್ನಾದಿದೇವನಪ್ಪೊಂ ೪೪

ವ|| ನೀನುಂ ತೃತೀಯಜನ್ಮದೊಳ್ ವಿಗಳಿತಸಂಸೃತಿನಿಗಳನೆಯಪ್ಪೆಯೆಂಬುದುಂ ; ಚಾರಣ ಯುಗಳಚರಣಯುಗಳಕ್ಕೆ ಕರಕಮಳಯುಗಳಮಂ ಮುಗಿದು ಬೀಳ್ಕೊಂಡತಿತ್ವರಿತಗತಿಯಿಂ ಬರುತ್ತುಂ,

ಮುಸುಮುತ್ತಂತೆ ತೆರಳ್ದ ತನ್ನ ಮೊಗಮಂ ಕಂಡಳ್ಕನೋ ಕೂಡೆ ಜೋ
ಲ್ದು ಸಡಿಲಿರ್ದೊಡಲಳ್ಳೆ ಜೊಳ್ಳೆತನಮಂ ಮೇಣ್ಕಾಣನೋ ಸಂತತ
ವ್ಯಸನೋದ್ರೇಕದ ಕುಂದನೇನೊಣರನೋ ಶಕ್ತಿಕ್ಷಯಂಗಾಣನೋ
ಬಿಸುಡಂ ಮುನ್ನಿನ ತನ್ನ ಲಂಪಳಿಕೆಯಂ ಮತ್ತಂ ಜರಾಜರ್ಜರಂ ೪೫

ವ|| ಅಂತಾತ್ಮಗ್ರತದೊಳೆ ಬಗೆಯುತ್ತುಂ ಬಂದು ಖಚರಪತಿಯನೆಯ್ದಿ ತತ್ಪ್ರಪಂಚಮಂ ಸಪ್ರಪಂಚಮಱಿಪಿ,

(ಮಹಾಬಲನಿಗೆ) ಒಂದೇ ತಿಂಗಳಿನ ಆಯುಷ್ಯ ಉಳಿದಿದೆ. ಅವನಿಗಿಂತ ಮೊದಲು ನೀನೇ ಆ ಕನಸುಗಳನ್ನು ತಿಳಿಸು. ನಿನ್ನ ಮಾತುಗಳನ್ನವನು ಪ್ರಮಾಣವೆಂದು ತಿಳಿದು ನೀನು ಹೇಳಿದ್ದನ್ನು ಕೈಗೊಳ್ಳುವನು. ಹಾಗೆ ಕೈಕೊಂಡು, ೪೪. "ನಿನ್ನ ಮಾತಿನಂತೀಗ ಮಹಾಬಲನು ವ್ರತ ತೊಡುವನು. ತತ್ಫಲವಾಗಿ ಅವನು ಲಲಿತಾಂಗ, ವಜ್ರಜಂಘ, ಭೋಗಭೂಮಿಜನಾದ ಶ್ರೀಧರದೇವ, ಸುವಿಧಿನರೇಂದ್ರ ಮತ್ತು ಅಚ್ಯುತೇಂದ್ರನೆಂಬ ಬೇರೆಬೇರೆ ಭವಗಳನ್ನು ಪಡೆಯುವನು. ಸಾಗರಾಂತವಾದ ಭೂಮಿಯೆಲ್ಲವನ್ನೂ ಚಕ್ರದ ನೆರವಿನಿಂದ ನಡೆಯಿಸಿ ಸರ್ವಾರ್ಥಸಿದ್ಧಿಯಲ್ಲಿ ವಜ್ರನಾಭಿಯೆಂಬ ಹೆಸರಿನಿಂದ ಜನಿಸುವನು. ಕೊನೆಗವನು ಭರತಖಂಡದಲ್ಲಿ ಆದಿದೇವನಾಗುವನು. ವ|| ನೀನೂ ಕೂಡ ಇಲ್ಲಿಂದ ಮೂರನೆಯ ಜನ್ಮದಲ್ಲಿ ಸಂಸಾರಶೃಂಖಲೆಯಿಂದ ಬಿಡುಗಡೆ ಹೊಂದುವೆ" ಎಂದನು. ಬಳಿಕ ಸ್ವಯಂಬುದ್ಧನು ಚಾರಣಯುಗಳಕ್ಕೆ ಕೈ ಮುಗಿದು ಬೇಗಬೇಗನೆ ಹೊರಟುಬರುತ್ತ ೪೫. "ನನ್ನ ರಾಜನು ಕೋಡಗದಂತೆ ಮುದಿಯಾಗಿ ಮುದ್ದೆಯಾದ ತನ್ನ ಮುಖವನ್ನು ಕಂಡು ಅಳುಕನಲ್ಲ! ಜೋತುಬಿದ್ದ ಒಡಲಳ್ಳೆಗಳ ಜೊಳ್ಳುತನವನ್ನು ಗಮನಿಸನೆ! ವ್ಯಸನೋದ್ರೇಕದಿಂದ ಕುಂದನೇನನ್ನೂ ಕಾಣನೆ! ಶಕ್ತಿಕ್ಷಯವನ್ನನುಭವಿಸನೆ! ಮುಪ್ಪಿನಿಂದ ತರತರನೆ ಕಂಪಿಸುತ್ತಿದ್ದರೂ ಲಂಪಟತೆಯನ್ನು ಮಾತ್ರ ಬಿಸುಡನು!" ವ|| ಹೀಗೆಂದು ತನ್ನಲ್ಲಿಯೆ ತಾನು ಆಲೋಚಿಸುತ್ತಾ ಬಂದು ಆ ವಿದ್ಯಾಧಿರಾಜನನ್ನು ಸಮೀಪಿಸಿ ಸವಿಸ್ತಾರವಾಗಿ ಆ ವೃತ್ತಾಂತವನ್ನರುಹಿದನು.

ಮನದಳಿಪಿಂ ತಮಾಳಲತಿಕಾಂಗಿಯರಾಟಿಸೆ ಬರ್ದುಗೆಟ್ಟು ಕಾಂ
ಚನಲತಿಕಾಂಗಿಯರ್ ಬಯಸೆ ಸೋಲ್ತು ಸರೋಜದಳಾಯತಾಕ್ಷಿಯರ್
ನೆನೆಯೆ ವಿಳಾಸದುತ್ಪಳದಳಾಕ್ಷಿಯರೀಕ್ಷಿಸೆ ಸಂದ ನಿನ್ನ ಮು
ನ್ನಿನ ಚರಿತಂಗಳಂ ನೆನೆಯದಿರ್ ನೆನೆ ಜೈನಪದಾಂಬುಜಂಗಳಂ ೪೬

ವ|| ಅಂತುಮಲ್ಲದೆ,

ಮಸೆದಂಗೋದ್ಭವನಸ್ತ್ರದಂತೆಸೆವ ನಿನ್ನೀರೂಪವು ವೃದ್ಧತ್ವದೊಳ್
ಪೊಸತೊಂದಾಯ್ತು ಮಮತ್ವಮಂ ಬಿಸುಟು ನೀನೇ ತತ್ತ್ವಮಂ[೧] ಭವ್ಯ ಭಾ
ವಿಸು ನಿನ್ನೀ ತನುವಂ ತಪೋವನವನಕ್ರೀಡಾಸುಖಕ್ಕೊಡ್ಡು ಚಿಂ
ತಿಸದಿರ್ ಮುನ್ನಿನ ನಿನ್ನ ಯೌವನವನಕ್ರೀಡಾವಿಳಾಸಂ[೨]ಗಳಂ ೪೭

ವ|| ಅಂತಮಲ್ಲದೆಯುಂ,

ನಿನಗೀಸಂಸೃತಿವಾರಿರಾಶಿತಟಮತ್ಯಾಸನ್ನಮಾಸನ್ನಭ
ವ್ಯನೆಯೆಂದೆಯ್ದೆ ಮುನೀಂದ್ರದಿವ್ಯಮತದಿಂ ನಿಶ್ಚೈಸಿದೆಂ ಮಾಣಲಿ[೩]
ನ್ನೆನಸುಂ ಬಾರದು ನಿನ್ನೊಳಾತ್ಮಹಿತಮಂ ನಿಶ್ಚೈಸು ಸನ್ಮಾರ್ಗಸೂ
ಚನೆಗೆಯ್ದೆಂ ಶರಣಂ ಜಿನೇಂದ್ರಚರಣಂ ವಿದ್ಯಾಧರಾಧೀಶ್ವರಾ ೪೮

ವ|| ಎಂದು ಪರಿಮಿತಹಿತವಚನಂಗಳಿಂ ಮುಟ್ಟ ನುಡಿದು ತನ್ನ ಕಂಡ ಕನಸುಗಳನನು ಕ್ರಮಂದಪ್ಪದಜೆಪಿದ ಮಂತ್ರಿಮುಖ್ಯನ ನುಡಿಯೊಳಪಗತಕಲುಷಹೃದಯ[೪]ನಾಗಿ,

೪೬. "ವಿದ್ಯಾಧರೇಂದ್ರ, ತಮಾಲದಂತೆ ದೇಹವಡೆದ ಸ್ತ್ರೀಯರು ಅತ್ಯಾಕಾಂಕ್ಷೆಯಿಂದ ನಿನ್ನನ್ನು ಬಯಸುವರು. ಲಜ್ಜಾವಿಹೀನರಾಗಿ ಕಾಂಚನಲತಾಂಗಿಯರು ಅಪೇಕ್ಷಿಸುವರು. ನಿನ್ನ ರೂಪಿಗೆ ಮನಸೋತು ಕಮಲದಳಾಯತಾಕ್ಷಿಯರು ನೆನೆಯುವರು. ಉತ್ಪಲದಳಾಕ್ಷಿಯರು ನಿನ್ನನ್ನು ಹಾವಭಾವದೃಷ್ಟಿಗಳಿಂದ ನೋಡುವರು. ಆದರೂ ಹಿಂದಿನ ಚರಿತೆಗಳೊಂದನ್ನೂ ನೆನಪಿಗೆ ತಂದುಕೊಳ್ಳದೆಯೆ ಜೈನಪದಾಂಬುಜಗಳನ್ನು ನೆನೆ. ವ|| "ಹಾಗಲ್ಲದೆ, ೪೭. ಮನ್ಮಥನ ಅಸ್ತ್ರದಂತೆ ಹೊಳೆವ ನಿನ್ನ ರೂಪು ವೃದ್ಧತ್ವದಲ್ಲಿಯೂ ಹೊಸ ಬಗೆಯನ್ನಪ್ಪಿದೆ. ಎಲೈ ಭವ್ಯನೇ, ಮಮತ್ವವನ್ನು ದೂರಸರಿಸಿ ಕೇವಲತ್ವವನ್ನು ಚಿಂತಿಸು. ನಿನ್ನ ದೇಹವನ್ನೀಗ ತಪೋವನಕ್ರೀಡೆಗೊಳಪಡಿಸು. ಮುನ್ನಿನ ಯೌವನದ ಕ್ರೀಡಾವಿಳಾಸಗಳೊಂದನ್ನೂ ನೆನಪಿಗೆ ತಂದುಕೊಳ್ಳದಿರು. ವ|| "ಹಾಗೂ ಅಲ್ಲದೆಯೆ ೪೮. ಸಂಸಾರಸಾಗರದ ದಡವನ್ನು ದಾಂಟಲು ನಿನಗೆ ಕಾಲವು ಸನ್ನಿಹಿತ. ಮುನೀಂದ್ರನ ಅಭಿಮತದಂತೆ ನೀನು ಆಸನ್ನಭವ್ಯನೆಂದು ನನ್ನ ದೃಢವಿಶ್ವಾಸ. ನೀನೇ ನಿನ್ನ ಆತ್ಮಹಿತವನ್ನು ಗಮನಿಸು ಸನ್ಮಾರ್ಗಸೂಚನೆಯನ್ನು ಕೊಟ್ಟಿದ್ದಾಗಿದೆ. ಜಿನೇಂದ್ರಚರಣವೇ ನಿನಗೆ ಶರಣು ವಿದ್ಯಾಧರ!" ವ|| ಎಂದನು. ಮಂತ್ರಿಶ್ರೇಷ್ಠನ ಪರಿಮಿತವೂ ಹಿತಕರವೂ ಆದ ಮಾತುಗಳನ್ನೂ ತನ್ನ ಕನಸಿನ ವೃತ್ತಾಂತಗಳನ್ನೂ ಆಲಿಸಿ ಕೇಳಿ ಮಹಾಬಲನು ದೃಢ

೧ ಕ.-ನೀನೇಕತ್ವಮಂ ೨ ಕ.-ವಿನೋದಂ ೩ ಗ.-ಮಾಣದಿ ೪ ಕ.-ಳವಹಿತಹೃದಯ ಗ- ಳಪಹೃತಹೃದಯ

ಜರೆ ಬಂದೊಟ್ಟೈಸೆ ಮಾಣ್ದಿರ್ದಳಿಪೆನಗಿದೆ ಮುಂ ಸಾಲದೇ ಕಾಳರಾಜಂ
ಬರೆಯುಂ ಮಾಣ್ದಿರ್ಪನೇ[೧] ನಿಶ್ಚಯಿಸು ತನುವನಿನ್ನೊಪ್ಪುಗೊಳ್ ಮುನ್ನಮಿನ್ನುಂ
ಕರಣೀಯಂ ನಿನ್ನ ವಾಕ್ಯಂ ನಿಜಮತಮೆ ಮತಂ ಮೆಚ್ಚಿದಂತೆನ್ನನೀ ಸಂ
ಸರಣಾಂಭೋರಾಶಿಯಿಂದಂ ಪೊಱಮಡಿಸೆನಗಂ ನೀನೆ ಹಸ್ತಾವಲಂಬಂ ೪೯

ವ॥ ಎಂದು ಪರಿಚ್ಛೇದಿಸಿ ಮನಮಱೆಯೆ ನುಡಿದು[೨] ನಿಜಗೃಹೋದ್ಯಾನದ ಜಿನಭವನದೊಳೆಂಟು ದಿವಸಂಬರಂ ಮಹಾಮಹಮೆಂಬ ಜಿನಮಹಿಮೆಯಂ ಮಹಾವಿಭೂತಿಯಿಂ ಮಹಾಬಳಂ ಮಾಡಿದಿಂ ಬೞಿಯಂ ನಿಜಾಪ್ತವರ್ಗಮುಮಂ ಸಾಮಂತವರ್ಗಮುಮಂ ಬರಿಸಿ ಕವಚಹರನಾದ ನಿಜಸುತನತಿಬಳಕುಮಾರನಂ ರಾಜ್ಯಭಾರದೊಳ್ ನಿಱಿಸಿ,

ಒಡವಳೆದಂಬರೇಚರರನನ್ವಿತ[೩]ಮಂತ್ರಿಸಮೂಹಮಂ ಮನಂ
ಬಡೆ ಪೊರೆದಿಷ್ಟಬಂಧುಜನಮಂ ಕರೆದೆಲ್ಲರುಮೀಕುಮಾರನಂ
ಪಿಡಿದಿರಿಮೆನ್ನ ಪಂಬಲನಿದಂ ಬಿಸುಡಿಂ ಬಿಡಿಮೆಂದು ಖೇಚರಂ
ಬಿಡಿಸಿದನಾಪ್ತರಂ ಬಿಡಿಸುವಂತಿರೆ ಮೋಹದ ಬಳ್ಳವಳ್ಳಿಯಂ ೫೦

ವ॥ ಅಂತು ನಿಜಾಪ್ತವರ್ಗಮುಮಂ ಬಂಧುವರ್ಗಮುಮಂ ವಿದ್ಯೆಗಳುಮಂ ಬಿಡಿಸಿ ವಿದ್ಯಾಧರಪ್ರಸಾಧನಮೆನಗಿಂದಿನೊಳಿನಿತೆಂಬಂತೆ ನೆಱೆಯೆ ಕೈಗೆಯ್ದು ಮಣಿಮಯಶಿಬಿಕಾರೂಢನಾಗಿ ಪೊೞಲಂ ಪೊಱಮಟ್ಟನೇಕ ಹಾಟಕಕೂಟಕೋಟಿಘಟಿತ ಸಿದ್ಧಕೂಟಮಂ ತ್ರಿಃಪ್ರದಕ್ಷಿಣಂಗೆಯ್ದು

ಮನಸ್ಕನಾಗಿ, ೪೯. "ಮುಪ್ಪಡರಿದ್ದರೂ ಆಶೆಯಿನ್ನೂ ಅಳಿದಿಲ್ಲ. ಕಾಲರಾಜನು ಬರದೆ ತಟಸ್ಥನಾಗಿರುವನೆ? ಈ ದೇಹವನ್ನೊಪ್ಪಿಸುವುದಕ್ಕಿಂತ ಮುಂಚೆ ನಿನ್ನ ಮಾತು ನನಗೆ ಅವಶ್ಯಕರ್ತವ್ಯ. ನಿನ್ನ ಅಭಿಪ್ರಾಯವೇ ನನ್ನ ಅಭಿಪ್ರಾಯ. ಈ ಸಂಸಾರವೆಂಬ ಸಾಗರದಿಂದ ನನ್ನನ್ನು ದಾಟಿಸುವಂತೆಸಗು. ನೀನೇ ನನ್ನ ಹಸ್ತಾವಲಂಬ". ವ॥ ಎಂದು ನಿರ್ಣಯಿಸಿ ಮನಮುಟ್ಟುವಂತೆ ಹೇಳಿದನು. ತನ್ನ ಗೃಹೋದ್ಯಾನದಲ್ಲಿನ ಜಿನಭವನದಲ್ಲಿ ಎಂಟು ದಿನಗಳ ಕಾಲ ಮಹಾಮಹ[1]ವೆಂಬ ಮಹಿಮೆಯನ್ನು ವೈಭವದಿಂದ ನಡೆಯಿಸಿದನು. ಬಳಿಕ ತನ್ನ ಆಪ್ತವರ್ಗವನ್ನೂ ಸಾಮಂತಜನವನ್ನೂ ಬರಮಾಡಿಕೊಂಡು ಚಿಕ್ಕವನಾದ ತನ್ನ ಮಗ ಅತಿಬಲಕುಮಾರನನ್ನು ರಾಜಕಾರ್ಯದಲ್ಲಿ ತೊಡಗಿಸಿದನು. ೫೦. ತನ್ನೊಡನಾಡಿದ ಅಂಬರಚರರನ್ನೂ ಮಂತ್ರಿಸಮೂಹವನ್ನೂ ಮನಃಪೂರ್ತಿಯಾಗಿ ಸನ್ಮಾನಿಸಿದನು. ಇಷ್ಟಬಂಧುಗಳನ್ನು ಕರೆದು "ನೀವೆಲ್ಲರೂ ಈ ಕುಮಾರನನ್ನು ಹಿಡಿತದಲ್ಲಿಟ್ಟುಕೊಳ್ಳಿ, ನನ್ನ ಮೇಲಿನ ಹಂಬಲವನ್ನು ದೂರಸರಿಸಿ" ಎಂದನು. ಹೀಗೆ ಮೋಹದ ಆಧಿಕ್ಯವನ್ನು ಬಿಡಿಸಿಕೊಳ್ಳುವಂತೆ ಆಪ್ತರನ್ನು ಬಿಡಿಸಿದನು. ವ॥ ಆಪ್ತವರ್ಗವನ್ನೂ ಬಂಧುವರ್ಗವನ್ನೂ ವಿದ್ಯೆಗಳನ್ನೂ ಪರಿತ್ಯಜಿಸಿ, ವಿದ್ಯಾಧರವೈಭವ ನನಗೆ ಇಷ್ಟೇ ಎಂಬಂತೆ ಮಣಿಮಯವಾದ

---

೧ ಗ.-ಮಾಣ್ದರ್ಪನೇ ೨ ಖ.ಗ.-ಪರಿಚ್ಛೇದಮನಱೆಯೆನುಡಿದು ೩ ಖ.-ಚರಸಮನ್ವಿತ

1. ಮುಕುಟಬದ್ಧನಾದ ರಾಜನು ಮಾಡುವ ಜಿನಪೂಜೆ.

ಜಿನೇಂದ್ರಾರ್ಚನಾ ಪುರಸ್ಸರಂ ವಾಚನಾಗ್ರಹಣಸಮೇತಮಾರಾಧನೆಯನರ್ಚಿಸಿ ವೀರಸಂಸ್ಥಾನಾರೂಢ[೧] ನಾದಾಗಳ್,

ಅರಸರ ಮೆಚ್ಚು ತಮ್ಮ ಮನದೊಳ್ ನಿಲೆ ಸ್ಟೈರಿಸದಂತನಿತ್ಯಮೀ
ನರರ ವಿಭೂತಿಯೆಂಬ ಬಗೆ ಬಂದಿರೆ[೨] ಮಾಣದೆ ತಮ್ಮತಮ್ಮ ಪು
ತ್ರರನಭಿಯೋಗದಿಂದತಿಬಳಂಗೆ ನಿಯೋಜಿಸಿ ಪೂಣ್ದರಂ
ಬರಚರರಂಬರೇಚರರುಮಣ್ಮಳವಟ್ಟರೆ ಜೈನದೀಕ್ಷೆಯಂ ೫೧

ವ|| ಆಗಳಾ ಸ್ವಯಂಬುದ್ಧಂ ನಿರ್ಯಾಪಕಾಚಾರ್ಯನಾಗಿ ಪಂಚಗುರು ಸಮಕ್ಷದೊಳ್ ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗಪುರಸ್ಸರಂ ವೀರಸಂಸ್ಥಾನಾರೂಢನಂ ಮಹಾಬಳನಂ ಜಾತರೂಪಧರನಂ ಮಾಡಿ ಚತುರ್ವಿಧಾಹಾರಶರೀರಪ್ರತ್ಯಾಖ್ಯಾನಮಂ ಕೊಟ್ಟು,

ಮೇನೆಯಲ್ಲಿ ಕುಳಿತು ಪಟ್ಟಣದಿಂದ ತೆರಳಿದನು. ಅನೇಕ ಸುವರ್ಣಶಿಖರಗಳಿಂದ ಕೂಡಿದ ಸಿದ್ಧಕೂಟವನ್ನು ತ್ರಿಃಪ್ರದಕ್ಷಿಣೆ ಮಾಡಿ ಜಿನೇಂದ್ರಾರ್ಚನೆಯನ್ನು ಮಾಡಿ ವಚನಾಗ್ರಹಣ ಸಮೇತವಾಗಿ ಆರಾಧನೆಯನ್ನು[1] ಅರ್ಚಿಸಿ[2] ವೀರಸಂಸ್ಥಾನಾರೂಢನಾದನು. ೫೧. ಮಹಾಬಲನ ಮೆಚ್ಚು ತಮ್ಮ ಮೇಲಿರುವುದನ್ನು ಖಚರಖಚರಿಯರು ಗಮನಿಸಿದರು. ಈ ನರರ ಐಶ್ವರ್ಯವೆಲ್ಲವೂ ನಶ್ವರವಾದುವು ಎಂದು ಬಗೆದರು. ತಮ್ಮತಮ್ಮ ಪುತ್ರರೆಲ್ಲರ ಯೋಗಕ್ಷೇಮವನ್ನು ಅತಿಬಲನಿಗೊಪ್ಪಿಸಿದರು, ಅವರೆಲ್ಲರೂ ಧೈರ್ಯದಿಂದ ಜೈನದೀಕ್ಷೆಯನ್ನು ತೊಟ್ಟರು. ವ|| ಆಗ ಸ್ವಯಂಬುದ್ಧನು ನಿರ್ಯಾಪಕಾಚಾರ್ಯ[3]ನಾದನು. ಪಂಚಪರಮೇಷ್ಠಿಗಳ[4] ಎದುರಿನಲ್ಲಿ ಹೊಲ, ಗದ್ದೆ, ಚಿನ್ನ ಮುಂತಾದ ಬಾಹ್ಯವಸ್ತುಗಳ ಪರಿಗ್ರಹ (ಸ್ವೀಕಾರ)ಗಳ ಮೇಲೂ ಕೋಪ, ಮಾನ, ಮಾಯೆ, ಮುಂತಾದ ಅಭ್ಯಂತರ ಸ್ವೀಕಾರಗಳ ಮೇಲೂ ಆಶೆದೊರೆದು ವೀರಶಯ್ಯೆಯನ್ನಪ್ಪಿ ಸಾವಿಗೆ ಸಿದ್ಧನಾದ ಮಹಾಬಲನನ್ನು ದಿಗಂಬರನನ್ನಾಗಿಸಿದನು. ನಾಲ್ಕು ಬಗೆಯ ಆಹಾರವನ್ನೂ ತಿರಸ್ಕರಿಸುವಂತೆಸಗಿದನು.

---

೧ ಕ.-ಸಂಸ್ತವಾರೂಢ; ಗ.-ಸಂಸ್ತರಾರೂಢ ೨ ಖ.-ಸಂದಿರೆ

1. ಆರಾಧನೆ = ಜ್ಞಾನ, ದರ್ಶನ, ಚಾರಿತ್ರ, ತಪಗಳೆಂಬ ನಾಲ್ಕು ಆರಾಧನೆ.

2. ವೀರಶಯ್ಯೆಯ ಮೇಲೆ ಏಕಪಾರ್ಶ್ವದಲ್ಲಿ ಮಲಗಿ ಆಹಾರಬಿಟ್ಟು ಮರಣವನ್ನು ಸಾಧಿಸುವ ಕ್ರಮ.

3. ಸಲ್ಲೇಖನವ್ರತಾಭ್ಯಾಸಿಗಳಿಗೆ ಆ ವ್ರತಕ್ರಮವನ್ನು ಉಪದೇಶಿಸಿ ಅದನ್ನು ಸಾಧಿಸಲು ನೆರವಾಗುವವನಿಗೆ ನಿರ್ಯಾಪಕಾಚಾರ್ಯ ಎಂದು ಹೆಸರು.

4. ಅರ್ಹನ್, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧುಗಳು.

ತನ್ನಿಂದಂ ಪೆಱರಿಂದಂ
ತನ್ನಂ ಸಾವರಿಸು*ವಾಸೆಯಿಲ್ಲದೆ ದೇಹೋ
ತ್ಪನ್ನಪರೀಷಹಸಂಹತಿ
ತನ್ನೊಡಲಂ ನೆಱೆಯೆ ತವಿಸುತಿರ್ಪುದುಮತ್ತಂ[1] ೫೨

ಆಯಿರ್ದ ಮಾಟ್ಕೆಯೊಳ್ ಪರ
ಮಾಯುಷ್ಯಾಂತಂಬರಂ ನಿರಾಕುಳಮಾಗಿ
ರ್ಪಾಯಿರವಿನ ಜೈನಾಭಿ
ಪ್ರಾಯಂ ಪ್ರಾಯೋಪಗಮನದಿಂ ತೊರೆಯಿಸಿದಂ[2] ೫೩

ವ।। ಅಂತು ತೊರೆಯಿಸಿ,

ಮಂಗಳಕಾರಣಪಂಚಪ
ದಂಗಳನಪವರ್ಗಮಾರ್ಗವಿರಚಿತ ಸೋಪಾ
ನಂಗಳನಕ್ಷಯಮಂತ್ರಪ
ದಂಗಳನೋದುವುದು ನೆಱೆಯೆ ನಿಶ್ಚಳಮತಿಯಿಂ ೫೪

ಅವನೋದುವನಿತು ಬುದ್ಧಿಯೆ
ತವುತಂದೊಡೆ ಪಂಚಪದದ ನಾಮಾಕ್ಷರಮಂ
ಧ್ರುವಮೋದುವುದವು ತೊಡರ್ವುದು
ಮವಶ್ಯಮೋದಲಸದವಱ ಮೊದಲಕ್ಕರಮಂ ೫೫

೫೨. ಅವನು ತನ್ನಿಂದಾಗಲಿ ಇತರರಿಂದಾಗಲಿ ತನ್ನ ಓರಣವನ್ನು ಆಶಿಸಲಿಲ್ಲ. ಒಡಲಲ್ಲಿಯೆ ಮೂಡಿದ ಹಸಿವು, ಬಾಯಾರಿಕೆ, ಛಳಿ, ಬಿಸಿಲು ಮುಂತಾದ ಇಪ್ಪತ್ತೆರಡು ಉಪದ್ರವ (ಪರೀಷಹ)ಗಳು ತನ್ನನ್ನು ಬಹುವಾಗಿ ಪೀಡಿಸುತ್ತಿದ್ದರೂ ೫೩. ಇದ್ದ ರೀತಿಯಿಂದಲೇ ಇದ್ದುಕೊಂಡು ಆಯುಸ್ಸಿನ ಕೊನೆಯನ್ನು ಮುಟ್ಟಬೇಕೆಂಬ ಜೈನಾಭಿಪ್ರಾಯವನ್ನು ಅರಿತ ಅವನು ಪ್ರಾಯೋಪಗಮನದ ಕ್ರಮದಿಂದ ಪರೀಷಹಗಳನ್ನು ಜಯಿಸಿದನು. ವ।। ಅಂತು ಜಯಿಸಲಾಗಿ, ಸ್ವಯಂಬುದ್ಧನು ಮಹಾಬಲನನ್ನು ಕುರಿತು ೫೪. "ಮಂಗಳಕ್ಕೆ ಕಾರಣವಾದವು ಪಂಚನಮಸ್ಕಾರಮಂತ್ರಗಳು. ಅವು ಮೋಕ್ಷೋಪಯೋಗಿಯಾದ ಮೆಟ್ಟಿಲುಗಳು. ಅವು ಅಕ್ಷಯವಾದ ಮಂತ್ರಶಕ್ತಿಗಳು. ಅಂಥ ಮಂತ್ರಗಳನ್ನು ನಿಶ್ಚಲಮತಿಯಿಂದ ಪಠಿಸಬೇಕು. ೫೫. "ಅವನ್ನು ಪಠಿಸುವ ಶಕ್ತಿಯೇ ಕುಂಠಿತವಾದಲ್ಲಿ ಪಂಚಪರಮೇಷ್ಠಿಗಳ ನಾಮಾಕ್ಷರಗಳನ್ನಾದರೂ ಸದಾ ಜಪಿಸು. ಅವೆಲ್ಲವನ್ನೂ ಜಪಿಸಲು ಶಕ್ತಿ ಇಲ್ಲದಿದ್ದರೆ ಅವರ ಮೊದಲಕ್ಕರವನ್ನು ಜಪಿಸುವುದು ಅತ್ಯವಶ್ಯ.

---

೧ ಕ.-ತಿರ್ಪೊಡಮೆಂತುಂ ೨ ಖ.-ತೊಱಯಿಸಿದಂ

* ಸಾವರಿಸು = ಚೇತರಿಸಿಕೊಳ್ಳು. ಸಾವಗಿಸು ಎಂಬುದ ಅಪಪಾಠವಿರಬೇಕು.

ಅದು ತಡತಡಾದೊಡರ್ಹ
ತ್ಪದಮಂ ನಾಲಗೆಗೆ ತರ್ಪುದದು ಬಾರದೊಡಿ
ರ್ಪುದಕಾರಮೊಂದಱೊಳ್ ಮ
ತ್ತದು ತೊಡರ್ದೊಡೆ ತೊಡರದಿರ್ ಬಱಿಕ್ಕೆತಱೊಳಂ ೫೬

ಮುನಿವೃಂದೋಚ್ಚಾರಿತಂ ಪಂ
ಚನಮಸ್ಕೃತಿಗಾಂತು ಕಿವಿಯನರ್ಹತ್ಪದಮಂ
ನೆನೆಯುತ್ತುಮನುಪ್ರೇಕ್ಷೆಯೆ
ಮನದೊಳ್ ತಣ್ಮಲೆಯೆ ಸೇಸೆಗೊಳ್ ಖಚರಪತೀ ೫೭

ಮಿಡಿದನಿತು ಬೇಗದಿಂದಱಿ
ವೊಡಲನಿದಂ ಪೋಗೆ ನೂಂಕಿ ಚೆಲ್ವಪ್ಪೊಡಲಂ
ಪಡೆದಪೆಯೀಗಳೆ ಬಲ್ವಿಡಿ
ವಿಡಿದು ಶರಣ್ಬುಗು ಜಿನೇಂದ್ರಪದಸರಸಿಜಮಂ ೫೮

ವ॥ ಎಂದಾ ಮಹಾನುಭಾವನ ಪೇೞ್ದ ಮಾೞ್ಕೆಯೊಳಿರ್ಪತ್ತೆರಡು ದಿವಸಂಬರಂ ವೀರಶಯ್ಯಾತಳಗತನಾಗಿರೆ,

ಅಳುರ್ವ[1] ಪರೀಷಹಾನಳಶಿಖಾವಳಿಗಳ್ ಕೊಳೆ ಧೈರ್ಯಮಂ ಪುದುಂ
ಗೊಳಿಸಿ ಸುರುಳ್ದು ಕುರ್ಗಿದ ಕಱಂಗಿದ ಖೇಚರನಂಗಮಂ ಮೃಗಂ
ಗಳುಮಿರದೆಯ್ದೆ ವಂದು ನಡೆ ನೋಡಿದುವಿಂತಿದು ದಾವಪಾವಕಂ
ಬಳಸೆ ಸುರುಳ್ದ[2] ಬಾಳಸಹಕಾರಮಹೀರುಹಮೆಂಬ ಶಂಕೆಯಿಂ ೫೯

೫೬. "ಆ ಎಲ್ಲ ಅಕ್ಷರಗಳನ್ನು ಜಪಿಸಲಾಗದಿದ್ದರೆ "ಅರ್ಹತ್" ಎಂಬ ಒಂದು ಪದವನ್ನು ನಾಲಗೆಯಿಂದ ಉಚ್ಚರಿಸಬೇಕು. ಅದನ್ನೂ ಉಚ್ಚರಿಸಲಾಗದಿದ್ದಾಗ ಮೊದಲನೆಯ "ಅ"ಕಾರವನ್ನು ಜಪಿಸಬೇಕು. ಅದೂ ಸಾಧ್ಯವಾಗದಾಗ ಏನೂ ಮಾಡದೆ ಸುಮ್ಮನಾಗಬೇಕು. ೫೭. "ಮುನಿವೃಂದೋಕ್ತವಾದ ಪಂಚಪರಮೇಷ್ಠಿಗಳ ನಮಸ್ಕಾರವನ್ನು ಕಿವಿಗೊಟ್ಟು ಆಲಿಸು. ಅರ್ಹತ್ಪದವನ್ನು ನೆನೆಯುತ್ತ ಅಧ್ರುವಾದಿ ಹನ್ನೆರಡು ಅನುಪ್ರೇಕ್ಷೆಗಳನ್ನು[1] ಮನಸ್ಥಿತವಾಗುವಂತೆಸಗು. ಎಲೈ ಖಚರಪತಿಯೆ! ಹೀಗೆ ಆಶೀರ್ವಾದವನ್ನು ಪಡೆ. ೫೮. ಜಿನೇಂದ್ರನ ಪಾದಕಮಲಗಳನ್ನು ಬಿಗಿದಪ್ಪಿ ಶರಣಾಗು. ಆಗ ಮಾತ್ರ ಚಿಟುಕಿಯಾಡಿಸುವಷ್ಟು ಕಾಲದಲ್ಲಿ ನಶ್ವರದೇಹವನ್ನು ಬಿಸುಟು ಚೆಲ್ವಾದ ದೇಹವನ್ನು ಪಡೆಯಲು ಸಾಧ್ಯ" ವ॥ ಹೀಗೆ ಆ ಮಹಾನುಭಾವನು ಹೇಳಿದ ರೀತಿಯಿಂದ ಇಪ್ಪತ್ತೆರಡು ದಿವಸಗಳವರೆಗೆ ಮಹಾಬಲನು ವೀರಶಯ್ಯಾತಳನಾಗಿರಲು, ೫೯. ವ್ಯಾಪಿಸುತ್ತಿದ್ದ ಪರೀಷಹವೆಂಬ ಬೆಂಕಿಯ ಜ್ವಾಲೆಗಳು ಆಕ್ರಮಿಸಿದವು. ಖೇಚರನು ಧೈರ್ಯವನ್ನವಲಂಬಿಸಿದನು. ಅವನ ದೇಹವು ಸುರುಳಿ ಕುಗ್ಗಿ ಕರಗಿತು. ಕಾಳ್ಗಿಚ್ಚು

---

೧ ಖ.-ಅಳುರ್ದ; ಗ.-ಅಳುರ್ದು ೨ ಖ.-ಕಱಿಲ್ದ

1. ಅನಿತ್ಯತ್ವಾದಿ ದ್ವಾದಶ ಭಾವನೆಗಳನ್ನು

ವ|| ಅಂತು ನೋಂತು,

ಸೊಗಯಿಪ ಮುನ್ನಿನಿರ್ದ ಪರಿಜಿಂ ಕಡುಚೆಲ್ವು ಗಡಂ ಜಿನೇಂದ್ರನಂ
ಬಗೆವ ಮನಂ ಗಡಂ ಮುಗುಳ್ದು ಜಾನಿಪ ಕಣ್ಗಡಮಾತ್ಮತತ್ತ್ವದೊಳ್
ಬಗೆ ಗಡಮೆಯ್ದೆ ಸೂಟ್ಗೆಡದೆ ಪಂಚಪದಂಗಳನೋದುತಿರ್ಪ ನಾ
ಲಗೆ ಗಡಮೇಂ ಸಮಾಧಿವಿಧಿಯಂ ನೆಱೆ ತಾಳ್ದಿದನೋ ಮಹಾಬಳಂ ೬೦

ಇಂತನವದ್ಯಮಪ್ಪ ಪದದೊಳ್ ಪತಿಯಂ ನಡೆಯಲ್ಕೆ ಪೇೞ್ದು ತಾ
ನುಂ ತಱಿಸಂದುದಗ್ರತಪಮಂ ತಡವಿಲ್ಲದೆ ಕೊಂಡು ಘೋರವೀ
ರಂ ತಪಮೆಂಬಿನಂ ನೆಗೞ್ದು ತತ್ಸಚಿವೋತ್ತಮನೊಳ್ಳಿಕೆಯ್ದನಿ
ನ್ನಂತುಟು ಪೇೞ್ದು ಕೆಮ್ಮಗಿರೆ ಗಮ್ಮನೆ ಕಮ್ಮರಿ[೧]ಯೋಜನಾಗನೇ ೬೧

ವ|| ಅಂತು ಮಹಾಬಳಖಚರೇಂದ್ರಂ ಪ್ರಾಯೋಪಗಮನವಿಧಿಯಿಂದಮಾತ್ಮೀಯ ಶರೀರಭಾರಮನಿೞಿಪಿ ತತ್ಸಮಯದೊಳನಲ್ಪಸುಖನಿವಾಸಮೆನಿಸಿದೀಶಾನಕಲ್ಪದೊಳಪ್ರತಿಹತ ಚಂಚತ್ಪಂಚರತ್ನಪ್ರಭಾಪ್ರಸರಪ್ರಕಟಿತಸಂಧ್ಯಾಭ್ರವಿಭ್ರಮಭ್ರಾಜಿಯಪ್ಪ ದಿವ್ಯತಳ್ಪತಳದ ಪೊರೆಯೊಳಗೆ ತೊಳತೊಳತೊಳಗಿ ಪೊಱಮಡುವೆಳನೇಸಱ[೨]ಬಳಗದ ಬೆಳಗನೊಳಕೊಂಡು,

ಹರಡಿಕೊಂಡು ಎಳಮಾವಿನಗಿಡವನ್ನು ಸುರುಟಿಹೋಗುವಂತೆ ಮಾಡಿತೋ ಎಂಬ ಶಂಕೆಯಿಂದ ಮೃಗಗಳು ಆತನ ದೇಹವನ್ನು ಬಂದು ನೋಡಿದವು. ವ|| ಹೀಗೆ ತಪಸ್ಸನ್ನೆಸಗಿ ೬೦. ಮುನ್ನಿನ ಸೊಗಸಾದ ಆಕೃತಿಗಿಂತ ಇದು ಚೆಲ್ವಾದುದು. ಇದು ಜಿನೇಂದ್ರನನ್ನು ನೆನೆಯುತ್ತಿರುವ ಮನ, ರೆಪ್ಪೆಮುಚ್ಚಿಕೊಂಡು ಧ್ಯಾನಿಸುತ್ತಿರುವ ಕಣ್ಣು, ಆತ್ಮಚಿಂತನೆಯಲ್ಲಿ ತೊಡಗಿದ ಬಗೆ, ಕ್ರಮತಪ್ಪದೆ ಪಂಚಪದಗಳನ್ನೋದುತ್ತಿರುವ ನಾಲಗೆ, ಅದೆಷ್ಟು ಚೆನ್ನಾಗಿ ಮಹಾಬಲನು ಸಮಾಧಿವಿಧಿಯನ್ನಪ್ಪಿ ತೋರಿದನೊ! ೬೧. ಹೀಗೆ ಸಚಿವೋತ್ತಮನಾದ ಸ್ವಯಂಬುದ್ಧನು ರಾಜನಿಗೆ ನಿರ್ದಿಷ್ಟವಾದ ಮಾರ್ಗದಲ್ಲಿ ನಡೆಯುವಂತೆ ನುಡಿದನು, ತಾನೂ ಶೀಘ್ರವಾಗಿ "ತಪಸ್ಸು ಘೋರವೀರವಾದುದು" ಎಂಬಂತೆ ಉಗ್ರವಾದ ತಪವನ್ನು ಕೈಕೊಂಡನು. ಅವನು ಹೀಗೆ ತಾನು ಮಾತ್ರ ಕೆಮ್ಮಗಿದ್ದರೆ ತಪ್ಪದೆ ಕಮ್ಮರಿಯೋಜನಾಗುತ್ತಿದ್ದನು! (ಕಂಮಾರನ ಗುರು). ವ|| ಹೀಗೆ ವಿದ್ಯಾಧರೇಶನಾದ ಮಹಾಬಲನು ಪ್ರಾಯೋಪವೇಶ ಮಾಡಿ ತನ್ನ ಶರೀರತ್ಯಾಗವನ್ನು ಮಾಡಿದನು. ಆಗ ಅತಿಸುಖನಿವಾಸಸ್ಥಾನವಾದ ಈಶಾನಕಲ್ಪದಲ್ಲಿ ಪಂಚರತ್ನಪ್ರಭೆಗಳ ಪ್ರಸರಣದಿಂದ ಸಂಧ್ಯಾಮೇಘದ ವಿಲಾಸವನ್ನುಂಟು ಮಾಡುತ್ತಿರುವ ದಿವ್ಯತಲ್ಪದ (ದೇವತೆಗಳು ಹುಟ್ಟುವ ಉಪಪಾದವೆಂಬ ಶಯ್ಯೆಯ) ಪ್ರಕಾಶದಿಂದಿರುವ ಬಾಲಸೂರ್ಯರ ಬಳಗದ ಬೆಳಕನ್ನೊಳಕೊಂಡು ಜನ್ಮಾಂತರದಲ್ಲಿ

---

೧ ಗ.-ಪೇಳ್ದು ಕೆಮ್ಮನಿರೆ ತಪ್ಪದೆ ಕಮ್ಮರಿ ೨ ಕ.-ಪೊರೆಯೊಳಗೆ ಕೆಮ್ಮುಗಿಲತೆಗಳಿಗೆಯ ಪೊರೆಯೊಳ್ ಪೊರೆಯೊರೆಯಲ್ಲದೆ ತಳತಳನೆ ತೊಳಗಿ ಪೊಳೆದು ಪೊಱಮಡುವ ಎಳನೇಸಱ

ಮಿಱುಗುವ ರತ್ನಭಿತ್ತಿಗಳ ದೀಧಿತಿಯಂ ನಿಜದೇಹದೀಪ್ತಿಗಳ್
ಮಱಿಸೆ ಸಮಸ್ತದೀಪ್ತಿಪರಮಾಣುಗಳಂ ಗೆಡೆಗೊಂಡು ಜೌವನಂ
ನೆಱೆದಿರೆ ದಿವ್ಯಮೂರ್ತಿಸಹಜಾಂಬರಭೂಷಣದಿವ್ಯಮಾಲೆಗಳ್
ನೆಱೆದೊಡವುಟ್ಟೆ ಮುನ್ನೆ ಮಱಿಲುಂದಿದನೆಚ್ಚಱುವಂತೆ ಪುಟ್ಟಿದಂ ೬೨

ವ॥ ಅಂತು ಪುಟ್ಟಿದಾಗಳ್,

ತೆಱೆಯದೆ ಮುನ್ನ ಕೆತ್ತ ಪಡಿಗಳ್ ನವಸೌರಭಮುಣ್ಮೆ ಮೊಕ್ಕಳಂ
ತೆಱೆದುವು ರತ್ನತೋರಣಗಣಂಗಳುದಗ್ರವಿಮಾನರಾಜಿಯೊಳ್
ನೆಱೆದುವು ಜೈನರೊಳ್ಗುಡಿಯ ದಾಂಗುಡಿಗಳ್ ನಲಿದಾಡುವಂತೆ ಸು
ತ್ತಿಱಿದುವು ಭೋಂಕೆನಾತನ ಪುರಾತನಪುಣ್ಯಫಲಪ್ರಭಾವದಿಂ ೬೩

ವ॥ ಅದಱ ತದನಂತರದೊಳ್,

ನೆಗೞ್ದುವು ಪಟುಪಟಹಮೃದಂ
ಗಗಭೀರಾರಾವಮಮರನಾಟಕಶಾಲಾ
ದಿಗಳೊಳತಿ ಮಧುರಮೊರ್ಮೊದ
ಲೊಗೆದುದು ಜಯಜೀಯನಂದವರ್ಧಸ್ವರವಂ[೧] ೬೪

ಸುರತರುನಂದನಂಗಳಿನಲರ್ಮೞೆ ಬಂದೆಱಗಿತ್ತು ದೇವಸೌಂ
ದರಿಯರ ದಿವ್ಯಮಪ್ಪ ಪೊಸಗಂಪಿನಲಂಪನವುಂಕಿ ಕೊಂಡವ
ಳ್ದಿರ ಮಿಳಿರ್ವೊಳ್ಗುರುಳ್ಗಳನೆ ಲೀಲೆಯಿನಾಡಿಸಿ ಪುಷ್ಪಕೇಸರಂ
ತೆರಳೆ ತೆರಳ್ಚಿ ಬೀಸಿದುದು ತೆಂಬೆಲರೆಂಬೆಲರಪ್ಪಿಕೊಳ್ವವೋಲ್ ೬೫

ಲಲಿತಾಂಗನಾಗಿ ಹುಟ್ಟಿದನು. ೬೨. ಮಿರಮಿರನೆ ಮಿರುಗುವ ರತ್ನಭಿತ್ತಿಗಳ ಕಾಂತಿಗಳನ್ನು ಅವನ (ಲಲಿತಾಂಗನ) ದೇಹಕಾಂತಿಗಳು ಮೀರಿಸಿದ್ದುವು. ಕಾಂತಿಪೂರ್ಣವಾದ ಪರಮಾಣುಗಳಿಂದ ಕೂಡಿಕೊಂಡಿತ್ತು ಅವನ ದೇಹ. ಸಹಜವಾದ ಆಭರಣ, ದಿವ್ಯಮಾಲೆಗಳೊಡನೆ ಅವನು ದಿವ್ಯದೇಹಿಯಾಗಿ ಮೂಡಿಕೊಂಡನು. ಗಾಢನಿದ್ದೆಯಿಂದ ಎಚ್ಚೆತ್ತವನಂತೆ ಹುಟ್ಟಿದನು. ವ॥ ಹಾಗೆ ಹುಟ್ಟಿದಾಗ ೬೩. ಮೊದಲು ಮುಚ್ಚಿದ್ದ ಕದಗಳು (ದ್ವಾರಬಂಧ) ಪೂರ್ಣವಾಗಿ ತೆರೆದುಕೊಂಡುವು. ಸುಗಂಧವು ಬರತೊಡಗಿತು. ಪ್ರಾಸಾದಗಳಲ್ಲಿ ರತ್ನತೋರಣಗಳು ತೂಗತೊಡಗಿದುವು. ಚೀನಾಂಬರದ ಪತಾಕೆಗಳಂಚುಗಳು ದಾಂಗುಡಿಗಳಂತೆ ಹಾರಾಡಿದವು. ಇವೆಲ್ಲ ಅವನ ಪೂರ್ವಪುಣ್ಯದ ಫಲದ ಪ್ರಭಾವದಿಂದಾದುವು. ವ॥ ಅದಾದ ಮೇಲೆ ೬೪. ದೇವತೆಗಳ ನಾಟಕಶಾಲೆಗಳಲ್ಲಿ ಡೋಲು, ಮದ್ದಲೆ ಮುಂತಾದ ವಾದ್ಯಗಳು ಅತ್ಯಂತ ಮಧುರವಾಗಿ ಮೊಳಗಿದುವು. ಒಮ್ಮೆ "ಜಯ, ಜೀಯ, ನಂದ, ವರ್ಧಸ್ವ" ಮುಂತಾದ ಶಬ್ದಗಳು ಕೇಳಿಬಂದುವು. ೬೫. ದೇವವೃಕ್ಷಗಳಿರುವ ನಂದನವನಗಳಿಂದ ಹೂವಿನ ಮಳೆ ಸುರಿಯಿತು. ತಂಗಾಳಿಯು ದೇವಸ್ತ್ರೀಯರ ದಿವ್ಯವಾದ ಹೊಸಗಂಪಿನ ಸೊಂಪನ್ನು ಕೊಂಡು, ಅವರ ಮಿಳಿರುವ

೧ ಖ.-ವರ್ಧನರವಮುಂ

ವ॥ ಮತ್ತಮಮರಲೋಕಾನೇಕವಾದ್ಯಂಗಳ ಲಯಂಗಳೊಳಂ ಪೂತ ಜಂಗಮಲತೆಗಳಂತೆಱಗಿ ತನ್ನ ಮುಂದೆ ಬಂದಾಡುವಚ್ಚರಸಿಯರುಮಂ ಅನೇಕ ಭಂಗಿಭೃಂಗಾರಮಣಿದರ್ಪಣಕನಕಕಳಶ ಚಾರುಚಾಮರಾತಪತ್ರಪವಿತ್ರಿತಕರಪಲ್ಲವೆಯರಾಗಿ ಸೇಸಿಕ್ಕಲೆಂದು ಬಂದಮರಪುರಂಧ್ರಿಯರುಮಂ ಆಳೋಕನಮಾತ್ರದೊಳೆ ಮನಮನುಗಿಬಗಿಮಾಡಿ ಮಸೆದ ಮದನನಲಗಿನಲರ್ಗಳಂತೆ ಕಣ್ಗೊಳಿಸಿ ಬಳಸಿ ಬಂದಿರ್ದ[೧] ಪಾಟದಾಟದ ಮುದ್ದಿನ ಬರ್ದಿನ ಪರಿವಾರದೇವಿಯರುಮಂ ಅತಿಲಲಿತ ಭೂಷಾಭ್ಯಸನ ಚತುರಭಾಷಾವಿಶೇಷಕುಶಲೆಯರಪ್ಪ ದೇವವಿಳಾಸಿನಿಯರುಮಂ ಭೋಂಕನೆ ಕಂಡು,

ಆನಾಗಿರ್ದ ವಿಮಾನಮಾವುದಿವರಾರ್ಗೀಲೋಕಮೇನೆಂಬುದಾ
ನೇನೋಂತಿಲ್ಲಿಗೆ ವಂದೆನೀ ವಿಭವಮಿಂತಾರಿಂದಮಾಯ್ತೆಂಬುದಂ
ತಾನಾಗಳ್ ಬಗೆವನ್ನೆಗಂ ಮನದೊಳಾದೇವಂ ಭವಪ್ರತ್ಯಯ
ಜ್ಞಾನಂ ತೊಟ್ಟನೆ ಪುಟ್ಟೆ ಪೂರ್ವಭವದೊಳ್ತೊಟ್ಟೊಂದು ವೃತ್ತಾಂತಮಂ ೬೬

ವ॥ ನೆಱೆಯಱೆದು,

ಇದು ದೇವೇಂದ್ರನಿವಾಸಮೆನ್ನ ನೆಲೆಯುಂ ಶ್ರೀ ಶ್ರೀಪ್ರಭಂ ಮುಂದೆ ನಿಂ
ದಿದು ದೇವವ್ರಜಮಿಂತಿದೆಲ್ಲಮಮರೀಸಂದೋಹಮಾಂ ದೇವನ
ಪ್ಪುದು ಮುಂ ಖೇಚರರಾಜನಾದ ಭವದೊಳ್ ಸಯ್ಪಿಂ ಸ್ವಯಂಬುದ್ಧನೆಂ
ದುದನಾನೆಂದೆನದಲ್ಲದೆನಗಮಿೂಲೋಕಕ್ಕಮೇಂ ಸಮ್ಮದಂ ೬೭

ಕುರುಳುಗಳನ್ನಾಡಿಸಿ ಹೂವಿನ ಕೇಸರಗಳನ್ನು ತೆರಳಿಸಿ ನರ್ತಕನು* ಅಪ್ಪಿಕೊಳ್ಳುವಂತೆ ಬೀಸಿತು. ವ॥ ಮತ್ತು ದೇವಲೋಕದ ಅನೇಕ ವಾದ್ಯಗಳ ತಾಳಗಳ ನಡುವೆ ಚಲಿಸುತ್ತಿರುವ ಹಣ್ಣುಬಿಟ್ಟ ಬಳ್ಳಿಗಳೋ ಎಂಬಂತೆ ಬಾಗಿರುವ ತನ್ನ ಮುಂದೆ ಬಂದಾಡುವ ಅಪ್ಸರ ಸ್ತ್ರೀಯರನ್ನೂ ಅನೇಕ ಭಂಗಿಗಳಿಂದ ಗಿಂಡಿ, ಮಣಿಮಯವಾದ ಕನ್ನಡಿ, ಚಿನ್ನದ ಕಲಶ, ಸುಂದರವಾದ ಚಾಮರ, ಛತ್ರಿ ಮುಂತಾದ ಪವಿತ್ರವಸ್ತುಗಳನ್ನು ಕೈಗಳಲ್ಲಿ ಹಿಡಿದು ಮಂಗಲಾಕ್ಷತೆಗಳನ್ನು ಹಾಕಲೆಂದು ಬಂದ ದೇವತಾಸ್ತ್ರೀಯರನ್ನೂ ದರ್ಶನಮಾತ್ರದಿಂದಲೇ ಮನಸ್ಸನ್ನು ಅಸ್ತವ್ಯಸ್ತಗೊಳಿಸುವ ಮನ್ಮಥನ ಬಾಣಗಳಂತೆ ಕಣ್ಗೊಳಿಸಿ ಬಂದಿದ್ದ ಮುದ್ದಿನ ಜಾಣ್ಮೆಯ ಪರಿವಾರದೇವಿಯರನ್ನೂ ಸುಂದರವೇಷದಿಂದ ಕೂಡಿ ಚತುರಭಾಷಾಭೂಷಿತೆ ಯರಾದ ದೇವವಿಲಾಸಿನಿಯರನ್ನೂ ಲಲಿತಾಂಗನು ಕಂಡನು. ೬೬. "ನಾನು ಯಾರು? ಇದ್ದ ವಿಮಾನವಾವುದು? ಇವರಾರು? ಈ ಲೋಕವಾವುದು? ನೋಂತು ನಾನಿಲ್ಲಿಗೆ ಬಂದೆನೆ? ಈ ಐಶ್ವರ್ಯವು ಯಾರಿಂದ ಬಂದಿತು?" ಎಂದು ಮುಂತಾಗಿ ಅವನು ಆಲೋಚಿಸುತ್ತಿರಲು ಜನ್ಮಾಂತರಜ್ಞಾನ ಹುಟ್ಟಿತು. ಹಿಂದಿನ ಭವದಲ್ಲಿ ನಡೆದ ವೃತ್ತಾಂತವನ್ನು ಚೆನ್ನಾಗಿ ಅರಿತು, ೬೭. "ಇದು ದೇವೇಂದ್ರನ ನಿವಾಸ. ಇದು ನನ್ನ ನೆಲೆಯಾದ ಶ್ರೀಪ್ರಭವಿಮಾನ. ಈ ಮುಂದೆ ನಿಂತಿರುವುದು ದೇವತೆಗಳ ಗುಂಪು. ಇದು ದೇವವನಿತೆಯರ ಸಮೂಹ. ನಾನು ದೇವತೆಯಾಗಿರುವೆನು. ಖೇಚರರಾಜನಾದ ಜನ್ಮದಲ್ಲಿ ಸ್ವಯಂಬುದ್ಧನು

೧ ಗ.-ಮದನನ ಪೊಳೆವಲರ್ಗಣೆಗಳಂತೆ ಪೊಳೆದೆಳಸಿ ಬಂದಿರ್ದ.

* ಎಲರ್ = ಗಾಳಿ; ನರ್ತಕ

ವ॥ ಎಂದು ಬಗೆವನ್ನೆಗಮೆತ್ತಿದ ನಮೇರುಮಂದಾರಪಾರಿಜಾತದ ಬಣ್ಣಾಸಿಗಂಗಳುಂ ಮುತ್ತಿನ ಮಾಣಿಕದ ಪಡಲಿಗೆಗಳೊಳ್ ಪಸರಿಸಿದ ವಿಚಿತ್ರವಸ್ತ್ರಾಭರಣಂಗಳುಂ ಚೆಂಬೊನ್ನ ತಳಿಗೆಗಳೊಳ್ ತೆಕ್ಕನೆ ತೀವಿದ ಬಿಡುಮುತ್ತಿನ ಸೇಸೆಗಳುಂ ಬೆರಸು ಮಹತ್ತರದೇವಿಯರ್ ಬಂದು ಪೊಡೆವಟ್ಟು

ಇದು ನಿಜಪೂರ್ವಪುಣ್ಯಫಲದಿಂ ದೊರೆಕೊಂಡ ವಿಮಾನಮೀ ವಿಮಾ
ನದೊಳನುಬಂಧಿಸಿರ್ದುದಿದು ದೇವನಿಕಾಯಮಿದೀ ತ್ವದಂಘ್ರಿಪ
ದ್ಮದ ಬಳಸಿರ್ಪ ದಿವ್ಯಗಣಿಕಾಜನಮಿಂತಿದನಾಳ್ದು ದೇವ ರಾ
ಗದೊಳಿರು ನೀನುಮಿಲ್ಲಿ ಲಲಿತಾಂಗತೆಯಿಂ ಲಲಿತಾಂಗದೇವನೈ ೬೮

ಇದು ಸುಖದೊಂದು ತುತ್ತತುದಿ ರಾಗದ ಮೊತ್ತಮೊದಲ್ ನಿರಂತರಾ
ಭ್ಯುದಯದ ಸಾಗರಂ ವಿಭವದಾಗರಮೀ ದಿವಿಜೇಂದ್ರರುಂದ್ರಲೋ
ಕದೊಳಮಿದೊಂದೆ ಸಾರಮಿದು ಜೈನಪದಾಬ್ಜವರಪ್ರಸಾದದಾ
ದುದು ನಿನಗಪ್ಪ ಕಾರಣದಿನೀಗಳೆ ಪೂಜಿಸು ಚೈತ್ಯರಾಜಿಯಂ ೬೯

ವ॥ ಎಂಬುದುಮುಮರಲೋಕದರ್ಶನಾನಂತರೋತ್ಪನ್ನರಾಗಸಾಗರೋದಾರಪೂರ ಪರಿಪ್ಲಾವಿತಾಂತರಂಗನನುಸಂಗತಾತ್ಮಂಗನುತ್ತುಂಗಮಣಿವಿಭೂಷಣಮರೀಚಿಮೇಚಕಿತ ದೇವಾಂಗನಾನಿಕಾಯಸಮೇತನೀಶಾನಕಲ್ಪದ ಕೃತ್ರಿಮಚೈತ್ಯಾಲಯಂಗಳಂ ಅರ್ಚಿಸಿ[1] ತಪ್ತತಪನೀಯಚ್ಛಾಯನುಂ ಸಪ್ತಹಸ್ತೋಚ್ಛ್ರಯನುಂ[2] ನಿದ್ರಾಲಸ್ಯಾಕ್ಷಿನಿಮೇಷಜರಾಶೋಕವಿಷಾದವಿರಹಿತನುಂ ಸಹಜಸುರಭಿಗಂಧ

ಹೇಳಿದಂತೆ ಪುಣ್ಯವಶದಿಂದ (ಜಿನಮಂತ್ರವನ್ನು) ಹೇಳಿದ್ದೇನೆ. ಹಾಗಿಲ್ಲದಿದ್ದರೆ ನನಗೂ ಈ ಲೋಕಕ್ಕೂ ಏನು ಸಂಬಂಧ?" ವ॥ ಎಂದು ಆಲೋಚಿಸುತ್ತಿರಲು, ನಮೇರು ಪಾರಿಜಾತಾದಿ ಬಣ್ಣಬಣ್ಣದ ಹೂವಿನ ಕುಚ್ಚುಗಳನ್ನೂ ಮುತ್ತಿನ ಮತ್ತು ಮಾಣಿಕ್ಯದ ತಟ್ಟೆಗಳಲ್ಲಿಟ್ಟು ವಿಚಿತ್ರ ವಸ್ತ್ರಾಭರಣಗಳನ್ನೂ ಚಿನ್ನದ ತಟ್ಟೆಗಳಲ್ಲಿಟ್ಟ ಬಿಡುಮುತ್ತಿನ ಮಂಗಳಾಕ್ಷತೆಗಳನ್ನೂ ಬೆರೆಸಿಕೊಂಡು ಮಹತ್ತರದೇವಿಯರು ಬಂದು ನಮಸ್ಕರಿಸಿದರು. ೬೮. "ಇದು ನಿನ್ನ ಪೂರ್ವಪುಣ್ಯದಿಂದ ದೊರೆತ ವಿಮಾನ. ಇಲ್ಲಿ ನೆರೆದಿದೆ ದೇವನಿಕಾಯ. ಈ ಗಣಿಕೆಯರು ನಿನ್ನ ಪಾದಸೇವೆಗಾಗಿಯೇ ನೆರೆದಿರುವರು. ಇವರೆಲ್ಲರನ್ನೂ ನೀನು ಅನುರಾಗದಿಂದ ಆಳಿಕೊಂಡು, ಲಲಿತಾಂಗಗಳಿರುವುದರಿಂದ ಲಲಿತಾಂಗನೆಂದು ಹೆಸರಾಂತು ಬಾಳು. ೬೯. ಇದು ಸುಖದ ಕೊನೆಯ ಹಂತ. ಇದು ಅನುರಾಗದ ಮೊದಲು. ಇದು ಅಭ್ಯುದಯದ ಕಡಲು. ಇದು ಐಶ್ವರ್ಯದ ಆಗರ. ಇದು ದಿವಿಜೇಂದ್ರಲೋಕದ ಸಾರಸರ್ವಸ್ವ. ಜಿನಪ್ರಸಾದವುಂಟಾಗಿರುವುದರಿಂದ ಎಲ್ಲ ಚೈತ್ಯಾಲಯಗಳನ್ನೂ ಭಕ್ತಿಯಿಂದೆರಗು" ಎಂದು ಹೇಳಿದರು. ವ॥ ಆಗ ಲಲಿತಾಂಗನು ದೇವಲೋಕವನ್ನು ಸಂದರ್ಶಿಸಿ ಅನುರಾಗದ ಕಡಲಹೊನಲಿನಿಂದ ಆರ್ದ್ರಹೃದಯವುಳ್ಳವನಾಗಿ, ತಮ್ಮ ದೇಹವನ್ನಲಂಕರಿಸಿರುವ ಮಣಿಮಯಾಭರಣಗಳ ಕಾಂತಿಗಳಿಂದ ವ್ಯಾಪ್ತರಾದ ದೇವಸ್ತ್ರೀಯರಿಂದ ಕೂಡಿದವನಾಗಿ ಈಶಾನಕಲ್ಪದ ಚೈತ್ಯಾಲಯಗಳನ್ನು ಭಕ್ತಿಯಿಂದ

---

೧ ಖ.-ಬಂದಿಸಿ. ೨ ಗ.-ಹಸೋಚ್ಛ್ರಿತಶರೀರನುಂ.

ಬಂಧುರನುಂ ಏಕಪಾರಾವಾರೋಪಮಾಯುಷ್ಯನುಂ ವರ್ಷಸಹಸ್ರಸಂಕಲ್ಪ ಕಲ್ಪಿತಾಮೃತಾಹಾರನುಂ ಅರ್ಧಮಾಸನಿರ್ಯತ್ಸುರಭಿನಿಶ್ವಾಸನುಂ ಕಾಯಪ್ರವೀಚಾರನುಂ* ಅಪರಿಮ್ಲಾನಸುರತರುಪ್ರಸೂನ ಶೇಖರನುಮಾಗಿ ನಾಲ್ಸಾಸಿರ್ವರ್ ಮನೋನಯನವಲ್ಲಭೆಯರೊಳಂ ಸ್ವಯಂಪ್ರಭೆ, ಕನಕಲತೆ, ಕನಕಮಾಳೆ, ವಿದ್ಯುಲ್ಲತೆಯೆಂಬ ನಾಲ್ವರ್ ಮಹಾದೇವಿಯರೊಳಂ,

ಮಣಿಮಯದೀಪ್ತಿಯೊಳ್ ಪುದಿದು ಪಜ್ಜಳಿಪುಜ್ಜ್ವಳಕಾಂತಿ ಗಾಡಿಯೊಳ್
ಪೆಣೆದು ವಿಳಾಸದೊಳ್ ತೊಡರ್ದು ಕೆಯ್ತಮಲಂಪನೆ ಮಾಡೆ ನೋಡಿ ಕಣ್
ತಣಿವಿನಮಪ್ಪಿ ತೋಳ್ ತಣಿವಿನಂ ಸುರತಾಮೃತಸೇವೆಯೊಳ್ ಮನಂ
ತಣಿವಿನಮಾದಲಂಪು ಮಿಗೆ ಭೋಗಿಸಿದಂ ಸುರಲೋಕಸೌಖ್ಯಮಂ ೭೦

ಪೊಳೆವೆಳಮಿಂಚಿನಂತೆಸೆದು ಗಾಡಿಯೊಳೊಂದಿದ ತನ್ನ ರೂಪು ಕ
ಣ್ಗೊಳೆ ಸವಿಯಂ ಪುದುಂಗೊಳಿಪ ಚಿತ್ರರತಂಗಳ ಭಂಗಿಗಳ್ ಮನಂ
ಗೊಳೆ ನಗೆ ಸಬ್ಬವಂ ಬಿನದಮೆಂಬಿವಱಿಂ ಲಲಿತಾಂಗನಂ ಮನಂ
ಗೊಳಿಸುವರಿಚ್ಛೆಕಾರ್ತಿನದ ಲಲ್ಲೆಯ ಸಗ್ಗದ ದೇಸೆ[೧]ಕಾರ್ತಿಯರ್ ೭೧

ಅರ್ಚಿಸಿದನು. ಕಾಯಿಸಿದ ಚಿನ್ನದಂತೆ ಕಾಂತಿಯುಳ್ಳವನಾಗಿ, ಏಳು ಹಸ್ತಗಳಷ್ಟು ಎತ್ತರವಿರುವ ದೇಹವುಳ್ಳವನಾಗಿ, ನಿದ್ದೆ, ಅಲಸಿಕೆ, ರೆಪ್ಪೆಹೊಡೆಯುವುದು, ಮುಪ್ಪು, ಶೋಕ, ವಿಷಾದಗಳಿಂದ ವಿರಹಿತನಾದ, ಸುವಾಸನಾಮಯ ಗಂಧಯುಕ್ತನಾಗಿ ಒಂದು ಸಾಗರದಷ್ಟು ಕಾಲ ಬದುಕಿರಲು ಆಯುಷ್ಯವನ್ನು ಪಡೆದವನಾಗಿ, ಒಂದು ಸಹಸ್ರವರ್ಷಗಳಿಗೊಮ್ಮೆ ಮಾನಸಸಂಕಲ್ಪದಿಂದ ಅಮೃತಾನ್ನವನ್ನುಣ್ಣತಕ್ಕವನಾಗಿ, ಅರ್ಧತಿಂಗಳಿಗೊಮ್ಮೆ ಹೊರಬರುತ್ತಿರುವ ಸುವಾಸನಾಮಯವಾದ ನಿಶ್ವಾಸವುಳ್ಳವನಾಗಿ, ವಿಷಯಸುಖವನ್ನು ದೇಹದಿಂದ ಅನುಭವಿಸುವವನಾಗಿ, ಕಲ್ಪವೃಕ್ಷದ ಬಾಡದ ಹೂಗಳನ್ನು ಮುಡಿದವನಾಗಿ, ನಾಲ್ಕುಸಾವಿರ ಮನದನ್ನೆಯರಲ್ಲಿಯೂ ಸ್ವಯಂಪ್ರಭೆ, ಕನಕಮಾಲೆ, ಕನಕಲತೆ ಮತ್ತು ವಿದ್ಯುಲ್ಲತೆಯರೆಂಬ ನಾಲ್ಕು ಮಹಾದೇವಿಯರಲ್ಲಿಯೂ ಅನುರಕ್ತನಾಗಿದ್ದನು. ೭೦. ಆತನು ಮಣಿಮಯವಾದ ದೀಪ್ತಿಗಳಿಂದ ವ್ಯಾಪ್ತವಾಗಿ ಪ್ರಜ್ವಲಿಸುವ ಉಜ್ವಲಕಾಂತಿಯ ಬೆಡಗಿನಲ್ಲಿ ಸೇರಿದನು. ವಿಲಾಸದಲ್ಲಿ ಕೂಡಿಕೊಂಡನು. ಕಾರ್ಯವು ಸೊಗಸುಗೊಳಿಸಿತು. ಕಣ್ ತಣಿವಷ್ಟು ನೋಡಿದನು. ಸುರತಾಮೃತದ ಸೇವೆಯಲ್ಲಿ ತೋಳುಗಳು ತಣಿವಷ್ಟು ಅಪ್ಪಿಕೊಂಡನು. ಮನ ತಣಿವಷ್ಟು ಸುರಲೋಕಸೌಖ್ಯವನ್ನುಂಡನು. ೭೧. ಮಿಂಚಿನಂತೆ ಎಸೆದು ಸೌಂದರ್ಯದಲ್ಲಡಕಗೊಂಡ ಅವನ ರೂಪು ಕಂಗೊಳಿಸಿತು. ಸವಿಗೊಡುವ ಚಿತ್ರರತ ಭಂಗಿಗಳು ಸಂತಸಗೊಟ್ಟುವು. ನಗೆ, ಹಾಸ್ಯ ಮತ್ತು ವಿನೋದಗಳಿಂದ ರತ್ಯಭಿಲಾಷಯುಕ್ತರೂ, ಲಲ್ಲೆಗಾರರೂ ಆದ ಸ್ವರ್ಗದ ಬೆಡಗುಗಾತಿಯರು ಲಲಿತಾಂಗನನ್ನು ಸಂತೋಷಪಡಿಸಿದರು.

---

೧ ಗ.-ಗಾಡಿ * ಈಶಾನಕಲ್ಪದವರೆಗೆ ಇರುವ ದೇವತೆಗಳಿಗೆ ಕಾಯಪ್ರವೀಚಾರ=ದೇಹ ಸಂಬಂಧದಿಂದ ಮೈಥುನ. ಅಲ್ಲಿಂದ ಮೇಲ್ಪಟ್ಟದವರಿಗ ಸ್ಪರ್ಶಾದಿಗಳಿಂದ. ಕಲ್ಪಾತೀತವಾಸಿಗಳಿಗೆ ಮೈಥುನವೇ ಇಲ್ಲ. (ತ.ಸೂ. ೪-೭, ೮, ೯)

ಕಟೆಯೆ ವಿಳಾಸಮಂ ಪಡೆದ ರಾಗದ ಭೋಗದಲಂಪಿನಿಂಪು ಪೊಂ
ಪುಟೆಯೆನೆ ತದ್ವಿಮಾನದೊಳೆ ಪುಟ್ಟಿದ ತನ್ನಯ ದೇವಿಯರ್ ಪಲರ್
ಕಟೆವಿನಮಾಯುರಬ್ಧಿಯೊಳನುಕ್ರಮದಿಂ ಪಳಿತೋಪಮಂಗಳ
ಯ್ದುಟೆವಿನಮುಂಡನಾ ತ್ರಿದಶಲೋಕಸುಖಾಮೃತಮಂ ಸುರೋತ್ತಮಂ ೭೨

ವ॥ ಅನ್ನೆಗಂ ಸ್ವಯಂಪ್ರಭಾಭಿಧಾನೆಯರ್ ಪಲಂಬರುಮತಿಕ್ರಾಂತೆಯರಾಗಿ ತತ್ಸಂತಾನದೊಳ್ ಶ್ರೀಪ್ರಭವಿಮಾನದೊಳುಪಪಾದತಳ್ಪತಳದ ಪೊರೆಯೊಳಂ ಪೊರೆಯೊರೆಯಿಲ್ಲದ ಮದನರಾಗರಸದೊಳ್ ಪೊರೆದು,

ಅಭಿನವಪಾರಿಜಾತಕುಸುಮಾಸವಮೊರ್ಮೊದಲುಣ್ಮೆ ದೇವದುಂ
ದುಭಿ ನಭದೊಳ್ ಪೊದಟ್ದೆಸೆಯೆ ಕಣ್ಗೆಸೆದಿರ್ಪ ನಿಜಾಂಗಸಂಗತ
ಪ್ರಭೆ ಸುರಲೋಕಮಂ ಬೆಳಗೆ ವಿಸ್ಮಯಮಪ್ಪಿನಮಾಗಳಾ ಸ್ವಯಂ
ಪ್ರಭೆ ಲಲಿತಾಂಗನಳ್ಕೆರ್ದೆಗೆ ತೊಟ್ಟನೆ ಬೇಂಟಮೆ ಪುಟ್ಟೆ ಪುಟ್ಟಿದಳ್ ೭೩

ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾ
ಟಿಮ್ಮೊದಲದು ಚಿತ್ತಜಂಗೆ ಕುಲದೈವಮದಂಗಜಚಕ್ರವರ್ತಿಗೆ
ತ್ತಿದ ಪೊಸವಟ್ಟಮಂತದು[೧] ಮನೋಜನ ಕೈಪಿಡಿಯೆಂದು ಮಾಣ್ದೆನಾ
ಸುದತಿಯ ರೂಪನಿಂ ಪೆಱತನೆಂದೊಡೆ ಚಿಃ ಕರಮೆಗ್ಗನಾಗೆನೇ ೭೪

೭೨. ವಿಲಾಸವನ್ನಪ್ಪಿದ ರಾಗ, ಭೋಗಾನಂದಗಳ ಇಂಪೂ ರೋಮಾಂಚಗಳೂ ಪರಿಪಕ್ವಾವಸ್ಥೆಯಲ್ಲಿದ್ದುವು. ಆ ವಿಮಾನದಲ್ಲಿಯೇ ಜನಿಸಿದ್ದ ಕೆಲವು ದೇವಿಯರು ಗತಿಸಿದ್ದರು. ಸಾಗರಪರಿಮಿತ ಆಯುಸ್ಸಿನಲ್ಲಿ ಐದು ಪಲಿತಗಳು ಉಳಿದಿದ್ದುವು. ಹೀಗೆ ಆ ಸುರೋತ್ತಮನು ಸುರಲೋಕಸುಖಾಮೃತವನ್ನುಂಡನು. ವ॥ ಅಷ್ಟರಲ್ಲಿ ಸ್ವಯಂಪ್ರಭೆಯೆಂಬ ಹೆಸರಿನ ಅನೇಕ ವಲ್ಲಭೆಯರು[1] ಗತಿಸಿದರು. ಆ ಸಂತತಿಯಲ್ಲಿ ಶ್ರೀಪ್ರಭವಿಮಾನದಲ್ಲಿ ದೇವ ದೇವಿಯರುದ್ಭವಿಸುವ (ಉಪಪಾದ) ಹಾಸಿಗೆಯ ಪದರದಲ್ಲಿ ಅಸಮಾನವಾದ ಮದನರಾಗರಸದಿಂದ ಕೂಡಿ ೭೩. ಹೊಸತಾದ ಪಾರಿಜಾತ ಕುಸುಮದ ಆಸವವು ಮೊಟ್ಟಮೊದಲು ಹುಟ್ಟಿತು. ದೇವದುಂದುಭಿಗಳು ಆಕಾಶದಲ್ಲಿ ಮೊಳಗಿದುವು. ಕಣ್ಗೆಸೆವ ನಿಜಾಂಗಪ್ರಭೆಯು ಅಚ್ಚರಿಗೊಳಿಸುವಂತೆ ದೇವಲೋಕವನ್ನು ಬೆಳಗಿತು. ಆಗ ಸ್ವಯಂ ಪ್ರಭೆಯು ಲಲಿತಾಂಗನ ಮೃದುಹೃದಯದಲ್ಲಿ ಅನುರಾಗವನ್ನು ಹುಟ್ಟಿಸಲು ಮತ್ತೆ ಬೇರೊಂದು ಜನ್ಮ ತಳೆದಳು. ೭೪. ಆ ಸುಂದರಿಯ ರೂಪು ಸುಖದೊಂದು ಮುದ್ದೆ, ಪುಣ್ಯದೊಂದು ರಾಶಿ, ಮನ್ಮಥನ ಬಾಳು, ಮನ್ಮಥನ ಮೊದಲಿನ ಕುಲದೈವ, ಅದು ಅಂಗಜಚಕ್ರವರ್ತಿಗೆತ್ತಿದ ಹೊಸದಾದ ಪಟ್ಟವೆಂಬ ಒಡವೆ, ಅದು ಮನ್ಮಥನ ಕೈಪಿಡಿ-ಎಂದು ಹೇಳಿ ಸುಮ್ಮನಾಗುವೆನು.

---

೧ ಗ.-ವಟ್ಟಮಲ್ತದು.

1. ಸ್ವರ್ಗದಲ್ಲಿ ಪುರುಷರಿಗಿಂತ ಸ್ತ್ರೀಯರ ಆಯುಸ್ಸು ಕಡಿಮೆ. ಆದ್ದರಿಂದ ಲಲಿತಾಂಗದೇವನ ಕಾಲದಲ್ಲಿ ಅನೇಕ ಸ್ತ್ರೀಯರು ಗತಿಸಿಹೋದರು.

ನೆಗಲ್ದಮರಾಂಗನಾಜನದ ರೂಪುಗಳೆಲ್ಲಮದೀಕೆಯೊಂದು ದೇ
ಸೆಗೆ ನಿಮಿರ್ವೊಂದು ಪುರ್ವಿನ ನಯಕ್ಕಮದೊಂದುದಗುಂತಿಗೊಂದು ಭಂ[೧]
ಗಿಗೆ ನೆಗಟ್ಟೊಂದು ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆವಾರವೇ
ನೊಗಸುವಮೆಂದು[೨] ತಳ್ತಗಲನಾಕೆಯನಾ ಲಲಿತಾಂಗವಲ್ಲಭಂ ೭೫

ವ್ರತದಿಂದಂ ಪಡೆದಿಂದ್ರಲೋಕವಿಭವಂ ಮುನ್ನಾದ ದೇವಾಂಗನಾ
ತತಿಯಿಂದಂದಿನಿತಿಂಪನೀಯದು ಮನಕ್ಕಾಹ್ಲಾದಮಂ ಮಾಳ್ಪ ತ
ತ್ಸತಿಯಿಂ ನೆಟ್ಟನೆ ಸಾರಮಾದುದು ಗಡಂ ತತ್ಕಲ್ಪಜಂಗೆಂದೊಡಾ
ಜಿತವಿದ್ಯುತ್ಪ್ರಭೆಯಂ ಸ್ವಯಂಪ್ರಭೆಯನಿನ್ನೇವಣ್ಣಿ [ಪಂ ಬಣ್ಣಿಪನ್*] ೭೬

ಎಸೆದೆರ್ದೆಯೊಳ್ ಪಳಂಚುವ ಕಲಧ್ವನಿಯಿಂ ಪೊಸತೊಂದು ರಾಗಮಂ
ಪೊಸಯಿಸಿ ಸೋಂಕಿ ಸೋಂಕಿದೊಡೆ ನಿಂದಿರೆ ನಿಂದಧರೋತ್ತರಂಗಳೊಳ್
ಮಿಸುಪ ರಸಾಂತರಂಗಳಿನೊಡಂಬಡನಾಗದೆ ತನ್ನೊಳಿಂತು ಪೋ
ಲಿಸುವೊಡೆ ಪೋಲಿಸಲ್ಕೆ ದೊರೆ ವೀಣೆಯನಾ ಸುರತಪ್ರವೀಣೆಯಂ ೭೭

ಇನ್ನು ಬೇರೆ ಹೇಳಿದರೆ ಚಿ! ನಾನು ದೊಡ್ಡ ಹೆಡ್ಡನಾಗದಿರುವೆನೆ! ೭೫. ಪ್ರಖ್ಯಾತರಾದ ಸುರಾಂಗನೆಯರ ರೂಪುಗಳೆಲ್ಲವೂ ಈಕೆಯ ಸೌಂದರ್ಯಕ್ಕೂ ದೀರ್ಘವಾದ ಹುಬ್ಬುಗಳ ನಯಕ್ಕೂ ಅತಿಶಯಕ್ಕೂ ಭಂಗಿಗೂ ಮಾರ್ದವಯುಕ್ತವಾದ ತೊದಳ್ನುಡಿಗೂ ಸಮನಾಗವು. ನಿಪುಣಳಾದ ಆಕೆಯನ್ನು ಲಲಿತಾಂಗವಲ್ಲಭನು ಎಂದೂ ಅಗಲನು. ೭೬. ವ್ರತಾಚರಣೆಯಿಂದ ಲಬ್ಧವಾದ ಇಂದ್ರಲೋಕದ ಸಂಪತ್ತೂ ದೇವಾಂಗನೆಯರಿಂದ ಮುನ್ನಾದ ಸುಖವೂ ಆ ಸ್ವಯಂಪ್ರಭೆಯಿಂದಾದ ಸುಖಕ್ಕೆ ಎಣೆಯಿಲ್ಲ. ಮನಸ್ಸಿಗೆ ಸಂತಸವನ್ನೆರೆಯುವ ಆಕೆಯಿಂದ ಆ ಲಲಿತಾಂಗನಿಗೆ ಶಕ್ತಿಯೊದಗಿತು. ಅಂದಮೇಲೆ ವಿದ್ಯುತ್ಪ್ರಭೆಯನ್ನು ಸೌಂದರ್ಯದಿಂದ ಗೆದ್ದ ಸ್ವಯಂಪ್ರಭೆಯನ್ನು ವರ್ಣಿಸತಕ್ಕವನು ಏನೆಂದು ವರ್ಣಿಸಲು ಸಾಧ್ಯ? ೭೭. ಕಲಧ್ವನಿಯೊಡನೆ (ಲಲಿತಾಂಗನ) ಎದೆಗೆ ಒರಗಿ ರಂಜಿಸುತ್ತಿದ್ದ, ಹೊಸರಾಗವನ್ನು (ಅನುರಾಗವನ್ನು-ಪಂಚಮಸ್ವರಯುಕ್ತ ರಾಗವನ್ನು) ಉಂಟುಮಾಡುತ್ತ ಸೋಂಕಿಬಂದು (ಆತನ) ಮಡಿಲಲ್ಲಿ ಇರುತ್ತಿದ್ದ, ಏರಿಕೆ ಇಳಿಕೆಗಳಲ್ಲಿ[1] (ಆರೋಹಣ-ಅವರೋಹಣ ಕ್ರಮಗಳಲ್ಲಿ) ಇತರ (ಶೃಂಗಾರೇತರ) ರಸಗಳೊಡನೆ ಸೇರದೆ ಇರುತ್ತಿದ್ದ (ಇತರ ವಾದ್ಯಧ್ವನಿಗಳೊಡನೆ ಸಮರಸವಾಗದೆ ಇರುತ್ತಿದ್ದ)-ಸುರತಪ್ರವೀಣೆಯಾದ ಸ್ವಯಂಪ್ರಭೆಯನ್ನು ಹೋಲಿಸುವುದಾದರೆ ವೀಣೆಯೊಡನೆ ಹೋಲಿಸಬಹುದಾಗಿತ್ತು. ವ|| ಆಕೆಯೊಡನೆ ಒಂದೊಂದು ಸಲ ನಂದೀಶ್ವರದ್ವೀಪದ ಮಹಾಮಹಿಮೆಗೂ

---

೧ ಕ.-ನಯಕ್ಕಮವ್ವೊಂದುಗಿದುಣ್ಮುವೊಂದು ಭಂ. ೨ ಕ.-ನೊಗಸುಗವೆಮೊಲ್ದು; ಗ.-ನೊಗ ಸುಗುವಂತೆ. * 'ಪೆಂ ಬಣ್ಣಿಪೆಂ' ಎಂದೂ ಪಾಠವಿದೆ.

1 ಅಧರೋತ್ತರ = ಅಧರ-ಶೃಂಗಾರದ ಇಳಿಕೆ, ಉತ್ತರ-ಏರಿಕೆ ಅಥವಾ ಪುರುಷಾಯಿತ.

ವ|| ಮತ್ತಮಾಕವೆರಸೊರ್ಮೆ ನಂದೀಶ್ವರಮಹಾಮಹಿಮೆಗಂ* ಪಂಚಕಲ್ಯಾಣೋತ್ಸವಕ್ಕ ಮಚ್ಯುತೇಂದ್ರನೊಡನೆ ನಿಜಪೂಜಾವಿಳಾಸಮಂ ಮೆಱೆಯಲೆಂದು ಪೋಗಿ ವಿವಿಧದಿವ್ಯದ್ರವ್ಯಾರ್ಚನೆಗಳಿಂ ತ್ರೈಲೋಕ್ಯಪೂಜ್ಯನಂ ಪೂಜಿಸಿಯುಮೋರೊರ್ಮೆ,

ಹಿಮವತ್ಕುತ್ಕೀಳಲೀಲಾವನಪರಿಸರರಮ್ಯೋಪಕಂಠಂಗಳೊಳ್ಪಿಂ
ಹಿಮವದ್ದೇವೇಂದ್ರಶೈಳೋಪರಿತಳವನದೊಳ್ತಳ್ತಲಂಪಿಂ ಸ್ವಯಂಭೂ
ರಮಣಾಂಭೋರಾಶಿವೇಳಾವನನಿಕಟನಿಕುಂಜಂ[1]ಗಳೊಳ್ ಕ್ರೀಡಿಸುತ್ತು
ತ್ತಮಸೌಖ್ಯಾಧಾರನಾದಂ ಸುಕವಿಜನಮನೋಮಾನಸೋತ್ತಂಸಹಂಸಂ ೨೮

ಅಣಿಮಾದ್ಯಷ್ಟಗುಣಪ್ರವೀಣ[2]ವಿಭವಂ ದೇವಾಂಗನಾಸನ್ನತಃ
ಪ್ರಣಯಪ್ರೀಣಿತಮಾನಸಂ ಸುರವಧೂಲೀಲಾವಧೂತಪ್ರತಿ
ಕ್ಷಣಚಂಚಚ್ಚಮರೀರುಹಂ ಪಟುನಟಪ್ರಾರಬ್ಧ ಸಂಗೀತಕಂ
ತಣಿದಂ ಸಂತತಮಿಂತು ದಿವ್ಯಸುಖದೊಳ್ ಸಂಸಾರಸಾರೋದಯಂ ೨೯

ಗದ್ಯ|| ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾ
ಪ್ರಸರ ಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಲಲಿತಾಂಗದೇವ ವರ್ಣನಂ

## ದ್ವಿತೀಯಾಶ್ವಾಸಂ

ಪಂಚಕಲ್ಯಾಣೋತ್ಸವಕ್ಕೂ ಅಚ್ಯುತೇಂದ್ರನೊಡನೆ ತನ್ನ ಪೂಜಾವಿಲಾಸವನ್ನು ಮೆರೆಯಿಸಲು ಹೋಗಿ ಶ್ರೇಷ್ಠದ್ರವ್ಯಾರ್ಚನೆಗಳಿಂದ ತ್ರಿಲೋಕಪೂಜ್ಯನನ್ನು ಪೂಜಿಸುತ್ತಲೂ ಒಮ್ಮೊಮ್ಮೆ ೨೮. ಹಿಮವತ್ಪರ್ವತದ ಕ್ರೀಡಾಶೈಲಗಳಲ್ಲಿನ ರಮ್ಯಪ್ರದೇಶಗಳಲ್ಲಿಯೂ ಹಿಮವದ್ದೇವೇಂದ್ರ ಶೈಲದ ಮೇಲ್ಭಾಗಗಳಲ್ಲಿಯೂ ಸ್ವಯಂಭೂರಮಣಸಮುದ್ರದ ತಟಾರಣ್ಯಗಳ ನಿಕುಂಜಗಳಲ್ಲಿಯೂ ಕ್ರೀಡಿಸುತ್ತ ಲಲಿತಾಂಗನು ಉತ್ತಮಸೌಖ್ಯಕ್ಕೆ ಆಧಾರನಾದನು. ೨೯. ಅಣಿಮಾದ್ಯಷ್ಟಗುಣಗಳಿಂದ ಪ್ರಾಪ್ತೈಶ್ವರ್ಯನೂ ದೇವತಾಸ್ತ್ರೀಯರ ಪ್ರೀತಿಯಿಂದ ಸಂತೋಷಗೊಂಡ ಮನಸ್ಸುಳ್ಳವನೂ ಸಮರ್ಥರಾದ ನಟರಿಂದ ಪ್ರಾರಂಭಿಸಲ್ಪಟ್ಟ ಸಂಗೀತವುಳ್ಳವನೂ ದೇವತಾಸ್ತ್ರೀಯರಿಂದ ಬೀಸಲ್ಪಟ್ಟ ಚಾಮರವುಳ್ಳವನೂ ಆಗಿ ದಿವ್ಯಸುಖದಿಂದ ಲಲಿತಾಂಗನು ತಣಿದನು.

ಇಂತು ಲಲಿತಾಂಗ ದೇವವರ್ಣನವೆಂಬ
ಎರಡನೆಯ ಆಶ್ವಾಸ

---

೧ ಖ-ವನಗಿರಿತಟಕುಂಜ ೨ ಕ.-ಗುಣಪ್ರಭೂತ

* 'ಮಹಾಮಹೆಗಂ' ಎಂದು ಶುದ್ಧಪಾಠವಿರಬಹುದು. ಮಹಾಮಹ = ಒಂದು ಉತ್ಸವ.

# ತೃತೀಯಾಶ್ವಾಸಂ

ಶ್ರೀಮದಮರಾಂಗನಾನನ
ತಾಮರಸಾಮೋದ ಮತ್ತಮಧುಕರನಾ ಕ
ಲ್ಪಾಮರನೊಸೆದಂ ಸುರಸೌ
ಖ್ಯಾಮೃತರಸದೊಳ್ ಸರಸ್ವತೀಮಣಿಹಾರಂ ೧

ಸುರತರುನಂದನಾವಳಿಗಳಂಗಜರಾಗಮನೀವುವಾವುದೊಂ
ದಿರಲೆಡೆ ಚೆಲ್ವದರ್ಕೆ ಬಗೆದಾಗಳೆ ವಾಹನದೇವರುಯ್ವರ
ಚ್ಚರಸಿಯರಿಚ್ಚೆಯಂ ಸಲಿಪರೊಲ್ದಣಿಮಾದಿ ಗುಣಾನ್ವಿತಾಮರರ್
ಪರಿವೆಸಗೆಯ್ವರೆಂಬೆನಜೆಯಂ[೧] ಪೊಗಟಲ್ ಸುರಲೋಕಸೌಖ್ಯಮಂ ೨

ವ|| ಅಂತಾತ್ಮಪುಣ್ಯೋಪಾರ್ಜಿತಾಮರಲೋಕಭೋಗಮೇಕಸಾಗರಪ್ರಮಿತಜೀವಿತಮಱು ದಿಂಗಳುಟೆದುದೆಂಬಂದಿಂಗೆ,

ಸೂಡಿದ ಪಾರಿಜಾತದ ನಮೇರುವ ಬಾಸಿಗಮೊಯ್ಯನೊಯ್ಯನಿ
ರ್ಪೋಡಿದುದಂದಿನಂಗರುಚಿ ಕಣ್ಗೆಟಿದಾಯ್ತು ವಿಭೂಷಣಂಗಳೊಳ್
ತೀಡುವ ರಶ್ಮಿಗಳ್ ಮಸುಳ್ದುವಾಗುಳಿಯಾಯ್ತನಿತುಬ್ಬೆಗಂ ಮೊಗಂ
ಬಾಡೆ ತಗುಳ್ದು ಸೂಚಿಸಿದುವಾ ದಿವಿಜಂಗವಸಾನಕಾಲಮಂ ೩

ವ|| ಮತ್ತಂ ತನ್ನ ಪೋಗಿಂಗೆ ನಡನಡುಗುವಂತೆ ನಡುಗುವುಪವನದ ಕಲ್ಪವೃಕ್ಷಂಗಳುಮಂ

೧. ಕಲ್ಪಾಮರನಾದ ಲಲಿತಾಂಗನು ಅಮರಸ್ತ್ರೀಯರ ಮೊಗದಾವರೆಯ ಬಂಡಿನಿಂದ ಮತ್ತನಾದ ದುಂಬಿಯಾಗಿದ್ದನು. ಸರಸ್ವತೀಮಣಿಹಾರನಾದ ಅವನು ಸುರ ಸೌಖ್ಯಾಮೃತರಸದಲ್ಲಿ ಸೊಗಯಿಸಿದನು. ೨. ಕಲ್ಪವೃಕ್ಷ ನಂದನವನಾದಿಗಳು ಅವನಿಗೆ ಕಾಮೋತ್ಸವವನ್ನು ಕೊಡುವುವು. ರಮ್ಯಪ್ರದೇಶಗಳೆಲ್ಲಕ್ಕೂ ವಾಹನದೇವರು ಅವನನ್ನು ಒಯ್ಯುವರು. ಅಪ್ಸರಸ್ತ್ರೀಯರು ಅವನ ಇಚ್ಛೆಯನ್ನು ಸಲ್ಲಿಸುವರು. ಅಣಿಮಾದಿ ಗುಣಯುಕ್ತರಾದ ಅಮರರು ಅವನ ಸೇವೆಗೆಯ್ವರು. ಅಂದಮೇಲೆ ಸುರಲೋಕಸೌಖ್ಯವನ್ನು ಹೊಗಳಲು ನನಗೇನು ಗೊತ್ತುಂಟು? ವ|| ಹೀಗೆ ತನ್ನ ಪುಣ್ಯದಿಂದ ಸ್ವರ್ಗಭೋಗವನ್ನು ಪಡೆದ ಲಲಿತಾಂಗನಿಗೆ ಸಾಗರಕಾಲದ ಆಯುಷ್ಯದಲ್ಲಿ ಆರು ತಿಂಗಳು ಉಳಿದವು. ೩. ಆಗ ಮುಡಿದ ಪಾರಿಜಾತ ನಮೇರ್ವಾದಿ ಹೂವಿನ ದಂಡೆಗಳು ಬಾಡಿಹೋದವು. ಅಂಗಗಳ ಕಾಂತಿಯು ಕುಂದಿತು. ಆಭರಣಗಳಲ್ಲಿನ ಹೊಳಪುಗಳು ಮಬ್ಬಾದುವು. ಆಕಳಿಕೆ(?) ಉಂಟಾಯಿತು. ಅವನಿಗೆ ಉದ್ವೇಗವು ಹೆಚ್ಚಿತು. ಮುಖವು ಬಾಡಿತು. ಇವು ಲಲಿತಾಂಗನ ಮರಣಕಾಲವನ್ನು ಸೂಚಿಸಿದುವು. ವ|| ಲಲಿತಾಂಗನು ಹೊರಟುಹೋಗುವನೆಂದು

---

೧ ಕ-ಗೆಯ್ವರೆಂದೊಡಜೆಯಂ

ತನ್ನಗಲ್ಕೆಗೆ ಬನ್ನನಿರ್ಪಂತೆ ಬನ್ನನಾಗಿರ್ಪ ವಿಮಾನದ ಮಣಿಕುಟ್ಟಿಮಭೂಮಿಗಳುಮಂ ಆಗಳಾಗಳೆ ತನ್ನಂ ಪೆಱರ್ ಪಿಡಿದು ತೆಗೆವಂತೆ ತನಗೆ ತಾನೇ ಪೊಣ್ಮುವ ಭಯಮುಮಂ ಭೋಂಕನೆ ಕಂಡು ನಾಕಲೋಕಚ್ಯುತಿಯನಾಗಳಱಿದು ಮನದೊಳಳ್ಕಿ ಬೆಳ್ಕನೆವೋಗಿ,

ಸುರತರುನಂದನಂಗಳಿರ ರತ್ನಪಿನದ್ಧವಿಮಾನಕುಟ್ಟಿಮಾಂ
ತರ ಸುರತಾಲಯಂಗಳಿರ ಚಾರುವಿಲೋಲಕಟಾಕ್ಷಪಾತಸೌಂ
ದರಪರಿವಾರದೇವಿಯರಿರಾ ಕಡುಕೆಯ್ದು ಕೃತಾಂತನಿಂತು ನಿ
ರ್ನೆರಮೆಟೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ ೪

ವ॥ ಎಂದು ಸ್ಥೈರಿಸದೆ ಕಾಮಸಾಮ್ರಾಜ್ಯಸರ್ವಸ್ವಭೂತೆಯಪ್ಪ ತನ್ನ ನಲ್ಲಳ ಮೊಗಮಂ ನೋಡಿ

ಸಂತಸದಂತನೆಯ್ದಿ ಸುರತಾಮೃತದೊಳ್ ತಣಿದಟ್ಟಜೆಂ ಜಗಿ
ಲ್ದಂತಿರೆ ಪತ್ತಿ ಮೆಯ್ಗಳೆರಡಾದೊಡಮೇನಸುವೊಂದೆ ನೋಟ್ಟೊಡೆಂ
ಬಂತಿರೆ ಕೂಡಿ ನಿನ್ನೊಡನೆ ಭೋಗಿಸಲೀಯದೆ ಕೆಮ್ಮನೆನ್ನನು
ಯ್ವಂತಕನೆಂಬ ಬೂತನೆಲೆ[1] ಮಾಣಿಸಲಾಗದೆ ಪೇಟಿ್[2] ಸ್ವಯಂಪ್ರಭೇ ೫

ವ॥ ಎಂದು ಧೈರ್ಯಮಂ ಪತ್ತುವಿಟ್ಟು ಅತಿಪ್ರಲಾಪಂಗೆಯ್ವ ಲಲಿತಾಂಗದೇವನಂ ಸಾಮಾನಿಕ ದೇವರ್ಕೆದೆವೆಂದು,

ನಡುಗುತ್ತಿರುವಂತೆ ನಡುಗುತ್ತಿದ್ದುವು, ಉದ್ಯಾನದ ಕಲ್ಪವೃಕ್ಷಗಳು. ಅವನ ಅಗಲಿಕೆಗೆ ನೀರವವಾಗಿರುವಂತೆ ನೀರವವಾಗಿದ್ದುವು, ಮಣಿಗಳಿಂದ ಮೆಟ್ಟಿದ ವಿಮಾನದ ಭೂಭಾಗಗಳು. ತನ್ನನ್ನು ಇತರರು ಹಿಡಿದೊಯ್ಯುವಂತೆ ತನ್ನಷ್ಟಕ್ಕೆ ತಾನೆ ಹೊರಹೊಮ್ಮುವ ಭಯವನ್ನು ಕಂಡು ತನಗೆ ಸ್ವರ್ಗಲೋಕದಿಂದ ಚ್ಯುತಿಯಾಗುವುದೆಂದು ತಿಳಿದು ಆತನು ಅಂಜಿದನು. ೪. "ಕಲ್ಪವೃಕ್ಷಗಳೆ, ನಂದನವನಗಳೆ, ವಿಮಾನದ ನೆಲಗಟ್ಟುಗಳಲ್ಲಿನ ಸುರತಾಲಯಗಳೇ! ವಿಲೋಲ ಕಟಾಕ್ಷಗಳನ್ನು ಬೀರುವ ಸುಂದರ ಪರಿವಾರದೇವಿಯರೆ! ಯಮನು ನನ್ನನ್ನು ತ್ವರೆಯಿಂದ ಎಳೆದೊಯ್ಯುತ್ತಿದ್ದರೂ ನಿವಾರಿಸದೆಯೆ ಉಪೇಕ್ಷಿಸಿ ನೋಡುತ್ತಿರುವಿರಿ, ಅಲ್ಲವೆ?" ವ॥ ಎಂದು ತಾಳಲಾರದೆಯೆ ಕಾಮರಾಜ್ಯಕ್ಕೆ ಸಮಸ್ತ ಸಂಪತ್ತಾದ ತನ್ನ ಕಾಂತೆಯ ಮುಖವನ್ನು ನೋಡಿ. ೫. "ಸುರತಾಮೃತದಲ್ಲಿ ಸಂತೋಷದ ಕೊನೆಯನ್ನು ಮುಟ್ಟಿ ತಣಿದಿವೆ ನಮ್ಮ ಮನ. ದೇಹಗಳೆರಡಾಗಿದ್ದರೂ ಪ್ರಾಣವೊಂದೆಂಬಂತೆ ಪ್ರೀತಿಯಿಂದಂಟಿಕೊಂಡಿವೆ ಅವು. ಹೀಗಿದ್ದರೂ ಎಲೈ ಸ್ವಯಂಪ್ರಭೆ! ನಿನ್ನೊಡನೆ ಭೋಗಿಸಲವಕಾಶವೀಯದೆಯೆ, ಯಮನೆಂಬ ಭೂತು ನನ್ನನ್ನು ಒಯ್ಯುತ್ತಿದ್ದರೂ ಬಿಡಿಸದಿರುವೆಯಲ್ಲಾ!" ಎಂದನು. ವ॥ ಹೀಗೆ ಧೈರ್ಯವನ್ನು ಕಳೆದುಕೊಂಡು ಪ್ರಲಾಪಿಸುತ್ತಿರುವ ಲಲಿತಾಂಗವನ್ನು ಸಾಮಾನಿಕದೇವರು ಸಮೀಪಿಸಿದರು. ಅವರು,

---

೧ ಕ-ಭೂತಕಲೆ ೨ ಕ-ಕೇಳ್

ನಿನಗೊರ್ವಂಗಲ್ಲವಸ್ಥಾಂತರಮಮರಜನಕ್ಕೆಲ್ಲಮೀ ಪಾಂಗೆ ಕಾರು
ಣ್ಯನಿನಾದಂ ನಿನ್ನನಾದಂ ನಗಿಸುಗುಮೆೞೆದುಯ್ವಂತಕಂಗಿಲ್ಲ ದೇವಾಂ
ಗನೆಯರ್ ಮಾಱೂಂಪರೇ ಪೇೞ್ ಜನನಮೃತಿಜರಾತಂಕಶೋಕಾಗ್ನಿಯಿಂದಾ
ವನುಮೀ ಸಂಸಾರದೊಳ್ ಬೇಯದನೊಳನೆ ಶರಣ್ಧರ್ಮದಿಂದೊಂದುಮುಂಟೇ ೬

ಜಿನಚೈತ್ಯವ್ರಾತಮಂ ಬಂದಿಸು ಜಿನಪದಪದ್ಮಂಗಳಂ ದಿವ್ಯಮಪ್ಪ
ರ್ಚನೆಯಿಂದಂ ಭಕ್ತಿಯಿಂದರ್ಚಿಸು ನಮಸ್ಕಾರಮಂತ್ರಂಗಳೊಳ್ ಭಾ
ವನೆಯಂ ತಾಳ್ಪೆತ್ತೆಯಿಂದಂ ಜಿನಮಹಿಮೆಗಳಂ ಮಾಡು ನೀಂ ಭವ್ಯನೈ ಮ
ತ್ತಿನ ಮಿಥ್ಯಾಜ್ಞಾನಿವೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಂತನಪ್ಪೈ ೭

ಎನೆ ಬಗೆಗೊಂಡಭೀತಮನನರ್ಚಿಸಿ ಬಂದಿಸಿ ಚೈತ್ಯಗೇಹಮು
ಳ್ಳನಿತುಮನರ್ಧ[೧]ಮಾಸಮದಱಿಂ ಬೞಿಕಚ್ಯುತಕಲ್ಪದೊಳ್ ಜಿನೇಂ
ದ್ರನನೊಸೆದರ್ಚಿಸುತ್ತುಮಮರಂ ಚ್ಯುತನಾದನದಲ್ತೆ ವಿಶ್ವಲೋ
ಚನನಘವೈರಿಯಲ್ಲದುೞಿದಂ ಗೆಲಲಾರ್ಕುಮೆ ಮೃತ್ಯುರಾಜನಂ ೮

ವ॥ ಅಂತು ನೋಡೆ ನೋಡೆ ಶರತ್ಸಮಯಸಮುದಿತ ಜಳಧರರೂಪದಿಂದದೃಶ್ಯರೂಪನಾಗಿ ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳಶೇಷ ಜನಪದ ಜನಾನುರಾಗಜನನ ಸಮುಸ್ತಸಸ್ಯಸಂಪತ್ಪದಪುಷ್ಕಳಾವತೀವಿಷಯದೊಳನೇಕಜಳಚರ

೬. "ನಿನಗೊಬ್ಬನಿಗೇ ಅಲ್ಲ ಈ ಅವಸ್ಥೆ. ಇದೆಲ್ಲ ಕರುಣಾಧ್ವನಿ ಎಲ್ಲ ಅಮರಜನಕ್ಕೂ ಉಂಟು. ನಿನ್ನ ನಾದವು ಎಳೆದೊಯ್ಯುವ ಯಮನನ್ನು ನಗಿಸುವುದು. ದೇವತಾಸ್ತ್ರೀಯರು ಇದನ್ನು ಎದುರಿಸಲು ಶಕ್ತರೆ? ಜನನ, ಮರಣ, ಮುಪ್ಪು ಮತ್ತು ಶೋಕಾಗ್ನಿಗಳಿಂದ ಬೇಯದ ಮಾನವರಾರುಂಟು ಈ ಸಂಸಾರದಲ್ಲಿ? ಧರ್ಮಕ್ಕಿಂತ ಬೇರಾವ ಶರಣಿಲ್ಲ. ೭. ಜಿನಚೈತ್ಯಾಲಯಗಳನ್ನು ಭಕ್ತಿಯಿಂದೆರಗು, ಜಿನಪಾದಪದ್ಮಗಳನ್ನು ದಿವ್ಯಾರ್ಚನೆಗಳಿಂದ ಅರ್ಚಿಸು. ಜಿನರ ನಮಸ್ಕಾರಮಂತ್ರಗಳಲ್ಲಿ ಸದ್ಭಾವನೆಯನ್ನು ತಳೆ. ಪ್ರೀತಿಯಿಂದ ಜಿನಮಹಿಮೆಗಳನ್ನು ಧ್ಯಾನಿಸು. ನೀನು ಭವ್ಯ. ಮಿಥ್ಯಾಜ್ಞಾನಿಯಂತೇಕೆ ಚಪಲತೆಯಿಂದ ಬಳಲುವೆ" ಎಂದರು. ೮. ಆಗ ತುಂಬಿದೆದೆಯಿಂದ ಜಿನನನ್ನು ಆಭೀತನಾಗಿ ಅವನು ಅರ್ಚಿಸಿದನು. ಇರುವ ಚೈತ್ಯಗೃಹಗಳೆಲ್ಲವನ್ನೂ ಅರ್ಧಮಾಸದಲ್ಲಿ ಸಂದರ್ಶಿಸಿ ವಂದಿಸಿದನು. ಬಳಿಕ ಅಚ್ಯುತಸ್ವರ್ಗದಲ್ಲಿರುವ ಜಿನೇಂದ್ರನನ್ನು ಪ್ರೀತಿಯಿಂದರ್ಚಿಸಿ ಸ್ವರ್ಗದಿಂದ ಚ್ಯುತನಾದನು (ಮೃತನಾದನು). ವಿಶ್ವಲೋಚನನಾದ (ಸರ್ವಜ್ಞನಾದ) ಅಘವೈರಿಗಲ್ಲದೆ (ಜಿನನಿಗಲ್ಲದೆ) ಉಳಿದವನಿಗೆ ಮೃತ್ಯುರಾಜನನ್ನು ಗೆಲ್ಲಲು ಸಾಧ್ಯವೇ? ವ॥ ಅಂತು ನೋಡುನೋಡುತ್ತಿರಲಾಗಿ ಲಲಿತಾಂಗನು ಶರತ್ಕಾಲದ ಮೇಘದಂತೆ ಅದೃಶ್ಯನಾದನು. ಜಂಬೂದ್ವೀಪದ ಮೇರುವಿನ ಪೂರ್ವವಿದೇಹದ ಸೀತಾನದಿಯ ಉತ್ತರದ

---

೧ 'ಅಱುಮಾಸ' ಎಂದು ಹಿಂದಿನ ಪ್ರತಿಗಳಲ್ಲಿದೆ. ಪೂ. ಪು.ದಂತೆ ಇದು ಅರ್ಧಮಾಸವಾಗ ಬೇಕು. ಪಂಪನು 'ಆಱುಮಾಸ' ಎಂದೇ ಬರೆದಿರುವುದೂ ಸಾಧ್ಯ.

ಕುಳಕಳರವಪರಸ್ಪರೋಚ್ಚಾಲಿತವೀಚೀಚಯಜಳಧಿನಿಭ[1] ವಿಭವಪರಿಖಾಪರಿವೃತಮುಂ ಉದಗ್ರಚಂಚತ್ಕಾಂಚನಮಯ ವಿಶಾಲಭಿತ್ತಿಪರೀತಮುಂ ಅಂತರ್ಗತಧವಳವಿಪುಳಪ್ರಾಸಾದನಿರಂತರನಿರುದ್ಧಭೂಮಿಭಾಗಮುಂ ಉಪವನಲತಾಕುಸುಮಪರಿಮಳಸಮೀರಣಾಂದೋಳಿತಪ್ರಾಸಾದಪತಾಕಾವರುದ್ಧಾಂಬರಮುಂ ನೀಲೋತ್ಪಲವನಷಂಡಸಂಛನ್ನಮುಮಪ್ಪುದು.

ಉತ್ಪಳಖೇಟಮೆಂಬುದು ಪೊಟಲ್ ನಯದಿಂದದನಾಳ್ವುದಗ್ರಭೂ
ಭೃತ್ಪತಿ ವಜ್ರಬಾಹುನೃಪನಾ ನೃಪನಗ್ಗದುದಗ್ರಕಾಂತೆ ನೀ
ಲೋತ್ಪಲಲೋಲಲೋಚನೆ ವಸುಂಧರೆಯಂತವರ್ಗಗ್ರಸೂನು ಸಂ
ಪತ್ಪತಿ ವಜ್ರಜಂಘನೆ ತಲ್ಲಲಿತಾಂಗನೆ ಬಂದು ಪುಟ್ಟಿದಂ ೯

ವ|| ಆ ರಾಜಕುಮಾರನನೇಕಕಲಾಕಲಾಪಪ್ರವೀಣನಾಗಿ ಯುವರಾಜಲಕ್ಷ್ಮಿಯೊಡನೆ ವಿಸ್ತಾರಮಂ ಕೈಕೊಂಡ ವಕ್ಷಸ್ಥಳಮುಂ ಬಂಧುಜನಮನೋರಥಂಗಳೊಡನೆ ಪೊದಳ್ದಿವಡೆದ ವೃತ್ತೋರುಸ್ತಂಭಂಗಳುಂ ಪೊಡರ್ವ ಪಗೆವರೊಡನೆ ಕರಮುಸಿದಾದ ಮಧ್ಯಪ್ರದೇಶಮುಂ ಪಗೆವರ ಪೆಂಡಿರ ಸುಯ್ಯೊಡನೆ ನಿಡಿಯವಾದ ತೋಳ್ಗಳುಂ ಯಶಃಪ್ರಸರದೊಡನೆ ನೀಳ್ಪಂ ಬೆಳ್ಪುಮನೊಳಕೊಂಡು ಕಿಸುಸೆರೆವರಿದ ಕಣ್ಗಳುಂ ಆಜ್ಞೆಯೊಡನೆ ಕುಲಶಿಖರಿಶಿಖರೋತ್ತುಂಗಂಗಳಾದ ಭುಜಶಿಖರಂಗಳುಂ ಸರದೊಡನೆ ಗಂಭೀರಮಾದ ದಕ್ಷಿಣಾವರ್ತನಾಭಿಯುಂ ಅಧರಪಲ್ಲವದೊಡನೆ ಅಶೋಕಪಲ್ಲವಾನುರಕ್ತಂಗಳಾದ

ಸರ್ವದೇಶಗಳಲ್ಲಿನ ಜನಗಳ ಅನುರಾಗೋತ್ಪತ್ತಿಯಿಂದಲೂ, ಸರ್ವಸಂಪತ್ಸಮೃದ್ಧಿಯಿಂದಲೂ ಯುಕ್ತವಾದ ಪುಷ್ಕಲಾವತೀದೇಶದಲ್ಲಿ ನಾನಾ ಜಲತಂತುಕುಲಗಳಿಂದಲೂ, ಪರಸ್ಪರವಾಗಿ ಹೊಯ್ದಾಡುತ್ತಿರುವ ಅಲೆಗಳ ಸಮೂಹದಿಂದಲೂ ಕೂಡಿದ ಸಾಗರಕ್ಕೆಣೆಯೆನಿಸಿದ ವಿಭವಯುಕ್ತವಾದ ಕಂದಕಗಳಿಂದಲೂ ಕೂಡಿದ, ಸುವರ್ಣಮಯವೂ ವಿಶಾಲವೂ ಆದ ಗೋಡೆಗಳಿಂದ ಪರಿವೃತವೂ ಧವಲವೂ, ವಿಪುಲವೂ ಆದ ಪ್ರಾಸಾದಗಳಿಂದ ನಿರುದ್ಧವಾದ ಭೂಭಾಗಗಳುಳ್ಳ, ಉದ್ಯಾನಕುಸುಮಗಳ ಪರಿಮಳವನ್ನು ಹೊತ್ತ ಗಾಳಿಯಿಂದ, ಅಲುಗಾಡಿಸಲ್ಪಡುವ ಪ್ರಾಸಾದಗಳ ಪತಾಕೆಗಳಿಂದ ವ್ಯಾಪ್ತವಾದ ಆಕಾಶವುಳ್ಳ, ಕನ್ನೈದಿಲೆಗಳ ಕಾಡಿನಿಂದ ಇಡಿಕಿರಿದ ೯. ಉತ್ಪಲಖೇಟವೆಂಬ ಒಂದು ನಗರವಿತ್ತು. ಅದನ್ನು ನೀತಿಯಿಂದ ರಾಜನಾದ ವಜ್ರಬಾಹುವು ಆಳುತ್ತಿದ್ದನು. ಅವನ ಉತ್ಕೃಷ್ಟಳಾದ ಮಡದಿ ನೀಲೋತ್ಪಲಲೋಚನೆಯಾದ ವಸುಂಧರೆ. ಅವರಿಬ್ಬರಿಗೆ ಮಗನಾಗಿ ಲಲಿತಾಂಗದೇವನೇ ವಜ್ರಜಂಘನೆಂಬ ಹೆಸರಿನಿಂದ ಮೈದಳೆದನು. ವ|| ಆ ರಾಜಪುತ್ರನು ಅನೇಕ ಕಲೆಗಳಲ್ಲಿ ನಿಪುಣ. ಯುವರಾಜಲಕ್ಷ್ಮಿಯಂತೆ ಅವನ ಎದೆಯೂ ವಿಸ್ತಾರಗೊಂಡಿತ್ತು. ಬಂಧುಜನರ ಇಷ್ಟಾರ್ಥಗಳಂತೆ ಗುಂಡಾದ ತೊಡೆಗಳೂ ಹೊರಹೊಮ್ಮುತ್ತಿದ್ದುವು. ಯುದ್ಧವೆಸಗುವ ಶತ್ರುಗಳಂತೆ ಅವನ ಮಧ್ಯಪ್ರದೇಶವು ಕೃಶವಾಗಿತ್ತು. ಶತ್ರುಸ್ತ್ರೀಯರ ನಿಟ್ಟುಸಿರಿನಂತೆ ಅವನ ತೋಳುಗಳೂ ನೀಳವಾಗಿದ್ದುವು. ಯಶೋರಾಶಿಯಂತೆ ದೀರ್ಘತೆಯನ್ನೂ ಶುಭ್ರತೆಯನ್ನೂ ಒಳಗೊಂಡು ಕಣ್ಣುಗಳು

---

೧ ಕ-ಜಳಚರಕಮಳಹಂಸವನಜಳಧಿನಿಭ

ಪಾಣಿಪಾದತಳಂಗಳುಂ ಲಲಾಟಪಟ್ಟದೊಡನೆ ಲಲಿತೋನ್ನತಂಗಳಾದ ಪೊಱಅಡಿಗಳುಂ ಉಗುರ್ಗಳೊಡನೆ ದೀಪ್ತಿಯೊಳ್ ಪುದಿದು ಮಧುರವರ್ಣಮಾದ ದಂತಪಂಕ್ತಿಗಳುಂ ಆತ್ಮೀಯಯೌವನಪ್ರಾದುರ್ಭಾವಮಂ ಪ್ರಕಟಂಮಾಡೆ,

ಆ ದಿವಿಜೇಂದ್ರಲೋಕದಿರವುಂ ಪೆಸರುಂ ತನಗಿಲ್ಲಿ ಬಂದು ಬೇ
ಱಾದುದೆ ಭೇದಮಂಗರುಚಿ ರೂಪಿನ ಪೆಂಪಿನ ಗಾಡಿಯೇೞ್ಗೆ ಮೇ
ಲಾದ ವಿಳಾಸದೊಡ್ಡವಿನಿತುಂ ದಿವದಿಂದೊಡವಂದುವೆಂಬನಿ
ತ್ತಾದುದು ರೂಪು ಜವ್ವನಮನೊತ್ತರಿಸುತ್ತಿರೆ ವಜ್ರಜಂಘನಾ ೧೦

ಎನಿತೆನಿತೆಂತು ಯೌವನಮನಂಗವಿಕಾರವಿನೋದಿಯಕ್ಕುಮಂ
ತನಿತನಿತೀ ಮಹೀತಳದ ಭಾರಮನೊಲ್ಲದೆ ತತ್ಸ್ವಯಂಪ್ರಭಾ
ನನ ಸಕಳೇಂದುಬಿಂಬರಮಣೀಯಮನಕ್ಷಯಕಲ್ಪವೃಕ್ಷನಂ
ದನವನರಮ್ಯಮಂ ನೆನೆದು ದೂಷಿಸಿದಂ ಸುರಲೋಕಸೌಖ್ಯಮಂ* ೧೧

ವ|| ಅಂತು ಗಗನತಳಕುಸುಮಮನೆ ಬಯಸಿ ಮರುಳ್ಗೊಂಡ ಮರುಳಂತೆ ದೇವಲೋಕದೊಳಿನಿತಾನುಂ ಕಾಲಮನುಭವಿಸಿದನುಭವಕ್ಕೆ ಮೊದಲಿಗೆಯೆನಿಸಿದಾ ಸ್ವಯಂಪ್ರಭೆಯಂ ನೆನೆನೆನೆದು[1]

ಕೆಂಪುರಕ್ತನಾಳಗಳಿಂದ ಕೂಡಿದ್ದವು. ಅವನ ಆಜ್ಞೆಯಂತೆ ಕುಲಪರ್ವತಶಿಖರೋಪಮವಾದ ಭುಜಶಿಖರಗಳೂ ಉತ್ತುಂಗವಾಗಿದ್ದುವು. ಆತನ ಧ್ವನಿಯು ಅವನ ದಕ್ಷಿಣಾವರ್ತನಾಭಿಯಂತೆ ಗಂಭೀರವಾಗಿದ್ದಿತು. ಅಧರ, ಪಾಣಿ, ಪಾದತಲಗಳೂ ಅಶೋಕದ ಚಿಗುರಿನಂತೆ ಕೆಂಪಾಗಿದ್ದುವು. ಲಲಾಟಪಟ್ಟ (ಹಣೆ)ದಂತೆ ಪೊರ ಅಡಿಗಳು ಲಲಿತೋನ್ನತವಾಗಿದ್ದುವು. ಉಗುರುಗಳೂ, ದಂತಪಂಕ್ತಿಗಳೂ ಕಾಂತಿಗಳಿಂದ ಕೂಡಿ ಮಧುರವರ್ಣವಾಗಿದ್ದುವು. ಇವೆಲ್ಲವೂ ವಜ್ರಜಂಘನ ಯೌವನದ ಉದಯವನ್ನು ಸಾರುತ್ತಿದ್ದುವು. ೧೦. ಅಮರಲೋಕದ ವಾಸವಾಗಲಿ ಹಿಂದಿನ ಆ ಹೆಸರಾಗಲಿ ಅವನಿಗೆ ಇರಲಿಲ್ಲವೆಂಬುದೊಂದೇ ಭೇದ. ಅಂಗರುಚಿ, ರೂಪಿನ ಆಧಿಕ್ಯ, ಸೌಂದರ್ಯದ ಏಳ್ಗೆ ಮತ್ತು ವಿಲಾಸದ ಸೊಬಗುಗಳು ಸ್ವರ್ಗದಿಂದ ಇಳಿದುಬಂದುವೆ ಆಗಿವೆ ಎಂಬಂತೆ ವಜ್ರಜಂಘನ ಯೌವನವನ್ನು ರೂಪು ಒತ್ತರಿಸುತ್ತಿತ್ತು. ೧೧. ಅವನ ಯೌವನವು ಕಾಮವಿನೋದದಲ್ಲಿ ಆಸಕ್ತವಾದಂತೆಲ್ಲ ಅವನ ಮನಸ್ಸು ಭೂಭಾರವನ್ನು ಹೊರಲೊಲ್ಲದಾಯಿತು. ಸ್ವಯಂಪ್ರಭೆಯ ಮುಖವೆಂಬ ಇಂದುಬಿಂಬದ ರಮ್ಯತೆಯನ್ನೂ ಅಕ್ಷಯವಾದ ಕಲ್ಪವೃಕ್ಷದ ಔದಾರ್ಯವನ್ನೂ ನೆನೆದು ಸುರಲೋಕಸೌಖ್ಯವನ್ನು (ನರಲೋಕಸೌಖ್ಯವನ್ನು?) ಕಡೆಗಣಿಸಿದನು. ವ|| ಅಂತು ಆಕಾಶದ ಹೂವನ್ನೇ ಬಯಸಿ ಭ್ರಾಂತನಾಗಿ ಚಿಂತಿಸುವ ಎಡ್ಡನಂತೆ, ದೇವಲೋಕದಲ್ಲಿ ಇಷ್ಟುಕಾಲ ಅನುಭವಿಸಿದನುಭವಕ್ಕೆ

* 'ದೂಷಿಸಿದಂ ನರಲೋಕಸೌಖ್ಯಮಂ' ಎಂದೇ ಶುದ್ಧಪಾಠವಿರಬೇಕು. (ನೋಡಿ. ಪೂ. ಪು. ೬-೪೮). ೧ ಬಿ.-ನೆನೆದೂ.

ಕುಡುಮಿಂಚಂ ಮಸೆದನ್ನರಪ್ಪ ಪಲರೊಳ್ವೆಂಡಿರ್ ಮನಂಗೊಂಡು ಬಂ
ದೊಡಮಾ ರಾಜಕುಮಾರನೊಲ್ಲನೆ ದಳನ್ಮಂದಾರಿಕಾ[1]ಮಾಲೆಯೊಳ್
ಕಡುಗಂಪಂ ಸವಿದೊಂದು ತುಂಬಿ ಪಸಿವಿಂ ಮೆಳ್ಪಟ್ಟು ಬಂಡುಣ್ಣದಿ
ರ್ಪೊಡಮಿರ್ಕುಂ ಬಟಿಕೆಂತುಮನ್ಯಕುಸುಮಾಮೋದಕ್ಕೆ ಮೆಯ್ದುರ್ಕುಮೇ ೧೨

ವ॥ ಅನ್ನೆಗಮೀಶಾನಕಲ್ಪದೊಳಾ ಶ್ರೀಪ್ರಭವಿಮಾನದೊಳ್,

ಅಲಕಂ ಮಂದಾರಶೂನ್ಯಂ ಕದಪು ಮಕರಿಕಾಪತ್ರಶೂನ್ಯಂ ಲಲಾಟಂ
ತಿಲಕಾಳಂಕಾರಶೂನ್ಯಂ ಘನಕುಚಯುಗಳಂ ಹಾರಶೂನ್ಯಂ ನಿತಂಬಂ
ಕಲಕಾಂಚೀದಾಮಶೂನ್ಯಂ ಚರಣಯುಗಳಮುಂ ನೂಪುರಾಳಾಪಶೂನ್ಯಂ
ಲಲಿತಾಂಗಂ ಪೋದೊಡಾಯ್ತಾಕೆಗೆ ದಿವಮನಿತುಂ ನಿರ್ಜ[ನಾ]ರಣ್ಯ* ಶೂನ್ಯಂ ೧೩

ವ॥ ಅಂತಾ ಸ್ವಯಂಪ್ರಭಾಮಹಾದೇವಿ ನಿಜಪ್ರಾಣವಲ್ಲಭವಿಯೋಗವಿಧುರೆಯಾಗಿ,

ಮುರಿದೆಟಿದುಯ್ಯೆ ನಿನ್ನನಿರದಂತಕನಾಂ ನಡೆ ನೋಡೆ ನೋಡೆ ನೀಂ
ಕರಗಿದೆಯೆಂತುಮೆನ್ನ ಸುಶರೀರದೊಳಿರ್ದುದು ಜೀವಮೀಯೊಡಲ್
ಕರಗಿದುದಿಲ್ಲದೆನ್ನ ಬಸಮಲ್ತೊಡಲಿಂದೆಮ ಶೋಕದೊಳ್ ಮನಂ
ಕರಗಿದುದೆಯ್ದೆ ವಾರದಿರೆಯಿರ್ದೆಡೆಯಿಂ ಲಲಿತಾಂಗವಲ್ಲಭಾ ೧೪

ಮೊದಲಿಗಳಾದ ಸ್ವಯಂಪ್ರಭೆಯನ್ನು ನೆನೆನೆನೆದು, ೧೨. ಕುಡಿಮಿಂಚಿನಂತೆ ಬೆಳಗುವ ಕೆಲವು ಸುಂದರ ಹೆಂಗಸರು ಆ ರಾಜಕುಮಾರನನ್ನು ಆಶಿಸಿ ಬಂದರೂ ಅವನು ಅವರನ್ನೊಲ್ಲನು. ಮಂದಾರಪುಷ್ಪಮಾಲೆಯ ಕಡುಗಂಪನ್ನು ಸವಿದೊಂದು ತುಂಬಿಯು ಹಸಿವಿನಿಂದ ನೊಂದರೂ ಬಂಡುಣ್ಣದೇ ಇದ್ದೀತೇ ಹೊರತು ಅನ್ಯಪುಷ್ಪಗಳ ಪರಿಮಳಕ್ಕೆ ಮೆಯ್ಗೊಡುವುದೆ? ವ॥ ಇತ್ತ ಈಶಾನ್ಯಕಲ್ಪದಲ್ಲಿ ಶ್ರೀಪ್ರಭವಿಮಾನದಲ್ಲಿ ೧೩. ಸ್ವಯಂಪ್ರಭೆಯ ಮುಂಗುರುಳು ಮಂದಾರಪುಷ್ಪದಿಂದ ವಿರಹಿತವಾದುವು. ಕೆನ್ನೆಯು ಮಕರಿಕಾಪತ್ರದಿಂದ ಶೂನ್ಯವಾದುವು. ಹಣೆಯು ತಿಲಕಾಲಂಕಾರಗಳಿಂದ ತ್ಯಕ್ತವಾಯಿತು. ಸಾಂದ್ರವಾದ ಸ್ತನಗಳು ಹಾರವಿರಹಿತವಾದುವು. ನಿತಂಬಗಳು ಒಡ್ಯಾಣದಿಂದ ಚ್ಯುತವಾದುವು. ಕಾಲುಗಳು ಕಾಲಂದುಗೆಗಳಿಂದ ವಿರಹಿತವಾದುವು, ಲಲಿತಾಂಗನ ಸಾವಿನಿಂದ ಸ್ವಯಂಪ್ರಭೆಗೆ ಸ್ವರ್ಗವೆಲ್ಲವೂ ನಿರ್ಜನಾರಣ್ಯದಂತೆ ಶೂನ್ಯವೆನಿಸಿತು. ವ॥ ಸ್ವಯಂಪ್ರಭೆಯು ಇನಿಯನ ಅಗಲಿಕೆಯಿಂದ ಒಂಟಿಗಳಾಗಿ ೧೪. "ಯಮನು ನಿನ್ನನ್ನು ನಿರ್ದಯದಿಂದ ಮುರಿದು ಎಳೆದೊಯ್ದನು. ನನ್ನ ಕಣ್ಣುಗಳೆದುರಿನಲ್ಲಿಯೇ ನೀನೆಂತು ಕರಗಿಹೋದೆ! ನನ್ನ ಈ ದೇಹದಲ್ಲಿ ಜೀವವು ಸ್ಥಿರವಾಗಿ ನಿಂತಿದೆ. ಅದು ಇನ್ನೂ ಕಣ್ಮರೆಯಾಗಿಲ್ಲ, ಈಯೊಡಲು ನನ್ನ ವಶವರ್ತಿಯಲ್ಲ, ಲಲಿತಾಂಗ! ನೀನು ಇದ್ದೆಡೆಯಿಂದ

---

೧ ಕ.-ಲಸನ್ಮಂದಾರಕಾ.

* 'ನಿರ್ಜರಾರಣ್ಯ' ಅನ್ಯತ್ರ.

ಮದನನ ಕೈದುವೆಲ್ಲಿದನನಂಗನ ಕೈಪೊಡೆಯೆಲ್ಲಿದಂ ವಿಳಾ
ಸದ ಕಣಿಯೆಲ್ಲಿದಂ ಚದುರ ಪುಟ್ಟಿದನೆಲ್ಲಿದನೆಲ್ಲಿದಂ ವಿನೋ
ದದ ಮೊದಲೆಲ್ಲಿದಂ ಸೊಬಗಿನಾಗರಮೆಲ್ಲಿದನಿಚ್ಚೆಯಾಣ್ಮನೆ
ಲ್ಲಿದನೆರ್ದೆಯಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ ೧೫

ವ॥ ಎಂದು ನಿಜಪ್ರಾಣವಲ್ಲಭವಿಯೋಗಶೋಕೋದ್ರೇಕವ್ಯಾಕುಳೆಯಾಗಿರ್ದ ತತ್ಸ್ವಯಂ ಪ್ರಭಾದೇವಿಯ ಸಮೀಪಕ್ಕೆ ಮಹತ್ತರದೇವಿಯರ್ ಬಂದು,

ಮುಂ ಪಿಂತೆಂಬುದಿದಲ್ತೆ ನಿ
ಳಿಂಪಯುಗಕ್ಕೆಲ್ಲಮಿಂತು ಬಾಯಟೆವುದೆ ಚಿಃ
ಗಾಂಪು ಬಗೆಗೊಂಡು ಜಿನಪತಿ
ಯಂ ಪೂಜಿಸು ಪಡೆವೆಯಿನಿಯನಂ ಮಱುಭವದೊಳ್ ೧೬

ವ॥ ಎಂಬುದುಮದನೆ ಮನದೆಗೊಂಡು.

ಆನ್ನೆಗಮಾ ಸ್ವಯಂಪ್ರಭೆಯುಮಾ ಲಲಿತಾಂಗವಿಯೋಗದಿಂ ಸಮಾ
ಸನ್ನನಿಜಾಯುವಂತೆ[೧] ಗುರುಪಂಚಕಮಂ ನೆನೆಯುತ್ತೆ ಭೋಂಕೆನ
ತ್ತನ್ನಶರೀರೆಯಾಗಿ ದಿವದಿಂದಿೞಿದಳ್ ಗಡಮಪ್ಪುದಂತು ಬೆಂ
ಬೆನ್ನನೆ ಬಾರದಂದು ಲಲಿತಾಂಗಿಯ ನಲ್ಮೆಗೆ ಬನ್ನಮಾಗದೇ ೧೭

ವ॥ ಅಂತು ನಿಶಾಂತತಾರಕಾಕಾರದಿಂದದೃಶ್ಯರೂಪಿಯಾಗಿ ಜಂಬೂದ್ವೀಪದ ಪೂರ್ವವಿದೇಹದ

ಬಾರದಿರಲು ನನ್ನ ಮನಸ್ಸು ಬಹುವಾಗಿ ಕರಗಿಹೋಗಿದೆ, ನೋಡು. ೧೫. ಮನ್ಮಥನ ಆಯುಧವಾದ ಲಲಿತಾಂಗನೆಲ್ಲಿ? ಅನಂಗನ ಬಾಣಪುಂಖವೆಲ್ಲಿ? ವಿಲಾಸದ ಖನಿಯೆಲ್ಲಿ? ಆ ಚತುರನು ಎಲ್ಲಿ ಹುಟ್ಟಿದನು? ವಿನೋದಾಗ್ರಣಿಯೂ ಸೊಬಗಿನ ಆಗರನೂ ಎಲ್ಲಿ? ನನ್ನ ಇಚ್ಛೆಯಾಣ್ಮನೆಲ್ಲಿ? ನನ್ನ ಹೃದಯೇಶನೆಲ್ಲಿ? ಲಲಿತಾಂಗವಲ್ಲಭನೆಲ್ಲಿ?" ಎಂದು ಹಲುಬಿದಳು. ವ॥ ತನ್ನ ಪ್ರಾಣಪ್ರಿಯನ ವಿಯೋಗಶೋಕದಿಂದ ದುಃಖಿತೆಯಾದ ಸ್ವಯಂಪ್ರಭೆಯ ಸಮೀಪಕ್ಕೆ ಮಹತ್ತರದೇವಿಯರು ಬಂದು ೧೬. "ದೇವಯುಗಳಕ್ಕೆ ಹಿಂದು ಮುಂದೆಂಬುದು ಈ ರೀತಿ ಸಂಭವಿಸುವುದು. ಎಲ್ಲವೂ ಹೀಗೆಯೇ. ನಿನ್ನ ಮೂಢತನಕ್ಕೆ ಧಿಕ್ಕಾರ. ಜಿನಪತಿಯನ್ನು ಭಕ್ತಿಯಿಂದೆರಗು. ಮುಂದಿನ ಜನ್ಮದಲ್ಲಿ ನಿನ್ನ ಗಂಡನನ್ನು ಪಡೆಯುವೆ" ಎಂದು ಹೇಳಿದರು. ವ॥ ಸ್ವಯಂಪ್ರಭೆಯು ಅದನ್ನೇ ಮನಸ್ಸಿನಲ್ಲಿ ತಂದುಕೊಂಡು, ೧೭. ಲಲಿತಾಂಗನ ವಿಯೋಗದಿಂದ ಸ್ವಯಂಪ್ರಭೆಯು ಆಯುಸ್ಸಿನ ಅಂತ್ಯವನ್ನು ಪಡೆದಳು. ಗುರುಪಂಚಕವನ್ನು ನೆನೆಯುತ್ತ ಶರೀರವನ್ನು ತೊರೆದು ದಿವದಿಂದಿಳಿದಳು. ಅದು ಸರಿ, ಹಿಂಬಾಲಿಸಿ ತಾನೂ ಬರದಿದ್ದರೆ ಆ ಲಲಿತಾಂಗಿಯ ಪ್ರೀತಿಗೆ ವಿಘ್ನವೊದಗದೆ? ವ॥ ಅಂತು ಬೆಳಗಿನ ಜಾವದ ತಾರೆಯಂತೆ ಅದೃಶ್ಯರೂಪೆಯಾಗಿ

---

೧ ಕ.-ರಂತ್ಯ.

ಪುಂಡರೀಕಿಣಿಯೆಂಬ ಪೊಲಿಲನಾಳ್ವ ವಜ್ರದಂತಭೂಪತಿಗಮಾತನ ಮನೋರಥಜನ್ಮಭೂಮಿಯೆನಿಸಿದ ಲಕ್ಷ್ಮೀಮತಿಮಹಾದೇವಿಗಂ,

ಕಾಮನ ಮಂತ್ರದೇವತೆಯೊ ಕಾಮನ ವಿದ್ಯೆಯೊ ಬದ್ಧರಂ ಗೆಲಲ್
ಕಾಮನ ನಿಚ್ಚಮರ್ಚಿಸುವ ಕೈದುವೊ ಕಾಮನ ಮೋಹಪಾಶಮೋ
ಕಾಮನ ಕಾಣ್ಬ ಕೈಪಿಡಿಯೊ ವಿಸ್ಮಯಮಾದಪುದೆಂಬಿನಂ ಮಗಳ್
ಶ್ರೀಮತಿಯೆಂಬಳಾಗಿ ನವಯೌವನಲಕ್ಷ್ಮಿಯನೆಯ್ದೆ ತಾಳ್ದಿದಳ್ ೧೮

ಅಲರ್ವ ಪದಕ್ಕೆ ಬಂದಲೆವ ತೆಂಬೆಲರಿಲ್ಲದ ಮಾಣ್ದ ಮಲ್ಲಿಕೋ
ಜ್ಜ್ವಳಮುಕುಳಕ್ಕಮಾದ ಪೊಸಗಂಪನುಗುಟ್ಟಿರಲಿರ್ದು ರಾಗದಿಂ
ನಲಿವ ಮದಾಳಿಯಿಲ್ಲದಿನಿಸಂ ತಡೆದಂತರಿಸಿರ್ದ ಪದ್ಮಕು
ಟ್ಮಲವಿಭವಕ್ಕಮೇಂ ದೊರೆಗೆ ವಂದುದೊ ಯೌವನದೇಳ್ಗೆ ಕನ್ನೆಯಾ ೧೯

ಈಪರಿಜೀತನುಚ್ಛವಿಯನೀ ಪೊಸಜವ್ವನವೀ ಬೆಡಂಗನೀ
ರೂಪುಮನೀ ಜವಿಳಾಸಮುಮನೇನೊಳಕೊಳ್ಗುಮೊ ತಪ್ಪದೀ ಕಳಾ
ಳಾಪೆ ಸುರೇಂದ್ರಕಾಂತೆಯೆನುತುಂ ನಡೆ ನೋೞ್ಪವರ್ಗಕ್ಷಿಪಕ್ಷ್ಮವಿ
ಕ್ಷೇಪಣಮೊಂದೆ ಮಾಡುವುದವಳ್ ಮನುಜಾಂಗನೆಯೆಂಬ ಭೇದಮಂ ೨೦

ಪಂಡಿತೆಯೆಂಬ ನೆಗೞ್ತೆಯ
ಕೊಂಡಾಟದ ದಾದಿ ತನ್ನನೋದಿಸುತಿರೆ ಕ
ಯ್ಕೊಂಡ ಕಳಾಪರಿಣತೆಯೊಳ್
ಪಂಡಿತೆಯಿಂದಾಕೆ ಪರಮಪಂಡಿತೆಯಾದಳ್ ೨೧

ಜಂಬೂದ್ವೀಪದಲ್ಲಿ ಪೂರ್ವವಿದೇಹದ ಪುಂಡರೀಕಿಣಿನಗರದ ರಾಜನಾದ ವಜ್ರದಂತನಿಗೂ ಆತನ ಮನೋರಥಜನ್ಮಭೂಮಿಯಾದ ಲಕ್ಷ್ಮೀಮತಿದೇವಿಗೂ ೧೮. ಶ್ರೀಮತಿಯೆಂಬ ಮಗಳಾಗಿ ಹುಟ್ಟಿ ನವಯೌವನಲಕ್ಷ್ಮಿಯನ್ನು ಪಡೆದಳು. ಅವಳು ಕಾಮನ ಮಂತ್ರದೇವತೆಯಂತೆಯೂ, ಕಾಮವಿದ್ಯೆಯಂತೆಯೂ, ಬದ್ಧರನ್ನು ಗೆಲ್ಲಲು ಮನ್ಮಥನು ದಿನವೂ ಅರ್ಚಿಸುವ ಕೈದುವಿನಂತೆಯೂ, ಕಾಮನ ಮೋಹಪಾಶದಂತೆಯೂ, ಕಾಮನ ಕೈಗನ್ನಡಿಯಂತೆಯೂ ಆಶ್ಚರ್ಯಕರವಾಗಿದ್ದಳು. ೧೯. ಆ ಕನ್ಯೆಯ ಯೌವನದೇಳ್ಗೆಯು, ಹೂವರಳುವಾಗ ಬೀಸುವ ತಂಗಾಳಿಯಿಲ್ಲದ ಮಲ್ಲಿಗೆಯ ಮೊಗ್ಗಿಗೂ, ನವಸುಗಂಧವನ್ನು ಬೀರುವ ಸಮಯದಲ್ಲಿ ಅನುರಾಗದಿಂದ ನಲಿವ ಮತ್ತು ಮಧುಕರವಿಲ್ಲದ ತಾವರೆಯ ಮೊಗ್ಗಿಗೂ ಸದೃಶವಾಯಿತು! (ಅನುರೂಪನಾದ ವರನಿಲ್ಲದ್ದರಿಂದ ಅವಳ ಯೌವನವು ವಿಶೇಷವಾಗಿ ಶೋಭಿಸಲಿಲ್ಲ ಎಂದು ಅಭಿಪ್ರಾಯ) ೨೦. ಈ ಆಕೃತಿಯು ಈ ದೇಹಕಾಂತಿಯನ್ನೂ, ಈ ಹೊಸ ಜವ್ವನವು ಈ ಸೊಬಗನ್ನೂ ರೂಪುವಿಳಾಸಗಳನ್ನೂ ಏನೊಳಕೊಂಡಿರುವುವೋ! ಈ ಕಲಭಾಷಿಣಿಯು ತಪ್ಪದೆ ಸುರೇಂದ್ರಕಾಂತೆಯೇ ಸರಿ. ವೀಕ್ಷಿಸಿ ನೋಡುವವರಿಗೆ ಮಾತ್ರ ಕಣ್ಣಿನ ಎವೆಮಾಡುವುದರಿಂದ ಇವಳು ಮನುಜಾಂಗನೆಯೆಂಬ ಭೇದವು ತೋರುವುದು. ೨೧. ಪಂಡಿತೆಯೆಂದು ಪ್ರಖ್ಯಾತಳಾದ ಓರ್ವ ದಾದಿಯು ಶ್ರೀಮತಿಯನ್ನು ಓದಿಸುತ್ತಿದ್ದಳು. ಆ ಶ್ರೀಮತಿ ಆ ಪಂಡಿತೆಗಿಂತ

ವ|| ಒಂದು ದಿವಸಮಾ ಕನ್ನೆ ತನ್ನ ಚೆಂಬೊನ್ನ ಕನ್ನೆಮಾಡದೋವರಿಯೊಳಗೆ ಗಂಗಾತರಙ್ಗ ಧವಳದುಕೂಲಪ್ರಪಚ್ಛದಾಚ್ಛಾದಿತಮೃದುತಳ್ಪತಳದೊಳ್ ಪವಡಿಸಿರೆ ನಿಶಾವಸಾನಸಮಯದೊಳ್ ತತ್ಪುರ ಬಹಿರ್ಭಾಗಸ್ಥಿತಮನೋಹರೋದ್ಯಾನಾಸೀನ ಯಶೋಧರಗುರುಗಳ ಕೇವಳಜ್ಞಾನೋತ್ಪತ್ತಿಯೊಸಗೆಗೆ,

ನೆರೆದ ಸಮಸ್ತದೇವನಿಕುರುಂಬದ ಯಾನವಿಮಾನಕಿಂಕಿಣೀ
ವಿರುತಿಯ ದುಂದುಭಿಧ್ವನಿಯ ಮಂಗಳಗೇಯದ ನಾದಮಂ ತರಂ
ತರದೊಳೆ ಪೊತ್ತು ಪೂಮಟೆಯ ಕಂಪನಿತಿಂಪು ಪೊದಬ್ಬಿ ಬಂದು ಬಂ
ಧುರಹಿಮಮಂದಗಂಧವಹಮೆಚ್ಚಱಿಸಿತ್ತಮೃತಾಂಶುವಕ್ತ್ರೆಯಂ ೨೨

ವ|| ಅಂತು ನವಜಳದನಿನದಮಂ ಕೇಳ್ದ ಹಂಸವನಿತೆಯಂತಾ ವನಿತೆ ಶಂಕೆವೆರಸು ಭೋಂಕನೆೞ್ದಿತ್ತು ಸೌಧೋಪರಿಮತಳದೊಳ್ ನಿಂದು ದೇವಾಗಮನಮಂ ನೋಡಲೊಡಂ ಪೂರ್ವ ಭವಸ್ಮರಣಮಾಗಿ ದೇವಲೋಕದ ಲಲಿತಾಂಗದೇವನಂ ನೆನೆದು,

ಹಾ ಲಲಿತಾಂಗ ದೇವವನಿತಾವದನಾಂಬುಜಭೃಂಗ ನಿನ್ನ ಲೀ
ಲಾಲಸದೃಷ್ಟಿಪಾತಮೆರ್ದೆಯೊಳ್ ನೆಲಸಿರ್ದುವು ನಿನ್ನ ಮಾತುಗಳ್
ಕೀಲಿಸಿದಂತೆವೊಲ್ ಮನದೊಳಿರ್ದುವು ನಿನ್ನನೆ ಕಾಣಲಾಗದೆಂ
ದಾ ಲಲಿತಾಂಗಿ ಬೆಚ್ಚನುಸಿರ್ದಚ್ಚರಿವೆತ್ತಿರೆ ಮೂರ್ಛೆವೋಪುದುಂ ೨೩

ವ|| ಚಾಮರದಡಪದ ಡವಕೆಯ ಕನ್ನಡಿಯ ಪರಿಚಾರಿಕೆಯರುಮೊಡನಾಡಿ ಬಳೆದ ಮೇಳದ ಕೆಳದಿಯರುಮತಿವಿಕಳಮತಿಗಳಾಗಿ ಪರಿತಂದು ಮಲಯಜರಸಲುಳಿತಕದಳೀದಳವ್ಯಜನಮಂದ

ಕಲಾಪರಿಣತಿಯಲ್ಲಿ ಪರಮಪಂಡಿತೆಯಾದಳು. ವ|| ಒಂದು ದಿನ ಆ ಕನ್ಯೆಯು ತನ್ನ ಸುವರ್ಣದ ಅಂತಃಪುರದ ಕೊಠಡಿಯಲ್ಲಿ ಗಂಗಾನದಿಯ ಅಲೆಗಳಂತೆ ಬಿಳುಪಾದ ದುಗುಲದಿಂದ ಹಾಸಲ್ಪಟ್ಟ ಕೋಮಲವಾದ ಹಾಸಿಗೆಯಲ್ಲಿ ಮಲಗಿದ್ದಳು. ನಿಶಾಂತದಲ್ಲಿ ಆ ಪಟ್ಟಣದ ಹೊರವಲಯದ ಸುಂದರೋದ್ಯಾನದಲ್ಲಿ ಧ್ಯಾನನಿಮಗ್ನರಾದ ಯಶೋಧರಗುರುಗಳ ಕೇವಲಜ್ಞಾನೋತ್ಪತ್ತಿಯುತ್ಸವ ನಡೆಯುತ್ತಿತ್ತು. ೨೨. ದೇವತೆಗಳ ಯಾನಾರ್ಥವಾದ ವಿಮಾನಗಳಲ್ಲಿ ಕಿರುಗೆಜ್ಜೆಗಳ ನಾದಗಳನ್ನೂ, ದುಂದುಭಿಗಳ ಧ್ವನಿಯನ್ನೂ, ಮಂಗಳಗೇಯದ ಗಾನವನ್ನೂ, ಹೂಮಳೆಯ ಕಂಪನ್ನೂ ಹೊತ್ತು ತಂದ ಮಂದಮಾರುತನು ಬೀಸಿ ಆ ಚಂದ್ರಮುಖಿಯನ್ನು ಎಚ್ಚರಿಸಿದನು. ವ|| ಅಂತು ಹೊಸ ಮೋಡದ ಶಬ್ದವನ್ನು ಕೇಳಿದ ಹಂಸಿಯಂತೆ ಆ ತರುಣಿ ಶಂಕಾತಂಕಗಳಿಂದ ಕೂಡಿ ಭೋಂಕನೆದ್ದು ಪ್ರಾಸಾದದ ಮೇಲ್ಭಾಗದಲ್ಲಿ ದೇವತೆಗಳು ಬರುವುದನ್ನು ಕಂಡಳು. ಒಡನೆ ಪೂರ್ವಜನ್ಮದ ಸ್ಮೃತಿಯುಂಟಾಗಿ ದೇವಲೋಕದ ಲಲಿತಾಂಗದೇವನನ್ನು ನೆನೆದಳು. ೨೩. “ಲಲಿತಾಂಗ! ನೀನು ದೇವವನಿತೆಯರ ಮೊಗದಾವರೆಯ ದುಂಬಿ. ನಿನ್ನ ಲೀಲಾವಾಸವಾದ ದೃಷ್ಟಿಪಾತವು ನನ್ನೆದೆಯನ್ನು ಹೊಕ್ಕಿದೆ. ನಿನ್ನ ಮಾತುಗಳು ನನ್ನೆದೆಯಲ್ಲಿ ನೆಟ್ಟಂತಿವೆ. ಆದರೆ ನೀನು ಮಾತ್ರ ನನ್ನ ಕಣ್ಣುಗಳಿಗೆ ಗೋಚರಿಸದಿರುವೆ” ಎಂದು ಆ ಲಲಿತಾಂಗಿಯು ಮೆಲ್ಲನುಸುರಿ ಮೂರ್ಛೆಹೋದಳು. ವ|| ಚಾಮರ, ತಾಂಬೂಲದ ಪೆಟ್ಟಿಗೆ, ಪೀಕದಾನಿ ಮತ್ತು ಕನ್ನಡಿಗಳನ್ನು ಹೊತ್ತ ಪರಿಚಾರಿಕೆಯರೂ ಒಡನಾಡಿಗಳಾದ ಗೆಳತಿಯರೂ

ಮಾರು ದೋಳನದಿನೆಂತಾನುಂ ಮೂರ್ಛೆಯಿಂದೆಚ್ಚಱಿಸಿ ಬೆಸಗೊಳೆ ಮಱುಮಾತುಗುಡದೆಯುಂ ಮನಂಗುಡದೆಯುಮಿರೆ ನಡುಗಿ ಪರಿದು ಕನ್ಯಾಂತಃಪುರಮಹತ್ತರದೇವಿಯರ್ ಬಂದು ವಜ್ರದಂತಂಗಂ ಲಕ್ಷ್ಮೀಮತಿಮಹಾದೇವಿಗಮಱಿಪಿದೊಡವರಿರ್ವರುಂ ಸಸಂಭ್ರಮಂಬೆರಸು ಬಂದು,

ಇನಿತೇಕಾದುದೊ ನೋವಿದೆಮ್ಮ ದೆಸೆಯಿಂ ಮೇಣಾದುದೋ ಮೇಣ್ ಸಖೀ
ಜನದಿಂ ಬಂದುದೊ ನಿನ್ನ ಬಂಧುಜನದಿಂ ಮೇಣ್ ಪುಟ್ಟಿತೋ ಮತ್ತುಸೃ
ಜ್ಜನದಿಂ ಮೇಣ್ ತೊಡರ್ದತ್ತೊ ವಿಸ್ಮಯಮಿದೇಂ ಪೇೞೆಂಬುದುಂ ಕೂಡೆ ಕ
ಣ್ಣನಿಯಂ ಸೂಸಿದಳೊಂದುಮಂ ನುಡಿದಳಿಲ್ಲಾ ಕನ್ನೆ ತನ್ನಂದಮಂ ೨೪

ವ|| ಅಂತದಂ ಕಂಡು[೧] ಮತ್ತಂ :

ಇದಿರೇೞಲ್ ಪೊಡೆವಟ್ಟು ಬಂದಿದಿರ್ಗೊಳಲ್ ಬಾಯ್ವಾಯೊಳಾದಲ್ಕಱೊಂ
ದೊದವಿಂ ತಂಬುಲಮಂ ಕೊಳಲ್ ಮಱೆದು ನೀನಿರ್ದಂದಮೇಂ ಕಂದಿ ಕುಂ
ದಿದುದೇಕೀ ಲಲಿತಾಂಗಮೀ ಮೊಗಮಿದಿಂತೇತರ್ಕೆ ಬಾಡಿರ್ದುದಾ
ವುದು ನಿನ್ನುಬ್ಬೆಗಮೆಮ್ಮ ಬಾೞೆನಿತೆ ನೀನಿಂತಿರ್ದೊಡಾವಾಸೆಯೋ ೨೫

ಎಂಬುದುಮಂಬುದಾಗಮದ ಕೋಗಿಲೆಯಂತಿರೆ ಮೂಗುವಟ್ಟು ನೀ
ಮೆಂಬುದನೆನ್ನಿಮೆಂದುಸಿರದಿರ್ದ ತನೂಜೆಯ ಭಾವಮಂ ಮಹೀ
ಶಂ ಬಗೆದೀಗಳೀ ಕಿಱಿಯವಳ್ ನಮಗೊಂದುಮನಿಂತುಟೆನ್ನಳಿ
ನ್ನುಂ ಬಗೆಗೆಲ್ವಮನ್ನೆವರಮುಮ್ಮಳಿಸುತ್ತಿರದಿರ್ ತಳೋದರೀ ೨೬

ದುಃಖಾಕ್ರಾಂತಹೃದಯರಾಗಿ ಓಡಿಬಂದರು. ಶ್ರೀಗಂಧಸಯುಕ್ತವಾದ ಬಾಳೆಯ ಬೀಸಣಿಗೆಗಳಿಂದ ಬೀಸಿ ಮಂದಾನಿಲದಿಂದ ಅವಳ ಮೂರ್ಛೆಯನ್ನು ಹೋಗಲಾಡಿಸಿದರು. ಮಾತನಾಡಿದರೂ ಅವಳು ಪ್ರತ್ಯುತ್ತರಗೊಡದೆ ಯಾವುದಕ್ಕೂ ಮನಗೊಡದೆ ಸುಮ್ಮನಿದ್ದಳು. ಕನ್ಯಾಂತಃಪುರದ ಮಹತ್ತರಿಯರು ನಡುಗುತ್ತ ಬಂದು ವಜ್ರದಂತ, ಲಕ್ಷ್ಮೀಮತಿದೇವಿಯರಿಗೆ ಈ ಸುದ್ದಿಯನ್ನು ತಿಳಿಸಿದರು. ಅವರಿಬ್ಬರೂ ಸಂಭ್ರಾಂತರಾಗಿ ಬಂದು, ೨೪. "ಇಷ್ಟು ಸಂಕಟವೇಕೆ ತಲೆದೋರಿತು? ಇದು ನಮ್ಮಿಂದೊದಗಿತೋ, ಪರರಿಂದಾಯಿತೋ, ಸಖೀಜನರಿಂದಾಯಿತೋ, ಬಂಧುಜನರಿಂದ ಪ್ರಾಪ್ತವಾಯಿತೋ, ಮಿತ್ರವರ್ಗದಿಂದ ಸಂಘಟಿಸಿತೋ?" ಎಂದು ವಿಸ್ಮಯದಿಂದ ಕೇಳಿದರು. ಶ್ರೀಮತಿಯು ಕಣ್ಣೀರನ್ನು ಬಿಟ್ಟಳೇ ಹೊರತು ಮತ್ತೇನನ್ನೂ ನುಡಿಯಲಿಲ್ಲ. ವ|| ಅದನ್ನು ನೋಡಿ ಮತ್ತೆ ೨೫. "ಎದುರಿಗೆ ಬಂದರೆ ಎದ್ದು ಬಾರದಿರುವೆ. ಅನ್ಯೋನ್ಯ ಪ್ರೀತಿಯಿಂದ ತಂಬುಲವನ್ನು ತೆಗೆದುಕೊಳ್ಳಲು ಮರೆತಿರುವೆ? ನೀನಿದ್ದ ಅಂದವೆಂಥದು? ಅದೇಕೆ ಕಂದಿ ಕುಂದಿದ್ದೀಯೆ? ಈ ಲಲಿತಾಂಗವೂ ಮುಖವೂ ಏಕೆ ಬಾಡಿವೆ? ನಿನ್ನ ಉದ್ವೇಗಕ್ಕೆ ಕಾರಣವೇನು? ನೀನು ಹೀಗಿದ್ದರೆ ನಮ್ಮ ಬಾಳಿಗೇನು ಆಶೆಯುಂಟು?" ಎಂದು ತಾಯಿ ತಂದೆಗಳು ಕೇಳಿದರು. ೨೬. ಆದರೂ ಮಳೆಗಾಲದ ಕೋಗಿಲೆಯಂತೆ ಶ್ರೀಮತಿಯು ಮೂಕಳಾಗಿದ್ದಳು. "ನೀವೆನ್ನುವುದನ್ನು ಎನ್ನಿ,

---

೧ ಕ-ಅದಂ ಕಂಡು,

ವ॥ ಎಂದು ತನ್ನಗ್ರಮಹಿಷಿಯ ಮನಮನಾಱೆ ನುಡಿದು ಪಂಡಿತೆಯಂ ನೀನೀಕೆಯುಮಂ ನಿನ್ನ ಬಲ್ಲ ಮಾಟ್ಕೆಯೊಳೆಲ್ಲಮೆಲ್ಲಂದದೊಳಮೊಡಂಬಡಿಸಿ ಮನಂಗಲ್ವುದೆಂದು ನಿಯೋಜಿಸಿ ಪೋದಂ, ಅನ್ನೆಗಮಾ ಮಹೀಪತಿಯ ಪೂರ್ವಜನ್ಮದ ಪುಣ್ಯೋದಯದಿಂ,

ಗುರುಗೆ ಯಶೋಧರಮುನಿಪತಿ
ಗುರುಕೇವಲಬೋಧಮಾಯುಧಾಗಾರದೊಳಂ
ಖರಕರಸಮಪ್ರಭಂ ಚ
ಕ್ರರತ್ನಮೊಡವುಟ್ಟೆ ಪುಟ್ಟಿದೆರಡೊಸಗೆಯೊಳಂ ೨೭

ಆವುದು ಮುಖ್ಯಂ ವಿಪುಳಫ
ಳಾವಹಮೆಂಬೆರಡುಮಂ ವಿಚಾರಿಸುವ ನೃಪಂ
ಗಾವುದು ಪುಣ್ಯ[1]ದ ಬಂಧಮ
ನಾವರಿಸುವ ಜಿನಸಪರ್ಯೆ ತೊಡರ್ದುದು ಬಗೆಯೊಳ್[2] ೨೮

ತೊಡರೆ ನೃಪನಾಪ್ತಪರಿಜನ
ಮೊಡವರೆ ಜಿನಪತಿಗೆ ಪೂಜೆಯಂ ಮಾಡಿ ಮಗು
ಟ್ದಡಿಗೆಱಗಲೊಡಂ ಪಡೆದಂ
ಗಡುಮವಧಿಯನಧಿಕಭಕ್ತರೇನಂ ಪಡೆಯರ್ ೨೯

ವ॥ ಅಂತು ವಜ್ರದಂತಚಕ್ರವರ್ತಿ ಲಬ್ಧಾವಧಿಲೋಚನಂ ತ್ರೈಲೋಕ್ಯಲೋಚನಂಗೆ ಸಾಷ್ಟಾಂಗಪ್ರಣತನಾಗಿ ಮಗುಟ್ದು ಬಂದು ಚಕ್ರಪೂಜೆಯಂ ನಿರ್ವರ್ತಿಸಿ ಪರಾಕ್ರಮಾಕಾಂತಾರಾತಿ

ನಾನಂತೂ ಮಾತನಾಡೆನು" ಎಂಬ ತನೂಜೆಯ ಭಾವವನ್ನು ತಂದೆಯು ತಿಳಿದನು, "ಇವಳು ಕಿರಿಯಳು; ನಮಗೇನನ್ನೂ ಹೇಳಳು. ಇವಳ ಮನಸ್ಸನ್ನು ಅರಿತುಕೊಳ್ಳೋಣ. ಅಲ್ಲಿಯವರೆಗೆ ನೀನು ಚಿಂತಿಸದಿರು" ಎಂದು ರಾಜನು ಮಡದಿಗೆ ಹೇಳಿದನು. ವ॥ ಎಂದು ತನ್ನ ಪತ್ನಿಗೆ ತಕ್ಕಂತೆ ನುಡಿದು ಪಂಡಿತೆಯನ್ನು ಕರೆದು ತಿಳಿದೆಲ್ಲ ರೀತಿಯಿಂದಲೂ ಮೃದುವಚನಗಳಿಂದಲೂ ಇವಳ ಮನಸ್ಸನ್ನೊಡಂಬಡಿಸು ಎಂದು ನಿಯೋಜಿಸಿ ಹೋದನು. ಆ ರಾಜನ ಪೂರ್ವಪುಣ್ಯದಿಂದ ೨೭. ಗುರುವಾದ ಯಶೋಧರಮುನಿಪತಿಗೆ ಕೇವಲಜ್ಞಾನೋತ್ಪತ್ತಿಯುಂಟಾಯಿತು. ತನ್ನ ಆಯುಧಭವನದಲ್ಲಿ ಸೂರ್ಯಸದೃಶವಾದ ಕಾಂತಿಯುಳ್ಳ ಚಕ್ರರತ್ನವೂ ಹುಟ್ಟಿತು. ೨೮. ಕೇವಲಬೋಧ ಚಕ್ರಪ್ರಾಪ್ತಿಗಳೆರಡರ ಮಧ್ಯದಲ್ಲಿ ಯಾವುದು ಮುಖ್ಯ, ಯಾವುದು ಹೆಚ್ಚು ಫಲಪ್ರದ ಎಂದು ರಾಜನಿಗೆ ಚಿಂತೆಯೊದಗಿತು. ಜಿನಸಪರ್ಯೆಯೇ ಪುಣ್ಯಪ್ರದ ಎಂಬ ಬುದ್ಧಿಯುಂಟಾಯಿತು. (ಗುರುಗಳನ್ನು ಪೂಜಿಸಬೇಕೆ? ಚಕ್ರರತ್ನವನ್ನೆ? ಏಕಕಾಲದಲ್ಲಿ ಎರಡೂ ಸಾಧ್ಯವಿಲ್ಲವೆಂದು ರಾಜನಿಗೆ ಚಿಂತೆ). ೨೯. ಆಪ್ತಪರಿಜನರೊಡನೆ ರಾಜನು ಜಿನಸಪರ್ಯೆಯನ್ನು (ಯಶೋಧರ ಕೇವಲಿಗಳ ಪೂಜೆಯನ್ನು) ಭಕ್ತಿಯಿಂದ ಮೊದಲು ಮಾಡಿದನು. ಅವರ ಅಡಿಗೆರಗಿ ಅವಧಿಜ್ಞಾನವನ್ನು ಪಡೆದನು. ಭಕ್ತರೇನನ್ನು ತಾನೆ ಪಡೆಯರು? ವ॥ ವಜ್ರದಂತಚಕ್ರವರ್ತಿಯು ಅವಧಿಜ್ಞಾನದ

---

೧ ಕ.-ಗಾವಗಳಪುಣ್ಯ; ಗ.-ಗಾವಗದುಪುಣ್ಯ. ೨ ಕ.-ಮನದೊಳ್

ಚಕ್ರನುಂ ಸಾಧಿತದಿಕ್ಚಕ್ರನುಮಾಗಲ್ವೆಗೆದು ಗಜತುರಗರಥಪದಾತಿದಿವಿಜವಿದ್ಯಾಧರಬಲಂಬೆರಸು ದಿಗ್ವಿಯೋದ್ಯೋಗದಿಂ ಪೋದಂ[೧] ಅನ್ನೆಗಮಿತ್ತ ಪಂಡಿತೆಯುಮತಿಶೋಕಾಕ್ರಾಂತಮತಿಯಂ ಶ್ರೀಮತಿಯನೊರ್ಬಳನೆ ಕನ್ನೆಮಾಡದ ಪೆಱಗಣ ನಂದನವನಕ್ಕುಯ್ದದಱೊಳಗೆ,

॥ಶಾರ್ದೂ॥

ತೋಳ ನೀಳದ ಕೆಂದಳಿರಿಂದ ಸಂದಣಿಸಿರ್ದ ಮದಾಳಿಯಿಂ
ದೋಳದಿಂ ಮಳಯಾನಿಲಲೀಲಾಂದೋಳದಿನೊಪ್ಪೆ ಮನೋಭವಂ
ಗಾಳುಮಿಪಂವೊಲಿರ್ದತಿರಕ್ತಾಶೋಕದ ಸುತ್ತಿನೊಳಿರ್ದ ರೂ
ಕ್ಷಾಳಕಂಗಳನೋಸರಿಸುತ್ತುಂ ಮೆಲ್ಲನೆ ಮೇಳಿಸಿ ಕನ್ನೆಯಂ ೩೦

ನುಡಿದಳ್ ನೀನೆನಗಿಂತು ನಿನ್ನ ಬಗೆಯಂ ಕಾದಕ್ಕ ಪೇೞಾರೊಳಿಂ
ನುಡಿವೋ ಬೇಸಱನೆಯ್ದೆ ಕೂರ್ಪವರನೇನೆನ್ನಿಂದಮಿನ್ನಗ್ಗಳಂ
ಪಡೆವೋ ಮೌನದೊಳಿಂತು ನೀನಿರೆ ರುವದ್ಭೃಂಗಾಳಿಯಿಂ ಪತ್ತುವಿ
ಟ್ಟುಡುಗಿರ್ದಬ್ಜಮನೆಯ್ದೆ ಪೋಲ್ದುದು ಭವದ್ವಕ್ತ್ರಾಬ್ಜಮನಬ್ಜಾನನೇ ೩೧

॥ಪೃಥ್ವಿ॥

ನವೋತ್ಪಳದಳೇಕ್ಷಣೇ ಮನದೊಳಾದ ನಿರ್ವೇಗಮೊಂ
ದವಶ್ಯಮದು ಕೂರ್ಪರೊಳ್ ನುಡಿದೊಡಲ್ಲದೇಂ ಪೋಕುಮೇ
ನಿವೇದಿಸು ನಿಜಾಂತರಂಗಗತಮಪ್ಪುದಂ ನೀನಿದಂ
ವಿವೇಕವಿಕಳರ್ಕಳಂತಲೆಗೆ ಚಿತ್ತದೊಳ್ ತಾಳ್ದುವೋ ೩೨

ದೃಷ್ಟಿಯನ್ನು ಪಡೆದು 'ತ್ರೈಲೋಕ್ಯಲೋಚನನನ್ನು (ಅರ್ಹಂತ) ನಮಸ್ಕರಿಸಿದನು. ಬಳಿಕ ಚಕ್ರಪೂಜೆಯನ್ನು ನೆರವೇರಿಸಿದನು. ತೋಳ್ಬಲದಿಂದ ಶತ್ರುಪಕ್ಷವನ್ನು ಗೆದ್ದು ದಿಙ್ಮಂಡಲವನ್ನು ವಶಪಡಿಸಿಕೊಳ್ಳುವುದಕ್ಕಾಗಿ ಚತುರ್ಬಲದೊಡನೆಯೂ, ದಿವಿಜವಿದ್ಯಾಧರರೊಡನೆಯೂ ದಿಗ್ವಿಜಯಕ್ಕಾಗಿ ಹೊರಟನು. ಇತ್ತ ಪಂಡಿತೆಯು ಶೋಕಾತುರಳಾದ ಶ್ರೀಮತಿಯನ್ನು ಅಂತಃಪುರದ ಹೊರಗಣ ಉದ್ಯಾನಕ್ಕೆ ಒಯ್ದಳು. ೩೦. ತೋಳಂತೆ ಉದ್ದವಾಗಿರುವ ಕೆಂಪುಚಿಗುರುಗಳಿಂದಲೂ, ಸಂದಣಿಸಿದ್ದು ಮತ್ತವಾದ ದುಂಬಿಗಳ ಇಂದೋಳ ರಾಗದಿಂದಲೂ, ಮಲಯಾನಿಲನ ಬೀಸಾಟದಿಂದಲೂ ಆ ಪ್ರದೇಶವೊಪ್ಪುತ್ತಿತ್ತು. ಅನಂಗನ ಆಳೋ ಎಂಬಂತಿರ್ದ ರಕ್ತಾಶೋಕದ ಮಧ್ಯದಲ್ಲಿ ಶ್ರೀಮತಿಯ ಒರಟಾದ ಮುಂಗುರುಳನ್ನು ಪಂಡಿತೆಯು ಪಕ್ಕಕ್ಕೆ ಸರಿಸುತ್ತ, ೩೧. "ವತ್ಸೆ, ನೀನು ನನಗೆ ನಿನ್ನ ಸ್ಥಿತಿಯನ್ನು ತಿಳಿಸದೆ ಮಾಚಿದರೆ, ಇನ್ನು ಯಾರೊಡನೆ ಬೇಸರವನ್ನು ಹೇಳಿಕೊಳ್ಳುವೆ. ನನಗಿಂತ ಹೆಚ್ಚಿನ ಪ್ರೀತಿಪಾತ್ರರು ಯಾರಿದ್ದಾರೆ? ನೀನು ಮೌನದಿಂದಿರುವೆಯೇಕೆ? ಕಮಲಮುಖಿ! ನಿನ್ನ ಮುಖವು ದುಂಬಿಗಳ ಝೇಂಕಾರವಿಲ್ಲದ ಕಮಲವನ್ನು ಹೋಲುವುದು. ೩೨. ಅರಳಿದ ಕನ್ನೈದಿಲೆಯಂತ ಕಣ್ಣುಳ್ಳವಳೇ! ಮನದಲ್ಲಿ ಮೂಡಿದ ನಿರ್ವೇಗವನ್ನು ಪ್ರೀತಿಪಾತ್ರರಾದವರಲ್ಲಿ

---

೧ ಖ.-ದಿಗ್ವಿಜಯಕ್ಕೆ ಪೋದಂ. ೨ ಕ.-ಗೊಳಮಿರ್ಪ.

ವ॥ ಎಂಬುದಂ ಸ್ವಭಾವಮುಗ್ಧೆ ಮುಗ್ಧವದನವನಜಮನೆಱಗಿ ತನ್ನ ಮುನ್ನಿನ ಜನ್ಮಂಗಳನಿಂತೆಂದು ಬರೆದು ತೋರ್ಪಂತೆ ನೆಲನಂ ಬರೆಯುತ್ತುಮಪಗತಮುಖಮುದ್ರೆಯಾಗಿ,

॥ಉಜ್ವಳ॥

ಬಗೆಯ ಬಯ್ಕೆಯನೊಪ್ಪಿಸುವಾಗಳ್ ನೀನೇ ವಲಂ ದೊರೆ ಪೇೞ್ವಪೆಂ
ಬಗೆದು ಕೇಳ್ ನಡೆ ನೋಡಲೊಡಂ ದೇವಾಗಮಮಂ ಪಿರಿದೊಂದು ದಂ
ದುಗದ ಸಂದಣಿಯಿಂದಮೆ[1] ಮತ್ಪ್ರಾಗ್ಜನ್ಮಕಥಾವಳಿಯೆಲ್ಲಮಂ
ಬಗೆದು ನೋವೆನಗಾದುದು ನೋವಂತುಂತೆನಗಾವುದು ಬೇವಸಂ ೩೩

ವ॥ ಅದೆಂತೆಂದೊಡೆ ಆನೀ ಭವಕ್ಕೆ ಮೂಱನೆಯ ಭವದೊಳ್ ಈ ಧಾತಕೀಷಂಡದ ಮೂಡಣ ಮಂದರದ ಅಪರವಿದೇಹದ ಸೀತಾನದಿಯ ಬಡಗಣ ತಡಿಯ ಗಂಧಿಳವಿಷಯದ ಪಾಟಳಿಗ್ರಾಮದೊಳ್ ನಾಗದತ್ತನೆಂಬ ಪರದಂಗಮಾತನ ಪರದಿತಿ ವಸುದತ್ತೆಗಂ ಪುಟ್ಟಿದ ನಂದ, ನಂದಿಮಿತ್ರ, ನಂದಿಷೇಣ, ವರಷೇಣ, ಜಯಸೇನರೆಂಬಯ್ವರ್ ತನಯರಿಂದಂ ಮದನಕಾಂತೆಯುಂ, ಶ್ರೀಕಾಂತೆಯುಮೆಂಬಿರ್ವರ್ ತನೂಜೆಯರಿಂದಂ ಕಡೆಯ ಗರ್ಭದೊಳ್ ಆಂ ನೆಲಸಲೊಡಂ ಅಸ್ಮದನ್ಯಜನ್ಮೋಪಾರ್ಜಿತದಾರುಣಕರ್ಮಪ್ರೇರಣೆಯಿಂದಂ,

ಇಡಿದಡರೆ ಕಾಯ್ತ ಚೂತಮ
ನಡಸಿ ಸಿಡಿಲ್ ಪೊಯ್ದುದೆನಿಪೆ ನೆವನೆವದಿಂದೆ
ನ್ನೊಡವುಟ್ಟಿದರುಂ ತಂದೆಯು
ಮಡಗಿರ್ದರ್ ಖಳಕೃತಾಂತದಂತಾಂತರದೊಳ್ ೩೪

ಹೇಳಿಕೊಳ್ಳದಿದ್ದರೆ ಹೋಗುವುದೆಂದು? ನಿನ್ನ ಹೃದಯಾಂತರಾಳದಲ್ಲಿರುವುದನ್ನು ಪ್ರಕಟಪಡಿಸು. ವಿವೇಕಶೂನ್ಯರ ಹಾಗೆ ಅದನ್ನೇಕೆ ತಳೆದಿರುವೆ?" ವ॥ ಎಂದು ಹೇಳಿದಳು. ಸ್ವಭಾವಮುಗ್ಧಳಾದ ಶ್ರೀಮತಿಯು ತನ್ನ ಸುಂದರಮುಖಕಮಲವನ್ನು ಬಾಗಿಸಿ ತನ್ನ ಹಿಂದಿನ ಜನ್ಮಗಳ ಸಂಗತಿಗಳನ್ನು ಬರೆದು ತೋರಿಸುವಂತೆ ನೆಲದಮೇಲೆ ಬರೆಯುತ್ತ ತಲೆಬಗ್ಗಿಸಿ ಹೀಗೆಂದಳು: ೩೩. "ಹೃದಯಾಂತರಾಳವನ್ನು ಬಿಚ್ಚಿ ನುಡಿಯಲು ನೀನೇ ನನಗೆ ತಕ್ಕವಳು, ಆಲಿಸಿ ಕೇಳು. ದೇವಾಗಮನವನ್ನು ಕಂಡು ಅನೇಕ ತೊಡಕುಗಳಲ್ಲಿ ಸಿಕ್ಕಿದ ನನ್ನ ಪೂರ್ವಜನ್ಮದ ಕಥಾವಳಿಯೆಲ್ಲವನ್ನೂ ನೆನೆದು ದುಃಖಾಕ್ರಾಂತಳಾದೆನು. ಬೇರೆ ವಿಧದಲ್ಲಿ ನನಗೆ ದುಃಖವೇನಾದೀತು? ವ॥ ಅದು ಹೇಗೆಂದರೆ; ಈ ಜನ್ಮಕ್ಕೆ ಮೂರನೆಯದಾದ ಜನುಮದಲ್ಲಿ ಧಾತಕೀಷಂಡದ ಪೂರ್ವದಿಕ್ಕಿನ ಮಂದರಪರ್ವತದ ಪಶ್ಚಿಮದಿಕ್ಕಿಗೆ ಸೀತೋದಾನದಿಯ ಉತ್ತರದಡದಲ್ಲಿನ ಗಂಧಿಲದೇಶದ ಪಾಟಲೀಗ್ರಾಮದಲ್ಲಿ ನಾಗದತ್ತನೆಂಬ ವ್ಯಾಪಾರಿ ಇದ್ದನು. ಆತನ ಹೆಂಡತಿ ವಸುದತ್ತೆ. ಅವರಿಗೆ ಹುಟ್ಟಿದ ನಂದ, ನಂದಿಮಿತ್ರ, ನಂದಿಷೇಣ, ವರಸೇನ ಮತ್ತು ಜಯಸೇನನೆಂಬ ಐದು ಗಂಡುಮಕ್ಕಳೂ, ಮದನಕಾಂತೆ, ಶ್ರೀಕಾಂತೆಯರೆಂಬ ಇಬ್ಬರು ಹೆಣ್ಣುಮಕ್ಕಳೂ ಆದಮೇಲೆ ಕೊನೆಯ ಗರ್ಭದಲ್ಲಿ ನಾನು ಸೇರಿದೆನು. ಜನ್ಮಾಂತರದ ಉಗ್ರಕರ್ಮದಿಂದ. ೩೪. ಕಾಯಿಬಿಟ್ಟ ಮಾವಿನಗಿಡಕ್ಕೆ ಸಿಡಿಲೆರಗಿತೋ ಎನ್ನುವಂತೆ ನನ್ನ ಒಡಹುಟ್ಟಿದವರೂ ತಂದೆಯೂ ಬೇರೆಬೇರೆ ನೆವದಿಂದ ಯಮನ ದಾಡೆಗೆ ತುತ್ತಾದರು.

---

೧ ಕ.-ಸಂದೆಯದಿಂದಮೆ, ಗ.-ಸಂದೆಗದಿಂದಮೆ.

ವ॥ ಅಂತು ಮದೀಯಜನನಿಯುಂ ಜನನಿಯ ಜನನಿಯುಮುೞಿಯಲುಮುೞಿದರು ಮೆಲ್ಲಮೊರ್ವರುೞಿಯದಂತೆ ಪೋಪುದುಮರಸರ ದೆಸೆಯಿಂ ಮನೆಯುಂ ಕವರ್ತೆವೋಪುದುಂ ಪೆಱರ ಕೀೞಿಲೊಳಿಮ್ಮಟ್ಟೆಯುಂ ಮುತ್ತಟ್ಟೆಯುಂ ಸಾರ್ದು ಬದಗುಗೆಯ್ದುಣೆ ನವಮಾಸಂ ನೆಱೆದಾಂ ಪುಟ್ಟುವುದುಂ ಎನ್ನ ಮೆಯ್ಯ ದುರ್ಗಂಧಕ್ಕೆ ಪೇಸಿ ಕಂಡವರೆಲ್ಲಮೆೞೆದು ಕಳೆಯೆ ಪರೇತವನಭೂಮಿಯೊಳ್ ಜೀರ್ಣಶೀರ್ಣಚೀರಂಗಳಿಂದಂ ಪುದಿದಿರಿಸಿ ಪೋಗಿ ತಾವಿರ್ಬರುಂ ತಿರಿದು ತಂದಿಕ್ಕಿದೆಂಜಲಿವುಟುಮಂ ತಿಂದು ಪೆಸರುಮಿಲ್ಲದೆ ನಿರ್ನಾಮಿಕೆಯೆಂದು ಪೆಸರಾಗಿ ಬಳೆಯೆ,

ಅವರುಮನಂತಕನೊಯ್ಕನೆ
ಸವಿನೋೞ್ಪುದುಮಾನುಮೆನ್ನ ಪಾಪದ ಫಲಮಂ
ಸವಿನೋಡೆ ಪೊಕ್ಕೆನೊಡನೊಗೆ
ದ ವಿಚಾರಣ[1]ಚರಿತಮೆಂಬ ಗಹನಾಂತರಮಂ ೩೫

ವ॥ ಅಂತು ಪೊಕ್ಕದರ್ಕೆ ತಿಳಕಮಿರ್ಪಂತಿರ್ದಂಬರತಿಳಕಮೆಂಬ ಗಿರಿವರದ ಮೇಗೆ,

ವಿಸ್ರಸ್ತಬಹಳದೋಷತ
ಮಿಸ್ರರನಖಿಳರ್ಧಿಗುಣವಿಭೂಷಣ[2]ರಂ ಪು
ಣ್ಯಾಸ್ರವಕಾರಣರಂ ಪಿಹಿ
ತಾಸ್ರವಮುನಿಪತಿಗಳಂ ಮನಂಬಿಡೆ ಕಂಡೆಂ ೩೬

ವ॥ ಕಂಡು ಪೊಡೆವಡುವನಿತುವರಮೆನ್ನ ಮನದೊಳಱಿವಿಲ್ಲದೆಯುಂ ಅಸವಸದೊಳಾದ ಮನದೆಱಕದಿನೆಱಗಿ ಪೊಡೆವಟ್ಟು,

ವ॥ ಹಾಗೆ ನನ್ನ ತಾಯಿಯೂ ಅಜ್ಜಿಯೂ ಉಳಿದರು. ಉಳಿದೆಲ್ಲರೂ ಒಬ್ಬೊಬ್ಬರಾಗಿ ತೆರಳಿದರು. ಅರಸರ ಕಾಟದಿಂದಾಗಿ ಮನೆಯೂ ಲೂಟಿಯಾಯಿತು. ನಮ್ಮಮ್ಮನೂ ಅಜ್ಜಿಯೂ ಪರರ ಸೇವಾಗೃಹದಲ್ಲಿದ್ದುಕೊಂಡು ಜೀವಿಸಲಾರಂಭಿಸಿದರು. ಒಂಬತ್ತು ತಿಂಗಳಾಗಿ ನಾನು ಹುಟ್ಟಿದೆನು. ನನ್ನ ದೇಹದ ದುರ್ಗಂಧಕ್ಕೆ ನೋಡಿದವರೆಲ್ಲರೂ ಅಸಹ್ಯಪಟ್ಟು ನನ್ನನ್ನು ದೂರೀಕರಿಸಿದರು. ನನ್ನ ಅಮ್ಮಂದಿರು ಮಸಣದಲ್ಲಿ ನನ್ನನ್ನು ಚಿಂದಿಬಟ್ಟೆಯಿಂದ ಮುಚ್ಚಿ ತಿರಿದು ತಂದು ಹಾಕಿದ ಎಂಜಲಗಳನ್ನು ತಿಂದು ನಾನು ಹೆಸರಿಲ್ಲದೆ ನಿರ್ನಾಮಿಕೆಯೆಂದು ಕರೆಯಲ್ಪಟ್ಟು ಬೆಳೆದೆನು. ೩೫. ನನ್ನ ತಾಯಂದಿರನ್ನೂ ಯಮನು ಕೊಂಡೊಯ್ದನು. ನಾನೂ ನನ್ನ ಪಾಪಫಲದ ಸವಿಯನ್ನು ಕಾಣಲು ವಿಚಾರಣಚರಿತವೆಂಬ ಕಾಡನ್ನು ಪ್ರವೇಶಿಸಿದೆನು. ವ॥ ಅಲ್ಲಿ ಸೇರಿ ಅದಕ್ಕೆ ತಿಲಕದಂತಿದ್ದ ಅಂಬರತಿಲಕವೆಂಬ ಬೆಟ್ಟದ ಮೇಲೆ ೩೬. ಪಿಹಿತಾಸ್ರವರೆಂಬ ಮುನಿಪತಿಗಳನ್ನು ಕಂಡೆನು. ಅವರು ದೋಷಗಳೆಂಬ ಕತ್ತಲೆಯನ್ನು ಕಳೆದುಕೊಂಡವರು. ಸಂಪತ್ತೆಂಬ ಮಣಿಗಳಿಂದ ವಿಭೂಷಿತರು. ಅವರು ಪುಣ್ಯಾಸ್ರವಕ್ಕೆ ಕಾರಣರು. ಅವರನ್ನು ಮನಃಪೂರ್ತಿಯಾಗಿ ಕಂಡೆನು. ವ॥ ಅವರನ್ನು ನಮಸ್ಕರಿಸುವ ನನಗೆ ಅರಿವಿರಲಿಲ್ಲ. ಬೇಗನೊಗೆದ ಮನದೆಸಕದಿಂದ

---

೧ ಗ.-ನೊಡಲೊ, ದವಿರೆಚಾರಣ. ೨ ಕ.ಗ-ಮಣಿವಿಭೂಷ.

ಆವುದು ಕರ್ಮದೊಳಾಯ್ತೆನ
ಗೀ ವಿಧದಿಂ ದುಃಖಮಱಿಯೆ ಬೆಸಸುವುದೆನ್ನಂ
ಕಾವುದನಾಥೆಯನೆನೆ ಪರ
ಮಾವಧಿಯಿಂ ಭವಮನಱಿದು ಯತಿಪತಿ ನುಡಿದಂ ೩೭

ಈ ತೆಱದಿಂದಂ ನಿನ್ನಂ
ಘಾತಿಸಿ ಬಿಡದಲೆದು ಪಿೞಿದು ಪಿಂಡಿದ ದುಃಖ
ವ್ರಾತಮಿದು ಮಗಳೆ ನಿನ್ನ ಪು
ರಾತನದುಷ್ಕರ್ಮವಿಟಪಿಕಟುಕಫಲಂಗಳ್ ೩೮

ವ|| ಅದೆಂತೆಂದೊಡೀ ವಿಷಯದ ಪಳಾಳಕೂಟಗ್ರಾಮದೊಳ್ ದೇವಿಲನೆಂಬ ಗ್ರಾಮಕೂಟಂಗಮಾತನ ಕುಟುಂಬಿನಿ ವಸುಮತಿಗಂ ಧನಶ್ರೀಯೆಂಬ[೧] ಮಗಳಾಗಿ ಪುಟ್ಟಿ ನೀಂ ಮತ್ತೊಂದುದಿವಸಮಾತ್ಮೀಯವಿಹಾರವಿಭೂಮಿಸಮೀಪಸ್ಥಿತ ಶ್ರೀ ತ್ರಿಗುಪ್ತಿಗುಪ್ತ ಸಮಾಧಿಗುಪ್ತರೆಂಬ ಯತಿಪತಿಗಳಧ್ಯಯನಂ ನಿನಗನಿಷ್ಟಮಪ್ಪುದಱಿನಧ್ಯಯನಾಂತರಾಯಮಂ ಮಾಡಲೆಂದವರೋದು ವಾವಾಸದೊಳ್ ಸಂಕ್ಲೇಶಮಾಗೆ ಸಾರಮೇಯಪೂತಿಕಳೇವರಮನಿಕ್ಕಿದೊಡವರ್ ನಿನ್ನ ಪಾಪೋಪಚಯ ಕಾರಣ ದುರಾಚರಿತಮಂ[೨] ನೋಡಿ,

ಮತಿಗೆಟ್ಟ ಮಗಳೆ ಸಂಸೃತಿ
ಲತೆಯೊಳ್ ತೊಡರಲ್ಕೆ ನೀನಿದಂ ನೆಗೞ್ದ[೩] ದು
ರ್ಗತಿಹೇತು ಪೂಜ್ಯಪೂಜಾ
ವ್ಯತಿಕ್ರಮಂ ಕಿಱಿದುದುಃಖಮಂ ಮಾಡುಗುಮೇ ೩೯

ಅವರನ್ನೆರಗಿದೆನು. ೩೭. "ಯಾವ ಕರ್ಮದ ಫಲವಾಗಿ ಈ ವಿಧವಾದ ದುಃಖ ವುಂಟಾಯಿತು? ಅನಾಥಳಾದ ನನ್ನನ್ನು ಉದ್ಧರಿಸಿ" ಎಂದು ಕೇಳಿಕೊಂಡೆನು. ಅವಧಿ ಜ್ಞಾನದಿಂದ ನನ್ನ ಭವದ ವಿಚಾರವನ್ನು ತಿಳಿದು ಯತಿಪತಿ ಹೀಗೆಂದನು: ೩೮. ಪುರಾತನವಾದ ದುಷ್ಕರ್ಮಗಳೆಂಬ ಗಿಡದ ಕಹಿಫಲಗಳು ನಿನ್ನನ್ನು ಘಾತಿಸಿ ಬಿಡದಲೆಯಿಸಿ ಹಿಡಿದು ಹಿಂಡಿ ದುಃಖಸಮೂಹವನ್ನಿತ್ತಿವೆ. ವ|| "ಅದು ಹೇಗೆಂದರೆ, ಹಿಂದೆ ಈ ದೇಶದ ಪಳಾಳಕೂಟಗ್ರಾಮದಲ್ಲಿ ದೇವಿಲನೆಂಬ ಗೌಡನಿಗೂ ವಸುಮತಿಯೆಂಬ ಅವನ ಹೆಂಡತಿಗೂ ಧನಶ್ರೀ ಎಂಬ ಹೆಸರಿನ ಮಗಳಾಗಿ ನೀನು ಹುಟ್ಟಿದೆ. ಒಂದು ದಿನ ನಿನ್ನ ವಿಹಾರಭೂಮಿಗೆ ಸಮೀಪದಲ್ಲಿ ನೆಲೆಸಿದ್ದ ಮೂರುಗುಪ್ತಿ[1]ಗಳಿಂದ ರಕ್ಷಿತರಾದ ಸಮಾಧಿಗುಪ್ತರೆಂಬ ಯತಿಪತಿಗಳ ಅಧ್ಯಯನ ನಿನಗೆ ಅನಿಷ್ಟದಾಯಕವಾಯ್ತು. ಅವರ ಅಧ್ಯಯನ ಕಾರ್ಯಕ್ಕೆ ಅಡ್ಡಿಯನ್ನು ತಂದೊಡ್ಡಲೆಂದೇ ಅಲ್ಲಿ ಸತ್ತ ನಾಯಿಯೊಂದನ್ನಿರಿಸಿ ಅವರಿಗೆ ಸಂಕ್ಲೇಶವನ್ನೊದಗಿಸಿದೆ. ನಿನ್ನ ಪಾಪ ಹೆಚ್ಚಲು ಕಾರಣವಾದ ದುರಾಚಾರವನ್ನು ಕಂಡು, ೩೯. "ಎಲೈ ಮಗಳೇ! ಬುದ್ಧಿಹೀನಳಾಗಿ ಸಂಸಾರವೆಂಬ ಬಳ್ಳಿಗೆ ಸಿಕ್ಕಿಹಾಕಿಕೊಂಡು ಬೀಳಲಿಕ್ಕಾಗಿಯೇ ನೀನಿದನ್ನು ಮಾಡಿದೆ. ಪೂಜ್ಯರೆನಿಸಿದವರ ಪೂಜೆಯನ್ನು ಮಾಡದೆ

---

೧ ಖ-ಶ್ರೀಮತಿಯೆಂಬ ೨ ಕ-ದುರಾಚಾರಮಂ ೩ ಕ-ಬಯಸಿದೆ

1. ಮೂರು ಗುಪ್ತಿಗಳು: ಮನೋಗುಪ್ತಿ, ವಾಗ್ಗುಪ್ತಿ, ಕಾಯಗುಪ್ತಿ.

ವ॥ ಎಂಬುದುಮಾ ನುಡಿಗೆ ನೀಂ ಬೆರ್ಚಿ ಬೇಗಮದನೆೞ್ದು ಕಳೆದು,

ಅಱಿಯದೆ ಗೆಯ್ದುದರ್ಕೆ ಮುನಿಪುಂಗವ ನೀಂ ಕ್ಷಮಿಯಿಪ್ಪುದೆಂದು ಕಾ
ಲ್ಗೆಱಗಿದ ನಿನ್ನದೊಂದುಪಶಮಂ ಪಡೆದತ್ತು ಮನುಷ್ಯಜನ್ಮಮಂ
ಮಱುಗಿಸಿ ನಿನ್ನನೀ ಪದಕೆ ತಂದುದು ಮುನ್ನಿನ ಗೆಯ್ದ ದೋಷಮಿ
ನ್ನಱಿದು ಜಿನೇಂದ್ರಧರ್ಮಜಳದಿಂ ಕಳೆ ಕರ್ಚಿ ಕಳಂಕಪಂಕಮಂ ೪೦

ವ॥ ಎಂಬುದುಮಾ ಮುಮುಕ್ಷುಗಳ ಸಮಕ್ಷದೊಳವರ ಪೇೞ್ದ ಮಾೞ್ಕೆಯೊಳೆ ಪರಮಜಿನಪತಿ ಪರಿಭಾಷಿತಮಪ್ಪ ಉಪೋಷಿತವ್ರತಂಗಳಂ ಷೋಡಶತೀರ್ಥಕರಭಾವನೆಗಳಂ ಚತುಸ್ತ್ರಿಂಶದತಿಶಯಂಗಳು ಮನಷ್ಟಮಹಾಪ್ರಾತಿಹಾರ್ಯಂಗಳುಮಂ ಪಂಚಮಹಾಕಲ್ಯಾಣಂಗಳುಮುಂ ನಾಮೋದ್ದೇಶಂಗೆಯ್ದು ಪಾರಣೆಯ ದಿವಸಮಲ್ಲದಱುವತ್ತುಮೂಱು ದಿವಸದಿಂದುಪವಾಸದಿಂ ಸಮೆಯೆ ಜಿನಗುಣ ಸಂಪತ್ತಿಯುಮನಿರ್ಪತ್ತೊಂದು ಮತಿಜ್ಞಾನಭೇದಮುಮಂ ಪನ್ನೊಂದಂಗಮುಮಂ ಎರಡು ಪರಿಕರ್ಮಮುಮಂ ಎಂಬತ್ತೆಂಟು ಸೂತ್ರಂಗಳುಮಂ ಪ್ರಥಮಾನುಯೋಗಂಗಳುಮಂ ಪದಿನಾಲ್ಕು ಪೂರ್ವಂಗಳುಮಂ ಅಯ್ದು ಚೂಳಿಕೆಯುಮಂ ಆಱವಧಿಯುಮಂ ಎರಡು ಮನಃಪರ್ಯಯಜ್ಞಾನಮುಮಂ ಕೇವಲಜ್ಞಾನಮುಮಂ ಪೆಸರ್ಗೊಂಡು ಪಾರಣೆಯ ದಿವಸಮಲ್ಲದೆ ನೂಱಯ್ವತ್ತೆಂಟುದಿವಸದಿಂ ಸವೆವ ನೋಂಪಿಯು ವಿಶ್ರುತ ಶ್ರುತಜ್ಞಾನಮುಮಂ ಯಥೋಚಿತವಿಧಿಯಿಂ ನೋಂತು ಮದೀಯಾಯುಷ್ಯಾವಸಾನದೊಳೀಶಾನಕಲ್ಪದೊಳ್ ಶ್ರೀಪ್ರಭವಿಮಾನದೊಳ್ ಲಲಿತಾಂಗದೇವಂಗೆ

ಅತಿಕ್ರಮಿಸುವುದು ದುರ್ಗತಿಗೆ ಕಾರಣ. ಅದು ಹೆಚ್ಚಿನ ದುಃಖಕ್ಕೆ ಕಾರಣ" ಎಂದು ಯತಿಗಳು ಹೇಳಿದರು. ವ॥ ನೀನು ಆ ಮಾತಿಗೆ ಬೆಚ್ಚು ಬಿದ್ದು ಬೇಗನೆ ಅದನ್ನು ದೂರ ಎಳೆದುಹಾಕಿ ಬಂದೆ. ೪೦. "ಮುನಿಪುಂಗವ! ತಿಳಿಯದೆ ಇಂಥ ಹೇಯಕೃತ್ಯನ್ನೆಸಗಿದೆ. ಕ್ಷಮಿಸಿ ನನ್ನನ್ನು" ಎಂದು ಕಾಲ್ಗೆರಗಿದೆ, ತತ್ಫಲವಾಗಿ ಪಾಪಕರ್ಮವು ಸ್ವಲ್ಪ ಕ್ಷಯಿಸಲಾಗಿ ಮನುಷ್ಯಜನ್ಮವನ್ನು ತಳೆದೆ. ಅದು ನಿನ್ನನ್ನು ಪಶ್ಚಾತ್ತಪ್ತಳನ್ನಾಗಿ ಮಾಡಿ ಈ ಅವಸ್ಥೆಗೆ ತಂದಿದೆ. ಮುನ್ನಿನ ಈ ದೋಷವನ್ನರಿತು, ಜಿನೇಂದ್ರಧರ್ಮಜಲದಿಂದ ಕಳಂಕಪಂಕವನ್ನು ತೊಳೆ" ವ॥ ಎಂದರು. ಆ ಮುಮುಕ್ಷುಗಳ ಎದುರಿನಲ್ಲಿ ಅವರು ಹೇಳಿದಂತೆಯೆ ಆ ಶ್ರೇಷ್ಠಜಿನಪತಿಯುಸುರಿದ ಉಪವಾಸವ್ರತಗಳನ್ನು ಕೈಕೊಂಡು ಷೋಡಶಭಾವನೆಗಳನ್ನೂ, ಮೂವತ್ತುನಾಲ್ಕು ಅತಿಶಯಗಳನ್ನೂ, ಎಂಟು ಮಹಾಪ್ರಾತಿಹಾರ್ಯಗಳನ್ನೂ, ಐದು ಮಹಾಕಲ್ಯಾಣಗಳನ್ನೂ ನಾಮೋದ್ದೇಶಗೈದೆನು. ಪಾರಣೆಯ ದಿನವನ್ನು ಬಿಟ್ಟು ಅರುವತ್ಮೂರು ದಿನಗಳ ಕಾಲ ಉಪವಾಸದಿಂದ ಕಾಲ ಕಳೆದೆನು. ಹೀಗೆ ಜಿನಗುಣಸಂಪತ್ತಿಯೆಂಬ ಉಪವಾಸವ್ರತವನ್ನೂ, ಅನಂತರ ಮತಿಜ್ಞಾನದ ಇಪ್ಪತ್ತೆಂಟು ಭೇದಗಳನ್ನೂ, ಹನ್ನೊಂದು ಅಂಗಗಳನ್ನೂ, ಎರಡು ಪರಿಕರ್ಮಗಳನ್ನೂ, ಎಂಬತ್ತೆಂಟು ಸೂತ್ರಗಳನ್ನೂ, ಪ್ರಥಮಾನುಯೋಗವನ್ನೂ, ಹದಿನಾಲ್ಕು ಪೂರ್ವಗಳನ್ನೂ, ಐದು ಚೂಳಿಕೆಗಳನ್ನೂ, ಆರು ಅವಧಿಜ್ಞಾನಗಳನ್ನೂ, ಎರಡು ಮನಃಪರ್ಯಯಜ್ಞಾನಗಳನ್ನೂ ಕೇವಲಜ್ಞಾನವನ್ನೂ ಪೆಸರ್ಗೊಂಡೆನು. ಹೀಗೆ ಒಂದುನೂರೈವತ್ತೆಂಟು ದಿನಗಳಿಂದ ಶ್ರುತಜ್ಞಾನೋಪವಾಸವೆಂಬ ವ್ರತವು ಸಮೆಯಿತು. ನಾನು ಉಚಿತ ವಿಧಿಗಳಿಂದ ಪ್ರಖ್ಯಾತವಾದ ಶ್ರುತಜ್ಞಾನವ್ರತವನ್ನು ನೋಂತೆನು. ನನ್ನ

ವಲ್ಲಭೆಯೆಂ ಸ್ವಯಂಪ್ರಭೆಯೆನೆಂಬೆನಾಗಿ ಪುಟ್ಟಿ ಪೂರ್ವೋಪಕಾರಮಂ ನೆನೆದು ಬಗೆದು ಪಿಹಿತಾಸ್ರವಭಟ್ಟಾರಕರನಾನುಮಾತನುಂ ಬಂದಿಸಿ ನಾನಾವಿಧಾರ್ಚನೆಗಳಿಂದರ್ಚಿಸಿ ಪೂಜಿಸಿ ದಿವ್ಯವಿನೋದಂಗಳಂ ಮೆಱೆದು ಪೋಗಿ ಸುರಲೋಕ ಸುಖಂಗಳನೆನಿತಾನುಂ ಕಾಲಮನುಭವಿಸಿ ನಿಜಪೂರ್ವೋಪಾರ್ಜಿತ ಪುಣ್ಯಾವಸಾನದೊಳ್ ನಾಕಲೋಕಮದಾನೇಕಪಂ ನಟ್ಟುನಿಂದು ಬೀಸಿದೊಡೆ ಮದೀಯಂಜೀವಿತೇಶನಾಧೋರಣಂ ಕೆಡೆವಂತೆ ಧರಾತಳಕ್ಕೆ ಕೆಡೆವುದುಮಾನುಮಾತನ ವಿಯೋಗದೊಳಱುದಿಂಗಳ್ವರಂ ಜಿನೇಂದ್ರಮಹಿಮೆಯಂ ಮಾಡಿ ಬಂದಿಲ್ಲಿ ಪುಟ್ಟಿದೆನಿದು ಮದೀಯ ವೃತ್ತಾಂತಂ

ಲಳಿತಾಂಗಂ ದಿವದಿಂದಮಂದಿೞಿದು ಬಂದೀ ವಿಶ್ವವಿಶ್ವಂಭರಾ
ತಳದೊಳ್ ಭೂಚರಖೇಚರರ್ಕಳೊಳಗಿನ್ನೆಲ್ಲಿರ್ದೊಡಂ ಕೂಡದಾ
ಗಳಣಂ ಕೂಡದು ಬಾಳ್ವ ಮಾತೆನಗದರ್ಕಾರ್ಗೇನನೇನೆಂಬೆನೆಂ
ದೊಳಕೊಂಡಿರ್ಪುದಱಿಂದಮಾದುದೆನಗೀ ವಾಚಂಯಮಂ ಸಂಯಮಂ ೪೧

ಸಹಜಾತಾಂಬರದಿವ್ಯಭೂಷಣದಳನ್ಮಂದಾರಮಾಳಾವಿಳಾ
ಸಿ ಹಟದ್ರತ್ನಕಿರೀಟಭಾಸಿ ನಯನಾರ್ಧಾಲೋಕನೋದ್ಭಾಸಿ ಸ
ಸ್ಪೃಹಸಾನಂದಸಲೀಲಸಸ್ಮಿತಮುಖವ್ಯಾಭಾಸಿ ನೋಡಿಂತು ಸ
ನ್ನಿಹಿತಂ ಸೌಂದರರೂಪಮಿನ್ನುಮೆರ್ದೆಯೊಳ್ ಮಜ್ಜೀವಿತಾಧೀಶನಾ ೪೨

ಆಯುಷ್ಯದ ಕೊನೆಯಲ್ಲಿ ಈಶಾನಕಲ್ಪದಲ್ಲಿ ಶ್ರೀಪ್ರಭವಿಮಾನದಲ್ಲಿ ಲಲಿತಾಂಗದೇವನಿಗೆ ಮಡದಿಯಾದ ಸ್ವಯಂಪ್ರಭೆಯೆಂಬುವಳಾಗಿ ಜನಿಸಿದೆನು. ಆಗ ಪಿಹಿತಾಸ್ರವರ ಪೂರ್ವೋಪಕಾರವನ್ನು ನೆನೆದು ಬಗೆದು ನಾನೂ (ಸ್ವಯಂಪ್ರಭೆಯೂ) ಆತನೂ (ಲಲಿತಾಂಗದೇವನೂ) ಹೋಗಿ ಅವನನ್ನು ಭಕ್ತಿಯಿಂದ ಪೂಜಿಸಿದೆವು. ಪ್ರಾಪ್ತವಾದ ಸುರಲೋಕಸುಖಗಳನ್ನು ಬಹುಕಾಲ ಅನುಭವಿಸಿ ಸಂಪಾದಿತವಾದ ಪುಣ್ಯಗಳೆಲ್ಲದರ ಕೊನೆಯಲ್ಲಿ ಸ್ವರ್ಗಲೋಕದಲ್ಲಿನ ಮದ್ದಾನೆಯು ಬೀಸಿದಾಗ ಮಾವುತನು ಬೀಳುವಂತೆ ನನ್ನ ನಲ್ಲನು ಮೃತನಾಗಿ ಭೂಲೋಕವನ್ನು ಸೇರಿದನು. ಆತನ ವಿಯೋಗದಿಂದ ಆರು ತಿಂಗಳು ಕಾಲ ಜಿನೇಂದ್ರನನ್ನು ಪೂಜಿಸಿ ಇಲ್ಲಿ ಜನ್ಮವಡೆದೆನು. ಇದು ನನ್ನ ವೃತ್ತಾಂತ"[1] ಎಂದಳು. ೪೧. ಮತ್ತೆ ನುಡಿದಳು: "ಲಲಿತಾಂಗದೇವನು ದಿವದಿಂದ ಇಳಿದುಬಂದು ಈ ಭೂಮಿಯಲ್ಲಾಗಲೀ, ಭೂಚರ ಖೇಚರರ ಬಲಗಳ ನಡುವೆಯಲ್ಲಾಗಲಿ, ಮತ್ತೆಲ್ಲಿಯೇ ಆಗಲಿ ಇದ್ದರೂ ಅವನೊಡನೆ ಸಮಾಗಮ ಪಡೆಯಲು ಸಾಧ್ಯವಿಲ್ಲ. ಆದ ಕಾರಣ ಬದುಕುವ ಮಾತು ಸಲ್ಲದು. ಯಾರಿಗೆ ಏನೆಂದು ಹೇಳಿಕೊಳ್ಳಲಿ? ಆದಕಾರಣವೇ ಮಾತು ಹೊರಡದಂತಾಗಿ ವಾಚಂಯಮರೂಪವಾದ ಸಂಯಮವು ತಲೆದೋರಿದೆ. ೪೨. "ನನ್ನ ಜೀವಿತೇಶನ ಸುಂದರವಾದ ರೂಪು ನನ್ನೆದೆಯಲ್ಲಿ ಇನ್ನೂ ಸನ್ನಿಹಿತವಾಗಿದೆ! ನೋಡು! ಅದು ಅವನೊಡನೆ ಹುಟ್ಟಿದ ದಿವ್ಯವಸ್ತ್ರ, ದಿವ್ಯಾಭರಣ ಮತ್ತು ಅರಳುತ್ತಿರುವ ಮಂದಾರಪುಷ್ಪಗಳ ಮಾಲೆಗಳಿಂದ ಶೋಭಿಸುತ್ತಿದೆ! ರತ್ನಕಿರೀಟಗಳ ಕಾಂತಿಗಳಿಂದ

---

1. ಅವಳು ಕ್ರಮವಾಗಿ ಧನಶ್ರೀ, ನಿರ್ನಾಮಿಕೆ, ಸ್ವಯಂಪ್ರಭೆ-ಎಂಬ ಜನ್ಮಾವಳಿ ನಾಮಗಳನ್ನು ಪಡೆದು ನಾಲ್ಕನೆಯ ಜನ್ಮದಲ್ಲಿ ಶ್ರೀಮತಿಯಾದಳು.

ಎರೆವ ಮರಲ್ವ ಲಲ್ಲಯಿಪ ಕಾಲ್ವಿಡಿವೆಂಬುದನಿಂಬುಕೆಯ್ವಳಂ
ಕರಣವಿಳಾಸಮಂ ಮೆಱೆವ ಮೇಳಿಸುವಂದಿನ ರೂಪು ಶಾಸನಂ
ಬರೆದುದು ಬರ್ಚಿಸಿತ್ತಮರ್ದುದಟ್ಟುದಳಂಕಿದುದು[1]ರ್ಚಿ ಪೊಕ್ಕು ಬೇ
ರ್ವರಿದುದು ಬೆಚ್ಚುದಚ್ಚಿಱಿದುದೆನ್ನೆರ್ದೆಯೊಳ್ ಲಲಿತಾಂಗದೇವನಾ ೪೩

ವ|| ಅದಱಿಂದಮೆನ್ನ ಬಯಸಿದ ಬಯಕೆಯಪ್ಪುದು ವಂಧ್ಯಾಸ್ತನಂಧಯಸಮಾಗಮಸಮಾನಂ; ಮಾನಸರ ದೆಸೆಯೊಳ್ ತೀರ್ವುದಲ್ತಿದಂ ಮದೀಯಮಾನಸದೊಳೆ ತಾಳ್ದು ಸುರಲೋಕಸುಖಾನುಭವ ರತರಹಸ್ಯಂಗಳೊಳೆನ್ನಾತನಜೀವತಿರಹಸ್ಯಂಗಳಪ್ಪ ಕೆಲಕೆಲವು ಅವಿನಾಣಂಗಳಂ ನಾಣ್ಚೆ ಬಂಚಿಸಿ[2] ಪಿರಿದು ಮನುರಾಗದಿಂದಮೆನ್ನ ಬರೆದ ಪಟಮನಿದನರ್ಚಿಸಿ ಕನ್ಯಾಬ್ರತದೊಳೆ ಕಾಲಮಂ ಕಟೆಪುವೆನಿದಲ್ಲದಿಲ್ಲಿಗೆ ಪೆಱತೊಂದು ಪ್ರತಿಕಾರಮಿಲ್ಲೆಂದು ನುಡಿದು ಮಾಣ್ದ ಕನ್ನೆಯ ನುಡಿಯಂ ಪಂಡಿತೆ ಮನದೆಗೊಂಡು,

ಉಸಿರ್ದೌ ನೀಂ ನಿನ್ನ ನಿರ್ಬೇಗಮನಱಿದೆನಿದಂ ಶಕ್ತಿಯೊಳ್ ಮುಕ್ತಿಯಂ ಸಾ
ಧಿಸಲಕ್ಕುಂ ಮಂತ್ರಶಕ್ತಿಪ್ರಕಟನಪಟುಗಳ್ಗೇನಸಾಧ್ಯಂಗಳೋ ಪೇೞ್
ಬೆಸನಂ ಪಾರ್ದಿರ್ಪುದಾಂ ನಿನ್ನಿನಿಯನನಱಸಲ್ ಸಾರ್ವನೆಲ್ಲಂದದಿಂ ಚಿಂ
ತಿಸದಿರ್ ತಾ ತೋಱು ನಿನ್ನೀ ಬರೆದ ಪಟಮನುತ್ಫುಲ್ಲಪಂಕೇಜನೇತ್ರೇ[3] ೪೪

ಬೆಳಗುತ್ತಿದೆ! ಅರೆಮುಚ್ಚಿದ ಕಣ್ಣುಗಳಿಂದ ಕೂಡಿದೆ! ಅದು ಸಸ್ಪೃಹವೂ, ಸಾನಂದವೂ, ಸಲೀಲವೂ, ಸಸ್ಮಿತವೂ ಆದ ಮುಖದಿಂದ ಬೆಳಗುತ್ತಿದೆ! ೪೩. "ನನ್ನೆದೆಯಲ್ಲಿ ಲಲಿತಾಂಗದೇವನ ಆ ರೂಪು ಶಾಸನವಾಗಿ ಬರೆಯಲ್ಪಟ್ಟಿದೆ? ಚಿತ್ರಿಸಲ್ಪಟ್ಟಿದೆ! ಶೋಭಿಸುತ್ತಿದೆ! ನಿಮಗ್ನವಾಗಿದೆ! ಚುಚ್ಚಿಕೊಂಡು ಒಳಹೊಕ್ಕು ಬೇರುಬಿಟ್ಟಿದೆ! ಬೆಸುಗೆಗೊಂಡಿದೆ! ಮುದ್ರೆಯೊತ್ತಿದೆ! ಅದು ಪ್ರಾರ್ಥಿಸಿಕೊಳ್ಳುತ್ತದೆ! ಹಿಂದಿರುಗಿ ಹೋಗುತ್ತದೆ! ನಲ್ಮೆಯಿಂದ ಮಾತನಾಡಿಸುತ್ತದೆ! ಕಾಲುಗಳನ್ನು ಹಿಡಿದುಕೊಳ್ಳುತ್ತದೆ! ಅಲಂಕರಿಸಿಕೊಳ್ಳುತ್ತದೆ! ವ|| ಅದರಿಂದಾಗಿ ನನ್ನ ಬಯಕೆಯು ಬಂಜೆಗೆ ಪುತ್ರನ ಭೇಟಿಯಾಗುವುದಕ್ಕೆ ಸಮಾನ! ಇದು ಮನುಷ್ಯರಿಂದ ನೆರವೇರಿಸಲಾಗದುದು. ಇದನ್ನು ನನ್ನ ಹೃದಯದಲ್ಲಿಯೇ ಇಟ್ಟುಕೊಂಡು ಸುರಲೋಕಸುಖಾನುಭವಗಳಲ್ಲಿಯೂ ರತರಹಸ್ಯಗಳಲ್ಲಿಯೂ ನಮ್ಮಿಬ್ಬರ ಅನುಭವಕ್ಕೆ ಮಾತ್ರ ಬಂದ ಕೆಲವು ಅಭಿಜ್ಞಾನಗಳನ್ನು ನಾಚಿಕೆಯಿಂದುಳಿಸಿಕೊಂಡು, ಅತಿಪ್ರೇಮದಿಂದ ಚಿತ್ರಿಸಲಾದ ಈ ಚಿತ್ರಪಟವನ್ನು ಪೂಜಿಸಿ ಕನ್ಯಾವ್ರತದಿಂದಲೇ ಕಾಲವನ್ನು ಕಳೆಯುವೆನು. ಇದಕ್ಕೆ ಪ್ರತೀಕಾರ ಮತ್ತೊಂದಿಲ್ಲ." ಎಂದು ನುಡಿದು ಆ ಕನ್ಯೆ ಸುಮ್ಮನಾದಳು. ಅದನ್ನು ಪಂಡಿತೆಯು ಮನಗಂಡಳು. ೪೪. "ನಿನ್ನ ನಿರ್ವೇಗಕ್ಕೆ ಕಾರಣವು ತಿಳಿಯಿತು. ಶಕ್ತಿಯಿಂದ ಮುಕ್ತಿಯನ್ನು ಸಾಧಿಸಲು ಸಾಧ್ಯ. ಮಂತ್ರಶಕ್ತಿ ಪ್ರಕಟನಪಟುಗಳಿಗೆ ಯಾವುದು ಅಸಾಧ್ಯ? ಕಾರ್ಯವು ಸಿದ್ಧಿಸುವವರೆಗೆ ಕಾಯ್ದಿರಬೇಕು. ನಿನ್ನ ಗಂಡನನ್ನು ಹುಡುಕಲು ನಾನು ಎಲ್ಲ ರೀತಿಯಿಂದಲೂ ಸಮರ್ಥಳು, ಚಿಂತಿಸ ಬೇಡ. ಅರಳಿದ ತಾವರೆಯಂತೆ ಕಣ್ಣುಳ್ಳವಳೆ! ನೀನು ಬರೆದ ಚಿತ್ರಪಟವನ್ನು ಕೊಡು,

---

೧ ಗ-ದಡಂಗಿದುದು ೨ ಕ-ಚಿಂತಿಸಿ ೩ ಗ-ವಕ್ತ್ರೇ

ಪಟಮಿದೆ ಸಾಲ್ಗುಮನ್ಯಭವವಲ್ಲಭನಂ ಪಟವಿದ್ಯೆಯೆತ್ತಲುಂ
ಜಟಮಟಕರ್ಕಳಂ[1] ತೊಡರೆ ಸುತ್ತಲುಮಪ್ಪುದಜೆಂ ಸಮಸ್ತಭೂ
ಪಟಲಮನಾಂ ತೊಟಲ್ದಱಿಸಿ ನಿನ್ನೊಡಗೂಡಿ ನಿಜೇಶನಂ ಯಶಃ
ಪಟಹನಿನಾದಮಂ ಪರಪುವೆಂ ದೆಸೆಯಂತುವರಂ ತಳೋದರೀ ೪೫

ವ।। ಎಂದು ಮುನ್ನಮಾ ಪಟದೊಳಾಕೆ ಬರೆಯದೆ ಬಂಚಿಸಿದ ಅವಿನಾಣಂಗಳನಱಿಯೆ ಬೆಸಗೊಂಡು ಪಟಮಂ ಕೈಕೊಂಡು ಪಂಡಿತೆ ಪೋಗಿ ಮಂದಾರಮುನೀಂದ್ರವೃಂದಾರಕವೃಂದಸೌಂದರಮುಮಾಸನ್ನಭವ್ಯವ್ಯೋಮಚರಭೂಚರನಿಚಯನಿಚಿತಮುಮಾಗಿ ಜಗತ್ಪೂತಮೆನಿಸಿದ ಮಹಾಪೂತಜಿನಾಲಯಕ್ಕೆ ಬಂದು ಅನೇಕ ಧೂರ್ತಜನಮನಸ್ಸಮ್ಮೋಹನತಮಃಪಟಮಂ ವಿಚಿತ್ರಚಿತ್ರಪಟಮನಾ ಚೈತ್ಯಾಲಯದ ಕೆಲದ ಪಟ್ಟಸಾಲೆಯಮುಂತೆ ನೇಱೆ ನಿಜಾಭಿಲಷಿತಕಾರ್ಯಸಿದ್ಧಿಯೆನೆ ಪಾರುತ್ತಮಿರ್ದಳ್ ಅನ್ನೆಗಮಿತ್ತ ಷಟ್ಖಂಡಮಂಡಿತವಸುಧಾಮಂಡಳಮಂ ಬಾಯ್ಕೇಳಿಸಿ,

ಪಿರಿದುಂ ಪುಣ್ಯೋದಯಂ ತನ್ನುದಯಮನಱಿಪುತ್ತಿರ್ಪಿನಂ ಮರ್ತ್ಯವಿದ್ಯಾ
ಧರರಾಜವ್ಯಂತರಾಧೀಶ್ವರಕರಸರಸೀಜಂಗಳಂ ವಕ್ತ್ರಚಂದ್ರ
ಸ್ಫುರಿತೋದ್ಯತ್ಕಾಂತಿ ನಿಚ್ಚಂ ಮುಗಿಯಿಸೆ ಜಿತದಿಙ್ಮಂಡಲಂ ಬಂದು ಪೊಕ್ಕಂ
ಪುರಮಂ ಶ್ರೀವಜ್ರದಂತಂ ಮಗಳ ಮದುವೆಯಂ ಮಾಡಲುದ್ಯುಕ್ತಚಿತ್ತಂ ೪೬

ವ।। ಅಂತು ನಿಜಾನ್ವಯರಾಜಧಾನಿಯಂ ಪೊಕ್ಕು ಮೂವತೆಣ್ಛಾಸಿರ[2] ಮಕುಟಬದ್ಧರಿಂ ಮೂರ್ಧಾಭಿಷಿಕ್ತನಾಗಿ ಸಕಳಚಕ್ರವರ್ತಿಪದದೊಳ್ ನಿಂದು ಸಿಂಹಾಸನಾರೂಢ[3]ನಾರೂಢ

ತೋರು!" ಎಂದಳು. ೪೫. "ನಿನ್ನ ಮತ್ತೊಂದು ಭವದ ಗಂಡನನ್ನು ಹುಡುಕಲು ಈ ಪಟವೇ ಸಾಕು. ತಾವೊಪ್ಪಿದ ಕಾರ್ಯವನ್ನು ಹೆಣಗಾಡಿ ನಡೆಯಿಸುವ ಜನರು ಈ ಸುತ್ತಲೂ ಬಹುಮಂದಿಯಿದ್ದಾರೆ. ಈ ಸಮಸ್ತ ಭೂಮಂಡಲವನ್ನೂ ಕಷ್ಟಪಟ್ಟು ಹುಡುಕಿ ನಿನ್ನ ಗಂಡನನ್ನು ನಿನ್ನೊಡನೆ ಸೇರಿಸಿ ಅವನ ಕೀರ್ತಿಯೆಂಬ ತಮ್ಮಟೆಯ ಶಬ್ದವನ್ನೂ ಎಲ್ಲ ದಿಕ್ಕುಗಳಿಗೂ ಹರಡುವೆನು" ಎಂದಳು. ವ।। ಈ ಮೊದಲೇ ಆ ಚಿತ್ರಪಟದಲ್ಲಿ ಬರೆಯದಿದ್ದ ಅಭಿಜ್ಞಾನಗಳನ್ನು ಪಂಡಿತೆಯು ಕೇಳಿ ತಿಳಿದುಕೊಂಡಳು. ವಂದಿಸುವ ಮುನೀಂದ್ರರೇ ಮೊದಲಾದ ದೇವವೃಂದದ ಸೌಂದರ್ಯವುಳ್ಳ ಆಸನ್ನಭವ್ಯರಾದ ವ್ಯೋಮಚರ ಭೂಚರರ ಗುಂಪಿನಿಂದ ಕೂಡಿದ. ಜಗತ್ಪವಿತ್ರವಾದ ಜಿನಾಲಯಕ್ಕೆ ಬಂದಳು. ಅಲ್ಲಿ (ಕನ್ಯಾನ್ವೇಷಿಗಳಾದ) ವಂಚಕಜನರ ಹೃದಯಸಮ್ಮೋಹಕವಾದ ಚಿತ್ರಪಟವನ್ನು ಪಟ್ಟಸಾಲೆಯ ಮುಂದೆ ನೇತುಹಾಕಿ ತನ್ನ ಇಷ್ಟಾರ್ಥಸಿದ್ಧಿಗಾಗಿ ಕಾಯುತ್ತಿದ್ದಳು. ಇತ್ತ ವಜ್ರದಂತನು ಆರು ಖಂಡಗಳಿಂದ ಕೂಡಿದ ಭೂಮಂಡಲವನ್ನು ಗೆದ್ದು, ೪೬. ಪರಮಪುಣ್ಯೋದಯನಾಗಿ ತನ್ನ ಅಭ್ಯುದಯವನ್ನು ಮೆರೆಸಿದನು. ನರಾಧಿಪ, ವಿದ್ಯಾಧರಾಧಿಪ ಮತ್ತು ವ್ಯಂತರಾಧಿಪರ ಕರಕಮಲಗಳನ್ನು ತನ್ನ ವಕ್ತ್ರಚಂದನಕಾಂತಿಗಳಿಂದ ಮೊಗ್ಗುಗೊಳಿಸಿದನು. ದಿಙ್ಮಂಡಲವನ್ನು ಗೆದ್ದು ತನ್ನ ಮಗಳ ಮದುವೆಯನ್ನು ಮಾಡುವ ಉದ್ದೇಶದಿಂದ ತನ್ನ ರಾಜಧಾನಿಗೆ ಬಂದು ಸೇರಿದನು. ವ।। ಅಂತು ವಂಶಪಾರಂಪರ್ಯದಿಂದ ಬಂದ ರಾಜಧಾನಿಯನ್ನು ವಜ್ರದಂತನು ಹೊಕ್ಕನು.

---

೧ ಕ-ಜಟಮತಿಯರ್ಕಳಂ; ಗ-ಜಟಿಕುಟಿಕರ್ಕಳಂ ೨ ಗ-ಮೂವತ್ತಿರ್ಛಾಸಿರ
೩ ಕ-ಸಿಂಹಾಸನಾಸೀನ

ಯೌವನೆ ಯುಮಂತರ್ನಿಗೂಢಶೋಕೋದ್ರೇಕಮೂಕೆಯುಮಾಗಿರ್ದ ನಿಜತನೂಜೆಗೆ ಬಟೆಯನಟ್ಟಿದಾಗಳ್,

ವನಿತಾರೂಪದ ಕಾಮಕಲ್ಪಲತೆಯೋ ಮೇಣಂಗನಾರೂಪದ
ಬ್ಜಿನಿಯೋ ಮೇಣ್ ಲಲನಾಸ್ವರೂಪದತನುಶ್ರೀರೂಪಮೋ ಬರ್ಪುದೆಂ
ಬಿನೆಗಂ ಮೆಲ್ಲನೆ ಬಂದು ಕಾಲ್ಗೆಱಗೆ ಲೀಲಾಲಂಬಿಲಂಬಾಳಕಾ
ಳಿ ನಿಲುಂಬಿರ್ದುವು ಚಕ್ರವರ್ತಿಯ ಪದಾಂಭೋಜಂಗಳೊಳ್ ಕನ್ನೆಯಾ ೪೭

ವ|| ಅಂತು ಪೊಡೆವಟ್ಟ ನಿಜತನೂಜೆಯ ಕಲ್ಯಾಣಭೋಗಭಾಗಿಯಾಗೆಂದು ಪರಸಿ ತರ್ಕೈಸಿಕೊಂಡು,

ಒದವಿದ ನೂಲ ತೊಂಗಲುಲಿಯಿಲ್ಲದೆ ಪೀನನಿತಂಬಮಾರಮಿ
ಲ್ಲದೆ ಕುಚಮಂಡಳಂ ಪಲವುಮಂದದ ಚೆಂದದ ಚೆನ್ನಪೂಗಳಿ
ಲ್ಲದೆ ಲುಳಿತಾಳಕಂ ಕ್ವಣಿತನೂಪುರಮಿಲ್ಲದೆ ಪಾದಪದ್ಮಮೊ
ಪ್ಪಿದಪುದು ನೋಡ ರೂಪಿನಿತು ಬೇಸಱೊಳಂ ಸೊಗಯಿಪ್ಪುದೀಕೆಯಾ ೪೮

ವ|| ಎಂದು ತನ್ನ ಮನದೊಳೆ ಬಗೆದು ಮಗಳ ಮೊಗಮಂ ಮುಗುಳ್ನಗೆವೆರಸು ನೋಡಿದಾಗಳ್,

ಕುಂದದಳಧವಳನೃಪದಶ
ನೇಂದುಜ್ಯೋತ್ಸ್ನಾಮೃತಾಚ್ಛಜಳಪರಿಷೇಕಂ
ಮಾಂದಿ[1]ಸುವಂತಾದುದು ನೃಪ
ನಂದನೆಯೆರ್ದೆಯೊಳಗೆ[2] ಬಳೆದ ಶೋಕಾನಳನಂ ೪೯

ಮೂವತ್ತೆರಡು ಸಾವಿರ ಕಿರೀಟಬದ್ಧರಾದ ರಾಜರಿಂದ ಪಟ್ಟಾಭಿಷಿಕ್ತನಾಗಿ ಸಕಲಚಕ್ರವರ್ತಿಪದದಲ್ಲಿ ನಿಂತನು. ಪ್ರಾಪ್ತ ಯೌವನಳೂ, ಒಳಗೆ ಹುದುಗಿದ ಶೋಕೋದ್ರೇಕದಿಂದ ಮಾತಾಡದವಳೂ ಆದ ತನ್ನ ಮಗಳಿಗೆ ಹೇಳಿಕಳುಹಿಸಿದನು. ಅನಂತರ ೪೭. ಹೆಣ್ಣಿನ ರೂಪದಲ್ಲಿರುವ ಕಾಮನ ಕಲ್ಪಲತೆಯೋ ಅಥವಾ ಅಂಗನೆಯ ರೂಪವಲ್ಲಿರುವ ಕಮಲಿನಿಯೋ ಇಲ್ಲವೇ ಲಲನಾರೂಪದಿಂದಿರುವ ಮನ್ಮಥಲಕ್ಷ್ಮಿಯೇ ಬರುತ್ತಿದೆಯೋ ಎಂಬಂತೆ ಶ್ರೀಮತಿಯು ಬಂದು ಮೆಲ್ಲನೆ ಕಾಲಿಗೆರಗಿದಳು. ಅವಳ ಮುಂಗುರುಳುಗಳು ಚಕ್ರವರ್ತಿಯ ಪದಾಂಭೋಜಗಳಲ್ಲಿ ಹಾರಾಡಿದವು. ವ|| ಹಾಗೆ ವಂದಿಸಿದ ಮಗಳಿಗೆ ಶ್ರೇಯಸ್ಸಾಗಲೆಂದು ಆಶೀರ್ವದಿಸಿ, ಆ ಚಕ್ರವರ್ತಿಯು ೪೮. "ಒಡ್ಯಾಣದ ಶಬ್ದವಿಲ್ಲದೆ ಪೀನನಿತಂಬವೂ, ಹಾರವಿಲ್ಲದೆ ಮೊಲೆಗಳೂ, ಅಂದಚಂದವಾದ ಚಿನ್ನದ ಹೂಗಳಿಲ್ಲದೆ ಅಸ್ತವ್ಯಸ್ತವಾದ ಮುಂಗುರುಳುಗಳೂ, ದನಿಗೊಡುವ ಕಾಲಂದುಗೆಗಳಿಲ್ಲದೆ ಪಾದಪದ್ಮವೂ ಒಪ್ಪಿದುವು. ಬೇಸರವಿದ್ದರೂ ಈಕೆಯ ರೂಪು ಸೊಗಯಿಸುತ್ತಿದೆ, ನೋಡಾ" ವ|| ಎಂದು ತನ್ನ ಮನಸ್ಸಿನಲ್ಲಿಯೇ ಅಂದುಕೊಂಡು ಮಗಳಮುಖವನ್ನು ಮುಗುಳ್ನಗೆಯೊಡನೆ ನೋಡಿದನು. ೪೯. ಕುಂದಪುಷ್ಪದ ಎಸಳಿನಂತೆ ಬೆಳ್ಳಗಿರುವ ರಾಜನ ಹಲ್ಲುಗಳೆಂಬ ಚಂದ್ರನ ಚಂದ್ರಿಕಾಮೃತಜಲಸೇಕವು ರಾಜಕುಮಾರಿಯ

೧ ಕ.-ನಂದಿ ೨ ಗ-ಯೊಡಲೊಳಗ

ವ॥ ಅಂತು ವಜ್ರದಂತನ ವಜ್ರದಂತೆ ಪೊಳೆವ ದಂತಪಙ್ತಿಗಳ ಕಾಂತಿಯಾ ಕಾಂತೆಯಂ ಪುದಿದು ಪುದುಂಗೊಳಿಸೆ ವಜ್ರದಂತನೆಂಬ ಪೆಸರಂ ನನ್ನಿಮಾಡಿ,

ಮಗಳೆ ಮನಸ್ತಮಂ ನಿನಗೀದೀಗಳೆ ಪಿಂಗುಗೆ ಕುಂಕುಮದ್ರವಂ
ನಗೆಮೊಗದೊಳ್ ಕನತ್ಕನಕಮೇಖಳೆ ಪೀನನಿತಂಬದೊಳ್ ಲಯಂ
ನೆಗಟ್ದಿರೆ ನೂಪುರಂ ಪದಪಯೋರುಹದೊಳ್ ನೆಲೆಗೊಳ್ಗೆ ಕೂಡುವೈ
ಬಗೆಗೊಳೆ ನಾಳೆ ನಾಡಿದು ಮಹೋತ್ಸವದಿಂ ನಿಜಜೀವಿತೇಶನೊಳ್ ೫೦

ವ॥ ಅದೆಂತೆಂದೊಡೆ ಮದೀಯಗುರುಗಳುಂ ತ್ರೈಲೋಕ್ಯಗುರುಗಳುಮಪ್ಪ ಯಶೋಧನ ಗುರುಗಳ ಕೇವಳಜ್ಞಾನೋತ್ಪತ್ತಿಯೊಸಗೆಯೊಳವಿಚಳಭಕ್ತಿಯೊಳೆನಗೆ ಪುಟ್ಟಿದವಧಿಜ್ಞಾನದೊಳೆನ್ನ ನಿನ್ನ ನಿನ್ನ ಕಾಂತನ ಜನ್ಮಾಂತರಂಗಳನನಂತರಿತಮನಱಿದೆನಾ ಕಥಾಂತರಮನಾದ್ಯಂತಮನವಧಾರಿಸೆಂದು ಮಿಂತೆಂದು ಪೇೞಲ್ತಗುಳ್ದಂ ಆನೀಭವಕ್ಕೈದನೆಯ ಭವದೊಳೀ ಪುಂಡರೀಕಿಣಿಯೊಳ್ ಕೇಶವಮಹೀಶಂಗೆ ಚಂದ್ರಕೀರ್ತಿಯೆಂಬ ಮಗನಾಗಿ ಜಯಕೀರ್ತಿಯೆಂಬ ಕೆಳೆಯನುಮಾನುಮೊಡವಳೆದು ಗೃಹೀತಾಣುವ್ರತನೇಂ ಗೃಹಸ್ಥಧರ್ಮಕ್ರಮದೊಳ್ ಮದೀಯವಯಸ್ಯನುಮಾನುಂ ನೆಗೞ್ದು ಜೀವಿತಾಂತ್ಯದೊಳ್ ಪ್ರೀತಿವರ್ಧನೋದ್ಯಾನದೊಳ್ ಚಂದ್ರಸೇನಾಚಾರ್ಯರ ಶ್ರೀಪಾದಪದ್ಮಪಾರ್ಶ್ವದೊಳ್ ಸನ್ಯಸನವಿಧಿಯೊಳ್ ಪರಿತ್ಯಕ್ತಾಹಾರಶರೀರನೆಂ ಸಮಾಧಿವಡೆದು ಮಹೇಂದ್ರಕಲ್ಪದೊಳ್ ಸಪ್ತಸಾಗರೋಪಮ ಪ್ರಮಿತಜೀವಿತನೇಂ ಸಾಮಾನಿಕದೇವನಾಗಿ ಪುಟ್ಟಿದೇಂ, ಜಯಕೀರ್ತಿಯುಮಾತ್ಮೀಯವಿಭವಸದೃಶನಾಗಿ ತತ್ಕಲ್ಪದೊಳ್

ಹೃದಯದ ಶೋಕಾಗ್ನಿಯನ್ನು ಮಂದಗೊಳಿಸುವಂತಾಯಿತು. ವ॥ ಅಂತು ವಜ್ರದಂತನ ವಜ್ರದ ಹಾಗೆ ಹೊಳೆಯುವ ಹಲ್ಲುಗಳ ಕಾಂತಿಯು ಆ ಕಾಂತೆಯ ಮೇಲೆ ಪಸರಿಸಿ ವಜ್ರದಂತನೆಂಬ ಹೆಸರನ್ನು ಸತ್ಯಗೊಳಿಸಿತು! ಅವನು ಹೇಳಿದನು. ೫೦. "ಮಗಳೆ! ನಿನ್ನ ಮನಸ್ಸಿನ ಕತ್ತಲೆಯು ಈಗಲೇ ದೂರ ಸರಿಯುವುದು, ಕುಂಕುಮದ್ರವವು ನಗುಮುಖದಲ್ಲಿಯೂ ಚಿನ್ನದ ಒಡ್ಯಾಣವು ಪೀನನಿತಂಬದಲ್ಲಿಯೂ ಲಯಯುಕ್ತವಾದ ನೂಪುರವು ಪಾದಕಮಲಗಳಲ್ಲಿಯೂ ನೆಲೆಗೊಳ್ಳುವುವು! ನಿನ್ನ ಜೀವಿತೇಶನೊಡನೆ ನಾಳೆ ಅಥವಾ ನಾಳಿದ್ದು ಸಂತೋಷದಿಂದ ಸೇರಿಕೊಳ್ಳುವೆ! ವ॥ "ಅದು ಹೇಗೆಂದರೆ, ನನ್ನ ಗುರುಗಳೂ, ಮೂರುಲೋಕಗಳಿಗೂ ಗುರುಗಳೂ ಆದ ಯಶೋಧರಗುರುಗಳ ಜ್ಞಾನೋತ್ಪತ್ತಿಯೊಸಗೆಯಲ್ಲಿ ನನ್ನ ಸ್ಥಿರಭಕ್ತಿಯಿಂದಾಗಿ ನನಗೆ ಅವಧಿಜ್ಞಾನವುಂಟಾಯಿತು. ತತ್ಫಲವಾಗಿ ನನ್ನ ನಿನ್ನ ಮತ್ತು ನಿನ್ನ ಗಂಡನ ಜನ್ಮಾಂತರಗಳನ್ನು ತಿಳಿಯಲು ಶಕ್ತನಾದೆನು. ಅದನ್ನು ಮೊದಲಿನಿಂದ ಕೊನೆಯವರೆಗೂ ಹೇಳುತ್ತೇನೆ, ಕೇಳು. ನಾನು ಈ ಭವಕ್ಕೆ ಹಿಂದಿನ ಐದನೆಯ ಭವದಲ್ಲಿ ಪುಂಡರೀಕಿಣಿಯಲ್ಲಿ ಕೇಶವಮಹೀಶನಿಗೆ[1] ಚಂದ್ರಕೀರ್ತಿಯೆಂಬ ಮಗನಾಗಿ ಹುಟ್ಟಿದೆನು. ಜಯಕೀರ್ತಿಯು ನನ್ನ ಗೆಳೆಯ. ನಾವಿಬ್ಬರೂ ಒಡನೆ ಬೆಳೆದು ಅಣುವ್ರತವನ್ನು ಸ್ವೀಕರಿಸಿದೆವು. ಗೃಹಸ್ಥಧರ್ಮವನ್ನಪ್ಪಿದೆವು. ನಾನೂ ನನ್ನ ಗೆಳೆಯನೂ ಜೀವಿತದ ಕೊನೆಯ ಕಾಲದಲ್ಲಿ ಪ್ರೀತಿವರ್ಧನೋದ್ಯಾನದಲ್ಲಿ ಚಂದ್ರಸೇನಾಚಾರ್ಯರ

1. ಪೂರ್ವಪುರಾಣದಲ್ಲಿ ಈತನನ್ನು ಅರ್ಧಚಕ್ರಿಯೆಂದು ಕರೆಯಲಾಗಿದೆ (ಪೂ.ಪು. ೭-೮)

ಪುಟ್ಟಿದಂ, ಅಂತಿರ್ವರುಮಮರಾಂಗನಾಪಾಂಗವಿಳೋಕಮನಸುಖಮನನುಭವಿಸಿ ಬಂದು ಪುಷ್ಕರವದ್ವೀಪದ ಮೂಡಣ ಮಂದರದ ಪೂರ್ವವಿದೇಹದ ಮಂಗಳಾವತೀವಿಷಯದ ರತ್ನಸಂಚಯ ಪುರಾಧಿಪಂ ಶ್ರೀಧರಂಗಮಾತನ ಮನೋಹರಿ ಮನೋಹರಿಗಂ ಶ್ರೀವರ್ಮನುಂ ವಿಭೀಷಣನುಮೆಂಬ ಪೆಸರೊಳ್ ಬಲದೇವ ವಾಸುದೇವರಾಗಿ ಬಳೆಯೆ ಮದೀಯಜನಕನೆಮ್ಮಿರ್ವರುಮನಧಿರಾಜಯುವರಾಜ ಪದವಿಯೊಳ್ ನಿಱಿಸಿ,

ಅಱಿವಂ ಮೆಱೆದೆರಡಱಿಯದ
ತಱಿಸಲವಮರ್ದಿರೆ[೧] ಸುಧರ್ಮಮುನಿಪದಪದ್ಮ
ಕ್ಕೆಱಗಿ ಜಿನರೂಪಮೆಂಬೊಂ
ದಱಿವಿಡಿದ[೨]ಘಬಲಮನಲಿದು ಶಿಲೆಯೊಳ್ ಪೊಯ್ದಂ ೫೧

ವ॥ ಎಮ್ಮ ತಾಯ್ ಮನೋಹರಿಯುಮೆಮ್ಮೊಳಪ್ಪ ಮೋಹಂ ಕಾರಣಮಾಗೆ ತಪಮಂ ಕೈಕೊಳ್ಳದೆ ಸಕಳಶ್ರಾವಕವ್ರತಂಗಳಂ ಕೈಕೊಂಡು ಪಲವುಂ ತೆಱದ ನೋಂಪಿಗಳಂ ನೋಂತು ಜೀವಿತಾಂತ್ಯದೊಳೀಶಾನಕಲ್ಪದೊಳ್ ಶ್ರೀಪ್ರಭವವಿಮಾನದೊಳ್ ಲಲಿತಾಂಗದೇವನಾದಳ್, ಅನ್ನೆಗಮಿತ್ತ ನಿಧಾನಮಂ ತೋಱಿ ಕಣ್ಣಂ ಕಳೆವಂತೆ,

ಸನ್ನಿಧಿಯಲ್ಲಿ ಸನ್ಯಾಸವನ್ನಪ್ಪಿ ಆಹಾರವನ್ನು ಬಿಟ್ಟೆವು. ಸಮಾಧಿವಡೆದು ಮಹೇಂದ್ರ ಕಲ್ಪದಲ್ಲಿ ಏಳುಸಾಗರಪ್ರಮಿತಆಯುಷ್ಯವನ್ನು ಪಡೆದು ಸಾಮಾನಿಕದೇವನಾಗಿ ಹುಟ್ಟಿದೆನು. ಜಯಕೀರ್ತಿಯು ತನ್ನ ಐಶ್ವರ್ಯಕ್ಕೆ ತಕ್ಕಂತೆ ಆ ಕಲ್ಪದಲ್ಲಿ ಹುಟ್ಟಿದನು. ನಾವಿಬ್ಬರೂ ಸುರಾಂಗನೆಯರ ಕಟಾಕ್ಷವೀಕ್ಷಣಸುಖಕ್ಕೆ ಪಾತ್ರರಾದೆವು. ಪುಷ್ಕರದ್ವೀಪದ ಮೂಡಣ ಮಂದರದ ಪೂರ್ವವಿದೇಹದ ಮಂಗಳಾವತೀದೇಶದ ರತ್ನಸಂಚಯ ಪುರಾಧೀಶನಾದ ಶ್ರೀಧರನಿಗೂ ಅವನ ಹೆಂಡತಿ ಮನೋಹರಿಗೂ ಶ್ರೀವರ್ಮ, ವಿಭೀಷಣರೆಂಬ ಹೆಸರಿನಲ್ಲಿ ಬಲದೇವ. ವಾಸುದೇವರೆಂದೆನಿಸಿಕೊಂಡು ಬೆಳೆದೆವು. ನಮ್ಮ ತಂದೆಯು ನಮ್ಮಿಬ್ಬರನ್ನೂ ಅಧಿರಾಜ ಯುವರಾಜರನ್ನಾಗಿ ನಿಯಮಿಸಿದನು. ೫೧. "ನಮ್ಮ ತಂದೆಗೆ ಜ್ಞಾನವು ಮೆರೆಯಿತು, ಎರಡಿಲ್ಲ ಎಂಬ ನಿಶ್ಚಯವುಂಟಾಯಿತು. ಸುಧರ್ಮಮುನಿಯ ಪಾದಕಮಲಗಳಿಗೆ ನಮಸ್ಕರಿಸಿ ಜಿನಜ್ಞಾನವನ್ನು ಪಡೆದನು. ಅಘಬಲವನ್ನು (ಪಾಪವನ್ನು) ಶಿಲೆಯ ಮೇಲೆ ಹೊಯ್ದನು. (ಅವನು ಸಿದ್ಧ (ಮುಕ್ತ)ನಾದನು). ವ॥ "ನಮ್ಮ ತಾಯಿ ಮನೋಹರಿಯು ನಮ್ಮ ಮೇಲಿನ ಮೋಹದಿಂದ ತಪವನ್ನು ಕೈಗೊಳ್ಳಲಿಲ್ಲ. ಸಕಲ ಶ್ರಾವಕವ್ರತಗಳನ್ನು ಕೈಕೊಂಡಳು. ನೋಂಪಿಗಳನ್ನು ನೋಂತಳು, ಜೀವಿತದ ಕೊನೆಯಲ್ಲಿ ಈಶಾನಕಲ್ಪದಲ್ಲಿ ಶ್ರೀಪ್ರಭವಿಮಾನದಲ್ಲಿ ಲಲಿತಾಂಗ[1] ದೇವನಾಗಿ ಜನಿಸಿದಳು. ಇತ್ತಲಾಗಿ ನಿಧಿಯನ್ನು ತೋರಿ ಕಣ್ಣನ್ನು ಕಳೆಯುವ ಹಾಗೆ.

---

೧ ಗ.-ಅಱಿವುಂ ಮಱಿವುಂ ತನ್ನೊಳ್ ನೆಱಿದಿರೆ ತಱಿಸಲೆ. ೨ ಗ.-ದೆಱಿವಿಡಿದ.

1 ಈ ಲಲಿತಾಂಗನು ಸ್ವಯಂಪ್ರಭೆಯ ಪತಿಯಾದ ಲಲಿತಾಂಗನಲ್ಲ.

ಬಿದಿಯೆಂಬಾರಡಿಗಳ್ಳನೆನ್ನನುಜನಂ ಗೋವಿಂದನಂ ನಿರ್ನೆರು
ಯ್ವುದುಮಿನ್ನೇ ತೊದಳೊಂದೆ ಕಿಚ್ಚಿನಗಮಿಂತೀತಂಗಮಿನ್ನೀತನಿ
ಲ್ಲದೆ ಪೇೞಿ ಮಾನಸವಾೞ ಮೋಹಮೆನಗಿನ್ನೇ ಬಾರ್ತೆಯೆಂದುಗ್ರಶೋ
ಕದಿನಾಕ್ರಂದಿಸಿದೆಂ ಸಹೋದರವಿಯೋಗೋದ್ವೇಗವೇಗೆಯ್ದದೋ ೫೨

ವ॥ ಅಂತು ವಿಭೀಷಣವಿಪತ್ತಿಯೊಳತಿಪ್ರಲಾಪಂಗೆಯ್ವನ್ನೆಗಂ ಶೋಕಾವೇಗಮನಱಿದು ಮುನ್ನಿನ ಭವದ ಜನನೀಸಂಬಂಧಮೋಹಂ ಕಾರಣಮಾಗೆ ಲಲಿತಾಂಗದೇವಂ ಬಂದು,

ಕಟಿದವರ್ಗಟ್ಟಿದಟಿಲ್ದವರೇಟ್ಟರೆ ಮೇಣವರಿಂ ಬೞಿಕ್ಕೆ ತಾ
ಮುೞಿವರೆ ಮೇಣದಂತಮರಣಂ ತಮಗಂ ಬರ್ದುಕಿಲ್ಲ ಧರ್ಮಮಂ
ಘಟಿಯಿಸಿಕೊಳ್ವುದೊಂದೆ ಚದುರಿಂತುಟು ಸಂಸೃತಿಧರ್ಮಮೇಕೆ ಬಾ
ಯಟಿವುದದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ[೧] ೫೩

ಅವನೀವ್ಯೋಮಮನೆಯ್ದೆ ಪರ್ಬಿ ಬಳೆದುಂ ಶೋಕಾನುಬಂಧಾಂಧಬಾಂ
ಧವಹಾಹಾರವಮೆಂತುಮೆಯ್ದುದು ವಲಂ ಲೋಕಾಂತರಪ್ರಾಪ್ತನ
ಪ್ಪವನಂ ನಿರ್ಭರಪೂರಮಾಗಿಯುಮತಿಸ್ನಿಗ್ಧಾಶ್ರುಧಾರಾಜಳ
ಪ್ಲವಮುಂ ಬಾರಿಸಲೆಂತುಮಾಱದು ವಲಂ ಕಾಳೋರಗಗ್ರಸ್ತನಂ ೫೪

೫೨. "ವಿಧಿಯೆಂಬ ಸುಲಿಗೆ ಮಾಡುವ ಕಳ್ಳನು ನನ್ನ ತಮ್ಮ ಗೋವಿಂದನನ್ನು (ವಿಭೀಷಣನನ್ನು) ನಿಷ್ಕಾರಣವಾಗಿ ಒಯ್ದನು. 'ಸುಳ್ಳೇನು, ಇವನಿಗೂ ನನಗೂ ಒಂದೇ ಬೆಂಕಿ ತಗುಲಿತು[1], ತಮ್ಮನಿಲ್ಲದೆ ನನ್ನ ಮನಸ್ಸು ಆಳವಾದ ಮೋಹದಲ್ಲಿ ಮುಳುಗಿತು, ಇನ್ನೇನು ಗತಿ?' ಎಂದು ನಾನು ಉಗ್ರಶೋಕದಲ್ಲಿ ಅದ್ದಿಹೋದೆನು. ವ॥ ಆಗ ಶೋಕದ ಆವೇಗವನ್ನರಿತು ಮುನ್ನಿನ ಜನ್ಮದ ಜನನೀಮೋಹದ ಕಾರಣವಾಗಿ ಲಲಿತಾಂಗದೇವನು ಬಂದು, ೫೩. "ಸತ್ತವರಿಗೇಕೆ ಅಳಬೇಕು? ಅತ್ತರೆ ಅವರೇಳುವರೆ? ಅತ್ತವರಾದರೂ ಉಳಿಯುವರೆ? ಮರಣದ ಸ್ವಭಾವವೇ ಅದು. ಯಾರೂ ಬದುಕರು ಈ ಜಗತ್ತಿನಲ್ಲಿ. ಆದ್ದರಿಂದ ಧರ್ಮವನ್ನು ಗಳಿಸಿಕೊಳ್ಳುವುದೊಂದೇ ಜಾಣತನ. ಇದು ಸಂಸಾರಧರ್ಮದ ಸ್ವರೂಪ. ಇದಕ್ಕಾಗಿ ಏಕೆ ಬಾಯ್ದೆರೆಯಬೇಕು? ಏಕೆ ಚಿಂತಿಸಬೇಕು? ಹಲುಬಬೇಕು ಏಕೆ? ನೋಯುವುದೇಕೆ? ೫೪. "ಶೋಕಾಂಧರಾದ ಬಾಂಧವರ ಭೂವ್ಯಾಕಾಶಗಳನ್ನು ಮುಟ್ಟಿದ ಹಾಹಾರವವು ಲೋಕಾಂತರ ಪ್ರಾಪ್ತನನ್ನು ಮುಟ್ಟುವುದಿಲ್ಲ. ಹಾಗೆಯೇ ಕಾಲೋರಗಪೀಡಿತನನ್ನು ಸ್ನೇಹಪೂರ್ಣರಾದ ಜನರ ಅಶ್ರುಜಲಪ್ರವಾಹವು ಎಂತೂ ನಿವಾರಿಸಲಾರದು.

---

೧ ಗ-ಪುಸ್ತಕದಲ್ಲಿ ಈ ಪದ್ಯವಿಲ್ಲ.

1 ಈಗಲೇ ನಾನು ಸಾಯುತ್ತೇನೆ ಎಂದು ಆಶಯ ಅಥವಾ ಶೋಕವೇ ಅಗ್ನಿಯಾಗಿ ನನ್ನನ್ನು ಸುಡುತ್ತಿದೆ ಎಂದು ಅಭಿಪ್ರಾಯ.

ತನಯಂ ತಾಯ್ತಂದೆ ತಮ್ಮಂ ಕೆಳೆಯನಳಿಯನಾಳ್ವಜ್ಜನೆಮ್ಮಜ್ಜನಿಪ್ಪಾಂ
ಗನೆಯೆಂದಾರಾರನಾವಾವಜೆಕೆಯ ಭವಸಂಬಂಧಮಂ ಕಂಡು ನಿಚ್ಚಂ
ನೆನೆವೋ ನೀನಾರ್ಗೆ ನಿನ್ನಂ ಪಳಯಿಸುವವರಾರ್ಗೇಕೆ ಶೋಕಿಪ್ಪೆ ಮಾಣ್ಮಾ
ಮನದೊಳ್ನೀನಾರ್ಪೊಡಿಂ ನಿನ್ನೊಡಲನೆ ಜಿನದೀಕ್ಷಾಕ್ಷಮಂ ಮಾಡು ಪುತ್ರಾ ೫೫

ಅತಿಶೋಕಾಗ್ನಿಯೊಳದ್ದು ಬೆದ್ದು ಪುದಿದಾತ್ಮಧ್ಯಾನದಿಂ ಘೋರದು
ರ್ಗತಿಯಂ ಪೊಕ್ಕು ದುರಂತದುಃಖಮನುಣಲ್ವೇಡಿಂಬುಕೆಯ್ ಪೆಂಪುವೆ
ತ್ತ ತಪಃಪೋತದಿನಣ್ಣ ನೀಂ ತಡಿಯನೆ[೧]ಯ್ದಂತಲ್ಲದಿಂತೀ ಚತು
ರ್ಗತಿಸಂಸಾರಪಯೋಧಿಯಂ ಪೊಱಮಡಲ್ ಮತ್ತಿಲ್ಲ ನೀನಾರ್ತಪೈ ೫೬

ವ|| ಎಂಬುದುಂ ಮುನ್ನಾದ ಶೋಕರಸಮೆಲ್ಲಂ ಪೋಗಿ ನಿರ್ವೇಗರಸಂ ಪುಟ್ಟ ಸಿದ್ಧರಸಮಂ ಮುಟ್ಟಿದ ಲೋಹದಂತೆ ಶುದ್ಧಾಂತರಂಗನಾಗಿ,

||ಪೃಥ್ವಿ||

ಮೊಗಂ ಮುಱಿಯದೆಲ್ಲಮಂ ತೊಱೆದು ವಿಶ್ವವಿಶ್ವಂಭರಾ
ದಿಗಂಬರತಟಂಬರಂ ಬಳಸೆ ಕೀರ್ತಿವಲ್ಲೀಚಯಂ
ದಿಗಂಬರವಿಳಾಸಮಂ ಬಯಕೆ ತೀರ್ವಿನಂ ತಾಳ್ದಿದೆಂ
ಯುಗಂಧರಮಹಾಮುನೀಂದ್ರಪದಪಂಕಜೋಪಾಂತದೊಳ್ ೫೭

೫೫. ಮಗ, ತಾಯಿ, ತಂದೆ, ತಮ್ಮ, ಸ್ನೇಹಿತ, ಅಳಿಯ, ಆಳು, ಅಜ್ಜ, ಅಜ್ಜಿ ಮುಂತಾದವರನ್ನು ಯಾವ ಯಾವ ಭವಸಂಬಂಧವನ್ನು ಕಂಡು ನೆನೆವೆ! ನೀನು ಯಾರು ಯಾರಿಗಾಗಿ ಶೋಕಿಸುವೆ? ನಿನ್ನನ್ನು ಕುರಿತು ಶೋಕಿಸುವವರಾರು? ಮನಸ್ಸು ಮಾಡಿ ನೀನು ನಿನ್ನೊಡಲನ್ನು ಜಿನದೀಕ್ಷೆಗೊಪ್ಪಿಸು, ಪುತ್ರಾ! ೫೬. ಶೋಕಾಗ್ನಿಯಲ್ಲಿ ಸುಟ್ಟು ಸಾವನ್ನಪ್ಪಿ, ದೇಹಾತ್ಮಜ್ಞಾನದಿಂದ ಘೋರದುರ್ಗತಿಯನ್ನು ಹೊಂದಿ ದುರಂತವಾದ ದುಃಖವನ್ನು ಉಣಬೇಡ. ಉತ್ತಮವೆನಿಸಿದ ತಪಸ್ಸೆಂಬ ತೆಪ್ಪದಿಂದ ದಡವನ್ನು ಮುಟ್ಟು. ಅದಿಲ್ಲದಿದ್ದರೆ ಚತುರ್ಗತಿ[1]ರೂಪವಾದ ಸಂಸಾರದಿಂದ ಹೊರಬರಲು ನಿನಗೆಲ್ಲಿಂದ ಸಾಧ್ಯ? ವ|| ಎಂದು ಹೇಳಲು ನನಗೆ ಶೋಕವೆಲ್ಲವೂ ತೊಲಗಿ ನಿರ್ವೇದರಸವು ಹುಟ್ಟಿತು. ಸಿದ್ಧರಸವನ್ನು ಮುಟ್ಟಿದ ಲೋಹದ ಹಾಗೆ ಶುದ್ಧಮನಸ್ಕನಾದೆನು. ೫೭. ಮುಖವನ್ನು ಗಂಟಿಕ್ಕದೆ ಸಂತೋಷದಿಂದ ಎಲ್ಲವನ್ನೂ ತೊರೆದು ವಿಶ್ವದ ದಿಕ್ತಟಗಳವರೆಗೆ-ಕೀರ್ತಿಲತೆಯನ್ನು ಹಬ್ಬುವಂತೆಸಗಿ, ಯುಗಂಧರ ಮುನೀಂದ್ರನ ಪದಪಂಕಜದ ಬಳಿಯಲ್ಲಿ ದಿಗಂಬರದೀಕ್ಷೆಯನ್ನು ಪಡೆದೆನು. ವ|| ಅಂತು ಹತ್ತುಸಾವಿರ ರಾಜೇಶ್ವರರೊಡನೆ ಜಿನೇಂದ್ರರೂಪವನ್ನು ಪಡೆದು ಸರ್ವತೋಭದ್ರ, ಸಿಂಹವಿಕ್ರೀಡಿತಗಳೆಂಬ ತಪಸ್ಸನ್ನಾಚರಿಸಿ

---

೧ ಕ.-ತಡೆಯದೆಯ್ದಂ.

1. ಚತುರ್ಗತಿ : ದೇವಗತಿ, ನಾರಕಗತಿ, ಮನುಷ್ಯಗತಿ, ತಿರ್ಯಗ್ಗತಿ.

ವ॥ ಅಂತು ದಶಸಹಸ್ರ[೧]ಧರಣೀಶ್ವರರೊಡನೆ ಜಿನೇಶ್ವರರೂಪಮಂ ತಾಳ್ದಿ ಸರ್ವತೋಭದ್ರಸಿಂಹವಿಕ್ರೀಡಿತಂಗಳೆಂಬ ತಪದೊಳ್ ನೆಗಟ್ದು ಜೀವಿತಾಂತ್ಯದೊಳಚ್ಯುತಕಲ್ಪದೊಳ್ ದ್ವಾವಿಂಶತಿಪಾರಾವಾರ ಪರಮಾಯುಷ್ಯನೆನಚ್ಯುತೇಂದ್ರನಾಗಿ,

ಎನಗಿನಿವಿರಿದು ಸುಖಂ ಮ
ಜ್ಜನನೀಚರದಿವಿಜನಿಂದಮಾಯ್ತೆಂದು ಕೃತಂ
ಮನದೊಳ್ ಪುದಿದು ಪೊದಟ್ದೆ
ರ್ಪಿನೆಗಂ ಲಲಿತಾಂಗದೇವನಂ ಪೂಜಿಸಿದೆಂ ೫೮

ವ॥ ಅಂತಾ ದೇವನನೀಶಾನಕಲ್ಪದಿಂದತಿಪ್ರೀತಿವರ್ಧನಕರಮೆಂಬ ಮದ್ವಿಮಾನಮಂ ಪ್ರೀತಿವರ್ದನ ಕರಮಾಗೇಱಿಸಿಕೊಂಡುಯ್ದು ಮದೀಯಕಲ್ಪದೊಳಗಗ್ಗಳಮಪ್ಪ ದಿವ್ಯಾಭರಣಾಂಬರಾನುಲೇಪನ ಕುಸುಮಧಾಮಾದಿಗಳಿನೆನ್ನಲಂಪುಮಟ್ಟಿಱುಂ ನೆಗಟೆ ಪೂಜಿಸಿದೆಂ, ಆ ದಿವಿಜನುಮೇಕ ರತ್ನಾಕರೋಪಮಾಯುರವಸಾನದೊಳ್ ಜಂಬೂದ್ರುಮೋಪಲಕ್ಷಿತ ಜಂಬೂದ್ವೀಪದ ಪೂರ್ವವಿದೇಹದ ಮಂಗಳಾವತೀ ವಿಷಯದ ವಿಜಯಾರ್ಧಪರ್ವತದುತ್ತರಶ್ರೇಢಿಯ ಗಂಧರ್ವಪುರಮನಾಳ್ವ ವಿದ್ಯಾಧರರಾಜಂ ವಾಸವಂಗಂ ಆತನಂತಃಪುರಪ್ರಧಾನೆ ಪ್ರಭಾವತಿಗಂ ಮಹೀಧರನೆಂಬ ತನೂಜನಾಗೆ ವಾಸವಂ ಮಹೀಧರಂಗೆ ವಿದ್ಯಾಧರವಿಭೂತಿಯಂ ಕೊಟ್ಟು ವಿಜಯಾಖ್ಯಮುನಿಮುಖ್ಯ ನಿಕಟದೊಳ್

ಜೀವಿತದ ಕೊನೆಯಲ್ಲಿ ಅಚ್ಯುತಕಲ್ಪದಲ್ಲಿ ಇಪ್ಪತ್ತೆರಡು ಸಾಗರದಷ್ಟು ಪರಮಾಯುಷ್ಯವನ್ನು ಗಳಿಸಿ ಅಚ್ಯುತೇಂದ್ರನಾದೆನು. ೫೮. ನನಗೆ ಪೂರ್ವಜನ್ಮದಲ್ಲಿ ತಾಯಿಯಾಗಿದ್ದ ಲಲಿತಾಂಗನೆಂಬ ಅಮರನಿಂದ ಇಷ್ಟು ದೊಡ್ಡ ಸುಖವೊದಗಿತು ಎಂಬ ಕೃತಜ್ಞತೆಯಿಂದ ಆ ಲಲಿತಾಂಗದೇವನನ್ನು ಪೂಜಿಸಿದೆನು. ವ॥ ಲಲಿತಾಂಗದೇವನನ್ನು ಈಶಾನಕಲ್ಪದಿಂದ ಅತಿಪ್ರೀತಿ-ವರ್ಧನಕರವೆಂಬ ನನ್ನ ವಿಮಾನದಲ್ಲಿ ಸಂತೋಷವುಂಟಾಗುವಂತೇರಿಸಿಕೊಂಡು ನನ್ನ ಕಲ್ಪದಲ್ಲಿ ಅತಿಶ್ರೇಷ್ಠವೆನಿಸಿದ ಆಭರಣ, ಬಟ್ಟೆ, ಅನುಲೇಪನ, ಕುಸುಮಾದಿಗಳಿಂದ ನನ್ನ ವೈಭವಕ್ಕೂ ಪ್ರೀತಿಗೂ ತಕ್ಕಂತೆ ಪೂಜಿಸಿದೆನು. ಅವನು ಏಕಸಾಗರೋಪಮಾಯುಸ್ಸಿನ ಕೊನೆಯಲ್ಲಿ ಜಂಬೂದ್ವೀಪದ ಪೂರ್ವವಿದೇಹದ ಮಂಗಳಾವತೀವಿಷಯದ ವಿಜಯಾರ್ಧ ಪರ್ವತದ ಉತ್ತರಶ್ರೇಣಿಯ ಗಂಧರ್ವಪುರದ ವಿದ್ಯಾಧರ ರಾಜನಾದ ವಾಸವನಿಗೂ ಅವನ ಪತ್ನಿಯಾದ ಪ್ರಭಾವತಿಗೂ ಮಹೀಧರನೆಂಬ ಮಗನಾಗಿ ಹುಟ್ಟಿದನು. ವಾಸವನು ತನ್ನ ಮಗ ಮಹೀಧರನಿಗೆ ವಿದ್ಯಾಧರೈಶ್ವರ್ಯವನ್ನು ನೀಡಿ ಅರಿಂಜಯನೆಂಬ ಮುನಿಯ ಸಮೀಪದಲ್ಲಿ ಮುಕ್ತಾವಳೀ ತಪಸ್ಸನ್ನು ಕೈಕೊಂಡು ಮೋಕ್ಷವನ್ನೈದಿದನು. ಪ್ರಭಾವತಿಯೂ ಪದ್ಮಾವತ್ಯಾರ್ಯಕೆಯ ಬಳಿಯಲ್ಲಿ ರತ್ನಾವಳೀತಪವನ್ನು ಮಾಡಿ ಪ್ರತೀಂದ್ರಪದವಿಯನ್ನು ಪಡೆದಳು. ಇತ್ತ ಮಹೀಧರನೂ ಒಮ್ಮೆ ಪುಷ್ಕರಾರ್ಧದ ಪಡುವಣ ಮಂದರದ ಪೂರ್ವವಿದೇಹದ ಸೀತಾನದಿಯ ತೆಂಕಣತಡಿಯ ವತ್ಸಕಾವತೀವಿಷಯದ ಪ್ರಭಾಕರೀ ಪುರಿಯಲ್ಲಿ ವಿನಯಂಧರಯೋಗಿಗಳ ಪರಿನಿರ್ವಾಣಪೂಜೆಯನ್ನು ಮಾಡಿದನು. ಬಳಿಕ

೧ ದಶಸಹಸ್ರಾರ್ಧ ಎಂದು ಪೂರ್ವಪುರಾಣದಲ್ಲಿ ಇದೆ (೯-೨೨) ದಶಸಹಸ್ರಾರ್ಧ = ಐದುಸಾವಿರ

ಮುಕ್ತಾವಳಿತಪಮಂ ಕೈಕೊಂಡು ಗೆಲ್ಲಂಗೊಂಡಂ, ಪ್ರಭಾವತಿಯುಂ ಪದ್ಮಾವತ್ಯಾರ್ಯಿಕಾಪಾದಮೂಲ ದೊಳುಪಾರ್ಜಿತರತ್ನಾವಳಿತಪದೊಳಚ್ಯುತಕಲ್ಪದೊಳ್ ಪ್ರತೀಂದ್ರಪದವಿಯಂ ಪಡೆದಳ್, ಇತ್ತ ಮಹೀಧರನುಮೊರ್ಮೆ ಪುಷ್ಕರಾರ್ಧದ ಪಡುವಣ ಮಂದರದ ಪೂರ್ವವಿದೇಹದ ವತ್ಸಕಾವತೀವಿಷಯದ ಪ್ರತಿಬದ್ಧಪ್ರಭಾಕರೀಪುರಿಯೊಳ್[೧] ವಿನಯಂಧರಯೋಗಿಗಳ ಪರಿನಿರ್ವಾಣಪೂಜೆಯಂ ಮಾಡಿ ಮೇರುಗಿರಿಯ ನಂದನವನದ ಪೂರ್ವಧಿಗ್ಭಾಗದಕೃತ್ರಿಮ ಚೈತ್ಯಾಲಯಂಗಳೊಳ್ ವಂದನಾಭಕ್ತಿನಿಮಿತ್ತಂ ಬಂದಿರೆ ಮಹೀಧರನನಾನಲ್ಲಿ ಕಾಣಲೊಡಮಱಿದು,

ಏಂ ಗಗನೇಚರ ನೀಂ ಲಲಿ
ತಾಂಗನೆಯಾದಂದು ಮಾತೃಚರನೆಂದಱಿದು
ತ್ತುಂಗವಿಭವಂಗಳೆಸೆಯೆ ಮ
ನಂಗೊಳೆ ಪೂಜಿಸಿದನಚ್ಯುತೇಂದ್ರನೆನಱಿವೋ ೫೯

॥ಪೃಥ್ವಿ॥

ಪೆಸರ್ ನಿನಗೆ ಕೇಳ್ ಮೊಸರ್ ಪೆಱರ್ಗೆ ನಿನ್ನ ಮೆಯ್ಯೊಳ್ವ ದ
ಡ್ಡಸಕ್ಕೆ ಗುಱಿಯಪ್ಪುದೊಡ್ಡಿಱಿದು ತಿಂಬರನ್ಯಕ್ರಿಯಾ
ವಸಾನವಿರಸಂಗಳಿಂದ್ರಿಯಸುಖಂಗಳಿಂತಾದ ಸಂ
ತಸಂ ಗತವಿವೇಕ ಪೇೞ್ ನಿನಗಸಾರಸಂಸಾರದೊಳ್ ೬೦

ಉಡಿಸಿಯುಮೂಡಿಯುಮಟ್ಟೆಯಿ
ನೆಡೆಯುಡುಗದೆ ಸಲಿಸಿ ಪಲವು ಕಾಲಂ ಪುದುವಾ
ೞ್ದೊಡಲಾತ್ಮನೊಡನೆ ಪೋಗದೆ
ಕಡಗಣಿಸುವುದೆಂದೊಡುೞಿದರಂ ನಂಬುವುದೇ ೬೧

ಮೇರುಗಿರಿಯ ಪೂರ್ವದಿಗ್ಭಾಗದ ಅಕೃತ್ರಿಮ ಚೈತ್ಯಾಲಯಗಳಲ್ಲಿ ವಂದನಾಭಕ್ತಿಯನ್ನು ಸಲ್ಲಿಸಬಂದಿದ್ದನು. ಆಗ ಮಹೀಧರನನ್ನು ನಾನು ಗುರುತಿಸಿ ಹೀಗೆಂದೆನು: ೫೯. ಓ ಗಗನೇಚರ! ನೀನು ಲಲಿತಾಂಗನೆಯಾದಾಗ ನನಗೆ ಮಾತೃಚರನಾಗಿದ್ದೆ. (ನನಗೆ ತಾಯಿಯಾಗಿದ್ದೆ). ಆದ್ದರಿಂದ ನಾನು ಉತ್ತುಂಗವೈಭವದಿಂದ ಭಕ್ತಿಪೂರ್ವಕವಾಗಿ ನಿನ್ನನ್ನು ಪೂಜಿಸಿದೆನು. ನಾನು ಅಚ್ಯುತೇಂದ್ರನೆಂದು ತಿಳಿ. ೬೦. ಹೆಸರು ನಿನಗೆ ಮೊಸರು. ಪರರಿಗೆ ನಿನ್ನ ದೇಹವು ಡೊಂಬರ ಡೋಲಿಗೆ ಗುರಿಯಾಗುವುದು! ಅನ್ಯಕ್ರಿಯಾವಸಾನವಿರಸಗಳಾದ ಇಂದ್ರಿಯಸುಖಗಳು ನಿನ್ನನ್ನು ಮುತ್ತಿ ತಿನ್ನುವುವು! ವಿವೇಕರಹಿತ! ನಿನಗೆ ಸಿಕ್ಕುವುದು ಅಸಾರಸಂಸಾರದಲ್ಲಿ ಇಂಥ ಸುಖ! ೬೧. ವಸ್ತ್ರಾಭರಣಗಳನ್ನುಡಿಸಿದರೂ ಸೊಗಸಾದ ಊಟವನ್ನುಣ್ಣಿಸಿದರೂ, ಪ್ರೀತಿಯನ್ನೆಡೆಬಿಡದೆ ಸಲ್ಲಿಸಿದರೂ, ಕೆಲವು ಕಾಲ ಕೂಡಿ ಬಾಳಿದರೂ ದೇಹವು ಆತ್ಮನೊಡನೆ ಹೋಗದು. ಆದ್ದರಿಂದ ಅದು ಕಡೆಗಣಿಸಲು ಅರ್ಹವಾದದ್ದು. ಅಂದಮೇಲೆ ಇತರರನ್ನು ನಂಬುವುದೆಂತು?

೧ ಕ-ಪ್ರಭಾವತೀಪುರಿಯೊಳ್

ಎನಿತು ಪರಿಗ್ರಹದ ತೊಡ
ರ್ಪನಿತೆ ಮನೋದುಃಖಮದಱ ಕುಂದೆನಿತು ಮನ
ಕ್ಕನಿತೆ ಸುಖಮೆಂಬುದಂ ನೆ
ಟ್ಟನೆ ತಿಳಿದಂ ಜನ್ಮಜಳಧಿಯೊಳ್ ಮುೞುಗುವನೇ ೬೨

ಭೋಗಿಪೆನೆನ್ನ ಜವ್ವನಮುಮೀ ಧನಮುಂ ತವುವನ್ನೆಗಂ ಕುಚಾ
ಭೋಗಭರಾನತಾಂಗಿಯರೊಳನ್ನೆಗಮತ್ತಱನಂ ತಗುಳ್ವೆನೆಂ
ತಾಗಿಯುಮೆಂಬ ನಿನ್ನ ಮೊಲಗಟ್ಟಿಲೆಗಾಂ ಬೆಱಗಾದೆನೆಂದು ಪೇ
ಟೀಗಳೊ ಬಯ್ಗಿಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ ೬೩

ಸಾಲದೆ ವಿಷಯಾಮಿಷವಿಷ
ಲೋಲತೆ ಭವವಿಷಮವಿಷಧಿಯೊಳಗೆನಿತಂ ನೀ
ನೋಲಾಡುವೆಯೆನೆಯೆಡೆಯಿಂ
ತೋಲಾಡಿದ ಬಿರುದಿನಂಕದಂತಿರೆ ಖಚರಂ ೬೪

ವ|| ಇನಿಸಪ್ಪೊಡಂ ತಡೆಯದೆನ್ನ ನುಡಿದ ನುಡಿಯೇ ತನಗೆ ಮನಃಕಂಪಮಂ ಪಡೆಯೆ ಮಹೀಕಲ್ಪನೆಂಬ[೧] ನಿಜತನೂಜಂಗೆ ರಾಜ್ಯಭಾರಮಂ ಕೊಟ್ಟು ಜಗನ್ನಂದನಗುರುಗಳಲ್ಲಿ ಶಿಷ್ಯತ್ವಮಂ ಪೂಣ್ದು ಕನಕಾವಳಿ ತಪಃಪ್ರಭಾವದೊಳ್ ಪ್ರಾಣಪರಿತ್ಯಾಗದಿಂ ಪ್ರಾಣತೇಂದ್ರನಾಗಿ,

ಇರ್ಪತ್ತುಸಾಗರೋಪಮ
ಮಾರ್ಪನ್ನೆಗಮುಂಡು ಸುಖಮನಾತಂಗೆ ಗಡಂ
ಬರ್ಪುದುಮಾಯ್ತಿಳೆಗಂತಕ
ಸರ್ಪಂ ಕೊಳೆ ಬರ್ದುಕುವನ್ನರಾರ್ ಸಂಸೃತಿಯೊಳ್ ೬೫

೬೨. ಪರಿಗ್ರಹದ ತೊಡರಿನಷ್ಟೆ ಮನೋದುಃಖ. ಅದರ ಕುಂದಿನಷ್ಟೆ ಮನಸ್ಸೌಖ್ಯ. ಇದನ್ನರಿತವನು ಜನ್ಮಸಾಗರದಲ್ಲಿ ಮುಳುಗುವನೆ? ೬೩. ಈ ಯೌವನವೂ ಈ ಹಣವೂ ತೀರುವವರೆಗೆ ಸ್ತನಗಳ ಭಾರದಿಂದ ಬಗ್ಗಿದ ದೇಹವುಳ್ಳ ಸ್ತ್ರೀಯರನ್ನುಪಭೋಗಿಸುವೆನು. ಆಮೇಲೆ ಧರ್ಮವನ್ನು ಆಚರಿಸುವೆನು-ಎಂಬ ನಿನ್ನ ಭ್ರಾಂತಿಗೆ ನಾನು ಬೆರಗಾದೆ! ನಿನ್ನ ಜೀವಿತವು ಈಗಲೋ, ಸಾಯಂಕಾಲವೋ, ಹಗಲೋ, ನಾಳೆಯೋ, ನಾಡಿದ್ದೋ ಮುಗಿದು ಹೋಗದೇ! ೬೪. ಸ್ರಕ್ ಚಂದನ ವನಿತಾದಿ ವಿಷಯಾಮಿಷವೆಂಬ ವಿಷದಲ್ಲಿ ಲೋಲತೆಯು ಸಾಲದೆ? ಸಂಸಾರವೆಂಬ ವಿಷಮವಿಷಧಿಯಲ್ಲಿ ನೀನೆಷ್ಟು ಓಲಾಡಲು ಸಾಧ್ಯ? ಎಂದು ಹೇಳಿದೆನು. ಆಗ ಮಹೀಧರಖೇಚರನು ಸ್ವಸ್ಥಳದಿಂದ ಅಲ್ಲಾಡಿಸಿದ ವಿಜಯಧ್ವಜ (?)ದಂತಾದನು. ವ|| ನನ್ನ ಮಾತು ಅವನಿಗೆ ಮನಃಕಂಪವನ್ನುಂಟುಮಾಡಿತು. ತನ್ನ ಮಗ ಮಹೀಕಂಪನಿಗೆ ರಾಜ್ಯವನ್ನು ವಹಿಸಿ ಕೊಟ್ಟನು. ಜಗನ್ನಂದನಗುರುಗಳ ಶಿಷ್ಯನಾಗಿ ಕನಕಾವಳೀತಪವನ್ನು ಕೈಕೊಂಡು ಪ್ರಾಣಗಳನ್ನು ತೊರೆದು ಪ್ರಾಣ[1]ತೇಂದ್ರನಾದನು. ೬೫. ಇಪ್ಪತ್ತುಸಾಗರ ಪ್ರಮಿತಾಯುಷ್ಯಕಾಲದಲ್ಲಿ ಅವನು ಸುಖವನ್ನುಂಡನು. ಬಳಿಕ ಯಮನೆಂಬ ಸರ್ಪನು ಅವನನ್ನು ಕಬಳಿಸಿದನು. ಈ ಸಂಸಾರದಲ್ಲಿ ಯಾರುತಾನೆ ಬದುಕುವರು?

---

೧ ಕ-ಮಹೀಕಂಪ 1. ಪ್ರಾಣತವೆಂಬ ಹದಿನಾಲ್ಕನೆಯ ಸ್ವರ್ಗದೊಡೆಯ.

ವ|| ಅಂತು ಬಂದು ಧಾತಕೀಷಂಡದ ಮೂಡಣ ಮಂದರದಪರವಿದೇಹದ ಗಂಧಿಳವಿಷಯದಯೋಧ್ಯೆಯನಾಳ್ವ ಜಯವರ್ಮಂಗಮಾತನರಸಿ ಸುಪ್ರಭೆಗಮಜಿತಂಜಯನೆಂಬ ಮಗನಾಗಿ ಪುಟ್ಟುವುದುಂ ಜಯವರ್ಮಂ ವರ್ಮಹರನಾದ[1] ನಿಜತನೂಜನಜಿತಂಜಯಂಗೆ ಜಯಜಯನಿನಾದಪೂರ್ವಕಮುರ್ವೀಭಾರಮಂ ಕೊಟ್ಟು ಭವ್ಯಜನಮನೋನಂದನರೆನಿಸಿದಭಿನಂದನಗುರುಗಳಂ ಸಾರ್ದು ಶಾಶ್ವತಸೌಖ್ಯವರ್ಧನಕರಮಪ್ಪಾಚಾಮ್ಲವರ್ಧನತಪದೊಳ್ ನೆಗೞ್ದು ಪರಮಪದಮನೆಯ್ದಿದಂ, ಸುಪ್ರಭೆಯುಂ ಸುದರ್ಶನನಾಮಗಣಿನಿಸಮಕ್ಷದೊಳ್ ರತ್ನಾವಳಿಯಂ ನೋಂತಚ್ಯುತಕಲ್ಪದೊಳ್ ದೇವನಾಗಿ ಪುಟ್ಟಿದಳ್, ಇತ್ತಜಿತಂಜಯನುಂ ಚಕ್ರವರ್ತಿಪದಮನೆಯ್ದಿದಿಂ ಬೞಿಯಮಭಿನಂದನಜಿನಮಹಿಮೆಯಂ ಮಾಡಿ ಪಿಹಿತ ಪಾಪಾಸ್ರವದ್ವಾರನಾದುದಱಿಂ ಪಿಹಿತಾಸ್ರವನೆಂಬೆರಡನೆಯ ಪೆಸರಂ ಪಡೆದು ಸಾಮ್ರಾಜ್ಯಸುಖಮನನುಭವಿಸುತ್ತಿರೆ,

ಆನೊಂದು ದಿವಸಮಾತನ
ನಾನಂದೋದಯದೆ ಸಾರ್ದು ನೀಂ ಭವ್ಯನೆಯ
ಜ್ಞಾನಿಯವೊಲ್ ನಿನ್ನಂ ಮಱೆ
ದೇನೀ ವಿಷಯದ ಸುಖಕ್ಕೆ ಲಂಪಟನಪ್ಪೋ 	೬೬

ಅಱಿವುಂ ನೆಱಿವುಂ ತನ್ನೊಳ್
ನೆಱೆದಂದಱಿದದಱೊಳೆ[2] ಸೆಪುದಲ್ಲದೆ ಬೞಿಯಂ
ಗುಱಿನೆಱಿದೆಡೆಯೊಳ್ ಮಮ್ಮಲ
ಮಱುಗಿದೊಡಾನೆಱಿವುಮಱಿವುಮೇಂ ಕೂಡುಗುಮೇ 	೬೭

ವ|| ಆಮೇಲೆ ಧಾತಕೀಷಂಡದ ಮೂಡಣ ಮಂದರದ ಅಪರವಿದೇಹದ ಗಂಧಿಲದೇಶದ ಅಯೋಧ್ಯೆಯನ್ನು ಆಳುವ ಜಯವರ್ಮನಿಗೂ ಅವನ ಹೆಂಡತಿ ಸುಪ್ರಭೆಗೂ ಅಜಿತಂಜಯನೆಂಬ ಹೆಸರಿನಿಂದ ಮಗನಾಗಿ ಹುಟ್ಟಿದನು. ಜಯವರ್ಮನು ತನ್ನ ಕವಚಹರನಾದ ಅಜಿತಂಜಯನಿಗೆ ಜಯಶಬ್ದಪೂರ್ವಕವಾಗಿ ಭೂಭಾರವನ್ನು ಹೊರಿಸಿದನು. ಅನಂತರ ಜಯವರ್ಮನು ಭವ್ಯಜನರ ಹೃದಯಕ್ಕೆ ಸಂತೋಷಪ್ರದರಾದ ಅಭಿನಂದನ ಗುರುಗಳ ಬಳಿಗೆ ಹೋಗಿ ಶಾಶ್ವತಸೌಖ್ಯಪ್ರದವಾದ "ಆಚಾಮ್ಲ" ವ್ರತವನ್ನು ಕೈಕೊಂಡು ಪರಮಪದವನ್ನು ಮುಟ್ಟಿದನು. ಸುಪ್ರಭೆಯೂ 'ಸುದರ್ಶನ ಗಣಿನಿ'ಯ ಎದುರಿನಲ್ಲಿ 'ರತ್ನಾವಳಿ'ಯನ್ನು ನೋಂತು ಅಚ್ಯುತಕಲ್ಪದಲ್ಲಿ ದೇವನಾಗಿ ಜನಿಸಿದಳು. ಇತ್ತ ಅಜಿತಂಜಯನು ಚಕ್ರವರ್ತಿಪದವನ್ನು ಹೊಂದಿ ಅಭಿನಂದನ ಜಿನಮಹಿಮೆಯನ್ನು ಮಾಡುತ್ತಾ, 'ಪಾಪಾಸ್ರವದ್ವಾರ'ವನ್ನು ಮುಚ್ಚಿದುದರಿಂದ ಪಿಹಿತಾಸ್ರವನೆಂಬ ಹೆಸರನ್ನು ಪಡೆದು ಸಾಮ್ರಾಜ್ಯಸೌಖ್ಯವನ್ನುಂಡನು. ೬೬. ಅವನು ಆನಂದದಲ್ಲಿರಲು ನಾನೊಂದು ದಿನ ಅವನ ಬಳಿಗೆ ಹೋದೆನು. "ನೀನು ಭವ್ಯ. ಅಜ್ಞಾನಿಯಂತೇಕೆ ನೀನು ನಿನ್ನನ್ನು ಮರೆತಿರುವೆ? ವಿಷಯಸುಖಕ್ಕೆ ಏಕೆ ಪಕ್ಕಾಗಿರುವೆ? ೬೭. ತನ್ನಲ್ಲಿ ಕಲೆತಿರುವ ಜ್ಞಾನ ಮತ್ತು ಸಾಧನಸಂಪತ್ತುಗಳನ್ನು ಬಳಸಿಕೊಂಡು ಶೋಭಿಸಬೇಕಲ್ಲದೆ, ಗುರಿತಪ್ಪಿ ಅವೆರಡೂ

---

೧ ಕ-ಕವಚಹರನಾದ ೨ 'ಳಿಸೆವುದಲ್ಲದೆ' ಎಂದು ಶುದ್ಧಪಾಠವಿರಬಹುದು.

ಬಹ್ವಾರಂಭಪರಿಗ್ರಹ
ವಿಹ್ವಳನಿಂದ್ರಿಯಸುಖಾರ್ಥಿ ಸಂಸಾರಗುಹಾ
ಗಹ್ವರದೊಳಗಿರುಳಿನ ಚ
ಕ್ರಾಹ್ವದವೊಲ್ ಮಱುಗದೇಂ ಸುಖಂಬಡೆದಪನೇ ೬೮

ತಣಿವುಂಟೇ ಪೆಱತೊಂದಪೂರ್ವರಸಮೇಂ ಕೈಸಾರ್ಗುಮೇ ಮತ್ತಮಾ
ವುಣಿಸಾ ತಂಬುಲಮಾ ವಿದಗ್ಧಗಣಿಕಾಸಂಭೋಗಮಾ ವಸ್ತ್ರಭೂ
ಷಣಮಾಲ್ಯಾದಿಗಳೆಂದು ಪಂಬಲಿಸಿ ನಿಚ್ಚಂ ನಿಚ್ಚಮೀ ಪಿಷ್ಟಪೇ
ಷಣಮೀ ಚರ್ವಿತಚರ್ವಣಂ ಸುಖಮಿದೇಂ ನಿನ್ನಂ ಮರುಳ್ಮಾಡಿತೋ ೬೯

ಭೋಗಂಗಳ್ ಸಲೆ ಮನದೊಳ್
ರಾಗಮನೊದವಿಸುಗುಮಪ್ಪೊಡನುಭವಿಕೆ ಮನೋ
ರಾಗಮನೊದವಿಸದವು ಹೃ
ದ್ರೋಗಮನೊದವಿಸೆ ರಸಜ್ಞನನುಭವಿಸುಗುಮೇ ೭೦

ತಣಿಯಿಯೊ ದೇವಲೋಕಸುಖಸಾಗರಮಂ ತವೆ ಪೀರ್ದುಮೀಗಳೇಂ
ತಣಿವೊ ಮನುಷ್ಯಕೀಟಕಸುಖಾಂಬುಲವೋದ್ಗಮದೊಳ್ ವಿಚಾರಿಸಲ್
ಗಣಿದಮಿದೊಂದುಮಿಲ್ಲ ನಿನಗೀ ಖಳಸಂಸೃತಿಯೆಂಬದೊಂದು ಪಾ
ಟಣದೊಳಗಮ್ಮ ನೀಂ ಮೊಗಪೆಯಾಗದೆ ತಾಳ್ದಪವರ್ಗಮಾರ್ಗಮಂ ೭೧

ವ॥ ನಿಮ್ಮಡಿಯಂ ಮಾತೃಚರನಪ್ಪುದಱಿಂದಮಾ ಮೋಹಕಾರಣಮಾಗಿ ನಿನ್ನಂ ಪ್ರತಿಬೋಧಿಸಲ್ಬಂದೆಂ,

ಸೇರದಾಗ ಮಮ್ಮಲಮರುಗುವುದು ವ್ಯರ್ಥ. ಅವೆಂದಿಗೂ ಮತ್ತೊಮ್ಮೆ ಕಲೆಯುವು. ೬೮. ಅನೇಕ ಕಾರ್ಯಾರಂಭಗಳನ್ನು ಕೈಗೊಂಡು, ಸಿದ್ಧಿಸದೆ ದುಃಖಕ್ಕೀಡಾಗಿ ಇಂದ್ರಿಯಗಳ ಚಪಲತೆಗೆ ಪಕ್ಕಾದವನು ಸಂಸಾರವೆಂಬ ಗುಹೆಯೊಳಗೆ ಇರುಳಿನ ಚಕ್ರವಾಕಪಕ್ಷಿಯಂತೆ ಮರುಗದೆ ಸುಖಪಡಲು ಸಾಧ್ಯವೇ? ೬೯. ಭೋಗದಿಂದ ತೃಪ್ತಿಯುಂಟೇ? ಅಪೂರ್ವಸುಖವೇನಾದರೂ ದೊರೆಯುವುದೋ? ಮತ್ತೆ ಮತ್ತೆ ಅದೇ ಭೋಜನ, ಅದೇ ತಂಬುಲ. ಅದೇ ಗಣಿಕಾಸಂಭೋಗ. ಅವೇ ವಸ್ತ್ರಭೂಷಣಗಳು. ಅವಕ್ಕಾಗಿ ನಿತ್ಯವೂ ಹಂಬಲಿಸುವುದೇಕೆ? ಅದು ಅರೆದಿದ್ದನ್ನೆ ಅರೆದಂತೆ, ಅಗಿದದ್ದನ್ನೆ ಅಗಿದಂತೆ ನಿಷ್ಫಲ. ಅದೇಕೆ ನಿನ್ನನ್ನು ಮರುಳು ಮಾಡಿತೋ ತಿಳಿಯದು. ೭೦. ಭೋಗಗಳು ಮನದಲ್ಲಿ ತೃಪ್ತಿಯನ್ನು ತರುವುದಾದರೆ ಅನುಭವಿಸಲಿ. ಅದಕ್ಕೆ ಬದಲು ಹೃದ್ರೋಗವನ್ನುಂಟುಮಾಡಿದರೆ ರಸಜ್ಞನು ಅದನ್ನು ಅನುಭವಿಸಲಾಶಿಸುವನೇ? ೭೧. ದೇವಲೋಕದ ಸುಖಸಾಗರವನ್ನೇ ಹೀರಿ ತಣಿಯದಿರುವ ನಿನಗೆ ಮಾನವಕೀಟಗಳ ಸುಖವೆಂಬ ನೀರಿನ ಅಲ್ಪಪಾನದಿಂದ ತಣಿವುಂಟಾದೀತೇ? ಈ ಖಳ (ದುಷ್ಟ) ಸಂಸಾರವೆಂಬ ರಾಟಾಳದಲ್ಲಿ ನೀನು ಮಣ್ಣಿನ ಕುಡಿಕೆಯಾಗಬೇಡ. ಅಯ್ಯಾ, ನೀನು ಮೋಕ್ಷಮಾರ್ಗವನ್ನು ತುಳಿ. ವ॥ ನೀನು ಮಾತೃಚರನಾಗಿದ್ದ ಕಾರಣ (ಹಿಂದೆ ನನಗೆ ತಾಯಿಯಾಗಿದ್ದ ಕಾರಣ) ನನಗೆ ವ್ಯಾಮೋಹವೊದಗಿತು.

ತಡೆಯದೆ ನಿನಗಪ್ಪುದನೀ
ಗಡೆ ಬಗೆ ಮೆಳ್ಪಡದಿರೆಂಬುದುಂ ನೀಮಿನಿತಂ
ನುಡಿದಿರ್ ಮೂದಲಿಸಿದಿರಿಂ
ತಡೆವೆನೆ ಕಟ್ಟಿದುವೆ ಸುರಿಗೆ ಮೆಟ್ಟಿದುದೆ ಕಳಂ ೭೨

**ವ|| ಎಂದೆನ್ನ ಮಾತಿನೊಳಜಿತಂಜಯನಪ್ಪ ಪಿಹಿತಾಸ್ರವಂ ಜಾತವೈರಾಗ್ಯನಾಗಿ ವಿಂಶತಿಸಹಸ್ರರಾಜಸಮಾಜಂಬೆರಸು ಮಂದರಸ್ಥವಿರರೆಂಬ ಮುಮುಕ್ಷುಗಳ ಸಮಕ್ಷದೊಳ್ ಮೋಕ್ಷಮಾರ್ಗಮಂ ಕೈಕೊಂಡು ಗಗನಚಾರಣಋದ್ಧಿಪ್ರಾಪ್ತರೆಂಬ ಅಯ್ನೂರ್ವರಂಬರಚಾರಣರೊಡನೆ ವಿಹಾರಿಸುತ್ತುಂ ಬಂದು ಚಾರಣಚರಿತಮೆಂಬ ಪುಣ್ಯಾರಣ್ಯದೊಳಂಬರತಿಳಕಮೆಂಬ ಗಿರಿವರದ ನಡುವೆ ಯೋಗಯೋಗ್ಯಮೆಂದದನಳಂಕರಿಸಿ ನೆಲಸಿದಂದು ನಿನ್ನ ನಿರ್ನಾಮಿಕೆಯಾದ ಭವದೊಳ್ ಮದೀಯಜನನೀಚರಗುರುಗಳ್ ನಿನಗಂ ಗುರುಗಳಾದೊಡವರ್ ಪೇೞ್ದುಪದೇಶದೊಳ್ ನೋಂತು ಮಹಾಬಳಖೇಚರನಾದ ಭವದೊಳ್ ಸ್ವಯಂಬುದ್ಧೋಪದೇಶದೊಳೀಶಾನಕಲ್ಪದ ಶ್ರೀಪ್ರಭವಿಮಾನದೊಳ್ ಪುಟ್ಟಿದ ಲಲಿತಾಂಗದೇವಂಗೆ ನೀಂ ಸ್ವಯಂಪ್ರಭೆಯೆಂಬ ದೇವಿಯಾಗಿ ಪುಟ್ಟಿರೆ ಆನುಮಸ್ಮಜ್ಜನನೀಚರನಪ್ಪ ಲಲಿತಾಂಗದೇವನೊಳನುಬಂಧಿಸಿದ ಮೋಹಸಂಬಂಧದೊಳ್ ನಿನ್ನ ದೇವನಪ್ಪ ಲಲಿತಾಂಗಂ ಬೆರಸಿರ್ಪತ್ತಿರ್ವರ್ ಲಲಿತಾಂಗರಂ ಕೊಂಡಾಡಿದೆಂ, ಅಂದು ನಿನ್ನ ದೇವನೊಳಾದ ಕೊಂಡಾಟಮಂ ನೀನುಮಱಿವೌ,**

ಆದ್ದರಿಂದ ನಿನ್ನನ್ನು ಎಚ್ಚರಿಸಲು ಬಂದೆನು. ೭೨. ನೀನು ಸ್ವಲ್ಪವೂ ನಿಧಾನಿಸದೆ ಇತ್ತಕಡೆ ಗಮನಕೊಡು. ಭ್ರಾಂತನಾಗಬೇಡ" ಎಂದು ಎಚ್ಚರಿಸಿದೆನು. ಆತನು "ಇಷ್ಟು ನೀವು ಹೇಳಿದಿರಿ. ಮೂದಲಿಸಿದಿರಿ. ಇನ್ನು ಸ್ವಲ್ಪವೂ ನಿಧಾನಿಸಲು ಅವಕಾಶಕೊಡೆನು. ಕಟ್ಟಿದುದೆ ಕತ್ತಿ, ಮೆಟ್ಟಿದುದೆ ರಣಭೂಮಿ ಎಂದನು. ವ|| ತರುವಾಯ ಅಜಿತಂಜಯನಾದ ಆ ಪಿಹಿತಾಸ್ರವನು ವೈರಾಗ್ಯವನ್ನು ಪಡೆದನು. ಇಪ್ಪತ್ತುಸಹಸ್ರ ರಾಜಕುಮಾರರಿಂದ ಕೂಡಿ ಮಂದರಸ್ಥವಿರರೆಂಬ ಮುಮುಕ್ಷುಗಳ ಎದುರಿನಲ್ಲಿ ಮೋಕ್ಷಮಾರ್ಗವನ್ನು ಕೈಕೊಂಡನು. ಗಗನಚಾರಣಋದ್ಧಿಪ್ರಾಪ್ತರೆಂಬ ಐದುನೂರು ಅಂಬರಚಾರಣರೊಡನೆ ವಿಹರಿಸುತ್ತ ಬಂದು ಚಾರಣಚರಿತವೆಂಬ ಪುಣ್ಯಾರಣ್ಯದಲ್ಲಿ ಅಂಬರತಿಲಕವೆಂಬ ಬೆಟ್ಟವನ್ನು ಸೇರಿ, ಅದನ್ನು ಯೋಗಯೋಗ್ಯವೆಂದು ಭಾವಿಸಿ ಅಲಂಕರಿಸಿ ನೆಲಸಿದನು. ಅಲ್ಲಿ ಹೇ ಶ್ರೀಮತಿ, ನೀನು ನಿರ್ನಾಮಿಕೆ ಎಂದು ಹೆಸರುಗೊಂಡ ಭವದಲ್ಲಿ ನನ್ನ ಜನನೀಚರಗುರುಗಳು ನಿನಗೂ ಗುರುಗಳಾದರು. ಅವರ ಉಪದೇಶದಂತೆ ತಪಸ್ಸು ಮಾಡಿ ಮಹಾಬಲ ಖೇಚರನು ಸ್ವಯಂಬುದ್ಧನ ಉಪದೇಶದಿಂದ ಈಶಾನಕಲ್ಪದ ಶ್ರೀಪ್ರಭವಿಮಾನದಲ್ಲಿ ಲಲಿತಾಂಗದೇವನಾಗಿ ಹುಟ್ಟಿದಾಗ ನೀನು ಸ್ವಯಂಪ್ರಭೆಯೆಂಬ ಹೆಸರಿನಿಂದ ಅವನಿಗೆ ದೇವಿಯಾದೆ. ನಾನೂ ಕೂಡ ನನ್ನ ಜನನೀಚರನಾದ ಲಲಿತಾಂಗದೇವನ ಮೇಲಿನ ಮೋಹದಿಂದ ನಿನ್ನೊಡೆಯನಾದ ಲಲಿತಾಂಗನೂ ಸೇರಿ ಇಪ್ಪತ್ತೆರಡು ಲಲಿತಾಂಗರನ್ನು ಕೊಂಡಾಡಿದೆನು. ನಿನ್ನ ಆ ದೇವನ ಕೊಂಡಾಟವನ್ನು ನೀನು ಅರಿತಿರುವೆ. (ಒಬ್ಬ ಅಚ್ಯುತೇಂದ್ರನ ಜೀವಿತಕಾಲದಲ್ಲಿ ಇಪ್ಪತ್ತೆರಡು ಲಲಿತಾಂಗದೇವರು ಕ್ರಮವಾಗಿ ಆಗುತ್ತಾರೆ. ಅವರಲ್ಲಿ ಕಡೆಯ ಲಲಿತಾಂಗನೇ ಸ್ವಯಂಪ್ರಭೆಯ ಪತಿ)

ಮನಮೊಲ್ದೊಂದವಿನಾಣಮಂ ಮಗಳೆ ಕೇಳ್ ನಿನ್ನೋಪನುಂ ನೀನುಮಂ
ದನುರಾಗೋದಯದಿಂದಮಂದು ನೆಗೞ್ದಾ ಬ್ರಹ್ಮೇಂದ್ರನುಂ ಲಾಂತವೇಂ
ದ್ರನುಮಟ್ಕರ್ತಿರದಚ್ಯುತೇಂದ್ರ ತಿಳಿವಂತಾಗೆಯ್ದೆ ಪೇೞೆಂಬುದುಂ
ನೆನೆವೋ ರಾಗದಿನಾ ಯುಗಂಧರಜಿನೋಪಾಖ್ಯಾನಮಂ ಪೇೞ್ದುದುಂ ೭೩

ವ|| ಅದೆಂತೆಂದೊಡೀ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ತೆಂಕಣತಡಿಯ ವತ್ಸಕಾವತೀವಿಷಯದ ಸುಸೀಮಾನಗರಮನಾಳ್ವ ಅಜಿತಂಜಯಮಹೀಪಾಳನ ರಾಜ್ಯಪ್ರಾಸಾದಮೂಲ ಸ್ತಂಭಸಚಿವನಮಿತಮತಿಗಮಾತನ ಕುಲಲಲನೆ ಸತ್ಯಾಭಾವೆಗಂ ಪ್ರಹಸಿತನೆಂಬ ಮಗನಾದಂ ; ಆತನ ಸಹಚರಂ ವಿಕಸಿತನೆಂಬೊಂ,

ಪ್ರಹಸಿತ ವಿಕಸಿತರಿರ್ವರ
ಸಹಜಸ್ನೇಹಮುಮನವರ್ಗಳಿರ್ವರ ವಿದ್ಯಾ
ಮಹಿಮೆಯುಮಂ ಬಣ್ಣಿಸಲರಿ
ದಹಿರಾಜಂಗುೞಿದ ಜಡರದೇನಂ ಪೊಗೞ್ವರ್ ೭೪

ವಾದಿನಗ ವಾದಿಗಜ ಪರ
ವಾದಿತಮಸ್ತಮಮನೊಡೆವ ಬಿಡೆ ಬೆದಱಿಪ ನಿ
ರ್ಭೇದಿಪಡೆಗಶನಿ ಹರಿ ದಿನ
ಪೋದಯಮೆನಿಸಿದುದು ವಿದ್ಯೆಯೊಂದುರ್ಕವರಾ ೭೫

ವ|| ಅಂತು ನಿಜವಿದ್ಯಾಜ್ಞಾನಮದಾವಲಿಪ್ತರಿರ್ವರುಮೊಂದುದಿವಸಮಜಿತಂಜಯನೊಡನೆ ಪೋಗಿ ತತ್ಪುರೋಪವನದೊಳಿರ್ದ ಮತಿಸಾಗರಮುನಿಪತಿಯೊಳ್ ಬಾದುಗೆಯ್ದು ಆತ್ಮೀಯವಿದ್ಯಾಗರ್ವ

೭೩. ಮಗಳೆ! ನನಗೆ ಗೊತ್ತಿರುವ ಅಭಿಜ್ಞಾನವೊಂದನ್ನು ಹೇಳುವೆನು ಕೇಳು. ನೀನೂ ನಿನ್ನ ಗಂಡನೂ ಆ ಬ್ರಹ್ಮೇಂದ್ರನೂ, ಲಾಂತವೇಂದ್ರನೂ ಬಂದು "ಅಚ್ಯುತೇಂದ್ರ, ಯುಗಂಧರಜಿನೋಪಾಖ್ಯಾನವನ್ನು ಹೇಳು" ಎಂದು ನನ್ನನ್ನು ಕೇಳಿಕೊಂಡಿರಿ. ಆದಕಾರಣ ಪ್ರೀತಿಯಿಂದ ಯುಗಂಧರೋಪಾಖ್ಯಾನವನ್ನು ನಾನು ಹೇಳಿದೆನು. ಅದು ನೆನಪಿದೆಯಷ್ಟೆ? ವ|| ಅದೇನೆಂದರೆ, ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ದಕ್ಷಿಣತಟದ ವತ್ಸಕಾವತಿಯ ದೇಶದ ಸುಸೀಮಾನಗರವನ್ನಾಳುವವನು ಅಜಿತಂಜಯ. ಅವನ ರಾಜ್ಯಪ್ರಾಸಾದಕ್ಕೆ ಮೂಲಸ್ತಂಭನಾದ ಮಂತ್ರಿ ಅಮಿತಮತಿಗೂ ಅವನ ಹೆಂಡತಿ ಸತ್ಯಭಾಮೆಗೂ ಮಗನಾಗಿ ಹುಟ್ಟಿದ ಪ್ರಹಸಿಕ. ಅವನ ಸಹಚರ ವಿಕಸಿತ. ೭೪. ಪ್ರಹಸಿತ ವಿಕಸಿತರು ಸಹಜ ಸ್ನೇಹಾನ್ವಿತರು. ಅವರಿಬ್ಬರ ವಿದ್ಯಾಮಹಿಮೆಯನ್ನು ವರ್ಣಿಸಲು ಸರ್ಪರಾಜನಾದ ಆದಿಶೇಷನಿಗೂ ಶಕ್ಯವಿಲ್ಲ. ಜಡರಾದ ಇತರರು ಏನು ವರ್ಣಿಸಿಯಾರು? ೭೫. ಅವರ ವಿದ್ಯಾವೈಭವವು ವಾದಿಪರ್ವತಕ್ಕೆ ವಜ್ರಾಯುಧವಾಗಿಯೂ ವಾದಿಗಜಕ್ಕೆ ಸಿಂಹವಾಗಿಯೂ ವಾದಿಯೆಂಬ ಕತ್ತಲೆಯ ಸಮೂಹಕ್ಕೆ ಸೂರ್ಯೋದಯವಾಗಿಯೂ ಪರಿಣಮಿಸಿತು. ವ|| ಮಿಥ್ಯಾಜ್ಞಾನವೆಂಬ ಅಹಮ್ಮಿನಿಂದ ಮತ್ತರಾಗಿ ಅವರಿಬ್ಬರೂ ಅಜಿತಂಜಯನೊಡನೆ ಹೋಗಿ ಆ ಪಟ್ಟಣದ ಉಪವನದಲ್ಲಿ ನೆಲೆಸಿದ್ದ

**ಪರ್ವತಮವರ ವಚೋವಜ್ರನಿರ್ಘಾತದಿಂ ನುಚ್ಚುನುಱಿಯಾಗಿ ಪೋದೊಡೆ ಹತಪ್ರತಿಜ್ಞರುಂ ಗಳಿತ ಗರ್ವರುಮಾಗಿ ತಚ್ಛಿಷ್ಯತ್ವಮಂ ಪೂಣ್ದು**

**ತನುವಂ ತಂದು ಮಹಾವ್ರತಕ್ಕುಚಿತಕಾಯಕ್ಲೇಶರಾಚಾಮ್ಲವ**
**ರ್ಧನಮಂ ನೋಂತು ಸಮಾಧಿ ಕೈಕೊಳೆ ಮಹಾಶುಕ್ರಕ್ಕೆ ಸಂದೀತನಿಂ**
**ದ್ರನಿವಂ ತತ್ಪ್ರತಿಮಂ ಪ್ರತೀಂದ್ರನೆನೆ ಸಂದಿಂತಿರ್ವರುಂ ಪೂಣ್ದಲಂ**
**ಪಿನೊಳುಂಡರ್ ಕಡೆಯೆಯ್ದೆ ಷೋಡಶನದೀನಾಥೋಪಮಾಯುಷ್ಯಮಂ** ೭೬

**ವ|| ಅಂತು ಪರಿಚ್ಯುತನಾಕಲೋಕರಾಗಿ ಧಾತಕೀಷಂಡದ ಪಡುವಣ* ಪೂರ್ವವಿದೇಹದ ಪುಷ್ಕಳಾವತೀವಿಷಯದ ಪುಂಡರೀಕಿಣಿಯನಾಳ್ವ ಧನಂಜಯನರಸಿಯರಪ್ಪ[೧] ಜಯಮತಿ †ಗಂ ಜಯಸೇನೆಗಂ ಮಹಾಬಳನುಮತಿಬಳನುಮೆಂಬ ಪೆಸರೊಳ್ ಬಲದೇವ ವಾಸುದೇವರಾಗಿ ಪುಟ್ಟಿ ನಿಜಗುರು ಪರೋಕ್ಷದೊಳ್ ಧರಾಭಾರಧುರಂಧರರಾಗಿರೆ,**

**ಅತಿಬಳಕೃಷ್ಣಂ ಗತಜೀ**
**ವಿತನಾಗೆ ಮಹಾಬಳಂ ಮಹಾವ್ರತದಿಂದ**
**ನ್ವಿತಮತಿ ಸಮಾಧಿಗುಪ್ತ**
**ವ್ರತಿಯುಪದೇಶದೊಳೆ ಪುಟ್ಟಿದಂ ಪ್ರಾಣತದೊಳ್** ೭೭

ಮತಿಸಾಗರಮುನಿಗಳೊಡನೆ ವಾದಿಸತೊಡಗಿದರು. ಅವರ ಮಾತುಗಳೆಂಬ ವಜ್ರಾಯುಧದ ಹೊಡೆತದಿಂದ ತಮ್ಮ ವಿದ್ಯಾಮದವೆಂಬ ಪರ್ವತವನ್ನು ನುಚ್ಚುನೂರಾಗಿಸಿಕೊಂಡರು. ಪ್ರತಿಜ್ಞಾಭಂಗವನ್ನು ಪಡೆದು ಅಹಂಕಾರವನ್ನು ಕಳೆದುಕೊಂಡು ಅವನ ಶಿಷ್ಯತ್ವವನ್ನಪ್ಪಿದರು. ೭೬. "ಅವರಿಬ್ಬರೂ ಮಹಾವ್ರತಕ್ಕುಚಿತವಾದ ಕಾಯಕ್ಲೇಶಕ್ಕೆ ತುತ್ತಾಗಿ "ಆಚಾಮ್ಲ"ವನ್ನು ನೋಂತು ಸಮಾಧಿಗೊಂಡರು, ಮಹಾಶುಕ್ರವೆಂಬ ಹತ್ತನೆಯ ಸ್ವರ್ಗದಲ್ಲಿ ಇಂದ್ರ ಪ್ರತೀಂದ್ರರಾಗಿ ಹುಟ್ಟಿ ಸಂತೋಷದಿಂದ ಸಕಲಸೌಖ್ಯವನ್ನು ಅನುಭವಿಸುತ್ತ ಹದಿನಾರು ಸಾಗರೋಪಮ ಆಯುಷ್ಯವನ್ನು ಕಳೆದರು. ವ|| "ಆಮೇಲೆ ಸ್ವರ್ಗದಿಂದ ಇಳಿದ ಧಾತಕೀಷಂಡದ್ವೀಪದ ಪಶ್ಚಿಮದಿಕ್ಕಿನಲ್ಲಿರುವ ಪೂರ್ವವಿದೇಹದ ಪುಷ್ಕಳಾವತೀದೇಶದ ಪುಂಡರೀಕಿಣಿಯನ್ನು ಆಳುವ ಧನಂಜಯನಿಗೂ, ಅವನ ಅರಸಿಯರಾದ ಜಯಮತಿ ಜಯಸೇನೆಯರಿಗೂ ಮಹಾಬಲ, ಅತಿಬಲರೆಂಬ ಹೆಸರಿನಿಂದ ಬಲದೇವ ವಾಸುದೇವರಾಗಿ ಹುಟ್ಟಿ ತಂದೆಯ ಮರಣಾನಂತರ ಭೂಭಾರ ಹೊರಲು ಸಮರ್ಥರಾದರು. ೭೭. "ಅತಿಬಲನೆಂಬ ಕೃಷ್ಣನು ಮೃತನಾಗಲು, ಮಹಾಬಲನು 'ಮಹಾವ್ರತಾ'ಸಕ್ತನಾದ ಸಮಾಧಿಗುಪ್ತವ್ರತಿಯು ಉಪದೇಶದಿಂದ ಪ್ರಾಣತಸ್ವರ್ಗದಲ್ಲಿ ಹುಟ್ಟಿದನು.

---

೧ ಕ.-ಧನಂಜಯಂಗಮಾತನ ಮಹಿಷಿಯಪ್ಪ.

* ಡಾ|| ಬಸವರಾಜುರವರ ಪ್ರತಿಯಲ್ಲಿ 'ಮೂಡವಣ ಮಂದಿರ' ಎಂದಿದೆ. ಪೂ.ಪು. ಮತ್ತು 'ಚ' ಪ್ರತಿಗೆ ಅನುಸಾರವಾಗಿ 'ಪಡುವಣ' ಎಂದಿಷ್ಟೇ ಇರಬೇಕು. † ಪೂ.ಪು.ದಂತೆ ಇವಳು ಯಶಸ್ವತಿ (ಪೂ. ಪು. ೭-೮೦, ೮೧)

ವ॥ ಆ ಕಲ್ಪದೊಳ್ ಪುಷ್ಪಚೂಳನೆಂಬ ಪೆಸರೆಸೆಯೆ ವಿಂಶತಿಸಮುದ್ರೋಪಮಾಯುಷ್ಯ ವಿರಾಮದೊಳ್ ಧಾತಕೀಷಂಡದ ಪಡುವಣ ಪೂರ್ವವಿದೇಹದ ಸೀತಾನದಿಯ ತೆಂಕಣ ತಡಿಯ ವತ್ಸಕಾವತೀವಿಷಯದೊಳ್ ಪ್ರಭಾಕರೀಪುರೀನಾಥಂ ಮಹಾಸೇನಂಗಂ ತದ್ವನಿತೆ ವಸುಂಧರೆಗಂ ಜಯಸೇನನೆಂಬ ತನೂಜನಾಗಿ,

ಗುರು ಪುರುಷಾರ್ಥಮಂ ನೆಱೆಯೆ ಸಾಧಿಸಿ ಪೋಗೆ ನಿಜಾನ್ವಯಾಯಭೂ
ಭರಮನದೊಂದು ಹಸ್ತಕಟಕೋಪಮಮೆಂಬಿನಿತಾಗೆ ತಾಳ್ದಿಕೊಂ
ಡಿರೆಯಿರೆ ಚಕ್ರವರ್ತಿಪದಮುಂ ತನಗಾವಗಮಾದೊಡಾ ಮಹಾ
ಪುರುಷನದಂ ಜರತ್ತೃಣಗಣಾನುಗುಣಂ ವಲಮೆಂದೆ ಪೇಸಿದಂ ೭೮

ವ॥ ಅಂತು ಪರಿತ್ಯಕ್ತಸಕಳಸಾಮ್ರಾಜ್ಯನುಂ ದೃಷ್ಟಾನುಭೂತಶ್ರಾವಕವಿಷಯವಿತೃಷ್ಣನುಮಾಗಿ ಸೀಮಂಧರಜಿನೇಶಪದಕುಶೇಶಯಾಭ್ಯಸನದೊಳ್ ದಿಗ್ವಾಸನಾದಿ ಷೋಡಶಭಾವನೆಗಳಂ ಭಾವಿಸಿ ನಿಜಜೀವಿತಾವಸಾನದೊಳ್ ಸೌಮನಸಮೆಂಬೂರ್ಧ್ವಮಧ್ಯಮರಿಗ್ರೈವೇಯಕದೊಳ್ ಅಹಮಿಂದ್ರನಾಗಿ,

ಮೂವತ್ತುಸಾಗರೋಪಮ
ಮಾವಗಮಮರೇಂದ್ರಸುಖಮನುಣುತೆ ನಿಜಸ್ವ
ರ್ಗಾವತರಣೋತ್ಸವಕ್ಕಮ
ರಾವಳಿ ಪದೆವಿನೆಗಮಿೞಿದನಿಳೆಗೆ ಮಹಾತ್ಮಂ ೭೯

ವ॥ ಅಂತು ಪುಣ್ಯಭಾಜನಂಗೆ ನೂಕೆ ಪಾಸೆಂಬಂತೆ ಪುಷ್ಕರಾರ್ಧದ ಮೂಡಣ ಮಂದರದ

ವ॥ "ಆ ಕಲ್ಪದಲ್ಲಿ ಪುಷ್ಪಚೂಳನೆಂದು ಹೆಸರುಗೊಂಡು ಇಪ್ಪತ್ತು ಸಮುದ್ರೋಪಮಾಯುಷ್ಯದ ಕೊನೆಯಲ್ಲಿ ಧಾತಕೀಷಂಡದ ಮಂದರದ ಪೂರ್ವವಿದೇಹದ ಸೀತಾ ನದಿಯ ತೆಂಕಣತಟದ ವತ್ಸಕಾವತಿದೇಶದಲ್ಲಿ ಪ್ರಭಾಕರೀಪಟ್ಟಣದ ಅರಸ ಮಹಾಸೇನನಿಗೂ ಅವನ ಹೆಂಡತಿ ವಸುಂಧರೆಗೂ ಜಯಸೇನ ಎಂಬ ಪುತ್ರನಾದನು. ೭೮. ಆತನು ಮಹತ್ತಾದ ಪುರುಷಾರ್ಥವನ್ನು ಸಾಧಿಸಲು ಟೊಂಕ ಕಟ್ಟಿ ನಿಂತನು. ತನ್ನ ವಂಶದ ಭೂಭಾರವನ್ನು ಕೈಯ ಕಡಗಕ್ಕೆ ಸಮಾನವೆಂದು ತಿಳಿದನು. ಚಕ್ರವರ್ತಿಪದವನ್ನು ಹುಲ್ಲಿಗೆಣೆಯೆಂದು ಭಾವಿಸಿ ಹೇಸಿದನು. ವ॥ "ಅಂತು ಜಯಸೇನನು ಸಕಲ ಸಾಮ್ರಾಜ್ಯವನ್ನೂ ತೊರೆದು ದೃಷ್ಟವೂ ಅನುಭೂತವೂ ಆದ ಶ್ರಾವಕರ ಸ್ರಕ್-ಚಂದನಾದಿ ವಸ್ತುಗಳ ಮೇಲೆ ಆಶೆಯಿಲ್ಲದವನಾದನು. ಸೀಮಂಧರಜಿನೇಶನ ಪದತಳದಲ್ಲಿ ದಿಗಂಬರನಾಗಿ ಷೋಡಶಭಾವನೆಗಳನ್ನು ಭಾವಿಸಿ ತನ್ನ ಜೀವಿತದ ಕೊನೆಯಲ್ಲಿ ಊರ್ಧ್ವಗ್ರೈವೇಯಕಗಳ ನಡುವಿನದಾದ ಸೌಮನಸವಿಮಾನದಲ್ಲಿ ಅಹಮಿಂದ್ರನಾದನು. ೭೯. "ಮೂವತ್ತು ಸಾಗರೋಪಮ ಕಾಲದಷ್ಟು ಅಮರೇಂದ್ರಸುಖವನ್ನುಂಡನು. ದೇವತೆಗಳ ಗುಂಪು ಅವನ ಸ್ವರ್ಗಾವತರಣೋತ್ಸವಕ್ಕೆ ನೆರೆದಿತ್ತು. ಕೊನೆಗವನು ಇಳೆಗೆ ಇಳಿದನು. ವ॥ ಪುಣ್ಯಭಾಜನನಿಗೆ 'ನೂಕೆ ಪಾಸೆಂಬಂತೆ[1]' ಪುಷ್ಕರಾರ್ಧದ ಪೂರ್ವದ ಮಂದರದ

---

೧ ಪುಣ್ಯವಂತನಿಗೆ ನೂಕಿದಲ್ಲಿ ಹಾಸಿಗೆ ಎಂಬ ಗಾದೆಯಂತೆ.

ಪೂರ್ವವಿದೇಹದ ಸೀತಾನದಿಯ ತೆಂಕಣತಡಿಯ ಮಂಗಳಾವತೀವಿಷಯದ ರತ್ನಸಂಚಯಪುರಮನಾಳ್ವಜಿತಂಜಯಭೂಪಾಳಂಗಮಾತನರಸಿ ವಸುಮತಿಗಂ ಯುಗಂಧರನೆಂಬಪೂರ್ವಪುಣ್ಯನಾಮಮಂ ತಾಳ್ದಿ

ಬಗೆದಂತಾಗೆ ಸುರೇಂದ್ರರಿಂ ಕ್ರಮದೆ ಕಲ್ಯಾಣದ್ವಯಂ ಜೈನದೀ
ಕ್ಷೆಗೆ ಪೂಣ್ದಕ್ಷಯಪುಣ್ಯನುಗ್ರತಪಮೆಂಬುಗ್ರಾಸಿಯಿಂ ಕೊಡೆ ಘಾ
ತಿಗಳಂ ಘಾತಿಸಿ ತದ್ಯುಗಂಧರಮಹಾಯೋಗೀಶ್ವರಂ ಪೊರ್ದಿದಂ
ನೆಗಳ್ದಾರ್ಹಂತ್ಯಮನೇನನೀಯದೊ ಶುಭಧ್ಯಾನೋಪಯೋಗೋದಯಂ ೮೦

ಯುಗನಾಯಕನೆನೆ ನಿಜಪದ
ಯುಗನಮಿತಸುರೇಂದ್ರನೆನೆ ಯುಗಂಧರದೇವಂ
ನೆಗಳ್ದಪನೀಗಳ್ ಭುವನ
ಕ್ಕಗಾಧಕೈವಲ್ಯಬೋಧಬೋಧಿತಭವ್ಯಂ ೮೧

ಎಂದು ಯುಗಂಧರಚರಿತಮ
ನಂದಾಂ ನಿನಗಱಿಯೆ ಪೇಳ್ದೆನಲ್ಲದೆಯುಂ ಮ
ತ್ತೊಂದಂ ಬಗೆ ನಾಮಂದೊಡ
ವಂದಂಬರತಿಳಕಮೆಂಬ ವಿಶ್ರುತವನದೊಳ್ ೮೨

ವ|| ಮುನ್ನ ಪೇಳ್ದ ನಮ್ಮಿರ್ವರ ಗುರುಗಳಪ್ಪ ಪಿಹಿತಾಸ್ರವಭಟ್ಟಾರಕರ ಕೇವಲಜ್ಞಾನೋತ್ಪತ್ತಿಯೊಸಗೆಯಂ ಮಾಡಿ ಬಂದೆವಲ್ಲದೆಯುಂ,

ಪೂರ್ವವಿದೇಹದ ಸೀತಾನದಿಯ ದಕ್ಷಿಣದಡದ ಮಂಗಳಾವತೀದೇಶದ ರತ್ನಸಂಚಯ ಪುರವನ್ನು ಆಳುವ ಅಜಿತಂಜಯರಾಜನಿಗೂ, ಅವನ ರಾಣಿಯಾದ ವಸುಮತಿಗೂ ಪುತ್ರನಾಗಿ ಜನಿಸಿ ಯುಗಂಧರನೆಂಬ ಅಪೂರ್ವ ಪುಣ್ಯನಾಮವನ್ನು ತಳೆದನು. ೮೦. ''ಬಗೆದಂತೆ ಸುರೇಂದ್ರರಿಂದ ಕಲ್ಯಾಣದ್ವಯಗಳು ಜರುಗಿದುವು. ಆತನು ಜೈನದೀಕ್ಷೆಯನ್ನಪ್ಪುವೆನೆಂದು ಪ್ರತಿಜ್ಞೆಮಾಡಿದನು. ಅಕ್ಷಯಪುಣ್ಯನಾದ ಯುಗಂಧರನು ತಪಸ್ಸೆಂಬ ಉಗ್ರವಾದ ಖಡ್ಗದಿಂದ ಘಾತಿಕರ್ಮಗಳನ್ನು ಘಾತಿಸಿದನು. ಬಳಿಕ ಯುಗಂಧರಮಹಾಯೋಗಿಯು ಅರ್ಹಂತಪದವನ್ನು ಮುಟ್ಟಿದನು. ಶುಭಧ್ಯಾನೋದಯವು ಏನನ್ನು ತಾನೆ ಕೊಡದು? ೮೧. ಅವನು ಯುಗನಾಯಕನಾದ್ದರಿಂದಲೂ ತನ್ನ ಪದಯುಗಕ್ಕೆ ಬಾಗಿದ ಸುರೇಂದ್ರರುಳ್ಳುದರಿಂದಲೂ ಯುಗಂಧರದೇವನೆನಿಸಿದನು. ಅವನು ಜಗತ್ತಿಗೆ ಕೈವಲ್ಯಜ್ಞಾನದಿಂದ ಕ್ಷೇಮವನ್ನು ಬೋಧಿಸಿದವನು'' ೮೨. ಎಂದು ನಾನು ಯುಗಂಧರಚರಿತ್ರೆಯನ್ನು ಅವರಿಗೆಲ್ಲ ತಿಳಿಯುವಂತೆ ಹೇಳಿದೆನು. ಅಲ್ಲದೆ ನಿನಗೆ ಮತ್ತೊಂದು ವಿಷಯವೂ ಗೊತ್ತುಂಟು. ನಾವು ಒಟ್ಟಿಗೆ ಹೋಗಿ ಅಂಬರತಿಲಕವೆಂಬ ಪ್ರಸಿದ್ಧವನದಲ್ಲಿ, ವ|| ''ಹಿಂದೆ ಹೇಳಿದ ನಮ್ಮಿಬ್ಬರ ಗುರುಗಳಾದ ಪಿಹಿತಾಸ್ರವ ಭಟ್ಟಾರಕರ ಕೇವಲಜ್ಞಾನೋತ್ಪತ್ತಿಯೊಸಗೆಯನ್ನು ಮಾಡಿ ಬಂದೆವು. ಅಲ್ಲದೆ,

ಮೇರುನಗೋಪಕಂಠವನದೊಳ್ ವನಕೇಳಿವಿಳಾಸಮಂ ಸ್ವಯಂ
ಭೂರಮಣಾಂಬುರಾಶಿವಿಲಸತ್ತಟದೊಳ್ ಜಳಕೇಳಿಲೀಲೆಯಂ
ಪಾರಯಿಸಿರ್ದುದಂ ನೆನೆವೊ ನೀನೆನೆ ತಪ್ಪದು ಪೂರ್ವಜನ್ಮಸಂ
ಸ್ಕಾರಮದೆಲ್ಲಮಂ ನೆನೆವುದೆನ್ನ ಮನಂ ಮನುಜೇಂದ್ರವಂದಿತಾ ೮೩

ವ|| ಇನ್ನೊಂದೆ ಮದೀಯಪ್ರಾಣವಲ್ಲಭನಪ್ಪ ಲಲಿತಾಂಗದೇವನೆಲ್ಲಿ ಪುಟ್ಟಿದನೆಂಬುದೆನಗಿದೆ ಸಂದೆಯಮೆನಗಮದಂ ಬೆಸಸಿಮೆಂಬುದುಂ ಆಂ ನಿಮ್ಮಿಂ ಮುನ್ನಮಚ್ಯುತಕಲ್ಪದಿಂ ಪರಿಚ್ಯುತನೆನಾಗಿ ಬಂದಿಲ್ಲಿ ಯಶೋಧರಮಹೀಭುಜಂಗಂ ತದ್ವನಿತೆ ವಸುಮತಿಗಂ ವಜ್ರದಂತನಾದೆಂ ; ನಿನ್ನ ದೇವನುಮಪ್ಪ ಲಲಿತಾಂಗದೇವನುಮೀಶಾನಕಲ್ಪದಿಂ ಬಂದುತ್ಪಳಖೇಟಮನಾಳ್ವ ಎನ್ನ ಮೆಯ್ದುನನಪ್ಪ ವಜ್ರಬಾಹುಗಮೆನ್ನ ತಂಗೆಯಪ್ಪ ವಸುಂಧರೆಗಂ ವಜ್ರಜಂಘನೆಂಬ ತನುಜನಾದಂ; ಆ ಸ್ವಯಂಪ್ರಭೆಯೆ ನೀನುಮೆನಗೀಗಳ್ ಶ್ರೀಮತಿಯಾಗಿ ಪುಟ್ಟಿದೌ.

ಭವದಿಂದಂ ಭವದೊಳ್ ತಗುಳ್ದು ಪರಮಸ್ನೇಹಂಗಳಿಂತೀಗಳಿ
ಲ್ಲಿವರಂ ಬಂದುವು ನಿನ್ನ ನಲ್ಲನೆ ಗಡಂ ಮದ್ಭಾಗಿನೇಯಂ ಮಹೋ
ತ್ಸವದಿಂ ಬಂದಪನಿಂದೆ ಪಂಡಿತೆಯುಮಾ ವೃತ್ತಾಂತದೊಳ್ ಪುಟ್ಟಿದು
ತ್ಸವಮಂ ಮಾಣದೆ ಕೊಂಡುಬರ್ಕುಮದುವಂ ಕೇಳ್ವೌ ಮಹೋತ್ಸಾಹದಿಂ ೮೪

ವ|| ಎಂದು ಕನ್ಯಾರತ್ನಮಂ ಕನ್ಯಾಂತಃಪುರಕ್ಕೆ ಪೋಗಲ್ವೇಳ್ದು ವಜ್ರದಂತನಾಸ್ಥಾನದಿಂದೆರ್ದು

೮೩. "ಮೇರುಪರ್ವತದ ಬಳಿಯಲ್ಲಿ ಜರುಗಿಸಿದ ವನಕೇಳಿಯನ್ನೂ, ಸ್ವಯಂಭೂರಮಣ ಸಮುದ್ರದ ದಡದಲ್ಲಿ ನಡೆಯಿಸಿದ ಜಲಕೇಳಿಯನ್ನೂ ನೀನು ನೆನೆಯುತ್ತಿರುವೆಯಷ್ಟೆ!" ಎಂದನು. ಆಗ ಶ್ರೀಮತಿಯು "ನರೇಂದ್ರರಿಂದ ನಮಸ್ಕೃತನಾದ ಚಕ್ರವರ್ತಿಯೆ, ಪೂರ್ವಜನ್ಮಸಂಸ್ಕಾರವು ತಪ್ಪದು. ಅದೆಲ್ಲವನ್ನೂ ನನ್ನ ಮನಸ್ಸು ಸ್ಮರಿಸಿಕೊಳ್ಳುತ್ತಿದೆ. ವ|| "ನನ್ನ ಪ್ರಾಣಪ್ರಿಯನಾದ ಲಲಿತಾಂಗದೇವನು ಎಲ್ಲಿ ಹುಟ್ಟಿರುವನೆಂದು ತಿಳಿಯದಾಗಿದೆ. ಅದನ್ನು ತಿಳಿಸಿ." ಎಂದಳು. ಅದಕ್ಕೆ ವಜ್ರದಂತನು "ನಾನು ನಿಮಗಿಂತ ಮುಂಚೆ ಅಚ್ಯುತಕಲ್ಪದಿಂದ ಪರಿಚ್ಯುತನಾಗಿಲ್ಲಿಗೆ ಬಂದೆನು. ಯಶೋಧರಮಹೀಪತಿಗೂ ಅವನ ಹೆಂಡತಿಯಾದ ವಸುಮತಿಗೂ ವಜ್ರದಂತನೆಂಬ ಹೆಸರಿನಿಂದ ಮಗನಾಗಿ ಹುಟ್ಟಿದೆನು. ನಿನ್ನೊಡೆಯನಾದ ಲಲಿತಾಂಗನೂ ಈಶಾನಕಲ್ಪದಿಂದ ಬಂದು ಉತ್ಪಲಖೇಟವನ್ನಾಳುವ ನನ್ನ ಮೈದುನನಾದ ವಜ್ರಬಾಹುವಿಗೂ ನನ್ನ ತಂಗಿಯಾದ ವಸುಂಧರೆಗೂ ವಜ್ರಜಂಘನೆಂಬ ಹೆಸರಿನಿಂದ ಮಗನಾಗಿ ಜನ್ಮವಡೆದಿರುವನು. ಸ್ವಯಂಪ್ರಭೆಯಾದ ನೀನು ಶ್ರೀಮತಿಯೆಂಬ ಹೆಸರಿನಿಂದ ಮಗಳಾಗಿ ಹುಟ್ಟಿರುವೆ! ೮೪. ಭವದಿಂದ ಭವಕ್ಕೆ ಬಂದು ಪರಮಸ್ನೇಹಿತರಾಗಿ ನಾವು ಉಳಿದಿದ್ದೇವೆ-ಇಲ್ಲಿಯವರೆಗೆ. ನಿನ್ನ ಹಿಂದಿನ ಭವದ ಗಂಡನೇ ಅಲ್ಲವೆ ಇಂದು ನನ್ನ ತಂಗಿಯ ಮಗನಾಗಿ ಹುಟ್ಟಿ ಮಹೋತ್ಸವದಲ್ಲಿ ಬರಲಿರುವನು! ಪಂಡಿತೆಯೂ ಈ ವೃತ್ತಾಂತವನ್ನು ತಪ್ಪದೆ ತರುವಳು. ಮಹೋತ್ಸಾಹದಿಂದ ನೀನು ಅದನ್ನು ಕೇಳುವೆ!" ವ|| ಎಂದು ಕನ್ಯಾರತ್ನವಾದ ಶ್ರೀಮತಿಯನ್ನು ಕನ್ಯಾಂತಃಪುರಕ್ಕೆ ಹೋಗಲು ಹೇಳಿ

ಪೋದಂ, ಅನ್ನೆಗಮಿತ್ತಲುಮಖಂಡಿತಮತಿ ಪಂಡಿತೆಯುಂ ತನ್ನ ಪೂಣ್ದು ಪೋದ ಕಜ್ಜಮಂ ಸಾಧ್ಯಂ ಮಾಡಿ ಬಂದು ಸಸಂಭ್ರಮದಿಂ ವಿಭ್ರಮವಿಳಾಸವತಿಯಂ ಶ್ರೀಮತಿಯಂ ಕಂಡು,

ಬರವಿನೊಳಾದದೊಂದು ಮೊಗರಾಗಮೆ ಸಂತಸವಾತನಂತನ
ಕ್ಕರಮಱಿಪುತ್ತುಮಿರ್ಪಿನೆಗಮೆಂದಳಿಳೇಶ್ವರಪುತ್ರಿ ತೀರ್ದುದಾ
ದರದೊಳೆ ನಿನ್ನ ನಚ್ಚಿನ ಮನೋರಥಮಾದೊಡಮಂತದಂ ಸವಿ
ಸ್ತರದೊಳೆ ಪೇಳದಂದೆನಗೆ ರಾಗದ ಭಾರಮಳುಂಬಮಾಗದೇ ೮೫

ವ॥ ಎಂಬುದುಂ ಆ ಪ್ರಸ್ತಾವದೊಳ್ ಶ್ರೀಮತಿ ತರುಣದಿನಕರಕರದಳಿತ ಸರಸೀರುಹ ವದನೆಯುಂ ಅತಿಪ್ರೀತಿವಿಸ್ತಾರಿತವಿಲೋಚನೆಯುಮಾಗಿ ಮನಂಗೊಂಡು ಕೇಳಲ್ ತಗುಳ್ದಳ್,

ಬರಿಯಿಸೆ ಬೇಟದೊಳ್ ಬರಿವ ನಲ್ಲರಗಲ್ದು ಕನಲ್ದೊಸಲ್ದು ನ
ಲ್ಲರ ದೆಸೆಯಿಂದಮಟ್ಟುವಡೆ ಕೋಗಿಲೆಯಕ್ಕೆಲರಕ್ಕೆ ತುಂಬಿಯ
ಕ್ಕರಗಿಳಿಯಕ್ಕೆ ಬಂದೊಡಮೊಱಲ್ದೆರ್ದೆಯಾಱುವರೆಂದೊಡೋತದೂ
ತರೆ ತರೆ ಬಂದ ಸಬ್ಬವದ ಮಾತುಗಳಂ ಗುಡಿಗಟ್ಟಿ ಕೇಳರೇ ೮೬

ವ॥ ಆಗಳ್ ಪಂಡಿತೆಯುಮಿಂತೆಂದು ಪೇೞಲ್ ತಗುಳ್ದಳ್: ಅಂತು ನಿನ್ನ ಬರೆದ ಪಟಮಂ ಕೊಂಡುಪೋಗಿ ಮಹಾಪೂತಜಿನಾಲಯದ ಮುಂದೆ ನೆಱೆದಾಗಳೆನ್ನ ಪಸರಿಸಿದ ಚಿತ್ರಪಟಮೆಂಬ ದೀಹಕ್ಕೆ ಖೇಚರಭೂಚರಯುವಮೃಗಂಗಳೆಳಸಿ ಬಂದು,

ವಜ್ರದಂತನು ಆಸ್ಥಾನದಿಂದೆದ್ದನು. ಅಷ್ಟರಲ್ಲಿ ಪ್ರತಿಭಾಸಂಪನ್ನಳಾದ ಪಂಡಿತೆಯೂ ತೀರ್ಣಪ್ರತಿಜ್ಞಳಾಗಿ ಬಂದು ವಿಭ್ರಮವಿಲಾಸಯುಕ್ತಳಾದ ಶ್ರೀಮತಿಯನ್ನು ಕಂಡಳು. ೮೫. ಪಂಡಿತೆಯು ಬರುವಾಗ ಅವಳ ಮುಖದಲ್ಲಾದ ಬಣ್ಣವೇ ಸಂತೋಷವಾರ್ತೆಯನ್ನು ಮೌನವಾಗಿ ತಿಳಿಸಿತು. ಆಗ ರಾಜಪುತ್ರಿಯು "ನಿನ್ನ ನಚ್ಚಿನ ಮನೋರಥವು ಈಡೇರಿತಾದರೂ ಅದನ್ನು ನನಗೆ ವಿಸ್ತಾರವಾಗಿ ಹೇಳಬೇಡವೇ? ಹಾಗೆ ಹೇಳದಿದ್ದರೆ ನನ್ನ ಅನುರಾಗದ ಭಾರವು ಅತಿಶಯಿಸದೇ?" ಎಂದಳು. ವ॥ ಆ ಪ್ರಸ್ತಾವದಲ್ಲಿ ಶ್ರೀಮತಿಯು ಸೂರ್ಯನ ಕಿರಣಗಳಿಂದ ಅರಳಿದ ಕಮಲದಂತೆ ಮುಖವುಳ್ಳವಳಾಗಿ ಪ್ರೇಮದಿಂದ ವಿಶಾಲಗೊಳಿಸಿದ ಕಣ್ಣುಳ್ಳವಳಾಗಿ ಮನಸ್ಸುಗೊಟ್ಟು ಕೇಳಲು ತೊಡಗಿದಳು. ೮೬. ವಿರಹತಾಪಕ್ಕೊಳಗಾಗಿ ಕಾಮಲಾಲಸೆಯಿಂದ ಗಡುಬಾಗಿ ವ್ಯವಹರಿಸಿದ ನಲ್ಲರಿಂದ ಅಗಲಿದರೂ, ಕನಲಿ ಕೋಪಿಸಿ ಕಳುಹಿದ ನಲ್ಲರ ಮಾತುಗಳನ್ನು ಕೋಗಿಲೆಯೇ ಬರಲಿ, ಗಾಳಿಯೇ ಬರಲಿ, ದುಂಬಿಯೇ ಬರಲಿ, ಅರಗಿಳಿಯೇ ಬರಲಿ ನಲ್ಲೆಯರು ಪ್ರೀತಿಯಿಂದ ಶಾಂತರಾಗಿ ಕೇಳುವರು. ಅಂದಮೇಲೆ ತಾವಾಗಿಯೇ ಕಳುಹಿದ ದೂತನು ತಂದ ನಲ್ಲರ ಹಾಸ್ಯದ ಮಾತುಗಳನ್ನು ಗುಂಪುಗೂಡಿ ಕೇಳಲಾಶಿಸರೇ? ವ॥ ಆಗ ಪಂಡಿತೆಯು ಹೀಗೆಂದು ಹೇಳತೊಡಗಿದಳು: "ನಿನ್ನ ಚಿತ್ರಪಟವನ್ನು ಕೊಂಡು ಹೋಗಿ ಪರಮ ಪವಿತ್ರವಾದ ಜಿನಾಲಯದ ಮುಂದೆ ತೂಗುಹಾಕಿದೆನು. ಚಿತ್ರಪಟವೆಂಬ ಆಸೆ ದೋರಿಸುವ ವಸ್ತುವಿಗೆ ಖೇಚರ ಭೂಚರರೆಂಬ ತರುಣಮೃಗಗಳು ಬಂದು

ಇದು ದಲ್ ನೋಡ ಮನುಷ್ಯವಿದ್ಧಮಣಮಲ್ತೀಗಂಡರೂಪಾವುದಿಂ
ತಿದಱೊಳ್ ತಳ್ದೆಸೆದಿರ್ದ ಪೆಣ್ ಸುರವಧೂಬಿಂಬಂ ದಲೀ ಚೆಲ್ವನ
ಪ್ಪಿದೆ ದಲ್ ದೇವವಿಮಾನದಂದಮಿದು ಪೇೞ್ ತಾನಾರ ವೃತ್ತಾಂತಮಾ
ರಿದನಿಂತಿಲ್ಲಿಗೆ ತಂದರೆಂದು ಪಿರಿದುಂ ಭ್ರಾಂತಿಂ ಜನಂ ನೋೞ್ಪುದುಂ ೮೭

ವ॥ ವಾಸವದುರ್ದಂತರೆಂಬರನೇಕಕ್ಷುದ್ರವಿದ್ಯಾಗರ್ವದುರ್ವಿದಗ್ಧರುಮಳೀಕವಿಚಕ್ಷಣರು ಮಪ್ಪುದಱಿಂದಮದನನುಮಾನದಿಂದಮಱಿದು ಮೆಲ್ಲನೆ ಸಾರ್ದು ನೋಡುವಲ್ಲಿ ವಾಸವನದಂ ನೀಡುಂ ಭಾವಿಸಿ ನೋಡಿ,

ಬಗೆ ಪೋಯ್ತಿಂತಿದು ನಾಕಲೋಕವಿಭವಂ ಮದ್ವೃತ್ತಕಂ ತಪ್ಪದೀ
ಮೃಗಶಾಬೇಕ್ಷಣೆ ಮನ್ಮನೋರಮೆ ವಿಮಾನಂ ಮದ್ವಿಮಾನಂ ಮನಂ
ಬುಗಲಾರ್ತತ್ತೆನಗೆಲ್ಲಿ ಪುಟ್ಟಿದಳೊ ಮತ್ಪ್ರಾಣೇಶೆಯೆಂದಿಲ್ಲದು
ದ್ವೆಗಮಂ ಭಾವಿಸಿ ತಾಳ್ದಿದಂ ಪಲವನಾ ಶೈಲೂಷವೇಷಂಗಳಂ ೮೮

ವ॥ ಆಗಳ್ ಪರಿಹಿತಾಸ್ರವನಂತಿರ್ದ ವಾಸವನಂ ದುರ್ದಂತನಳೀಕೋದಂತಂಗಳಿನಾಱಿಸುತ್ತಿರ್ಪು ದುಮಾಂ ಮೆಲ್ಲನಲ್ಲಿಗೆ ಪೋಗಿ,

ಏಕಿನಿತಾಕುಳಂ ಪ್ರಭುಗಿದಾದುದೊ ಪೂರ್ವಭವಾನುರಾಗಮಿಂ
ತೀಕೆಯೊಳುಳ್ಳೊಡೆಮ್ಮ ಪಟಮೆಮ್ಮಯ ಕೂಸಿನ ಚಿತ್ರಮೆಯ್ದೆ ಪೇ
ೞ್ದಾಕೆಯ ತನ್ನ ಬಯ್ಕೆಯವಿನಾಣಮನೆಂಬುದುಮಾಗಳಾಕುಳ
ವ್ಯಾಕುಳರಾಗಿ ನಾಣ್ಚೆ ಜಗುಳ್ದಿರ್ವರುಮಂದೊಳಸಾರ್ದು ಪೋಪುದುಂ ೮೯

೮೭. "ಈ ಪಟದಲ್ಲಿ ಚಿತ್ರಿತವಾಗಿರುವುದು ಖಂಡಿತವಾಗಿ ಮನುಷ್ಯರಿಂದ ಬರೆಯಲ್ಪಟ್ಟಿದವು. ಇದು ಯಾವ ಪುರುಷನ ರೂಪವಿರಬಹುದು? ಇಲ್ಲಿ ಬರೆಯಲಾಗಿರುವ ಹೆಣ್ಣಿನ ರೂಪು ಸುರವಧೂಬಿಂಬವೇ ಹೌದು. ಇದೆಷ್ಟು ಚೆಲುವನ್ನಪ್ಪಿದೆ! ಇದು ದೇವ ವಿಮಾನದಂದವನ್ನು ತಳೆದಿದೆ. ಇದು ಯಾರ ವೃತ್ತಾಂತ? ಯಾರು ಇದನ್ನು ಇಲ್ಲಿಗೆ ತಂದರು?" ಎಂದು ಜನರು ಭ್ರಾಂತಿಯಿಂದ ನೋಡಿದರು. ವ॥ "ಕ್ಷುದ್ರವಿದ್ಯೆಗಳಲ್ಲಿ ಪಂಡಿತಂಮಾನ್ಯರಾದ ವಾಸವ, ದುರ್ದಂತರೆಂಬುವರು ವ್ಯರ್ಥವಿಚಕ್ಷಣರಾದ ಕಾರಣ ಅನುಮಾನದಿಂದ ಊಹಿಸಿ ಸಮೀಪಕ್ಕೆ ಹೋದರು. ಅದರಲ್ಲಿಯೂ ವಾಸವನು ಚೆನ್ನಾಗಿ ಪರೀಕ್ಷಿಸಿ ಊಹಿಸಿ ನೋಡಿದನು. ೮೮. "ಸ್ವರ್ಗಲೋಕದ ವಿಭವವು ಮನಸ್ಸಿಗೆ ಬಂದಿತು. ಇದು ನಿಶ್ಚಿತವಾಗಿಯೂ ನನಗೇ ಸಂಬಂಧಿಸಿದ ಸಮಾಚಾರ. ಜಿಂಕೆಯ ಮರಿಯಂತೆ ಕಣ್ಣುಳ್ಳ ಈಕೆಯು ನನ್ನ ಮನದನ್ನೆ. ಇದು ನನ್ನ ವಿಮಾನ. ಇವೆಲ್ಲ ಮನಹೊಕ್ಕು ಸಾಕಷ್ಟು ನನಗೆ ದುಃಖ ಕೊಟ್ಟಿವೆ. ನನ್ನ ಪ್ರಾಣವಲ್ಲಭೆಯು ಎಲ್ಲಿ ಜನ್ಮತಳೆದಿರುವಳೋ ತಿಳಿಯದು." ಇವೇ ಮುಂತಾದ ಉದ್ವೇಗವನ್ನು ಪ್ರಕಟಿಸುತ್ತ ಹಲವಾರು ಶೈಲೂಷವೇಷಗಳನ್ನು ತಾಳಿದನು. ವ॥ ಹೆಂಡ ಕುಡಿದವನಂತಿದ್ದ ವಾಸವನನ್ನು ದುರ್ದಂತನು ಮಿಥ್ಯೋಪಚಾರಗಳಿಂದ ಸಮಾಧಾನಗೊಳಿಸುತ್ತಿರಲು ನಾನು (ಪಂಡಿತೆಯು) ಮೆಲ್ಲಗೆ ಅಲ್ಲಿಗೆ ಹೋದೆನು. ೮೯. ಇದು ನಮ್ಮ ಪಟ. ಇವಳು ನನ್ನ ಮಗಳು. ಪ್ರಭುಗೇಕೆ ಇಷ್ಟು ವ್ಯಾಕುಲತೆ? ಇವಳಲ್ಲಿ

**ವ॥ ಎಮ್ಮ ಪಾಸಿದ ಚಿತ್ರಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಗಂಗಳಾಗಳೆ ತೊಡರ್ಗು ಮುಸಿರದೆ ಬಿಜಯಂಗೆಯ್ಯಿಮೆಂದವಂದಿರಂ ನಕ್ಕು ಕಳೆಯೆ,**

**ರಟದಳಿವೃಂದಮೆಂತೆಱಗುಗುಂ ದಳಿತಾಂಬುರುಹಕ್ಕೆ ಗಂಧಲಂ**
**ಪಟತೆಯಿನಂತೆ ದಿಟ್ಟಿ ಮನಮೆಂಬವು ತೊಟ್ಟನೆ ನಟ್ಟು ನಟ್ಟವೊಲ್**
**ಘಟಯಿಸೆ ಸೋಲ್ತೊಱಲ್ದು ನಡೆ ನೋಟ್ಪಡೆಯೊಳ್ ಭವದೀಯರೂಪಲಂ**
**ಪಟವಿಟರಂ ಮರುಳ್ಗೊಳಿಸಿತುತ್ಕಟಮೋಹತಮಃಪಟಂ ಪಟಂ ೯೦**

**ವ॥ ಅನ್ನೆಗಂ ಗಂಭೀರತರ ತುರಗಹೇಷಾರವಬಧಿರಿತ ಸಕಳಭುವನವಿವರನುಂ ಕತಿಪಯಪದಾತಿ ಪರಿಜನಪರಿವೃತನುಂ ನಿರಂತರೋಚ್ಛ್ರಿತ ವಿಚಿತ್ರಚಂದ್ರಕಚ್ಛತ್ರಚ್ಛಾಯಾನಿರಾಕೃತಾತಪನುಂ ಶರನ್ನಿಶಾಸಮಯ ಸಮುದಿತತಾರಾತರಳಮುಕ್ತಾಭರಣಕಿರಣಚಂದ್ರಿಕಾಚಂದ್ರಕಬಳವಿಳಸಿತ ದಿಗಂಗನಾಮುಖನುಮಾಗಿ ಅಭಿನವೋದ್ಭಿದ್ಯಮಾನಮೃದುಕುಟಿಳಶ್ಮಶ್ರುಮಧುಕರಪಟಳಪರಿವೃತ ಮುಗ್ಧಮುಖಸರಸಿಜನುಂ ಮೃಗಮದವಿಲಿಖಿತ ವಿಚಿತ್ರಚಿತ್ರಪತ್ರಭಂಗಭಾಸುರಭುಜಶಿಖರನುಂ ಅತಿಸುರಭಿಸಹಕಾರಕಸ್ತೂರಿ ಕರ್ಪೂರಪಾಳಿಸಮ್ಮಿಶ್ರತಾಂಬೂಳರಾಗರಕ್ತಾಧರಪ್ರವಾಳಪ್ರಭಾಪ್ರಕಟಿತ ಪೂರ್ವಸಂಧ್ಯಾರಾಗನುಂ ಅಭಿನವಯೌವನಾವಷ್ಟಂಭಪ್ರಾಗಲ್ಭ್ಯದೃಷ್ಟಿಪಾತತೃಣೀಕೃತ ತ್ರಿಭುವನನುಮಪ್ಪನೊರ್ವಂ ರಾಜಕುಮಾರಂ ದೂರೋತ್ಸಾರಿತವಾಹನಂ ಸಸಂಭ್ರಮೋಪಗತಪರಿಚಾರಕಸ್ಕಂಧವಿನ್ಯಸ್ತವಾಮಹಸ್ತನಾಗಿ,**

ಪೂರ್ವಭವಾನುರಾಗವಿದ್ದರೆ ಒಂದೆರಡು ಅನುಭವವೇದ್ಯ ರಹಸ್ಯಗಳನ್ನು ತಿಳಿಸಿ" ಎಂದೆನು. ಆಗ ಅವರು ವ್ಯಾಕುಲರಾಗಿ ಹೇಳಲೇನೂ ತಿಳಿಯದೆ ಓಡಿ ಹೋದರು! ವ॥ "ನಾನು ಬೀಸಿದ ಚಿತ್ರಪಟವೆಂಬ ಬಲೆಯೊಳಗೆ ನಿಮ್ಮಂಥ ಅಜ್ಞಪಶುಗಳು ಬಂಧಿಸಲ್ಪಡುವುವು. ಮರುಮಾತಾಡದೆ ಹೊರಡಿರಿ" ಎಂದು ನಕ್ಕು ಕಳುಹಿಸಿದೆನು. ೯೦. "ಗುಂಜಾಧ್ವನಿಯನ್ನು ಗೈಯುತ್ತಾ ದುಂಬಿವಿಂಡುಗಳು ಗಂಧಲಂಪಟತೆಯಿಂದ ಅರಳಿದ ಕಮಲದ ಮೇಲೆರಗುವಂತೆ ಪ್ರೇಕ್ಷಕರ ದೃಷ್ಟಿಮನಗಳು ತಟಕ್ಕನೆ ನಿನ್ನ ಚಿತ್ರದ ಮೇಲೆ ಬಿದ್ದುವು; ನಾಟಿದುವು, ಸೋತು ಒರಲಿ ನಡೆನೋಡಿದುವು. ಹೀಗೆ ನಿನ್ನ ರೂಪಾಸಕ್ತರಾದ ರಸಿಕರನ್ನು ಉತ್ಕಟಮೋಹ ತಮೋಬಂಧಕವಾದ ಚಿತ್ರಪಟವು ಭ್ರಾಂತಿಗೊಳಿಸಿತು. ವ॥ "ಅಷ್ಟರಲ್ಲಿ ಒಬ್ಬ ರಾಜಕುಮಾರನು ವಾಹನವನ್ನು ದೂರ ನಿಲ್ಲಿಸಿ ಸಡಗರದಿಂದ ಸಮೀಪಿಸಿದ ಪರಿಚಾರಕರ ಹೆಗಲ ಮೇಲೆ ಕೈಯಿಟ್ಟು ಬಂದನು. ಅವನ ಕುದುರೆಗಳ ಕೆನೆತಗಳಿಂದ ಸಮಸ್ತ ಭೂರಂಧ್ರಗಳು ಕಿವುಡು ಮಾಡಲ್ಪಟ್ಟುವು. ಅವನು ಕೆಲವು ಜನ ಸೈನಿಕರಿಂದಲೂ ಪರಿಜನರಿಂದಲೂ ಪರಿವೃತನಾಗಿದ್ದನು. ಅವನ ಮೇಲೆಬಿದ್ದ ಬಿಸಿಲನ್ನು ನವಿಲುಗರಿಯ ಛತ್ರಿಗಳು ಹೋಗಲಾಡಿಸಿದ್ದುವು. ಶರದ್ರಾತ್ರಿಯಲ್ಲೊಗೆದ ತಾರಗೆಗಳಂತೆ ಅವನು ಧರಿಸಿದ ಮುಕ್ತಾಭರಣಗಳ ಕಿರಣಗಳೆಂಬ ಬೆಳದಿಂಗಳಿನಿಂದ ವಿಕಸಿತವಾಗಿತ್ತು. ದಿಗಂಗನಾಮುಖ. ಆಗತಾನೆ ಮೇಲೊಡೆದು ಕಾಣುವ ಮೃದುವೂ ಕುಟಿಲವೂ ಆದ ಮೀಸೆಗಳೆಂಬ ದುಂಬಿವಿಂಡಿನಿಂದ ಕೂಡಿತ್ತು, ಅವನ ಸುಂದರ ಮುಖಕಮಲ. ಕಸ್ತೂರಿಯಿಂದ ಬರೆಯಲ್ಪಟ್ಟ ಪತ್ರಭಂಗಗಳಿಂದ ಅವನ ಭುಜಶಿರಸ್ಸು ಭಾಸುರವಾಗಿತ್ತು. ಸುವಾಸನಾ ಮಯವಾದ ಸಹಕಾರ, ಕರ್ಪೂರ, ಕಸ್ತೂರಿಗಳಿಂದ ಮಿಶ್ರಿತವೂ ತಾಂಬೂಲರಾಗ

ಧನು ಕಾಮಂಗಿಕ್ಷುದಂಡಂ ಪಟಿಯಿಗೆ ಮಕರಂ ಬಾಣಸಂಜಾತಮುಚ್ಚಂ
ನನೆಯೆಂಬೀಚಿಹ್ನಮಿಲ್ಲೆಂಬನಿತೆ ಮನಸಿತಾಕಾರಮಾಕಾರಮೇಂ ಜಾ
ಣನೊ ಧಾತ್ರಂ ರೂಪನಿಷ್ಪಾದನವಿಧಿಯೊಳಿವಂ ಮುನ್ನಮೇಂ ನೋಂಪಿಯಂ ನೋಂ
ತನೊ ಪೇಟೆಂಬಂತೆ ಬಂದಂ ಸುಕವಿಜನಮನೋಮಾನಸೋತ್ತಂಸಹಂಸಂ ೯೧

ವ॥ ಅಂತು ಬಂದು,

ಉದಯಂಗೆಯ್ದಮೃತಾಂಶುಬಿಂಬಮೆರ್ದೆಗಂ ಕಣ್ಗಂ ಮಹೋತ್ಸಾಹದೊಂ
ದೊದವಂ ಮುಂದಿಡುವಂತೆ ತನ್ನ ಭುವನಪ್ರಖ್ಯಾತಸೌಂದರ್ಯದಿಂ
ವಿದಿತೈಶ್ವರ್ಯದಿನೆನ್ನನಾಗಳೆ ದಲೆಳ್ತಂದದಿಂ[1] ಸೂಚಿತಾ
ಭ್ಯುದಯಂ ಜಾತದಯಂ ಮನಂಗೊಳಿಸಿದಂ ಸಂಸಾರಸಾರೋದಯಂ ೯೨

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾ
ಪ್ರಸರ ಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಾದಿಪುರಾಣದೊಳ್ ಮಹಾಬಳ ಕುಮಾರೋದಯ ವರ್ಣನಂ
ತೃತೀಯಾಶ್ವಾಸಂ

ರಂಜಿತವೂ ಆದ ಅವನ ಕೆಳದುಟಿಯೆಂಬ ಹವಳದ ಕಾಂತಿಯಿಂದ ಸಂಧ್ಯಾರಾಗವು ಪ್ರಕಟಿತವಾಗಿತ್ತು. ಹೊಸಜವ್ವನದ ಪ್ರೌಢಿಮೆಯ ಪ್ರಯುಕ್ತವಾದ ದೃಷ್ಟಿಪಾತದಿಂದ ತ್ರಿಭುವನವೂ ಅವನಿಂದ ತಿರಸ್ಕೃತವಾಗಿತ್ತು. ೯೧. "ಕವಿಜನರ ಮನಸ್ಸೆಂಬ ಮಾನಸಸರೋವರಕ್ಕೆ ಶ್ರೇಷ್ಠಹಂಸನಾದ ಒಬ್ಬ ರಾಜಕುಮಾರನು ಬಂದನು. ಅವನ ರೂಪವು ಕಬ್ಬಿನ ಜಲ್ಲೆಯೆಂಬ ಬಿಲ್ಲನ್ನೂ, ಮಕರವೆಂಬ ಬಾವುಟವನ್ನೂ, ಹೊಸ ಮೊಗ್ಗುಗಳೆಂಬ ಬಾಣಸಂತತಿಯನ್ನೂ ಕೈಯಲ್ಲಿ ಹಿಡಿಯದ ಮನ್ಮಥನಂತಿದ್ದಿತು, ಈ ರೂಪಸೃಷ್ಟಿಯ ಕಾರ್ಯದಲ್ಲಿ ಬ್ರಹ್ಮನು ಅದೆಷ್ಟು ಚತುರನೋ, ಈ ಸೌಂದರ್ಯವನ್ನು ಪಡೆಯಲು ಇವನೆಷ್ಟು ವ್ರತಗಳನ್ನು ಈ ಪೂರ್ವದಲ್ಲಿ ಕೈಕೊಂಡನೊ? ವ॥ "ಹಾಗೆ ಬಂದು. ೯೨. "ಉದಯವನ್ನು ಹೊಂದುವ ಚಂದ್ರನು ಎದೆಗೂ ಕಣ್ಣುಗಳಿಗೂ ಮಹಾನಂದವನ್ನುಂಟುಮಾಡುವಂತೆ, ತನ್ನೊಂದು ಲೋಕಸ್ತುತವಾದ ಸೌಂದರ್ಯದಿಂದಲೂ ಐಶ್ವರ್ಯದಿಂದಲೂ ಬರುವ ರೀತಿಯಿಂದಲೂ ಅಭ್ಯುದಯವನ್ನು ಸೂಚಿಸುತ್ತ ಜಾತದಯನಾಗಿ ಆ ರಾಜಕುಮಾರನು ಮನಸ್ಸಿಗೆ ಆನಂದವನ್ನುಂಟುಮಾಡಿದನು! ಇಂತು ವಜ್ರಜಂಘ ದರ್ಶನವೆಂಬ

ಮೂರನೆಯ ಆಶ್ವಾಸ ಮುಗಿಯಿತು.

---

೧ ಗ-ವಿದಿತೈಶ್ವರ್ಯದಿನೆನ್ನನಾಗಳೆವಲಂತೆಲ್ಲದಂದದಿಂ

# ಚತುರ್ಥಾಶ್ವಾಸಂ

ಶ್ರೀಮಜ್ಜಿನಭವನಮನಖಿ
ಳಾಮರನರಖಚರಚಕ್ರವರ್ತಿಸ್ತುತಮಂ
ಮೂಮೆ ಬಲಗೊಂಡು ಭವ್ಯಶಿ
ಖಾಮಣಿಯೆನಿಸಿದ ಸರಸ್ವತೀಮಣಿಹಾರಂ ೧

ತ್ರಿಕರಣಶುದ್ಧಿಯೊಳಾ ರಾ
ಜಕುಮಾರಂ ಮಾರಮಥನನಂ ಸ್ತುತಿಯಿಸಿ ತ
ತ್ಪ್ರಕಟಫಲಪ್ರಾಪ್ತಿಗೆ ಸಂ
ಚಕರಂಗೊಳ್ವಂತೆ ಸಿದ್ಧಶೇಷೆಯನಾಗಳ್ ೨

ಕೊಂಡು ಜಿನಭವನದಿಂದಾ
ಖಂಡಳನಿಭವಿಭವನಿರದೆ ಪೊಱಮಟ್ಟದಿರೊಳ್
ಕಂಡಂ ನೆರೆದು ನಿಗುಂಬಿಸಿ
ತಂಡಂಗೊಂಡಿರ್ದ ನರರ ಖಚರರ ಗುಂಡಂ ೩

ವ॥ ಕಂಡೀ ನೆರೆದ ನೆರವಿ ವಿಸ್ಮಯಂಬಟ್ಟುದೇನಂ ನೋಡಿದಪ್ಪುದೇನಾನುಮೊಂದು ಕೌತುಕ ಮಾಗಲೆವೇಟ್ಕುಮೆಂದೆಯ್ದೆವಂದು ನೋಟ್ಪನ್ನೆಗಮಲ್ಲಿ ಪಸರಿಸಿದ ಚಿತ್ರಪಟಮಂ ಭೋಂಕನೆ ಕಂಡು,

ರಸಭಾವಂಗಳೊಳಾದ ಚೆಲ್ವು ನುಡಿವಂತಾದಟ್ಕಱಿಂ ನೋಡುವಂ
ತುಸಿರ್ವಂತಿರ್ದುದು ರೇಖೆ ಕೋಮಳತೆಯಂ ತಾಳ್ದಿತ್ತು ವರ್ಣಕ್ರಮಂ
ರಸವತ್ಕಾಂತಿಯನಾಂತು ನಿಂದುದೆಸೆವೀ ನಿಮ್ನೋನ್ನತಂಗಳ್ ವಿರಾ
ಜಿಸಿ ಚೆಲ್ವಿಂ ಗೆಡೆಗೊಂಡುವಿಂತು ಬರೆಯಲ್ ಬ್ರಹ್ಮಂಗಮೇಂ ಬರ್ಕುಮೇ ೪

೧. ಎಲ್ಲ ಸುರರ, ನರರ ಮತ್ತು ಖೇಚರರ ಚಕ್ರವರ್ತಿಗಳಿಂದ ಸ್ತುತವಾದ ಜಿನಭವನವನ್ನು ಸರಸ್ವತೀಮಣಿಹಾರನಾದ ವಜ್ರಜಂಘನು ಮೂರು ಬಾರಿ ಪ್ರದಕ್ಷಿಣೆ ಮಾಡಿ ಭವ್ಯಶಿಖಾಮಣಿಯೆನಿಸಿದನು. ೨. ತ್ರಿಕರಣಶುದ್ಧಿಯಿಂದ ಆ ರಾಜಕುಮಾರನು ಕಂದರ್ಪವಿಜೇತನಾದ ಜಿನನನ್ನು ಭಕ್ತಿಯಿಂದ ಸ್ತುತಿಸಿದನು. ಜಿನಸೇವೆಯಿಂದ ಲಭ್ಯವಾಗುವ ಫಲಪ್ರಾಪ್ತಿಗೆ ಮುಂಗಡಹಣವೋ ಎಂಬಂತಿರುವ ಸಿದ್ಧಶೇಷೆಯನ್ನು ಪರಿಗ್ರಹಿಸಿದನು. ೩. ಇಂದ್ರನಿಗೆ ಸಮನಾಗಿ ಐಶ್ವರ್ಯವನ್ನು ಪಡೆದ ಆ ರಾಜಕುಮಾರನು ಜಿನಭವನದಿಂದ ಹೊರಬಂದು, ಒಂದೆಡೆ ಸೇರಿ ಗುಂಪುಕೂಡಿದ್ದ ನರ ಖಚರರ ಗುಂಪನ್ನು ವೀಕ್ಷಿಸಿದನು. ವ॥ "ಈ ಜನಸಮೂಹವು ಆಶ್ಚರ್ಯದಿಂದ ಏನನ್ನು ನೋಡುತ್ತಿದೆ? ಏನೋ ಒಂದು ಕೌತುಕವಿರಬೇಕಲ್ಲವೇ!" ಎಂದು ಎದ್ದುಬಂದು ನೋಡುವಷ್ಟರಲ್ಲಿ, ಅಲ್ಲಿ ಹರಡಿದ್ದ ಚಿತ್ರಪಟವನ್ನು ತಟಕ್ಕನೆ ಕಂಡನು. ೪. "ರಸಭಾವಗಳಲ್ಲುಂಟಾದ ಸೌಂದರ್ಯವು ಪ್ರೀತಿಯಿಂದ ನುಡಿವಂತೆಯೂ ನೋಡುವಂತೆಯೂ ಇದೆ, ಉಸಿರಾಡುವಂತಿದೆ!

ವ|| ಎಂದು ಮುನ್ನಂ ವಿಚಿತ್ರಚಿತ್ರವಿದ್ಯಾಕೌಶಲಮನತಿಕುತೂಹಳೋತ್ತಾರಿತಲೋಚನನಾಗಿ ನೀಡುಂ ಭಾವಿಸಿ ನೋಡಿ,

ಇದಱಂದಂ ಬಿಸವಂದಮಿಂತಿದಮರೇಂದ್ರಾವಾಸದೊಂದಂದಮಿಂ
ತಿದು ದಲ್ ದೇವವಿಮಾನದಂದಮಿದು ದೇವಾನೀಕದೊಂದಂದಮಿಂ
ತಿದು ದೇವಾಂಗನೆಯರ್ ಪಲರ್ ಬಳಸಿಕೊಂಡಿರ್ದಂದಮೀ ತಳ್ತ ರೂ
ಪಿದು ದಲ್ ದೇವನ ದೇವಿಯಂದಮಿದು ಪೇಟ್ ಮುನ್ನೆಲ್ಲಿ ಕಂಡಂದಮೋ ೫

ವ|| ಎಂದು ಬಗೆದಿರುಳ್ಕಂಡ ಕನಸಂ ಮಱುದೆವಸಂ ನೆನೆವಂತೆ ನಿರತಿಶಯ ಸುರಲೋಕಸಮುದ್ಭವ ಸುಖಾನುಭವಮನಾಗಳೆ ನೆನೆದು,

||ಪೃಥ್ವಿ||

ಎಲೇ ಬಗೆದೆನೀಗಳೀ ಬರೆದ ಕಲ್ಪಮೀಶಾನಮೀ
ಚಲಲ್ಲುಳಿತಕೇತನಂ ಸುರವಿಮಾನಮಾ ಶ್ರೀಪ್ರಭಂ
ಸಲೀಲವದನಾರವಿಂದಮಿದು ದೇವವೃಂದಂ ಲಸ
ದ್ವಿಲಾಸದರಹಾಸರಮ್ಯಮಿದು ದಿವ್ಯಕಾಂತಾಜನಂ ೬

ಇದಂದು ಲಲಿತಾಂಗದೇವನೆನೆ ಸಂದ ಮದ್ರೂಪಮೀ
ಮದಾಲಸವಿಲೋಲಲೋಚನೆ ದಲೆನ್ನ ಮಾದೇವಿ ತ
ಪ್ಪದೀ ಲಲನೆ ತತ್ಸ್ವಯಂಪ್ರಭೆಯೆ ಸೋಟ್ಟೋಡೀ ಚಿತ್ರಮಿಂ
ತಿದಾಕೆಯದೆ ಬಲ್ಮೆ ಪೇಟ್ ಪೆಱರ್ಗಮಿಂತುಟೊಂದಕ್ಕುಮೇ ೭

ರೇಖಾವಿನ್ಯಾಸವು ಕೋಮಲತೆಯನ್ನು ತಾಳಿದೆ, ವರ್ಣಕ್ರಮವು ರಸವತ್ತಾದ ಕಾಂತಿಯನ್ನು ಪಡೆದಿದೆ. ತಗ್ಗುತಿಟ್ಟುಗಳು ವಿರಾಜಿಸುತ್ತ ಚೆಲ್ವಿಗೆ ಆಶ್ರಯಕೊಟ್ಟಿವೆ. ಬ್ರಹ್ಮನಿಗೂ ಹೀಗೆ ಬರೆಯಲು ಬಾರದು" ವ|| ಎಂದು ಮೊದಲು ವಿಚಿತ್ರವಾದ ಚಿತ್ರವಿದ್ಯೆಯ ಸೊಬಗನ್ನು ಕುತೂಹಲದಿಂದ ಕಣ್ಣರಳಿಸಿಕೊಂಡು ನೋಡಿದನು. ೫. "ಈ ಚಿತ್ರವಿದ್ಯೆಯ ಅಂದವು ಬಹುವಿಸ್ಮಯಕರವಾದುದು. ಇಲ್ಲಿ ಸುರೇಂದ್ರಾವಾಸದ ಅಂದವು ಕಂಗೊಳಿಸುತ್ತಿದೆ. ದೇವ ವಿಮಾನದ ಚೆಂದವು ಚೆನ್ನಾಗಿ ಚಿತ್ರಿತವಾಗಿದೆ. ದೇವಸಮೂಹವು ಅಂದವಾಗಿ ಕಾಣುತ್ತಿದೆ. ಇಲ್ಲಿ ದೇವಸ್ತ್ರೀಯರು ಬಳಸಿಕೊಂಡು ನಿಂತಿರುವ ದೃಶ್ಯವು ಸುಂದರವಾಗಿ ತೋರುತ್ತಿದೆ, ಇಲ್ಲಿ ದೇವದೇವಿಯರ ರೂಪು ಅಂದವಾಗಿ ಚಿತ್ರಿತವಾಗಿದೆ. ಹಿಂದೆಲ್ಲಿ ಈ ರೂಪವನ್ನು ಕಂಡಿದ್ದೆನೋ ತಿಳಿಯೆ" - ಎಂದುಕೊಂಡನು. ವ|| ರಾತ್ರಿಯಲ್ಲಿ ಕಂಡ ಕನಸನ್ನು ಮರುದಿನ ನೆನೆಯುವಂತೆ ಸುರಲೋಕದಲ್ಲೊಗೆದ ಸುಖಾನುಭವವನ್ನು ಆಗಲೇ ನೆನೆಸಿಕೊಂಡನು. ೬. "ಹಾ! ಗೊತ್ತಾಯಿತು! ಇಲ್ಲಿ ಬರೆದ ಸ್ಥಳ ಈಶಾನಕಲ್ಪ, ಹಾರಾಡುತ್ತಿರುವ ಧ್ವಜವುಳ್ಳ ಈ ಸುರವಿಮಾನವು ಆ ಶ್ರೀಪ್ರಭವಿಮಾನ. ವಿನೋದಪೂರ್ಣವಾದ ಮುಖಕಮಲವುಳ್ಳದು ಇದು ದೇವಸಮೂಹ. ಈ ಲಲನಾಜನವು ವಿಲಾಸದಿಂದಲೂ, ನಸುನಗೆಯಿಂದಲೂ ರಮ್ಯವಾಗಿರುವುದು. ೭. ಆಗ ಲಲಿತಾಂಗದೇವನಾಗಿದ್ದ ನನ್ನ ರೂಪವಿದು! ಇವಳು ಮದದಿಂದ ಅಲಸಳೂ ಚಂಚಲಳೂ ಆದ ಕಣ್ಣುಳ್ಳ ನನ್ನ ಮಾದೇವಿ. ನಿಜವಾಗಿಯೂ

ಇದೆನ್ನಯ ವಿಮಾನಮಂ ಬಳಸಿ ತಳ್ತ ಪುನ್ನಾಗನಾ
ಗದಿವ್ಯತರುನಂದನಂ ಲತೆಯ ಜೊಂಪಮೀ ತೋರ್ಪುದೆ
ನ್ನದಲ್ತೆ ನೆರೆದಿರ್ಬರಿರ್ದ ಕೃತಕಾಚಳಂ ಚೆಲ್ವನ
ಪ್ಪುದೇ ಕನಕಪದ್ಮಿನೀನಿಳಯಮೆನ್ನ ಲೀಲಾಸರಂ ೮

ಇದು ಲೀಲಾಂದೋಳಮಿಂದೋಳದ ದನಿ ನೆಱೆಗೊಳ್ವನ್ನೆಗಂ ಪಾಡಲೆಂದೇ
ಱೆದಳಂ ತೂಗುತ್ತುಮಿರ್ದೆನ್ನಯ ಪರಿಜದುವೇ ಮಾಧವೀಮಂಟಪಂ ತೋ
ರ್ಪುದಿದಂತೇಕಾಂತದೊಳ್ ನೂಪುರರವವಿಳಸದ್ವಾಮಪಾದಪ್ರಹಾರ
ಕ್ಕಿದಱೊಳ್ ಪಕ್ಕಾಗಿ ಗೋತ್ರಸ್ಖಲನೆ ನೆಗಟಿ ಪೂಮಾಲೆಯಿಂ ಮೋದುವೆತ್ತಂ ೯

ವII ಮತ್ತಮಮರಸಮಿತಿವೆರಸೋಲಗಂಗೊಟ್ಟಿರ್ದಲ್ಲಿ ಮದೀಯಸಿಂಹಾಸನಾರ್ಧೈಕದೇಶಮನಳಂಕರಿಸಿ ಪದವಡೆ ಸೋಂಕಿ ಕುಳ್ಳಿರ್ದ ರೂಪುಮನಮರಾಂಗನೆಯರ ಬೀಸುವ ಚಾಮರದ ಗಾಳಿಯಲಂಪಿನೊಳಲ್ಲುಗುವ ಬಂಬಲ್ಗುರುಳ್ಗಳ ಬಂಬಲಿಂದಂ ತಳರ್ವ ಚೆನ್ನಪೂಗಳನವಯವದೊಳೆ ಸಯ್ತುವಾಡುವ ಕೆಯ್ತಮುಮಂ, ಅಮರೀಮಧುರಗೀತನಿನಾದಕ್ಕಾದವೊಱಲ್ದಿರ್ದ ಶಿರಃಕಂಪದೊಳಿನಿಸಾನುಮೆಱಗಿದ ಕರ್ಣಪೂರಪಾರಿಜಾತಸ್ತಬಕಮನೋಸರಿಸುವ ವಿಳಾಸಮುಮಂ, ಕನಕಕದಳೀವನದೊಳಗಣ ಮಣಿಮಯಭವನದೊಳೆಗೆ ಪರಿಮಿತಪರಿಜನಸಹಿತಮೆನ್ನ ಮನಮೊಱಲ್ವಿನೆಗಮೆನ್ನ ಸೋಂಕಿನೊಳ್ ಕುಳ್ಳಿರ್ದು ವೀಣೆಯಂ ಬಾಜಿಸುವ ರೂಪಮುಮಂ ಅಚ್ಯುತೇಂದ್ರಪೂಜಾವಿಳಾಸಮುಮಂ ಮಂದರಕಂದರವಿಹಾರಮುಮಂ ಇಲ್ಲಿಯೇ ಕಾಣಲಾದಪ್ಪುದೆಂದೇ,

ಇವಳು ಸ್ವಯಂಪ್ರಭೆಯೇ ಅಹುದು! ಚಿತ್ರವಿದನ್ನು ನೋಡಲಾಗಿ ಆಕೆಯದೆ ರೂಪು. ಇತರರಿಗೆ ಇಂಥ ಬಲ್ಮೆ ಎಲ್ಲಿಂದ ಬರಬೇಕು? ೮. ಇದು ನನ್ನ ವಿಮಾನ, ಇದನ್ನು ಬಳಸಿಕೊಂಡು ಪುನ್ನಾಗವೃಕ್ಷಗಳಿಂದಲೂ ನಾಗಸಂಪಿಗೆಗಳಿಂದಲೂ ಶ್ರೇಷ್ಠ ವೃಕ್ಷಗಳಿಂದಲೂ ಶೋಭಿಸುತ್ತಿರುವ ನಂದನವು ನಿಂತಿದೆ. ಇಲ್ಲಿ ಲತೆಗಳ ಜೊಂಪವೂ ಕಾಣಿಸುತ್ತಿದೆ. ನಾವಿಬ್ಬರೇ ಇದ್ದ (ವಿಹಾರಾರ್ಥವಾದ) ಕೃತಕಾಚಲವು ಇದೇಯಲ್ಲವೆ? ಚಿನ್ನದ ಕಮಲಗಳಿಗೆ ಆಶ್ರಯವಾದ ಲೀಲಾಸರೋವರವೂ ಇಲ್ಲಿದೆ. ೯. ಇದು ಕ್ರೀಡೆಗಾಗಿಯೇ ಏರ್ಪಡಿಸಿದ ಉಯ್ಯಾಲೆ. ಇಂದೋಳದ ರಾಗವು ಪೂರ್ಣಗೊಳ್ಳುವವರೆಗೆ ಹಾಡಲೆಂದೇ ಏರಿದವಳನ್ನು ತೂಗುತ್ತಿದ್ದ ನನ್ನ ಆಕೃತಿ ಇದು. ಇದು ಮಾಧವೀಮಂಟಪ. ಏಕಾಂತದಲ್ಲಿ ಕಾಲಂದುಗೆಯ ಧ್ವನಿಯಿಂದ ರಮ್ಯವಾದ ನಲ್ಲಳ ಎಡಗಾಲಿನೊದೆತಕ್ಕೆ ಗುರಿಯಾದೆನು! ಹೆಸರನ್ನು ತಪ್ಪಾಗಿ ಕರೆದುದರಿಂದಾಗಿ ನಾನು ಹೂಮಾಲೆಯಿಂದ ಏಟು ತಿಂದ ನೆಲೆಯಿದು! ವII ಅಮರಾವಳಿಯೊಡನೆ ಓಲಗದಲ್ಲಿದ್ದ ನನ್ನ ಸಿಂಹಾಸನದ ಅರ್ಧಭಾಗವನ್ನೇರಿದ್ದಳು ಸ್ವಯಂಪ್ರಭೆ. ಅವಳ ದೇಹವು ನನ್ನ ದೇಹದೊಡನೆ ತಾಕಿತ್ತು. ಅಮರಸ್ತ್ರೀಯರು ಬೀಸುತ್ತಿದ್ದ ಚಾಮರದ ಗಾಳಿಯಿಂದ ಅವಳ ಗುಂಗುರುಕೂದಲು ಅಲುಗುತ್ತಿತ್ತು. ಅದರಿಂದ ಜಾರಿಬೀಳುತ್ತಿದ್ದ ಚಿನ್ನದ ಹೂಗಳನ್ನು ಅವಯವಗಳಲ್ಲೇ ನೇರ್ಪಡಿಸಿಕೊಳ್ಳುತ್ತಿದ್ದ ವೈಖರಿಯನ್ನೂ ದೇವಸ್ತ್ರೀಯರ ಗಾನಪ್ರಯುಕ್ತವಾದ ಶಿರಃಕಂಪನದಿಂದ ಬಾಗಿದ ಕರ್ಣಪೂರಗಳಾದ ಪಾರಿಜಾತದ ಗೊಂಚಲುಗಳನ್ನೂ ಸರಿಪಡಿಸಿಕೊಳ್ಳುವ ವಿಲಾಸವನ್ನೂ

ಒದವಿದ ಬೇಟದತ್ತಳಗದೊಳ್ ಮುಳಿಸಂ ಪುರುಡುಂಟು ಮಾಡೆ ಜ
ರ್ವಿದ ಕಡೆಗಣ್ಣ ಜರ್ಬುಗಳೊ ಮೋದಿದ ನೀಳಸರೋಜಮಾಳೆಯಿಂ
ದುದಿರ್ದು ಮದಂಗದೊಳ್ ತೊಡರ್ದು ತೋರ್ಪ ದಳಂಗಳೊ ಪೇಟಿಮಾವುದೆಂ
ಬುದನೆನೆ ಕಾದಿ ಮೋದಿದವಿನಾಣಮದಿಲ್ಲಿ ದಲಿಲ್ಲ ನಲ್ಲಳಾ ೧೦

ವ|| ಮತ್ತಮೊರ್ಮೆ ಮಣಿಮಯಸುರತಭವನದೊಳಗೆ ನಿರ್ಭರಪ್ರಣಯಕಲಹಕಲುಷ ಪರವಶೆಯಾಗಿ,

ಮುಳಿದಿರೆ ಪಾದಪಂಕಜಮನಾಂ ತಲೆಯೊಳ್ ನಿಲೆ ತಾಳ್ದಿ ನಲ್ಲಳೇ
ತಿಳಿಯೆನೆ ನಲ್ಲಳೆನ್ನ ಪೆಸರಲ್ತೆಮಗಾ ಪೆಸರಾಕೆಯುಳ್ಳೊಡಂ
ತಿಳಿಪೆನೆ ಮತ್ತಮಾ ಪೆಸರ್ಗೆ ನೀನಿರೆ ನೋಂತವಳಾವಳೆಂಬುದುಂ
ತಿಳಿದಮರ್ದಪ್ಪಿದಂದಮಣಮಿಲ್ಲ ದಲೀ ಪಟದೊಳ್ ಮೃಗಾಕ್ಷಿಯಾ ೧೧

ವ|| ಮತ್ತಮೊರ್ಮೆ ಪಂಚರತ್ನಪ್ರಭಾಪ್ರಸಾಧಿತಪ್ರಸಾಧನಶಾಲೆಯೊಳಗೆ ಸ್ವಯಂಪ್ರಭೆಯ ನಾನೆ ಪಸದನಂಗೊಳಿಸುತ್ತುಮಿರ್ದು

ಚಳದಳಕಾಳಿ ನಿನ್ನ ವದನಾಂಬುಜಮಂ ನಡೆ ನೋಡಲೀಯದ
ವ್ವಳಿಸುವುದೌಪರಿಷ್ಟಕದೊಳೆನ್ನನಿವೆಂದು ಕನಲ್ದು ಚೆನ್ನಪೂ
ಗಳನವಜೊಳ್ ತಗುಳ್ಚದೆ ಮೃಗೋದ್ಭವಪಂಕದೆ ಪತ್ರಭಂಗಮಂ
ತೊಳಪ ಕದಂಪಿನೊಳ್ ಬರೆದುದಂ ಬರೆಯಲ್ ಮಱೆದಂದಮಾವುದೋ ೧೨

ಕದಲೀವನದ ಮಣಿಭವನದಲ್ಲಿ ಪರಿಮಿತ ಪರಿಜನರಿಂದ ಕೂಡಿ ನನ್ನನ್ನು ಸೋಂಕಿಕೊಂಡು ವೀಣೆಯನ್ನು ಬಾರಿಸುತ್ತಿದ್ದ ರೂಪವನ್ನೂ ಅಚ್ಯುತೇಂದ್ರನ ಪೂಜಾವೈಖರಿಯನ್ನೂ ಮಂದರಗುಹೆಯ ವಿಹಾರವನ್ನೂ ಇಲ್ಲಿಯೇ ನೋಡಬಹುದಾಗಿದೆ ಎಂಬುದೇ ವಿಶೇಷ. ೧೦. ಲಾಲಸೆಯ ತಳಮಳದಿಂದ ಕೋಪವನ್ನೆಬ್ಬಿಸಿತು ಅಸಹನೆ. ಇವು ತತ್ಫಲವಾಗುಂಟಾದ ಗದರಿಕೆಯ ಕಡೆಗಣ್ಣೋಟಗಳೋ, ಇಲ್ಲವೆ ನೀಲಕಮಲದ ಮಾಲೆಯ ಹೊಡೆತದಿಂದ ಉದುರಿ ನನ್ನ ಮೈಮೇಲೆ ಬಿದ್ದ ಕಮಲದಳಗಳೋ ಯಾವುವೆಂಬುದನ್ನು ಹೇಳಿ ಎಂಬಂತೆ ನಲ್ಲಳು ನನ್ನೊಡನೆ ಕಾದಿ ಹೊಡೆದ ಅಭಿಜ್ಞಾನಗಳು ಮಾತ್ರ ಇಲ್ಲಿಲ್ಲ! ವ|| ಮತ್ತೊಂದು ಸಲ ಮಣಿಮಯವಾದ ಸುರತಭವನದಲ್ಲಿ ಪ್ರಣಯಕಲಹದಿಂದ ಕಲುಷಿತಹೃದಯಳಾಗಿ, ೧೧. ಕೋಪಗೊಂಡ ನಲ್ಲೆಯ ಪಾದಕಮಲಗಳನ್ನು ನಾನು ತಲೆಯ ಮೇಲೆ ಹೊತ್ತು 'ನಲ್ಲೆ! ಶಾಂತಳಾಗು' ಎಂದೆನು. ಒಡನೆ ಅವಳು 'ನನಗೆ ನಲ್ಲೆಯೆಂದು ಹೆಸರಿಲ್ಲ; ಆ ಹೆಸರಿನವಳನ್ನು ನನಗೆ ತಿಳಿಸು' ಎಂದಳು. ನಾನು 'ಆ ಹೆಸರಿಗೆ ನೋಂತವಳು ನೀನು' ಎಂದೊಡನೆಯೆ ಅಮರ್ದಪ್ಪಿದ ಆ ಮೃಗಾಕ್ಷಿಯ ಅಂದವು ನಿಶ್ಚಯವಾಗಿ ಈ ಪಟದಲ್ಲಿಲ್ಲ! ವ|| ಮತ್ತೊಂದು ಸಲ ಪಂಚರತ್ನಗಳ ಪ್ರಭೆಯಿಂದ ಕೂಡಿದ 'ಅಲಂಕಾರದ ಮನೆ'ಯಲ್ಲಿ ಸ್ವಯಂಪ್ರಭೆಯನ್ನು ನಾನೇ ಅಲಂಕಾರಗೊಳಿಸುತ್ತಿದ್ದಾಗ, ೧೨. "ಮುಂಗುರುಳು ಹಾರಾಡುತ್ತ ವಿಪರೀತಸುರತದಲ್ಲಿ ನಿನ್ನ ಮುಖಕಮಲವನ್ನು ನೋಡಲು ಅವಕಾಶಕೊಡುವುದಿಲ್ಲ! ಈ ಸುಂದರ ಹೂಗಳು ನನ್ನನ್ನು ಅಪ್ಪಳಿಸುತ್ತವೆ!

ವ|| ಮತ್ತಮೊರ್ಮೆ ಮಂದಪವನಾಂದೋಳಿತ ವಿಮಾನೋಪವನದೊಳಗೆ ಪಸರಿಸಿ ಕುಸುಮಿಸಿದ ಕುಸುಮದೆಸಳ ಮಿಸುಗುವ ಪೊಸಪಸೆಯೊಳಸದಳಮೆಸೆಯೆ ಪಸರಿಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳೆ [ಪೊ][1]ಸದಾಗಿಯುಮಸಿಯಳೆನಗಸವಸದೊಳೆ ಬೆಸೆದು ಪೋಗಿ,

ಮಱೆಗೊಳೆ ಪೂತ ಕಲ್ಪಲತೆಯಂ ಲಲಿತಾಂಗಿಯೆ ಗೆತ್ತಲಂಪಿನಿಂ
ದೆಱಗುವುದುಂ ಲತಾಂಗಿ ಮುಳಿಸಿಂ ಲತೆಯಂ ಲಲಿತಾಂಗಿಗೆತ್ತು ನೀ
ನೆಱಗಿದೆಯೆನ್ನ ಪಕ್ಕದೆ ಪೆಱಳ್ಗೆನೆ ಬೆರ್ಚಿ ಲತಾಂಗಿಗಾಗಳಾ
ನೆಱಗಿದೆನಾದುದಾ ಲತೆಯಿನಚ್ಚಗಮಿಂತೆನಗಂ ಲತಾಂಗಿಗಂ ೧೩

ವ|| ಇಂತಿವು ಮೊದಲಾಗೆ ಪೆಱವುಮೆನ್ನಾಕೆಯಱಿಕೆಯವಿನಾಣಂಗಳ್ ಕೆಲವು ಬರೆದುವಿಲ್ಲೆಂದದನಾಕೃಷ್ಟದೃಷ್ಟಿಪ್ರಸರನುಮಚಳಿತಪಕ್ಷ್ಮವಿಸರನುಮಕಂಪಿತಭ್ರೂವಿಭ್ರಮನುಂ ಪ್ರಕಟಿತಚಿತ್ತ ವಿಭ್ರಮನುಂ ಅತಿಪ್ರಬಳಸ್ವೇದಜಳಪ್ರಕ್ಷಾಳಿತನುಂ ಕುಸುಮಶರಶಲಾಕಾಕೀಲತನುಮಾಗಿ,

ತರಳಾಪಾಂಗವಿಳಾಸ
ಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ್ ಮುನ್ನಂ
ಬರೆದತನುಚರಿತಮೀಗಳ್
ಬರೆದಂತಿರ್ದಪುದು ಮನ್ಮನಃಪುಸ್ತಕದೊಳ್ ೧೪

ಎಂದು ನಾನು ಅದಕ್ಕಾಗಿ ಕೋಪಗೊಂಡು ಆ ಹೂಗಳನ್ನು ಅವುಗಳಲ್ಲಿ ಸಿಕ್ಕಿಸಲವಕಾಶ ಕೊಡದೆಯೆ ಕಸ್ತೂರಿಯಿಂದ ಪತ್ರಭಂಗವನ್ನು ನಿನ್ನ ಕೆನ್ನೆಯ ಮೇಲೆ ಬರೆದೆನು! ಅದನ್ನು ಈ ಚಿತ್ರದಲ್ಲಿ ಗುರುತಿಸಲು, ಮರೆತುದು ಅದಾವ ಅಂದ? ವ|| ಮತ್ತೊಮ್ಮೆ ಮಂದಮಾರುತದಿಂದ ಅಲುಗಾಡುತ್ತಿದ್ದ ವಿಮಾನದ ಉಪವನಗಳಲ್ಲಿ ಅರಳಿದ ಹೂಗಳೆಸಳುಗಳು ಹೊಸ ಹಾಸಿಗೆಯಲ್ಲಿ ಅಸದಳವಾಗಿ ಎಸೆದುವು. ಅಲ್ಲಿ ನಡೆದ ನೂತನ ಸಂಭೋಗದ ಆಧಿಕ್ಯದಲ್ಲಿ ಹೊಸದಾಗಿದ್ದರೂ ಆ ಕೃಶಾಂಗಿಯು ಗರ್ವಿಸಿ ತ್ವರೆಯಿಂದ ಹೋಗಿ, ೧೩. ನನಗೆ ಮರೆಯಾದಳು. ಆಗ ಅರಳಿದ ಕಲ್ಪಲತೆಯನ್ನು ಲತಾಂಗಿಯೆಂದು ಭ್ರಾಂತಿಯಿಂದ ನಮಸ್ಕರಿಸಿದೆನು. ಆ ಲತಾಂಗಿಯು ಕೋಪಗೊಂಡು ಲತೆಯನ್ನು ಲಲಿತಾಂಗಿಯೆಂದು ಭ್ರಾಂತಿಸಿ ನೀನು ನನ್ನ ಪಕ್ಕದಲ್ಲಿದ್ದ ಮತ್ತೊಬ್ಬಳ ಕಾಲಿಗೆ ಬಿದ್ದೆಯೆನ್ನಲು, ನಾನು ಬೆಚ್ಚಿಕೊಂಡು ನನ್ನ ಕಾಂತೆಗೆ ಎರಗಿದೆನು. ಹೀಗೆ ನನಗೂ ಕಾಂತೆಗೂ ಆ ಲತೆಯಿಂದ ಭ್ರಮೆಯುಂಟಾಯಿತು! ವ|| ನನ್ನಾಕೆಗೆ ತಿಳಿದಿರುವ ಇವೇ ಮೊದಲಾದ ಕೆಲವು ಅಭಿಜ್ಞಾನಗಳು ಇಲ್ಲಿ ಗುರುತುಗೊಂಡಿಲ್ಲ" ಎಂದನು. ಅವನ್ನೇ ದಿಟ್ಟಿಸಿ ನೋಡುತ್ತ ಎವೆಯಿಕ್ಕದೆಯೆ, ಹುಬ್ಬುಗಳನ್ನು ಹಾರಿಸದೆಯೆ ಚಿತ್ತಭ್ರಾಂತಿಯನ್ನು ಪ್ರಕಟಿಸುತ್ತ ಬೆವರಿನಿಂದ ತೊಯ್ದು ಮನ್ಮಥನ ಬಾಣಗಳಿಂದ ಹೊಯ್ದ ದೇಹವುಳ್ಳವನಾದ ಆ ರಾಜಕುಮಾರನು, ೧೪. "ಚಂಚಲವಾದ ಕಣ್ಣಂಚಿನ ವಿಲಾಸದ ಸ್ಫುರಿತಗಳೇ ಲೇಖನಿ. ಅದರಿಂದ ನಲ್ಲಳು ಈ ಮೊದಲೇ ಬರೆದಿಟ್ಟ ಮನ್ಮಥನ ಚರಿತ್ರೆಗಳು ನನ್ನ ಮನಸ್ಸೆಂಬ

---

೧ ಬ (ಅನ್ಯತ್ರ)

ವ॥ ಎಂದು ತನ್ನೊಳೆ ಬಗೆದು ಸಂಕಲ್ಪಸಮಾಗಮಸುಖಮನನುಭವಿಸಿ,

ಪದಪು ಮನಕ್ಕೆ ಸೊರ್ಕು ನಯನಕ್ಕೆಸೆಯುತ್ತಿರೆ ಚುಂಬನಾಭಿಲಾ
ಷದ [ತನಿಗೆತ್ತು][1] ಬಾಯ್ಗೆ ಬಳಸಲ್ ಪದೆದಪ್ಪುಜಳುರ್ಕೆ ತೋಳ್ಗೆವಂ
ದೊದವಿರೆ ನಾಣಸೊರ್ಕೆರ್ದೆ ವಿಚಿತ್ರವಿಕಾರರಸಾಂತರಂಗದೊಳ್
ಪುದಿದಿರೆ ಮಾಣದಾಡಿಸಿದನಾತನನಂಗಜನೆಂಬ ನಟ್ಟುವಂ ೧೫

ವ॥ ಆಗಳ್ ಕದಂಬಸ್ತಬಕಕರ್ಣಪೂರಾಯಮಾಣರೋಮಾಂಚಕಂಚುಕಿತ ಕಪೋಳಮೂಳಸ್ಥಳ ನಿಶ್ವಾಸಕಲ್ಲೋಳನತಿಸೂಕ್ಷ್ಮ ಪಕ್ಷ್ಮಪಾಳಿಪರಿಚ್ಯುತ ತರಳತರ ನಯನೋದಬಿಂದುಸಂದೋಹಮೋಹ ರಸವಶಗತನಾಗಿ,

ಪ್ರಿಯದಯಿತೆಯೆನಾಂ ನಿನಗೆಂ
ಬೆಯೆಂದು ನೀನೆನ್ನನಿಂತಗಲ್ದಿರ್ಪುದೆ ವಿ
ಸ್ಮಯಮಂ ಮಾಡಿದಪುದು ಹಾ
ಸ್ವಯಂಪ್ರಭೇ ಎಂದು ಮೂರ್ಛೆವೋಪುದುಮಾಗಳ್ ೧೬

ಪರಿಜನಮನಿತುಂ ತುರಿಪದೆ
ಪರಿತಂದಿನ್ನೇವೆವೆಂದು ಕಪ್ಪುರದ ರಜಂ
ಬೊರೆದ ಕರಕಾಂಬುವಂ ತಳಿ
ದರವುರನೆಚ್ಚೆಜಿಸೆ ಮೂರ್ಛೆತಿಳಿದು ಕುಮಾರಂ ೧೭

ಪುಸ್ತಕದಲ್ಲಿ ಈಗ ಬರೆದಂತಿವೆ". ವ॥ ಎಂದು ತನ್ನಲ್ಲಿ ಯೋಚಿಸಿ ಮನಸ್ಸಿನಲ್ಲಿಯೇ ಅವಳ ಸಮಾಗಮ ಸುಖವನ್ನು ಕಲ್ಪಿಸಿಕೊಂಡು ಅನುಭವಿಸಿದನು. ೧೫. ಮನಸ್ಸಿಗೆ ಉತ್ಸಾಹವನ್ನೂ ಕಣ್ಣುಗಳಿಗೆ ಸೊಕ್ಕನ್ನೂ ಬಾಯಿಗೆ ಚುಂಬನಾಭಿಲಾಷೆಯ ನಡುಕವನ್ನೂ ತೋಳುಗಳಿಗೆ ತಬ್ಬಿಕೊಳ್ಳುವಾಸೆಯನ್ನೂ ಎದೆಗೆ ನಾಚಿಕೆಯನ್ನೂ ಪ್ರವೇಶಿಸುವಂತೆ ಮಾಡಿ ವಿಚಿತ್ರವಿಕಾರ ರಸಾಂತರಂಗಗಳಲ್ಲಿ ಅಡಗಿಸಿ ಮನ್ಮಥನೆಂಬ ನಟನು ಅವನನ್ನು ಬಿಡದೆ ಆಡಿಸಿದನು. ವ॥ ಆಗ ಕದಂಬಪುಷ್ಪದ ಗೊಂಚಲನ್ನು ಕರ್ಣಾಭರಣವನ್ನಾಗಿ ಪಡೆದಿದೆಯೋ ಎಂಬಂತಿತ್ತು-ರೋಮಾಂಚಗಳಿಂದ ಆಚ್ಛಾದಿತವಾದ ಅವನ ಕಪೋಲ ಮೂಲಸ್ಥಳ. ಅಲ್ಲಿ ನಿಶ್ವಾಸದ ದೊಡ್ಡ ಅಲೆಗಳನ್ನುಳ್ಳ ಸೂಕ್ಷ್ಮವಾದ ರೆಪ್ಪೆಗೂದಲುಗಳಿಂದ ಜಾರಿದ ಚಂಚಲವಾದ ಕಣ್ಣೀರು ಕಾಣಿಸಿತು. ಅವನು ಮೋಹರಸಕ್ಕೆ ಒಳಗಾಗಿ. ೧೬. "ನನ್ನನ್ನು ಪ್ರಿಯ, ನಾನು ನಿನ್ನ ದಯಿತೆ" ಎಂದು ಕರೆದು, ಹೀಗೆ ನನ್ನನ್ನು ಅಗಲಿರುವುದು ವಿಸ್ಮಯಕರ ಹಾ ಸ್ವಯಂಪ್ರಭೆ!" ಎಂದು ಹೇಳಿಕೊಂಡು ಆತನು ಮೂರ್ಛೆ ಹೋದನು. ೧೭. ಪರಿಜನರೆಲ್ಲರೂ ಬೇಗನೆ ಬಂದು ಗಾಬರಿಯಿಂದ ಏನು ಮಾಡೋಣ ಎಂದು ಯೋಚಿಸುತ್ತ ಕರ್ಪೂರಮಿಶ್ರಿತವಾದ ಹಿಮಜಲವನ್ನು ಚಿಮುಕಿಸಿ ಮೆಲ್ಲಗೆ (?) ಎಚ್ಚರಿಸಲಾಗಿ ರಾಜಕುಮಾರನು ಮೂರ್ಛೆತಿಳಿದೆದ್ದನು. ವ॥ ಈ ಪಟವನ್ನು ಇಲ್ಲಿಗೆ ಯಾರು ತಂದರು?

---

೧ ತನಿಗಿತ್ತು (ಅನ್ಯತ್ರ)

ವ|| ಈ ಪಟಮನಿಲ್ಲಿಗಾರ್ತಂದರೆಂಬನ್ನೆಗಂ ಭವದೀಯಪ್ರಾಣವಲ್ಲಭಂ ಲಲಿತಾಂಗಚರ ವಜ್ರಜಂಘನೆಂಬುದನಾಂ ಮುನ್ನಮೆ ತಿಳಿದಾನುಮಾ ಮಹಾನುಭಾವನಂ ಬೇಗಮೆಯ್ದೆ ಪೋಗಿ,

ತುದಿಯೆಯ್ದಿತ್ತೆನಗೆನ್ನ ಪೂಣ್ಕೆ ನಿನಗಂ ಪುಣ್ಯೋದಯಂ ಸಾರ್ಚೆ ಬಂ
ದುದು ಧಾತ್ರಂಗಮಳಂಕೆಗೊಂಡು ಪಿರಿದುಂ ಚಿಂತಾಂತರಂ ಪೋಯ್ತು ಕೂ
ಡಿದುದಾ ಶ್ರೀಮತಿಗಂ ಮನೋರಥಫಲಂ ಶ್ರೀವಜ್ರದಂತಂಗಮಾ
ದುದು ರಾಗೋತ್ಸವಮೆಲ್ಲಮಿಲ್ಲಿಗೆ ಜಯಂ ಭದ್ರಂ ಶುಭಂ ಮಂಗಳಂ ೧೮

ವ|| ಎಂಬುದುಮಾ ವಿಳಾಸರಸವಾರಾಶಿ ವಿಸ್ಮಯಸ್ಮೇರಮುಖಚಂದ್ರಸಾಂದ್ರಚಂದ್ರಿಕಾಮೃತಾಚ್ಛಜಳಶಿಶಿರಶೀಕರಂಗಳೊಳೆ ಮುನ್ನಮೆನ್ನ ಮನಮಾಱುವಿನಮುನ್ನಮಿತೈಕಭ್ರೂಲತಾವಿಳಾಸನಂತೆಂಬುದೇನೆಂಬುದುಂ ನೀಂ ಲಲಿತಾಂಗಚರನಪ್ಪುದಱಿಂದಂ ಸ್ವಕೀಯಪ್ರಾಣೇಶ್ವರಿ ಸ್ವಯಂಪ್ರಭಾದೇವಿ ನಿಮ್ಮ ಮಾವಂ ವಜ್ರದಂತಚಕ್ರವರ್ತಿಗಂ ನಿಮತ್ತೆ ಲಕ್ಷ್ಮೀಮತಿಮಹಾದೇವಿಗಂ ಶ್ರೀಮತಿಯೆಂಬ ಮಗಳಾಗಿ ಪುಟ್ಟಿದಳ್.

ಅದು ದಿವಿಜೇಂದ್ರಲೋಕಮಿದು ಮನ್ಮಥರೂಪ ಮನುಷ್ಯಲೋಕಮೆಂ
ಬುದುವೆ ವಿಕಲ್ಪಮಲ್ಲಿ ಸುರಕಾಂತೆ ದಲಿಲ್ಲಿ ಮನುಷ್ಯಕಾಂತೆಯೆಂ
ಬುದುವೆ ವಿಕಲ್ಪಮಲ್ಲದೆ ವಿಳಾಸದ ಕೆಯ್ತದ ರೂಪು ಸೋಲ್ತು ನೋ
ಡಿದರ ಮನಕ್ಕಣಂ ಪಡೆಯದಲ್ತೆ ವಿಕಲ್ಪಮನಲ್ಪಮಧ್ಯೆಯಾ ೧೯

ಎಂದು ಕೇಳುವಷ್ಟರಲ್ಲಿ ಅವನು ನಿನ್ನ ಮನದನ್ನನಾದ ಲಲಿತಾಂಗನ ಅಪರಾವತಾರನಾದ ವಜ್ರಜಂಘನೆಂದು ನಾನು ಮೊದಲೇ ತಿಳಿದು ಆ ಮಹಾನುಭಾವನ ಸಮೀಪಕ್ಕೆ ಬೇಗಹೋಗಿ, ೧೮. "ನನ್ನ ಪ್ರತಿಜ್ಞೆಯು ಕೊನೆಗೊಂಡಿತು. ನಿನಗೆ ಪುಣ್ಯೋದಯವೊದಗಿತು. ಬ್ರಹ್ಮನಿಗುಂಟಾಗಿದ್ದ ಚಿಂತೆಯು ಹೋಯಿತು. ಶ್ರೀಮತಿಯ ಇಷ್ಟಾರ್ಥವು ಈಡೇರಿತು. ವಜ್ರದಂತನಿಗೆ ಸಂತೋಷದ ಉತ್ಸವವು ಆಯಿತು. ಇಲ್ಲಿಗೆಲ್ಲವೂ ಜಯ, ಭದ್ರ, ಶುಭ, ಮಂಗಳ!" ಎಂದೆನು. ವ|| ಆ ವಿಲಾಸವೆಂಬ ರಸಸಾಗರದಲ್ಲಿನ ಆಶ್ಚರ್ಯಕರವೂ, ಮಂದಹಾಸಪೂರ್ಣವೂ ಆದ (ವಜ್ರಜಂಘನ) ಮುಖಚಂದ್ರನ ಬೆಳದಿಂಗಳೆಂಬ ಅಮೃತದ ಸ್ವಚ್ಛಜಲಶೀತಲಬಿಂದುಗಳಲ್ಲಿ ನನ್ನ ಮನಸ್ಸು ಶಾಂತಿ ಹೊಂದಿತು. ಅವನು ಒಂದು ಹುಬ್ಬಿನ ಬಳ್ಳಿಯನ್ನು ಮೇಲಕ್ಕೆತ್ತಿ ವಿಲಾಸದಿಂದ ಅದೇನೆಂದು ಕೇಳಿದನು. ಆಗ ನಾನು (ಪಂಡಿತೆ) "ನೀನು ಲಲಿತಾಂಗಚರನಾದುದರಿಂದ ನಿನ್ನ ಪ್ರಾಣೇಶ್ವರಿಯಾದ ಆ ಸ್ವಯಂಪ್ರಭಾದೇವಿಯು ನಿನ್ನ ಮಾವನಾದ ವಜ್ರದಂತಚಕ್ರವರ್ತಿಗೂ ನಿನ್ನತ್ತೆಯಾದ ಲಕ್ಷ್ಮೀಮತಿದೇವಿಗೂ ಶ್ರೀಮತಿಯೆಂಬ ಮಗಳಾಗಿ ಹುಟ್ಟಿದಳು. ೧೯. ಮನ್ಮಥನಂತೆ ರೂಪವುಳ್ಳ ಚಕ್ರವರ್ತಿಯೆ! ಹಿಂದೆ ಅವಳಿದ್ದ ಸ್ಥಳ ಸ್ವರ್ಗಲೋಕ. ಈಗ ಅವಳು ಹುಟ್ಟಿರುವುದು ಮನುಷ್ಯಲೋಕ. ಇದೇ ವ್ಯತ್ಯಾಸ. ಅಲ್ಲಿ ಸುರಕಾಂತೆಯಾಗಿದ್ದಳು, ಇಲ್ಲೀಗ ಮನುಷ್ಯಕಾಂತೆಯಾಗಿದ್ದಾಳೆ. ಇದೇ ಭೇದ. ಕೃಶವಾದ ನಡುವುಳ್ಳ[1] ಅವಳ ರೂಪವು ನೋಡಿದವರ ಮನಸ್ಸಿಗೆ ಬೇರೊಂದು ವಿಕಲ್ಪವನ್ನು ಸ್ವಲ್ಪವಾಗಿಯೂ ಉಂಟುಮಾಡದು.

---

1 'ಅಲ್ಪಮಧ್ಯೆಯ ರೂಪು ನೋಡಿದರೆ ಮನಕ್ಕೆ ವಿಕಲ್ಪಮಂ ಅಣಂ ಪಡೆಯದಲ್ತೆ' ಎಂದು ಅನ್ವಯ.

ಲತೆಯುಂ ಕರ್ಣೆಯ್ದಲುಂ ಸೋಗೆಯುಮತನುಧನುರ್ಲೇಖೆಯುಂ ವಿದ್ರುಮೋದ್ಯ
ದ್ದ್ಯುತಿಯುಂ ಮುಕ್ತಾಕಳಾಪಸ್ಫುರಿತಮುಮೆಸೆದತ್ತಿತ್ತ ಬಂದಿರ್ದುವೆಂದೊಂ
ದು ತಮಂ ಕೈಕೊಳ್ವಿನಂ ಕೋಮಲತನುವಲರ್ಗಣ್ ನೀಳ್ದ ಧಮ್ಮಿಲ್ಲಮುದ್ಯ
ಲತೆ ಸದ್ದಂತಚ್ಛದಂ ದಂತರುಚಿ ರುಚಿರಶೋಭಾಕರಂ ವಜ್ರಜಂಘಾ ೨೦

ಒಳಪೊಯ್ಯಲ್ ನಿನ್ನನಾ ಕನ್ನೆಯ ತುಱುಗೆಮೆಗಳ್ ಸುತ್ತಲುಂ ನಿನ್ನನಾ ಕೋ
ಮಳೆಯಂದಂಬೆತ್ತ ಸುತ್ತುಂಗುರುಳಳವಡಿಸಲ್ ನಿನ್ನನಾ ತನ್ವಿಯೆತ್ತಂ
ಬಳೆದುತ್ತುಂಗಸ್ತನಂ ಮಾಣ್ದಿರದೆ ಬಳಸಲಿಂ ನಿನ್ನನಾ ಕಾಂತೆಯಂತಾ
ನಳಿತೋಳ್ಗಳ್ ಪಕ್ಕುವಾರ್ದಿರ್ದುವು ಪಿರಿದು ತೊಡರ್ಪಾದುದಿನ್ನೆತ್ತ ಪೋಪೈ ೨೧

ವ|| ಮತ್ತಮಾಕೆ ನೀಲೋತ್ಪಳದಳನಯನೆಯುಂ ಕುಂದಕುಟ್ಮಳದಶನೆಯುಂ ಶಿರೀಷದಾಮಕೋಮಳಬಾಹುಯುಗಳೆಯುಂ ಕಮಳದಳಕೋಮಳಕರತಳೆಯುಂ ವಕುಳಮುಕುಳ ಸುರಭಿನಿಶ್ವಾಸೆಯುಂ ಚಂಪಕದಳದಾಮಾವದಾತೆಯುಮಾಗಿ ಕುಸುಮಸುಕುಮಾರ ತನುವಪ್ಪುದಱಿಂ ದತನುಪರಿತಾಪಮಂ ಸೈರಿಸಲಾಱದೆ ನಿನ್ನೊಳಾದ ವೃತ್ತಾಂತಮನೀ ಪಟದೊಳ್ ಬರೆದು ಆಂ ತನಗೆ ಪರಮವಿಶ್ವಾಸಭೂಮಿಯೆನಾಗಿ ಕಿಱಿಯಂದಿಂದಿತ್ತ ನಡಪಿದೋದಿಸಿದ ದಾದಿಯೆನಪ್ಪುದಱಿಂ ಪಂಡಿತೆಯೆಂಬ ಬಱಿಯ ಪೆಸರಲ್ಲದೆ ರಾಜಕುಳಸತತಸಂವಾಸಪ್ರಾಪ್ತಪ್ರಾಗಲ್ಭ್ಯತೆಯುಮುಳ್ಳುದಱಿಂದಮೀ ಪಟಮಂ ಪ್ರಾಣಮನೆ ಕೈಯೆಡೆಗುಡುವಂತೆನ್ನ ಕೈಯೊಳ್ಕೊಟ್ಟು ಮದೀಯ ಪ್ರಾಣ

೨೦. ಬಳ್ಳಿಯೂ, ಕನ್ನೈದಿಲೆಯೂ, ನವಿಲುಗರಿಯೂ, ಕಾಮನಬಿಲ್ಲೂ, ಹವಳದ ಕಾಂತಿಯೂ, ಮುತ್ತಿನಹಾರದ ಹೊಳಪೂ ಇದೆಲ್ಲ ಎಲ್ಲಿಂದಲೋ ಬಂದು ಒಂದೆಡೆಯಲ್ಲಿ ಸೇರಿವೆ ಎಂಬ ಭ್ರಾಂತಿಯನ್ನುಂಟುಮಾಡುವಂತೆ. ವಜ್ರಜಂಘನೇ! ಅವಳ ಕೋಮಲವಾದ ಶರೀರವೂ ಹೂಗಣ್ಣೂ ನೀಳವಾದ ಕೇಶರಾಶಿಯೂ ಉನ್ನತವಾದ ಬಳ್ಳಿಯಂತಿರುವ ಹುಬ್ಬೂ ಸುಂದರವಾದ ತುಟಿಗಳೂ ಹಲ್ಲುಗಳ ಕಾಂತಿಯೂ (ಕ್ರಮವರಿತು) ಸುಂದರವಾಗಿ ಕಾಣಿಸುತ್ತವೆ. ೨೧. ಆ ಕನ್ಯೆಯ ನಿಬಿಡವಾದ ಕೂದಲುಗಳುಳ್ಳ ರೆಪ್ಪೆಗಳು ನಿನ್ನನ್ನು ಒಳಸೆಳೆದುಕೊಳ್ಳಲೂ ಆ ಕೋಮಲೆಯ ಗುಂಗುರುಕೂದಲುಗಳು ಸುತ್ತಿಕೊಂಡು ನಿನ್ನನ್ನು ಬಂಧಿಸಲೂ ಆ ಕೃಶಾಂಗಿಯ ಉನ್ನತ ಸ್ತನಗಳು ನಿನ್ನನ್ನು ವಶಪಡಿಸಿಕೊಳ್ಳಲೂ ಅವಳ ನಳಿತೋಳ್ಗಳು ನಿನ್ನನ್ನು ಬಿಡದೆ ಸುತ್ತುವರಿಯಲೂ ಕಾದಿವೆ. ಈ ಬಂಧನದ ಬಿಗುಪಿನಿಂದ ತಪ್ಪಿಸಿಕೊಂಡು ಎತ್ತ ಹೋಗಲು ನಿನಗೆ ಸಾಧ್ಯ? ವ|| ಆಕೆಯ ಕಣ್ಣುಗಳು ಕನ್ನೈದಿಲೆಯ ದಳಗಳು. ಹಲ್ಲುಗಳು ಮೊಲ್ಲೆಮೊಗ್ಗುಗಳಂತಿವೆ. ಎರಡು ತೋಳುಗಳು ಬಾಗೆಹೂವಿನ ಸರದಂತೆ ಕೋಮಲವಾಗಿವೆ. ಅಂಗೈಯು ಕಮಲದ ದಳದಂತೆ ಮೃದುವಾಗಿದೆ. ಉಸಿರು ಪಗಡೆಯ ಮೊಗ್ಗಿನಂತೆ ಪರಿಮಳವುಳ್ಳುದು. ಅವಳ ಬಣ್ಣವು ಸಂಪಿಗೆಯ ದಳದಂತೆ ಗೌರ, ಶರೀರವು ಹೂವಿನಂತೆ ಸುಕುಮಾರ. ಈ ಕಾರಣದಿಂದ ಕಾಮತಾಪವನ್ನು ಸೈರಿಸಿಕೊಳ್ಳಲಾರದೆ ನಿನ್ನೊಡನೆ ನಡೆದ ಸಂಗತಿಗಳನ್ನು ಈ ಚಿತ್ರಪಟದಲ್ಲಿ ಬರೆದಿದ್ದಾಳೆ. ನಾನು ಅವಳ ಪರಮ ವಿಶ್ವಾಸಕ್ಕೆ ಪಾತ್ರಳು. ಬಾಲ್ಯದಿಂದ ನಡೆಯಿಸಿ ಓದಿಸಿದ ದಾದಿ.

ವಲ್ಲಭನಸೆಲ್ಲಿಪೊಕ್ಕುಮೆಲ್ಲಂದದೊಳಮಱಸೆಂದಟ್ಟಿದೊಡೆ ಬಂದಿದನಿಲ್ಲಿ ಪಸರಿಸಿ ಪಾಳ್ಪಕ್ಕೈವಟ್ಟಿರ್ದೆಂ, ಮದೀಯಕಾಯಕ್ಲೇಶಫಳಮುಂ ಜನ್ಮಫಳಮುಮೆನಗಿಂದು ನಿನ್ನ ಬರವಿನಿಂದಂ ಸಫಳಮಾದುದೆಂಬುದುಂ ತೆಂಕಣೆಲರಲೆಪದಿಂದಂಕುರಿಸಿದ ಚೂತದಂತೆ ಆತಂ ರೋಮಾಂಚಕಂಚುಕಿತಶರೀರನಾಗಿ,

ನಿನಗಾನೇನೆಂಬೆನೆನ್ನಿರ್ದಿರವನಱಿದು ನೀನಿರ್ದೆಯಿನ್ನಾಕೆಗಂ ನೀಂ
ಮನದನ್ನೈ ತೋಱು ನಿನ್ನೀ ಪಟಮನೆನಗದಂ ನೋಡಿ ಮತ್ಕಾಂತೆಯಂ ಕಾ
ಣ್ಬೆನೆಗಂ ಸೈರಿಪ್ಪೆನೆನ್ನೀ ಬರೆದ ಪಟಮುಮಂ ಕೊಂಡು ಪೋಗಾಕೆಗೆಂದಿಂ
ತಿನಿತುಂ ವೃತ್ತಾಂತಮಂ ನಿನ್ನಿನಿಯನಱಿಯೆ ಪೇಟ್ಟಟ್ಟಿದಂ ಲೋಲನೇತ್ರೇ ೨೨

ವ।। ಎಂದು ಮನಃಪ್ರಿಯತಮನ ಬರೆದ ಸಾಭಿಜ್ಞಾನಪಟಮನೀವುದುಮಾಕೆಯುಮದಂ ನಿಮಿರ್ಚಿ ನೋಡಿ,

ಅವಿನಾಣಮನಿತುಮೆರ್ದೆವುಗೆ
ಕಿವಿವುಗೆ ಪಂಡಿತೆಗೆ ನುಡಿದ ನಲ್ಲನ ನುಡಿ ತ
ಳ್ತವಿರಳರೋಮಾಂಚದೆ ಮಾ
ಧವಸಮಯದೊಳಲರ್ದ ಚೂತಲತೆಯನೆ ಪೋಲ್ತಳ್ ೨೩

ವ।। ಅನ್ನೆಗಮತ್ತ ಶ್ರೀಮತಿ ವಜ್ರಜಂಘರ ಜನ್ಮಾಂತರಸ್ನೇಹರಸಾಮೃತಪಾತ್ರಚಿತ್ರಪಟ

ನನ್ನ ಹೆಸರು ಪಂಡಿತೆ. ಅದಕ್ಕೆ ತಕ್ಕಂತೆ ಅರಮನೆಯಲ್ಲಿ ಬಹುಕಾಲ ವಾಸಿಸಿ ಪ್ರಾಗಲ್ಭ್ಯ ಪಡೆದಿದ್ದೇನೆ. ಆದುದರಿಂದ ಈ ಚಿತ್ರಪಟವನ್ನು ತನ್ನ ಪ್ರಾಣಗಳನ್ನೇ ಕೊಡುವಂತೆ ನನ್ನ ಕೈಯಲ್ಲಿತ್ತು, "ಇದರ ಸಹಾಯದಿಂದ ನನ್ನಿನಿಯನನ್ನು ಎಲ್ಲಿ ಅಡಗಿದ್ದರೂ ಹುಡುಕಿ ಕರೆದುಕೊಂಡು ಬಾ" ಎಂದು ಹೇಳಿ ನನ್ನನ್ನು ಕಳಿಸಿದಳು. ನಾನು ಇದನ್ನು ತೆಗೆದುಕೊಂಡು ಬಂದು ಇಲ್ಲಿ ಹರಡಿಕೊಂಡು ಹಾಳುಮನೆಯ ಪಕ್ಕದಲ್ಲಿ ಮಲಗಿರುತ್ತಿದ್ದ ನನ್ನ ಕಾಯಕ್ಲೇಶವು ನೀನು ಬಂದುದರಿಂದ ಸಫಲಗೊಂಡಿತು. ನನ್ನ ಜನ್ಮವು ಸಫಲವಾಯಿತು" ಎಂದು ಹೇಳಿದೆನು. ಅದನ್ನು ಕೇಳಿ ಮಲಯಮಾರುತವು ಬೀಸಲು ಅಂಕುರಿಸುವ ಮಾವಿನಮರದಂತೆ ವಜ್ರಜಂಘನು ರೋಮಾಂಚಗೊಂಡ ಶರೀರವುಳ್ಳವನಾದನು. ೨೨. "ನಿನಗೆ ನಾನು ಏನೆಂದು ಹೇಳಲಿ? ನೀನು ನನ್ನ ಸ್ಥಿತಿಯನ್ನು ಸರಿಯಾಗಿ ತಿಳಿದಿರುವೆ. ನೀನು ಅವಳ ಮನಸ್ಸಿಗೂ ಮೆಚ್ಚುಗೆಯಾದವಳು. ನೀನು ತಂದಿರುವ ಚಿತ್ರಪಟವನ್ನು ತೋರಿಸು. ಅದನ್ನು ನೋಡಿಕೊಂಡು ನನ್ನ ಕಾಂತೆಯನ್ನು ಕಾಣುವವರೆಗೆ ತಡೆದುಕೊಳ್ಳುವೆನು. ನನ್ನ ಈ ಚಿತ್ರಪಟವನ್ನು ಅವಳಿಗೆ ತೆಗೆದುಕೊಂಡುಹೋಗಿ ಕೊಡು, ಎಂದು ಚಂಚಲನೇತ್ರೆ! ನಿನ್ನ ಇನಿಯನು ಇಷ್ಟು ವೃತ್ತಾಂತವನ್ನು ಹೇಳಿ ಕಳುಹಿಸಿದ್ದಾನೆ" ಎಂದಳು. ವ।। ಎಂದು ನುಡಿದು ಪಂಡಿತೆಯು ಶ್ರೀಮತಿಯ ಕಾಂತನು ಬರೆದ ಅಭಿಜ್ಞಾನಚಿತ್ರವನ್ನು ಕೊಟ್ಟಳು. ಆಗ ಶ್ರೀಮತಿಯು ಅದನ್ನು ಹಿಡಿದೆತ್ತಿ (ಬಿಚ್ಚಿ) ನೋಡಿದಳು. ೨೩. ನೆನಪುಗಳು ಅವಳ ಮನಸ್ಸನ್ನು ತುಂಬಿಕೊಂಡವು. ಪಂಡಿತೆಗೆ ನಲ್ಲನು ನುಡಿದ ಮಾತುಗಳೆಲ್ಲವೂ ಇವಳ ಕಿವಿಯನ್ನು ಹೊಕ್ಕುವು. ಅದರಿಂದ ದಟ್ಟವಾದ ರೋಮಾಂಚವನ್ನು ಪಡೆದು, ವಸಂತಕಾಲದಲ್ಲಿ ಅರಳಿದ ಮಾವಿನಮರದಂತೆ ಕಂಡಳು. ವ।। ಅಷ್ಟರಲ್ಲಿ ಇತ್ತ ಶ್ರೀಮತೀ ವಜ್ರಜಂಘರ

ವ್ಯತಿರಕಕರಮಂ ವಜ್ರಜಂಘಾನುಚರರಿಂದಮಱಿದು ವಜ್ರಬಾಹುಮಹೀನಾಥಂ ನಿಜತನೂಜಗುಣಮಣಿಮಾಲೆಗೆ ತತ್ಕನ್ಯಾರತ್ನಮಂ ನಾಯಕಮಣಿಮಾಡಲೆಂದಾತ್ಮೀಯವಿಳಾಸಂ ಬೆರಸು ಬಂದು ಪುಂಡರೀಕಿಣಿಗೆ ಮುಂದಟ್ಟಿದ ದೂತಂಗೆ ಪ್ರೀತನಾಗಿ ಮೆಚ್ಚಿ ಮಚ್ಚಿತ್ತು ವಜ್ರದಂತಚಕ್ರವರ್ತಿಯುಮನಂತಸಾಮಂತಾಂತಃಪುರಪರಿವಾರಪರಿವೃತನುಂ ಬಂಧುರಗಂಧಸಿಂಧುರಾರೂಢನುಮಾಗಿ,

ಕರಿಸೇನಾಸಾರಿ[೧]ನದ್ಧೋತ್ತರಳಕದಳಿಕಾಕಾನನೋಚ್ಚುಂಬ್ಯಮಾನಾಂ
ಬರಚಕ್ರಂ ವಾಜಿರಾಜಿಶ್ರವಣಚಮರಜಶ್ರೇಣಿಸಂವೀಜಿತಾಶಾಂ
ಬರಭಾಗಂ ಪತ್ತಿಶಸ್ತ್ರದ್ಯುತಿಪರಿಕರಸಾಂದ್ರೀಭವಚ್ಚಂಡರೋಚಿಃ
ಕಿರಣೌಘಂ ವಜ್ರಬಾಹುಕ್ಷಿತಿಪತಿಗಿದಿರಂ ಬಂದನುತ್ಸಾಹದಿಂದಂ ೨೪

ವ|| ಅಂತತಿಪ್ರೀತಿಯಿಂ ವಜ್ರಬಾಹುಕ್ಷಿತಿಪತಿಗಿದಿರ್ವೋಗಿ ನಿಜವಿಜಯಗಜದಿನಿೞಿದು ತನಗೆ ಪೊಡೆವಟ್ಟ ವಜ್ರಬಾಹುವನಾಶೀರ್ವಾದಪುರಸ್ಸರವಪ್ಪಿಕೊಂಡಾತ್ಮೀಯ ಶಿಖಂಡಮಣಿಮರೀಚಿಗಳಿಂ ನಿಜಪದಕಮಳದೊಡನೆ ವಸುಂಧರೆಯುಮನಳಂಕರಿಸಿದ ವಸುಂಧರೆಯುಮಂ ನಿಜಾನುಜೆಯಂ ಪರಸಿ ವಿನಯವಿನಮಿತಮಣಿಮಕುಟನಾದ ವಜ್ರಜಂಘನನನೇಕಭೋಗಭಾಗಿಯಾಗೆಂದು ಪರಸಿ ಪಿರಿದು ಮಚ್ಚಿಱಿನೊಳ್ತೆಕ್ಕೈಸಿಕೊಂಡು ನಿಜವಿಜಯಗಜೇಂದ್ರಮನೇಱಿಸಿ ಮುಂದಿಟ್ಟೊಡಗೊಂಡುಬರೆ ಪುರಜನಂಗಳುತ್ತುಂಗಪ್ರಾಸಾದಕೂಟಕೋಟಿಗಳುಮನುದಗ್ರಸೌಧೋಪರಿಮತಳಂಗಳುಮನೇಱಿ ನೋೞ್ಪಿನ್ನೆಗಂ,

ಜನ್ಮಾಂತರಸ್ನೇಹವೆಂಬ ರಸಾಮೃತಕ್ಕೆ ಪಾತ್ರವಾದ ಚಿತ್ರಪಟವೃತ್ತಾಂತವನ್ನು ವಜ್ರಜಂಘನ ಸೇವಕರ ಮೂಲಕ ವಜ್ರಬಾಹು ರಾಜನು ತಿಳಿದನು. ಅವನು ತನ್ನ ಮಗ ಗುಣರತ್ನಮಾಲೆಗೆ ಈ ಕನ್ಯಾರತ್ನವನ್ನು ನಾಯಕಮಣಿಯನ್ನಾಗಿ ಮಾಡಿಕೊಳ್ಳಲು ಬಯಸಿ ಆತ್ಮೀಯವಿಲಾಸದಿಂದ ಪುಂಡರೀಕಿಣಿಗೆ ಹೊರಟನು. ಆತನು ಈ ಮೊದಲೇ ಅಟ್ಟಿದ್ದ ದೂತನಿಗೆ ವಜ್ರದಂತನು ಪ್ರೀತಿಯಿಂದ ಬಹುಮಾನಗಳನ್ನು ಕೊಟ್ಟು ತನ್ನ ಸಾಮಂತನೃಪತಿಗಳಿಂದ ಕೂಡಿ ಅಂದವಾದ ಆನೆಯನ್ನೇರಿದನು. ೨೪. ಆ ವಜ್ರದಂತನು ಅತ್ಯುತ್ಸಾಹದಿಂದ ವಜ್ರಬಾಹುನೃಪತಿಯನ್ನು ಎದುರುಗೊಂಡನು. ಆಗ ಅವನ ಗಜಸೈನ್ಯಪಂಕ್ತಿಗಳಿಂದ ಎತ್ತಿಹಿಡಿಯಲಾದ ಚಲತ್ಪತಾಕೆಗಳೆಂಬ ಕಾಡುಗಳು ಆಕಾಶಮಂಡಲವನ್ನು ಚುಂಬಿಸಿದುವು. ಅವನ ಕುದುರೆಗಳ ಕಿವಿಗಳಿಗೆ ಕಟ್ಟಿದ್ದ ಚಾಮರಗಳ ಸಾಲು ದಿಗ್ವಿಭಾಗಗಳನ್ನು ಬೀಸಿತು. ಅವನ ಕಾಲಾಳುಪಡೆಯ ಶಸ್ತ್ರಗಳ ಕಾಂತಿಗಳಿಂದ ಸೂರ್ಯನ ಕಿರಣಸಮೂಹವು ಮತ್ತಷ್ಟು ದಟ್ಟವಾಯಿತು. ವ|| ಅಧಿಕಪ್ರೀತಿಯಿಂದ ವಜ್ರದಂತನು ವಜ್ರಬಾಹುರಾಜನಿಗೆ ಎದುರಾಗಿ ಹೋಗಿ, ತನ್ನ ವಿಜಯಗಜದಿಂದ ಇಳಿದನು. ತನಗೆ ನಮಸ್ಕರಿಸಿದ ವಜ್ರಬಾಹುರಾಜನನ್ನು ಆಶೀರ್ವದಿಸಿ ಅಪ್ಪಿಕೊಂಡನು. ಮುಡಿಯ ಮಣಿಗಳ ಕಿರಣಗಳಿಂದ ತನ್ನ ಪಾದಕಮಲಗಳನ್ನೂ ಭೂಮಿಯನ್ನೂ ಅಲಂಕರಿಸಿದ ತಂಗಿ ವಸುಂಧರೆಯನ್ನು ಹರಸಿದನು. ಮಣಿಮುಕುಟಧಾರಿಯಾಗಿ

---

೧ 'ಕರಿಸೇನಾಸಾರ' ಎಂದು ಶುದ್ಧಪಾಠವಿರಬಹುದು.

ಪುದಿದೀ ಶ್ವೇತಾತಪತ್ರೋತ್ಕರದ ನಡುವಣಂ ವಜ್ರದಂತಂ ಸಮಂತೆ
ತ್ತಿದ ಪಿಂಛಚ್ಛತ್ರಷಂಡಂಗಳ ನಡುವೆಸೆವಂ ವಜ್ರಬಾಹುಕ್ಷಿತೀಶಂ
ಮದಗಂಧಭ್ರಾಂತಭೃಂಗಾವಳಿವಳಯಿತಮತ್ತದ್ವಿಪಂ ಕೂಡೆ ಮಿಂಚಂ
ಪುದಿದತ್ತೆಂಬಂತೆ ಕೂರಂಕುಸದ ಪೊಳಪನಾ ತೋಱುವಂ ವಜ್ರಜಂಘಂ ೨೫

ವ॥ ಎಂದು ತಮ್ಮೊಳೋರೊರ್ವರೊಳ್ ನುಡಿಯುತ್ತುಂ ಪೌರಜನಂಗಳ್ ಸೂಸುವ ಲಾಜವರ್ಷಮುಮಂ ಕುಸುಮವರ್ಷಮುಮಂ ಆಂತುಕೊಳುತ್ತುಂ ಮುತ್ತಿನ ಮುಱಿದ ಲಂಬಣಂಗಳ್ಕೆರಸೆಟಲ್ವ ಪಚ್ಚೆಯ ಸರದ ತೋರಣಂಗಳಂ ನುಗುಳುತ್ತುಂ ಬಂದು ರಾಜಮಂದಿರಮಂ ಪೊಕ್ಕು, ಕರುಮಾಡದ ಕೆಲದ ಮಾಡದೊಳ್ ವಜ್ರಬಾಹುನೃಪನನಿರಿಸಿ ಮಜ್ಜನಭೋಜನ ತಾಂಬೂಲಾಂಬರಾನುಲೇಪನ ಭೂಷಣಾದಿ ವಿವಿಧ ವಿಶೇಷಸತ್ಕಾರಂಗಳಿಂ ಸಂತಸಂಬಡಿಸಿ ನಾನಾ ವಿನೋದಂಗಳಂ ತೋಱೆ ವಜ್ರದಂತ ಚಕ್ರವರ್ತಿ ನಿನಗಾವುದು ಮನೋರಥಮದಂ ಬೇಡಿಕೊಳ್ಳೆನೆ,

ಎನಗರಿದುಂಟೆ ನಿಮ್ಮ ದಯೆಯಿಂದುಟೆದಾವುದುಮೆಲ್ಲಮುಂಟು ನೀ
ನೆನಗೆ ನರೇಂದ್ರಮೌಳಿಮಣಿರಾಜಿವಿರಾಜಿತಪಾದಪೀಠ ನೆ
ಟ್ಟನೆ ದಯೆಗೆಯ್ವುದೀ ನಿಜತನೂಜೆಯನುತ್ಸವ ಮಂಗಳಾನಕ
ಧ್ವನಿ ದೆಸೆಯಂ ಪಳಂಚಲೆವಿನಂ ನೆರಪೀಗಳೆ ವಜ್ರಜಂಘನೊಳ್ ೨೬

ನಮಸ್ಕರಿಸಿದ ವಜ್ರಜಂಘನನ್ನು ಅನೇಕ ಭೋಗಗಳಿಗೆ ಭಾಗಿಯಾಗೆಂದು ಹರಸಿ ಅಪ್ಪಿಕೊಂಡು, ತನ್ನ ವಿಜಯಗಜೇಂದ್ರನ ಮೇಲೆ ಕುಳ್ಳಿರಿಸಿಕೊಂಡು ಪುರಾಭಿಮುಖವಾಗಿ ಮುನ್ನಡೆದು ಬಂದನು. ಪುರಜನರು ಅವರನ್ನು ಉತ್ಸಾಹಪೂರ್ಣನೇತ್ರರಾಗಿ ತಮ್ಮ ತಮ್ಮ ಮನೆಗಳ ಮಹಡಿಗಳ ಮೇಲೆ ನಿಂತು ನೋಡುತ್ತಿದ್ದರು. ೨೫. "ಬೆಳ್ಗೊಡೆಗಳ ಗುಂಪಿನ ನಡುವೆಯಿರುವವನು ವಜ್ರದಂತ, ನವಿಲುಗರಿಗಳ ಛತ್ರಗಳ ಮಧ್ಯೆ ಶೋಭಿಸುವವನು ವಜ್ರಬಾಹು, ಮದೋದಕದ ಪರಿಮಳದಿಂದ ಆಕೃಷ್ಟವಾದ ದುಂಬಿವಿಂಡಿನಿಂದ ಸುತ್ತುವರೆಯಲ್ಪಟ್ಟ ಮದ್ದಾನೆಯು ಮಿಂಚಿನೊಳಗಡಗಿತೋ ಎಂಬಂತೆ ಹರಿತವಾದ ಅಂಕುಶದ ಹೊಳಪನ್ನು ತೋರುವವನು ವಜ್ರಜಂಘ". ವ॥ ಎಂದು ಆ ಪುರಜನರು ತಮ್ಮಲ್ಲಿ ಒಬ್ಬೊಬ್ಬರೂ ಹೇಳಿಕೊಳ್ಳುತ್ತ ಎರಚುವ ಅರಳುಮಳೆಯನ್ನೂ ಹೂಮಳೆಯನ್ನೂ ಆತುಕೊಳ್ಳುತ್ತ, ಕಡಿದುಬಿದ್ದು ನೇತಾಡುತ್ತಿರುವ ಮುತ್ತಿನ ಹಾರಗಳ ನಡುವೆಯೂ ನೇತಾಡುತ್ತಿರುವ ಪಚ್ಚೆಸರದ ತೋರಣಗಳ ಮಧ್ಯದಲ್ಲಿಯೂ ನುಸುಳಿಕೊಂಡು ಬಂದು ರಾಜಭವನವನ್ನು ಪ್ರವೇಶಿಸಿದರು. ವಜ್ರದಂತನು ಉಪ್ಪರಿಗೆಮನೆಯ ಸಮೀಪದ ಮಾಡದಲ್ಲಿ ವಜ್ರಬಾಹುವನ್ನಿರಿಸಿದನು. ಸ್ನಾನ, ಊಟ, ತಾಂಬೂಲ, ಹೊಸಬಟ್ಟೆ, ಸುಗಂಧವಸ್ತು, ಆಭರಣಗಳೇ ಮೊದಲಾದ ಬಗೆ ಬಗೆಯ ಸತ್ಕಾರಗಳ ಮೂಲಕ ಸಂತೋಷಪಡಿಸುತ್ತಾ, ವಿವಿಧ ವಿನೋದಗಳನ್ನು ತೋರುತ್ತಾ ವಜ್ರದಂತನು "ನಿನ್ನ ಮನೋರಥವೇನು ಎಂಬುದನ್ನು ಬೇಡಿಕೋ" ಎಂದನು. ೨೬. ಅದಕ್ಕೆ ವಜ್ರಬಾಹು "ನಿನ್ನ ದಯೆಯಿಂದ ನನಗೆ ಅಸಾಧ್ಯವಾದುದೇನೂ ಇಲ್ಲ, ನಿನ್ನ ದಯೆಯೊಂದನ್ನು ಉಳಿದು, ಎಲ್ಲವೂ ನನಗೆ ಲಭ್ಯವಾಗಿದೆ. ನೀನು ರಾಜೇಂದ್ರರ ಕಿರೀಟಗಳ ಮಣಿಮಾಲೆಗಳಿಂದ ವಿರಾಜಿತವಾದ

ವ|| ಎಂಬುದುಂ ಚಕ್ರಧರನಧರಕಿಸಲಯದ ಮೇಲೆ ದಂತಕಾಂತಿ[೧] ಲತಾಂತಪ್ರಭೆಗಳ್ ಪಸರಿಸೆ,

ಒಡೆಯಂ ಕೂಸಿಂಗದೊಂದೇ ಕುಲದ ಚಲದ ಪೆಂಪೊಂದೆ ಚೆಲ್ವೊಂದೆ ಸಂದೊ
ಳ್ನುಡಿಯೊಂದೇ ವಿದ್ಯೆಯೊಂದೇ ಪುದಿದೊದವಿದ ಜನ್ಮಾಂತರಸ್ನೇಹಮೊಂದೇ
ನುಡಿಯಲ್ಕಿಕ್ಕಲ್ಕದೊಂದಲ್ತೆನಲೆಡೆ ಪೆಱರ್ಗಿನ್ನಿಲ್ಲ ಮುನ್ನಾ ವಿಧಾತ್ರಂ
ಕುಡಲಿರ್ದಂ ಕನ್ನೆಯಂ ಪೇೞ್ ನಿನಗಮೆನಗಮೇಂ ದಂದುಗಂ ವಜ್ರಬಾಹೂ ೨೭

ವ|| ಅಂತುಮಲ್ಲದೆಯುಂ

ಬಾಲಸಹಕಾರತರು ನವ
ಮಾಲಿಕೆಗತಿಲಲಿತಪೂಗಭೂಜಾತಂ ತಾಂ
ಬೂಲಲತೆಗೆಂಬವೊಲ್ ಸಮ
ಲೀಲಂ ನಿಜತನಯನೆನ್ನ ತನುಜೆಗೆ ತಕ್ಕಂ ೨೮

ಸ್ತ್ರೀರತ್ನಮೀಗಳೀಕೆಯೆ
ಧಾರಿಣಿಯೊಳ್ ಪುರುಷರತ್ನಮೀತನೆ ಸದೃಶಾ
ಕಾರರನಿವರಂ ಕೂಡಿ ಪ
ಯೋರುಹಜಂಗಕ್ಕೆ ಸಮಸಮಾಯೋಗಯಶಂ ೨೯

ಪಾದಪೀಠವುಳ್ಳವನು. ನೀನು ನನ್ನ ಮೇಲೆ ದಯೆಗೊಂಡು ಉತ್ಸವಪ್ರಯುಕ್ತವಾದ ಮಂಗಳಾನಕ ಧ್ವನಿಗಳು ಮೊಳಗುತ್ತಿರಲು, ನಿನ್ನ ಮಗಳಾದ ಶ್ರೀಮತಿಯನ್ನು ವಜ್ರಜಂಘನೊಡನೆ (ವಿವಾಹಸಂಬಂಧದಿಂದ) ಕೂಡಿಸು" ಎಂದನು. ವ|| ಅದನ್ನು ಕೇಳಿ ಚಕ್ರವರ್ತಿಯ ಚಿಗುರಿನಂತಿರುವ ತುಟಿಯ ಮೇಲೆ ಹಲ್ಲುಗಳ ಕಾಂತಿಗಳೆಂಬ ಲತಾಂತ[1] ಪ್ರಭೆಗಳು ಹರಡಿದುವು. (ತುಟಿಯ ಮೇಲೆ ಮುಗುಳ್ನಗೆಯುಂಟಾಯಿತು). ಅವನು, ೨೭. "ಈ ಕನ್ಯೆಗೆ ಇವನೇ ಒಡೆಯ. ಅದೊಂದೇ ಅಲ್ಲ, ಕುಲಛಲಗಳ ಹಿರಿಮೆ ಇಬ್ಬರಿಗೂ ಒಂದೇ. ಚೆಲ್ವು, ಒಳ್ನುಡಿ, ವಿದ್ಯೆ, ಜನ್ಮಾಂತರ ಸ್ನೇಹ ಇವೆಲ್ಲವೂ ಇಬ್ಬರಿಗೂ ಒಂದೇ. ಈ ವಿಷಯದಲ್ಲಿ ಹೀಗೆ ಹಾಗೆಂದು ಹೇಳಲೂ, ದೋಷವನ್ನು ಹುಡುಕಲೂ ಹೀಗಲ್ಲವೆನ್ನಲೂ ಮತ್ತಾರಿಗೂ ಎಡೆಯಿಲ್ಲ. ಮೊದಲೇ ಬ್ರಹ್ಮನು ಈ ಕನ್ಯೆಯನ್ನು ಕೊಟ್ಟಿದ್ದಾನೆ. ನನಗೂ ನಿನಗೂ ಇದರ ಗೊಡವೆಯೇಕೆ? ವ|| ಅದೂ ಅಲ್ಲದೆ, ೨೮. ಎಳೆಯ ಮಾವಿನ ಗಿಡವು ನವಮಾಲಿಕೆಗೂ ಲಲಿತವಾದ ಅಡಕೆಮರವು ವೀಳೆಯದ ಹಂಬಿಗೂ ಯೋಗ್ಯವಾದಂತೆ ನಿನ್ನ ಮಗನು ನನ್ನ ಮಗಳಿಗೆ ತಕ್ಕವನು. ೨೯. ಈ ಭೂಮಿಯಲ್ಲಿ ಇವಳೇ ಸ್ತ್ರೀರತ್ನ. ಇವನು ಪುರುಷರತ್ನ. ಇವರಿಬ್ಬರನ್ನೂ ಕೂಡಿಸಿ ಬ್ರಹ್ಮನು ಸಮಾನವಾದ

---

೧ 'ದಂತಕಾಂತ' ಎಂದು ಶುದ್ಧಪಾಠವಿರಬಹುದು. ದಂತಗಳೆಂಬ ಸುಂದರವಾದ ಹೂಗಳ ಪ್ರಭೆ ಎಂದರ್ಥ. ಕಾಂತ-ಸುಂದರ.

1 ಲತಾಂತ-ಹೂ.

ವ॥ ಎಂಬುದುಂ ವಜ್ರಬಾಹುಮಹೀಪತಿ ವಜ್ರದಂತಚಕ್ರವರ್ತಿಸೂಕ್ತಾಮೃತಸಿಕ್ತಮಪ್ಪ ನಿಜಮನೋರಥಾಮರದ್ರುಮದಿನೊಗೆದಂಕುರಿಸಿದಂಕುರನಿಕರಮನನುಕರಿಸುವ ರೋಮಾಂಚನಿಚಯದಿಂ ನಿಚಿತಾಂಗನಾಗಿ,

ಪ್ರಣಯಮಿದನನ್ಯಸಾಧಾ
ರಣಮೆನಿಪ ಭವತ್ಪ್ರಸಾದಮೆಂಬಮೃತದಿನಾಂ
ತಣಿದೆಂ ಭೂಭುವನದೊಳಾ
ರೆಣೆಯೆನಗೆಂಬೊಂದು ಸಂತಸಕ್ಕೆಡೆಯಾದೆಂ ೩೦

ವ॥ ಎಂದು ನಿಜೋತ್ತರೀಯಾಂಶುಕಮನೆ ಮಹೋತ್ಸವಧ್ವಜಮಂ ಮಾಡಿ ವಸುಂಧರಾ ಸೌಂದರಿಯುಂ ತಾನುಂ ಪ್ರಿಯತನಯನ ವಿವಾಹೋತ್ಸವಲಗ್ನಚಿತ್ತರಾಗಿ ಲಗ್ನಮನೆ ಪಾರುತ್ತಮಿರ್ದರ್ ಆಗಳ್ ವಜ್ರದಂತಚಕ್ರವರ್ತಿಯಾತ್ಮೀಯಪುತ್ರೀವಿವಾಹೋತ್ಸವಕ್ಕೆ ಮೌಹೂರ್ತಿಕರಂ ಕರೆದು ದಿವಸಮಂ ಬೆಸಗೊಳ್ವುದುಂ ಅವರ್-ಇಂದಿನ ವಾಸರಮೆ ಶೋಭನವಿಧೇಯವಾಸರಂ ಇಂದಿನ ದಿವಸಮೆ ಶುಭದಿವಸಾಗ್ರೇಸರಂ ಇಂದಿನ ನಕ್ಷತ್ರಮೆ ಸಕಳಕ್ಷೇಮಕ್ಷೇತ್ರಂ ಇಂದಿನ ಯೋಗಮೆ ಸಮಸ್ತಾಭಿವಾಂಛಿತಫಳಸಮಾಯೋಗಂ ಇಂದಿನ ಕರಣಮೆ ಕಲ್ಯಾಣಕರಣೀಯಾದಿಕರಣಂ ಎಂದು ಬಿನ್ನಪಂಗೆಯ್ವುದುಂ ಜಗಜ್ಜನಜಂಗಮ ಕಲ್ಪವೃಕ್ಷಂ ಕಲ್ಪವೃಕ್ಷಮೆಂಬ ಮಹಾಮಹಿಮೆಯುಂ

ಜೋಡಿಯನ್ನು ಸೇರಿಸಿದನೆಂಬ ಯಶಸ್ಸಿಗೆ ಪಾತ್ರನಾಗಲಿ" ಎಂದನು. ವ॥ ಹೀಗೆನ್ನಲು ವಜ್ರಬಾಹುರಾಜನು ವಜ್ರದಂತನ ಸೂಕ್ತಿಯೆಂಬ ಅಮೃತದಿಂದ ಸಿಕ್ತವಾದ, ನಿಜಮನೋರಥವೆಂಬ ಕಲ್ಪವೃಕ್ಷದಿಂದ ಹುಟ್ಟಿದ ಅಂಕುರನಿಕರವನ್ನು ಹೋಲುವ ರೋಮಾಂಚದಿಂದ ವ್ಯಾಪ್ತನಾದನು. ೩೦. "ಈ ಪ್ರಣಯವು ಅನ್ಯಸಾಧಾರಣವಾದದ್ದಲ್ಲ, ನಿನ್ನ ಪ್ರಸಾದವೆಂಬ ಅಮೃತದಿಂದ ನಾನು ತೃಪ್ತನಾದೆನು. ಈ ಪ್ರಪಂಚದಲ್ಲಿ ನನಗೆ ಯಾರು ಎಣೆ? ಎಂಬಷ್ಟು ಸಂತೋಷಕ್ಕೆ ಪಾತ್ರನಾದೆನು." ವ॥ ಎಂದು ಹೇಳಿ ವಜ್ರಬಾಹುವು ತನ್ನ ಉತ್ತರೀಯವನ್ನೇ ಮಹೋತ್ಸವದ ಧ್ವಜವನ್ನಾಗಿ ಮಾಡಿದನು. ಭೂಮಿಯಲ್ಲಿಯೇ ಬಹು ಸುಂದರಿಯೆನಿಸಿದ ವಸುಂಧರೆ ತಾನೂ (ವಜ್ರಬಾಹುವೂ) ತಮ್ಮ ಪ್ರೀತಿಪಾತ್ರನಾದ ಮಗನ ವಿವಾಹೋತ್ಸವಕಾರ್ಯದಲ್ಲಿ ಕೊಟ್ಟ ಮನಸ್ಸುಳ್ಳವರಾಗಿ ವಿವಾಹ ಮುಹೂರ್ತದ ಕಾಲವನ್ನೇ ಪ್ರತೀಕ್ಷಿಸುತ್ತಿದ್ದರು. ಆಗ ವಜ್ರದಂತಚಕ್ರವರ್ತಿಯು ತನ್ನ ಮಗಳ ವಿವಾಹಮಹೋತ್ಸವಕ್ಕೆ ಜೋಯಿಸರನ್ನು ಕರೆಯಿಸಿಕೊಂಡು ಶುಭದಿವಸವನ್ನು ಗೊತ್ತುಪಡಿಸುವಂತೆ ಕೇಳಿಕೊಂಡನು. ಆಗ ಅವರು ಅಂದಿನ ವಾಸರವನ್ನೇ ಶುಭವಾಸರವನ್ನಾಗಿಯೂ ಆ ದಿನವನ್ನೇ[1] ಶುಭಶ್ರೇಷ್ಠದಿನವನ್ನಾಗಿಯೂ, ಅಂದಿನ ನಕ್ಷತ್ರವನ್ನೇ ಸಕಲ ಕ್ಷೇಮಸ್ಥಾನವನ್ನಾಗಿಯೂ ಅಂದಿನ ಯೋಗವನ್ನೇ ಸಕಲೇಷ್ಟ ಫಲಗಳನ್ನು ಒದಗಿಸತಕ್ಕುದನ್ನಾಗಿಯೂ, ಅಂದಿನ ಕರಣವನ್ನೇ ಮಂಗಳಕಾರಕ ಕರಣವನ್ನಾಗಿಯೂ ವಿಜ್ಞಾಪಿಸಿಕೊಂಡರು. ಒಡನೆಯೆ ಜಗತ್ತಿನ ಜನಕ್ಕೆ ಚಲಿಸುವ ಕಲ್ಪವೃಕ್ಷನಾದ ವಜ್ರದಂತನು

1 ದಿನ = ಹಗಲು

ಮಹಾಪ್ರ[illegible]ಜಿನಾಲಯದೊಳ್ ಮುನ್ನಂ ಮಾಡಿ ಬೞಿಯಂ ನಿಜರಾಜಧಾನಿಯೊಳೊಸಗೆಯಂ ಮಾಡಿ ವಿವಾಹಮಂಟಪಮಂ ಸ್ಥಪತಿರತ್ನಕ್ಕೆ ವಿರಚಿಸೆಂದು ಬೆಸಸಿದಾಗಳ್

॥ಮಂದಾನಿಲರಗಳೆ॥

ಸ್ಫುರಿತೇಂದ್ರ ನೀಲಮಣಿಖಚಿತಭೂಮಿ
ಚೆಲ್ವಿಂಗಬು ಸೆಟ್ಟನೆ ಜನ್ಮಭೂಮಿ
ಮರಕತಮಣಿವಿರಚಿತವಿಮಳಭಿತ್ತಿ
ಪೊಗೞಲ್ಕರಮರಿದದು ಬೇಱೆ ಭಿತ್ತಿ ೧

ಪಳಿಕಿನ ಕಂಭಂಗಳ ಪೊಳೆವ ಪೊಳೆಪು
ನವವಿದ್ಯುದ್ದಾಮದ ಪೊಳೆವ ಪೊಳೆಪು
ಲಲಿತೋನ್ನತಮಣಿಮಯಕೂಟದಂದ
ಮದು ಪಲವುಂ ದೇಸೆಯ ಮಾಟದಂದ ೨

ಪೞಲಿಕ್ಕಿದ ಮುಕ್ತಾದಾಮಶೋಭೆ
ಲಕ್ಷ್ಮೀಲಲನಾದರಹಾಸಶೋಭೆ
ಚಂದನದೆಳದಳಿರ್ದೋರಣಂಗಳವು
ಸೂಚಿತ ಮಂಗಳಕಾರಣಂಗಳವು ೩

ತುಂಗಕನಕಭೃಂಗಾರವಿರಾಜಿ
ರಾಜನ್ಮರಕತಮಯಶುಕವಿರಾಜಿ
ಪುಣ್ಯಾಂಬುಪೂರ್ಣಕುಂಭಾಗ್ರಮುಚಿತ
ಕಂಕೇಲಿಪಲ್ಲವೋಲ್ಲಾಸರಚಿತ ೪

ಕಲ್ಪವೃಕ್ಷವೆಂಬ 'ಮಹಾಮಹಿಮೆ'ಯನ್ನು ಪರಮಪವಿತ್ರವೆನಿಸಿದ ಜಿನಾಲಯದಲ್ಲಿ ಜರುಗಿಸಿದನು. ಬಳಿಕ ತನ್ನ ರಾಜಧಾನಿಯಲ್ಲಿ ಒಸಗೆಯನ್ನು ನಿರ್ವರ್ತಿಸಿ ಶ್ರೇಷ್ಠನಾದ ಶಿಲ್ಪಿಗೆ ವಿವಾಹಮಂಟಪವನ್ನು ನಿರ್ಮಿಸುವಂತೆ ಆಜ್ಞೆಕೊಟ್ಟನು. ರಗಳೆ॥ (೧) ಪ್ರಕಾಶಮಾನವಾದ ಇಂದ್ರನೀಲಮಣಿಗಳನ್ನು ಕೆತ್ತಿದ ಭೂಮಿಯು ಸಿದ್ಧವಾಯಿತು. ಅದು ಸೌಂದರ್ಯಕ್ಕೆ ನೇರವಾದ ಹುಟ್ಟು ನೆಲ. ಇದರ ಗೋಡೆಗಳು ಮರಕತಮಣಿಗಳಿಂದ ನಿರ್ಮಿತವಾಗಿದ್ದು ಹೊಗಳಲು ವಿಶೇಷವಾಗಿ ಶಕ್ಯವಿಲ್ಲವಾಗಿವೆ. (೨) ಸ್ಫಟಿಕನಿರ್ಮಿತವಾದ ಕಂಬಗಳ ಹೊಳಪು ವಿದ್ಯುದ್ದಾಮಗಳ ಹೊಳಪನ್ನು ಹೋಲಿವೆ. ಮಣಿಮಯವಾದ ಲಲಿತೋನ್ನತ ಶಿಖರದ ಅಂದವು ಹಲವು ದೇಸೆಯ ಮಾಟದಂದವನ್ನು ತಳೆದಿದೆ. (೩) ಜೋತುಬಿದ್ದ ಮುತ್ತಿನಹಾರದ ಶೋಭೆಯು ಲಕ್ಷ್ಮಿಯೆಂಬ ಸ್ತ್ರೀಯ ಮೃದುಹಾಸದ ಶೋಭೆಯಾಗಿದೆ. ಚಂದನದ ಎಳೆಯ ಚಿಗುರುಗಳ ತೋರಣಗಳು ಮಂಗಳಕಾರಣ ಸೂಚಕಗಳು. (೪) ಸುವರ್ಣದ ಉನ್ನತ ಕಲಶಗಳಿಂದಲೂ ಮರಕತಮಯ ಶುಕಗಳಿಂದಲೂ ವಿರಾಜಿಸುತ್ತಿದೆ. ಪವಿತ್ರ ಜಲಗಳಿಂದ ತುಂಬಿದ ಪೂರ್ಣಕುಂಭಗಳು ಅಶೋಕದ ಚಿಗುರುಗಳಿಂದಲೂ

ಮುಜ್ಜ್ವಲಮಣಿದರ್ಪಣದೀಪ್ತಿರಮ್ಯ
ಮಾವೇಷ್ಟಿತಸೂತ್ರತ್ರಿತಯಸೌಮ್ಯ
ಮಾಲಂಬಿತಮಣಿಘಂಟಾನಿನಾದ
ಮದು ಕನಕಕಿಂಕಿಣೀಮೃದುನಿನಾದ ೫

ಮುನ್ಮೀಲಿತ ನವಕುಸುಮೋಪಹಾರ
ಮುದ್ದೀಧಿತಿ ತಾರಾನಿಕರತಾರ
ಮೆನೆ ಪೊಸಹೂಣ್ಯದ ಪಸರಮೆನಿಸಲಿದು
ಮದನನ ಮಂಗಳಭವನಮೆನಿಸಲಿದು ೬

ರತಿಯ ವಿವಾಹಗಾರಮೆನಿಸಲಿದು
ಸಕಳವಿಳಾಸನಿವಾಸಮೆನಿಸಲಿದು
ಮದನನ ಸಾರಸರ್ವಸ್ವಮೆನಿಸಲಿದು
ಸುರತೋತ್ಪತ್ತಿಸ್ಥಾನಮೆನಿಸಲಿದು ೭

ವಿಭವದ ಮೂಲಸ್ಥಾನಮೆನಿಸಲಿದು
ಕಾಮದೇವನಾಸ್ಥಾನಮೆನಿಸಲಿದು
ಓರಂತೆ ನೆರೆದುದೆನೆ ಜನಸಮೂಹ
ಮಾಗಳೆ ಸಮೆದತ್ತು ವಿವಾಹಗೇಹಂ ೮

ಜಾಗದ ನೆಲೆವಡಲಗೆಗಳ
ಜಾಗಂಗಳ್ ಪಸುರ್ಗಳೆಸೆಯೆ ರತ್ನದ ಕೇರ್ಗಳ್
ಜಾಗಂಬೊಯ್ದಂತಿರೆ ಪರ
ಭಾಗಂಬಡೆದುವು ವಿವಾಹಗೇಹಾಂತರದೊಳ್ ೩೧

(೫) ಮಣಿದರ್ಪಣಗಳ ಕಾಂತಿಗಳಿಂದಲೂ, ಮೂರು ಸುತ್ತು ಸುತ್ತಿದ ದಾರಗಳಿಂದಲೂ ರಮ್ಯವಾಗಿವೆ. ಜೋತುಬಿದ್ದಿರುವಂತೆ ಕಟ್ಟಿದ ಮಣಿಗಂಟೆಗಳ ಶಬ್ದವು ಸುವರ್ಣ ನಿರ್ಮಿತವಾದ ಕಿರುಗೆಜ್ಜೆಗಳ ನಿನಾದಯುಕ್ತವಾಗಿದೆ. (೬) ಹೊಸ ಹೂಗಳ ಬಲಿಗಳಿಂದ ಮಂಡಿತವಾದೀ ಪ್ರದೇಶವು ಕಾಂತಿಗಳನ್ನು ಮೇಲಕ್ಕೆರಚುತ್ತಿರುವ ತಾರಗೆಗಳ ಗುಂಪಿನಂತೆ ಮೆರೆಯುತ್ತಿದೆ. ಹೊಸಪುಣ್ಯದ ಪ್ರಸರವೆನಿಸಿದೆ, ಕಾಮನ ಮಂಗಳಭವನವೆನಿಸಿದೆ. (೭) ರತಿಯ ವಿವಾಹದ ಮನೆಯೆನಿಸಲಿಕ್ಕೂ ಮದನನ ಸಾರಸರ್ವಸ್ವವೆನಿಸಲಿಕ್ಕೂ ಸುರತೋತ್ಪತ್ತಿಸ್ಥಾನವೆನಿಸಲಿಕ್ಕೂ (೮) ಐಶ್ವರ್ಯದ ಮೂಲಸ್ಥಾನವೆನಿಸಲಿಕ್ಕೂ ಕಾಮದೇವನ ಆಸ್ಥಾನವೆನಿಸಲಿಕ್ಕೂ ಯೋಗ್ಯವಾಗುವಂತೆ ಇರಲು, ಜನಸಮೂಹವು ನೆರೆಯಿತು. ಹೀಗೆ ವಿವಾಹಮಂಟಪವು ಸಿದ್ಧವಾಯಿತು. ೩೧. ವಿವಾಹಭವನದಲ್ಲಿ ಮರಕತಮಣಿಗಳಿಂದ ನಿರ್ಮಿತವೂ ಎತ್ತರವೂ ಆದ ಕುಂಡಗಳಲ್ಲಿ ತುಂಬಿದ ಮರಕತ ಮಣಿಗಳ ಹಸುರುಕಾಂತಿಗಳು ರತ್ನದ ಗೋಡೆಗಳ ಮೇಲೆ ಪ್ರಕಾಶಿಸುತ್ತಿರಲು ಆ ರತ್ನದ ಗೋಡೆಗಳು ಹಸಿರುಪೈರನ್ನು

ನುಡಿವ ನಡೆ ನೋಡುವಾಡುವ
ಪೊಡೆವಡುವಮರ್ದಪ್ಪಿಕೊಳ್ವ ತಮ್ಮಿನಿಯರ ಕಾ
ಲ್ವಿಡಿವಂದದ ಚಿತ್ರದ ಪೆ
ಣ್ಬಡೆಯಿಂ ಸ್ತ್ರೀರಾಜ್ಯದಂದಮದಱೆಡೆಯೆಡೆಯೊಳ್ ೩೨

ಬಿಡುಮುತ್ತಿನ ಬಳಸಿದ ಕಡೆ
ನಡುವಣ ಚೆಂಬೊನ್ನ ಪಟ್ಟವಣೆ ರನ್ನದ ಕ
ನ್ನಡಿವೆರಸು ಸರ್ವಧಾನ್ಯದ
ನಡುವಿರೆ ಮೊಸರಣ್ಕೆವೆರಸಿದೆಳದಳಿರ್ಗಳಸಂ ೩೩

ವ|| ಆ ಚಂಚತ್ಪಂಚರತ್ನವೇದಿಕಾಂತರಾಳವಳಯಕ್ಕಳಂಕಾರಮಾಗಿ,

ಬೆಳಗುವ ಮಂಗಳದೀಪಾ
ವಳಿಗಳ ಬೆಳಗತ್ತಮಿತ್ತಮುಚ್ಚೊತ್ತಿದವೊಲ್
ತಳತಳಿಸಿ ಬೆಳಗೆ ಬೆಳಗನೆ
ಮೊಳೆತಂತೊಪ್ಪಿದುವು ತೊಳಪ ರನ್ನದ ಕೇರ್ಗಳ್ ೩೪

ವ|| ಆಗಳಾ ವಿವಾಹದೊಸಗೆಯೊಳೊಸಗೆ ಮರುಳ್ಗೊಂಡಂತೆ ಇತ್ತ ವಸುಂಧರಾಸೌಂದರಿಯುಂ ಅತ್ತ ಲಕ್ಷ್ಮೀಮತಿಮಹಾದೇವಿಯುಮೆಕ್ಕೆಕ್ಕೆಯೊಳ್ ಮಂಡಳಿಕಮಹಾಸಾಮಂತಮಂತ್ರಿಮಂಡಳಾಂತಃಪುರ

ಬೆಳೆಸಿರುವಂತೆ ಶೋಭಾತಿಶಯವಡೆದುವು.[1] ೩೨. ಮಾತನ್ನಾಡುತ್ತಿರುವಂತೆಯೂ ನಡೆನೋಡುತ್ತಿರುವಂತೆಯೂ ಆಡುತ್ತಿರುವಂತೆಯೂ ನಮಸ್ಕರಿಸುತ್ತಿರುವಂತೆಯೂ ಅಪ್ಪಿಕೊಳ್ಳುತ್ತಿರುವಂತೆಯೂ ತಮ್ಮ ಇನಿಯರ ಕಾಲುಗಳನ್ನು ಹಿಡಿದುಕೊಳ್ಳುತ್ತಿರುವಂತೆಯೂ ಚಿತ್ರಿತರಾದ ಸ್ತ್ರೀಯರ ತಂಡದಿಂದ ಸ್ತ್ರೀರಾಜ್ಯದ ಅಂದವನ್ನು ವಿವಾಹಮಂಟಪವು ಪಡೆಯಿತು. ೩೩. ಬಿಡಿಮುತ್ತುಗಳಿಂದ ರಂಗೋಲಿಯನ್ನು ಹಾಕಿರಲು; ಅದರ ಮಧ್ಯದಲ್ಲಿ ಸಿಂಹಾಸನವೂ ರನ್ನಗನ್ನಡಿಯೂ ಸರ್ವಧಾನ್ಯಗಳೂ ಮೊಸರ ಲೇಪನದಿಂದ ಕೂಡಿದ ಮತ್ತು ಚಿಗುರುಗಳಿಂದ ತುಂಬಿದ ಕಲಶವೂ ಶೋಭಿಸುತ್ತಿದ್ದವು. ವ|| ಹೊಳೆಯುತ್ತಿರುವ ಪಂಚರತ್ನಗಳಿಂದ ಮಾಡಿದ ಆ ಜಗುಲಿಯ ಮಧ್ಯವಲಯಕ್ಕೆ ಅಲಂಕಾರಪ್ರಾಯವಾಗಿ ೩೪. ಮಂಗಳಾರ್ಥವಾಗಿ ದೀಪಗಳ ಸಾಲನ್ನು ಹಚ್ಚಿದ್ದರು. ಅವುಗಳ ಬೆಳಕು ಸುತ್ತಲಿದ್ದ ರತ್ನದ ಗೋಡೆಗಳಲ್ಲಿ ಪ್ರತಿಫಲಿಸಿ ಥಳಥಳಿಸುತ್ತಿದ್ದುವು. ಆಗ ಆ ಗೋಡೆಗಳು ಬೆಳಕಿನ ಮೊಳಕೆಗಳನ್ನು ಮೊಳೆತಂತೆಸೆದುವು. ವ|| ವಿವಾಹ ಮಹೋತ್ಸವದ ಮಂಗಳವು ವಿಜೃಂಭಣೆಯಿಂದ ನಡೆಯುತ್ತಿತ್ತು. ಆಗ ವಸುಂಧರಾ ಸೌಂದರಿಯೂ ಲಕ್ಷ್ಮೀಮತಿ ಮಹಾದೇವಿಯೂ ನಾನು ಮುಂದು ತಾನು ಮುಂದೆಂದು

---

1 ಶುಭಕಾರ್ಯದಲ್ಲಿ ಹಸಿರು ಪೈರನ್ನು ಬೆಳೆಸುವುದು, ಅಂಕುರಾರ್ಪಣ ರೂಢಿಯಲ್ಲಿದೆಯೆಂಬುದನ್ನಿಲ್ಲಿ ಸ್ಮರಿಸಬೇಕು.

ಪುರಾಂಗನಾನಿಕರಕ್ಕೆ ಮಣಿಮಯಭಾಜನಂಗಳೊಳ್ತೆಕ್ಕನೆ ತೀವಿದ ಪಂಚರತ್ನದ ಕೆಳೆಯ ಕತ್ತುರಿಯ ಕೊಳತಳ ಕಪ್ಪುರದ ಪಳಿಕಿನ ಬಾಯಿನಂಗಳಂ ಬೀಜೆ ಸಾಹಿಯಾಣದ ಚೀನದ ಧವಳವಟ್ಟದ ಭರ್ಮದ ಜೊಂಗದ ದೇವಾಂಗದ ಸಕಳಪಟ್ಟೆಗಳುಮಂ ಮೆಟ್ಟುವೆಡೆಗಳೊಳಿಲ್ಲಂ ಪಾಸಿಕಾರೋಹಣದ ಕಕ್ಕರವಳಯಿಗೆಯ ಚಿತ್ರಾವಳಿಯ ಪಳಿವೆಡೆಯ ತುಳಿವೆಡೆಯ ನೆಳಲಪಾಣಿಯ ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ ಮೊಗಂನೋಡದೆ ಸೂಸಿದಾಗಳ್,

ಇದಿರೊಳ್ ಸೂಸುವ ಹೇಮಭಾಜನಚಯಕ್ಕತ್ಯನ್ತವಸ್ತ್ರಕ್ಕೆ ಮೆ
ಚ್ಚಿದನರ್ಘ್ಯಾಭರಣಕ್ಕೆ ಲೆಕ್ಕಮಣಮಿಲ್ಲಿಂತಿತ್ತರಾರ್ ಮುನ್ನ ತ
ಪ್ಪದಿವಂ ಜಂಗಮಕಲ್ಪವೃಕ್ಷಮೆನೆ ಕೊಟ್ಟೀ ಮಾಟ್ಕೆಯಿಂ ಭಾಜನಾಂ
ಗದ ವಸ್ತ್ರಾಂಗದ ಭೂಷಣಾಂಗದಳವಂ ಚಕ್ರೇಶ್ವರಂ ತಾಳ್ದಿದಂ ೩೫

ವ|| ಆಗಳ್ ಪಂಚರತ್ನಗರ್ಭ ವಿವಿಧೌಷಧಿಸಂದರ್ಭಶಾತಕುಂಭಕುಂಭಸಂಭೃತಮಂಗಳ ಜಳಂಗಳಿಂದಂ ಮಿಸಿಸೆ ಮಿಂದಳಂಕಾರಮಂದಿರಕ್ಕೆ ವಂದು ನೆಱೆಯೆ ಕೈಗೆಯ್ಯೆ

ಕರೆವೆರಸಿದ ಪೊಸದುಗುಲದ
ತೆರಳ್ಕೆವೆತ್ತುಡೆ ಹಟತ್ಕಟೀಸೂತ್ರಪರಿ
ಸ್ಫುರಿತದೊಳಂ ಕಟ್ಟಿದ ಪೊಂ
ಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೋ ೩೬

ಮಾಂಡಲಿಕರಿಗೂ ಮಹಾಸಾಮಂತರಿಗೂ ಮಂತ್ರಿಮಂಡಲಕ್ಕೂ ಅಂತಃಪುರದಂಗನೆಯರಿಗೂ ಮಣಿಮಯಗಳಾದ ಪಾತ್ರೆಗಳಲ್ಲಿ ತುಂಬಿದ ಪಂಚರತ್ನ, ಕಸ್ತೂರಿ, ಲಾಮಂಚ, ಕರ್ಪೂರದ ಹಳುಕಿನಿಂದ ಸಮೇತವಾದ ಬಾಯಿನಗಳನ್ನು ಕೊಟ್ಟರು. ಸಾಹಿಯಾಣ ಮತ್ತು ಚೀನಗಳ ಬಿಳಿಯ ಪಟ್ಟವಸ್ತ್ರಗಳನ್ನೂ ಜೊಂಗ, ದೇವಾಂಗ ಮುಂತಾದ ಬಣ್ಣಬಣ್ಣದ ವಸ್ತ್ರಗಳನ್ನೂ ಮುಖ ನೋಡದೆ ಸಕಲರಿಗೂ ಕೊಟ್ಟರು. (ಪಾಸಿಕಾರೋಹಣ ಮೊದಲಾದವು ವಿವಿಧವರ್ಣದ ವಿವಿಧಜಾತಿಯ ವಸ್ತ್ರಗಳಾಗಿರಬಹುದು. (ಪಾಸಿ+ ಕಾರೋಹಣ ಎಂದು ಪದವಿಭಾಗವಿದ್ದರೂ ಇರಬಹುದು) ೩೫. ಕೊಡುತ್ತಿದ್ದ ಚಿನ್ನದ ಪಾತ್ರೆಗಳಿಗೂ, ಅಪಾರ ವಸ್ತ್ರಗಳಿಗೂ, ಅನರ್ಘ್ಯವಾದ ರತ್ನಾಭರಣಗಳಿಗೂ ಸ್ವಲ್ಪವೂ ಲೆಕ್ಕವಿರಲಿಲ್ಲ. ಹೀಗೆ ಈ ಹಿಂದೆ ಮೊದಲಾರೂ ಕೊಟ್ಟವರಿರಲಿಲ್ಲ. ಈ ಚಕ್ರವರ್ತಿಯು ಸಂಚರಿಸುವ ಕಲ್ಪವೃಕ್ಷವೋ ಎಂಬಂತೆ ಕೊಟ್ಟು ಭಾಜನಾಂಗ, ವಸ್ತ್ರಾಂಗ ಮತ್ತು ಭೂಷಣಾಂಗಗಳ ತನ್ನ ಸಾಮರ್ಥ್ಯವನ್ನು ಪ್ರಕಟಿಸಿದನು. ವ|| ಪಂಚರತ್ನಗಳಿಂದಲೂ ವಿವಿಧೌಷಧಿಗಳಿಂದಲೂ ಕೂಡಿದ ಸುವರ್ಣಕುಂಭಗಳ ನೀರಿನಿಂದ ವಜ್ರಜಂಘನು ಸ್ನಾನಮಾಡಿದನು. ಬಳಿಕ ಅಲಂಕಾರ ಮಂದಿರಕ್ಕೆ ಬಂದು ಅಲಂಕಾರ ಮಾಡಿಕೊಂಡು, ೩೬. ಅಂಚಿನಿಂದ ಕೂಡಿದ ಹೊಸದುಕೂಲವನ್ನು ಮಡಿಕೆಮಾಡಿ ಉಟ್ಟನು. ಬೆಳಗುತ್ತಿರುವ ಕಟಿಸೂತ್ರವನ್ನೂ ಚಿನ್ನದ ಕತ್ತಿಯನ್ನೂ ಧರಿಸಿಕೊಂಡು ಜನಮನವನ್ನು ಸಂತೋಷಗೊಳಿಸಿದನು.

ತರಳತರವೃತ್ತಮೌಕ್ತಿಕ
ಪರಿಕರಮೇಕಾಂತಕಾಂತಮೆಕ್ಕಾವಳಿ ಕಂ
ಧರದೊಳಮರ್ದೆಸೆಯೆ ಪೋಲ್ತುದು
ಪರಿವೇಷಂಗೊಂಡ ಚಂದ್ರನಂ ಮುಖಚಂದ್ರಂ ೩೭

ಹಿಮವದ್ಗಿರಿಕಟಕದಿನೊಗೆ
ವಮರಸರಿತ್ಸ್ರೋತಮೆಂಬ ಮಾತಂ ಪಡೆದೇಂ
ಹಿಮಗೌರಹಾರಮೆಸೆದುದೊ
ಹಿಮಶೈಲಶಿಲಾವಿಶಾಲವಕ್ಷಸ್ಥಳದೊಳ್ ೩೮

ಶ್ರೀಮತಿಯ ಮನಮನೆಱಗಿಸ
ಲೀ ಮಣಿಮಯಮಕುಟಮಾಗಳುಂ ಸಾಲ್ಗುದೆ ತ
ತ್ಕೋಮಳೆ ಮುಳಿದಿರೆ ತಿಳಿಪ
ಲ್ಕೀ ಮಕುಟಮೆ ಸಾಲ್ಗುಮೆನಿಸಲಾರ್ತುದು ಮಕುಟಂ ೩೯

ಕೇಯೂರಕಟಕಸಮಿತಿ ಯು
ಗಾಯತಬಾಹುಗಳಿನುನ್ಮಿಷದ್ರತ್ನಹಟ
ಚ್ಛಾಯೆಯೊಳೆ ಮುಸುಕಿ ದೇಹ
ಚ್ಛಾಯೆಯುಮಂ ಪುದಿಯೆ ರತ್ನತರುವನೆ ಪೋಲ್ತಂ ೪೦

ಮನಸಿಜನಂಗನಾಜನವಶೀಕರಣೌಷಧಮಂಗಜಸ್ಮರಂ
ಬಿನ ಮದಶಕ್ತಿ ಮನ್ಮಥನ ಮೋಹನಯಂತ್ರಮಿದುಪ್ಪುದಲ್ಲದಂ
ದಿನಿತುವರಂ ಮನಂಗೊಳಿಸದೆಂಬಿನಮುಜ್ಜ್ವಳಮಂಗಳಪ್ರಸಾ
ಧನಮೆ ಮನೋಜರಾಜಜಯಸಾಧನಮಾದುದು ವಜ್ರಜಂಘನಾ ೪೧

೩೭. ಹೊಳೆಯುತ್ತಿರುವ ಗುಂಡುಮುತ್ತುಗಳ ಸುಂದರವಾದ ಏಕಾವಳೀಸರವು ಕತ್ತಿನಲ್ಲಿ ಎಸೆಯುತ್ತಿತ್ತು. ಆಗ ಅವನ ಮುಖಚಂದ್ರನು ಗುಡಿಗಟ್ಟಿದ ಚಂದ್ರನನ್ನು ಹೋಲುತ್ತಿದ್ದನು. ೩೮. ಹಿಮಶೈಲದ ಶಿಲೆಯಂತೆ ವಿಶಾಲವಾದ ಅವನ ಎದೆಯ ಮೇಲೆ ಹಿಮದಂತೆ ಧವಳವಾದ ಹಾರವು ಬೆಳಗಿತು. ಅದು ಹಿಮಗಿರಿಯ ಕಟಕದಿಂದ ಹೊರಟ ಸುರನದಿಯ ಸ್ರೋತದಂತೆ ತೋರಿತು. ೩೯. ಶ್ರೀಮತಿಯ ಮನಸ್ಸನ್ನು ಮೆಚ್ಚಿಸಲು ಈ ಮಣಿಮಯ ಕಿರೀಟವು ಯಾವಾಗಲೂ ಸಾಕಾಗದಿದ್ದರೂ ಆ ಕೋಮಲೆಯು ಕೋಪಗೊಂಡಾಗ ಸಮಾಧಾನಗೊಳಿಸಲು ಈ ಮುಕುಟವೇ ಸಮರ್ಥವಾಗುತ್ತದೆ[1] ಎಂಬಂತೆ ಕಿರೀಟವು ತಲೆಯನ್ನು ಅಡರಿತು. ೪೦. ಬಾಹುಮುರಿಗಳಿಂದಲೂ ಕಡಗಗಳಿಂದಲೂ ಯುಕ್ತವಾದ ಎರಡು ದೀರ್ಘವಾದ ತೋಳುಗಳಿಂದ ಹೊರಹೊಮ್ಮುವ ರತ್ನಚ್ಛಾಯೆಗಳೊಡನೆ ದೇಹಚ್ಛಾಯೆಯೂ ಬೆರೆತು ವಜ್ರಜಂಘನು ರತ್ನತರುವನ್ನು ಹೋಲಿದನು. ೪೧. ಸ್ತ್ರೀಜನವನ್ನು ಮನ್ಮಥನು ವಶೀಕರಿಸಿಕೊಳ್ಳಲು ಯೋಗ್ಯವಾದ ಔಷಧವಿದು. ಇದು ಕಾಮನ ಸರಳಿನ ಉನ್ಮಾದನ ಶಕ್ತಿ, ಕಾಮನ ಮೋಹನಯಂತ್ರವಿದು. ಹಾಗಿಲ್ಲದಿದ್ದರೆ

---

1 ಅವಳು ಪ್ರಣಯಕುಪಿತೆಯಾದಾಗ ತಲೆಬಾಗಿ ವಂದಿಸಿದರೆ ಕಿರೀಟವು ಅವಳ ಪಾದವನ್ನು ಮುಟ್ಟಿ ಕೋಪವನ್ನು ತಣಿಸುವುದು-ಎಂದು ಅಭಿಪ್ರಾಯ.

ವ॥ ಅನ್ನೆಗಂ ಶ್ರೀಮತಿಯುಂ ಅನಂತಸಾಮಂತಸೀಮಂತಿನೀಪರಿವೃತೆಯುಂ, ಅತಿಪ್ರೌಢ ವಾರವನಿತಾಪರಿವೃತೆಯುಂ ಆಗಿ ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರಮನುಟ್ಟು, ಉಟ್ಟ ದುಕೂಲವಸನಂ ಆತ್ಮೀಯಘನಜಘನದ ನುಣ್ಪಿನೊಳ್ ನುಣ್ಪುಮೆಗೆತ್ತು, ಝುಣಝುಣಾಯಮಾನಮಣಿಕಿಂಕಿಣೀವಿರಾಜಿತ ಕನಕಕಾಂಚೀಕಳಾಪಮಂ ಅನಂಗರಾಗರಸಪ್ರವಾಹಕ್ಕೆ ಕಟ್ಟೆಗಟ್ಟುವಂತೆ ಕಟ್ಟಿ, ಸಾಂದ್ರಚಂದನದ್ರವಾನುಲಿಪ್ತಾದೃಪ್ತ ಕುಚಕಳಶಂಗಳಂ ತರಳತರತಾರಹಾರದಿಂದಳಂಕರಿಸಿ, ಚಂಪಕದಳದಾಮಕೋಮಳನಿಜಭುಜಲತೆಗಳನನೇಕಮೌಕ್ತಿಕಮಣಿವಿಭೂಷಣಂಗಳಿಂ ಕುಸುಮಿಸಿ, ಮನ್ಮಥೋತ್ಸವಾಭಿಮುಖಮುಖಚಂದ್ರನಂ ಚಂದ್ರಕವಳದಿಂ ತೊಡೆದೋರೊಂದೆ ವಜ್ರದ ಪಚ್ಚೆಯೋಲೆಯುಮುಮನವರ್ಕಮಮರ್ಕೆವೆತ್ತ ಮುತ್ತಿನ ಮುಗುಳ್ಗಳುಮನಿಟ್ಟಾ ಮುಗುಳನೆ ಬಿಱಿಮುಗುಳ್ಗೆತ್ತಱಗಿದ ಮಱಿದುಂಬಿಯಂತೆ ಸೊಗಯಿಸೆ ತೀವಿದ ಕೊಗ್ಗಿಯ ಕತ್ತುರಿಯುಂ, ಕತ್ತುರಿಯೊಳಂ[ಟಿ][೧]ದ ಪರಿಚೆಯುಂ, ಪರಿಚೆಯೊಳ್ಪರಿಚಯಂಬಡೆದ ಮದವಟ್ಟೆಯುಂ, ಮದವಟ್ಟೆಯೊಳೊಡಂಬಟ್ಟ ವಿಪುಳಕಪೋಳತಳಲಿಖಿತ ವಿಚಿತ್ರಪತ್ರಲೇಖೆಯುಂ, ಪತ್ರಲೇಖೆಯಂ ಮುಗುಳ್ನಗೆನಗುವಂತಿರ್ದಧರಮುಂ ಅಧರಮನಧರಂಮಾಡಿ ಪೊಳೆವ ಸುಲಿಪಲ್ಲ ಪೊಳಪುಂ, ಸುಲಿಪಲ್ಲ ಪೊಳಪೆಂಬ ತನ್ನ ಬಾಳ ಪೊಳಪನೆ ಮೆಱೆದು ನೆಱೆದು ಸಮಱೆದ ಮದನನೊಡ್ಡಣದಂತೆ ಸಮಱೆದ ಪುರ್ವುಂ, ಪುರ್ವೆಂಬ ಕರ್ಬಿನ ಬಿಲ್ಲಿಂ ಬರ್ದುಂಕಿದ ಮದನನಲರಂಬೆಂಬಿನಮಿಂಬಾಗಿರ್ದ ನೆಲೆವೊಟ್ಟುಂ, ನೆಲೆವೊಟ್ಟಿನೊಳೊಟ್ಟೈಸಿ ಪಳಂಚಲೆವ ಕುರುಳೋಳಿಯುಂ, ಕುರುಳೋಳಿಯೊಳ್ ಮುನ್ನಮೆ ಸೊಗಯಿಸುವ ಚಿನ್ನಪೂಗಳುಂ, ಚಿನ್ನಪೂಗಳೆಡೆಯೆಡೆಯೊಳ್ ನಿಮಿರ್ದು ಮಿಱುಮಿಱುಗುವ

ಇದು ಇಷ್ಟು ಮೋಹಕವಾಗಲು ಸಾಧ್ಯವಿಲ್ಲ ಎಂಬಂತೆ ವಜ್ರಜಂಘನ ಉಜ್ವಲವೂ ಮಂಗಳಕರವೂ ಆದ ಅಲಂಕಾರವು ರಾಜನಾದ ಕಾಮನ ಗೆಲುವಿಗೆ ಸಾಧನವಾಯಿತು. ವ॥ ಅಷ್ಟರಲ್ಲಿ ಶ್ರೀಮತಿಯು ಅನೇಕ ಸಾಮಂತರಾಜರ ಸ್ತ್ರೀಯರಿಂದಲೂ ಅತಿ ಪ್ರೌಢರಾದ ವಾರವನಿತೆಯರಿಂದಲೂ ಕೂಡಿಕೊಂಡಳು. ಕ್ಷೀರಸಮುದ್ರದ ತೆರೆಗಳ ನೊರೆಗೆಣೆಯಾದ ದುಗುಲವನ್ನುಟ್ಟಳು. ಅದು ಅವಳ ಸಾಂದ್ರ ನಿತಂಬದ ನುಣುಪಿನಿಂದ ಮತ್ತಷ್ಟು ನುಣುಪುಗೊಂಡಿತು. ಅದರ ಮೇಲೆ ಝುಣ ಝುಣ ಎಂದು ಶಬ್ದಗೊಡುವ ಮಣಿಗಳ ಗೆಜ್ಜೆಗಳಿಂದ ಮಂಡಿತವಾದ ಒಡ್ಯಾಣವನ್ನು ತೊಟ್ಟಳು. ಅದು ಕಂತುವಿನ ರಾಗರಸದ ಹೊನಲಿಗೆ ಕಟ್ಟೆ ಕಟ್ಟಿದಂತೆ ಕಾಣಿಸಿತು. ದಟ್ಟವಾಗಿ ಚಂದನದ್ರವವನ್ನು ಬಳಿದ ಸೊಕ್ಕಿದ ಸ್ತನಕಲಶಗಳನ್ನು ಹೊಳೆಯುವ ಮುತ್ತಿನ ಹಾರಗಳಿಂದ ಸಿಂಗರಿಸಿದಳು. ಸಂಪಿಗೆ ಹೂಗಳ ಮಾಲೆಯಂತೆ ಕೋಮಲವೆನಿಸಿದ ಭುಜಗಳೆಂಬ ಬಳ್ಳಿಗಳನ್ನು ಮುತ್ತಿನೊಡವೆಗಳಿಂದ ಅಲಂಕರಿಸಿದಳು. ಅವು ಅವುಗಳಲ್ಲಿ ಅರಳಿದ ಹೂಗಳಂತೆ ಕಾಣಿಸಿದುವು. ಮನ್ಮಥೋತ್ಸವಕ್ಕೆ ಹೊರಟಿದ್ದ ಮುಖಚಂದ್ರನನ್ನು ಪಚ್ಚಕರ್ಪೂರದಿಂದ ತೊಡೆದಳು. ಪಚ್ಚೆಯಲ್ಲಿ ಮೆಟ್ಟಿದ ವಜ್ರದೋಲೆಯನ್ನು ಒಂದೊಂದು ಕಿವಿಗೂ ಧರಿಸಿದಳು. ಓಲೆಗನುಗುಣವಾಗಿ ಜೋಡಿಸಿದ ಮುತ್ತಿನ ಮುಗುಳುಗಳನ್ನು ಅರಳುವ ಮೊಗ್ಗುಗಳೆಂದು ಎರಗಿದ ಮರಿದುಂಬಿಯಂತೆ ಕಾಣಿಸುವ ವನಸ್ಪತಿಮಿಶ್ರ ಕಸ್ತೂರಿಯ ಬಟ್ಟನ್ನು ಧರಿಸಿದಳು. ಅವಳ ಕೆನ್ನೆಯು ಕಪೋಲದಲ್ಲಿ ಚಿತ್ರವಿಚಿತ್ರವಾಗಿ ಪತ್ರಲೇಖೆಯಂಕಿತವಾಗಿತ್ತು. ಅವಳ ಕೆಳದುಟಿಯು ಪತ್ರಲೇಖೆಗಳನ್ನು

೧ ಅಂಟ

ತಲೆದುಡುಗೆಯುಂ, ತಲೆದುಡುಗೆಯೊಳೊಡಂಬಡಂ ಪಡೆದು ಮಿಳಿರ್ದು ಪೊಳೆವ ಪೊಂದಳಿರುಂ, ಪೊಂದಳಿರೊಳೊಂದವಿಂದಿಯಲ್ಲದೊಂದಿ ನಾಡೆಯುಮಂದಂಬಡೆದು ಪದನಜೆದು ತಳಿದ ಮೃಗಮದಸಲಿಲದೊಳ್ ಮೆಲ್ಲಮೆಲ್ಲನುಳ್ಳಲರ್ದು ಚೆಲ್ವಿಂಗೆ ಮುಡಿಗವಿದಂತೆ ತೋಱುವ ತೋರ ಮಲ್ಲಿಗೆಯ ಮುಡಿಯುಮೆಸೆಯೆ ಕೈಗೆಯ್ದಾಗಳ್,

ಹಾರಾದ್ಯಾಭರಣಂಗಳಿ
ನಾ ರೂಪಾಶ್ಚರ್ಯಮಾಗೆ ಮಾಣಿಕಚಟ್ಟಂ
ನೀರಂಜಿಸಿ ದಳಿವಿಡಿದ ಮ
ಹಾರತ್ನದ ದೊರೆಗೆವಂದುದಾ ಸ್ತ್ರೀರತ್ನಂ ೪೨

ವ॥ ಆಗಳನೇಕಪ್ರಸಾಧನಪ್ರಯೋಗಪ್ರವೀಣೆಯರಪ್ಪತಿಪ್ರೌಢಪೌರಂಧ್ರಿಯರ್ ನೋಡಿ ನೋಡಿ,

ಮರಕತರತ್ನಚ್ಛವಿ ಪ
ದ್ಮರಾಗರತ್ನಪ್ರಭಾಪರಿಸ್ಫುರದಧರಂ
ಹರಿನೀಳರತ್ನಕೇಶಂ
ಧರಿತ್ರೀಗೀ ಯುವತಿರತ್ನಮೇನೊಪ್ಪಿದುದೋ ೪೩

ನೋಡಿ ಮುಗುಳುನಗೆ ನಗುವಂತಿತ್ತು! ಶುಭ್ರವಾದ ಅವಳ ಹಲ್ಲುಗಳು ಅಧರದ ಕಾಂತಿಯನ್ನು ಅದುಮಿ ಹೊಳೆಯುತ್ತಿತ್ತು. ಅವಳ ತಿದ್ದಿದ ಹುಬ್ಬುಗಳು ಅವಳ ಶುಭ್ರವಾದ ಹಲ್ಲುಗಳ ಕಾಂತಿಯೆಂಬ ಕತ್ತಿಯನ್ನು ಝಳಪಿಸಿ ಮದನನು ಓರಣವಾಗಿ ನಿಲ್ಲಿಸಿದ ಸೈನ್ಯದಂತೆ ಕಾಣಿಸುತ್ತಿತ್ತು. ಅವಳ ಹಣೆಯ ಬೊಟ್ಟು ಅವಳ ಹುಬ್ಬೆಂಬ ಕಬ್ಬಿನ ಬಿಲ್ಲಿನಿಂದ ಬದುಕಿದ ಮನ್ಮಥನ ಹೂವಿನ ಬಾಣದಂತೆ ಇಂಪಾಗಿತ್ತು. ಅವಳ ಮುಂಗುರುಳುಗಳು ಹಣೆಯ ಬೊಟ್ಟಿನ ಮೇಲೆ ಗುಂಪಾಗಿ ಎರಗುತ್ತಿದ್ದುವು. ತಲೆಗೂದಲಲ್ಲಿ ಚಿನ್ನದ ಹೂಗಳು ಶೋಭಿಸುತ್ತಿದ್ದುವು. ಅವುಗಳೆಡೆಯಲ್ಲಿ ತಲೆಯ ಆಭರಣವು ಎದ್ದು ಹೊಳೆಯುತ್ತಿತ್ತು. ಆ ಆಭರಣದಲ್ಲಿ ಚಿನ್ನದ ಬಣ್ಣದ ಚಿಗುರು ಆಡುತ್ತ ಹೊಳೆಯುತ್ತಿತ್ತು. ಮುಡಿಗೆ ತೋರಮಲ್ಲಿಗೆಯ ದಂಡೆಯನ್ನು ಮುಡಿದಿದ್ದಳು. ಅದು ಪೊಂದಳಿರಿನೊಡನೆ ಸೇರಿಯೂ ಸೇರದಂತೆ ಅಂದವಾಗಿ ತೋರುತ್ತಿತ್ತು. ಅದಕ್ಕೆ ಹದವಾಗಿ ಕಸ್ತೂರೀದ್ರವವನ್ನು ಚಿಮುಕಿಸಲಾಗಿತ್ತು. ಆ ಮಲ್ಲಿಗೆಯ ದಂಡೆಯು ಅವಳ ಅರಳುತ್ತಿರುವ ಯೌವನಕ್ಕೆ ಕಿರೀಟವನ್ನಿಟ್ಟಂತೆ ಶೋಭಿಸುತ್ತಿತ್ತು. ೪೨. ಹಾರಾದ್ಯಾಭರಣಗಳಿಂದ ಆ ರೂಪವು ಆಶ್ಚರ್ಯಕರವಾಗಿತ್ತು. ರತ್ನಪರೀಕ್ಷಕನು ಸಾಣೆಹಿಡಿದು ಬೆಳಗಿಸಿದ ಮಹಾರತ್ನಕ್ಕೆಣೆಯಾಯಿತು ಆ ಸ್ತ್ರೀರತ್ನ. ವ॥ ಆಗ ಅಲಂಕರಣ ಕಾರ್ಯದಲ್ಲಿ ಅತಿಚತುರರಾದ ಪ್ರೌಢಸ್ತ್ರೀಯರು ನೋಡಿ ನೋಡಿ ಅವಳನ್ನು ಅಲಂಕರಿಸುತ್ತ ಹೀಗೆ ಹೇಳುತ್ತಿದ್ದರು: ೪೩. ಮರಕತರತ್ನಗಳಂತೆ ಈ ಸ್ತ್ರೀರತ್ನದ ಕಾಂತಿಯಿದೆ. ಅಧರವು ಪದ್ಮರಾಗಮಣಿಯಂತೆ ಕಾಂತಿವಡೆದಿದೆ. ಕೂದಲುಗಳು ಇಂದ್ರನೀಲ ರತ್ನಗಳಂತಿವೆ. ಆದುದರಿಂದ ಈ ಸ್ತ್ರೀರತ್ನವು ಭೂಮಿಯಲ್ಲಿ ಎಷ್ಟು ಅತಿಶಯವಾಗಿ ಪ್ರಕಾಶಿಸುವುದೊ!

ಎಳವಿದಿರ ಬಣ್ಣಮೊಳ್ನಡು
ಕಳಶಮನವ್ವಳಿಪ ಮೊಲೆ ಪೊದಟ್ಟಿಳಸುವ ಬಾಯ್
ಬಳಸುವ ಕಣ್ ಮಿಳಿರ್ವ ಕುರುಳ್
ನಳಿಮೊಗಮೆನೆ ಸೊಬಗಿವಳ್ಗೆ ನಾಟ್ಟಿರ್ತನಮೇ ೪೪

ಮದನನ ಮಣಿದರ್ಪಣಕಂ
ಮದನನದೀರತ್ನಶುಕ್ತಿಗಂ ಸೆಣಸುವುದಂ
ಕದಳೀಗರ್ಭದೊಳೆಣೆಯೆಂ
ಬಿದಾವ ಚದುರಿವಳ ಬಾಹುಮೂಲದ ಪೊಳೆಪಂ ೪೫

ಈ ಧರೆಯ ಪೆಂಡಿರುದ್ಧಪ
ಯೋಧರೆಯ ಮನೋಜರಾಗರಸಪೂರಿತ ಬಿಂ
ಬಾಧರೆಯ ಕಂಬುಕಮ್ರ ಶಿ
ರೋಧರೆಯ ಬೆಡಂಗನಾರುಮೇನೆಯ್ದುವರೇ ೪೬

ಅಣಮೆಮೆಯಿಕ್ಕದೊಪ್ಪುಗುಮೆ ಕಣ್ಮಲರೆಂತುಗೆ ದೇವಸೌಂದರೀ
ಗಣದ ವಿಳಾಸಮಂಜಿಸುವವೋಲ್ ಪಡೆಯಂ ಮುಡಿಯಲ್ಲಿ ತೋರ್ಪ ನಾ
ಗಿಣಿಯರ ಕೆಯ್ತಮೆಂತೊ ಕಳೆ ಪಾಱುವ ಪಾಱುವಳಂದಮಂ ಬೆಡಂ
ಗಣಿಯರಮೀಕೆಗೆಂದು ಪೊಗಟ್ಟರ್ ಕೆಲರಲ್ಲಿ ಹಿಮಾಂಶುವಕ್ತ್ರೆಯಂ ೪೭

ವII ಅಂತು ನೆಱೆಯೆ ಕೈಗೆಯ್ದು ವಧೂವರರಿರ್ವರುಮಂ ಮೌಹೂರ್ತಿಕಗಣನಿರೂಪಿತಪ್ರಶಸ್ತ ಮುಹೂರ್ತದೊಳತಿಪ್ರಮೋದನಿರ್ಭರಪ್ರಣ ಪ್ರಹತ ಮಂಗಳಪಟಹರವಂಗಳುಮತಿಮಧುರಮಂದ್ರ

೪೪. ಇವಳ ನಡುವು ಎಳೆಬಿದಿರಿನಂತೆ ಬಣ್ಣವಡೆದಿದೆ. ಸ್ತನಗಳು ಕಲಶವನ್ನು ಅವ್ವಳಿಸುತ್ತಿವೆ. ಬಾಯಿ ಸೊಗಸುವಡೆದು ಚಿಕ್ಕದಾಗಿದೆ. ಕಣ್ಣು ವಿಸ್ತರಿಸಿದೆ. ಕುರುಳು ಚಲಿಸುತ್ತಿದೆ. ಮುಖವು ಶೋಭಿಸುತ್ತಿದೆ. ಸೊಬಗು ಇವಳಿಗೆ ಸಹಜವೇ ಸರಿ. ೪೫. ಇವಳ ಬಾಹುಮೂಲದ ಹೊಳಪು ಕಾಮನ ರನ್ನಗನ್ನಡಿಯೊಡನೆಯೂ ಮದನನೆಂಬ ನದಿಯ ರತ್ನಶುಕ್ತಿಯೊಡನೆಯೂ ಸ್ಪರ್ಧಿಸುತ್ತಿರುವಾಗ ಕದಳೀಗರ್ಭಕ್ಕೆ ಸಮ ಎಂದರೆ ಜಾಣತನವೇನಿದೆ? ೪೬. ಉನ್ನತ ಸ್ತನಿಯೂ ಕಾಮರಾಗರಸಪೂರಿತಳೂ ಬಿಂಬಾಧರೆಯೂ ಶಂಖದಂತೆ ಸುಂದರವಾದ ಕತ್ತುಳ್ಳವಳೂ ಆದ ಈ ಸುಂದರಿಯ ಬೆಡಗನ್ನು ಈ ಭೂಮಿಯಲ್ಲಿ ಬೇರೆ ಯಾವ ಹೆಂಗಸು ತಾನೆ ಹೊಂದಲು ಸಾಧ್ಯ? ೪೭. ದೇವಸ್ತ್ರೀಯರ ವಿಲಾಸವೇನು ಸೊಗಸು? ತೆಗೆ! ಎವೆಯಾಡದ ಅವರ ಕಣ್ಣು ಶೋಭಿಸೀತೆ? ಹೆದರಿಕೆಯಾಗುವಂತೆ ಮುಡಿಯಲ್ಲಿ ಹೆಡೆಯೆತ್ತಿರುವ ನಾಗಿಣಿಯರ ಆಟವೇನು ಚೆನ್ನಾದೀತು? ಬಿಡು! (ಆಕಾಶದಲ್ಲಿ) ಹಾರಾಡುವ ಅಪ್ಸರೆಯರ ಬೆಡಗು ಈ ಶ್ರೀಮತಿಯ ಸೌಂದರ್ಯಕ್ಕೆ ಅಲ್ಪವಾದರೂ ಅಣಿಯಾದೀತೆ? ಛೆ!' ಎಂದು ಆ ಚಂದ್ರವದನೆಯನ್ನು ನೋಡಿ ಅಲಂಕರಿಸುವ ಸ್ತ್ರೀಯರು ಹೊಗಳುತ್ತಿದ್ದರು. ವII ಹೀಗೆ ವಧೂವರರಿಬ್ಬರನ್ನೂ ಚೆನ್ನಾಗಿ ಸಿಂಗರಿಸಿ ಜೋಯಿಸರು ಹೇಳಿದ ಪ್ರಶಸ್ತ ಮುಹೂರ್ತದಲ್ಲಿ, ಬಹಳ ಸಂತೋಷದಿಂದ ಮಂಗಳಕರವಾದ ವಾದ್ಯಗಳು

ಮನೋಹರ ಮಂಗಳಗೀತಾರವಂಗಳುಮಲಕ್ತಕದ್ರವಾರುಣಚರಣರಣಿತನೂಪುರಮುಖರಿತದಿಗಂತರಾಂತಃಪುರಜನಾಶೀರ್ವಾದಕೋಳಾಹಳಮುಮಸೆಯೆ ಮುಂದಿಟ್ಟು ತಂದು ವಿವಾಹಮಂಟಪದ ನಡುವಣ ಮಣಿಮಯವೇದಿಕೆಯ ಹಾಟಕಪೀಠದ ಮೇಲೆ ಹಾಸಿದ ದುಗುಲದ ದಳಿಂಬದೊಳಿರಿಸಿದಾಗಳನೇಕ ಮಕುಟಬದ್ಧ ಚೂಡಾಮಣಿಚಕ್ರಚುಂಬನೋಚಿತ ಚರಣಕಮಳನಪ್ಪ ಸಕಳಚಕ್ರವರ್ತಿ

ನೆಱೆದತ್ತೆತ್ತಾನುಮೀ ದಂಪತಿಯ ಬಯಕೆ ಸಂಪೂರ್ಣಮಾಯ್ತುತ್ಸವಂ ಕ
ಣ್ಗೆಱೆದಂತಾಯ್ತೆನ್ನ ಸಾಮ್ರಾಜ್ಯದ ಫಲಮೆನುತುಂ ರಾಗಮಂ ಬೀಱಲಾದ
ಟ್ಟಱ ಪೆಂಪಂ ತೋಱಲಾಗಳ್ ಕನಕಕಳಶಮಂ ತಾನೆ ಬಂದೆತ್ತಿ ಕೈನೀ
ರೆಱೆದಂ ಶ್ರೀವಜ್ರದಂತಕ್ಷಿತಿಪತಿ ಸತತೋತ್ಸಾಹಸಂದೋಹದಿಂದಂ ೪೮

ವ॥ ಅಂತು ಕೈನೀರೆಱೆದು ಪಾಣಿಗ್ರಹಣಂಗೆಯಿಸಿದಾಗಳ್ ವಜ್ರಜಂಘಂ ಶ್ರೀಮತಿಯ ನಿಕಾಮಕೋಮಳಕರತಳಪಲ್ಲವಸ್ಪರ್ಶನಸುಖೋನ್ಮೀಳಿತಲೋಚನನಾಗೆ,

ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಳ್ದ ನಾಣ ಪೆಂ
ಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬೆ
ಚ್ಚನೆ ಬಸಿವಿಂದುಕಾಂತಕರಸಂಕುಳಮೊಯ್ಯನವುಂಕಿ ಸೋಂಕೆ ಸೋಂ
ಕಿನೊಳೊಱೆವಿಂದುಕಾಂತಮಣಿಪುತ್ರಿಕೆಯಂದದಿನೊಪ್ಪಿ ತೋಱಿದಳ್ ೪೯

ಬಾರಿಸಲ್ಪಡುತ್ತಿರಲು ವಿವಾಹಮಂಟಪದ ಮಧ್ಯದಲ್ಲಿ ಮಣಿಮಯ ವೇದಿಕೆಯಲ್ಲಿ ಸಜ್ಜುಗೊಂಡ ಸಿಂಹಾಸನದ ಮೇಲೆ ಹಾಸಿದ ರೇಷ್ಮೆವಸ್ತ್ರದ ಮೇಲೆ ಕುಳ್ಳಿರಿಸಿದರು. ಆಗ ಮಧುರವಾಗಿ, ಮನೋಹರವಾಗಿ ಮಂಗಳಗೀತಗಳು ಗಾನಮಾಡಲ್ಪಡುತ್ತಿದ್ದುವು. ಆ ಧ್ವನಿಯು ಅಲಕ್ತಕರಸವನ್ನು ಬಳಿದ ಕಾಲುಗಳನ್ನಿಡುವಾಗುಂಟಾದ ಕಾಲಂದುಗೆಗಳ ಸದ್ದಿನಿಂದ ದಿಗಂತ ಪ್ರತಿಧ್ವನಿತವಾಯಿತು. ಅಂತಃಪುರಸ್ತ್ರೀಯರ ಆಶೀರ್ವಾದದ ಕೋಲಾಹಲಗಳು ಅಲ್ಲಿ ಮೆರೆಯುತ್ತಿದ್ದವು. ಅನೇಕ ನೃಪತಿಕಿರೀಟಗಳಿಂದ ಮುತ್ತಿಕ್ಕಲರ್ಹವಾದ ಕಾಲುಗಳುಳ್ಳ ವಜ್ರದಂತಚಕ್ರವರ್ತಿಯು, ೪೮. "ಈ ವಧೂವರರ ಬಯಕೆಯು ಹೇಗೋ ನೆರವೇರಿತು. ಉತ್ಸವವು ಪೂರ್ಣಗೊಂಡಿತು. ನನ್ನ ಸಾಮ್ರಾಜ್ಯದ ಫಲವು ಕಣ್ತೆರೆಯಿತು" ಎಂದು ಕೊಂಡನು. ತನಗಾದ ಅನುರಾಗಾತಿಶಯವನ್ನೂ ಸಂತೋಷಾಧಿಕ್ಯವನ್ನೂ ತೋರಿಸಲು ತಾನೇ ಕನಕಕಲಶಗಳನ್ನು ಎತ್ತಿತಂದು ಆ ವಜ್ರದಂತನು ಧಾರೆಯೆರೆದನು. ವ॥ ಹೀಗೆ ಕೈನೀರಿನಿಂದ ಧಾರೆಯೆರೆದು ಶ್ರೀಮತಿಗೆ ಪಾಣಿಗ್ರಹಣ ಮಾಡಿಸಿದನು. ವಜ್ರಜಂಘನು ಶ್ರೀಮತಿಯ ಕೋಮಲವಾದ ಕರತಲದ ಸ್ಪರ್ಶಸುಖದಿಂದ ಅರಳಿದ ಕಣ್ಣುಳ್ಳವನಾದನು. ೪೯. ನಲ್ಲನ ಕರತಳವು ನಲ್ಲೆಯ ಕರತಳವನ್ನು ಸೋಂಕಿತು. ಆಗ ಲಜ್ಜಾಧಿಕ್ಯವೊದಗಿ ಬೆವರುಹನಿಗಳುಂಟಾಗಿ ತಲೆ ತಗ್ಗಿಸಿದಳು. ಬೆಚ್ಚಗೆ ದ್ರವಿಸುವ ಚಂದ್ರಸದೃಶನಾದ ಕಾಂತನ ಕೈಗಳು ಶ್ರೀಮತಿಯ ಕೈಗಳನ್ನದುಮಲು, ಆ ಸ್ಪರ್ಶದಿಂದ ಬೆವರಿದ ಶ್ರೀಮತಿಯು ಚಂದ್ರಕಾಂತಕರಸ್ಪರ್ಶದಿಂದೊಸರುವ ಚಂದ್ರಕಾಂತ ಮಣಿಯ ಬೊಂಬೆಯಂತೆ ತೋರಿದಳು.

ವ|| ಆ ಪ್ರಸ್ತಾವದೊಳ್,

ಪರಿವ ಕಟಾಕ್ಷಂಗಳನೋ
ಸರಿಸುತ್ತುಂ ನಿಮಿರ್ವ ಸುಯ್ಗಳಂ ಕುಸಿಯುತ್ತುಂ
ಶರಪಾಶಂಗಳ ನಡುವಣ
ಹರಿಣಿಯವೋಲ್ ಮನದೊಳಾಗಳಾಕುಳೆಯಾದಳ್ ೫೦

ವ|| ಆಗಳ್ ವಜ್ರಜಂಘಂ

ಪುಳಕಪ್ರೋದ್ಭೇದಘರ್ಮೋದಕವಿಸರಮನೊತ್ತಂಬದಿಂ ತಾಗೆಯುಂ ನಿ
ಶ್ಚಳಧೈರ್ಯವ್ಯಾಜತಿರ್ಯಗ್ವಳನತರಳಿತಂ ದೃಷ್ಟಿ ಪೇೞ್ದತ್ತು ನಿರ್ವ್ಯಾ
ಕುಳಮಾಗಳ್ ರಾಜಪುತ್ರೀಸ್ಮಿತಮಧುಮಧುರಾಪಾಂಗಚೈತ್ರಾಂಗಜಾಸ್ತ್ರಂ
ಗಳ ಕೋಳಂ ನೂತನಪ್ರೇಮದೆ ನಿಮಿರ್ವೆಡೆಯೊಳ್ ದೃಷ್ಟಿಯಂ ಕಾವನಾವಂ ೫೧

ವ|| ಅಂತಭಿನವಸಂಗಸಮುತ್ಪನ್ನಸಾಧ್ವಸರಸರಮಣೀಯತರ ಮುಗ್ಧವಧೂವದನವಿಲೋಕನ ಸುಖಮನನುಭವಿಸಿ,

ಇನಿವಿರಿದೊಂದು ಮೇಳಮುಮೊಡಂಬಡುವಟ್ಟುಮೆನ್ನ ನಿನ್ನ ಮು
ನ್ನಿನ ಭವದೊಂದು ಕೂರ್ಮೆಯೊಳ್ ಕೂಡಿದುದೀ ಭವದಿಂದಮಾದ ವಾ
ಸನೆ ಮಱುಮೆಯ್ಗಮಕ್ಕುಮದಱಿಂದೆನಗಂ ನಿನಗಂ ಸಮಂತು ಮು
ನ್ನಿನ ಭವಮೀ ಭವಂ ಮಱುಭವಂ ಸಫಲಂ ಮೃಗಲೋಲಲೋಚನೇ ೫೨

ವ|| ಆ ಸಮಯದಲ್ಲಿ ೫೦. ಅವಳು ತನ್ನ ಮೇಲೆ ಬಿದ್ದ ಕಟಾಕ್ಷಗಳನ್ನು ಬದಿಗೆ ಸರಿಸಿದಳು. ಮೇಲೇರಿ ಬರುತ್ತಿದ್ದ ನಿಶ್ವಾಸಗಳನ್ನು ಅದುಮಿಕೊಂಡಳು. ಬಾಣ ಬಲೆಗಳ ನಡುವೆ ಸಿಕ್ಕಿಕೊಂಡ ಹೆಣ್ಣುಜಿಂಕೆಯಂತೆ ಅವಳು ವ್ಯಾಕುಲತೆಗೀಡಾದಳು. ವ|| ಆಗ ವಜ್ರಜಂಘನು ೫೧. ರೋಮಾಂಚಗಳಿಂದುಂಟಾದ ಬೆವರಿನ ಪ್ರವಾಹದೊತ್ತಡಕ್ಕೆ ಒಳಗಾದನು. ಆಗ ನಿಶ್ಚಲವಾದ ಧೈರ್ಯದ ವ್ಯಾಜದಿಂದ ಅಡ್ಡಲಾಗಿ ತಿರುಗಿ ತರಳಿತವಾದ ಅವನ ದೃಷ್ಟಿಯು ರಾಜಪುತ್ರಿಯ ಮುಗುಳ್ನಗೆಯೆಂಬ ಮಧು ಮತ್ತು ಕಡೆಗಣ್ಣೆಂಬ ಜಯಶಾಲಿ ಕಾಮಾಸ್ತ್ರಗಳ ಹೊಡೆತವನ್ನು ಸ್ಪಷ್ಟವಾಗಿ ಹೇಳಿತು! ನೂತನ ಪ್ರೇಮದಿಂದ ದೃಷ್ಟಿಯು ಹಿಗ್ಗುವೆಡೆಯಲ್ಲಿ ಅದನ್ನು ಯಾರು ಕಾಯ್ದುಕೊಂಡಾರು? ವ|| ನೂತನ ಸಮಾಗಮದಿಂದಾದ ಭಯದಿಂದ ರಮಣೀಯವಾದ ಮುಗ್ಧ ವಧುವಿನ ಮುಖದರ್ಶನದ ಸುಖವನ್ನು ಅನುಭವಿಸಿದ ವಜ್ರಜಂಘನು ೫೨. "ನನ್ನ ನಿನ್ನ ಹಿರಿದಾದೀ ಸಮಾಗಮವು ನಮ್ಮಿಬ್ಬರ ಪೂರ್ವಜನ್ಮದ ಪ್ರೇಮದ ಫಲವಾಗಿಯೇ ಸಂಘಟಿತವಾದುದು. ಈ ಭವದಲ್ಲಾದ ಸಂಸ್ಕಾರವು ಮುಂದಿನ ಭವದಲ್ಲಿಯೂ ಮೈಗೂಡುವುದು. ಆದ್ದರಿಂದ ನನ್ನ-ನಿನ್ನ ಹಿಂದಿನ, ಇಂದಿನ ಮತ್ತು ಮುಂದಿನ ಜನ್ಮಗಳು ಸಫಲವಾದುವು, ಏಣಾಕ್ಷಿ" ಎಂದನು.

ವ|| ಎಂದು [ಕೆಚ್ಚುನೀಟ್ಟಿ][೧] ಮಚ್ಚುಮನುರ್ಚೆಪೋದ ಮೇಳಮುಮನಳವಿಗಟಿದಲಂಪುಮಂ ಬಳವಿವಡೆದಚ್ಚಿಱುಮನೋರೊರ್ವರೊಳ್ ನೆಱೆದನೇಕವಿಧ ನಿಧುವನಸುಖಸುಧಾರಸಾಧೀನಚಿತ್ತರುಂ ಚಿತ್ತಜನೆ ವಿವಿಧವಿಳಾಸವಿಭ್ರಮೋಪದೇಶೋಪಾಧ್ಯಾಯನಾಗೆಯುಂ ಉಪವನಾಂತರಾಳ ಕನಕಕದಳೀಭವನಂಗಳೇ ನಿವಾಸಭವನಂಗಳಾಗೆಯುಂ ಭ್ರಮದ್ಭ್ರಮರಭರಭಗ್ನ ಮಾಧವೀಲತಾಲತಾಂತ ಸಮಧಿಕಮಕರಂದಬಿಂದು ಚಿತ್ರಿತವಿಪುಳಪುಳಿನತಳಂಗಳೇ ವಿಶ್ರಮಣಭೂಮಿಗಳಾಗೆಯುಂ ದರದಳಿತ ಕಮಳವನಗಳಿತ ಮಧುರಮದಮದಿರಾಮೋದಮುದಿತಮಧುಕರನಿಕರ ನಿನಾದೋಪವೀಣಿತ ಕ್ರೀಡಾಸರೋವರಂಗಳೇ ಜಳಕೇಳೀಕುತೂಹಳನಿಳಯಂಗಳಾಗೆಯುಂ ಸಕಳಕಳೋತ್ಕಳಿತ ಸರಸ ಸಹಕಾರಕೋರಕಕಬಳನಮದಮಧುಕರಕೋಕಿಳಕೋಳಾಹಳಾಕುಳಿತಕೃತಕಕೇಳೀ ಶೈಳಶಿಖರಂಗಳೇ ಸಕಳದಿಗವಲೋಕನನಿಕೇತನಂಗಳಾಗೆಯುಂ ಸರಸಸರಸಿಜಸಂದರ್ಭ ಗರ್ಭಸರೋವರಸಲಿಲಲುಳಿತ ಶಿಶಿರಸುರಭಿಮಂದಮಾರುತಾಂದೋಳಿತ ಚಂದನವನವೀಥಿಗಳೇ ವಿಹಾರಮಾರ್ಗಂಗಳಾಗೆಯುಂ ವಸಂತಸಮಯಸಮುದಿತಕುಸುಮಕಿಸಲಯಂಗಳೇ ವನಕೇಳೀವಿಳಾಸ ಭೂಷಣಂಗಳಾಗೆಯುಂ ತ್ರಿಭುವನೈಕಪವಿತ್ರೀಭೂತಮಹಾಪೂತಜಿನಾಲಯಮೇ ನಿರತಿಶಯ ಭಕ್ತಿಪುರಸ್ಸರಪೂಜಾವಿಚಿತ್ರವಿರಚನಾದಿ ಸಂಪದಾಸ್ಪದಮಾಗೆಯುಂ ಪಾತ್ರದಾನವಿಧಾನಮೆ ವಿನೋದಮಾಗೆಯುಂ ಇಂತು ನಿತ್ಯೋತ್ಸವಂಗಳ್ ಕೆಲವುಕಾಲಂ ಸಲೆ ಸಲ್ಗೆವೆರಸಿದ ತನ್ನ ನಣ್ಪನೊಟ್ಟಜೆಯಿಂ ತೋಱೆ ವಜ್ರಬಾಹು ಮಹೀಪತಿಯಂ ಕರೆದುಮಮಿತತೇಜಂಗೆ ಭವದೀಯಾತ್ಮಜೆಯಂ,

ವ|| ದೃಢವಾಗಿ ಹೆಣೆದುಕೊಂಡಿದ್ದ ದೃಢಪರಿಚಯವನ್ನೂ ಕಳಚಿಹೋಗಿದ್ದ ಸಂಯೋಗವನ್ನೂ ಅಳತೆಮೀರಿದ ಸೊಗಸನ್ನೂ ಅಧಿಕವಾದ ಪ್ರೇಮವನ್ನೂ ಅನ್ಯೋನ್ಯವಾಗಿ ಅವರಿಬ್ಬರೂ ಮೆರೆದು, ಅನೇಕ ವಿಧ ರತಿಕ್ರೀಡೆಗಳಿಂದುಂಟಾದ ಸುಖಾಮೃತದಲ್ಲಿ ಮುಳುಗಿದರು. ಅವರಿಗೆ ಕಾಮನೇ ವಿವಿಧ ವಿಲಾಸ ವಿಭ್ರಮಗಳನ್ನು ಉಪದೇಶಿಸುವ ಉಪಾಧ್ಯಾಯ ನಾದನು. ಉಪವನದ ನಡುವಿನ ಕನಕಕದಳೀಭವನಗಳೇ ಅವರಿಗೆ ನಿವಾಸ ಭೂಮಿಗಳಾದುವು. ಸಂಚರಿಸುತ್ತಿರುವ ದುಂಬಿಗಳ ಭಾರಕ್ಕೆ ಮುರಿದ ಮಾಧವೀಲತೆಗಳಿಂದ ಸುರಿದ ಬಂಡಿನ ಹನಿಗಳಿಂದ ಚಿತ್ರಿತವೂ ವಿಸ್ತಾರಿತವೂ ಆದ ಮರಳುದಿಣ್ಣೆಗಳೇ ಅವರಿಗೆ ವಿಶ್ರಾಂತಿಸ್ಥಾನಗಳಾದುವು. ನಸುಬಿರಿದ ತಾವರೆಯ ಗುಂಪಿನಿಂದ ಹರಿದ ಮಧುರವಾದ ಮದಜನಕವಾದ ಮಕರಂದದ ಪರಿಮಳದಿಂದ ಹರ್ಷಗೊಂಡ ದುಂಬಿಗಳ ಮೊರೆತಗಳಿಂದ ಕೂಡಿದ ಕ್ರೀಡಾಸರೋವರಗಳೇ ಜಲಕ್ರೀಡೆಗೆ ಕುತೂಹಲಜನಕವಾದ ಆಶ್ರಯಗಳಾದುವು. ಮೊಗ್ಗುಗಳಿಂದಿಡಿದ ಮಾವಿನಮರಗಳ ಮೊಗ್ಗುಗಳನ್ನು ತಿಂದು ಮದಿಸಿದ ದುಂಬಿ ಕೋಗಿಲೆಗಳ ಕೋಲಾಹಲಗಳಿಂದ ಕೂಡಿದ ಕೃತಕವಾದ ಕ್ರೀಡಾಪರ್ವತಗಳ ಶಿಖರಗಳೇ ದಿಕ್ಕುಗಳೆಲ್ಲವನ್ನೂ ನೋಡಲು ಸಹಾಯಕವಾದ ಭವನಗಳಾದುವು. ಮಕರಂದರಸಭರಿತ ಕಮಲಗಳುಳ್ಳ ಸರೋವರದ ನೀರಿನಲ್ಲಿ ಹೊರಳಾಡಿ ತಂಪಾದ ಪರಿಮಳವುಳ್ಳ ಮಂದಮಾರುತದಿಂದ ಅಲುಗಾಡುವ ಚಂದನವನದ ಬೀದಿಗಳೇ ಅವರಿಗೆ ವಿಹಾರಮಾರ್ಗಗಳಾದುವು. ವಸಂತಕಾಲದಲ್ಲಿ ಅರಳಿದ ಹೂ ಚಿಗುರುಗಳೇ

---

೧ ಕೆಚ್ಚುವಿರ್ದ

ಕುಡು ಕುಡದಂದುಮೆನ್ನ ತನಯಂ ಭವದಾತ್ಮಜೆಗೀಶನೆಂದು ಬೆ
ಳ್ಗೊಡೆಯೊಡೆಯಾತನರ್ಥಿವಡೆ ಕೊಳ್ಕೊಡೆಗಾಗಳ್ ವಜ್ರಬಾಹು ದಾಂ
ಗುಡಿವಿಡೆ ರಾಗಮಟ್ಟಿಯೊಳೆ ಸೌಂದರಿಯಂ ಕುಡೆ ಬಂಧುಗಳ್ ಮನಂ
ಬಡೆ ಕಡುರಮ್ಯಮಾಯ್ತಮಿತತೇಜನೊಳಂದು ವಿವಾಹಮಂಗಳಂ ೫೩

ವ|| ಆ ವಿವಾಹಕಲ್ಯಾಣಾನಂತರಂ ನಿಜತನೂಜೆಯನಳಿಯನೊಡನೆ ಕಟಿಪುವುದ್ಯೋಗ ಮನೆತ್ತಿಕೊಂಡು,

ಎನಗೀ ಷಟ್ಖಂಡಭೂಮಂಡಳಪತಿಯೆನಿಸಲ್ಸಾಲ್ಗುಮುದ್ಯದ್ಯಶೋಲಾಂ
ಛನಮೀ ಶ್ವೇತಾತಪತ್ರಂ ಕಳೆದುಟಿದುವುವಂ ತನ್ನಿಮಿನ್ನೆಂದು ವಾರಾಂ
ಗನೆಯರ್ ಜಾತ್ಯಶ್ವವೃಂದಂ ಸಮದಕರಿಕುಳಂ ತಾರಹಾರಂಗಳೆಂದಿಂ
ತಿನಿತಾನುಂ ವಸ್ತುವಂ ತಾಂ ತರಿಸಿದನಧಿಕಪ್ರೀತಿಯಿಂ ವಜ್ರದಂತಂ ೫೪

ವ|| ಅಂತು ತರಿಸಿ ಮತ್ತಮಾತಯಸ್ಥಪತಿರತ್ನವಿರಚಿತ ಮಣಿಕನಕಖಚಿತಶಿಬಿಕಾಂದೋಳದಿ ಯಾನಂಗಳುಮಂ ಕನಕಯೋಗಾಲಂಕೃತಂಗಳಾಗಿ ಸೊಗಯಿಸುವ ಕರಿಯ ಪಿರಿಯ ಮೆಯ್ಯ ನಿಡಿಯ ಕಿವಿಯ ಕುಣಿದು ಮೆಟ್ಟುವ ಬಜ್ಜರಿಗತ್ತಿಗಳುಮಂ ವ್ಯೂಹದೊಳ್ ನಿಟ್ಟುವಟ್ಟು ಮಣಿಮಯಮಂಡನಾ

ವನಕೇಳೀವಿಲಾಸಭೂಷಣಗಳಾದುವು. ಮೂರು ಲೋಕಗಳಲ್ಲಿಯೂ ಅತ್ಯಂತ ಪವಿತ್ರವೆನಿಸಿದ ಜಿನಾಲಯವೇ ಭಕ್ತಿಪುರಸ್ಸರವಾಗಿ ಮಾಡುವ ವಿಚಿತ್ರವಾದ ಪೂಜಾವೈಭವಕ್ಕೆ ಆಸ್ಪದವಾಯಿತು. ಸತ್ಪಾತ್ರದಲ್ಲಿ ದಾನ ಮಾಡುವ ವಿಧಿಯೇ ಅವರಿಗೆ ವಿನೋದವಾಯಿತು. ಹೀಗೆ ನಿತ್ಯೋತ್ಸವಗಳಲ್ಲಿ ಕೆಲವು ಕಾಲವು ಕಳೆಯಿತು. ಅನಂತರ ಸಲಿಗೆಯಿಂದ ಕೂಡಿದ ಪ್ರೀತಿಯು ಅತಿಶಯುವನ್ನು ತೋರಿಸಿ ವಜ್ರದಂತಚಕ್ರವರ್ತಿಯು ವಜ್ರಬಾಹು ಮಹಾರಾಜನನ್ನು ಕರೆದು (ನನ್ನ ಮಗನಾದ) ಅಮಿತತೇಜನಿಗೆ ೫೩. "ನಿನ್ನ ಮಗಳನ್ನು ಕೊಡು. ಕೊಡದಿದ್ದರೂ ನಿನ್ನ ಮಗಳಿಗೆ ನನ್ನ ಮಗನೇ ಗಂಡನು!" ಎಂದನು. ಹೀಗೆ ಶ್ವೇತಛತ್ರಾಧಿಪತಿಯಾದ ಚಕ್ರವರ್ತಿಯು ಅರ್ಥಿಯಾಗಲು ಕೊಳುಕೊಡುಗೆಗೆ ವಜ್ರದಂತನು ಮುಂದಾದನು. ಪ್ರೀತಿಯು ಹಬ್ಬಿ ಹರಿದು ಪ್ರೀತಿಯಿಂದ ತನ್ನ ಮಗಳಾದ ಅನುಂದರಿಯನ್ನು ಕೊಡುವುದಕ್ಕೆ ಬಂಧುಬಾಂಧವರು ಒಪ್ಪಿದರು. ಆಗ ಅಮಿತತೇಜನ ವಿವಾಹವು ಕಡುರಮ್ಯವಾಯ್ತು. ವ|| ವಿವಾಹದ ಅನಂತರ ವಜ್ರದಂತನು ತನ್ನ ಮಗಳನ್ನು ಅಳಿಯನೊಡನೆ ಕಳುಹಿಸುವ ಪ್ರಯತ್ನದಿಂದ ಕೂಡಿ, ೫೪. "ಷಟ್ಖಂಡ ಮಂಡಲಪತಿಯೆನಿಸಿಕೊಳ್ಳಲು ನನಗೆ ಕೀರ್ತಿಲಾಂಛನವಾದ ಬೆಳ್ಗೊಡೆಯೆ ಸಾಕು. ಅದನ್ನುಳಿದು ಮತ್ತೆಲ್ಲವನ್ನೂ ತನ್ನಿ" ಎಂದನು. ಹೀಗೆಂದು ವಾರಗಣಿಕೆಯರನ್ನೂ ಜಾತ್ಯಶ್ವಗಳ ತಂಡವನ್ನೂ ಆನೆಗಳ ಹಿಂಡನ್ನೂ ತಾರಹಾರಗಳನ್ನೂ ಮತ್ತಿತರ ವಸ್ತುಗಳನ್ನೂ ವಜ್ರದಂತನು ಪ್ರೀತಿಯಿಂದ ತರಿಸಿದನು. ವ|| ಅಲ್ಲದೆ ತನ್ನ ಶಿಲ್ಪಿಶ್ರೇಷ್ಠರಿಂದ ವಿರಚಿತವೂ ಮಣಿಸುವರ್ಣಾದಿಗಳಿಂದ ರಚಿತವೂ ಆದ ಮೇನೆ, ಪಲ್ಲಕ್ಕಿ-ಮುಂತಾದ ಯಾನಗಳನ್ನೂ ಚಿನ್ನದ ಪಟ್ಟಿಗಳಿಂದ ಕೂಡಿ ಸೊಗಯಿಸುವ ಆನೆಯಂತೆ ದೊಡ್ಡ ದೇಹವನ್ನೂ ಉದ್ದವಾದ

ಯೋಗದೊಳೊಡಂಬಟ್ಟ ಪಿಡಿಗಳುಮಂ ಮುಳಿವ ತಿಳಿವ ಗಂಡರ ಪೆಂಡಿರ ನುಡಿಗಳನೆ ಬಣ್ಣಿಸುವ ಪುರುಳಿಗಳುಮಂ ಅಕಾಂಡತಾಂಡವಾರಂಭಶೌಂಡಶಿಖಂಡಿಮಂಡಳಮುಮಂ ಲೀಲಾಲಸಗಮನಮಂ ಗಜಗಮನೆಯರ್ಗುಪದೇಶಂಗೆಯ್ವ ದೀಹದ ರಾಜಹಂಸೆಗಳುಮಂ ಕುಬ್ಜವಾಮನಬಧಿರ ಮೂಕಕಿರಾತೋನ್ಮತ್ತಜಡಜನಂಗಳುಮಂ ಗಾಯಕವಾದಕನರ್ತಕಕಥಕಪುಣ್ಯಪಾಠಕ ವೈತಾಳಿಕನಿಕರಮುಮಂ ಕೊಟ್ಟು ಪಂಡಿತೆಯುಮನೊಡವೋಪಂತು ಮಾಡಿ ರಾಜಾಧಿರಾಜನಳಿಯನ ಮೊಗಮಂ ನೋಡಿ,

ಬಗೆದುಂ ನಿನ್ನನ್ವವಾಯೋನ್ನತಿಯನಿವಳತಿಸ್ನೇಹಸಂಬಂಧಮಂ ನೀಂ
ಬಗೆದುಂ ಸಂದೆಮ್ಮ ನಣ್ಪಂ ಬಗೆದುಮಱಿಯದೇನಾನುಮೆಂದಾಗಳುಂ ಮೆ
ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದೆರ್ದೆಗಿಡದಂತಾಗೆ ಪಾಲಿಪ್ಪುದಿಂತೀ
ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ ಬೇಡಿದೆಂ ವಜ್ರಜಂಘಾ ೫೫

ವ॥ ಎಂದು ನುಡಿದು ಲಕ್ಷ್ಮೀಮತಿಮಹಾದೇವಿಯುಂ ತಾನುಮಾತ್ಮೀಯ ಪ್ರಿಯಾತ್ಮಜೆಯ ಮೊಗಮನಟ್ಟೆರ್ತು ನೋಡಿ,

ಮನಮಱಿದಂಜಿ ಬೆರ್ಚಿ ಬೆಸಕೆಯ್ ನಿಜವಲ್ಲಭನೇನನೆಂದೊಡಂ
ಕಿನಿಸದಿರೊಂದಿದಗ್ರಮಹಿಷೀಪದದಲ್ಲಿ ಪದಸ್ಥೆಯಾಗು ನಂ
ದನರನಗಣ್ಯಪುಣ್ಯಧನರಂ ಪಡೆಯೆಂದಮರ್ದಪ್ಪಿಕೊಂಡು ತ
ತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ೫೬.

ಕಿವಿಗಳನ್ನೂ ಪಡೆದು ಕುಣಿದಾಡುವ ಹೇಸರಗತ್ತೆಗಳನ್ನೂ ವ್ಯೂಹದಲ್ಲಿ ಪಳಗಿಸಿದ ಮಣಿಮಯಾಲಂಕಾರಗಳಿಂದ ಕೂಡಿದ ಹೆಣ್ಣಾನೆಗಳನ್ನೂ ಕೋಪಗೊಂಡ ಗಂಡಹೆಂಡಿರ ವೃತ್ತಾಂತಗಳನ್ನು ಉಸುರುವ ಗಿಣಿಗಳನ್ನೂ ಹೊತ್ತಲ್ಲದ ಹೊತ್ತಿನಲ್ಲಿ ಕುಣಿಯಲಾರಂಭಿಸುವ ನವಿಲುಗಳ ಗುಂಪನ್ನೂ ಲೀಲಾಲಸಗತಿಯನ್ನು ಗಜಗಮನೆಯರಿಗುಪದೇಶಿಸುವ ರಾಜಹಂಸಗಳನ್ನೂ ಗೂನ, ಕುಳ್ಳ, ಕಿವುಡ, ಮೂಕ, ಕಿರಾತ, ಉನ್ಮತ್ತ ಮತ್ತು ಜಡರನ್ನೂ ಗಾಯಕ, ವಾದಕ, ನರ್ತಕ, ಕಥಕ, ಹೊಗಳುಭಟ, ಪುಣ್ಯಪಾಠಕರನ್ನೂ ಬಳುವಳಿಯಾಗಿತ್ತು, ಪಂಡಿತೆಯನ್ನು ಜೊತೆಯಲ್ಲಿ ಹೋಗುವಂತೆ ಮಾಡಿ ಆ ರಾಜಾಧಿರಾಜನು ಅಳಿಯನ ಮುಖ ನೋಡಿ ಹೀಗೆಂದನು. ೫೫. “ವಜ್ರಜಂಘ! ನಿನ್ನ ವಂಶದ ಘನತೆಯನ್ನೂ ಇವಳ ಸ್ನೇಹಪೂರ್ಣವಾದ ಸಂಬಂಧವನ್ನೂ ಮೊದಲು ಮನಸ್ಸಿನಲ್ಲಿಡು. ಬಳಿಕ ನಮ್ಮ ಪ್ರೀತಿಯನ್ನೂ ಚೆನ್ನಾಗಿ ಪರ್ಯಾಲೋಚಿಸು. ಅರಿಯದೆ ಏನನ್ನಾದರೂ ನುಡಿದರೆ ಅದನ್ನು ಚಿಕ್ಕದೆಂದು ಗಣಿಸಬೇಕು. ನಮ್ಮನ್ನು ನೆನೆದು ಎದೆಗುಂದದಂತೆ ಈ ಏಣಾಕ್ಷಿಯನ್ನು ನೋಡಿಕೋ-ಎಂದು ಬೇಡಿಕೊಳ್ಳುವೆನು” ವ॥ ಎಂದು ಹೇಳಿ ಲಕ್ಷ್ಮೀಮತಿಮಹಾದೇವಿಯೂ ವಜ್ರದಂತನೂ ತಮ್ಮ ಪ್ರೀತಿಪಾತ್ರಳಾದ ಮಗಳ ಮುಖವನ್ನು ಪ್ರೀತಿಯಿಂದ ನೋಡಿ, ೫೬. “ಮಗಳೆ, ನಿನ್ನ ಪತಿಯ ಮನಸ್ಸಿನ ಇಂಗಿತವನ್ನು ಅರಿತುಕೊಂಡು, ಅಂಜಿಕೊಂಡು, ಬೆಚ್ಚಿಕೊಂಡು ಹೇಳಿದಂತೆ ನಡೆದುಕೊ. ಆತನು ಏನೆಂದರೂ ಕೋಪಗೊಳ್ಳದಿರು. ಅಗ್ರಮಹಿಷಿಯ ಸ್ಥಾನದಲ್ಲಿ ಕಾಲೂರಿ ನಿಲ್ಲು. ಅಮಿತಪುಣ್ಯರಾದ ಮಕ್ಕಳನ್ನು ಪಡೆ”

ವ॥ ಆಗಳ್ ವಜ್ರದಂತನನಂತಸಾಮಂತಾಂತಃಪುರಪರಿವಾರಂ ಬೆರಸು ಪೋಗಿ ಮಗಳುಮನಳಿಯನುಮಂ ಕಿಱಿದಂತರಂಬರಂ ಕಳುಪಿ ಮಗುಳ್ವಾಗಳ್,

ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ ಸಮಸ್ತ ವಸ್ತುವಂ
ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇೞ್ವ ಕೈ
ಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ
ಮಿಡಿವ ಬಹುಪ್ರಕಾರಜನಸಂಕಟಮೊಪ್ಪಿದುದಾ ಪ್ರಯಾಣದೊಳ್ ೫೭

ವ॥ ಅಂತು ವಜ್ರದಂತಚಕ್ರವರ್ತಿ ಕಳುಪಿ ಮಗುೞೆ, ವಜ್ರಬಾಹುಮಹೀಭುಜಂ ವಜ್ರಜಂಘನುಮಂ ಶ್ರೀಮತಿಯುಮಂ ಮುಂದಿಟ್ಟು ಕತಿಪಯ ಪ್ರಯಾಣಂಗಳಿಂ

॥ಉಜ್ವಳ॥

ಜಳವಿಹಂಗಮಭೃಂಗನಿನಾದವ್ಯಾಪ್ತ ಸರೋವರಸಂಕುಳಂ
ಗಳೊಳೆ ಪೂತದಿರ್ಮುತ್ತೆಯ ಸುತ್ತಿಂ ಸುತ್ತಿದ ಸೈಕತಭೂತಳಂ
ಗಳೊಳೆ ಮೆಲ್ಲನೆ ಬೀಡುವಿಡುತ್ತುಂ ಪೋಗಿ ಮಹೀಭುಜನೆಯ್ದಿದಂ
ಫಳವಿನಮ್ರಮಹೀಜಸಹಸ್ರಾಘಾಟಮನುತ್ಪಳಖೇಟಮಂ ೫೮

ಎಂದು ಹೇಳಿ ಮಗಳನ್ನು ಗಟ್ಟಿಯಾಗಿ ಅಪ್ಪಿಕೊಂಡರು. ಮಗಳ ಅಗಲಿಕೆಯಿಂದಾಗಿ ಅವಶರಾಗಿ ಕಣ್ಣೀರಿಟ್ಟರು.[1] ವ॥ ಆಗ ವಜ್ರದಂತನು ಸಾಮಂತರಿಂದಲೂ ಅಂತಃಪುರಸ್ತ್ರೀಯರಿಂದಲೂ ಪರಿವಾರವರ್ಗದಿಂದಲೂ ಕೂಡಿ ಮಗಳು ಅಳಿಯಂದಿರನ್ನು ಸ್ವಲ್ಪದೂರ ಕಳುಹಿಸಿಕೊಟ್ಟು ಹಿಂದಿರುವಾಗ ೫೭. ಕೆಲವರು ನಮಸ್ಕರಿಸುವರು, ಮತ್ತೆ ಕೆಲವರು ಅಪ್ಪಿಕೊಳ್ಳುವರು, ಹಲವರು ನಮ್ಮನ್ನು ನೆನೆಯುತ್ತಿರಿ ಎನ್ನುವರು. ತಮ್ಮಲ್ಲಿರುವ ಎಲ್ಲ ವಸ್ತುಗಳನ್ನೂ ಪ್ರೀತಿಯಿಂದ ಸಲ್ಲಿಸುವರು, ಮತ್ತೆ ಕೆಲರು ಹಲವು ವಿಧವಾಗಿ ಹರಸಿ ಅಕ್ಷತೆಗಳನ್ನು ಹಾಕುವರು, ಮತ್ತಿತರರು ಬುದ್ಧಿಹೇಳುವರು. ಇವು ನಿಮ್ಮಲ್ಲಿರಲಿ ಎಂದು ಒಡಂಬಡಿಸುವರು, ಪ್ರೀತಿಪಾತ್ರರ ಅಗಲ್ಕೆಗೆ ಕಣ್ಣೀರ ಸುರಿಸುವರು. ಹೀಗೆ ಅನೇಕ ಪ್ರಕಾರವಾಗಿ ಜನಸಂಕಟವು ತೋರಿಕೊಂಡಿತಾ ಪ್ರಯಾಣ ಕಾಲದಲ್ಲಿ. ವ॥ ವಜ್ರದಂತನು ಮಗಳನ್ನು ಕಳುಹಿಸಿದನು, ವಜ್ರಬಾಹು ರಾಜನು ವಜ್ರಜಂಘನನ್ನೂ ಶ್ರೀಮತಿಯನ್ನೂ ಮುಂದಿಟ್ಟುಕೊಂಡು ಕೆಲವು ಪ್ರಯಾಣಗಳಿಂದ, ೫೮. ಜಲಪಕ್ಷಿ ಮತ್ತು ದುಂಬಿಗಳ ಶಬ್ದಗಳಿಂದ ತುಂಬಿದ ಸರೋವರಗಳ ಬಳಿಯಲ್ಲಿಯೂ ಅರಳಿದ ಮಲ್ಲಿಗೆಗಳಿಂದ ಕೂಡಿದ ಮರಳುಭೂಮಿಗಳ ಮೇಲೂ ಮೆಲ್ಲಮೆಲ್ಲಗೆ ಬೀಡನ್ನು ಬಿಡುತ್ತ, ಹಣ್ಣುಗಳಿಂದ ಬಾಗಿದ ವೃಕ್ಷಗಳಿಂದಲೂ ಸೀಮಾಪ್ರದೇಶದಿಂದಲೂ ಕೂಡಿದ ಉತ್ಪಲಖೇಟವನ್ನು ಮುಟ್ಟಿದನು.

---

1 ೫೫-೫೬ನೆಯ ಪದ್ಯಗಳು ಕಾಳಿದಾಸನ ಅಭಿಜ್ಞಾನ ಶಾಕುಂತಲದ ನಾಲ್ಕನೆಯ ಅಂಕದಲ್ಲಿ ಕಣ್ವಮುನಿಗಳು ಹೇಳುವ ಎರಡು ಶ್ಲೋಕಗಳ ಪ್ರತಿಬಿಂಬಗಳೇ. (೧. ಅಸ್ಮಾನ್ ಸಾಧು ವಿಚಿಂತ್ಯ.....೨ ಶುಶ್ರೂಷಸ್ವಗುರೂನ್...)

ವ|| ಆಗಳ್ ನಿರಂತರ ಸಮುತ್ಥಾಪಿತಂಗಳುಂ, ಕನಕರಜತಮಯಾನೇಕಸ್ಥಾಸಕಾಲಂಕೃತಂಗಳುಂ ವಿಚಿತ್ರಚೀನಾಂಶುಕರುಚಿರಂಗಳುಂ ಪಿನದ್ಧ ವಿವಿಧ ಮಣಿದರ್ಪಣಧ್ವಜಂಗಳುಂ ಆಲಂಬಿತ ಜಾಂಬೂನದಘಂಟಾಜಾಲವಿರಾಜಿತಂಗಳುಂ ಆಮೋದಕುಸುಮದಾಮನಿಕಾಮಕಮನೀಯಂಗಳುಂ ಅಪ್ಪ ತೋರಣಂಗಳನೆ ನುಗುಳುತ್ತುಂ ಕಾಶ್ಮೀರಮೃಗಮದಚ್ಛಟಾಸಿಕ್ತಾಂಗಣಮುಂ ಅಂಗಣ ರಚಿತಮೌಕ್ತಿಕರಂಗಬಲಿಯುಂ ಬಲಿಕುಸುಮನಿಪತದಳಿಕುಳಾಬ್ಧಗೀತಮುಂ ಗೀತಾನುಗತವಾದ್ಯ ಲಯಲಲಿತವಿಳಾಸಿನೀನೃತ್ಯಮುಮಪ್ಪುತ್ಪಳಖೇಟಮಂ ಪುಗುವಾಗಳ್,

ತಳಿರ್ಗಳ ತೊಂಗಲಿಂದಮಲರೋಳಿಗಳಲ್ಲುಗುವಂತೆ ಕೆಂದಳಂ
ಗಳಿನುದಿರ್ದಕ್ಕಿಗಳ್ ನಿಮಿರ್ದ ದಾಂಗುಡಿಯಂತಿರೆ ನೀಳ್ದ ತೋಳ್ಗಳು
ಚ್ಚಳದಳಿಗಾನದಂತೆ ಮಣಿಕಂಕಣನಾದಮೊಱಲ್ದೆ ಸೇಸೆಯಂ
ತಳಿದರನಂಗಜಂಗಮಲತಾಲಲಿತಾಂಗಿಯರಂದು ರಾಗದಿಂ ೫೯

ವ|| ಆ ಪ್ರಸ್ತಾವದೊಳಪೂರ್ವವಧೂವರರಿರ್ವರಂ ಶ್ರೀಮತೀವಜ್ರಜಂಘರಂ ನೋಡಲೆಂದು,

[ಅಳಿಕೋ][1]ತ್ಸಾರಿತಕೇಶಸಂಚಯಮನೀವೀಬಂಧನಾವಿಷ್ಕೃತ
ಸ್ಖಲಿತಂ ವಿಸ್ಮೃತಪಕ್ಷ್ಮಪಾತನಮಪೂರ್ವಾಳೋಕನಾಕೌತುಕಾ
ಕುಳಿತಾಂತಃಕರಣಂ ಸ್ವಕೀಯಭವನವ್ಯಾಪಾರಚಿಂತಾಂತರಂ
ಗಳನೆಲ್ಲಂ ಮಱೆದಿಂತು ಕೂಡೆ ನೆರೆದತ್ತೆತ್ತಂ ಪುರಸ್ತ್ರೀಜನಂ ೬೦

ವ|| ಅವರು ಉತ್ಪಲಖೇಟವನ್ನು ಪ್ರವೇಶಿಸುವಾಗ ಅಲ್ಲಿ ಕನಕರಜತಮಯವಾದ ಲೇಪನಗಳು ತೋರಣಗಳನ್ನು ಸುತ್ತುವರಿದಿದ್ದುವು, ವಿಚಿತ್ರವಾದ ಚೀನಾಂಶುಕಗಳು ಪ್ರಕಾಶಿತವಾಗಿ ಮನೋಹರವಾಗಿದ್ದುವು. ಮಣಿಮಯದರ್ಪಣಗಳ ಧ್ವಜಗಳೂ ಕಟ್ಟಲ್ಪಟ್ಟಿದ್ದುವು. ಚಿನ್ನದ ಘಂಟೆಗಳ ಸಮೂಹವು ವಿರಾಜಿಸುತ್ತಿತ್ತು. ಸುವಾಸನಾಮಯವಾದ ಹೂವಿನ ದಂಡೆಗಳಿಂದ ಕಮನೀಯವಾಗಿ ತೋರಣಗಳು ವಿರಾಜಿಸುತ್ತಿದ್ದುವು. ಕೇಸರಿ ಕಸ್ತೂರಿಗಳ ನೀರಿನಿಂದ ಅಂಗಣಗಳು ಸಿಕ್ತವಾಗಿದ್ದುವು. ಮೌಕ್ತಿಕ ರಂಗವಲ್ಲಿಗಳು ಹಾಕಲ್ಪಟ್ಟಿದ್ದುವು. ಬಲಿಪೂಜೆಗಾಗಿ ಉಪಯುಕ್ತವಾದ ಹೂವುಗಳ ಮೇಲೆ ದುಂಬಿಗಳು ಕುಳಿತು ಹಾಡುತ್ತಿದ್ದುವು. ಗೀತವಾದ್ಯಗಳಿಗೆ ತಕ್ಕಂತೆ ವಿಲಾಸಿನಿಯರ ಕುಣಿತಗಳು ಜರುಗುತ್ತಿದ್ದುವು. ೫೯. ಕಾಮನ ಚಲಿಸುವ ಬಳ್ಳಿಯಂತೆ ಚೆಲುವಾದ ಶರೀರವುಳ್ಳ ಚೆಲುವೆಯರು ಪ್ರೀತಿಯಿಂದ ಮಂಗಳಾಕ್ಷತೆಗಳನ್ನೆರಚಿದರು. ಆಗ ಚಿಗುರುಗಳ ಗೊಂಚಲಿನಿಂದ ಹೂವುಗಳ ಸಮೂಹವು ಉದುರುವಂತೆ ಕೆಂಪಾದ ಕರತಳಗಳಿಂದ ಅಕ್ಷತೆಗಳು ಉದುರಿದವು. ನೀಡಿದ ತೋಳುಗಳು ಮುಂದಕ್ಕೆ ಹಬ್ಬಿದ ಬಳ್ಳಿಯ ಕುಡಿಗಳಂತೆ ಕಂಡುವು. ಕೈಗಳಲ್ಲಿನ ರತ್ನದ ಕಡಗಗಳ ಶಬ್ದವು ಮೇಲಕ್ಕೆ ಹಾರುತ್ತಿರುವ ದುಂಬಿಗಳ ಗಾನದಂತಿದ್ದುವು. ವ|| ಆ ಪ್ರಸಂಗದಲ್ಲಿ ಅಪೂರ್ವ ವಧೂವರರಾದ ಶ್ರೀಮತೀ ವಜ್ರಜಂಘರನ್ನು ಕಾಣಲೆಂದು ೬೦. ಆ ಪುರಸ್ತ್ರೀಯರು ತಮ್ಮ ತಮ್ಮ ಮನೆಗಳಲ್ಲಿನ ಕಾರ್ಯಕಲಾಪಗಳನ್ನೆಲ್ಲ ಮರೆತು ಬಂದು ನಿಂತರು. ಅವರು ತಮ್ಮ ಹಣೆಗಳಿಂದ

---

೧ ಅಳಕೋ (ಅನ್ಯತ್ರ)

ವ|| ಅಂತು ನೆರೆದು,

ದಿವಿಜೇಂದ್ರಾವಾಸದೊಳ್ ಮುನ್ನೊಡನೆ ದಿವಿಜಭೋಗಂಗಳಂ ಭೋಗಿಸಿರ್ದೀ
ಭವದೊಳ್ ಬಂದಿಲ್ಲಿ ಜಾತಿಸ್ಮರರೆನೆ ನೆರೆದೋರ್ವೋರ್ವರೊಳ್ ಮತ್ತಮತ್ಯು
ತ್ಸವದಿಂದಂ ಮರ್ತ್ಯಭೋಗಂಗಳನನುಭವಿಸಲ್ ನೋಂತರಿಂತೀಗಳಿಂತುಂ
ತವರಂತೇಂ ಪುಣ್ಯಮಂ ಪುಂಜಿಸಿದರೊ ಪಿರಿದುಂ ಶ್ರೀಮತೀವಜ್ರಜಂಘರ್ ೭೧

ವ|| ಎಂದತಿಪ್ರಮೋದಪ್ರಮತ್ತಪುರಜನಜನಿತಾನುರಾಗದೊಡನಾ ದಂಪತಿಯುಮೊಡನೆ ರಾಜಮಂದಿರಮಂ ಪೊಕ್ಕು ರಾಜ್ಯಲಕ್ಷ್ಮೀದೇವತೆಯ ಪರಿವಾರದೇವತೆಯರೆನಿಸುವ ವಾರಸೌಂದರಿಯರ ಸೂಸುವ ಪರಮಾನಂದಸ್ಮಿತಸುಧಾಸ್ಯಂದಸಂತತಾರ್ದ್ರಂಗಳಪ್ಪಾರ್ದ್ರಾಕ್ಷತ ಸಿತಕುಸುಮಾಂಜಳಿಗಳ ನಿದಿರ್ಗೊಂಡು, ವಿವಿಧವಿನೋದಂಗಳಂ ತೋಱಿ ಮೆಱೆದ ಪಂಡಿತೆಗೆ[೧] ದಾನಸನ್ಮಾನಾದಿಗಳೊಳ್ ಸಂತೋಷಂಬಡಿಸಿ ಪುಂಡರೀಕಿಣಿಗೆ ಕಳುಪಿ ಕೆಲವುದಿವಸಮಿರ್ಪನ್ನೆಗಂ ಶ್ರೀಮತಿಗೆ ಗರ್ಭಚಿಹ್ನಂಗಳ್ ತೋಱೆ,

ರಮಣೀಯಂ ಪುಷ್ಪಿತಲತೆ
ಕಮನೀಯಮುಮಾಯ್ತು ಕಾಯ್ತುದೆನೆ ಭುವನಮನು
ಕ್ರಮದಿಂ ನಾಲ್ವತ್ತೊಂಬ
ತ್ತಮಳ್ಗಳ್ ಪುಟ್ಟಿದುವು ಗುಣದಮಳ್ ಪುಟ್ಟಿದವೋಲ್ ೭೨

ಹಾರಾಡುತ್ತಿದ್ದ ಕೂದಲುಗಳನ್ನು ಹಿಂದಕ್ಕೆ ಸರಿಸಿಕೊಂಡರು. ಅವರು ನಿರಿಗೆಯ ಗಂಟನ್ನು ಹಾಕಿಕೊಳ್ಳದ್ದರಿಂದ ನಡಗೆಯು ಸ್ಖಲಿಸಿತು. ರೆಪ್ಪೆಯ ಬಡಿತವು ಮರೆತುಹೋಯಿತು! ಅಪೂರ್ವ ದೃಶ್ಯವನ್ನು ನೋಡುವ ತವಕದಿಂದ ಮನಸ್ಸು ಸಂಭ್ರಮಗೊಂಡಿತು. ವ|| ಹಾಗೆ ನೆರೆದು ೭೧. "ಹಿಂದೆ ದಿವಿಜೇಂದ್ರಾವಾಸದಲ್ಲಿ ಬಹುವಿಧವಾಗಿ ಸ್ವರ್ಗಭೋಗಗಳನ್ನು ಸಂತೋಷದಿಂದ ಭೋಗಿಸಿದರು. ಈ ಭವದಲ್ಲಿಯೂ ಅವರು ಜನ್ಮಾಂತರಸ್ಮರಣೆಯನ್ನು ಪಡೆದು ಸೌಖ್ಯಗಳನ್ನೂ ಅತ್ಯುತ್ಸಾಹದಿಂದ ಮರ್ತ್ಯಭೋಗಗಳನ್ನೂ ಅನುಭವಿಸಲು ನೋಂತರು. ಈ ರೀತಿಯಲ್ಲಿ ಶ್ರೀಮತೀವಜ್ರಜಂಘರು ಎಷ್ಟು ತಪಸ್ಸನ್ನು ಮಾಡಿ ಪುಣ್ಯವನ್ನು ಕೂಡಿ ಹಾಕಿದರೋ!" ವ|| ಎಂದು ನುಡಿಯುತ್ತ ಸಂತೋಷಾಧಿಕ್ಯದಿಂದ ಮೈಮರೆತ ಪೌರಜನರ ಪ್ರೇಮದೊಡನೆ ಆ ದಂಪತಿಗಳು ರಾಜಭವನವನ್ನು ಹೊಕ್ಕರು, ರಾಜ್ಯಲಕ್ಷ್ಮೀ ದೇವತೆಗೆ ಪರಿವಾರದೇವತೆಗಳಂತಿರುವ ವಾರಗಣಿಕೆಯರ ಅತ್ಯಾನಂದದ ನಗೆಯೆಂಬ ಅಮೃತದ ಜಿನುಗಿನಿಂದೊದ್ದೆಯಾಗಿ ಬಿಳುಪಾದ ಅಕ್ಷತಾಂಜಲಿಗಳನ್ನೂ ಕುಸುಮಾಂಜಲಿಗಳನ್ನೂ ಪಡೆದರು. (ನರ್ತನಾದಿ) ವಿವಿಧ ವಿನೋದಗಳನ್ನು ತೋರಿಸಿ ಮೆರೆದ ಪಂಡಿತೆಯನ್ನು ದಾನ ಸನ್ಮಾನಗಳಿಂದ ಸಂತೋಷಪಡಿಸಿ ಪುಂಡರೀಕಿಣಿಗೆ ಕಳುಹಿಸಿಕೊಟ್ಟರು. ಕೆಲವು ದಿನಗಳಲ್ಲಿಯೇ ಶ್ರೀಮತಿಗೆ ಗರ್ಭಚಿಹ್ನೆಗಳು ಕಾಣಿಸಿದುವು. ೭೨. ಮೊದಲೇ ರಮಣೀಯವಾಗಿದ್ದ ಪುಷ್ಪಿತಲತೆ (ಶ್ರೀಮತಿ) ಮತ್ತಷ್ಟು ಕಮನೀಯವೂ ಆಯಿತು. ಫಲಿಸಿತು, ಲೋಕವೂ ಫಲವತ್ತಾಯಿತು[1] ಎಂಬಂತೆ ಅನುಕ್ರಮವಾಗಿ ನಲವತ್ತೊಂಬತ್ತು ಅವಳಿ

---

೧ ಎಲ್ಲ ಪ್ರತಿಗಳಲ್ಲಿಯೂ 'ಪಂಡಿತೆಗೆ ವಿವಿಧ ವಿನೋದಂಗಳಂ ತೋಱಿ' ಎಂದು ಪಾಠವಿದೆ. ಪೂ. ಪು. (೮-೪೮)ಕ್ಕೆ ಅನುರೋಧವಾಗಿ ಪಂಡಿತೆಗೆ ಎಂಬುದನ್ನು ಇಲ್ಲಿ ಸ್ಥಳಾಂತರಿಸಲಾಗಿದೆ.

1. 'ಕಾಯ್ತುದು' ಎಂಬುದಕ್ಕೆ ಪುಷ್ಪಿತಲತೆ, ಭುವನ-ಇವೆರಡರಲ್ಲೂ ಮಧ್ಯಮಣಿನ್ಯಾಯದಂತೆ ಅನ್ವಯ ವಿವಕ್ಷಿತವಾಗಿರಬಹುದು (?)

ವ॥ ಅನ್ನೆಗಂ ವಜ್ರಬಾಹುಮಹಾರಾಜಂ ಮತ್ತೊಂದು ದಿವಸಂ,

ಶರದುದಿತೇಂದುಕುಂದಧವಳೋನ್ನತಸೌಧತಳಸ್ಥಿತಂ ಮನೋ
ಹರಗಗನಾಂಬುರಾಶಿನವಫೇನಸಮಾನಮನುದ್ಧಕೂಟಸುಂ
ದರಮನದೊಂದು ನೀರದಮನರ್ತಿಯೆ ನೋಡಿ ಜಿನೇಂದ್ರರುಂದ್ರಮಂ
ದಿರಮಸದೊಂದನೀದೊರೆತೆ ಮಾಡಿಪೆನೆಂದದಱಂದಮಂ ನೃಪಂ ೬೩

ವ॥ ಬರೆಯಲೆಂದು ಬಟ್ಟಗೆವಲಗೆಯಂ ತರಿಸಿ ತಿಟ್ಟಮಿಟ್ಟು ಬರೆವನ್ನೆಗಂ,

ಸಿರಿಯ ಶರೀರದ ರೂಪಿನ
ನರರೈಶ್ವರ್ಯದ ಪೊದಟ್ಟುಗಳ್ ಕರಗುವವೋಲ್
ಶರದಂಬುಧರಂ ಭೋಂಕನೆ
ಕರಗಿದೊಡೆರ್ದೆ ಕರಗಿ ಕೊರಗಿದಂ ಧರಣೀಶಂ ೬೪

ವ॥ ಆಗಳ್,

ಘನದ ಕರಗಿದುದನಱಿದಪ
ಘನದ ವಿಳಾಸಮನದೆಂತು ನಂಬುವುದೊ ಘನಾ
ಘನದಿಂದಮಱಿಯಲಾದುದು
ಘನಾಘನಂ ಜವನ ದಾಟಿಗಿಲ್ಲೆಂಬಿನಿತಂ ೬೫

ಮಕ್ಕಳು (ಒಟ್ಟು ತೊಂಬತ್ತೆಂಟು ಮಕ್ಕಳು) ಗುಣಗಳು ದ್ವಿಗುಣಿಸಿದವೋ ಎಂಬಂತೆ ಹುಟ್ಟಿದರು. ವ॥ ಅಷ್ಟರಲ್ಲಿ ವಜ್ರಬಾಹುಮಹಾರಾಜನು ಮತ್ತೊಂದು ದಿನ ೬೩. ಶರತ್ಕಾಲದ ಚಂದ್ರನಂತೆಯೂ ಕುಂದಪುಷ್ಪದಂತೆಯೂ ಬೆಳ್ಳಗಿರುವ ಉನ್ನತವಾದ ಸೌಧತಲದ ಮೇಲೆ ನಿಂತು, ಮನೋಹರವಾದ ಗಗನಸಮುದ್ರದ ನೊರೆಯಂತೆ ಬೆಳ್ಳಗಿರುವ ಉನ್ನತ ಶಿಖರದಂತೆ ಸುಂದರವಾಗಿದ್ದ ಮೋಡವೊಂದನ್ನು ನೋಡಿದನು. "ಇದರಂತೆ ಉನ್ನತವೂ ಸುಂದರವೂ ಆದ ಜಿನೇಂದ್ರಭವನವನ್ನು ಕಟ್ಟಿಸುವೆನು" ಎಂದುಕೊಂಡನು. ವ॥ ಬರೆಯುವುದಕ್ಕಾಗಿ ಹಲಗೆಯನ್ನು ತರಿಸಿಕೊಂಡು ಅದರ ಮೇಲೆ ಆಕೃತಿಯನ್ನು ಗುರುತಿಸುವಷ್ಟರಲ್ಲಿ, ೬೪. ಕಾಂತಿಯುಕ್ತವಾದ ಶರೀರದ ರೂಪವೂ ಮಾನವರ ಐಶ್ವರ್ಯಾಧಿಕ್ಯವೂ ಕರಗಿಹೋಗುವಂತೆ ಇದ್ದಕ್ಕಿದ್ದಂತೆ ಶರತ್ಕಾಲದ ಮೋಡವು ಕರಗಿಹೋಯಿತು! ಅದರಿಂದ ರಾಜನಿಗೆ ದುಃಖವುಂಟಾಯಿತು. ಮೋಡವು ಕರಗಿದಂತೆಯೇ ಈ ಅಂಗವಿಲಾಸವೂ ಕರಗಿಹೋಗುವುದು ಎಂದು ದುಃಖಿಸಿದನು. ವ॥ ಆಗ ೬೫. ಮೋಡವು ಕರಗಿಹೋದುದನ್ನು ತಿಳಿದ ಮೇಲೆ ಈ ಶರೀರಾವಯವದ ವಿಲಾಸವು ಸ್ಥಿರವೆಂದು ಹೇಗೆ ನಂಬುವುದು? ಘನಾಘನವೆನಿಸಿದ ಮೋಡದಿಂದ, ಯಮನ ದಾಳಿಗೆ 'ಇದು ಘನ (ದೃಢ), ಇದು ಘನವಲ್ಲ (ಅದೃಢ) ಎಂಬ ಭೇದವೇನೂ ಇಲ್ಲವೆಂಬುದಿಷ್ಟನ್ನು ತಿಳಿದುಕೊಂಡಂತಾಯಿತು. (ಘನ = ಮೋಡ, ದೃಢ, ಅಪಘನ = ಅವಯವ; ಅದೃಢ. ಘನಾಘನ = ಮೋಡ; ದೃಢಾದೃಢ).

ಆನ್ನೋಡೆ ನೋಡೆ ನೋಡ ಮ
ನಂ ನೋಡುವವೊಲ್ ಶರದ್ಘನಂ ಕರಗಿದುದೆಂ
ತೆನ್ನನೆನಗೆಂಬೆನೊಂದೊಡ
ಮೆನ್ನಳಿಪಿಂಗೆನ್ನ ತನುವೊಡಂಬಟ್ಟಪುದೇ ೬೬

ಜವನಾಣೆಗಮಾಜ್ಞೆಗಮುಂ
ಟೆ ವಕ್ರಮಾಖಳನ ತುಟಿಪುಮಂ ಸೋಂಕುಮನಾ
ರವಧರಿಪರೆಂತುಮವನುಮ
ನವಯವದೊಳೆ ಗೆಲ್ವ ಬಗೆಯನೀಗಳೆ ಬಗೆವೆಂ ೬೭

ವ॥ ಎಂದಾ ಮಹಾನುಭಾವನಾ ಜವಂಜವವಿಭಾವಕ್ಕೇವಯಿಸಿ ವಜ್ರಜಂಘನೊಳಾತ್ಮೀಯ ಧರಾಭಾರಮಂ ನಿಜೆಸಿ ವಸುಂಧರೆವೆರಸು ಪಲಂಬರರಸಿಯರುಂ ಶ್ರೀಮತೀತನೂಜರ್ ವೀರಬಾಹುಪ್ರಭೃತಿಗಳಪ್ಪ ನಾಲ್ವತ್ತೊಂಭತ್ತಮಳ್ಗಳುಮೈನೂರ್ವರುರ್ವೀಶ್ವರರುಂ ಬೆರಸು ಪರಿಚ್ಛೇದಿಸಿ ಯಮಧರಮುನೀಂದ್ರಪಾದಪದ್ಮೋಪಕಂಠದೊಳ್ ಜಾತರೂಪಧರನಾಗಿ ಮೋಕ್ಷಲಕ್ಷ್ಮೀಕಟಾಕ್ಷೈಕಲಕ್ಷ್ಯನಾದನನ್ನೆಗಮಿತ್ತಂ,

ನಿಮ್ಮನೆ ನೋಡಿ ಮದ್ಗುರುವಿಯೋಗಮನಾಱೆಪೆವೀಗಳೀ ತಪ
ಕ್ಕಮ್ಮ ಮನಂದರಲ್ ನಿಮಗೆ ಸಲ್ಲದೊಡಂಬಡಿಮೆಂದು ಕಾಲ್ಗಳಂ
ತಮ್ಮಯ ನೆತ್ತಿಯೊಳ್ ನಿಜೆಸಿ ಮಾರ್ಕೊಳೆ ಮಾಣದೆ ಪೋದ ಮಕ್ಕಳ
ಣ್ಮೆಂ ಮನದೊಳ್ ಪಳಂಚಿದುದೊ ಚಕ್ರಿತನೂಜೆಯ ವಜ್ರಜಂಘನಾ ೬೮

೬೬. ನಾನು ಕಾಣುತ್ತಿರುವಂತೆಯೇ ನನ್ನ ಮನಸ್ಸರಿಯುವಷ್ಟರಲ್ಲಿಯೆ ಶರತ್ಕಾಲದ ಮೋಡವು ಕರಗಿಹೋಯಿತು. ಶರೀರವನ್ನು ನನ್ನದೆಂದು ಭಾವಿಸಿದರೂ ಶರೀರವು ನನ್ನ ಆಸೆಗೆ ಒಪ್ಪಬಲ್ಲುದೆ? ೬೭. ಯಮನ ಆಣೆಗೂ ಆಜ್ಞೆಗೂ ಎದುರಿಲ್ಲ. ಅವನ ತುಳಿತವನ್ನೂ ಸೋಂಕನ್ನೂ ಯಾರು ತಾನೇ ತಿಳಿಯಲು ಸಾಧ್ಯ? ಆದ್ದರಿಂದ ಅವನನ್ನು ನಿರಾತಂಕವಾಗಿ ಗೆಲ್ಲಲು ಹೇಗೆ ಸಾಧ್ಯ- ಎಂಬುದನ್ನು ಬಗೆಯುವೆನು" ವ॥ ಎಂದು ಆ ಮಹಾನುಭಾವನು ಸಂಸಾರಕ್ಕೆ ಅಸಹ್ಯಪಟ್ಟು ವಜ್ರಜಂಘನಲ್ಲಿ ತನ್ನ ಮೇಲಿನ ಭೂಭಾರವನ್ನು ಇರಿಸಿದನು. ವಸುಂಧರೆಯೊಡನೆಯೂ, ಕೆಲವು ಅರಸಿಯರೊಡನೆಯೂ ಶ್ರೀಮತಿಯ ಮಕ್ಕಳಾದ ವೀರಬಾಹು ಮೊದಲಾದ ನಲವತ್ತೊಂಬತ್ತು ಯಮಳರೊಡನೆಯೂ, ಐದುನೂರು ರಾಜರೊಡನೆಯೂ ಕೂಡಿ ಯಮಧರಮುನೀಂದ್ರರ ಪಾದಸಮೀಪದಲ್ಲಿ ದಿಗಂಬರನಾಗಿ ಮೋಕ್ಷಲಕ್ಷ್ಮಿಯ ಕಟಾಕ್ಷವೊಂದಕ್ಕೆ ಮಾತ್ರ ಪಾತ್ರನಾದನು. ಅಷ್ಟರಲ್ಲಿತ್ತ, ೬೮. "ನಿಮ್ಮ ಮುಖವನ್ನು ನೋಡಿಕೊಂಡು ನಮ್ಮ ಹಿರಿಯರ ಅಗಲಿಕೆಯನ್ನು ಸಹಿಸಿದ್ದೇವೆ. ನೀವೀಗ ತಪಸ್ಸಿಗೆ ಮನ ಕೊಡುವುದು ಸರಿಯಲ್ಲ" ಎಂದು ಹೇಳುತ್ತಾ ಅವರ ಕಾಲುಗಳನ್ನು ತಮ್ಮ ನೆತ್ತಿಯ ಮೇಲಿಟ್ಟುಕೊಂಡು ಶ್ರೀಮತೀ ವಜ್ರಜಂಘರು ಪ್ರಾರ್ಥಿಸಿದರು. ಆದರೆ ಹಿಂದಿರುಗಲು ಬಯಸದೆ ತಪಸ್ಸಿಗೆ ಹೋದ ಮಕ್ಕಳ ಧೀರತೆಯು ಶ್ರೀಮತೀ ವಜ್ರಜಂಘರ ಮನದಲ್ಲಿ ತಾಗಿ ನೆಲಸಿತು. ವ॥ ಆಗ ಇತ್ತ ವಜ್ರದಂತಮಹಾರಾಜನು ಸಮಸ್ತ ರಾಜರಿಂದ ಕೂಡಿ ಆಸ್ಥಾನಸಿಂಹಾಸನದ ಮಧ್ಯದಲ್ಲಿ ಸುಖವಾಗಿ ಕುಳಿತಿರಲು ಒಂದು ದಿನ,

ವ|| ಅನ್ನೆಗಮಿತ್ತ ವಜ್ರದಂತಚಕ್ರವರ್ತಿಯುಂ ಸಕಳಮಕುಟಬದ್ಧಪರಿವೃತನಾಸ್ಥಾನಮಂಟಪ ಮಧ್ಯಸ್ಥಿತಸಿಂಹಾಸನದೊಳೊಂದುದಿವಸಂ ಸುಖಾಸೀನನಾಗಿರೆ,

ವಿಕಸತ್ಕಾಂಚನಪದ್ಮಮಂ ವಿನಯದಿಂ ತಂದೊಂದನುದ್ಯಾನಪಾ
ಳಕನಿತ್ತಲ್ಲಿ ತದಬ್ಜಮಂ ನೃಪವರಂ ವಕ್ತ್ರಾಬ್ಜದೊಳ್ ಸಾರ್ಚೆ ಕಂ
ಪುಕರಂ ಪೊಂಪುಟೆಯೆಂದು ಸೋಲ್ತುಸಿರ್ವಿನಂ ಘ್ರಾಣೇಂದ್ರಿಯೌತ್ಸುಕ್ಯಮಂ
ಪ್ರಕಟಂಮಾಡಿ ನೃಪಂಗಲಂಪುವಡೆದತ್ತಂಭೋಜಗಂಧಾಸವಂ ೬೯

ವ|| ಮತ್ತಮಾ ಲೀಲಾಕಮಳಮನೆ ಲೀಲೆಯಿಂ ತಿರಿಪಿದಾಗಳ್,

ತಿರಿವೆಸಳ್ಗಳ್ ಮುಸುಱುವ ಮಧು
ಕರಂಗಳಂ ಸೋಯೆ ಪರಿವ ಮಕರಂದರಸಂ
ಪರಿವೇಷಂಗೊಂಡಂತಿರೆ
ಕರಮೆಸೆದುದು ನೃಪನ ಕೈಯ ಲೀಲಾಂಭೋಜಂ ೭೦

ದಿನಪಾಸ್ತಸಮಯದೊಳ್ ಮು
ನ್ನಿನ ದಿವಸಂ ತತ್ಪಯೋಜದೊಳ್ ಮಡಿದಳಿ ತೊ
ಟ್ಟನೆ ಬೀೞೆ ತೂಗಿ ತಲೆಯಂ
ಜನನಾಥಂ ವಿಸ್ಮಯಸ್ಮಿತಂಬೆರಸಿನಿಸುಂ ೭೧

ಈ ಮಧುಪಂ ದಳಿತಾಂಭೋ
ಜಾಮೋದಾಸಕ್ತನಕ್ಕಟಾ ಮಡಿದುದು ಪೇ
ಟೇ ಮನುಜರಖಿಳಕರಣ
ಗ್ರಾಮುಮನೊಂದೊಡಲೊಳೆಂತೊಡಂಬಡಿಸಿದರೋ ೭೨

೬೯. ಬಿರಿದ ಸುವರ್ಣಪದ್ಮವೊಂದನ್ನು ಉದ್ಯಾನಪಾಲಕನು ವಿನಯದಿಂದ ರಾಜನ ಕೈಗೆ ತಂದಿತ್ತನು. ಅವನು ಅದನ್ನು ತನ್ನ ಮುಖಕಮಲದ ಬಳಿಗೆ ಕೊಂಡೊಯ್ದು ಪರಿಮಳದ ಆಧಿಕ್ಯದಿಂದಾಗಿ ಅದಕ್ಕೆ ಸೋತು ಉಸಿರುಬಿಟ್ಟನು. ಅದು ಘ್ರಾಣೇಂದ್ರಿಯೌತ್ಸುಕ್ಯವನ್ನುಂಟು ಮಾಡಿತು. ಹೀಗೆ ಕಮಲಗಂಧರಸವು ರಾಜನಿಗೆ ಆನಂದವನ್ನು ತಂದಿತು. ವ|| ಮತ್ತೆ ಆ ಕ್ರೀಡಾಕಮಲವನ್ನೇ ಲೀಲೆಯಿಂದ ತಿರುಗಿಸಿದಾಗ ೭೦. ವಜ್ರದಂತನ ಕೈಯಲ್ಲಿರುವ ಲೀಲಾಕಮಲವು ಅಂದವಾಗೆಸೆಯಿತು. ಮಾಧುರ್ಯಯುಕ್ತವಾದ ತಿರುಗಿಸುತ್ತಿದ್ದ ಕಮಲದ ದಳಗಳು ಮುತ್ತುತ್ತಿದ್ದ ದುಂಬಿಗಳನ್ನು ಅಟ್ಟಿದುವು. ಆಗ ಸುರಿದ ಮಕರಂದದ ರಸದಿಂದ ರಾಜನ ಕೈಯಲ್ಲಿದ್ದ ಕ್ರೀಡಾಕಮಲವು ಪರಿವೇಷಗೊಂಡಂತೆ ಪ್ರಕಾಶಿಸಿತು. ೭೧. ಸೂರ್ಯಾಸ್ತಸಮಯದಲ್ಲಿ ಹಿಂದಿನ ದಿನವೇ ಸತ್ತಿದ್ದ ದುಂಬಿಯೊಂದು ಆ ಕಮಲದಿಂದ ಸಿಡಿಯಿತು. ಆಗ ರಾಜನು ತಲೆದೂಗಿ ವಿಸ್ಮಿತನಾಗಿ ನಕ್ಕನು. ೭೨. ಆತನು "ಈ ದುಂಬಿಯು ಅರಳಿದ ಕಮಲದ ಪರಿಮಳವೊಂದರಿಂದಲೇ ಆಕೃಷ್ಟವಾಗಿ ತನ್ನ ಪ್ರಾಣಗಳನ್ನು ಕಳೆದುಕೊಂಡಿತು. ಮಾನವರು ಒಂದೇ ದೇಹದಲ್ಲಿ ಎಲ್ಲ ಇಂದ್ರಿಯ

ಒಂದೊಂದೆ ರಸದ ಸೋಲಮ
ದೊಂದೊಂದನೆ ಕೊಲ್ಗುಮೋವೊ ಲಂಪಳರಪ್ಪೆ
ಮ್ಮಂದಿಗರಂ ಬಗೆವಂದದೆ
ಕೊಂದಿಕ್ಕವೆ ಸಕಳವಿಷಯವಿಷಮವಿಷಂಗಳ್ ೭೩

ಪಾಕದೊಳತಿವಿಷಮಂ ಕಿಂ
ಪಾಕಫಳಪ್ರತಿಮಮಖಿಳವಿಷಯಸುಖಂ ಪೇ
ಟೀಕಳಿಪಿ ಸುಟಿವೆನಱಿಯು
ತ್ತೇಕೆ ವಿಮೋಹಿಸುವೆನೇಕೆ ಬರ್ದುಕುವೆನಿದಱೊಳ್ ೭೪

ತೃಣಶಿಖರಾಧ್ಯುಷಿತಾಂಭಃ
ಕಣಸಂಚಳಮಮರಚಾಪಚಪಳಂ ವಿದ್ಯುತ್
ಕ್ಷಣಿಕಂ ನಿಟ್ಟಿಯೆ ತನುಭೃ
ದ್ಗಣಯೌವನರೂಪವಿಭವಭೋಗಾಭೋಗಂ ೭೫

ತೆಱಪನೆ ಪಾರ್ದಿಪಂ ಮಾ
ಯ್ದುಱಗುಲಿ ಜವನದಱೆನಿನಿಸು ಪೊೞ್ತುಂ ತನ್ನಂ
ಮಱೆದಿರಲಕ್ಕುಮೆ ತಳರದೆ
ತಱಸಲದಿನ್ನೆಱದುಮಱೆದುಮಿರ್ಪನೆ ಚದುರಂ ೭೬

ಕಿಱೆಯಂ ಮುತ್ತಂ ಧನದಂ
ಬಱುವಂ ತೊಱೆದಂ ಗೃಹಸ್ಥನೆನ್ನದೆ ಮುಂಬ
ಟ್ಟಱಸಿ ಕೊಲುತಿರ್ಪ ಜವನೆಂ
ಬಱೆಕೆಯ ಪಗೆವಂಗದೆಂತು ಪಂಗಿಗನಪ್ಪೆಂ ೭೭

ಸಮೂಪವನ್ನೂ ಹೇಗೆ ಅಳವಡಿಸಿಕೊಂಡಿರುವರೊ ತಿಳಿಯದು! ೭೩. ಒಂದೊಂದು ವಿಷಯರಸದ ಮೇಲಿನ ವ್ಯಾಮೋಹವೂ ಒಂದೊಂದು ಪ್ರಾಣಿಯನ್ನು ಕೊಲ್ಲುವುದು. ವಿಷಯಲಂಪಟರಾದ ನಮ್ಮಂಥವರನ್ನು ಇಷ್ಟ ಬಂದಾಗ ಸ್ರಕ್‌ಚಂದನವನಿತಾದಿ ವಿಷಮವಿಷಗಳು ಕೊಲ್ಲವೇ? ೭೪. ಕಿಂಪಾಕವೆಂಬ ವಿಷದ ಹಣ್ಣಿಗೆಣೆಯಾದ ವಿಷಯಸುಖವು ಪರಿಣಾಮದಲ್ಲಿ ವಿಷಮ. ಅದಕ್ಕೆ ಆಶಿಸಿ ಅದರ ಹಿಂದೇಕೆ ಸುಳಿಯಲಿ? ತಿಳಿದೂ ಏಕೆ ವಿಮೋಹಗೊಳ್ಳಲಿ? ಏಕಿದರಲ್ಲಿ ಮುಳುಗಿ ಬದುಕಲಿ? ೭೫. ಯೋಚಿಸಲು ಶರೀರಗಳ ಗುಣ, ಯೌವನ, ರೂಪ, ಐಶ್ವರ್ಯ ಮತ್ತು ಭೋಗವಿಸ್ತಾರಗಳು ಹುಲ್ಲಿನ ತುದಿಯಲ್ಲಿರುವ ನೀರಿನ ಹನಿಗಳಂತೆ ಚಂಚಲವಾದುವು, ಕಾಮನಬಿಲ್ಲಿನಂತೆ ಚಪಲವಾದುವು, ಮಿಂಚಿನಂತೆ ಕ್ಷಣಿಕವಾದುವು, ಅವು ನಿಷ್ಠೆಯಿಂದಿರುವುವೆ? ೭೬. ಕೊಬ್ಬಿದ ಬೇಟೆಗಾರನಾದ ಯಮನು ಕಾಲವನ್ನು ನಿರೀಕ್ಷಿಸುತ್ತಾ ಕುಳಿತಿರುವನು. ಆದ್ದರಿಂದ ಇಷ್ಟುಕಾಲ ತನ್ನನ್ನು ತಾನು ಮರೆತಿರಬಹುದೇ? ಚತುರನಾದವನು ಇದನ್ನು ಚೆನ್ನಾಗಿ ತಿಳಿದಿದ್ದರೂ ಹೆದರದೆ ವಿಷಯಸುಖಗಳನ್ನು ತೊರೆದುಹೋಗಲು ನಿಶ್ಚಯಿಸದೆ ಇರುವನೆ? ೭೭. ಕಿರಿಯ, ಮುದುಕ, ಹಣವಂತ, ಬಡವ, ಸಂನ್ಯಾಸಿ, ಗೃಹಸ್ಥ ಎನ್ನದೆ ಎಲ್ಲರನ್ನೂ ಹುಡುಕಿ ಹುಡುಕಿ ಕೊಲ್ಲುವನು ಯಮ. ಗೊತ್ತಿರುವ ವೈರಿಗೆ ನಾನೇಕೆ ಹಂಗಿಗನಾಗಬೇಕು?

ನಿಧಿ ರತ್ನವ್ರಾತಮಂತಃಪುರಮೆಸೆವ ಷಡಂಗಂ ಬಲಂ ಹೈಮಶೈಲಾ
ವಧಿಷಟ್ಖಂಡಂ ಮಹೀಮಂಡಳಮನಿಧನಮಲ್ತೆಮ್ಮನೀಡಾಡಿ ಸಲ್ಗುಂ
ನಿಧನಕ್ಕಂತಪ್ಪುವಂ ಮುಂ ಬಿಸುಡುವುದೆ ಚದುರ್ ನೆಟ್ಟನೆಂದಲ್ತೆ ಮುಂ ಪೋ
ದ ಧರಾಧೀಶರ್ ತಪೋಮಾರ್ಗದೊಳೆಸಗಿದರಾ ಮಾರ್ಗಮಿನ್ನೆಮ್ಮ ಮಾರ್ಗಂ ೭೮

ವ।। ಎಂದು ನಿರ್ವಾಣಸಾಮ್ರಾಜ್ಯಮನೆ ಬಯಸಿ ಸಕಳಸಾಮ್ರಾಜ್ಯಮಂ ರಾಜಾಧಿರಾಜಂ ನಿಜಾಗ್ರತನೂಜಂಗಮಿತತೇಜಂಗೆ ಕೊಟ್ಟಾಗಳಾತನಿಂತೆಂದಂ

ಇನಿತಂ ನಿಮ್ಮ ಮನಕ್ಕೆ ಕೊಕ್ಕರಿಕೆಯಂ ಮಾಡಿರ್ದ ಸಾಮ್ರಾಜ್ಯಮೆಂ
ತೆನಗೊಳ್ಪಂ ಪಡೆದಪ್ಪುದಿಂತೆನಗಿದಾಚಂದ್ರಾರ್ಕಮೇ ದೇವ ನೀ
ಮೆನಗೀಗಳ್ ದಯೆಗೆಯ್ದೊಡಿಂತು ಬೆಸಸಲ್ ಸಾಲ್ಗಿಂದೆ ಪೋಪೆಂ ತಪೋ
ವನಕೆನ್ನಟ್ಟಿಯೆ ಪೂರ್ದದಿರ್ಕೆ ಭವದಾಜ್ಞಾಲಂಘನಂ ಭೂಪತೀ ೭೯

ವ।। ಎಂಬುದುಂ ವಜ್ರದಂತಚಕ್ರವರ್ತಿ,

ನೀನೆಮ್ಮಂ ಮೀಱದೆ ರಾ
ಜ್ಯಾನುಷ್ಠಾನಮನೊಡಂಬಡೀಗಳ್ ನಿಜಸಂ
ತಾನಕ್ಕೆ ಮಗಂಬಡೆಯೆ ತ
ಪೋನಿಯಮಂ ಮಗನೆ ಕಡೆಯೊಳಿರ್ದಪುದಲ್ತೇ ೮೦

ವ।। ಎಂದಾಗಳಮಿತತೇಜಂ ದಂತಾಂಶುಧೌತಕಪೋಳಫಳಕನಾಗಿ,

೭೮. ನಿಧಿಗಳೂ ರತ್ನಸಮೂಹಗಳೂ ಅಂತಃಪುರವೂ ಷಡಂಗಯುಕ್ತವಾದ ಸೈನ್ಯವೂ ಹಿಮವತ್ಪರ್ವತದವರೆಗೆ ಹರಡಿರುವ ಷಟ್ಖಂಡಮಂಡಿತವಾದ ಭೂಮಂಡಲವೂ ಅಶಾಶ್ವತವಾದುವು. ಅವು ತಪ್ಪದೆ ನಮ್ಮನ್ನು ಸಾವಿಗೆ ಈಡುಮಾಡುವುವು. ಮೊದಲವನ್ನು ಬಿಸುಡುವುದು ಬುದ್ಧಿವಂತನ ಕಾರ್ಯ. ಆದ್ದರಿಂದಲೇ ಅಲ್ಲವೇ ಹಿಂದಿನ ರಾಜರು ತಪೋಮಾರ್ಗವನ್ನು ಹಿಡಿದಿದ್ದು. ಇನ್ನು ನಮಗೂ ಅದೇ ಮಾರ್ಗವು ಸರಿಯಾದುದು" ವ।। ಎಂದು ಮೋಕ್ಷಸಾಮ್ರಾಜ್ಯವನ್ನು ಅಪೇಕ್ಷಿಸಿ ತನ್ನೆಲ್ಲ ರಾಜ್ಯವನ್ನು ಮೊದಲಮಗನಾದ ಅಮಿತತೇಜನಿಗೆ ಕೊಡಲಾಗಿ ಅಮಿತತೇಜನು ಹೀಗೆಂದನು: ೭೯. "ತಂದೆಯೆ, ತಮ್ಮ ಮನಸ್ಸಿಗೇ ಇಷ್ಟು ಜುಗುಪ್ಸೆಯನ್ನು ತಂದ ಈ ಸಾಮ್ರಾಜ್ಯವು ನನಗೆ ಒಳಿತನ್ನು ಮಾಡಬಲ್ಲುದೇ? ಇದು ನನಗೆ ಆಚಂದ್ರಾರ್ಕವಾಗಿ ಉಳಿಯಬಲ್ಲುದೇ? ನೀವು ನನ್ನನ್ನು ತಪೋಮಾರ್ಗಕ್ಕೆ ತೆರಳೆಂದರೆ ನಾನು ಇಂದೇ ಸಂತೋಷದಿಂದ ಹೋಗುವೆನು. ತಮ್ಮ ಆಜ್ಞೋಲ್ಲಂಘನೆಯೆಂಬ ದೋಷವು ನನಗೆ ಘಟಿಸದಿರಲಿ" ಎಂದನು, ವ।। ಆಗ ವಜ್ರದಂತ ಚಕ್ರವರ್ತಿಯು, ೮೦. "ನೀನು ನಮ್ಮ ಮಾತನ್ನು ಮೀರದೆ ರಾಜ್ಯಭಾರವನ್ನು ಮಾಡು. ನಿನಗೆ ಮಗನು ಹುಟ್ಟಿ ಅವನು ಬೆಳೆಯಲಿ. ಮಗನೇ! ತಪೋನುಷ್ಠಾನಕ್ಕಾಗಿ ಕಾಡಿಗೆ ಹೊರಡುವುದು ಕಡೆಯಲ್ಲಿದ್ದೇ ಇದೆ" ವ।। ಎಂದನು. ಆಗ ಅಮಿತ ತೇಜನ ಕಪೋಲಫಲಕವು ಹಲ್ಲುಗಳ ಕಾಂತಿಯಿಂದ ಬೆಳ್ಳಗಾಯಿತು. (ನಕ್ಕನು).

ಪಿರಿದೊಂದಾಗ್ರಹದಿಂದಮಾದ ದಯೆಯಿಂದಂ ದೇವರೆನ್ನಂ ಧರಾ
ಭರದೊಳ್ ತಂದು ತೊಡರ್ಚೆ ಪೂಣ್ದು ತಲೆಗೋದಿರ್ದುಂ ಬೞಿಕ್ಕಂತುಮೀ
ಧರಣೀಭಾರಮನಾಂ ಬಿಸುಟ್ಟೊಡದು ಛೀಃ ಲೋಕಕ್ಕೆ ಖಾತ್ವಾಸಮೀ
ಕರಣಂ ಭೌತಿಕಮೋದಕವ್ಯತಿಕರಂ ತಾನೆಂಬುದಂ ಮಾಡದೇ ೮೧

ವ॥ ಎಂಬುದುಮಾತನ ಪರಿಚ್ಛೇದಮನಱಿದು ತತ್ಸಹೋದರರ್ಸಾಸಿರ್ವರೋರೊರ್ವರು ಮೊಲ್ಲದಿರ್ದೊಡಮಿತತೇಜಂಗಮನುಂದರಿಗಂ ಪುಟ್ಟಿದ ಪುಂಡರೀಕನೆಂಬ ಬಾಳಕನಂ ಸಂತಾನ ಪಾಲನಾರ್ಥಂ ನಿಱಿಸಿ ಷಷ್ಟಿಸಹಸ್ರಾಂಗನಾಜನಮುಂ ವಿಂಶತಿಸಹಸ್ರಮಕುಟಬದ್ಧರುಂ ಸಹಸ್ರಪ್ರಮಿತನಿಜತನೂಜರುಂ ಪಂಡಿತೆಯೆಂಬ ಪೆಸರನಾ ಪ್ರಸ್ತಾವದೊಳ್ ಸನ್ನಿಮಾಡಿದ ಪಂಡಿತೆಯುಂ ಬೆರಸು ಯಶೋಧರಮುನೀಂದ್ರ ಪಾದಪದ್ಮೋ[1]ಪಾಂತದೊಳ್ ವಜ್ರದಂತಮಹಾರಾಜಾಧಿರಾಜಂ ಅಂಬರಾಂಬರವಿಳಾಸದಿಂ ತ್ರಿಲೋಕಶಿಖರಿಶೇಖರನಾದಂ; ಲಕ್ಷ್ಮೀಮತೀಮಹಾದೇವಿಯುಮನುಂದರಿ ವೆರಸು ಚಕ್ರವಲ್ಲಭವ್ಯಪಾಯದೊಳ್ ಪುಂಡರೀಕನಂ ಕೈಕೊಂಡಿರೆ,

ತನುವಿಧುವೊಂದನುಳ್ಳ ನಭದೊಳ್ ಶಿಶುಕೇಸರಿಯೊಂದನುಳ್ಳ ಕಾ
ನನದೊಳದೊಂದು ಕುಟ್ಮಳಮನುಳ್ಳ ಸರೋವರದೊಳ್ ಪೊಣರ್ಚೆ ನೆ
ಟ್ಟನೆ ದೊರೆಯಾದುದೀ ಕುಲಮುಮೀ ಶಿಶುವೊರ್ಬನಿನೆಂಬಿನಂ ಜಗ
ಜ್ಜನಮತಿಮುಗ್ಧಬಾಳನರ ಪಾಳಕಮಾದುದು ಚಕ್ರಭೃತ್ಕುಲಂ ೮೨

೮೧. ಅವನು "ಒತ್ತಾಯದಿಂದಲೂ ಮಗನೆಂಬ ವ್ಯಾಮೋಹದಿಂದಲೂ ಈ ಭೂಭಾರವನ್ನು ನನ್ನ ತಲೆಯ ಮೇಲೆ ಹೊರಿಸಿ ನನ್ನ ತಲೆಯನ್ನು ಕೊಯ್ದಿರಿ. ಎಂದಾದರೊಂದು ದಿನ ಬಿಡಲೇಬೇಕಾದ ಭೌತಿಕಸುಖಾನುಭವ ಸಂಬಂಧವು 'ಅಗೆದು ಮುಚ್ಚುವುದೆಂ'ಬ ಗಾದೆಗೆಣೆಯಾಗದೆ?" (ಗುಂಡಿಯನ್ನು ಅಗೆಯುವುದೇಕೆ? ಅದನ್ನು ಸರಿಪಡಿಸಲು ಗುಂಡಿಯನ್ನು ಮುಚ್ಚುವುದೇಕೆ? ಅಂತೆಯೇ ಭೌತಿಕಸುಖಾನುಭವಕ್ಕಾಗಿ ತೊಡಗಬೇಕೇಕೆ? ಮತ್ತೆ ಅದನ್ನು ಬಿಡಲಾಶಿಸುವುದೇಕೆ?) ವ॥ ಎಂದನು. ಅಮಿತತೇಜನ ಮನೋನಿಶ್ಚಯವನ್ನು ತಿಳಿದು, ಅವನ ಸಾವಿರ ಅಣ್ಣತಮ್ಮಂದಿರಲೊಬ್ಬರೂ ರಾಜ್ಯಭಾರವನ್ನು ವಹಿಸಿಕೊಳ್ಳಲೊಪ್ಪಲಿಲ್ಲ. ಆಗ ಅಮಿತತೇಜನಿಗೂ ಅನುಂದರಿಗೂ ಹುಟ್ಟಿದ ಪುಂಡರೀಕನೆಂಬ ಬಾಲಕನನ್ನು ಸಂತಾನಪಾಲನೆಗಾಗಿ ನಿಯಮಿಸಿ ಅರವತ್ತುಸಾವಿರ ಸ್ತ್ರೀಜನರೊಡನೆಯೂ ಇಪ್ಪತ್ತುಸಾವಿರ ಸಾಮಂತರೊಡನೆಯೂ ಸಾವಿರ ಮಕ್ಕಳೊಡನೆಯೂ ಪಂಡಿತಳೆಂಬ ಹೆಸರನ್ನು ಆ ಸಂದರ್ಭದಲ್ಲಿ ಅನ್ವರ್ಥಮಾಡಿಕೊಂಡ ಪಂಡಿತೆಯೊಡನೆಯೂ ಹೋಗಿ ಯಶೋಧರಮುನೀಂದ್ರನ ಪಾದಕಮಲದ ಸಮೀಪದಲ್ಲಿ ವಜ್ರದಂತಮಹಾರಾಜನು ದಿಗಂಬರದೀಕ್ಷೆಯನ್ನು ವಹಿಸಿ, ತ್ರಿಲೋಕಪರ್ವತಕ್ಕೆ ಶೇಖರನಾದನು. ಲಕ್ಷ್ಮೀಮತಿಮಹಾದೇವಿಯು ಅನುಂದರಿಯೊಡಗೂಡಿ ಮಗನಾದ ಪುಂಡರೀಕನನ್ನು ಆಶ್ರಯಿಸಿಕೊಂಡಿದ್ದಳು. ೮೨. "ಶಿಶುವೊಂದರಿಂದ ಕೂಡಿದ ವಜ್ರದಂತನ ಕುಲವು, ಕೃಶನಾದ ಚಂದ್ರನೊಬ್ಬನನ್ನೇ ಪಡೆದ ಆಕಾಶಕ್ಕೂ ಸಿಂಹದ ಮರಿಯೊಂದನ್ನೇ

---

೧ ಪೂ. ಪು. (೮.೮೪)ದ ಪ್ರಕಾರ ಯಶೋಧರಶಿಷ್ಯ ಗಣಧರರ ಪಾದಪದ್ಮ.

**ವ॥ ಅಂತದಂ ಕಂಡು ಕಪ್ಪಮೀಯದೆ ಚಪ್ಪರಿಸುವ ಮಂಡಳಿಕರುಮಂ ಅಡುಂಗದಾಟವಿಕರುಮಂ ಒತ್ತಿಬರ್ಪ ಪಾರ್ಷ್ಣಿಗ್ರಾಹಕರುಮಂ ಅಱಿದು ಲಕ್ಷ್ಮೀಮತಿಮಹಾದೇವಿ ವಜ್ರಜಂಘಂಗೆ ಬೞಿಯನಟ್ಟುವ ಕಜ್ಜಮಂ ಮಂತ್ರಿವರ್ಗದೊಳಾಳೋಚಿಸಿ,**

**ವನಜಾನೀಕಮೆ ಪಳ್ಳಿವೋಪ ತೆಱದಿಂ ಕಿಬ್ಬಿರ್ದು ಭೂಪಂ ತಪೋ**
**ವನಮಂ ಪುತ್ರಕಳತ್ರಮಿತ್ರಸಹಿತಂ ಪೊಕ್ಕಂ ಕರಂ ಬಾಳನೊ**
**ರ್ಬನಿವಂ ರಾಜ್ಯದೊಳಿರ್ದನಾನಬಲೆಯೆಂ ಕಾದಿರ್ದನೀಮಾತೊ ತ**
**ನ್ನನೆ ನಚ್ಚಿರ್ದುದು ಕಾಗುಮೆಂಬ ಬಗೆಯಿಂದಿಂತೀ ಮಹೀಮಂಡಲಂ ೮೩**

**ಜಳಧಿತರಂಗತಾಟಿತ ಧರಾತಳಭಾರಮಿದೆತ್ತ ಬಾಳನೆ**
**ತ್ತಳವಿನಿತುಂಟೆ ತಾಳ್ದಲಿದನೊಟ್ಟಜೆಯಿಂ ಕೊಳಲೆಂದು ವೈರಿಗಳ್**
**ತಳರ್ದಪರೆಂತು ತನ್ನ ಬಲಮಿಲ್ಲದೆ ತಾಳ್ದುವೆನೊಪ್ಪುಗೊಳ್ಗೆ ತ**
**ನ್ನಳಿಯನನೆಯ್ದೆ ಪಾಲಿಸುಗೆ ಬಂದಿದನೀಗಳನಾಥಯೂಥಮಂ ೮೪**

**ವ॥ ಎಂದು ಬರೆದು ರತ್ನಕರಂಡಕದೊಳಿಟ್ಟು ಮುಚ್ಚಿ ಮುದ್ರಿಸಿದೋಲೆಯುಮನಪೂರ್ವೋಪಾಯನಮುಮಂ ಪರಿಣತಾಶೇಷಶಾಸ್ತ್ರಾರ್ಥರುಮುನ್ನತಾನ್ವಯರುಂ ಗಂಧರ್ವಪುರಾಧಿನಾಯಕರುಮಪ್ಪ ಚಿಂತಾಗತಿಯುಂ ಮನೋಗತಿಯುಮೆಂಬ ವಿದ್ಯಾಧರರ ಕಯ್ಯೊಳ್ಕೊಟ್ಟೆಮ್ಮಳಿಯನಂ ತಡೆಯದೆ ಮುಂದಿಟ್ಟೊಡಗೊಂಡು ಬನ್ನಿಮೆಂದಟ್ಟಿದೊಡಾಗಳಾ ಗಗನಚರರ್ ವಿಮಾನಾರೂಢರತಿತ್ವರಿತಗಮನದಿಂ ಪೋಗೆವೋಗೆ,**

ಹೊಂದಿದ ಕಾಡಿಗೂ, ಕಮಲದ ಮೊಗ್ಗೊಂದನ್ನೇ ಪಡೆದ ಸರೋವರಕ್ಕೂ ಸದೃಶವಾಯಿತು" ಎಂದು ಜನರು ಹೇಳುವಂತೆ ಆ ಚಕ್ರವರ್ತಿಯ ಕುಲವು ಮುಗ್ಧನಾದ ಬಾಲನನ್ನು ರಾಜನನ್ನಾಗಿ ಪಡೆಯಿತು. ವ॥ ಅದನ್ನು ನೋಡಿ ಕಪ್ಪವನ್ನು ಕೊಡದೆ ಚಪ್ಪರಿಸುತ್ತಿದ್ದ ಮಾಂಡಲಿಕರನ್ನೂ ಕೊಬ್ಬಿನಿಂದ ಮೆರೆಯುತ್ತಿದ್ದ ಆಟವಿಕರನ್ನೂ ಗಡಿಪ್ರದೇಶವನ್ನು ಒತ್ತರಿಸಿಕೊಂಡು ಬರುತ್ತಿದ್ದ ಪಾರ್ಷ್ಣಿಗ್ರಾಹಕರನ್ನೂ ತಿಳಿದು ಲಕ್ಷ್ಮೀಮತಿಮಹಾದೇವಿಯು ಮಂತ್ರಿವರ್ಗದೊಡನೆ ಸಮಾಲೋಚಿಸಿ ವಜ್ರಜಂಘನಿಗೆ ಪತ್ರವನ್ನು ಬರೆದು ಕಳುಹಿಸಿದಳು. ೮೩. ಕಮಲಸಮೂಹವೇ ವಲಸೆ ಹೋಗುವ ಹಾಗೆ ವಜ್ರದಂತನು ತಪೋವನವನ್ನು ಪುತ್ರ ಕಲತ್ರ ಮಿತ್ರರೊಡನೆ ಹೊಕ್ಕನು. ಕೇವಲ ಬಾಲಕನೊಬ್ಬನೇ ಈಗ ರಾಜ್ಯದಲ್ಲಿ ನೆಲೆಸಿದ್ದಾನೆ. ನಾನು ಅಬಲೆಯಾದ ಹೆಂಗಸು. ಆದರೂ ಇವಳೇ ನಮ್ಮೆಲ್ಲರನ್ನೂ ರಕ್ಷಿಸುವಳೆಂದು ನನ್ನ ಮೇಲೆ ಭರವಸೆಯಿಟ್ಟಿದೆ ಮಹೀಮಂಡಲ. ೮೪. ಸಮುದ್ರದ ಅಲೆಗಳಿಂದ ಬಡಿಯಲ್ಪಡುತ್ತಿರುವ ಭೂತಲದ ಭಾರವೆಲ್ಲಿ? ಬಾಲನೆಲ್ಲಿ? ಈ ಭಾರವನ್ನು ಹೊರಲು ಅವನಿಗೆ ಶಕ್ತಿಯೆಲ್ಲಿಂದ ಬರಬೇಕು? ಗುಂಪುಕಟ್ಟಿಕೊಂಡು ರಾಜ್ಯವನ್ನು ಹೊಡೆಯಬೇಕೆಂದು ಶತ್ರುಗಳು ಕಾದಿರುವರು. ಇದನ್ನು ಹೊರಲು ನನಗೆ ಶಕ್ತಿಯಿಲ್ಲ. ನನ್ನ ಅಳಿಯನು ಈ ರಾಜ್ಯವನ್ನು ಒಪ್ಪಿಸಿಕೊಳ್ಳಲಿ. ಅವನಿಲ್ಲಿಗೆ ಬಂದು ಈ ಅನಾಥರ ಗುಂಪನ್ನು ಚೆನ್ನಾಗಿ ರಕ್ಷಿಸಲಿ. ವ॥ ಎಂದು ಬರೆದು ಅದನ್ನು ರತ್ನದ ಭರಣಿಯಲ್ಲಿಟ್ಟು ಮುಚ್ಚಿ ಮುದ್ರೆಹಾಕಿ, ಉಪಾಯನವನ್ನು ಕೊಟ್ಟು, ಸಮಸ್ತ ಶಾಸ್ತ್ರಾರ್ಥವೇತ್ತರೂ

ಗಾಳಿಯನೆಡೆಗಲಿಸಿದುದು ವಿ
ನೀಳಘನಾಘನಮನಳಱಿ ಪಱಿದುದು ಮುಕ್ತಾ
ಜಾಳ ಪರಿಲಂಬಿಲೋಲದು
ಕೂಳಪತಾಕಾವಿರಾಜಮಾನವಿಮಾನಂ ೮೫

ಪಾಱುವ ವಿಮಾನದೊಂದ
ಳ್ಕೀಱಿಂ ಪಱಿದುಗುವ ಮುಗಿಲ ನೀರ್ಗಳ ಪಲವುಂ
ಬೀಱುಗಳೊಳೆಳಸಿ ಖಚರರ
ನಾಱಿಸಿದುದು ಗಗನದೊಳ್ ವಿಯತ್ತಳಪವನಂ ೮೬

ವ|| ಅಂತು ಬಂದುತ್ಪಳಖೇಟಮನೆಯ್ದಿ ವಜ್ರಜಂಘನುಮಂ ಶ್ರೀಮತಿಯುಮಂ ಕಂಡು ದೂರಾವನತಮಸ್ತಕರಾಗಿ ತಮ್ಮ ತಂದುಪಾಯನಂಬೆರಸು ರತ್ನಕರಂಡಕಮಂ ಮುಂದಿಟ್ಟಾಗಳದಱ ಮುದ್ರಿಕೆಯನೊಡೆದಂತಸ್ಸ್ಥಿತ ಕಾರ್ಯಪತ್ರಮಂ ಬಾಜಿಸಿ ನೋಡಿ ವಿಸ್ಮಯಾಕ್ರಾಂತಚಿತ್ತನಾಗಿ

ಅೞಿಪದೆ[1] [ಪದಕಳಿಪದೆ][2] ಪೊಂ
ಪುೞಿವೋಗೆ ಯಶಃಪ್ರಕಾಶಮೀಗಳೆ ಧರೆಯಂ
ಪೞಿಕೆಯ್ದು ತೊೞ್ತನುೞಿವಂ
ತುೞಿದಂ ಸಾಮ್ರಾಜ್ಯಲಕ್ಷ್ಮಿಯಂ ಚಕ್ರಧರಂ ೮೭

ಶ್ರೇಷ್ಠಕುಲಜಾತರೂ ಗಂಧರ್ವಪುರಾಧೀಶರೂ ಆದ ಚಿಂತಾಗತಿ, ಮನೋಗತಿಗಳೆಂಬ ವಿದ್ಯಾಧರರ ಕೈಯಲ್ಲಿ ಕೊಟ್ಟು "ನಮ್ಮಳಿಯನನ್ನು ಮುಂದಿಟ್ಟುಕೊಂಡು ಬನ್ನಿ" ಎಂದು ಹೇಳಿ ಅವರನ್ನು ಕಳಿಸಿದಳು. ಆ ಗಗನಚರರು ವಿಮಾನವನ್ನು ಹತ್ತಿ ತ್ವರಿತಗತಿಯಿಂದ ಹೋದರು. ೮೫. ಜೋಲಾಡುತ್ತಿರುವ ಮುತ್ತಿನ ಹಾರಗಳುಳ್ಳ, ಚಲಿಸುವ ರೇಷ್ಮೆಯ ಪತಾಕೆಗಳಿಂದ ಶೋಭಿಸುವ ವಿಮಾನವು ಗಾಳಿಯನ್ನು ಸೀಳಿಕೊಂಡು ನೀಲಿಯ ಮೋಡಗಳನ್ನು ಚದುರಿಸಿ ಓಡಿತು. ೮೬. ಹಾರುವ ವಿಮಾನವು ಮೋಡಗಳಲ್ಲಿ ರಂಧ್ರಗಳನ್ನುಂಟು ಮಾಡಿ ಸತತವಾಗಿ ನೀರನ್ನು ಸ್ರವಿಸುವಂತೆ ಸಾಗಿತು. ಆ ಜಲಧಾರೆಗಳ ಮೇಲೆ ಬೀಸಿದ ಆಕಾಶದ ಗಾಳಿಯು ಗಗನದಲ್ಲಿ ಖಚರರ ದಣಿವನ್ನು ಆರಿಸಿತು. ವ|| ಹಾಗೆ ಆ ದೂತರು ಉತ್ಪಲಖೇಟವನ್ನು ಸೇರಿ ವಜ್ರಜಂಘನನ್ನೂ ಶ್ರೀಮತಿಯನ್ನೂ ಸಂದರ್ಶಿಸಿದರು. ಅವರು ಬಾಗಿ ನಮಸ್ಕರಿಸಿ ತಂದ ಉಪಾಯನದೊಡನೆ ರತ್ನಕರಂಡವನ್ನು ಅವರ ಮುಂದಿಟ್ಟರು. ವಜ್ರಜಂಘನು ಆ ಮುದ್ರಿಕೆಯನ್ನೊಡೆದು ಒಳಗಿರುವ ಪತ್ರವನ್ನು ಓದಿ ಆಶ್ಚರ್ಯಚಕಿತನಾದನು. ೮೭. ಆತ್ಮನಾಶ ಮಾಡಿಕೊಳ್ಳದೆ, ರಾಜಪದವಿಗೆ ಆಶೆಪಡದೆಯೆ ರಾಜ್ಯವನ್ನು ಅಲ್ಲಗಳೆದು ತೊತ್ತನ್ನು ತಳ್ಳಿ ನೂಕುವಂತೆ ಚಕ್ರಧರನು ಸಾಮ್ರಾಜ್ಯಲಕ್ಷ್ಮಿಯನ್ನು ತೊರೆದನು. ಅವನ ಯಶಃಪ್ರಕಾಶವು ಹರಡಿ ವರ್ಧಿಸಿತು. ೮೮. ತಂದೆ ಕೊಟ್ಟರೂ ಸಹ ರಾಜ್ಯವನ್ನು ಹುಲ್ಲಿಗಿಂತ ಲಘುವಾಗಿ ಭಾವಿಸಿದರಲ್ಲದೆ

೧ ಅೞಿಪದೆ-ಆತ್ಮನಾಶ ಮಾಡಿಕೊಳ್ಳದೆ, ೨ ಪದಗಳಿಪದ (ಅನ್ಯತ್ರ)

ತಂದೆ ಕುಡೆ ರಾಜ್ಯಮಂ ತೃಣ
ದಿಂದಂ ಲಘುವಾಗೆ ಬಗೆದು ಬಗೆದರ್ ತಾಮುಂ
ತಂದೆಯ ಬಗೆದುದನೆಂದೊಡ
ಗುಂದಲೆ ಪೊಗಟಲ್ಕೆ ಚಕ್ರಿನಂದನರಳವಂ ೭೮

ವ|| ಎಂದು ನಿಜಸಭಾಜನಕ್ಕೆಲ್ಲಂ ಪೊಗಟ್ದು ತದ್ವಾರ್ತಾಕರ್ಣನೋದೀರ್ಣಶೋಕವ್ಯಾಕುಳೆಯಾಗಿರ್ದ ನಿಜವಲ್ಲಭೆಯಲ್ಲಿಗೆ ಬಂದು,

ಗುರುಶೋಕಾವೇಗಮಾದಂ ಗುರುವೆನಗಮದೇಕೆನ್ನಮುಂ ನಮ್ಮ ಜನ್ಮಾಂ
ತರದಿಂದಂ ಬಂದ ಮೋಹಂ ಬಿಡದಲೆವುದಜೆಂದಾದೊಡಂ ಧೈರ್ಯದಿಂ ಸಂ
ಸರಣಾಂಭೋರಾಶಿಯಂ ದಾಂಟುವ ಬಗೆಯನೆ ಕಯ್ಕೊಂಡನೆಂದಂದೆ ಮಾವಂ
ಚರಿತಾರ್ಥಂ ನೀನಣಂ ಚಿಂತಿಸದಿರು ನಮಗಿನ್ನುಂಟೆ ಶೋಕಾವಕಾಶಂ ೭೯

ವ|| ಎಂದು ಅಶೋಕಾವೇಗಮನಾಜಿಸಿ, ಬಂದ ವಿದ್ಯಾಧರರಂ ಯಥೋಚಿತ ಪ್ರತಿಪತ್ತಿಗಳಿಂ ಸಂತೋಷಂಬಡಿಸಿ ನಿಜಪ್ರಿಯಪ್ರಧಾನಮಂತ್ರಿಮತಿವರನೊಳಂ ಸೇನಾನಾಯಕನಕಂಪನೊಳಂ ಪುರೋಹಿತನಾನಂದನೊಳಂ ಪ್ರಧಾನಶ್ರೇಷ್ಠಿ ಧನಮಿತ್ರನೊಳಮಾಳೋಚಿಸಿ,

||ಹರಿಣಿ||

ಸೆಣಸುವಹಿತರ್ ಮೇಲೇಟ್ಟುದ್ಯೋಗಮಂ ಬಗೆದಿರ್ದರೆ
ನ್ನಣುಗಿನಳಿಯಂಗೆನ್ನಿಂ ಮೇಗಿಲ್ಲ ಕೂರ್ಪವರಿಂತಿದೇಂ
ಗಣಿದದಜೆಯೇ ಪೋಪಂ ಪೋಗೆಂದು ಮಾಣದೆ ಪುಂಡರೀ
ಕಿಣಿಗೆ ಪಯಣಂಬೋಗಲ್ ನಿಶ್ಚೈಸಿದಂ ಧರಣೀಶ್ವರಂ ೮೦

ತಂದೆಯಂತೆಯೇ ವೈರಾಗ್ಯವನ್ನು ಚಕ್ರವರ್ತಿಯ ಮಕ್ಕಳು ಪರಿಗ್ರಹಿಸಿದರು. ಆದ್ದರಿಂದ ಆ ಚಕ್ರಿತನಯರ ಮಹಿಮೆಯು ಹೊಗಳಲು ಅತಿಶಯವಾದುದು." ವ|| ಎಂದು ತನ್ನ ಆಸ್ಥಾನಸದಸ್ಯರ ಮುಂದೆ ಅವರನ್ನು ಹೊಗಳಿದನು. ಬಳಿಕ ಆ ವೃತ್ತಾಂತವನ್ನು ಕೇಳಿ ಶೋಕಾಕ್ರಾಂತೆಯಾಗಿದ್ದ ತನ್ನ ಪ್ರಿಯವಲ್ಲಭೆಯ ಬಳಿಗೆ ಬಂದು, ೭೯. "ಗುರುಜನರ ವಿಯೋಗದಿಂದ ಒದಗಿರುವ ಶೋಕಾವೇಗವು ನನಗೂ ಗುರುವಾದುದೇ. ನನ್ನನ್ನೂ ಕೂಡ ನಮ್ಮ ಜನ್ಮಾಂತರಗಳಿಂದ ಬಿಡದಲೆಯುತ್ತಿರುವ ಮೋಹವು ಕಾಡುತ್ತಿದೆ. ಆದರೂ ಸಂಸಾರಸಾಗರವನ್ನು ದಾಟುವ ಮಾರ್ಗವನ್ನು ಧೈರ್ಯದಿಂದ ಹಿಡಿದು ನನ್ನ ಮಾವನು ಚರಿತಾರ್ಥನಾದನು. ನೀನು ಸ್ವಲ್ಪವೂ ಚಿಂತಿಸಬೇಡ. ನಮಗಿನ್ನು ಶೋಕಕ್ಕೆ ಅವಕಾಶವೇನಿದೆ?" ಎಂದು ಶೋಕಾವೇಗವನ್ನು ಆರಿಸಿದನು. ವ|| ಬಂದ ವಿದ್ಯಾಧರರನ್ನು ಉಚಿತ ಸತ್ಕಾರಗಳಿಂದ ಸಂತೋಷಪಡಿಸಿದನು. ಪ್ರಧಾನಮಂತ್ರಿಯಾದ ಮತಿವರನೊಡನೆಯೂ ಸೇನಾಪತಿ ಅಕಂಪನನೊಡನೆಯೂ ಪುರೋಹಿತನಾದ ಆನಂದನೊಡನೆಯೂ ಪ್ರಧಾನಶ್ರೇಷ್ಠಿಯಾದ ಧನಮಿತ್ರನೊಡನೆಯೂ ಆಲೋಚಿಸಿದನು. ೮೦. "ಯುದ್ಧವನ್ನು ಬಯಸುವ ಶತ್ರುಗಳಾದವರು ಮೇಲೆ ಬೀಳಲು ಬಗೆದಿದ್ದಾರೆ. ಇದನ್ನು ಪ್ರೀತಿಪಾತ್ರನಾದ ಅಳಿಯನಿಗೆ ತಿಳಿಸಿರಿ. ನಮ್ಮನ್ನು ಪ್ರೀತಿಸತಕ್ಕವರು ಮತ್ತೊಬ್ಬರಿಲ್ಲ" ಎಂದು ಹೇಳಿ

ವ॥ ಅಂತತಿತ್ವರಿತಗಮನನಿಶ್ಚಿತಮನನಾಗಿ ಬಲಾಧ್ಯಕ್ಷನಂ ಬರಿಸಿ,

ಮನಮುಳ್ಳುನ್ಮದಗಂಧಸಿಂಧುರಚಯಂ ಚಂಡಾಜಿವಿಕ್ರಾಂತಮ
[ತ್ರ][1]ನಿಳಾಕ್ರಾಂತಹಯೌಘಮೂರ್ಜಿತಜಯಪ್ರಖ್ಯಾತಜಂಘಾಳಪ
ತ್ತಿನಿಕಾಯಂ ಕದನೈಕದುರ್ಜಯಮ[ವ][2]ಸ್ಕಂದಪ್ರಯಾಣಕ್ಷಮಾ
ವನಿಪಾಳವ್ರಜಮೀಗಳೆಮ್ಮೊಡನೆ ಬರ್ಕೆಂದಂ ರಣಾನಂದದಿಂ ೯೧

ವ॥ ಅಂತು ಬೆಸಸಿದಂದದೊಳ್ ಬಂದು ಮುಂದೆ ನಿಂದ ಚತುರಂಗಬಲಂಬೆರಸಬಳಾಬಾಳ ವೃದ್ಧವೃದ್ಧೋಕ್ಷಶಕಟಸಂಕಟಮಪ್ಪ ಕಟಕಮಂ ಮೆಲ್ಲಮೆಲ್ಲನೊಡಗೊಂಡು ಬರ್ಪಂತು ಕೂರ್ಬಾಳ ತುಂದಿಳ ಜರತ್ಸಾಮಂತಸಂದೋಹಕ್ಕಪ್ಪಯಿಸಿ ಶುಭದಿನಮುಹೂರ್ತದೊಳ್ ಪ್ರಯಾಣಭೇರಿಯಂ ಪೊಯಿಸಿ ಪೊಱಮಟ್ಟಾಗಳ್,

ಕೊಡೆ ತಟಿ ತಳ್ತ ಸೀಗುರಿ ಕರೀಂದ್ರಘಟಾಳಿ ತುರಂಗಸೈನ್ಯಮು
ಕ್ಕಡುಗದೆ ಬರ್ಪ ನಾಯಕಬಲಂ ರಥಸಂತತಿ ಖಡ್ಗಿವೃಂದಮೋ
ಗಡಿಸದ ಗಾಡಿಕಾರ್ತಿಯರ ಬರ್ಪ ನಿಯೋಗಿಗಳಾದ ಚೆಲ್ವನಾ
ವೆಡೆಯೊಳಮೀಯೆ ಕಣ್ಗೊಸಗೆಯಂ ಪಡೆದತ್ತು ಸಮಸ್ತಸಾಧನಂ ೯೨

"ಕಳಿಸಿರುವಾಗ ಇದು ಗಣೆತಕ್ಕೆ ಎಡೆಯೆ?- ಛೆ, ಹೋಗಿಯೇ ಹೋಗುವೆನು" - ಎಂದು ಪ್ರಯಾಣ ಮಾಡಲು ವಜ್ರಜಂಘನು ನಿಶ್ಚಯಿಸಿದನು. ವ॥ ಬೇಗನೆ ಹೊರಡಬೇಕೆಂದು ನಿಶ್ಚಯಿಸಿದವನಾಗಿ ಸೇನಾಪತಿಯನ್ನು ಕರೆಯಿಸಿ ೯೧. "ಧೀರವಾದ ಮದ್ದಾನೆಗಳ ಹಿಂಡೂ, ಘೋರಯುದ್ಧದಲ್ಲಿ ಪರಾಕ್ರಮವನ್ನು ಮೆರೆಸುವ ಮತ್ತು ವಾಯುವನ್ನು ಮೀರಿಸಿದ ವೇಗವುಳ್ಳ ಅಶ್ವಸಮೂಹವೂ, ಜಯವನ್ನು ಗಳಿಸಿ ಪ್ರಖ್ಯಾತರೂ ವೇಗಶಾಲಿಗಳೂ ಆದ ಪದಾತಿಗಳ ವರ್ಗವೂ, ಯುದ್ಧದಲ್ಲಿ ದುರ್ಜಯವೂ ಆಕ್ರಮಣಕಾರಿಯಾದ ಪ್ರಯಾಣದಲ್ಲಿ ಸಮರ್ಥರಾದ ರಾಜರ ಸಮುದಾಯುವೂ ನಮ್ಮೊಡನೆ ಬರಲಿ" ಎಂದು ಯುದ್ಧೋತ್ಸಾಹದಿಂದ ಹೇಳಿದನು. ವ॥ ಹಾಗೆ ಆಜ್ಞೆಮಾಡಿದೊಡನೆ ಬಂದು ಮುಂದೆ ನಿಂತ ಚತುರಂಗಸೇನೆಯೊಡನೆ ವಜ್ರಜಂಘನು ಹೊರಟನು. ಹೆಂಗಸರು, ಹುಡುಗರು, ಮುದುಕರು, ಮುದಿಯೆತ್ತಿನ ಗಾಡಿಗಳಿಂದ ಕೂಡಿದ ಸೇನಾಪರಿವಾರ-ಇವನ್ನು ಮೆಲ್ಲಮೆಲ್ಲನೆ ಕರೆತರುವಂತೆ ಗಡ್ಡ ಬೆಳೆದಿದ್ದ ದಪ್ಪ ಹೊಟ್ಟೆಯ ವೃದ್ಧಸಾಮಂತರಾಜರಿಗೆ ಸೂಚನೆಯನ್ನಿತ್ತು ಶುಭದಿನದ ಶುಭಮುಹೂರ್ತದಲ್ಲಿ ರಣಭೇರಿಯನ್ನು ಹೊಡೆಯಿಸಿ ತಾನು ಪ್ರಯಾಣಮಾಡಿದನು. ೯೨. ಕೊಡೆ, ಚಾಮರ, ಆನೆಗಳ ಹಿಂಡು, ಕುದುರೆಗಳ ಸೈನ್ಯ, ಕೆಚ್ಚುಗುಂದದ ನಾಯಕರ ತಂಡ, ರಥಸಮೂಹ, ಖಡ್ಗಧಾರಿಗಳ ಗುಂಪು, ವಿಲಾಸಿನಿಯರ ತಂಡ ಮತ್ತು ವಿಶೇಷ ಕಾರ್ಯದಲ್ಲಿ ನಿಯುಕ್ತರಾದ ಅಧಿಕಾರಿಜನ-ಇವರೆಲ್ಲರೂ ಎಲ್ಲೆಡೆಗಳಲ್ಲಿಯೂ ಚೆಲುವನ್ನು ಬೀರುತ್ತಿರಲು ಸಮಸ್ತ ಸಾಧನವೂ ನೇತ್ರಾನಂದವನ್ನು

---

೧ ತ್ರ್ಯ (ಅನ್ಯತ್ರ) ೨ ದ (ಅನ್ಯತ್ರ)

ವ॥ ಅಂತು ಪುಂಡರೀಕಿಣಿಗಭಿಮುಖನಾಗಿ ಪಯಣಂಬಂದು ಶಷ್ಪಸರೋವರಮೆಂಬ ಕೊಳನಂ ಬಳಸಿದ ಮಾಧವೀಲತೆಯ ಮಂಟಪಂಗಳೊಳಂ ಚೂತಲತೆಯ ಬಳ್ಳಿಗಾವಣಂಗಳೊಳಂ ಅಶೋಕಲತೆಯ ವಿಳಾಸಗೃಹಂಗಳೊಳಂ ನವಮಾಲಿಕಾಲತೆಯಿಱುಂಬುಗಳೊಳಂ ತಮಾಳಲತೆಯ ಕೊಂಚೆಯಂಗಳೊಳಂ ತಾಂಬೂಲಲತೆಯಳಂಕಾರಭವನಂಗಳೊಳಂ ಎಳಲತೆಯ[ಕೀ][1]ಣಿಕಾವಾಸಂಗಳೊಳಮಿಂಬಱಿದು ಬೀಡಂ ಬಿಡಿಸಿದಾಗಳ್,

ಇದು ಗಹನಾಂತರಾಳಮಿದಱೊಳ್ ನೆಲಸಿರ್ದ ಮದೀಯತೋಯದಿಂ
ದೊದವಿದ ನೀರಜಾವಳಿಯ ಚೆಲ್ವು ನಿರರ್ಥಕಮಾಗದಿಂದು ಪೊ
ರ್ದಿದ ಜನದಿಂ ಕರಂ ಸಫಲಮಾದುದು ಪೆಂಪೆನಗಾದುದೆಂದು ರಾ
ಗದಿನುಲಿವಂತುಟಾಯ್ತು ಕಳಹಂಸನಿನಾದದಿನಾ ಸರೋವರಂ ೯೩

ಆಗಳೆ ಮಾಟ್ಪ ಪುಷ್ಪರಚನಾಳಿಗೆ ಜೈನಗೃಹಕ್ಕೆ ಕಾಂತಕಾಂ
ತಾಗಣಕರ್ಣಪೂರಕುಸುಮಾಭರಣಾಳಿಗೆ ಯೋಗ್ಯಮಾಗಿ ಮೇ
ಲಾಗಿ ತೆರಳ್ದು ಪೊಕ್ಕು ಪೊಱಮಟ್ಟ ಮದೇಭಗಣಕ್ಕೆ ಮಂಡನಾ
ಯೋಗಮುಮಾದುವಾ ಕೊಳದ ಕೋಮಳ ನೀರಜಪುಷ್ಪಜಾತಿಗಳ್ ೯೪

ಚಳಕಳಹಂಸಸಾರಸರಥಾಂಗಮದಾಳಿನಿನಾದಕೈರವೋ
ತ್ಪಳಶತಪತ್ರಮಂದಮಕರಂದರಸೋತ್ಕಟಗಂಧಬಂಧುರಂ
ಲಳಿತನೃಪಾಂಗನಾಳಕಚಯಂಗಳನಾಡಿಪುದಾಯ್ತು ಸಂತತೋ
ಚ್ಚಳಿತತರಂಗಶೀಕರತುಷಾರಜಳಂ ಸರಸೀಸಮೀರಣಂ ೯೫

ಕೊಟ್ಟಿತು. ವ॥ ಪುಂಡರೀಕಿಣಿಗೆ ಪ್ರಯಾಣ ಬೆಳೆಸಿ ಶಷ್ಪ ಸರೋವರವನ್ನು ಮುಟ್ಟಿದನು. ಅಲ್ಲಿ ಸುತ್ತುವರೆದಿದ್ದ ಮಾಧವೀಲತೆಯ ಮಂಡಪಗಳಲ್ಲಿಯೂ ಚೂತಲತೆಯ ಚಪ್ಪರಗಳಲ್ಲಿಯೂ ಅಶೋಕಲತೆಯ ವಿಲಾಸಗೃಹಗಳಲ್ಲಿಯೂ ನವಮಲ್ಲಿಗೆಯ ಪೊದರುಗಳಲ್ಲಿಯೂ ಹೊಂಗೆಯ ಲತಾಗೃಹಗಳಲ್ಲಿಯೂ ವೀಳೆಯದೆಲೆಯ ಬಳ್ಳಿಗಳ ಅಲಂಕಾರಭವನಗಳಲ್ಲಿಯೂ ಎಳಲತೆಯ ಡೇರೆಗಳಲ್ಲಿಯೂ (ಕೇಣಿಕಾ-ಡೇರೆ) ಅನುಕೂಲಕ್ಕೆ ತಕ್ಕಂತೆ ಬೀಡನ್ನು ಬಿಡಿಸಿದಾಗ. ೯೩. "ಇದು ಕಾಡಿನ ಮಧ್ಯಭಾಗ. ಇಲ್ಲಿ ನನ್ನ ನೀರಿನಿಂದ ಬೆಳೆದ ಕಮಲಾವಳಿಯ ಸೌಂದರ್ಯವು ವ್ಯರ್ಥಗೊಳ್ಳದು. ಇಂದು ಇಲ್ಲಿಗೆ ಬಂದ ಜನರಿಂದ ಅದರ ಸಾಫಲ್ಯವನ್ನು ಪಡೆದೆನು. ನನಗೆ ಹಿರಿಮೆಯುಂಟಾಯಿತು" ಎಂದು ಕಲಹಂಸಗಳ ಧ್ವನಿಯ ಮೂಲಕ ಆ ಸರೋವರವು ಪ್ರೀತಿಯಿಂದ ಹೇಳುವಂತಾಯಿತು. ೯೪. ಆ ಕೊಳದ ಕೋಮಲವಾದ ಬಗೆಬಗೆಯ ಕಮಲಗಳು ಜೈನಮಂದಿರಕ್ಕಾಗಿ ಮಾಡಿದ ಬಗೆಬಗೆಯ ಪುಷ್ಪರಚನೆಗಳಿಗೂ, ಸುಂದರಿಯರ ಕರ್ಣಪೂರ, ಕುಸುಮಾಭರಣಗಳಿಗೂ ಯೋಗ್ಯವಾದುವು; ಮುಳುಗಿ ಹೊರಬರುತ್ತಿರುವ ಮದ್ದಾನೆಗಳಿಗೆ ಅಲಂಕಾರವನ್ನುಂಟು ಮಾಡಿದುವು. ೯೫. ಕಲಹಂಸ, ಸಾರಸ ಮತ್ತು ದುಂಬಿಗಳ ಧ್ವನಿಯುಕ್ತವೂ ಕೈರವ, ಉತ್ಪಲ ಮತ್ತು ಕಮಲಗಳಲ್ಲಿನ ಬಂಡಿನ ಉತ್ಕಟ ಗಂಧದಿಂದ

೧ ಗ (ಅನ್ಯತ್ರ)

ವ|| ಅಂತಾ ಮಂಡಳೇಶ್ವರನಾ ಸರೋಜಷಂಡದೊಳ್ ಬೀಡಂಬಿಟ್ಟಿರ್ಪನ್ನೆಗಂ ಸ್ವರ್ಗಾಪವರ್ಗ ಮಾರ್ಗದಂತಪಗತಕಲ್ಮಷರುಂ, ಅಂಬರದಂತೆ ಸನ್ಮಾರ್ಗರುಂ, ಅಂಭೋಧಿಯಂತೆ ಗಂಭೀರಾಶಯರುಂ, ಆದಿತ್ಯನಂತೆ ನಿರ್ಧೂತ ತಮಸ್ತಮರುಂ, ಚಂದ್ರನಂತೆ ಸರ್ವಸತ್ತ್ವಸೌಮ್ಯರುಂ, ಅನಿಲನಂತೆ ನಿಸ್ಸಂಗರುಂ, ಚಿಂತಾಮಣಿಯಂತೆ ಭವ್ಯಜನಮನೋಭಿಲಷಿತಫಲಪ್ರದರುಂ, ಮೇರುವಿನಂತಚಳಿತಧೈರ್ಯಗುಣರುಮಪ್ಪ ದಮಧರ ಸಾಗರಸೇನರೆಂಬ ಗಗನಚಾರಣರ್ ಕಾಂತಾರಚರ್ಯಾಮಾರ್ಗದೊಳ್ ತಮ್ಮ ವಾಸಕ್ಕೆ ಬರ್ಪರಂ ಶ್ರೀಮತಿಯುಂ ತಾನುಂ ಕಂಡು ಸಸಂಭ್ರಮಂಬೆರಸಿದಿರಂ ನಡೆದು ಬದ್ಧಾಂಜಳಿಪುಟಘಟಿತ ನಿಟಿಲರಾಗಿ ನಿಲ್ಕೆಂದು ನಿಲಿಸಿ,

ಇದಿರ್ಗೊಳ್ವುದು ಕಾಲ್ಗರ್ಚುವು
ದುದಾತ್ತಮಪ್ಪೆಡೆಯೊಳಿರಿಪುದರ್ಚಿಪುದೆಱಗಿ
ರ್ಪುದು ಕರಣಶುದ್ಧಿವಡೆವುದು
ಪಡೆದನ್ನಮನೀವುದೆಂಬ ನವವಿಧಪುಣ್ಯಂ ೯೬

ವ|| ತಮಗೆ ದೊರೆಕೊಳೆ,

ನೆಱೆದಟ್ಟೆ ಭಕ್ತಿ ದಯೆ ಪುದಿ
ದಱೆವೌದಾರ್ಯಂ ಕ್ಷಮಾಗುಣಂ ಶಕ್ತಿಯುಮೆಂ
ಬಱೆಕೆಯ ಗುಣಮೇೞಱೊಳಂ
ನೆಱೆದಿರ್ದರ್ ಮುನಿಯುಗಕ್ಕೆ ದಾನಮನವರ್ಗಳ್ ೯೭

ಸುಂದರವೂ, ಎಲ್ಲ ಕಾಲಗಳಲ್ಲಿಯೂ ಮೇಲೇರಿ ಬರುವ ಅಲೆಗಳ ತಣ್ಣನೆಯ ನೀರಿನ ಹನಿಗಳಿಂದ ಯುಕ್ತವೂ ಆದ ಆ ಕೊಳದ ಗಾಳಿಯು ರಾಜಸ್ತ್ರೀಯರ ಮುಂಗುರುಳುಗಳನ್ನು ಆಡಿಸುವ ಸೌಭಾಗ್ಯವನ್ನು ಪಡೆಯಿತು. ವ|| ಹಾಗೆ ಮಂಡಲೇಶ್ವರನಾದ ವಜ್ರಜಂಘನು ಪದ್ಮಕದಂಬಗಳಲ್ಲಿ ಬೀಡುಬಿಟ್ಟಿದ್ದಾಗ ಸ್ವರ್ಗಮೋಕ್ಷಮಾರ್ಗಗಳಂತೆ ಪಾಪವಿಮುಕ್ತರೂ, ಆಕಾಶದಂತೆ ಸನ್ಮಾರ್ಗಾವಲಂಬಿಗಳೂ (ವಿದ್ಯಮಾನಮಾರ್ಗ) ಸಮುದ್ರದಂತೆ ಗಂಭೀರವಾದ ಅಭಿಪ್ರಾಯವುಳ್ಳವರೂ, ಸೂರ್ಯನಂತೆ ಕತ್ತಲೆಯನ್ನು (ಅಜ್ಞಾನವನ್ನು) ಹೊರದೂಡಿದವರೂ, ಚಂದ್ರನಂತೆ ಎಲ್ಲ ಪ್ರಾಣಿಗಳ ವಿಷಯದಲ್ಲಿ ಸೌಮ್ಯರಾಗಿರುವವರೂ, ಗಾಳಿಯಂತೆ ನಿಸ್ಸಂಗರೂ, ಚಿಂತಾಮಣಿಯಂತೆ ಭವ್ಯಜನರಿಗೆ ಇಷ್ಟವೆನಿಸಿದ ಫಲವನ್ನು ಕೊಡತಕ್ಕವರೂ, ಮೇರುಪರ್ವತದಂತೆ ನಿಶ್ಚಲಧೈರ್ಯಯುಕ್ತರೂ ಆದ ದಮಧರ, ಸಾಗರಸೇನರೆಂಬ ಗಗನಚಾರಿಗಳು, 'ಕಾಂತಾರಚರ್ಯಾ[1]' ಮಾರ್ಗದಿಂದ ಶ್ರೀಮತೀ ವಜ್ರಜಂಘರ ಆವಾಸಕ್ಕೆ ಬಂದರು. ಅದನ್ನು ಶ್ರೀಮತಿಯೂ ತಾನೂ ಕಂಡು ಅವರನ್ನು ಸಂಭ್ರಮದಿಂದ ಎದುರುಗೊಂಡು ತಲೆಯ ಮೇಲೆ ಕೈಜೋಡಿಸಿ ನಿಲ್ಲಬೇಕೆಂದು ಪ್ರಾರ್ಥಿಸಿ ನಿಲ್ಲಿಸಿದರು. ೯೬. ಎದುರುಗೊಳ್ಳುವುದು, ಕಾಲುತೊಳೆಯುವುದು, ಶ್ರೇಷ್ಠವಾದೆಡೆಯಲ್ಲಿ ಇಳಿಸುವುದು. ಅರ್ಚಿಸುವುದು, ನಮಸ್ಕರಿಸುವುದು, ಮನೋ-ವಾಕ್-ಕಾಯ ಶುದ್ಧಿಗಳಿಂದಿರುವುದು, ಅನ್ನದಾನ ಮಾಡುವುದು-ಇವು ಒಂಬತ್ತು ವಿಧ ಪುಣ್ಯಗಳು. ವ|| ಇವನ್ನು ಆ ದಂಪತಿಗಳು ದೊರಕಿಸಿಕೊಂಡರು. ೯೭. ಪ್ರೀತಿ, ಭಕ್ತಿ, ದಯೆ,

1. ಕಾಡಿನಲ್ಲಿ ಸಿಕ್ಕಿದುದನ್ನು ಮಾತ್ರ ತಿನ್ನುವೆವೆಂಬ ಪ್ರತಿಜ್ಞೆ.

ಸುರತೂರ್ಯಧ್ವಾನಮೆಯ್ದುತ್ತಿರ್ಪಲರ ಸರಿ ಪೊದಟ್ಟಿರ್ದ ರೈಧಾರೆ ದೇವೇಂ
ದ್ರರಹೋದಾನ ಪ್ರಸಿದ್ಧಧ್ವನಿ ಸುರಭಿಸಮೀರಪ್ರಚಾರಂ ಜಗಕ್ಕ
ಚ್ಚರಿ ಪಂಚಾಶ್ಚರ್ಯಮೆತ್ತಂ ನೆಗಟೆ ಶಿಬಿರದೊಳ್ ವಿಸ್ಮಯಾಕ್ರಾಂತನಿರ್ದಂ
ಪಿರಿದೊಂದಾನಂದದಿಂದಂ ಸುಕವಿಜನಮನೋಮಾನಸೋತ್ತಂಸಹಂಸಂ ೯೮

ವ|| ಅಂತು ಬೀಡಿಂಗಮಾಶ್ಚರ್ಯಂ ನೆಗಟೆ,

ಕ್ಷಿತಿಚಕ್ರಾರ್ಚಿತ ಚಕ್ರವರ್ತಿಪದಮುಂ ದೇವೇಂದ್ರರಾಜ್ಯೋದಯೋ
ನ್ನತಿಯುಂ ಭವ್ಯಜನಂಗಳಾಶೆವಡುತಿರ್ಪಾರ್ಹಂತ್ಯಮುಂ ಸಾರ್ಗುಮ
ನ್ವಿತದಾನಂಗರಿದುಂಟೆ ಸೌಖ್ಯಮೆ[ನಿ][1]ತುಂ ದಾನಪ್ರಭಾವಕ್ಕೆ ಸಂ
ಚಿತಪುಣ್ಯೋದಯನಾಗಳಾದಮೊಸೆದಂ ಸಂಸಾರಸಾರೋದಯಂ ೯೯

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾ
ಪ್ರಸರ ಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಚಾರಣಯುಗಳದಾನೋತ್ಸವ ವರ್ಣನಂ
ಚತುರ್ಥಾಶ್ವಾಸಂ

ಔದಾರ್ಯ, ಕ್ಷಮೆ, ಶಕ್ತಿ, ಪ್ರಾರ್ಥನೆ ಇವುಗಳಿಂದ ಭೂಷಿತರಾಗಿ ಆ ಮುನಿಯುಗಕ್ಕೆ ಆ ದಂಪತಿಗಳು ದಾನವನ್ನು ಕೊಟ್ಟರು. ೯೮. ದೇವತೆಗಳ ತುತೂರಿಗಳ ಶಬ್ದಗಳೂ ಹೂಗಳ ಮಳೆಯೂ ರತ್ನವೃಷ್ಟಿಯೂ ದೇವೇಂದ್ರರ 'ಅಹೋದಾನ' ಧ್ವನಿಯೂ ಸುವಾಸನಾಯುಕ್ತವಾದ ಗಾಳಿಯ ಸಂಚಾರವೂ-ಎಂಬ ಐದು ಆಶ್ಚರ್ಯಗಳು ಶಿಬಿರದಲ್ಲುಂಟಾದುವು. ಸುಕವಿಜನಮನೋಮಾನಸೋತ್ತಂಸಹಂಸನಾದ ಆ ರಾಜನು ಆಶ್ಚರ್ಯದಿಂದ ಆಕ್ರಾಂತ ಮನಸ್ಕನಾಗಿ ಹೆಚ್ಚು ಸಂತೋಷದಿಂದ ಇದ್ದನು. ವ|| ಹೀಗೆ ಸೇನೆಗೂ ಆಶ್ಚರ್ಯ ಉಂಟಾಗಲು ೯೯. "ದಾನ ಮಾಡತಕ್ಕವನಿಗೆ ರಾಜಮಂಡಲದಿಂದ ಪೂಜಿತವಾದ ಚಕ್ರವರ್ತಿಸ್ಥಾನವೂ ದೇವೇಂದ್ರನ ರಾಜ್ಯಪ್ರಾಪ್ತಿಯೆಂಬ ಉನ್ನತಿಯೂ ಭವ್ಯಜನರಿಂದ ಅಪೇಕ್ಷಣೀಯವಾದ ಆರ್ಹಂತ್ಯವೂ[1] ಒದಗುವುವು. ಅವನಿಗೆ ಅಸಾಧ್ಯವಾದ ಸೌಖ್ಯವು ಎಷ್ಟಾದರೂ ಉಂಟೇ? ಸಂಸಾರಸಾರೋದಯನೂ ಅರ್ಜಿತಪುಣ್ಯನೂ ಆದ ವಜ್ರಜಂಘರಾಜನು ದಾನಪ್ರಭಾವಕ್ಕೆ ನೆಲೆಯಾದನು.

ಇಂತು ಚಾರಣಯುಗಳ ದಾನೋತ್ಸವ ವರ್ಣನವೆಂಬ
ನಾಲ್ಕನೆಯ ಆಶ್ವಾಸ ಮುಗಿಯಿತು.

---

೧ ನು (ಅನ್ಯತ್ರ)

1 ವಜ್ರಜಂಘನು ಮುಂದೆ ತೀರ್ಥಂಕರನಾಗುವನೆಂಬುದನ್ನು ಕವಿ ಇಲ್ಲಿ ಸೂಚಿಸಿದ್ದಾನೆ.

# ಪಂಚಮಾಶ್ವಾಸಂ

ಶ್ರೀಮತಿವೆರಸಾಗಳತಿ
ಪ್ರೇಮದೆ ಮುನಿಯುಗಳನಿಕಟಮಂ ಸಾರ್ದಿನಿತೇ
ಕೀ ಮೋಹಮಿವರೊಳೆನಗೆಂ
ದಾ ಮಹಿಮಹಿತಂ ಸರಸ್ವತೀಮಣಿಹಾರಂ ೧

ವ॥ ಬೆಸಗೊಂಡಾಗಳ್ ವೃದ್ಧಕಂಚುಕಿ,

ಇನಿತುವರಂ ವ್ಯಾಮೋಹಂ
ನಿನಗೇಕಾದಪುದು ಬಗೆದು ಭಾವಿಸಿ ನೋಡೀ
ಮುನಿಯರ್ ನಾಲ್ವತ್ತೊಂಭ
ತ್ತನೆಯಮಳ್ಗಳ್ ನಿನ್ನ ತನಯರಲ್ಲರೆ ನೃಪತೀ ೨

ವ॥ ಎಂಬುದುಮರಸನಱಿದೆನುಸಿರದಿರಿಮೆಂದು ತನ್ಮುನಿಗಳ ಪಾದಪ್ರಕ್ಷಾಳನೋದಕದೊಳ್ ಪೊರಳ್ದು ಪುಷ್ಪವರ್ಷದ ಪೂಗಳೊಳ್ ಪುದಿದು ದಾನಾನುಮೋದಪ್ರಭಾವದಿಂದುಪಶಮಭಾವಮಂ ತಾಳ್ದಿ ಮುನಿಪತಿಯ ಮುಖಾರವಿಂದಮಂ ನೋಡುತಿರ್ದ ಶಾರ್ದೂಲ ವರಾಹ ಗೋಲಾಂಗೂಲ ನಕುಲಂಗಳಂ ನೋಡುತ್ತುಮವರ್ಕೆ ಭಕ್ಷ್ಯಾಪೂಪಂಗಳಂ ತರಿಸಿ ನೀಡುತ್ತುಮಿರ್ದಾತ್ಮೀಯ ಪರಮಪ್ರಸಾದ ಭೂಮಿಗಳಾಗಿರ್ದ ಮಂತ್ರಿಸೇನಾನಾಯಕಪುರೋಹಿತಶ್ರೇಷ್ಠಿಪದನಿಯುಕ್ತರಪ್ಪ ಮತಿವರಾಕಂಪನಾನಂದ ಧನಮಿತ್ರರೆಂಬ ನಾಲ್ವರ ಭವಾವಳಿಯಂ ಬೆಸಗೊಳೆ ದಮವರಮುನಿನಾಥನವಧಿಬೋಧದಿಂದನು ಕ್ರಮಂದಪ್ಪದೆ,

೧. ಸರಸ್ವತೀಮಣಿಹಾರನೂ ಲೋಕಮಾನ್ಯನೂ ಆದ ವಜ್ರಜಂಘನು ಶ್ರೀಮತಿಯೊಡನೆ ಅತ್ಯಂತ ಭಕ್ತಿಯಿಂದ ಮುನಿದ್ವಯರ ಸಮೀಪವನ್ನು ಸೇರಿ, "ಇವರ ಮೇಲೆ ನನಗೇಕೆ ಇಷ್ಟು ಮೋಹ?" ಎಂದು ಕೇಳಿದನು. ವ॥ ಹೀಗೆ ಬೆಸಗೊಂಡಾಗ ಮುದುಕ ಕಂಚುಕಿಯು ೨. "ಇವರ ಮೇಲೆ ಇಷ್ಟು ವ್ಯಾಮೋಹವು ಏಕಾಯಿತು-ಎಂಬುದನ್ನು ಆಲೋಚಿಸಿ ನೋಡು. ಈ ಮುನಿಗಳು ನಿನ್ನ ನಾಲ್ವತ್ತೊಂಬತ್ತನೆಯ ಅವಳಿಮಕ್ಕಳಲ್ಲವೆ?" ಎಂದು ಹೇಳಿದನು. ವ॥ ಅರಸನು 'ಗೊತ್ತಾಯಿತು ಮುಂದೆ ಹೇಳದಿರು' ಎಂದು ಕಂಚುಕಿಯನ್ನು ತಡೆದನು. ಆ ಮುನಿಗಳಿಬ್ಬರ ಕಾಲು ತೊಳೆದ ನೀರಿನಲ್ಲಿ ಹೊರಳಾಡಿ ಹೂಮಳೆಯ ಹೂಗಳಲ್ಲಡಗಿ, ದಾನಪ್ರಭಾವದಿಂದ ಉಪಶಮಭಾವವನ್ನು ತಳೆದು, ಮುನಿಪತಿಯ ಮುಖಕಮಲವನ್ನು ನೋಡುತ್ತಿದ್ದ ಹುಲಿ, ಹಂದಿ, ಕೋತಿ ಮತ್ತು ಮುಂಗುಸಿಗಳಿಗೆ ತಿಂಡಿತಿನಿಸುಗಳನ್ನು ತರಿಸಿಕೊಟ್ಟನು. ತನಗೆ ಪರಮ ಪ್ರೀತ್ಯಾಸ್ಪದರಾದ ಮಂತ್ರಿ, ಸೇನಾನಾಯಕ, ಪುರೋಹಿತ ಮತ್ತು ಶ್ರೇಷ್ಠಿಸ್ಥಾನಗಳಲ್ಲಿ ನಿಯುಕ್ತರಾದ ಮತಿವರ, ಅಕಂಪನ, ಆನಂದ ಮತ್ತು ಧನಮಿತ್ರರೆಂಬ ನಾಲ್ವರ

ಕೆದಱಿದಪುದು ದೆಸೆದೆಸೆಗಮ್ಮು
ತದ ಪನಿಯನಿದೊಂದು ಮುನಿಪಮುಖಚಂದ್ರಮನೆಂ
ಬುದನೆನಿಸೆ ದಶನದೀಧಿತಿ
ಮೃದುಮಧುರಗಭೀರನಿನದದಿಂ ಮುನಿ ನುಡಿದಂ ೩

ವ॥ ಈ ಮತಿವರನೀ ಭವಕ್ಕಯ್ದನೆಯ ಭವದೊಳೀ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀವಿಷಯದ ಪ್ರತಿಬದ್ಧಪ್ರಭಾಕರೀಪುರದೊಳ್ ಮತಿಗೃದ್ಧನೆಂಬರಸನಾಗಿ,

ವಿವಿಧಾರಂಭಪರಿಗ್ರಹಂ ವಿಷಯಸೌಖ್ಯಾಯತ್ತನತ್ಯಂತಲೋ
ಭವಿಷಗ್ರಸ್ತನುಪಾದ್ರಿಯೊಳ್ ದ್ರವಿಣಮಂ ಬಯ್ತುದ್ಧತಂ ತನ್ನುಸಿರ್
ತವೆ ಪಂಕಪ್ರಭೆಯೊಳ್ ದಶಾಬ್ಧ್ಯುಪಮೆಯಿಂ ದುಃಖಾಗ್ನಿಯೊಳ್ ಬೆಂದು ಮ
ತ್ತವನಲ್ಲಿಂ ಪೊಱಮಟ್ಟು ಮುನ್ನ ಧನಮಂ ಬಯ್ತಿರ್ದಗಾರಣ್ಯದೊಳ್ ೪

ಪುಲಿಯಾಗಿ ಪುಟ್ಟೆ ತನ್ಮಂ
ಡಲನಾಥಂ ಪ್ರೀತಿವರ್ಧನಂ ರಿಪುನೃಪರಂ
ಚಲದಲೆದು ಬಂದು ಚಾತು
ರ್ಬಲಯುತನಾ ನಗದ ಬಳಸಿ ಬೀಡಂ ಬಿಟ್ಟಂ ೫

ಬಿಡೆ ತಿರ್ದಿದ ಶಕುನದ ನಯ
ದಡಿವಿಡಿದು ಪುರೋಹಿತಂ ನೃಪಂಗೀ ನುಡಿಯಂ
ನುಡಿದಂ ಕನಕದ ಪೂಜೆಯ
ಪಡೆಪಾದಪುದಿಲ್ಲಿ ಮುನಿಯ ದಾನದಿನಧಿಪಾ ೬

ಭವಾವಳಿಯನ್ನು ಪ್ರಶ್ನಿಸಿದನು. ದಮಧರ[1]ಮುನಿನಾಥನು ಅವಧಿಬೋಧದಿಂದ ಅನುಕ್ರಮವಾಗಿ ೩. ಮೃದುವೂ ಮಧುರವೂ ಗಂಭೀರವೂ ಆದ ಧ್ವನಿಯಿಂದ ನುಡಿದನು. ಆಗ ಅವನ ಹಲ್ಲುಗಳ ಕಾಂತಿಯು ಮುನಿಯ ಮುಖಚಂದ್ರನು ಅಮೃತದ ಹನಿಗಳನ್ನು ದೆಸೆದೆಸೆಗೂ ಎರಚಿದನೋ ಎಂಬಂತಿತ್ತು. ವ॥ "ಈ ಮತಿವರನು ಈ ಜನ್ಮಕ್ಕೆ ಐದನೆಯ ಭವದಲ್ಲಿ ಜಂಬೂದ್ವೀಪದ ವತ್ಸಕಾವತೀದೇಶದಲ್ಲಿರುವ ಪ್ರಭಾಕರೀಪುರದಲ್ಲಿ ಅತಿಗೃದ್ಧನೆಂಬ ಅರಸಾಗಿ ಹುಟ್ಟಿದ್ದನು. ೪. ಇವನು ವಿವಿಧೋದ್ಯೋಗಗಳಿಂದಲೂ ಪರಿಜನರಿಂದಲೂ ಕೂಡಿ ವಿಷಯಸೌಖ್ಯದಲ್ಲಿ ನಿರತನಾದನು. ಲೋಭವಿಷಗ್ರಸ್ತನಾದನು. ಬೆಟ್ಟದ ತಪ್ಪಲಲ್ಲಿ ಹಣವನ್ನು ಬಯ್ತಿಟ್ಟು ತನ್ನುಸಿರನ್ನು ಮುಗಿಸಿದನು. ಹತ್ತು ಸಾಗರಗಳಷ್ಟು ಕಾಲ ಪಂಕಪ್ರಭೆಯೆಂಬ ನರಕದಲ್ಲಿ ದುಃಖಾಗ್ನಿಯಿಂದ ಬೆಂದು ಅಲ್ಲಿಂದ ಹೊರಬಿದ್ದು, ಧನವನ್ನು ಬಯ್ತಿಟ್ಟಿದ್ದ ಅರಣ್ಯದಲ್ಲಿ ಹುಲಿಯಾಗಿ ಹುಟ್ಟಿದನು. ೫. ಆಗ ಆ ಮಂಡಲಕ್ಕೊಡೆಯನಾದ ಪ್ರೀತಿವರ್ಧನನು ಶತ್ರುರಾಜರನ್ನು ಛಲದಿಂದ ಅಲೆಯಿಸಿ, ಬಂದು ಚತುರಂಗಸೈನ್ಯಸಮೇತ ನಾಗಿ ಆ ಪರ್ವತದ ಸುತ್ತ ಬೀಡನ್ನು ಬಿಟ್ಟನು. ೬. ಆಗ ಶಕುನದ ಜಾಡನ್ನು ಹಿಡಿದು ಪುರೋಹಿತನು "ಮುನಿಗೆ ಕನಕಪೂಜೆಯನ್ನು ಮಾಡಿದರೆ, ದಾನಮಾಡಿದ ಫಲವಾಗಿ

1 ಪೂರ್ವಪುರಾಣದಲ್ಲಿ ದಮಧರ, ಯಮಧರ ಎಂಬ ಎರಡು ಪಾಠಗಳು ದೊರೆಯುತ್ತವೆ.

ಈಗಳೆ ನಿನಗೆಂಬುದುಮಸು
ರಾಗದಿನಾ ಪ್ರೀತಿವರ್ಧನಂ ಮುನಿವರರೆಂ
ತೀ ಗಿರಿಗೆ ಚರಿಗೆವರ್ಪರ
ನಾಗತಮತಿ ಬಗೆಯ ನೀನುಪಾಯಾಂತರಮಂ ೭

ಎನೆ ಪೊೞಲ ಬೀದಿವೀದಿಗ
ಳನಿತುಮನೋರಂತೆ ತಳಿದು ಗುಡಿಗಟ್ಟಿಸಿ ನೀಂ
ನನೆಯ ಮುಗುಳಲರ ತುಱುಗಲ
ನನಂತಮಂ ನೆಱೆಯೆ ಕೆದಱವೇೞ್ ನೃಪತಿಳಕಾ ೮

ಎಂದೊಡೆ ನೃಪನಾತನ ಪೇ
ೞ್ದಂದದೊಳದನಂತೆ ಮಾಡವೇೞ್ದೊಡೆ ಮುನಿಪಂ
ಸಂದ ಪಿಹಿತಾಸ್ರವಂ ಪುಗು
ತಂದಂ ನೋಂತೊಂದು ತಿಂಗಳಿಂಗಾ ಪುರಮಂ ೯

ತಳಿಯೆ ಕೆಸಱಾದ ಧರೆ ಪೂ
ಗಳ ತುಱುಗಲೊಳಿಸೆಯೆ ಪೊೞಲಿದಪ್ರಾಸಕಮೆಂ
ದೊಳಪುಗದೆ ನಿಯಮದಿಂ ನಿ
ರ್ಮಳಚರಿತಂ ಚರಿಗೆವೊಕ್ಕನರಸನ ಬೀಡಂ ೧೦

ನಿನಗಿಲ್ಲಿ ಸುವರ್ಣಪ್ರಾಪ್ತಿಯಾಗುವುದೆಂ"ದು ರಾಜನಿಗೆ ಹೇಳಿದನು. ೭. ಆಗ ಪ್ರೀತಿಯಿಂದ ಪ್ರೀತಿವರ್ಧನನು "ಮುನಿವರರು ಈ ಬೆಟ್ಟಕ್ಕೆ ಚರಿಗೆಗಾಗಿ ಬರುವುದು ಹೇಗೆ? ಅದಕ್ಕೆ ತಕ್ಕ ಉಪಾಯವನ್ನು ಹೂಡು" ಎಂದನು. ೮. ಪುರೋಹಿತನು "ಎಲೈ ರಾಜನೆ! ನಿನ್ನ ಪಟ್ಟಣದ ಬೀದಿಗಳೆಲ್ಲಕ್ಕೂ ನೀರನ್ನು ಸಿಂಪಡಿಸುವಂತೆ ಮಾಡು. ಪತಾಕೆಗಳನ್ನು ಕಟ್ಟಿಸಿ ಪಟ್ಟಣವನ್ನು ಅಲಂಕರಿಸು. ಮೊಗ್ಗು ಹೂವುಗಳ ಗೊಂಚಲುಗಳನ್ನು ಅಧಿಕವಾಗಿ ಪ್ರದರ್ಶಿಸುವಂತೆ ಮಾಡು" ಎಂದನು. ೯. ಪುರೋಹಿತನ ಮಾತಿನ ಪ್ರಕಾರ ರಾಜನು ಪಟ್ಟಣವನ್ನು ಶೃಂಗಾರಗೊಳಿಸಿದನು. ಪಿಹಿತಾಸ್ರವಮುನಿಯು ವ್ರತಾಚರಣೆಯನ್ನು ಮಾಡಿ ಒಂದು ತಿಂಗಳಾದ ಮೇಲೆ ಆ ಪುರವನ್ನು ಪ್ರವೇಶಿಸಲು ಬಂದನು. ೧೦. "ನೀರನ್ನು ಸಿಂಪಡಿಸಿರುವುದರಿಂದಾಗಿ ಭೂಮಿಯು ಕೆಸರಾಗಿದೆ. ಹೂಗಳ ಗೊಂಚಲುಗಳಿಂದ ತುಂಬಿಹೋಗಿದೆ. ಆದಕಾರಣ ಅಪ್ರಾಸುಕವಾದ[1] ಈ ಪುರವು ಪ್ರವೇಶಾರ್ಹವಲ್ಲ" ಎಂದು ಬಗೆದು ನಿರ್ಮಲಚರಿತನಾದ ಮುನಿಯು ಅರಸನಿದ್ದ (ಪರ್ವತದ) ಬೀಡನ್ನು ಚರಿಗೆಗಾಗಿ ಹೊಕ್ಕನು.

---

1 ಜೀವಗಳು ಉತ್ಪನ್ನವಾಗಿರುವ ಹಣ್ಣು ನೀರು ಮುಂತಾದ ಪದಾರ್ಥಗಳುಳ್ಳದ್ದು, ಪಸಿಂಯಾದದ್ದು ಎಂದರ್ಥ.

ಪುಗೆ ನೃಪನಿದಿರಂ ಬಂದಾ
ವಗಮುಟ್ಟೆಯೊಳಜಿದು ನಿಜೆಸೆ ದಾನೋನ್ನತಿಯೊಳ್
ಗಗನತಳದಿಂದಮೊರ್ಮೆಯೆ
ನೆಗೆದತ್ತಾಶ್ಚರ್ಯಮಾಗೆ ಪಂಚಾಶ್ಚರ್ಯಂ ೧೧

ವ|| ಆಗಳಾ ಪರ್ವತದೊಳಿರ್ದ ಶಾರ್ದೂಲಂ ಜಾತಿಸ್ಮರನಾಗಿ ಪರಿತ್ಯಕ್ತಾಹಾರಶರೀರನಾಗಿ ಉಪಶಾಂತಸ್ವಾಂತನಿರ್ದುದೆಂಬುದಂ ತಸ್ಮುನೀಂದ್ರರನಧಿಜ್ಞಾನದಿಂದಜಿದು ಆ ಪ್ರೀತಿವರ್ಧನನಂ ಪ್ರತಿಬೋಧಿಸುವ ಬಗೆಯೊಳಾ ಶಾರ್ದೂಲನ ಪೂರ್ವಭವವೃತ್ತಾಂತಮುಮಂ ಕಾಲಲಬ್ಧಿದೊರೆಕೊಳೆ ಶರೀರಪರಿತ್ಯಾಗಂಗೆಯ್ದಿರ್ದುದೆಂಬುದುಮನಜಿಪಿ ತದ್ಗಿರಿತಟದೊಳ್ ಮುನ್ನೆ ಪೂಳ್ದ ಸುವರ್ಣಪೂರ್ಣ ಕಟಾಹಂಗಳಂ ತೋಜಿದಾಗಳ್ ಚೋದ್ಯಂಬಟ್ಟು.

ಪಿರಿದುಂ ಪೂಜೆಯನರಸಂ
ಪರಿವಾರಂಬೆರಸು ಮಾಡೆ ಮುನಿಪತಿಯ ಪದಾಂ
ಬುರುಹದ ಮೊದಲೊಳ್ ನೋಂತುದು
ಭರದಿಂ ಪದಿನೆಂಟು ದಿವಸಮಂ ಶಾರ್ದೂಲಂ ೧೨

ವ|| ಅಂತು ನೋಂತು,

ಸುಡುವುದರಾಗ್ನಿಯುಮೊಡಲಂ
ಮಿಡುಕುವಿನಂ ಕಡಿವ ಕಟ್ಟಜುಂಪೆಗಳುಮದಾ
ವೆಡೆಯನುರಿಸುವುದೊ ನರಕದ
ಕಡುದುಃಖದೊಳಗಿದು ಸುಗಿದು ನಮೆದೆನಗೀಗಳ್ ೧೩

೧೧. ರಾಜನು ಬಂದ ಮುನಿಯನ್ನು ಆದರದಿಂದ ಎದುರುಗೊಂಡನು. ದಾನೋನ್ನತಿಯಿಂದ ಮುನಿಯನ್ನು ಉಪಚರಿಸಿದನು. ಒಡನೆ ಗಗನತಲದಿಂದ ವಿಸ್ಮಯವಾಗುವಂತೆ ಪಂಚಾಶ್ಚರ್ಯಗಳು ಜರುಗಿದುವು. ವ|| ಆಗ ಹುಲಿಯು ಜಾತಿಸ್ಮರನಾಗಿ ಆಹಾರವನ್ನು ತೊರೆದು ಶಾಂತಮನಸ್ಕವಾಯಿತೆಂಬುದನ್ನು ಅವಧಿಜ್ಞಾನದಿಂದ ಮುನೀಂದ್ರನು ತಿಳಿದನು. ಆ ಪ್ರೀತಿವರ್ಧನನನ್ನು ಪ್ರತಿಬೋಧಿಸುವ ಸಂದರ್ಭದಲ್ಲಿ ಹುಲಿಯ ಪೂರ್ವಭವ ವೃತ್ತಾಂತವನ್ನೂ ಕಾಲಲಬ್ಧಿ ದೊರಕಲು ಅದರ ಶರೀರಪರಿತ್ಯಾಗವಾದುದನ್ನೂ ತಿಳಿಸಿದನು. ಅಲ್ಲದೆ ಆ ಮುನಿಯು ಆ ಬೆಟ್ಟದ ತಡಿಯಲ್ಲಿದ್ದ ಸುವರ್ಣಪೂರ್ಣವಾದ ಗಡಿಗೆಗಳನ್ನು ತೋರಿಸಿದಾಗ ರಾಜನು ಆಶ್ಚರ್ಯಪಟ್ಟನು. ೧೨. ಅರಸನು ಪರಿವಾರಸಮೇತನಾಗಿ ಮುನಿಗೆ ಹಿರಿಯ ಪೂಜೆಯನ್ನು ಸಲ್ಲಿಸಿದನು. ಮುನಿಯ ಪಾದಮೂಲದಲ್ಲಿ ಹದಿನೆಂಟು ದಿನಗಳ ಕಾಲ ಆ ಹುಲಿಯು ವ್ರತವನ್ನು ಆಚರಿಸಿತು. ವ|| ಹಾಗೆ ವ್ರತವನ್ನಾಚರಿಸಿ ೧೩. "ಸುಡುವ ಉದರಾಗ್ನಿಯೂ ದೇಹವನ್ನು ಅಲುಗಿಸಿದರೆ ಸಾಕು-ಕಡಿಯುವ ಕಟ್ಟಿರುವೆಗಳೂ ನರಕದ ಕಡುಯಾತನೆಗೆ ಸಿಕ್ಕಿ ಸುಗಿದು ನಮೆದಿರುವ ನನ್ನ ದೇಹದ ಯಾವ ಭಾಗವನ್ನು ಉರಿಸಬಲ್ಲವು?" ವ|| ಎಂದು ಹುಲಿಯು ಮನದಲ್ಲಿ ಧೈರ್ಯವನ್ನೇ ತಂದುಕೊಂಡು ಸಮಾಧಿಯನ್ನಪ್ಪಿ ಈಶಾನಕಲ್ಪದಲ್ಲಿ ದಿವಾಕರಪ್ರಭವೆಂಬ ವಿಮಾನದಲ್ಲಿ

13

ವ॥ ಎಂದು ಧೈರ್ಯಮನೆ ಮನದೊಳವಲಂಬಿಸಿ ಸಮಾಧಿವಡೆದೀಶಾನಕಲ್ಪದೊಳ್ ದಿವಾಕರ ಪ್ರಭಮೆಂಬ ವಿಮಾನದೊಳ್ ದಿವಾಕರಪ್ರಭನೆಂಬ ದೇವನಾದಂ, ಆ ಪ್ರೀತಿವರ್ಧನನುಮಾ ಭಟ್ಟಾರಕರ್ ದಯೆಗೆಯ್ದ ದೀಕ್ಷೆಯೆಂಬ ಕಲ್ಪಲತೆಯ ಫಲದಿಂದವಮೃತಪದವಿಯಂ ಪಡೆದಂ, ಆತನ ಸೇನಾನಾಯಕ ಮಂತ್ರಿಪುಂಗವಪುರೋಹಿತರ್ ಮೂವರುಂ ನೃಪನ ದಾನಾನುಮೋದದ ಫಲದಿಂದಮುತ್ತರಕುರುವಿ ನೊಳಾರ್ಯರಾಗಿ ಜೀವಿತಾಂತ್ಯದೊಳೀಶಾನ ಕಲ್ಪದೊಳ್ ಸೇನಾನಾಯಕನಪ್ಪಾರ್ಯಂ ಪ್ರಭಾಕರವಿಮಾನದೊಳ್ ಪ್ರಭಾಕರ ನೆಂಬೊಂ ದೇವನಾದೊಂ: ಮಂತ್ರಿಯಪ್ಪಾರ್ಯಂ ಕಾಂಚನವಿಮಾನದೊಳ್ ಕನಕಪ್ರಭನೆಂಬ ದೇವನಾದಂ; ಪುರೋಹಿತನಪ್ಪಾರ್ಯಂ ರುಷಿತಾಖ್ಯವಿಮಾನದೊಳ್ ಪ್ರಭಂಜನನೆಂಬೊಂ ದೇವನಾದಂ; ಮುನ್ನ ಪೇಳ್ದ ಶಾರ್ದೂಲಚರನಪ್ಪ ದೇವಂ ಬೆರಸು ಅಂತು ನಾಲ್ವರ್ ದೇವರ್ ಲಲಿತಾಂಗದೇವನಾದಂದು ನಿನಗೆ ಪರಿವಾರದೇವರಾದರ್; ಆ ಲಲಿತಾಂಗದೇವನೈ ನೀನಿಲ್ಲಿ ಬಂದು ವಜ್ರಜಂಘನಾದೈ; ನಿನ್ನ ದೇವಿಯ... ಸ್ವಯಂಪ್ರಭೆಯುಮೀಗಳ್ ಶ್ರೀಮತಿಯಾದಳ್ ಶಾರ್ದೂಲಚರನಪ್ಪ ದಿವಾಕರದೇವಂ ಬಂದು ಮ...ತಿಸಾಗರನೆಂಬಂಗಮಾತನ ಭಾರ್ಯೆ ಶ್ರೀಮತಿಗಂ ತನೂಜನಾಗಿ ನಿನಗೆ ಮಂತ್ರಿಮತಿ ವರನಾದಂ; ಪ್ರಭಾಕರಾಮರಂ ಬಂದು ಅಪರಾಜಿತಂಗಮಾರ್ಜವೆಗಂ ನಂದನನಾಗಿ ಸೇನಾನಾಯಕನಕಂಪ ನಾದಂ ; ಕನಕಪ್ರಭದೇವಂ ಬಂದು ಶ್ರುತಕೀರ್ತಿಗಮನಂತಮತಿಗಂ ತನಯನಾಗಿ ಪುರೋಹಿತನಾನಂದ ನಾದಂ; ಪ್ರಭಂಜನಕಲ್ಪಜಂ ಧನದತ್ತಂಗಂ ಧನದತ್ತೆಗಂ ಪುತ್ರನಾಗಿ ನಿಜಶ್ರೇಷ್ಠಿ ಧನಮಿತ್ರನಾದಂ;

ದಿವಾಕರಪ್ರಭನೆಂಬ ದೇವನಾದನು. ಆ ಪ್ರೀತಿವರ್ಧನನೂ, ಆ ಭಟ್ಟಾರಕರು ದಯಮಾಡಿ ನೀಡಿದ ದೀಕ್ಷೆಯೆಂಬ ಕಲ್ಪಲತಾಫಲದಿಂದ ಅಮೃತಪದವಿಯನ್ನು ಪಡೆದನು. ಆತನ ಸೇನಾನಾಯಕನೂ, ಮಂತ್ರಿ ಪುರೋಹಿತರೂ ದಾನಾನುಮೋದನಫಲದಿಂದ ಉತ್ತರ ಕುರುವಿನಲ್ಲಿ ಆರ್ಯರಾಗಿ ಹುಟ್ಟಿದರು. ಸತ್ತ ಮೇಲೆ ಈಶಾನಕಲ್ಪದಲ್ಲಿ ಸೇನಾನಾಯಕನೆಂಬ ಆರ್ಯನು ಪ್ರಭಾಕರವಿಮಾನದಲ್ಲಿ ಪ್ರಭಾಕರನೆಂಬ ದೇವನಾದನು. ಮಂತ್ರಿಯಾದ ಆರ್ಯನು ಕಾಂಚನವಿಮಾನದಲ್ಲಿ ಕನಕಪ್ರಭನೆಂಬ ದೇವನಾದನು. ಪುರೋಹಿತನಾದ ಆರ್ಯನು ರುಷಿತವೆಂಬ ವಿಮಾನದಲ್ಲಿ ಪ್ರಭಂಜನನೆಂಬ ದೇವನಾದನು. ಹಿಂದೆ ನುಡಿದ ಶಾರ್ದೂಲಚರನೆನಿಸಿದ ದೇವನೊಡನೆ ಈ ನಾಲ್ಕು ದೇವತೆಗಳೂ ನೀನು ಲಲಿತಾಂಗದೇವನಾದಂದು ನಿನಗೆ ಪರಿವಾರದೇವರಾದರು. ಲಲಿತಾಂಗದೇವನಾದ ನೀನೇ ಈಗ ವಜ್ರಜಂಘನಾಗಿ ಜನಿಸಿದ್ದೀಯೆ. ನಿನ್ನ ದೇವಿಯಾದ ಆ ಸ್ವಯಂಪ್ರಭೆಯೇ ಈಗ ಶ್ರೀಮತಿಯಾಗಿ ಜನಿಸಿದ್ದಾಳೆ. ಶಾರ್ದೂಲಚರನಾದ ದಿವಾಕರಪ್ರಭದೇವನು ಬಂದು ಮತಿಸಾಗರನಿಗೂ ಆತನ ಮಡದಿ ಶ್ರೀಮತಿಗೂ[1] ಮಗನಾಗಿ ನಿನ್ನ ಮಂತ್ರಿ ಮತಿವರನಾದನು. ಪ್ರಭಾಕರಾಮರನು ಬಂದು ಅಪರಾಜಿತನಿಗೂ ಆರ್ಜವೆಗೂ ಮಗನಾಗಿ ಸೇನಾನಾಯಕ ಅಕಂಪನನಾದನು. ಕನಕಪ್ರಭದೇವನು ಬಂದು ಶ್ರುತಕೀರ್ತಿಗೂ ಅನಂತಮತಿಗೂ ತನಯನಾಗಿ ಪುರೋಹಿತನಾದ ಆನಂದನಾದನು. ಪ್ರಭಂಜನಕಲ್ಪಜರು ಧನದತ್ತನಿಗೂ ಧನದತ್ತೆಗೂ ಮಗನಾಗಿ ನಿಜಶ್ರೇಷ್ಠಿ ಧನಮಿತ್ರನಾದನು. ಆದಕಾರಣ ಇವರ ಸ್ನೇಹವು ಹಿರಿದಾದುದು. ಈ ಭವಕ್ಕೆ ಎಂಟನೆಯ ಭವದಲ್ಲಿ ನೀನು ಆದಿತೀರ್ಥಂಕರನಾದಾಗ

1 ಇವಳು ವಜ್ರಜಂಘನ ಪತ್ನಿಯಾದ ಶ್ರೀಮತಿಗಿಂತ ಬೇರೆಯಾದವಳು.

ಆದುಕಾರಣದಿಂದಿವರೊಳಪ್ಪ ಸ್ನೇಹಂ ಪಿರಿದಾದಾದು. ಈ ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥ ಪ್ರವರ್ತಕನಾದಂದೀ ಶ್ರೀಮತಿ ದಾನತೀರ್ಥಪ್ರವರ್ತಕಂ ಶ್ರೇಯಾಂಸನಕ್ಕುಂ ಈ ನಿನ್ನ ಮಂತ್ರಿ ಮತಿವರನಂದು ನಿನಗೆ ಭರತೇಶ್ವರನೆಂಬನಾತ್ಮಜನಕ್ಕುಂ; ಈ ಭವದೀಯಸೇನಾ ನಾಯಕನಕಂಪನುಂ ಬಾಹುಬಲಿಯೆಂಬ ತನಯನಕ್ಕುಂ; ಈ ಭವತ್ಪುರೋಹಿತನಾನಂದಂ ವೃಷಭ ಸೇನನೆಂಬೊಂ ತನೂಜನಕ್ಕುಂ, ಈ ನಿನ್ನ ಶ್ರೇಷ್ಠಿ ಧನಮಿತ್ರನನಂತವೀರ್ಯನೆಂಬ ತನೂಭವನಕ್ಕು ಮೆಂಬುದುಮತಿಪ್ರೀತಿಯಿಂ ವಿಕಸಿತವದನಸರೋಜನಾಗಿ,

ಪಿಂಗಿದುದೀಗಳೆನ್ನ ಬೆಸಗೊಂಡೆಡೆಯೊಂದು ತಮಂ ತ್ವದೀಯವಾ
ಕ್ಯಂಗಳಿನಿನ್ನುಮೊಂದೆನಗೆ ವಿಸ್ಮಯಮಾದಪುದೀ ತ್ವದಂಘ್ರಿಪ
ದ್ಮಂಗಳನೈದೆ ಮಚ್ಚಿ ನೆಲಸಿರ್ದಪುವೀ ಪುಲಿ ಪಂದಿ ಕೋಡಗಂ
ಮುಂಗುರಿಯೆಂಬ ನಾಲ್ಕಱ ಭವಾಳಿಯಂ ಬೆಸಸಿಂ ಮುನೀಶ್ವರಾ ೧೪

ವ॥ ಎಂಬುದುಂ ಗಗನಚಾರಣರಿಂತೆಂದು ಬೆಸಸಿದರ್:- ಈ ಶಾರ್ದೂಲಂ ಪ್ರಾಗ್ಜನ್ಮದೊಳೀ ವಿಷಯದ ಹಸ್ತಿನಾಪುರದ ಪರದಂ ಧನದತ್ತಂಗಮಾತನ ಪರದಿತಿ ಧನದತ್ತೆಗಮುಗ್ರಸೇನನೆಂಬೊಂ ತನೂಜನಪ್ರತ್ಯಾಖ್ಯಾನಕ್ರೋಧದಿಂ ತಿರ್ಯಗಾಯುಷ್ಯಂಗಟ್ಟಿ,

ಅರಸನ ಕೋಷ್ಠಾಗಾರದ
ಕರಣಂಗಳ ಕಾಪನೆಯ್ದೆ ಬಂಚಿಸಿ ಕಳ್ದುಂ
ಕರೆದುಮೊಳಗೊಳಗೆ ಸುಟಿಯು
ತ್ತಿರೆ ನೃಪನದನಱಿದು ಪಿಡಿದು ತರವೇಟ್ಟಾಗಳ್ ೧೫

ಶ್ರೀಮತಿಯು ದಾನತೀರ್ಥಪ್ರವರ್ತಕನಾದ ಶ್ರೇಯಾಂಸನಾಗುವಳು. ಈ ನಿನ್ನ ಮಂತ್ರಿ ಮತಿವರನು ನಿನಗೆ ಭರತೇಶ್ವರನೆಂಬ ಮಗನಾಗಿ ಹುಟ್ಟುವನು. ನಿನ್ನ ಸೇನಾನಾಯಕನಾದ ಅಕಂಪನನು ಬಾಹುಬಲಿಯೆಂಬ ಮಗನಾಗಿ ಹುಟ್ಟುವನು. ನಿನ್ನ ಪುರೋಹಿತನಾದ ಆನಂದನು ವೃಷಭಸೇನನೆಂಬ ಮಗನಾಗುವನು. ನಿನ್ನ ಶೆಟ್ಟಿ ಧನಮಿತ್ರನು ಅನಂತವೀರ್ಯ ನೆಂಬ ಮಗನಾಗಿ ಜನಿಸುವನು-ಎಂದು ಹೇಳಲು ವಜ್ರಜಂಘನ ಮುಖವು ಪ್ರೀತಿಯಿಂದರಳಿತು. ಅವನು ೧೪. "ಮುನೀಶ್ವರನೇ! ನಿಮ್ಮ ಮಾತುಗಳಿಂದ ನಾನು ಪ್ರಶ್ನಿಸಿದ ಒಂದೆಡೆಯಲ್ಲಿನ ಅಜ್ಞಾನವು ವಿನಾಶಗೊಂಡಿತು. ಈಗ ಮತ್ತೊಂದು ವಿಸ್ಮಯವು ನನಗೆ ತಲೆದೋರಿದೆ. ನಿನ್ನ ಪಾದಗಳನ್ನು ದೃಢವಾಗಿ ನಂಬಿ ನೆಲೆಸಿರುವ ಈ ಹುಲಿ, ಹಂದಿ, ಕೋಡಗ ಮತ್ತು ಮುಂಗುಸಿಗಳ ಭವಾವಳಿಗಳನ್ನು ದಯವಿಟ್ಟು ತಿಳಿಸಿರಿ" ಎಂದು ಕೇಳಿಕೊಂಡನು. ವ॥ ಗಗನಚಾರಣರು ಹೀಗೆಂದರು - "ಈ ಹುಲಿಯು ಹಿಂದಿನ ಜನ್ಮದಲ್ಲಿ ಹಸ್ತಿನಾಪುರದ ವರ್ತಕನಾದ ಸಾಗರದತ್ತನಿಗೂ ಆತನ ಮಡದಿ ಧನವತಿಗೂ ಮಗನಾದ ಉಗ್ರಸೇನನು ಅಪ್ರತ್ಯಾಖ್ಯಾನ ಕ್ರೋಧ[1]ದಿಂದ ತಿರ್ಯಗಾಯುಷ್ಯವನ್ನು ಪಡೆದನು. ೧೫. ಅರಸನ ಉಗ್ರಾಣದ ಸಾಮಗ್ರಿಗಳ ರಕ್ಷಕನನ್ನು ವಂಚಿಸಿ ಅವನ್ನು ಕದ್ದು ಒಳಗೊಳಗೆ ಸುಳಿದಾಡುತ್ತಿದ್ದನು. ಅದನ್ನರಿತು ರಾಜನು ಕಳ್ಳನನ್ನು ಹಿಡಿದು ತರಲು ಆಜ್ಞಾಪಿಸಿದನು.

1 ನಾಲ್ಕು ಪ್ರಕಾರದ ಕ್ರೋಧಗಳಲ್ಲಿ ಇದು ಒಂದು.

ಘಾತಿಸೆ ಚಪೇಟಚರಣಾ
ಘಾತದೊಳಱಿದಿಲ್ಲಿ ಬಂದತಿಕ್ರೋಧನನಿಂ
ತೀ ತೆಱದಿಂ ಪುಲಿಯಾದನ
ತೀತಭವಾಂತರದೊಳೀ ವರಾಹನುಮರಸಾ ೧೬

ವ॥ ಈ ವಿಷಯದ ವಿಜಯಪುರದೊಳಾನಂದನೃಪತಿಗಂ ವಸಂತಸೇನೆಗಂ ಹರಿಕಾಂತನೆಂಬ ಪನಯನಪ್ರತ್ಯಾಖ್ಯಾನಮಾನದೊಳ್ ತಂದೆಗವಿನೀತನಾಗಿ ಪೇೞ್ದುದಂ ಗೆಯ್ಯದೆ,

ಶಿಲೆಯೊಳ್ ತಾಟಿಸಿ ತನ್ನಯ
ತಲೆಯಂ ಜರ್ಜರಿತಮಸ್ತಕಂ ಮಡಿದತ್ತಾ
ಕುಲನೀ ವರಾಹದೇಹಮ
ನಲಸದೆ ಪೊತ್ತಿರ್ದು ನಮೆದಪಂ ಧರಣಿಪತೀ ೧೭

ವ॥ ಈ ವಾನರಂ ಪೂರ್ವಜನ್ಮದೊಳ್ ಧ್ಯಾನಪುರದೊಳ್ ವಣಿಗ್ವರಂ ಕುಬೇರದತ್ತಂಗಂ ತದ್ವನಿತೆ ವಸುದತ್ತೆಗಂ ನಾಗದತ್ತನೆಂಬೊಂ ಮಗನಪ್ರತ್ಯಾಖ್ಯಾನಮಾಯೆಯಂ ಕೈಕೊಂಡು,

ಬಂಚಿಸಿ ತನ್ನನುಜೆಯ ಧನ
ಮಂ ಚಪಳಂ ಕೊಂಡು ಪುಸಿದು ಕಳವಳಿಸಿ ಖಳಂ
ಪಂಚತ್ವಮನೈದಿ ಮರು
ಚ್ಚಂಚಳಮನನೀಗಳಲ್ತೆ ವಾನರನಾದಂ ೧೮

ವ॥ ಈ ನಕುಳಂ ಪೋದ ಭವದೊಳ್ ಸುಪ್ರತಿಷ್ಠಪುರದೊಳ್ ಅಪ್ರತ್ಯಾಖ್ಯಾನಲೋಭಾಭಿ ಭೂತಂ ದ್ರವ್ಯಲೋಲುಪನೆಂಬಂ ಕಲ್ಲುರಿಗನಾಗಿ,

೧೬. (ಅನಂತರ ರಾಜನು) ಕೆನ್ನೆ ಹೊಡೆತದಿಂದಲೂ ಕಾಲೊದೆತದಿಂದಲೂ ಈತನನ್ನು ಕೊಲ್ಲಿಸಲು ಅತಿ ಕೋಪದವನಾದ ಉಗ್ರಸೇನನು ಅಳಿದು ಹುಲಿಯಾದನು. ವ॥ ರಾಜನೇ, ಹಿಂದಿನ ಜನ್ಮದಲ್ಲಿ ಈ ವರಾಹನು ಈ ದೇಶದ ವಿಜಯಪುರದಲ್ಲಿ ಆನಂದರಾಜನಿಗೂ ವಸಂತಸೇನೆಗೂ ಹರಿಕಾಂತನೆಂಬ ಮಗನಾಗಿ ಹುಟ್ಟಿ ಅಪ್ರತ್ಯಾಖ್ಯಾನ ಮಾನಕಷಾಯದಿಂದ ತಂದೆಗೆ ಅವಿನೀತನಾಗಿ ಹೇಳಿದ ಕೆಲಸಗಳನ್ನು ಮಾಡದೆ, ೧೭. ತನ್ನ ತಲೆಯನ್ನು ಕಲ್ಲಿನ ಮೇಲೆ ಕುಟ್ಟಿ ತಲೆಯನ್ನು ಜಜ್ಜಿಕೊಂಡು ಸತ್ತನು. ತತ್ಫಲವಾಗಿ ಅವನು ಈ ವರಾಹ ದೇಹವನ್ನು ಹೊತ್ತು ನಮೆಯುತ್ತಿದ್ದಾನೆ. ವ॥ ಈ ವಾನರನು ಪೂರ್ವಜನ್ಮದಲ್ಲಿ ಧ್ಯಾನಪುರದಲ್ಲಿ ಶ್ರೇಷ್ಠತಮನಾದ ಕುಬೇರದತ್ತನಿಗೂ ಅವನ ಹೆಂಡತಿ ವಸುದತ್ತೆಗೂ ನಾಗದತ್ತನೆಂಬ ಮಗನಾಗಿ ಅಪ್ರತ್ಯಾಖ್ಯಾನ ಮಾಯಾಕಷಾಯದಿಂದ ೧೮. ಈ ಖಳನು ತನ್ನ ತಂಗಿಯನ್ನು ವಂಚಿಸಿ ಅವಳ ಹಣವನ್ನು ಅಪಹರಿಸಿ ಸುಳ್ಳು ಹೇಳಿ ಕಳವಳಿಸಿ ಸತ್ತನು. ಗಾಳಿಯಂತೆ ಚಂಚಲವಾದ ಮನಸ್ಸುಳ್ಳವನಾಗಿದ್ದುದರಿಂದ ಈಗ ಕಪಿಯಾದನು! ವ॥ ಈ ಮುಂಗುಸಿಯೂ ಕಳೆದ ಜನ್ಮದಲ್ಲಿ ಸುಪ್ರತಿಷ್ಠಪುರದಲ್ಲಿ ಅಪ್ರತ್ಯಾಖ್ಯಾನ ಲೋಭದಿಂದ ಆಕ್ರಾಂತನಾಗಿ ಧನಾಶಾಗ್ರಸ್ತನಾದ ಲೋಲುಪನೆಂಬ

||ಉಜ್ವಳಂ||

ಪುರವರೇಶನ ಮಾಡಿದ ಚೈತ್ಯಕ್ಕಿಟ್ಟಗೆಗಳ್ ಬರೆ ನೋಡಿ ಕ
ಲ್ಲುರಿಗನೊಯ್ಯನೆ ಪೂರಿಗೆಗೊಟ್ಟೈದಾಱನೆ ಕೊಂಡವನಟ್ಟೆಯಿಂ
ದೊರಸಿ ನೋಲ್ಪುದುಮೊಂದವಱೊಳ್ ಪೊನ್ನಿಟ್ಟಗೆಯಾದೊಡೆ ರಾಗದಿಂ
ಪಿರಿದು ಬಟ್ಟಿಯವಂದಿರ ಕಯ್ಯಿಂದಿಟ್ಟಗೆಗೊಂಡವನೊಟ್ಟಿದಂ ೧೯

ವ|| ಒಂದು ದಿವಸಮಾತಂ ಕೆಲದೂರ್ಗೆ ಪೋಗುತ್ತುಂ ತನ್ನ ಮಗಂಗಿಟ್ಟಗೆಗೊಳ್ವ ಬೆಸನಂ ಪೇಳ್ದು ಪೋದೊಡವನೊಂದುಮಂ ಕೊಳ್ಳದಿರೆ ಮಗುಳ್ದು ಬಂದು,

ಬಡಿಯೊಳ್ ನಿಜತನಯನ ತಲೆ
ಯೊಡೆವಿನೆಗಂ ಬಡಿದ ಕಾರಣಂ ಕೊಂಡುಯ್ವರ್
ಪಡೆವುಗಿಡುವಿನೆಗಮೆಂದಾ
ಕಡುಲೋಭಂ ತನ್ನ ಕಾಲ್ಗಳಂ ಪಿಡಿದುಡಿದಂ ೨೦

ವ|| ತದ್ವೃತ್ತಾಂತಮೆಲ್ಲಮನಱಿದು ತತ್ಪುರಾಧೀಶಂ ದಂಡಿಸೆ ಗತಜೀವಿತನಾಗಿ ಬಂದಿಲ್ಲಿ ನಕುಳನಾದಂ; ಇಂತೀ ಶಾರ್ದೂಲವರಾಹಗೋಲಾಂಗೂಲನಕುಲಂಗಳ್ ನಾಲ್ಕುಂ ಭವದ್ದಾನಾನುಮೋದದಿಂ ಜಾತಿಸ್ಮರಂಗಳಾಗಿ ಭೋಗಭೂಮಿಗೆ ಬದ್ಧಾಯುಷ್ಯಂಗಳಾದುವು. ಅಂತು ದಿವ್ಯಮಾನುಷಗೋಚರಮಪ್ಪ ಸುಖಂಗಳಂ ನಿನ್ನೊಡನುಣುತ್ತುಂ ಬಂದು ಭರತದೊಳ್ ನೀಂ

ಮಿಠಾಯಿಗಾರನಾಗಿದ್ದನು[1]. ೧೯. ಆ ಪಟ್ಟಣದ ರಾಜನು ಕಟ್ಟಿಸುತ್ತಿದ್ದ ಬಸದಿಗಾಗಿ ಬರುವ ಇಟ್ಟಿಗೆಗಳನ್ನು ನೋಡಿ ಈ ಕಲ್ಲುರಿಗನು (ಮಿಠಾಯಿಗಾರ) (ಕೂಲಿಯಾಳುಗಳಿಗೆ) ಪೂರಿಗಳನ್ನು ಕೊಟ್ಟು ಐದಾರು ಇಟ್ಟಿಗೆಗಳನ್ನು ತರಿಸಿಕೊಂಡನು. ಅವನ್ನು ಪ್ರೀತಿಯಿಂದೊರಸಿ ನೋಡಲು ಅವುಗಳಲ್ಲೊಂದು ಚಿನ್ನದ ಇಟ್ಟಿಗೆಯಾಗಿತ್ತು. ಆಗ ಅತಿಲೋಭದಿಂದ ಆತನು ಕೂಲಿಯವರಿಂದ ಇಟ್ಟಿಗೆಗಳನ್ನು ಪಡೆದು ರಾಶಿ ಹಾಕಿದನು. ವ|| ಒಂದು ದಿನ ಕಲ್ಲುರಿಗನು ಸಮೀಪದೂರಿಗೆ ಹೋಗಬೇಕಾಯಿತು. ಆಗ ಮಗನಿಗೆ ಇಟ್ಟಿಗೆ ಕೊಳ್ಳುವ ಕಾರ್ಯವನ್ನು ವಹಿಸಿಹೋದನು. ಆದರೆ ಮಗನು ಒಂದು ಇಟ್ಟಿಗೆಯನ್ನೂ ಕೊಳ್ಳದೆಹೋದನು. ತಂದೆಯು ಮತ್ತೆ ಬಂದು, ೨೦. ಮಗನ ತಲೆಯನ್ನು ಬಡಿಗೆಯಿಂದ ಒಡೆಯುವವರೆಗೆ ಹೊಡೆದನು. ಆಮೇಲೆ ರಾಜಸೈನಿಕರು ಇದ್ದುದನ್ನು ಕಿತ್ತುಕೊಂಡು ತನ್ನನ್ನು ಹಿಡಿದುಕೊಂಡು ಹೋಗುವರು ಎಂದು ಹೆದರಿ, ಆ ಕಡುಲೋಭಿಯು ತನ್ನ ಕಾಲುಗಳನ್ನು ಕತ್ತರಿಸಿಕೊಂಡನು. ವ|| ಆ ವೃತ್ತಾಂತವನ್ನು ಕೇಳಿ ಆ ಪುರದೊಡೆಯನು ಕಲ್ಲುರಿಗನನ್ನು ದಂಡಿಸಿದನು. ಅವನು ಸತ್ತ ಮೇಲೆ ಇಲ್ಲಿ ಮುಂಗುಸಿಯಾದನು! ಹೀಗೆ ಹುಲಿ, ಹಂದಿ, ಕೋತಿ ಮತ್ತು ಮುಂಗುಸಿಗಳು

---

1 ಪೂರ್ವಪುರಾಣದಲ್ಲಿ (೮-೨೩೪) ಲೋಲುಪನು 'ಕಾಂದವಿಕ'ನೆಂದು ಹೇಳಿದೆ. ಕಾಂದವಿಕ = ರೊಟ್ಟಿ ಮಾಡುವವನು, ಮಿಠಾಯಿಗಾರ. ಈ ಆಧಾರದಿಂದ ಕಲ್ಲುರಿಗನೆಂದರೆ ಮಿಠಾಯಿಗಾರನೆಂಬುದು ಒಂದು ಊಹೆ. ಕಲ್ಲನ್ನು ಉರಿಸುವವನು ಕಲ್ಲುರಿಗ. ಕಲ್ಲು ಸುಡುವವನು, ಇಟ್ಟಿಗೆ ಸುಡುವವನು ಎಂಬ ಅರ್ಥವಿರಬಹುದು.

ಭವಿಷ್ಯತ್ತೀರ್ಥಕರನಾದಂದನುಕ್ರಮದೊಳ್ ನಿನಗನಂತವೀರ್ಯಾಚ್ಯುತವೀರ ಸುವೀರರೆಂಬ ತನಯರಪ್ಪರೆಂದಿಂತು ಚಾರಣಮುನೀಂದ್ರರ್ ಬೆಸಸಿ ಸತ್ಪಥೋನ್ನತಿಯಂ ನನ್ನಿಮಾಡುವಂತೆ ಸತ್ಪಥಾತಿಥಿಗಳಾದರ್. ಅರಸನುಂ ಶ್ರೀಮತಿಯುಮಂದೆಲ್ಲರುಮವರ ಗುಣಂಗಳನೆ ಮತಿವರಾದಿಗಳೊಳ್ ನುಡಿಯುತ್ತುಮಿರ್ದು ಮಱುದಿವಸಂ ಸಮಸ್ತಸಾಮಗ್ರಿಯಿಂ ಪಯಣದ ಮೇಲೆ ಪಯಣಂಬೋಗಿ ಪುಂಡರೀಕಿಣಿಯನೆಯ್ದಿ

ವಿಗಳದ್ಬಾಷ್ಪಾಂಬುದೀನಾನನೆಯೆನಿಸಿದ ಲಕ್ಷ್ಮೀಮತೀದೇವಿಯಂ ಮೆ
ಲ್ಲಗೆ ಸಂತೈಸುತ್ತುಮಾತ್ಮಾನುಜೆಯ ಮನದ ನಿರ್ವೇಗಮಂ ಪಿಂಗಿಸುತ್ತುಂ
ಬಗೆಯುತ್ತುಂ ಮಂತ್ರಿವರ್ಗಂಗಳೊಳನುನಯಮಂ ಪುಂಡರೀಕಂಗೆ ಸಾಮಾ
ದಿಗಳಿಂ ನಿಷ್ಕಂಟಕ ಮಾಡಿದನಖಿಳಮಹೀಚಕ್ರಮಂ ವಜ್ರಜಂಘಂ ೨೧

ವ॥ ಅಂತಾತ್ಮೀಯಭಾಗಿನೇಯನನಾ ರಾಜ್ಯದೊಳ್ ಪದುಳಂಮಾಡಿ ಮಹಾಸಾಮಂತಮಂತ್ರಿ ಮಂಡಳಕ್ಕಪ್ಪಯಿಸಿ ನಿಜವಿಜಯರಾಜಧಾನಿಗುತ್ಪಳಖೇಟಕ್ಕೆವಂದು,

ದಿವಿಜೇಂದ್ರಾವಾಸಸೌಖ್ಯಕ್ಕತಿಶಯಮೆಸೆವೀ ಸೌಖ್ಯಮಾ ದೇವಿಗಂ ರೂ
ಪವಿಳಾಸಶ್ರೀಯೊಳೀ ದೇವಿಯೆ ಮಿಗಿಲಮರಾಕಾರಮಂ ಗೆಲ್ದುದೀ ಮಾ
ನವದೇಹಾಕಾರಮೆಂಬಂತಿರೆ ಭುವನಜನಂ ಶ್ರೀಮತೀವಕ್ತ್ರಚಂದ್ರ
ಚ್ಛವಿ ಚೆಲ್ವಂ ಮಾಳ್ಪಿನಂ ಭೋಗಿಸಿದನಖಿಳಭೋಗಂಗಳಂ ವಜ್ರಜಂಘಂ ೨೨

ನಿನ್ನ ದಾನಾನುಮೋದದಿಂದ ಜಾತಿಸ್ಮರಗಳಾಗಿ ಈ ಭೋಗಭೂಮಿಗೆ ಯೋಗ್ಯವಾದ ಆಯುಸ್ಸಿನ ಬಂಧವನ್ನು ಪಡೆದವು. ದಿವ್ಯಮಾನುಷಗೋಚರವಾದ ಸುಖಗಳನ್ನು ನಿನ್ನೊಡನುಣ್ಣುತ್ತಾ ಬಂದು ನೀನು ತೀರ್ಥಂಕರನಾದಾಗ ನಿನಗೆ (ಈ ನಾಲ್ವರು-ಹುಲಿ, ಹಂದಿ, ಕಪಿ, ಮುಂಗುಸಿಗಳು) ಕ್ರಮವಾಗಿ ಅನಂತವೀರ್ಯ, ಅಚ್ಯುತ, ವೀರ, ಸುವೀರರೆಂಬ ಪುತ್ರನಾಗಿ ಜನಿಸುವರೆಂದು ಚಾರಣಮುನೀಂದ್ರರು ಹೇಳಿ, ಸಜ್ಜನರ ಮಾರ್ಗದಿಂದ ದೊರೆಯುವ ಉನ್ನತಿಯೆಂಬುದನ್ನು ಸತ್ಯಮಾಡುವಂತೆ ಆಕಾಶಮಾರ್ಗದಲ್ಲಿ ಹೋದರು. ಅರಸನೂ ಶ್ರೀಮತಿಯೂ ಮತ್ತಿತರರೂ ಅವರ ಗುಣಗಳನ್ನೇ ಮತಿವರಾದಿಗಳೊಡನೆ ಗಾನಮಾಡುತ್ತ ಪಯಣದ ಮೇಲೆ ಪಯಣ ಮಾಡಿ ಸಮಸ್ತ ಸಾಮಗ್ರಿಗಳೊಡನೆ ಪುಂಡರೀಕಿಣಿಯನ್ನು ಸೇರಿದರು. ೨೧. ಕಂಬನಿ ಸುರಿಸುತ್ತ ದೀನಮುಖಳಾಗಿ ನಿಂತಿರುವ ಲಕ್ಷ್ಮೀಮತೀದೇವಿಯನ್ನು ವಜ್ರಜಂಘನು ಮೆಲ್ಲಗೆ ಸಂತೈಸಿದನು. ತನ್ನ ತಂಗಿಯಾದ ಅನುಂದರಿಯ ಮನದ ನಿರ್ವೇಗವನ್ನು ಹೋಗಲಾಡಿಸಿದನು. ಮಂತ್ರಿವರ್ಗಕ್ಕೆ ಉತ್ತಮ ನೀತಿಯನ್ನು ತಿಳಿಸಿ ಸಾಮಾದಿಗಳಿಂದ ವಜ್ರಜಂಘನು ಪುಂಡರೀಕನಿಗೋಸ್ಕರ ಸಮಸ್ತ ಭೂಮಂಡಲವನ್ನೂ ನಿಷ್ಕಂಟಕವನ್ನಾಗಿ ಮಾಡಿದನು. ವ॥ ಹೀಗೆ ತನ್ನ ತಂಗಿಯ ಮಗನಾದ ಪುಂಡರೀಕನನ್ನು ಆ ರಾಜ್ಯದಲ್ಲಿ ಕ್ಷೇಮವಾಗಿರಿಸಿ ಸಾಮಂತರಿಗೂ ಮಂತ್ರಿಮಂಡಲಕ್ಕೂ ಒಪ್ಪಿಸಿಕೊಟ್ಟು ತನ್ನ ವಿಜಯರಾಜಧಾನಿಯಾದ ಉತ್ಪಲಖೇಟಕ್ಕೆ ಬಂದನು. ೨೨. "ಅಮರಲೋಕದ ಸೌಖ್ಯಕ್ಕಿಂತ ಈ ಲೋಕದ ಸೌಖ್ಯವು ಅತಿಶಯವಾದುದು. ಆ ದೇವಲೋಕದ ಅಂಗನೆಗಿಂತ

ವ॥ ಅಂತನೇಕಸಂವತ್ಸರಂಗಳ್ ಸಲ್ವಿನೆಗಮೊಂದುದಿವಸಂ ರಜನೀಸಮಯದೊಳನರ್ಘ್ಯ ಮರಕತಮಣಿಶಿಲಾಸಂಪಾದಿತಮೇದಿನೀವಿಭಾಗದೊಳ್ ಅಮರಖಚರಕಿನ್ನರಮಿಥುನಸನಾಥವಿಚಿತ್ರಭಿತ್ತಿ ವಿರಾಜಿತದೊಳತಿಬಹಳಕಾಳಾಗರುಧೂಪಧೂಮಾಮೋದದೊಳತಿವಿಶದಮಣಿಪ್ರದೀಪಿಕೋದ್ದ್ಯೋತ ದೂರೀಕೃತತಮಸ್ತಮ[೧]ದೊಳನೇಕರತ್ನರಚಿತಪ್ರತಿಪಾದುಕವಿನ್ಯಸ್ತಕಾಂಚನಮಂಚೋಪಶೋಭಿತದೊಳ್ ಪಯಃಪಯೋಧಿಫೇನಸಂಕಾಶದುಕೂಲೋಪಪ್ರಚ್ಛದಾಚ್ಛಾದಿತ ವಿಚಿತ್ರನೇತ್ರೋಭಯೋಪಧಾನಶಯ್ಯಾತಳದೊಳನೇಕವಿಳಾಸಿನೀವಿಳಾಸಾವಾಸಭವನದೊಳಾ ದಂಪತಿಗಳನ್ಯೋನ್ಯಾಂಗಸ್ಪರ್ಶಸುಖೋನ್ಮೀಳಿತ ವಿಲೋಚನರಂತಂತೆ ನಿದ್ರಾಪರವಶಗತರಾಗಿರ್ದರ್; ಅನ್ನೆಗಮಲ್ಲಿ ಮುಚ್ಚಿರ್ದ ಹರಿನೀಲಗವಾಕ್ಷಜಾಲಕವಾಟ ಪುಟಂಗಳಂ ತೆಱೆಯಲ್ಮಱೆದು ಸೂರ್ಯಕಾಂತದ ಧೂಪಗುಂಡಿಗೆಯೊಳಳವಱಿಯದೆ ಸೆಜ್ಜೆವಳನಿಕ್ಕಿದ ಕೇಶಸಂಸ್ಕಾರಕಾಳಾಗರುಧೂಪಂ,

ಮೊದಲೊಳ್ ನೀಳ್ದು ಪೊದಱ್ದು ಪರ್ವಿ ಪದಪಂ ಕೈಕೊಂಡು ಮಂದೈಸಿ ಮಾ
ಣದೆ ತನ್ನಂದದೊಳೇೞ್ಗಿಗುಂದದೆ ನಿರುದ್ಧೋಚ್ಛ್ವಾಸಮಪ್ಪನ್ನೆಗಂ
ಪುದಿದಾ ದಂಪತಿಯಂ ಪುದುಂಗೊಳಿಸಿ ಲೋಕಾಶ್ಚರ್ಯಮಂ ಮಾಡಿ ಕೊಂ
ದುದು ಕೃಷ್ಣಾಗರುಧೂಪಧೂಮನಿವಹಂ ಕೃಷ್ಣೋರಗಂ ಕೊಲ್ವವೊಲ್ ೨೩

ರೂಪ ವಿಲಾಸಸಂಪತ್ತುಗಳಲ್ಲಿ ಈ ದೇವಿಯೇ (ಶ್ರೀಮತಿಯೇ) ಮಿಗಿಲು, ಅಮರಾಕೃತಿಯನ್ನು ಗೆದ್ದಿದಿಯೋ ಎಂಬಂತಿದೆ ಈ ಮಾನವಾಕೃತಿ" ಎಂದು ಭುವನಜನವು ಹೇಳಿಕೊಳ್ಳುತ್ತಿರಲು ಶ್ರೀಮತೀಮುಖಚಂದ್ರನ ಚೆಲುವನ್ನು ಹೆಚ್ಚಿಸುತ್ತ ವಜ್ರಜಂಘನು ಅಖಿಲಭೋಗಗಳನ್ನು ಭೋಗಿಸಿದನು. ವ॥ ಹೀಗೆ ಅನೇಕ ವರ್ಷಗಳು ಕಳೆದುವು. ಹೀಗಿರಲು ಒಂದು ರಾತ್ರಿ ಬಹುಬೆಲೆಬಾಳುವ ಮರಕತಮಣಿಶಿಲೆಗಳಿಂದ ರಚಿತವಾದ ಭೂಭಾಗದಲ್ಲಿ ವಿಲಾಸಭವನವು ರಾರಾಜಿಸುತ್ತಿದ್ದಿತು. ಅದರ ಗೋಡೆಗಳ ಮೇಲೆ ಅಮರ, ಕಿನ್ನರ ಮತ್ತು ಖಚರದಂಪತಿಗಳ ಸುಂದರವಾದ ಚಿತ್ರಪಟಗಳು ಶೋಭಿಸುತ್ತಿದ್ದುವು. ಕಾಲಾಗರುಧೂಪದ ಪರಿಮಳವು ಹರಡಿಕೊಂಡಿತ್ತು. ಮಣಿದೀಪಗಳ ಬೆಳಕಿನಿಂದ ಕತ್ತಲೆಯು ದೂರ ಸರಿದಿತ್ತು. ಪ್ರತಿಯೊಂದು ಕಾಲಿಗೂ ಅನೇಕ ರತ್ನಗಳನ್ನು ಕೆತ್ತಿದ ಕಾಂಚನಮಂಚದ ಮೇಲಿದ್ದ ಶಯ್ಯಾತಲಗಳ ಮೇಲೆ ಸಮುದ್ರದ ನೊರೆಯಂತೆ ಬೆಳ್ಳಗಿರುವ ರೇಷ್ಮೆ ದುಪ್ಪಟಿಗಳು ಹಾಸಲ್ಪಟ್ಟಿದ್ದುವು. ಉಭಯಪಾರ್ಶ್ವಗಳಲ್ಲಿಯೂ ರೇಷ್ಮೆಯ ದಿಂಬುಗಳು ಅವುಗಳ ಮೇಲೆ ಮಂಡಿತವಾಗಿದ್ದುವು. ಅನೇಕ ವಿಲಾಸಿನಿಯರ ವಿಲಾಸಗಳಿಗೆ ಆಶ್ರಯವಾದ ಆ ಸುಂದರಭವನದಲ್ಲಿ ಪರಸ್ಪರವಾಗಿ ದೇಹಗಳ ಸಂಸ್ಪರ್ಶಸುಖದಿಂದ ಉನ್ಮೀಲಿತನೇತ್ರರಂತೆ ಆ ರಾಜದಂಪತಿಗಳು (ಶ್ರೀಮತೀ ವಜ್ರಜಂಘರು) ನಿದ್ರಾಪರವಶರಾದರು. ಆಗ ಮುಚ್ಚಿದ್ದ ಹರಿನೀಲರತ್ನ ಗವಾಕ್ಷಗಳ ಬಾಗಿಲುಗಳನ್ನು ತೆರೆಯಲು ಅವರು ಮರೆತರು. ಸೂರ್ಯಕಾಂತದ ಧೂಪದ ಪಾತ್ರೆಯಲ್ಲಿ ಸೆಜ್ಜೆವಳನು ಕೇಶಸಂಸ್ಕಾರಕ್ಕಾಗಿ ಅಳವರಿಯದೆ ಕಾಲಾಗರುಧೂಪವನ್ನು ಇಕ್ಕಿದ್ದನು. ೨೩. ಆ ಕಾಲಾಗರುಧೂಪಸಮೂಹವು ಮೊದಲು ಉದ್ದವಾಗಿ ಹರಿದು ಹರಡಿಕೊಂಡಿತು. ಅನಂತರ ನಿಧಾನವಾಗಿ ಚಲಿಸಿ ತನ್ನ ಆಕಾರದಲ್ಲಿ ಸ್ವಲ್ಪವೂ ಕುಗ್ಗದೆ ಆ ದಂಪತಿಗಳನ್ನು ಉಸಿರಾಡದಂತೆ ಮಾಡಿ ಕೃಷ್ಣಸರ್ಪವು ಕೊಲ್ಲುವಂತೆ

೧ 'ತಮಸ್ತರದೊಳ್' ಎಂದು ಶುದ್ಧಪಾಠವಿರಬಹುದು. (ನೋಡಿ. ಪೂ.ಪು. ೯-೨೧)

ಬಿಡದೆ ಪೊಗೆ ಸುತ್ತೆ ತೋಳಂ
ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನಂ
ದೊಡೆಗಳೆದರೋಪರೋಪರೊ
ಳೊಡಸಾಯಲ್ಪಡೆದರಿನ್ನವೇಂ ಸೈಪೊಳವೇ ೨೪

ಭೋಗಾಂಗಮಾಗಿಯುಂ ಕೃ
ಷ್ಣಾಗರುಧೂಪಂ ಮುಸುಂಕಿ ಕೊಂದಿಕ್ಕಿದುದಾ
ಭೋಗಿಗಳನಿಂತು ಸಂಸೃತಿ
ಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್ ೨೫

ಅನಿತು ಸುಖದನಿತು ಭೋಗದ
ಮನುಜಯುಗಂ ನೋಡೆ ನೋಡೆ ತತ್‌ಕ್ಷಣದೊಳ್ ತಾ
ನಿನಿತೊಂದು ದೆಸೆಯನೆಯ್ದಿದು
ದೆನೆ ಜಡರೇನೆಂದು ನಂಬುವರ್ ಸಂಸೃತಿಯಂ ೨೬

ಬೆಳಗುವ ಸೊಡರ್ಗುಡಿ ಕಿಡೆ ಮನೆ
ಯೊಳಗೆ ತಮಂ ಪರ್ಬುವಂತೆ ಜೀವಂ ತನುವಿಂ
ತಳರಲೊಡಂ ವಿಚ್ಛಾಯತೆ
ಗೊಳಗಾದುವು ತೊಳಗುವವರ ಸುಂದರತನುಗಳ್ ೨೭

ವ॥ ಆಗಳಾದಿತ್ಯೋದಯದಿನವರಂ ನೋಡಿ ಹಾಹಾಕ್ರಂದನಧ್ವನಿಗಳಂತಃಪುರಕ್ಕಂ ಪುರಕ್ಕಂ ನೆಗೞೆ ಮತಿವರಾದಿಗಳ್ ತದ್ದಂಪತಿಗಳ್ಗೆ ಶರೀರಶೋಭೆಯಂ ಮಾಡಿ ಚಂದನಹರಿಚಂದನೇಂಧನಂಗಳೊಳ್

ಕೊಂದಿತು! ಇದು ಲೋಕಕ್ಕೆ ಆಶ್ಚರ್ಯಕರವಾದುದು. ೨೪. ಬಿಡದೆ ಹೊಗೆಯು ಸುತ್ತಿಕೊಂಡಿತು. ಅದರಿಂದ ತೋಳುಗಳನ್ನು ಸಡಿಲಿಸದೆಯೆ ಆ ಪ್ರಾಣವಲ್ಲಭರು ಜೊತೆಯಲ್ಲಿಯೇ ಪ್ರಾಣಗಳನ್ನು ಕಳೆದುಕೊಂಡರು. ಹೀಗೆ ಕಾಂತೆಯೂ ಕಾಂತನೂ ಜೊತೆಯಲ್ಲಿ ಸಾಯಲು ಅಳವಿಲ್ಲದ ಅದೆಷ್ಟು ಪುಣ್ಯವನ್ನು ಮಾಡಿದ್ದರೊ! ೨೫. ಭೋಗಕ್ಕೆ ಸಹಾಯಕವಾಗಿದ್ದರೂ ಆ ಕೃಷ್ಣಾಗರುಧೂಪವು ವ್ಯಾಪಿಸಿಕೊಂಡು ಆ ಭೋಗಿಗಳನ್ನು ಕೊಂದಿಕ್ಕಿತು! ಸಂಸ್ಕೃತಿಯ ಸೌಖ್ಯಗಳು ಸರ್ಪದ ಹೆಡೆಗಳಿಗಿಂತ ವಿಷಮವಾದುವು. ೨೬. ಅಷ್ಟು ಸುಖಕ್ಕೂ ಭೋಗಕ್ಕೂ ಆಗರವಾದ ಆ ದಂಪತಿಗಳು ನೋಡು ನೋಡುತ್ತಿರುವಂತೆಯೇ ದಾರುಣವಾದ ದೆಸೆಗೆ ತುತ್ತಾದರು. ಹೀಗಿರುವಾಗ ಮೂರ್ಖರಾದ ಜನರು ಏನಿದೆಯೆಂದು ಸಂಸಾರವನ್ನು ನಂಬುವರೋ! ೨೭. ಬೆಳಗುವ ದೀಪದ ಕುಡಿಗಳು ಆರಿದೊಡನೆಯೆ ಮನೆಯಲ್ಲೆಲ್ಲ ಕತ್ತಲೆಯು ಕವಿಯುವುದು. ಹಾಗೆಯೇ ಜೀವವು ದೇಹವನ್ನು ಬಿಟ್ಟೊಡನೆಯೆ ಅವರ ಸುಂದರವಾದ ತನುಗಳೂ ಕಾಂತಿಗುಂದಿದವು. ವ॥ ಆಗ ಸೂರ್ಯೋದಯವಾಯಿತು. ಮೃತರಾದ ವಜ್ರಜಂಘದಂಪತಿಗಳನ್ನು ನೋಡಿ ಹಾಹಾಕ್ರಂದನ ಧ್ವನಿಗಳು ಅಂತಃಪುರದಿಂದ ಪುರಕ್ಕೆ ಹರಡಿದುವು. ಮತಿವರಾದಿ ಮಂತ್ರಿಗಳು

ದಹನಕ್ರಿಯೆಯಂ ನಿರ್ವರ್ತಿಸಿ ತದ್ಧೂಪಧೂಪಮದೊಳಲ್ಲಿಯೆ ವಿಗತಜೀವಿತಂಗಳಾದ ತಿರ್ಯಗ್ಜಾತಿಗಳುಮಂ ಸಂಸ್ಕರಿಸಿ, ಬಟಿಯಂ ಶ್ರೀಮತೀತನಯಂ ವಜ್ರಬಾಹುವೆಂಬಂಗೆ ಧರಾಭಾರಮಂ ಕೊಟ್ಟು ರಾಜ್ಯದೊಳ್ ನಿಱಿಸಿ ತಪೋಭರದೊಳ್ ನಾಲ್ವರುಂ ನಿಂದು ಜೀವಿತವ್ಯಪಾಯದೊಳಧೋಗ್ರೈವೇಯಕದೊಳಹಮಿಂದ್ರ ಪದವಿಯಂ ತಾಳ್ದಿದರ್; ಅಂತು ಪಂಚತ್ವಮನ್ನೆದಿದ ವಜ್ರಜಂಘಂಗಂ ಶ್ರೀಮತಿಗಮಾತಿರಿಕಂಗಳ್ಗಮುತ್ತಮ ಪಾತ್ರದಾನಾನುಮೋದದ ಪುಣ್ಯಫಲದಿಂದಮೀ ಜಂಬೂದ್ವೀಪದ ಮಂದರಮಹೀಧರದುತ್ತರದಿಗ್ಭಾಗ ದೊಳಿರ್ದುತ್ತರಕುರುವೆಂಬುತ್ತಮಭೋಗಭೂಮಿಯೆ ಜನ್ಮಭೂಮಿಯಾದುದು ಅಲ್ಲಿ

ದರ್ಪಣಸಮತಳಮೆನೆ ಸಂ
ಸರ್ಪದ್ರತ್ನಾಂಶುಜಾಳಜಟಿಳಿತಮೆನೆ ಕಂ
ದರ್ಪಸುಖನಿಳಯಮೆನೆ ಸಂ
ತರ್ಪಣಕರಮಖಿಳಭೋಗಭೂಮಿವಿಭಾಗಂ ೨೮

ವ॥ ಮತ್ತಮಲ್ಲಿ

ಹಿಮಮೆಂದಾತಪಬಾಧೆಯೆಂದು ಮಱಿಯೆಂದಿಲ್ಲಾ ನೆಲಂ ಪಂಚರ
ತ್ನಮಯಂ ನಾಲ್ವೆರಲಲ್ಲದಾಗದೆಳವುಲ್ ನೀಲೋತ್ಪಳಾಬ್ಜಾಕರಾ
ಳಿ ಮನಂಗೊಳ್ವುದು ಮೆಲ್ಲನಲ್ಲಿ ಸುೞಿಗುಂ ಮಂದಾನಿಳಂ ನೀರ್ ಸುಧಾ
ಸಮಮುದ್ಯಾನವನಂ ಮದೋತ್ಕಪರಪುಷ್ಟೋದ್ದಾಮಕೋಳಾಹಳಂ ೨೯

ಆ ದಂಪತಿಗಳಿಗೆ ಶರೀರಶೋಭೆಯನ್ನು ಮಾಡಿ ಚಂದನ ಶ್ರೀಗಂಧಾದಿ ಕಟ್ಟಿಗೆಗಳಲ್ಲಿ ದಹನಕ್ರಿಯೆಯನ್ನು ನಡೆಸಿದರು. ಆ ಧೂಪದ ಹೊಗೆಯಲ್ಲಿಯೇ ವಿಲಾಸಗೃಹದಲ್ಲಿ ಸತ್ತ ತಿರ್ಯಕ್‌ಪ್ರಾಣಿಗಳನ್ನೂ ಸಂಸ್ಕರಿಸಿದರು. ಬಳಿಕ ಶ್ರೀಮತಿಯ ಮಗನಾದ ವಜ್ರಬಾಹುವಿನ ಮೇಲೆ ಭೂಭಾರವನ್ನು ಹೊರಿಸಿ ರಾಜ್ಯದಲ್ಲಿ ಸ್ಥಾಪಿಸಿ ಆ ನಾಲ್ವರು ಮಂತ್ರಿಗಳು ತಪೋ ನಿಮಗ್ನರಾದರು. ಅವರು ಮೃತರಾದ ಮೇಲೆ ಅಧೋಗ್ರೈವೇಯಕದಲ್ಲಿ ಅಹಮಿಂದ್ರರಾದರು. ಮೃತರಾದ ಶ್ರೀಮತೀ ವಜ್ರಜಂಘರಿಗೂ ಆ ತಿರ್ಯಕ್‌ಪ್ರಾಣಿಗಳಿಗೂ (ಹುಲಿ, ಹಂದಿ, ಕಪಿ, ಮುಂಗುಸಿಗಳಿಗೆ) ಉತ್ತಮ ಪಾತ್ರದಲ್ಲಿ ದಾನ ಮಾಡಿದ ಮತ್ತು ಅದನ್ನು ಅನುಮೋದಿಸಿದ ಕಾರಣ ಜಂಬೂದ್ವೀಪದ ಮಂದರಪರ್ವತದ ಉತ್ತರ ದಿಗ್ಭಾಗದಲ್ಲಿ ಉತ್ತರಕುರುವೆಂಬ ಉತ್ತಮ ಭೋಗಭೂಮಿಯು ಜನ್ಮಸ್ಥಾನವಾಯಿತು. ೨೮. ದರ್ಪಣ ಸಮತಲದಂತೆಯೂ ರತ್ನಕಿರಣ ಸಮೂಹದಿಂದ ವ್ಯಾಪ್ತವಾದಂತೆಯೂ ಮನ್ಮಥನ ಸುಖಕ್ಕೆ ಆವಾಸಭೂಮಿಯಾದಂತೆಯೂ ಆ ಭೋಗಭೂಮಿಯ ಭಾಗವು ಸಂತೋಷಕರ ವಾಗಿತ್ತು. ವ॥ ಮತ್ತೆ ಅಲ್ಲಿ, ೨೯. ಹಿಮ ಬಿಸಿಲು ಮತ್ತು ಮಳೆಯ ಬಾಧೆಯು ಇರಲಿಲ್ಲ. ಆ ನೆಲವು ಪಂಚರತ್ನಮಯ. ನಾಲ್ಕು ಬೆರಳಿಗಿಂತ ಎತ್ತರವಾಗಿ ಬೆಳೆಯದ ಎಳೆಯ ಹುಲ್ಲುಗಳೂ ನೀಲೋತ್ಪಲಗಳಿಂದ ತುಂಬಿದ ಕಮಲಾಕರಗಳೂ ಮನಸ್ಸನ್ನು ಸೆಳೆಯುವುವು. ಮಂದಾನಿಲನು ಮೆಲ್ಲನಲ್ಲಿ ಸುಳಿಯುವನು. ನೀರು ಅಮೃತಕ್ಕೆಣೆಯಾಗಿತ್ತು. ಉದ್ಯಾನವನಗಳು ಮತ್ತಕೋಕಿಲಗಳ ಕೋಲಾಹಲಗಳಿಂದ ವಿಜೃಂಭಿತವಾಗಿದ್ದವು.

ಪಗಲಿರುಳೆಂಬ ಭೇದಮನಯಂ ಬಡವರ್ ಕಡುಬಲ್ಲಿದರ್ ವಿಷಾ
ಹಿಗಣಮನೇಕರೌದ್ರಮೃಗಜಾತಿಗಳಾಳರಸೆಂಬುದೊಂದು ದಂ
ದುಗಮಳಿಪಾಯಿಲಂ ಮಱುಕಮಾಮಯಮಪ್ಪಪಮೃತ್ಯುವೆಂಬಿವ
ಲ್ಲಿಗೆ ಪೊಱಗೆಂದೊಡಿಂ ಸುಖಮನೇವೊಗಟ್ವಪುದೊ ಭೋಗಭೂಮಿಯಾ ೩೦

ವ॥ ಮತ್ತಮಲ್ಲಿ

ಮದ್ಯವಿಭೂಷಣವಸ್ತ್ರಾ
ತೋದ್ಯಸ್ರಗ್ಭವನಭಾಜನಾಶನದೀಪ
ಪ್ರೋದ್ಯಜ್ಜ್ಯೋತಿಸ್ಥಿತಿಯೊಳ
ಮುದ್ದ್ಯೋತಿಸೆ ತುದಿಯೊಳಂಗಮಿಂತು ದಶಾಂಗಂ ೩೧

ವ॥ ಎನಿಸಿದ ನಾನಾರತ್ನಮಯಂಗಳುಮಪ್ರತಿಹತಪ್ರಭಾದ್ಯೋತಿತ ದಿಙ್ಮುಖಂಗಳುಮಪ್ಪ ಕಲ್ಪವೃಕ್ಷಂಗಳ್,

ಕುಡಿದೊಡೆ ಸೊರ್ಕಿಸದವು ನಾ
ಣ್ಗೆಡಿಸದವು ಮನಕ್ಕಲಂಪನೀವುವು ರತಮಂ
ನಡೆಯಿಪುವೆನಿಸುವ ಮಧುಗಳ
ನೆಡೆಯುಡುಗದೆ ಕುಡುಗುಮುಚಿತಮದ್ಯಾಂಗಕುಜಂ ೩೨

ಮಕುಟಂ ಕೇಯೂರಂ ಕ
ರ್ಣಕುಂಡಲಂ ಕೊಪ್ಪು ಸರಿಗೆ ದುಸರಂ ಮಣಿಮು
ದ್ರಿಕೆ ತಿಸರಮೆಂಬ ಭೂಷಾ
ನಿಕರಮನಾ ಭೂಷಣಾಂಗತರು ಕುಡುತಿರ್ಕುಂ ೩೩

೩೦. ಹಗಲಿರುಳೆಂಬ ಭೇದವಾಗಲಿ, ಅನೀತಿಯಾಗಲಿ, ಬಡವರಾಗಲೀ, ಕಡುಬಲ್ಲಿದರಾಗಲೀ, ವಿಷಯುಕ್ತವಾದ ಹಾವುಗಳಾಗಲಿ, ಕ್ರೂರಜಂತುಗಳಾಗಲೀ, ಆಳರಸರೆಂಬ ಚಿಂತೆಯಾಗಲಿ, ಪಾಪಿಗಳಾಗಲೀ, ಮರುಕವಾಗಲೀ, ರೋಗರೂಪವಾದ ಅಪಮೃತ್ಯು ವಾಗಲೀ ಅಲ್ಲಿ ಇರಲಿಲ್ಲ. ಅಂದಮೇಲೆ ಆ ಭೋಗಭೂಮಿಸುಖವನ್ನು ಏನೆಂದು ಹೊಗಳಲು ಸಾಧ್ಯ? ವ॥ ಮತ್ತೆ ಅಲ್ಲಿ ೩೧. ಮದ್ಯ, ಆಭರಣ, ವಸ್ತ್ರ, ವಾದ್ಯ, ಹೂವು, ಮನೆ, ಭಾಜನ, ಅನ್ನ, ದೀಪ ಮತ್ತು ಜ್ಯೋತಿ ಎಂಬ ದಶಪದಾರ್ಥಗಳನ್ನು ಕೊಡುವ ಅಂಗಶಬ್ದಾಂತವಾದ ಮದ್ಯಾಂಗ ಆಭರಣಾಂಗ-ಮೊದಲಾದ ವ॥ ದಶಾಂಗಕಲ್ಪವೃಕ್ಷಗಳು ಅಲ್ಲಿ ರತ್ನಪ್ರಚುರವಾಗಿ ಅಪ್ರತಿಹತವಾದ ಕಾಂತಿಗಳಿಂದ ದಿಙ್ಮಂಡಲಗಳನ್ನು ಬೆಳಗುತ್ತಿದ್ದುವು. ೩೨. ಮದ್ಯಾಂಗ ವೃಕ್ಷಗಳು ನಿರಂತರವಾಗಿ ಮದ್ಯಗಳನ್ನು ಕೊಡುತ್ತವೆ. ಕುಡಿದರೆ ಅವು ಸೊಕ್ಕನ್ನುಂಟು ಮಾಡವು, ಲಜ್ಜೆಗೆಡಿಸವು, ಮನಸ್ಸಿಗೆ ಸಂತೋಷವನ್ನು ತರುವುವು, ರತಿಕ್ರಿಯೆಯನ್ನು ನಡೆಸಲು ಸಹಾಯಕವಾಗುವುವು! ೩೩. ಭೂಷಣಾಂಗವೃಕ್ಷವು ಕಿರೀಟವನ್ನೂ ಬಾಹುಮುರಿಯನ್ನೂ ಕರ್ಣಕುಂಡಲಗಳನ್ನೂ ಮಡಿಮಣಿಯನ್ನೂ ವಂಕಿಯನ್ನೂ ಎರಡೆಳೆಯ ಸರವನ್ನೂ ಮಣಿಮುದ್ರಿಕೆಯನ್ನೂ ಮೂರೆಳೆಯ ಸರವೇ

ಪೞೆ ಚಿತ್ರಾವಳಿ ಜೋಗಂ
ಪೞೆಯಂ ದೇವಾಂಗಮೆಂಬ ವಸನಂಗಳನೇಂ
ಗೞೆಯಿಸುವುದೊ ಮಡಿವಳ್ಳನ
ಪೞೆಯತನನೆ ಪೋಲ್ತು ವಿಶದ ವಸನಾಂಗಕುಜಂ ೩೪

ಅತಿಮೃದುರವದಾಯಿಗಳಂ
ತತಘನಸುಷಿರಾವನದ್ಧವಾದ್ಯಂಗಳನೇಂ
ಮತಮಱಿದೋಲಗಿಪುದೊ ದಂ
ಪತಿಗೆಂದುಮವಾರ್ಯವೀರ್ಯತೂರ್ಯಕ್ಷ್ಮಾಜಂ ೩೫

ಮಗಮಗಿಪ ಜಾದಿ ಪೊಂಗೇ
ದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ
ಬಗೆಯಱಿದೋಲಗಿಪುದು ಮಾ
ಲೆಗಾಱನಂ ಪೋಲ್ತುದಗ್ರಮಾಲ್ಯಮಹೀಜಂ ೩೬

ಹಾಟಕಭಿತ್ತಿಸಮನ್ವಿತ
ನಾಟಕಶಾಲೆಗಳ ವಿವಿಧಸೌಧಂಗಳ ಕೊಂ
ಡಾಟಮನೆ ಮೆಱೆದು ಮೆಚ್ಚಂ
ಪಾಟಿಸುವುವು ಮಿಥುನತತಿಗೆ ಗೃಹಮಹಿಜಾತಂ ೩೭

ಅನತಿಶಯಸೌಖ್ಯಭಾಜನ
ಜನಕ್ಕೆ ಭಾಜನಮಿವಪ್ಪುವೆಂಬಂತೆ ಕನ
ತ್ಕನಕಮಣಿಖಚಿತಬಹುಭಾ
ಜನಂಗಳಂ ಭಾಜನಾಂಗತರು ಕುಡುತಿರ್ಕುಂ ೩೮

ಮೊದಲಾದ ಆಭರಣಗಳನ್ನೂ ಕೊಡುತ್ತದೆ. ೩೪. ವಸನಾಂಗವೃಕ್ಷವು ರೇಷ್ಮೆ ಬಟ್ಟೆ, ಚಿತ್ರಾವಳಿ, ಭೋಗ, ದೇವಾಂಗವೆಂಬ ವಸ್ತ್ರಗಳನ್ನು ಮಡಿವಾಳನ ಪ್ರತಿನಿಧಿಯಂತೆ[1] ಕೊಡುತ್ತದೆ. ೩೫. ತೂರ್ಯವೃಕ್ಷವು ಮೃದುಧ್ವನಿಗೊಡುವ ತತ, ಘನ, ಸುಷಿರ, ಅವನದ್ಧ ಮುಂತಾದ ವಾದ್ಯಗಳನ್ನು ದಂಪತಿಗಳಿಗೆ ಮತವರಿದು ಒದಗಿಸುವುದು. ೩೬. ಮಾಲ್ಯವೃಕ್ಷವು ಸುವಾಸನೆಗೊಡುವ ಜಾಜಿ, ಪೊಂಗೇದಗೆ, ಮಲ್ಲಿಗೆ ಮೊದಲಾದ ಹಲವು ಬಗೆಯ ಹೂಮಾಲೆಗಳನ್ನು ಅವರವರ ಮನಸ್ಸನ್ನು ತಿಳಿದು ಮಾಲೆಗಾರನಂತೆ ನೀಡುತ್ತದೆ. ೩೭. ಗೃಹವೃಕ್ಷವು ದಂಪತಿಸಮೂಹಕ್ಕೆ ಚಿನ್ನದ ಗೋಡೆಗಳಿಂದ ಕೂಡಿದ ನಾಟಕಶಾಲೆಗಳನ್ನೂ ವಿವಿಧವಾದ ಉಪ್ಪರಿಗೆಯ ಮನೆಗಳನ್ನೂ ಕೊಟ್ಟು ಉಪಚರಿಸುತ್ತದೆ. ೩೮. ಭಾಜನಾಂಗ ವೃಕ್ಷವು ಅತಿಶಯ ಸೌಖ್ಯವಿರದ ಜನಕ್ಕೆ ಇವು ಆಧಾರವಾಗುವುವೋ ಎನ್ನುವಂತೆ

---

1 ಪೞೆಯತ = ಪ್ರತಿನಿಧಿ (?) ಬಟ್ಟೆವ್ಯಾಪಾರಿ (?) 'ಚೀನಪಟ್ಟದುಕೂಲಾನಿ ಪ್ರಾವಾರಿಪರಿಧಾನಕಂ' ಎಂಬ ಐದು ಬಗೆಯ ಬಟ್ಟೆಗಳನ್ನು ಕೊಡುವುದೆಂದು ಪೂರ್ವಪುರಾಣದಲ್ಲಿದೆ (೯-೪೮)

ಅಮರ್ದಿನ ಸವಿಯೊಳಗೀ ಸವಿ
ಸಮನೆನೆ ತೇಜೋಬಳಾಯುರಾರೋಗ್ಯಸಮೇ
ತಮನಮೃತಾನ್ನಮನೊಲ್ದೀ
ಗುಮಾಗಳುಂ ಭೋಜನಾಂಗಕಲ್ಪಾವನಿಜಂ ೩೯

ಆಪೊತ್ತುಂ ಮಣಿದೀಪಕ
ಳಾಪೋದ್ಯಜ್ಜ್ಯೋತಿಗಳ್ ದಿಶಾಮಂಡಲಮಂ
ವ್ಯಾಪಿಸುತಿರೆ ಸೊಗಯಿಸುವುವು
ದೀಪಾಂಗಜ್ಯೋತಿರಂಗಕಲ್ಪಕುಜಂಗಳ್ ೪೦

ನೀಡಿದ ಕಯ್ಗೆ ನೀಡಿರದೆ ಬೇಡಿದ ಭೋಗಮನೇನಾದೊಡಂ
ನೀಡುವ ಕಲ್ಪವೃಕ್ಷನಿಕರಂಗಳೆ ಭೋಗದಲಂಪನಾವಗಂ
ಮಾಡೆ ಮನಂ ವಿನೋದರಸದೊಳ್ ತಡಮಾಡೆ ಮಗುಳ್ದು ಮನ್ಮಥ
ಕ್ರೀಡೆಗೆ ನೋಡೆ ನಾಡೆ ಗುಜೆಯಪ್ಪುವು ದಂಪತಿ ಭೋಗಭೂಮಿಯೊಳ್ ೪೧

ವ|| ಮತ್ತಮಲ್ಲಿ ಕುಶೀಲಕುತ್ಸಿತಾಚಾರಕುವೇಷಕುದೃಷ್ಟಿಗಳುಂ ಗೃಹೀತವ್ರತಪರಿಚ್ಯುತರುಂ ಮಾಯಾಚಾರಪರಿಣತರುಮಪ್ಪ ಅಪಾತ್ರದಾನಿಗಳುಂ ತಿರ್ಯಗ್ಜಾತಿತ್ವಮಂ ಪೊರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರವೈರಂಗಳಿಲ್ಲದೆ ಅನಾಮಯಂಗಳುಮಪಗತಬಾಧಂಗಳುಮಾಗಿ ರಮಿಯಿಸುವುವು. ಮತ್ತಮುತ್ತಮಪಾತ್ರದಾನಾನುಮೋದಫಲದಿಂದಲ್ಲಿ ಪುಟ್ಟುವ ಜೀವಂಗಳ್ ನಾರೀಪುರುಷಸಂಯೋಗ

ಸುವರ್ಣಯುಕ್ತವೂ ಮಣಿಖಚಿತವೂ ಆದ ಪಾತ್ರೆಗಳನ್ನು ಒದಗಿಸುತ್ತದೆ. ೩೯. ಭೋಜನಾಂಗಕಲ್ಪವೃಕ್ಷವು ಅಮೃತದ ಸವಿಗೆ ಸಮಾನವಾದ ಸವಿಯುಳ್ಳ ತೇಜೋಬಲಾಯುರಾರೋಗ್ಯಗಳನ್ನು ಕೊಡುವ ಅಮೃತಾನ್ನವನ್ನು ಪ್ರೀತಿಸಿ ಯಾವಾಗಲೂ ನೀಡುತ್ತದೆ. ೪೦. ದೀಪಾಂಗ ಮತ್ತು ಜ್ಯೋತಿರಂಗವೆಂಬ ಕಲ್ಪವೃಕ್ಷಗಳು ಯಾವಾಗಲೂ ಮಣಿದೀಪಗಳ ಜ್ಯೋತಿಗಳು ದಿಶಾಮಂಡಲವನ್ನು ಹರಡಿಕೊಂಡು ಸೊಗಯಿಸುವಂತೆಸಗುವುವು. ೪೧. ನೀಡಿದ ಕೈಗಳಿಗೆ ಸ್ವಲ್ಪವೂ ತಡಮಾಡದೆಯೆ ಬೇಡಿದ ಭೋಗಗಳೆಲ್ಲವನ್ನೂ ಕಲ್ಪವೃಕ್ಷಗಳು ನೀಡುವುವು, ಭೋಗದಾಶೆಯನ್ನು ಯಾವಾಗಲೂ ಉಂಟುಮಾಡುವುವು, ಮನಸ್ಸನ್ನು ವಿನೋದರಸದಲ್ಲಿ ಮುಳುಗಿಸಿ ತೇಲಿಸುವುವು. ಆ ಭೋಗಭೂಮಿಯಲ್ಲಿ ದಂಪತಿಗಳನ್ನು ಅತ್ಯುತ್ಸಾಹದಿಂದ ರತಿಕ್ರೀಡೆಯಲ್ಲಿ ತೊಡಗಿಸುವುವು. ವ|| ಕೆಟ್ಟಸ್ವಭಾವವುಳ್ಳವರೂ ದುರಾಚಾರಿಗಳೂ ಹೀನವೇಷಧಾರಿಗಳೂ ಕುದೃಷ್ಟಿಗಳೂ ಕೈಹಿಡಿದ ವ್ರತಗಳಿಂದ ಜಾರಿದವರೂ ಮಾಯಾಚಾರದಲ್ಲಿ ಪರಿಣತರೂ ಆಗಿ ಅಪಾತ್ರದಾನಿಗಳಾದರೆ ಆ ಪ್ರದೇಶದಲ್ಲಿ ತಿರ್ಯಗ್ಜಾತಿಯಲ್ಲಿ ದಂಪತಿಗಳಾಗಿ ಹುಟ್ಟಿ ಅನ್ಯೋನ್ಯವೈರಗಳಿಲ್ಲದೆ, ರೋಗಗಳಿಲ್ಲದೆ, ನೋವುಗಳಿಲ್ಲದೆ ರಮಿಸುವರು. ಮತ್ತೆ ಉತ್ತಮ ಪಾತ್ರದಲ್ಲಿ ದಾನಮಾಡಿ, ಆ ದಾನಕ್ಕೆ ತಕ್ಕ ಫಲದಿಂದ ಅಲ್ಲಿ ಹುಟ್ಟುವ ಜೀವಗಳು ಸ್ತ್ರೀಪುರುಷ ಸಂಯೋಗದಿಂದುಂಟಾದ ಶುಕ್ಲ ಶೋಣಿತಗಳಲ್ಲಿ ಜೀವಯುಗ್ಮಗಳಾಗಿ ನೆಲೆಸಿ

ನಿಯೋಜಿತ ಶುಕ್ಲಾರ್ತವಂಗಳೊಳ್ ಜೀವಯುಗಳಂಗಳಾಗಿ ನೆಲಸಿ ಕಲಿಲಘನಘೇನಬುದ್ಬುದಾದಿ ಪರಿಣತಿಯಿಂ ನವಮಾಸಾವಸಾನಸಮಯದೊಳ್ ಸ್ತ್ರೀಪುರುಷಯುಗಳಮೆಯಾಗಿ ಪುಟ್ಟುಗುಂ; ಪುಟ್ಟಿದಾಗಳೆ ಮಾತಾಪಿತೃಯುಗಳಂಗಳ್ ಸೀಂತುಮಾಗುಳಿಸಿಯುಂ ಪರಾಸುಗಳಾಗೆ ನಿಜಶರೀರಂಗಳ್ ಮಂಜು ಕರಗುವಂತೆ ಕರಗೆ ಸಹಜದೊಳಪಾಪಿಗಳುಮಾರ್ಜವಂಗಳುಂ ಅತಿಮೃದುಗಳುಮಪ್ಪುದಱಿಂದೆ ನಾಕಲೋಕಪ್ರಾಪ್ತಂಗಳಕ್ಕುಂ; ಅವರ್ಕೆ ಪುಟ್ಟಿದ ಯುಗಳಂಗಳ್ ಏೞುದಿವಸಮುಂ ಪುರಾತನಪುಣ್ಯಕರ್ಮ ಕಾಮಧೇನುಸ್ತನೋಪಮಾನನಿಜಾಂಗುಳಿಜನಿತರಸಾಯನಾಸ್ವಾದದೊಳಮುತ್ತಾನ ಶಯ್ಯೆಯೊಳಂ ಕೞಿಪಿ, ಪೆಱಗೇೞುದಿವಸದೊಳ್ ತೆಮಳ್ದುಂ, ಪೆಱವೇೞುದಿವಸಕ್ಕೆ ತಳರ್ನಡೆನಡೆದುಂ, ಪೆಱವೇೞು ದಿವಸದೊಳ್ ಪದುಳಂ ನಡೆದುಂ ಪೆಱವೇೞುದಿವಸದೊಳ್ ಕಳಾಕಳಾಪಪ್ರವೀಣಂಗಳಾಗಿಯುಂ, ಪೆಱವೇೞು ದಿವಸದೊಳ್ ವಿಜ್ಞಾನವಿದಂಗಳಾಗಿಯುಂ, ಪೆಱವೇೞುದಿವಸದೊಳ್ ಸಂಪೂರ್ಣನವಯೌವನಂಗಳಾಗಿ ಶುಭಲಕ್ಷಣಾಲಕ್ಷಿತಶರೀರಂಗಳಾಗಿಯುಂ, ಅಂತು ನಾಲ್ವತ್ತೊಂಭತ್ತು ದಿವಸದೊಳ್ ಸಮಚತುರಸ್ರ ಸಂಸ್ಥಾನಸಂವಾಹನಂಗಳಱುಸಾಸಿರ ಬಿಲ್ನಿಡಿಯವಾಗಿ ದಿನತ್ರಯದೊಳ್ ಬದರೀಫಳ ಮಾತ್ರಾಹಾರಿಗಳು ಮಾರೋಗ್ಯಶರೀರಂಗಳುಂ ಸೌಂದರಾಕಾರಂಗಳುಂ ತ್ರಿಪಲ್ಯೋಪಮಜೀವಿಗಳುಮಾಗಿ,

ತೊಲಗದ ಜವ್ವನಂ ತವದ ಮೆಚ್ಚು ಮರಲ್ದುವ ನೋಟಮಟ್ಟೆಯುಂ
ಸಲಿಸುವ ಭೋಗಮೊಲ್ದಗಲದೋಪರ ಕೂಟಮನಂಗರಾಗದೊಳ್
ನಲಿವ ವಿನೋದಮಾದಮೆರ್ದೆಯೊಳ್ ತಡಮಾಡೆ ಸುಖಂಗಳೊಳ್ ಪಳಂ
ಚಲೆವುದು ನಾಕಲೋಕಮುಮನೇನಿರದೀವುದೊ ಭೋಗಭೂತಳಂ ೪೨

ಕಲಿಲ-ಘನ-ಪೇಶ್ಯರ್ಬುದಾದಿ ಪರಿಣಾಮಗಳನ್ನು ಹೊಂದಿ ಒಂಬತ್ತು ತಿಂಗಳ ಕೊನೆಯಲ್ಲಿ ಸ್ತ್ರೀ ಪುರುಷ ಯುಗ್ಮಗಳಾಗಿ ಹುಟ್ಟುವುವು. ಹುಟ್ಟಿದೊಡನೆಯೆ ತಾಯಿತಂದೆಗಳು ಸೀನಿ ಆಕಳಿಸಿ ಸಾಯುವರು! ಅವರ ಶರೀರಗಳು ಮಂಜು ಕರಗಿದ ಹಾಗೆ ಕರಗಲು ಸಹಜವಾಗಿ ಪಾಪಿಗಳಾಗದೆ ಋಜುಮಾರ್ಗಗಾಮಿಗಳೂ ಮೃದುಸ್ವಭಾವದವರೂ ಆದ ಕಾರಣ ಸ್ವರ್ಗಲೋಕವನ್ನು ಸೇರುವರು. ಅವರಿಗೆ ಜನಿಸಿದ ಹೆಣ್ಣುಗಂಡುಗಳು ಪೂರ್ವಪುಣ್ಯಕರ್ಮಗಳೆಂಬ ಕಾಮಧೇನುವಿನ ಸ್ತನಗಳಂತಿರುವ ತಮ್ಮ ಬೆರಳುಗಳಲ್ಲಿ ಹುಟ್ಟಿದ ರಸಾಯನವನ್ನು ಆಸ್ವಾದಿಸುತ್ತ ಮೇಲ್ಮುಖವಾಗಿ ಮಲಗಿ ಏಳು ದಿನಗಳನ್ನು ಕಳೆಯುವುವು! ಮುಂದಿನ ಏಳು ದಿನಗಳಲ್ಲಿ ತೆವಳುವುವು! ಆದರ ಮುಂದಿನ ಏಳು ದಿನಗಳಲ್ಲಿ ಎದ್ದು ನಡೆಯುವುವು. ಅದರ ಮುಂದಿನ ಏಳು ದಿನಗಳಲ್ಲಿ ಸುಖವಾಗಿ ನಡೆಯುವುವು. ಆದರ ಮುಂದಿನೇಳು ದಿನಗಳಲ್ಲಿ ಸಕಲ ಕಲೆಗಳಲ್ಲೂ ಪ್ರವೀಣರಾಗುವುವು! ಅದರ ಮುಂದಿನ ಏಳು ದಿನಗಳಲ್ಲಿ ವಿಜ್ಞಾನವಿದರಾಗುವರು. ಮುಂದಿನೇಳು ದಿನಗಳಲ್ಲಿ ಸಂಪೂರ್ಣ ನವಯೌವನವನ್ನು ಪಡೆದು ಶರೀರಗಳು ಶುಭಲಕ್ಷಣಗಳಿಂದ ಕೂಡಿದುವೂ ಆಗುವುವು. ಹೀಗೆ ನಾಲ್ವತೊಂಬತ್ತು ದಿನಗಳಲ್ಲಿ ಒಂದೇ ಸಮನಾಗಿ ಸರ್ವಾಂಗಸುಂದರವಾದ ಶರೀರಗಳಿಂದ ಆರುಸಾವಿರ ಬಿಲ್ಲುಗಳಷ್ಟು ಎತ್ತರವಾಗಿ ಬೆಳೆಯುವುವು. ಮೂರು ದಿನಗಳಿಗೆ ಒಮ್ಮೆ ಯಲಚಿಹಣ್ಣಿನ ಗಾತ್ರದಷ್ಟು ಆಹಾರವನ್ನು ಸೇವಿಸುತ್ತ ಆರೋಗ್ಯವುಳ್ಳ ಸುಂದರ ಶರೀರವುಳ್ಳವರಾಗಿ ತ್ರಿಪಲ್ಯೋಪಮಜೀವಿಗಳಾಗುವರು (ಅತಿದೀರ್ಘಜೀವಿಗಳಾಗುವರು). ೪೨. ಈ ಭೋಗಭೂಮಿಯು ಸ್ವರ್ಗಲೋಕದ ಸುಖವನ್ನೂ ಮೀರಿಸಿ ಸುಖವನ್ನು ಕೊಡುತ್ತದೆ. ಇಲ್ಲಿ ಯೌವನವು ಎಂದಿಗೂ ತೊಲಗದು. ತಪಸ್ಸಿಗೆ ತಕ್ಕ ಫಲವು ಕೈಗೆಟಕುತ್ತದೆ. ಅಲ್ಲಿನ

ವ॥ ಅಂತನೇಕಭೋಗನಿವಾಸಮೆನಿಸುವ ಭೋಗಭೂಮಿಯೊಳ್,

ಅಗರುವ ಧೂಪಧೂಮದೊಳೆ ಸೋರ್ಕಿದ ಸೋರ್ಕುಗಳಾಗಳಲ್ಲಿ ತೊ
ಟ್ಟಗೆ ತಿಳಿದಂತೆ ತನ್ಮನುಜದಂಪತಿ ದಂಪತಿಯಾಗೆ ತೋಳ ತ
ಳ್ತಗಲದಲಂಪಿನಿಂಪು ತವದಟ್ಟಿಱುಳುರ್ಕೆ ನಿಮಿರ್ಕೆಗುಂದದಾ
ವಗಮತಿಸೌಖ್ಯಮಂ ಪಡೆವುದೀ ದೊರೆಯುನ್ನತಿ ಪಾತ್ರದಾನದಾ ೪೩

ದಾನಾನುಮೋದದಿಂದಂ
ತಾ ನಾಲ್ಕುಂ ಮೃಗಮುಮಲ್ಲಿ ಪುಟ್ಟಿದುವೆನೆ ಪೇ
ೞೇನಂ ಸುಖಮಂ ಮಾಡದೊ
ದಾನದ ದಾನಾನುಮೋದದನುಪಮಪುಣ್ಯಂ ೪೪

ವ॥ ಒಂದು ದಿವಸಂ ಆ ವಜ್ರಜಂಘಾರ್ಯನಾತ್ಮೀಯಪ್ರಾಣೇಶ್ವರಿವೆರಸು,

ತುಱುಗಿದುದೊಂದು ಕೊಂಬು ತಳಿರಿಂ ಮುಗುಳಿಂ ಪೆಱತೊಂದು ಕೊಂಬು ಸು
ತ್ತಿಱಿದುದು ತಳ್ತ ಬಲ್ನಿಡಿಯ ಕಾಯ್ಗಳ ಗೊಂಚಲನೊಂದು ಕೊಂಬು ಪೊ
ತ್ತೆಱಗಿದುದೊಂದೆ ಮಾಮರದೊಳೊಂದೆಳಗೊಂಬದು ನೋಡ ನೋಡ ಪ
ಣ್ತೆಱಗಿದುದೇನಿದಂಗಜಮಹೀಭುಜನಿಕ್ಕೆಯೊ ಚಿತ್ರಶಾಲೆಯೋ ೪೫

ನೋಟವು ಕಂಗಳಿಗೆ ಬೆರಗನ್ನುಂಟುಮಾಡುತ್ತದೆ. ಭೋಗವು ಪ್ರೀತಿಯನ್ನು ಸಲ್ಲಿಸುತ್ತದೆ. ಎಂದೂ ಅಗಲದೆ ಪ್ರಣಯಿಗಳು ಕೂಡಿಕೊಳ್ಳುತ್ತಾರೆ. ಅನಂಗರಸದಲ್ಲಿ ನಲಿಯುವ ವಿನೋದವು ಹೃದಯದಲ್ಲಿ ಮೋಹವನ್ನುಂಟುಮಾಡಿ ಸುಖಿಗಳಲ್ಲಿ ತೊಡಗಿಸುವುದು. ವ॥ ಹೀಗೆ ಅನಂತಸುಖಿಗಳಿಗೆ ವಾಸಸ್ಥಾನವಾದ ಭೋಗಭೂಮಿಯಲ್ಲಿ, ೪೩. ಅಗರು ಧೂಪದ ಹೊಗೆಯಿಂದಾದ ವೈವುರೆತವು ತೊಟ್ಟನೆ ಶಾಂತವಾದಂತೆ ಆ ಮನುಜದಂಪತಿಗಳು (ಶ್ರೀಮತೀವಜ್ರಜಂಘರು) ಸತ್ತು ದೇವದಂಪತಿಗಳಾದರು. ಅವರು ರಾಜನ ಉನ್ನತಪಾತ್ರದಾನದ ಫಲವಾಗಿ ಬಾಹ್ವಾಲಿಂಗನಪ್ರಯುಕ್ತವಾದ ಸಂತೋಷವನ್ನೂ ಅಕ್ಷಯವಾದ ಪ್ರೀತಿಯನ್ನೂ ದೀರ್ಘಕಾಲಾನುಭಾವ್ಯವಾದ ಸೌಖ್ಯವನ್ನೂ ಪಡೆದರು. ೪೪. ಹಾಗೆ ದಾನವನ್ನು ಅನುಮೋದಿಸಿದ ಕಾರಣ ಆ ನಾಲ್ಕು ಮೃಗಗಳೂ ಅಲ್ಲಿ ಹುಟ್ಟಿದುವು. ಹೀಗಿರುವಾಗ ಆ ದಾನ, ದಾನಾನುಮೋದನ-ಇವುಗಳಿಂದುಂಟಾದ ಎಣೆಯಿಲ್ಲದ ಪುಣ್ಯವು ಯಾವ ಸುಖವನ್ನು ತಾನೆ ಉಂಟುಮಾಡುವುದು ಹೇಳು! ವ॥ ಒಂದು ದಿವಸ ಆ ವಜ್ರಜಂಘಾರ್ಯನು ತನ್ನ ಪ್ರಾಣೇಶ್ವರಿಯೊಡನೆ ಕೂಡಿಕೊಂಡು ೪೫. ಒಂದು ಕೊಂಬೆಯು ಚಿಗುರುಗಳಿಂದಲೂ ಮೊಗ್ಗುಗಳಿಂದಲೂ ತುಂಬಿಕೊಂಡಿದೆ. ಮತ್ತೊಂದು ಮಿಡಿಗಾಯಿಗಳ ಗೊಂಚಲಿನಿಂದ ಕೂಡಿದೆ. ಮಗುದೊಂದು ಎಳೆಗೊಂಬು ಇನ್ನೊಂದು ಕೊಂಬೆಯಲ್ಲೆರಗಿದೆ. ಸರಿಯಾಗಿ ನೋಡು! ಹಣ್ಣು ತುಂಬಿ ಬಗ್ಗಿದ ಈ ಮಾವಿನಮರವು ಕಾಮರಾಜನ ವಾಸಸ್ಥಾನವೋ ಇಲ್ಲವೇ ಚಿತ್ರಶಾಲೆಯೋ ಎಂಬಂತೆ ಕಾಣಿಸುತ್ತಿದೆ!" ಎಂದು ಹೇಳಿದನು.

ವ॥ ಎಂದು ಮತ್ತಮನೇಕಕುಸುಮಕಿಸಲಯಫಳಪರಿಣತಫಳಾವನಮ್ರಾಮ್ರತರುನಿರಂತರಿತ ವನಲಕ್ಷ್ಮಿಯನೋಜಿಲ್ದು ನೋಡುತಿರ್ಪನ್ನೆಗಂ ಗಗನತಳಜಳಧಿಯೊಳ್ ಬಹಿತ್ರದಂತೆ ಪರಿವ ಸೂರ್ಯಪ್ರಭನೆಂಬ ದೇವನ ವಿಮಾನಮಂ ನೋಡಿ,

ಪೋದ ಭವಂಗಳಂ ನೆನೆವಿನಂ ಗಗನಾಂತರದಲ್ಲಿ ಸೂರ್ಯಯು
ಗ್ಮೋದಯಮೆಂದುಮಿಲ್ಲದುದಿದಾದಪುದೆಂಬನೆಗಂ ವಿಶಾಲಪು
ಣ್ಯೋದಯಮಂದು ದಂಪತಿಗೆ ಸಾರ್ತರೆ ಸಾರ್ತರೆ ವಂದುದಾರರಾ
ಗೋದಯಮಂ ನಿಮಿರ್ಚಿದುದು ಕಣ್ಗೆ ವಿಯತ್ತಳಚಾರಣೋದಯಂ ೪೬

ವ॥ ಅಂತವತರಿಸಿದ ಚಾರಣದ್ವಂದ್ವಕ್ಕಾದ್ವಂದ್ವಮಿದಿರ್ವಂದು ಭಕ್ತಿಭರಾನತಿನಿಪತತ್ಕರ್ಣಪೂರ ಪಲ್ಲವಂ ತದೀಯಪಾದಪಲ್ಲವಂಗಳನಾನಂದಾಶ್ರುಮಿಶ್ರಿತಜಳಂಗಳೊಳ್ ತೊಳೆದುಂ ನಿಜೋತ್ತರೀಯ ಪಲ್ಲವಂಗಳೊಳ್ ತೊಡೆದುಂ ಸಮುತ್ತುಂಗಮಣಿಮಯಾಸನದೊಳ್ ಕುಳ್ಳಿರಿಸಿ,

ಮುನಿವೃಂದಾರಕವಂದ್ಯ ನಿಮ್ಮ ಚರಣಾಂಭೋಜಂಗಳಂ ಕಂಡು ಕ
ಣ್ಣನಿಗಳ್ ಮಾಣ್ದಪುವಿಲ್ಲ ಕಾರಣಮಿದೇಂ ಚಿತ್ತಕ್ಕತಿಪ್ರೀತಿ ತೊ
ಟ್ಟನೆ ಕೈಗಣ್ಮುವುದೇಕೆ ಪೂರ್ವಭವದೊಳ್ ಬಂಧುತ್ವಮುಂಟುಕ್ಕುಮಿಂ
ತಿನಿತೊಂದಿಲ್ಲದೊಡಾಗಲಾಯ್ತೆನಗಿದಂ ಕೇಳ್ವೊಂದು ಕೌತೂಹಳಂ ೪೭

ವ॥ ಎಂಬುದುಮವರೊಳಗ್ರಮುನಿ ಮುಗುಳ್ನಗೆನಕ್ಕು ಮಹಾಬಳವಿಯತ್ತಳಚರನಾದ ಭವದೊಳಾಂ ನಿನಗೆ ಸಚಿವನೆಂ ಸ್ವಯಂಬುದ್ಧನೆಂಬೆನಾಗಿ,

ವ॥ ಮತ್ತೆ ಅನೇಕ ಹೂವು ಚಿಗುರು ಕಾಯಿ ಹಣ್ಣುಗಳ ಭಾರದಿಂದ ಬಗ್ಗಿದ ಸುಂದರವಾದ ಮಾವಿನಮರಗಳಿಂದ ತುಂಬಿದ ವನಲಕ್ಷ್ಮಿಯನ್ನು ನೋಡುತ್ತಿದ್ದನು. ಆಗ ಆಗಸವೆಂಬ ಕಡಲಲ್ಲಿ ಹಡಗಿನಂತೆ ಚಲಿಸುವ ಸೂರ್ಯಪ್ರಭನೆಂಬ ದೇವನ ವಿಮಾನವನ್ನು ನೋಡಿದನು. ೪೬. ಪೂರ್ವಭವಗಳ ಸ್ಮರಣೆಯುಂಟಾಯಿತು. ಅಷ್ಟರಲ್ಲಿ ಹಿಂದೆಂದೂ ಗಗನಾಂತರದಲ್ಲಿ ಸಂಭವಿಸದ ಸೂರ್ಯದ್ವಯರ ಉದಯುವು ಇಂದು ಹೇಗೆ ಘಟಿಸಿತೆಂದು ಯೋಚಿಸುತ್ತಿರಲು, ಆ ದಂಪತಿಗಳಿಗೆ ವಿಶಾಲಪುಣ್ಯೋದಯವೊದಗಿತು. ಅದರಿಂದಾಗಿ ಗಗನತಲದಲ್ಲಿ ಚಾರಣದರ್ಶನವುಂಟಾಗಿ ಅವರ ಕಣ್ಣುಗಳಿಗೆ ರಾಗೋದಯವನ್ನು ಮಾಡಿತು. ವ॥ ಅಂತು ಅವತರಿಸಿದ ಚಾರಣಯುಗ್ಮವನ್ನು ಆ ದಂಪತಿಗಳು ಎದುರ್ಗೊಂಡರು. ಭಕ್ತಿಯ ಆಧಿಕ್ಯದಿಂದ ಅವರ ಕರ್ಣಾಭರಣವೆಂಬ ಪಲ್ಲವಗಳು ಬಾಗಿದುವು. ಅವರ ಪಾದಕಮಲಗಳನ್ನು ಸಂತೋಷಪ್ರಯುಕ್ತವಾದ ಕಣ್ಣೀರುಗಳಿಂದ ತೊಳೆದರು. ಉತ್ತರೀಯದ ಸೆರಗಿನಿಂದ ತೊಡೆದು ಉನ್ನತಾಸನದಲ್ಲಿ ಅವರನ್ನು ಕುಳ್ಳಿರಿಸಿದರು. ೪೭. "ಮುನಿ ಶ್ರೇಷ್ಠರಿಗೂ ವಂದ್ಯರಾದ ನಿಮ್ಮ ಪಾದಕಮಲಗಳನ್ನು ಕಂಡು ನಮ್ಮ ಕಣ್ಣೀರುಹನಿಗಳು ನಿಲ್ಲದೆ ಸುರಿಯುತ್ತಿವೆ. ಕಾರಣವೇನಿರಬಹುದು? ನಮ್ಮ ಮನಸ್ಸಿನಲ್ಲಿ ಅತಿಪ್ರೀತಿಯುಕ್ಕುತ್ತಿರು ವುದೇಕೆ? ಪೂರ್ವಭವದಲ್ಲಿ ನಮಗೂ ನಿಮಗೂ ಬಂಧುತ್ವವಿರಲೇಬೇಕು. ಹಾಗಿಲ್ಲದಿದ್ದರೆ ಕೇಳುವ ಕುತೂಹಲವು ನಮಗೇಕೆ ಬಂದಿತು?" ಎಂದು ಅವರನ್ನು ಕೇಳಿದರು. ವ॥ ಅವರಿಬ್ಬರಲ್ಲಿ ಒಬ್ಬನಾದ ಜ್ಯೇಷ್ಠಮುನಿಯು ಮುಗುಳ್ನಗೆ ನಕ್ಕು ಹೀಗೆಂದನು. "ನೀನು

ಪಡೆದು ಸಮಾಧಿಯಂ ನಿನಗೆ ನಿನ್ನ ವಿಯೋಗದ ದುಃಖದೊಳ್ ತಪ
ಕ್ಕೊಷ್ಟರಿಸಿ ಘೋರವೀರತಪದೊಳ್ ತನುವಂ ಬಡಮಾಡಿ ನೋಂಪಿಯೊಳ್
ಮುಡಿಪಿ ನಿರಾಕುಳಂ ಮೊದಲ ಸಗ್ಗದೊಳಾಂ ಮಣಿಚೂಳನಾಮಮಂ
ಪಡೆದಮರೇಂದ್ರಲೋಕಸುಖಸಾರಸಮುಚ್ಚಯದಂತನೆಯ್ದಿದೆಂ ೪೮

ವ॥ ಅಲ್ಲಿಂ ತಳರ್ದು ಜಂಬೂದ್ವೀಪದ ಪೂರ್ವವಿದೇಹದ ಪುಷ್ಕಳಾವತೀವಿಷಯದ ಪುಂಡರೀಕಿಣಿಯನಾಳ್ವ ಗುಣಪ್ರಿಯಂ ಪ್ರಿಯಸೇನಮಹೀಭುಜಂಗಂ ತತ್ಸುಂದರಿ ಸುಂದರಿಗಂ,

ಪ್ರೀತಿಂಕರನೆಂಬೆಂ ತನು
ಜಾತನೆನಾಂ ಪ್ರೀತಿದೇವನೆನ್ನಿಂ ಕಿಱಿಯಂ
ಖ್ಯಾತಯಶನೀ ತಪೋಧನ
ನೀ ತಪದಿಂದವಧಿವೆರಸು ಚಾರಣಗುಣಮಂ ೪೯

ಪಡೆದವಧಿಬೋಧದಿಂದೀ
ಯೆಡೆಯೊಳ್ ನೀಂ ಬಂದು ಪುಟ್ಟಿದುದನಱಿದಱಿವಂ
ಕುಡಲೆಂದು ಬಂದೆವಿದು ನಿನ
ಗೆಡೆಯುಡುಗದೆ ಕುಡುಗುಮುಚಿತಮುಕ್ತಿಶ್ರೀಯಂ ೫೦

ನಿನಗೆ ಜಯವರ್ಮನಾದಂ
ದಿನ ಭವದಿಂದಿತ್ತ ಭೋಗಕಾಂಕ್ಷೆಯೆ ತಿಣ್ಣಂ
ಮನದೊಳ್ ಸಮ್ಯಕ್ತ್ವದ ದೆಸೆ
ಯಿನಿತಿಲ್ಲ ದಲಮ್ಮ ಕೈಕೊಳಲ್ಕಿದು ಕಾಲಂ ೫೧

ಮಹಾಬಲಗಗನಚರನಾಗಿದ್ದಾಗ ನಾನು ನಿನ್ನ ಸಚಿವ ಸ್ವಯಂಬುದ್ಧನಾಗಿದ್ದೆನು! ೪೮. ನೀನು ಸಮಾಧಿಯನ್ನು ಪಡೆದ ಮೇಲೆ ನಿನ್ನ ಅಗಲಿಕೆಯ ದುಃಖದಿಂದ ಘೋರವೂ ವೀರವೂ ಆದ ತಪದಲ್ಲಿ ತೊಡಗಿದೆನು. ದೇಹವನ್ನು ವ್ರತದಿಂದ ಕೃಶಮಾಡಿ ಮೃತನಾದೆನು. ಮೊದಲ ಸ್ವರ್ಗದಲ್ಲಿ ಮಣಿಚೂಲನೆಂಬ ಹೆಸರಿನಿಂದ ಅಮರೇಂದ್ರಸುಖದ ಸಾರವನ್ನುಂಡೆನು. ವ॥ ಅಲ್ಲಿಂದ ಚಲಿಸಿ ಜಂಬೂದ್ವೀಪದ ಪೂರ್ವವಿದೇಹದ ಪುಷ್ಕಲಾವತಿಯ ಪುಂಡರೀಕಿಣಿಯನ್ನು ಆಳುವ ಗುಣಪ್ರಿಯನಾದ ಪ್ರಿಯಸೇನನಿಗೂ ಅವನ ಹೆಂಡತಿಯಾದ ಸುಂದರಿಗೂ ೪೯. ಪ್ರೀತಿಂಕರನೆಂಬ ಮಗನಾದೆನು. ಈತನು ನನ್ನ ಕಿರಿಯ ತಮ್ಮ ಪ್ರೀತಿದೇವ. ಇವನು ಕೀರ್ತಿವಂತನಾದ ತಪೋಧನ. ನಾವು ತಪಸ್ಸಿನಿಂದ ಅವಧಿಜ್ಞಾನಯುಕ್ತವಾದ ಚಾರಣಗುಣವನ್ನು ಪಡೆದೆವು. ೫೦. ಅವಧಿಜ್ಞಾನದಿಂದ ನೀನು ಇಲ್ಲಿ ಹುಟ್ಟಿರುವುದನ್ನು ತಿಳಿದು ನಿನಗೆ ಜ್ಞಾನೋಪದೇಶಕ್ಕಾಗಿ ಬಂದಿದ್ದೇವೆ. ಇದು ನಿನಗೆ ಮುಕ್ತಿಶ್ರೀಯನ್ನು ತಡಮಾಡದೆ ಕೊಡುತ್ತದೆ. ೫೧. ನೀನು ಜಯವರ್ಮನಾಗಿ ಹುಟ್ಟಿದಂದಿನಿಂದಲೂ ಇದುವರೆಗೆ ಭೋಗಾಕಾಂಕ್ಷೆಯು ಹೆಚ್ಚಿದೆ. ನಿನ್ನ ಮನದಲ್ಲಿ 'ಸಮ್ಯಕ್ತ್ವ'ದ ಜ್ಞಾನವು ಸ್ವಲ್ಪವೂ ಇಲ್ಲ. ವತ್ಸ, ಸಮ್ಯಕ್ತ್ವದ ಜ್ಞಾನವನ್ನು ಅಭಿವೃದ್ಧಿಪಡಿಸಿಕೊಳ್ಳಲು ಇದು ಸಕಾಲ.

ಘನಮಿಥ್ಯಾತ್ವದವಾನಳ
ಜಿನದ್ಧಜೀವಕ್ಕೆ ದೃಷ್ಟಿಮೋಹಪ್ರವಿನಾ
ಶನಮಿಲ್ಲದಂದು ಪುಟ್ಟದು
ಮನದೊಳ್ ಸ್ವರ್ಮೋಕ್ಷಸಾಧನಂ ಸಮ್ಯಕ್ತ್ವಂ ೫೨

ದೊರೆಕೊಳೆ ಕಾಲಲಬ್ಧಿ ಬಗೆದಂತಿರೆ ಕೂಡೆ ಗುರೂಪದೇಶಮಾ
ವರಿಸೆ ಜಿನೇಂದ್ರಭಕ್ತಿ ಪೊಱಪೊಣ್ಮೆ ದಯಾರಸಮಿಂತು ನಾಡೆಯುಂ
ಪರಿಕರದಿಂ ಮನಕ್ಕಜಿವು ಸಾರೆ ಭವಾಬ್ಧಿತಟಂ ಸಮೀಪಮಾ
ಗಿರೆ ದೊರೆಕೊಂಡ ದೃಷ್ಟಿವಿಭವಂ ಕಳೆಗುಂ ಖಳಕರ್ಮಬಂಧಮಂ ೫೩

ಸಮವಾಯಮಪ್ಪುದಲ್ತೆಂ
ದು ಮನಂ ಬಸಮಾಡಿ ದೋಷವಿರಹಿತನಾಪ್ತಂ
ಕ್ರಮದಾಪ್ತನೆ ಪೇೞ್ದುದದಾ
ಗಮಮಾಗಮದರ್ಥಮಾವುದದುವೆ ಪದಾರ್ಥಂ ೫೪

ಪರಮೋಪಶಮಂ ಧರ್ಮಾ
ನುರಾಗಮನುಕಂಪೆ ನೆಱೆದ ನಂಬುಗೆಯೆಂಬೀ
ಪರಮಜಿನಗದಿತಗುಣಪರಿ
ಕರದೊಳ್ ಕೂಡಿದುದೆ ನಿರುಪಮಂ ಸಮ್ಯಕ್ತ್ವಂ ೫೫

ಜೀವಾದಿ ನವಪದಾರ್ಥದೊ
ಳಾವಗಮುಟ್ಟೆಯನೆ ಮಾಡು ಮೂಢತ್ರಯದೊಳ್
ಭಾವಮನೆ ಬಿಸುಡು ಬೆಳಗುಗು
ಮೀ ವಿಧದಿಂ ನೆಗಟ್ಟೆ ನಿನ್ನ ದರ್ಶನರತ್ನಂ ೫೬

೫೨. ಗಾಢವಾದ ಮಿಥ್ಯಾತ್ವವೆಂಬ ಕಾಳ್ಗಿಚ್ಚಿನಿಂದ ಆವೃತವಾದ ಜೀವಕ್ಕೆ ದೃಷ್ಟಿ ಮೋಹದ ನಾಶವಾಗದಿದ್ದರೆ ಸ್ವರ್ಗ ಮತ್ತು ಮೋಕ್ಷಸಾಧಕವಾದ ಸಮ್ಯಕ್ತ್ವಜ್ಞಾನವು ಮೂಡುವುದಿಲ್ಲ. ೫೩. ಕಾಲವು ಒದಗಿ ಬರಬೇಕು. ಬಗೆದಂತೆ ಗುರೂಪದೇಶವು ಸಿಗಬೇಕು. ಜಿನೇಂದ್ರನ ಮೇಲೆ ಭಕ್ತಿಯು ಮೂಡಿಬರಬೇಕು. ದಯಾರಸವು ಹೊರಹೊಮ್ಮಬೇಕು. ಇಷ್ಟೆಲ್ಲ ಸಾಮಗ್ರಿಗಳೊದಗಿ ಮನಸ್ಸಿಗರಿವಾಗಿ ಸಂಸಾರಸಾಗರದ ಆಚೆಯ ದಡವು ಸಮೀಪಿಸಿದರೆ ದೃಷ್ಟಿವಿಭವವು ದುಷ್ಟಕರ್ಮಬಂಧವನ್ನು ಕಳಚುವುದು. ೫೪. ಪರಿಗ್ರಹಾಸಕ್ತಿಯು ಒಳ್ಳೆಯದಲ್ಲವೆಂದು ತಿಳಿದು ಮನಸ್ಸನ್ನು ವಶಪಡಿಸಿಕೊಂಡು ದೋಷರಹಿತನಾದವನು ಆಪ್ತನು. ಆ ಆಪ್ತನು ಕ್ರಮವಾಗಿ ಹೇಳಿದುದು ಆಗಮ. ಆ ಆಗಮದ ಅರ್ಥವೇ ಪದಾರ್ಥ. ೫೫. ಉತ್ಕೃಷ್ಟವಾದ ಉಪಶಮ, ಧರ್ಮದ ಮೇಲೆ ಪ್ರೀತಿ, ದಯೆ, ಜಿನೋಕ್ತವಾದ ಗುಣಪರಿಕರಗಳಲ್ಲಿ ಸ್ಥಿರವಾದ ನಂಬುಗೆ ಇವು ನಿರುಪಮವಾದ ಸಮ್ಯಕ್ತ್ವ. ೫೬. ಜೀವಾದಿ ಒಂಬತ್ತು[1] ಪದಾರ್ಥಗಳಲ್ಲಿ ವಿಶ್ವಾಸವನ್ನಿಡು. ಮೂಢತ್ರಯವನ್ನು[2] ಬಿಸುಡಬೇಕು. ಹೀಗೆ

1 ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ, ಮೋಕ್ಷ, ಪುಣ್ಯ, ಪಾಪ.

2 ದೇವತಾಮೂಢ, ಲೋಕಮೂಢ, ಮಿಥ್ಯಾಮೂಢ.

ಜಿನಮತಪದಾರ್ಥಶಂಕಾ
ಪನಯನಮುಂ ಭೋಗಕಾಂಕ್ಷೆಯೊಳ್ ವಿಮುಖತೆಯುಂ
ಮುನಿಜನತನುಮಳವಿಚಿಕಿ
ತ್ಸನವರ್ಜನಮುಂ ತ್ರಿಮೂಢತಾನಿರಸನಮುಂ ೫೭

ಉಪಗೂಹನಮುಂ ಸದ್ಧ
ರ್ಮಪಥಚ್ಯುತಭವ್ಯಸಂಹತಿಸ್ಥಾಪನಮುಂ
ವಿಪುಳಗುಣವತ್ಸಳತ್ವಮು
ಮಪಗತಮಳಜೈನಶಾಸನೋದ್ಭಾಸನಮುಂ ೫೮

ವ|| ಎಂದು ಪೇೞ್ದೆಯೆಂಟುಗುಣಂಗಳುಂ ಸಮ್ಯಗ್ದರ್ಶನಾವಯವಂಗಳ್,

ಇವಱಿಂ ಸಮಗ್ದರ್ಶನ
ಮವಶ್ಯಮುಜ್ಜ್ವಳಿಕುಮದುವೆ ಸಮ್ಯಗ್ಜ್ಞಾನ
ಕ್ಕವಕಾಶಮಕ್ಕುಮಂತದು
ಕವಲ್ತು ಸಮ್ಯಕ್ಚರಿತ್ರಮಂ ಪ್ರಕಟಿಸುಗುಂ ೫೯

ಈ ಸಂಸಾರಾಂಭೋಧಿಯ
ನೀಸುವ ನಿನಗಿದುವೆ ನಾವೆ ತಡಿಗಾಣ್ಬೆಯನಾ
ಯಾಸದೊಳೆ ನಿನಗೆ ಮುಕ್ತಿ
ಪ್ರಾಸಾದಮನಡರಲಿವುವೆ ಸೋಪಾನಂಗಳ್ ೬೦

ಮಾಡಿದರೆ ನಿನ್ನ ಸಮ್ಯಗ್‌ದರ್ಶನವೆಂಬ ರತ್ನವು ಬೆಳಗುವುದು. ೫೭. ಜಿನೋಕ್ತವಾದ ಪದಾರ್ಥದಲ್ಲಿ ಸಂದೇಹವನ್ನು ಹೊಂದದಿರುವುದು, ಭೋಗಾಕಾಂಕ್ಷೆಯಿಲ್ಲದಿರುವುದು, ಮುನಿಜನರ ದೇಹದಲ್ಲಿ ದೋಷವನ್ನು ವಿಚಾರಿಸದಿರುವುದು, ಮೂರುವಿಧಗಳಾದ ಮೂಢತೆಗಳನ್ನು ತೊರೆಯುವುದು. ೫೮. ಅಶಕ್ತಿಯಿಂದಲೂ ಅಜ್ಞಾನದಿಂದಲೂ ಧಾರ್ಮಿಕರಲ್ಲಿ ಸಂಭವಿಸುವ ದುರ್ಗುಣಗಳನ್ನು ಪ್ರಕಾಶಪಡಿಸದಿರುವುದು, ಸದ್ಧರ್ಮಮಾರ್ಗ ದಿಂದ ಜಾರಿದ ಸಂಸಾರಿಗಳ ಸಮೂಹವನ್ನು ಪುನಃ ಧರ್ಮಮಾರ್ಗದಲ್ಲಿ ನೆಲೆಗೊಳಿಸುವುದು, ದೋಷರಹಿತವಾಗಿ ಜೈನಧರ್ಮವನ್ನು ಪ್ರಕಾಶಗೊಳಿಸುವುದು. ವ|| ಈ ಎಂಟೂ ಗುಣಗಳು ಸಮ್ಯಗ್ದರ್ಶನದ ಅಂಗಗಳು. ೫೯. ಇವುಗಳಿಂದ 'ಸಮ್ಯಗ್ದರ್ಶನ'ವು ಅವಶ್ಯವಾಗಿ ಬೆಳಗುವುದು, ಅದೇ ಸಮ್ಯಗ್‌ಜ್ಞಾನಕ್ಕೆ ಅವಕಾಶವನ್ನೀಯುವುದು. ಅದು ಕವಲುಗೊಂಡು ಸಮ್ಯಕ್ಚಾರಿತ್ರವನ್ನು ಪ್ರಕಟಗೊಳಿಸುವುದು. ೬೦. ಈ ಸಂಸಾರವೆಂಬ ಸಮುದ್ರವನ್ನು ಈಜಲು ನಿನಗೆ ಇದೇ ದೋಣಿ. ಇದರಿಂದ ನೀನು ಅನಾಯಾಸವಾಗಿ ದಡವನ್ನು ಮುಟ್ಟುವೆ. ಮುಕ್ತಿಪ್ರಾಸಾದವನ್ನೇರಲು ಇವು ನಿನಗೆ

ಸೂಕ್ತಂ ಭವ್ಯಜನಪ್ರ
ವ್ಯಕ್ತಂ ಜೈನಾಗಮೋಕ್ತಮಿಂ ನಿನಗೆ ಮದೀ
ಯೋಕ್ತಮಿದೆರ್ದೆಯೊಳ್ ನೆಲಸುಗೆ
ಮುಕ್ತಿಶ್ರೀಹಾರವಿಭ್ರಮಮಂ ಸಮ್ಯಕ್ತ್ವಂ ೬೧

ಎಂದೆಂದೊಡಮ್ಮ ನೀನುಂ
ಸಂದೆಯಮಣಮಿಲ್ಲದಿದನೆ ನಂಬಿನಿತಂ ನೀ
ನೊಂದಿದ ನಾರೀರೂಪದ
ದಂದುಗದೊಳ್ ತೊಡರ್ದು ಬಿಡದೆ ನವೆಯುತ್ತಿರ್ಪೈ ೬೨

ರಮಣೀಜಾತಿಯೊಳಲ್ತೆ ನಂಬಿದವರ್ಗಳ್ ಸಮ್ಯಕ್ತ್ವಮಂ ಪುಟ್ಟರಾ
ರುಮಧೋಭೂಮಿಯೊಳಂತೆ ಮೂಱುಮಮರಾವಾಸಂಗಳೊಳ್ ಪೇೞ್ವೊಡು
ತ್ತಮಸಮ್ಯಕ್ತ್ವಫಲಂ ದಗುಂತಿ ಮಗಳೇ ನೀನಿಂತಿದಂ ನಂಬನು
ಕ್ರಮದಿಂದಂ ದೊರೆವೆತ್ತ ಸಪ್ತಪರಮಸ್ಥಾನಂಗಳಂ ಪೊರ್ದುವೈ ೬೩

ವ|| ಎಂದತಿಪ್ರೀತಿಯಿಂ ಪ್ರೀತಿಂಕರಾಚಾರ್ಯರ್ ವಜ್ರಜಂಘಾರ್ಯಂಗಂ ಶ್ರೀಮತ್ಯಾರ್ಯೆಗಂ ಶಾರ್ದೂಲಾರ್ಯಾದಿಗಳ್ಗಂ ಮುಕ್ತಿಸಾಮ್ರಾಜ್ಯಪದವಿಗಿದುವೆ ಯುವರಾಜಚಿಹ್ನಮೆನಿಸಿದ ಸೂತ್ರಾನುಗತಮಪ್ಪ ಸಮ್ಯಗ್ದರ್ಶನಮೆಂಬ ಕಂಠಿಕೆಯಂ ಕಂಠಿಕಾಬಂಧನಮಂ ಮಾಡಿ,

ಮೆಟ್ಟಿಲುಗಳು. ೬೧. ಭವ್ಯಜನವೇದ್ಯವೂ ಜೈನಾಗಮೋಕ್ತವೂ ನನ್ನಿಂದ ಹೇಳಲ್ಪಟ್ಟುದೂ ಎನಿಸಿದ ಮುಕ್ತಿಶ್ರೀಹಾರ ವಿಭ್ರಮವಾದ ಸಮ್ಯಕ್ತ್ವವು ನಿನ್ನ ಹೃದಯದಲ್ಲಿ ನೆಲಸಲಿ! ೬೨. ಅಣ್ಣ! ಎಂದೆಂದಿಗೂ ನೀನು ಸ್ವಲ್ಪವೂ ಸಂದೇಹಕ್ಕೆಡೆಗೊಡದೆ 'ಸಮ್ಯಕ್ತ್ವ'ವನ್ನು ನಂಬು. ನೀನು ನಾರೀರೂಪದ ದಂದುಗದಲ್ಲಿ ಸಿಕ್ಕಿಕೊಂಡು ನವೆಯುತ್ತಿದ್ದೀಯೆ. ೬೩. ಎಲೌ ಮಗಳೆ, ಸಮ್ಯಕ್ತ್ವವನ್ನು ನಂಬಿದವರು ಸ್ತ್ರೀಜನ್ಮದಲ್ಲಿ ಹುಟ್ಟುವುದಿಲ್ಲ. ಹಾಗೆಯೇ ನರಕಭೂಮಿಯಲ್ಲಿಯೂ ಜನಿಸುವುದಿಲ್ಲ. ಮೂರು ದೇವತಾವಾಸಗಳಲ್ಲಿಯೂ ಜನಿಸುವುದಿಲ್ಲ. ಸಮ್ಯಕ್ತ್ವದ ಫಲವು ಅತಿಶಯವಾದುದು. ನೀನಿದನ್ನು ನಂಬು. ತತ್ಫಲವಾಗಿ ನೀನು ಪ್ರಖ್ಯಾತವಾದ ಏಳು ಪರಮಸ್ಥಾನಗಳನ್ನು[1] ಪಡೆಯುವೆ." ವ|| ಎಂದು ಅತಿಪ್ರೀತಿಯಿಂದ ಪ್ರೀತಿಂಕರಾಚಾರ್ಯರು ವಜ್ರಜಂಘಾರ್ಯನಿಗೂ ಶ್ರೀಮತ್ಯಾರ್ಯೆಗೂ ಶಾರ್ದೂಲಾರ್ಯಾದಿಗಳಿಗೂ ಮುಕ್ತಿಸಾಮ್ರಾಜ್ಯಪದವಿಗೆ, ಯುವರಾಜಚಿಹ್ನವೆನಿಸಿದ ಸೂತ್ರಾನುಗತವಾದ[2] ಸಮ್ಯಗ್ದರ್ಶನವೆಂಬ ಕಂಠಿಕೆಯನ್ನು ಕತ್ತಿನಲ್ಲಿ ಕಟ್ಟಿದರು.

---

1 ಸಜ್ಜಾತಿ, ಸದ್ಗೃಹಸ್ಥತ್ವ, ಮುನಿವ್ರತಧಾರಣ, ಇಂದ್ರಪದಪ್ರಾಪ್ತಿ, ಸಾಮ್ರಾಜ್ಯಪ್ರಾಪ್ತಿ, ತೀರ್ಥಂಕರಪದಪ್ರಾಪ್ತಿ, ಸಿದ್ಧಪದಪ್ರಾಪ್ತಿ.

2 ಸೂತ್ರಾನುಗತ = ಶಾಸ್ತ್ರೀಯ ಸೂತ್ರಾನುಸಾರಿ - ನೂಲಲ್ಲಿ ಪೋಣಿಸಿದ.

ದರ್ಶನಮಘಸಮಿತಿಗೆ ಸ
ದ್ದರ್ಶನದಿಂದಪ್ಪುದಕ್ಕೆ ನಿಮಗಕ್ಕೆ ಪುನ
ರ್ದರ್ಶನಮೆಂದಾರಾಧಿತ
ದರ್ಶನರಾ ಚಾರಣರ್ ನಭಕ್ಕೊಗೆದಾಗಳ್ ೬೪

ಆ ದಂಪತಿಗಳ್ ಜೊಮ್ಮನೆ
ವೋದಂತಿರ್ದವರ ಗಗನತಳಗಮನದೊಳಂ
ದಾದ ಬೆಡಂಗಂ ನೋಡಿದ
ರಾದರದಿಂ ತಮ್ಮ ಕಣ್ಬೊಲಂಗಟೆವಿನೆಗಂ ೬೫

ವ|| ನೋಡಿ ತಮ್ಮ ಮನದೊಳವರುಪದೇಶಪರಾನುಗ್ರಹಬುದ್ಧಿಯುಂ ಸನ್ಮಾರ್ಗದರ್ಶನ ಕೌಶಲಮುಂ ನಿಸರ್ಗಸ್ನೇಹಸಂಬಂಧಮುಮಂತರಂಗದೊಳ್ ತಣ್ಮಲೆಯೆ,

ಪರಮತಪೋಧನರ್ ಪುಗುವರೆಂಬುದಸಂಭವಮಲ್ತೆ ಭೋಗಭೂ
ಚರರ ನಿವಾಸಮಂ ಕಿಱಿದು ನಮ್ಮ ಪುರಾತನಪುಣ್ಯಮಿಲ್ಲಿಗಂ
ಬರಿಸಿದುದೀ ಮುನೀಶ್ವರರನೀಯುಪದೇಶದಿನಾದುದುದಗ್ರಸಂ
ಸರಣಮಹಾಸಮುದ್ರತರಣಂ ಚರಣಂ ಶರಣಂ ಮುನೀಂದ್ರರಾ ೬೬

ಮುನ್ನ ಮಹಾಬಳನಾದಂ
ದೆನ್ನಂ ಪ್ರಿಯಸಚಿವನಾಗಿ ಸಂಬೋಧಿಸಿ ಮಾ
ನೋನ್ನತರೀಗಳುಮಟ್ಟಱಿಸಿ
ಳೆನ್ನಂ ಸಮಱಿಲ್ಕೆ ಬಂದಿರಿಂತುಟೆ ಮೋಹಂ ೬೭

೬೪. "ಸಜ್ಜನರ ದರ್ಶನದಿಂದ ಅಘಸಮಿತಿಗೆ (ಪಾಪಸಮೂಹಕ್ಕೆ) ವಿಧ್ವಂಸನವಾಗುವುದು. ಅದು ನಿಮಗಾಗಲಿ! ಪುನರ್ದರ್ಶನವುಂಟಾಗಲಿ!" ಎಂದು ಹೇಳಿ ಸಮ್ಯಗ್ದರ್ಶನಾರಾಧಕರಾದ ಆ ಆಚಾರ್ಯರು ಅಂತರಿಕ್ಷಕ್ಕೆ ಹಾರಿದರು. ೬೫. ಆ ದಂಪತಿಗಳು (ಶ್ರೀಮತ್ಯಾರ್ಯಾ ವಜ್ರಜಂಘಾರ್ಯರು) ಪ್ರೀತಿಂಕರಾಚಾರ್ಯರ ಆಕಾಶಗಮನದ ಬೆಡಗನ್ನು ತಮ್ಮ ಕಣ್ಣು ಕಾಣಿಸುವವರೆಗೂ ಆದರದಿಂದ ನೋಡಿದರು. ವ|| ತಮ್ಮ ಮನಸ್ಸಿನಲ್ಲಿ ಅವರ ಉಪದೇಶಪರವಾದ ಅನುಗ್ರಹಬುದ್ಧಿಯೂ ಸನ್ಮಾರ್ಗವನ್ನು ತೋರಿಸುವ ನಿಪುಣತೆಯೂ ಸಹಜವಾದ ಸ್ನೇಹಸಂಬಂಧವೂ ಅವರ ಅಂತರಂಗದಲ್ಲಿ ದೃಢವಾಗಿ ನಿಲ್ಲಲು, ೬೬. "ಶ್ರೇಷ್ಠರಾದ ತಪಸ್ವಿಗಳು ಭೋಗಭೂಚರರ ನಿವಾಸವನ್ನು ಪ್ರವೇಶಿಸುವುದೆಂಬುದು ಅಸಂಭವವಾದುದಲ್ಲವೆ? ನಮ್ಮ ಪುರಾತನವಾದ ಪುಣ್ಯವು ಅಲ್ಪ, ಆದರೂ ಅವರನ್ನಿಲ್ಲಿಗೆ ಬರಮಾಡಿಕೊಂಡಿತು, ಅವರ ಮಹತ್ತರವಾದ ಉಪದೇಶದಿಂದ ಸಂಸಾರವೆಂಬ ಮಹಾಸಮುದ್ರವನ್ನು ದಾಟಲು ಶಕ್ಯವಾಯಿತು. ಆ ಮುನೀಂದ್ರರ ಚರಣಗಳೇ ನಮಗೆ ಶರಣು. ೬೭. ಪೂರ್ವದಲ್ಲಿ ಮಹಾಬಲನಾಗಿದ್ದಾಗ ನನ್ನ ಪ್ರಿಯಸಚಿವರಾಗಿದ್ದು ಬೋಧಿಸಿದರು. ಮಾನೋನ್ನತರಾದ ಅವರು ಈಗಲೂ ಪ್ರೀತಿಯಿಂದ ನನ್ನನ್ನು ಸರಿಪಡಿಸಲು

ಕಾಮಸುಖೋಚಿತಮತಿಗಳ್
ನಾಮೆತ್ತ ಮುಮುಕ್ಷುವೃತ್ತಿಯಂ ತಾಳ್ದಿದವರ್
ತಾಮೆತ್ತೆಂತುಮನುಗ್ರಹ
ಮೀ ಮುನಿಪತಿಗೆಮ್ಮೊಳಾಯ್ತಿದೇಂ ವಿಸ್ಮಯಮೋ ೧೮

ವಾಮಂ ಕರತಳಮದು ಕೆಂ
ದಾಮರೆಯರಲೆನಿಪ್ಪುದುಚಿತಪರ್ಯಂಕದೊಳು
ದ್ದಾಮಮುಪದೇಶಹಸ್ತಮ
ವಾಮಂ ಮಾರ್ದವಮನಭಿನಯಿಪ್ಪುದು ಮುನಿಯಾ ೧೯

ವ|| ಎಂದು ತದ್ಗಗನಚಾರಣಮುನಿಗುಣಮಣಿಹಾರಮನಾತ್ಮೀಯಹೃದಯದೊಳನಿಬರುಂ ತಾಳ್ದಿ ಸಮ್ಯಗ್ದರ್ಶನಮನಸ್ಖಲಿತಮಾರಾಧಿಸಿ ಪಲ್ಯೋಪಮತ್ರಯಾಯುಷ್ಯಾವಸಾನದೊಳೋಷಧಿಗಳಂತೆ ಫಳಪಾಕಾಂತದೊಳ್ ಕ್ಷುತವಿಜೃಂಭಣವ್ಯಾಜದಿಂ ಲೋಕಾಂತರಿತರಾಗಿ,

ಮನೆಯಿಂದಂ ಮನೆಗೆಂದು ಪೋಪ ತೆಱದಿಂ ಪೋಕ್ ನೂಕೆ ಪಾಸೆಂಬ ಮಾ
ತಿನ ಪಾಂಗಿಂದನಿತುಂ ಯುಗಂ ತಳರ್ದು ತದ್ಭೋಗಾವನೀಭಾಗದೊಳ್
ತನುಗಳ್ ವೈಕ್ರಿಯಕಂಗಳಂತೆ ಕರಗುತ್ತಿರ್ಪನ್ನೆಗಂ ಪುಣ್ಯಸಂ
ಜನಿತೈಶ್ವರ್ಯದಿನಿಂತು ಬಂದು ನೆಲಸಿತ್ತೀಶಾನಕಲ್ಪಾಗ್ರದೊಳ್ ೨೦

ಬಂದರು. ಅವರ ಸಂಪ್ರೀತಿಯು ದೊಡ್ಡದು. ೧೮. ಕಾಮಸುಖಾಸಕ್ತರಾಗಿ ತೊಳಲುತ್ತಿರುವ ನಾವೆಲ್ಲಿ? ಮುಮುಕ್ಷುವೃತ್ತಿಯನ್ನಪ್ಪಿ ಶಾಂತರಾಗಿರುವವರೆಲ್ಲಿ? ಹೀಗೆ ಈ ಮುನಿಪತಿಗೆ ನಮ್ಮ ಮೇಲೆ ಅನುಗ್ರಹಬುದ್ಧಿಯುಂಟಾದದ್ದು ಅತ್ಯಾಶ್ಚರ್ಯಕರ. ೧೯. ಆ ಮುನಿಯ ಎಡಗೈತಳವು ಆತನ ಪರ್ಯಂಕದಲ್ಲಿ ಕೆಂದಾವರೆಯ ಹೂವಿನಂತಿದೆ. ಅವನ ಬಲಹಸ್ತವು ಉಪದೇಶಹಸ್ತವಾಗಿದ್ದು ಮೃದುತ್ವವನ್ನು ಪ್ರಕಟಿಸುತ್ತಿದೆ" ವ|| ಎಂದು ಗಗನಚಾರಿಯಾದ ಮುನಿಯ ಗುಣಗಳೆಂಬ ಮಣಿಹಾರವನ್ನು ತಮ್ಮ ಹೃದಯದಲ್ಲಿ ಅವರಿಬ್ಬರೂ ತಳೆದು ಕೊಂಡು 'ಸಮ್ಯಕ್ತ್ವ'ವನ್ನು ಎಡೆಬಿಡದೆ ಆರಾಧಿಸಿ ಪಲ್ಯೋಪಮತ್ರಯಾಯುಷ್ಯದ[1] ಕೊನೆಯಲ್ಲಿ ಹಣ್ಣುಬಿಟ್ಟ ಮೇಲೆ ಓಷಧಿಗಳು ಒಣಗಿ ಮರೆಯಾಗುವಂತೆ ಬಿಕ್ಕಳಿಕೆ ಆಕಳಿಕೆಗಳ ನೆಪದಲ್ಲಿ ದೇಹವನ್ನು ಬಿಟ್ಟರು. ಮತ್ತು ೨೦. ಮನೆಯಿಂದ ಇನ್ನೊಂದು ಮನೆಗೆ ಹೋಗುವಂತೆಯೂ, 'ನೂಕಿದಲ್ಲಿ ಹಾಸಿಗೆ' ಎಂಬ ಗಾದೆಯಂತೆಯೂ ಅಷ್ಟು ಭೋಗಗಳನ್ನು ಪಡೆದ ಮೇಲೆ, ಭೋಗಭೂಮಿಯಲ್ಲಿ ದೇಹಗಳು (ದೇವತೆಗಳ) ವೈಕ್ರಿಯಕದೇಹಗಳಂತೆ[2] ಕರಗಿ ಹೋಗಲಾಗಿ, ಪುಣ್ಯಸಂಪಾದಿತವಾದ ಮಹಿಮೆಯಿಂದ ಆ ದಂಪತೀಯುಗ್ಮವು

---

1 ಪಲ್ಯ = ಕಾಲಸಂಖ್ಯಾವಿಶೇಷ.

2 ದೇವತೆಗಳ ವೈಕ್ರಿಯಕ ದೇಹಗಳು ಕರ್ಪೂರದಂತೆ ಕರಗಿಹೋಗುತ್ತವೆ. ಅದರಂತೆ ಶ್ರೀಮತೀ ವಜ್ರಜಂಘಾರ್ಯರ ದೇಹಗಳು ತಾವಾಗಿ ಕರಗಿಹೋದವು.

ವ।। ಅಲ್ಲಿ ವಜ್ರಜಂಘಾರ್ಯಂ ಸುರತಸುಖನಿವಾಸದೊಳ್ ಶ್ರೀಪ್ರಭವಿಮಾನದೊಳ್ ಶ್ರೀಧರನೆಂಬ ದೇವನಾದಂ, ಶ್ರೀಮತ್ಯಾರ್ಯೆಯುಂ ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು ತತ್ಸ್ವಯಂಪ್ರಭವಿಮಾನದೊಳ್ ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬ ದಿವಿಜನಾದಂ ಶಾರ್ದೂಲಾರ್ಯನುಂ ಚಿತ್ರಾಂಗವಿಮಾನದೊಳ್ ಚಿತ್ರಾಂಗದಾಮರನಾದಂ; ವರಾಹಾರ್ಯನುಂ ನಂದನ ವಿಮಾನದೊಳ್ ಮಣಿಮಕುಟಕೇಯೂರಮಣಿಕುಂಡಲವಿಭೂಷಣನಾಗಿ ಮಣಿಕುಂಡಲನೆಂಬೊಂ ದಿವಿಜನಾದಂ; ವಾನರಾರ್ಯನುಂ ನಂದ್ಯಾವರ್ತವಿಮಾನದೊಳ್ ಸುರನಾರೀಮನೋಹರಂ ಮನೋಹರನೆಂಬನಿಮಿಷನಾದಂ; ನಕುಳಾರ್ಯನುಂ ಪ್ರಭಾಕರವಿಮಾನದೊಳ್ ಮನೋರಥಾವಾಪ್ತದಿವ್ಯ ಭೋಗಂ ಮನೋರಥನೆಂಬ ಕಲ್ಪಜನಾದಂ; ಇಂತಿನಿಬರುಂ ಸಹಾಯರೊಡನೆ,

ನಯನಾನಂದವಿಳಾಸರೂಪನಮರೀನೀಲಾಲಕಾಲೀಢಪಾ
ದಯುಗಂ ತತ್ಕುಚಕೂಟಘಟ್ಟಿತವಿಶಾಲೋರಸ್ಸ್ಥಲಂ ಸ್ವರ್ಗಲ
ಕ್ಷ್ಮಿಯ ಮೇಲಲ್ಕಱಿಕೋಳಂದದೇಂ ನಲಿದನೋ ಸಂಭೋಗಸಮ್ಮರ್ದನಿ
ರ್ದಯನಿಷ್ಪೀಡಿತದೇವವಾರವನಿತಾಬಿಂಬಾಧರಂ ಶ್ರೀಧರಂ ೭೧

ವ।। ಒಂದು ದಿವಸಮಾ ದೇವನವಧಿಬೋಧದಿಂ ಪ್ರೀತಿಂಕರಾರ್ಯರ ಕೇವಲಜ್ಞಾನೋತ್ಪತ್ತಿಯ ನಱಿದು ದೇವನಿಕಾಯದೊಡನನೇಕವಿನೋದದೊಳಪೂರ್ವಪ್ರಭೆಯಂ ತಾಳ್ದಿರ್ದುತ್ತುಂಗಶ್ರೀಪ್ರಭಾಚಳಕ್ಕೆ ಪೋಗಿ,

ಈಶಾನಕಲ್ಪದ ಮೇಲೆ ಬಂದು ನೆಲೆಸಿತು. ವ।। ಅಲ್ಲಿ ವಜ್ರಜಂಘಾರ್ಯನು ಸುರತಸುಖಕ್ಕೆ ಆಶ್ರಯವಾದ ಶ್ರೀಪ್ರಭವಿಮಾನದಲ್ಲಿ ಶ್ರೀಧರನೆಂಬ ದೇವನಾಗಿ ಜನಿಸಿದನು. ಶ್ರೀಮತ್ಯಾರ್ಯೆಯು ಸಮ್ಯಕ್ತ್ವದ ಮಹಿಮೆಯಿಂದ ಸ್ತ್ರೀತ್ವವನ್ನು ಬಿಸುಟು ಸ್ವಯಂಪ್ರಭವಿಮಾನದಲ್ಲಿ ಶ್ರೀಧರನಿಗೆ ಸಾಮಾನಿಕ ದೇವನಾಗಿ ಹುಟ್ಟಿ ಸ್ವಯಂಪ್ರಭನೆಂಬ ಹೆಸರಿನಿಂದ ಪ್ರಖ್ಯಾತನಾದನು. ಶಾರ್ದೂಲಾರ್ಯನು ಚಿತ್ರಾಂಗವಿಮಾನದಲ್ಲಿ ಚಿತ್ರಾಂಗದನೆಂಬ ಅಮರನಾದನು. ವರಾಹಾರ್ಯನು ನಂದನ ವಿಮಾನದಲ್ಲಿ ಮಣಿಮಯವಾದ ಮಕುಟ, ಕೇಯೂರ ಮತ್ತು ಮಣಿಕುಂಡಲಗಳಿಂದ ವಿಭೂಷಿತನಾಗಿ ಮಣಿಕುಂಡಲನೆಂಬ ದಿವಿಜನಾದನು. ವಾನರಾರ್ಯನು ನಂದ್ಯಾವರ್ತ ವಿಮಾನದಲ್ಲಿ ಸುರನಾರಿಯರ ಹೃದಯವನ್ನು ಸೆಳೆಯಬಲ್ಲ ಮನೋಹರನೆಂಬ ಹೆಸರಿನ ಅನಿಮಿಷನಾದನು. ನಕುಲಾರ್ಯನು ಪ್ರಭಾಕರವಿಮಾನದಲ್ಲಿ, ನೆನೆಸಿದಂತೆ ದಿವ್ಯಭೋಗಗಳನ್ನು ಪಡೆವ ಮನೋರಥನೆಂಬ ಕಲ್ಪಜನಾದನು. ಹೀಗೆ ಸಹಾಯಕರಾದ ಅವರೆಲ್ಲರೊಡನೆ, ೭೧. ಶ್ರೀಧರನು ಸ್ವರ್ಗಲಕ್ಷ್ಮಿಯ ಮೇಲಿನ ಪ್ರೀತಿಯಿಂದ ಅತಿಯಾಗಿ ನಲಿದನು. ಅವನ ರೂಪವು ಕಣ್ಣುಗಳಿಗೆ ಆನಂದಕರವೂ ವಿಲಾಸಯುಕ್ತವೂ ಆಗಿದ್ದಿತು. ಅವನ ಪಾದಯುಗ್ಮದ ಮೇಲೆ ಅಮರಸ್ತ್ರೀಯರ ಮುಂಗುರುಳು ವಿನ್ಯಸ್ತವಾಗುತ್ತಿದ್ದವು. ಅವನ ವಿಶಾಲವಾದ ಎದೆಯನ್ನು ಅಮರಿಯರ ಕಠಿನವಾದ ಸ್ತನಗಳು ತಾಗಿದುವು. ಶ್ರೀಧರನು ದೇವಗಣಿಕೆಯರ ಸಂಭೋಗ ಸಮ್ಮರ್ದದ ಕಾಲದಲ್ಲಿ ಅವರ ಬಿಂಬಾಧರಗಳನ್ನು ನಿರ್ದಯವಾಗಿ ನಿಷ್ಪೀಡನಮಾಡಿದನು. ವ।। ಒಂದು ದಿನ ಶ್ರೀಧರನು ತನ್ನ ಅವಧಿಬೋಧದಿಂದ ಪ್ರೀತಿಂಕರಾರ್ಯರ ಕೇವಲಜ್ಞಾನೋತ್ಪತ್ತಿಯನ್ನು ತಿಳಿದನು. ಒಡನೆ ಅವನು ದೇವಸಮೂಹದೊಡನೆ

ವಿವಿಧಾರ್ಚನೆಗಳಿನರ್ಚಿಸಿ
ವಿವಿಧಸ್ತುತಿಶತಸಹಸ್ರದಿಂ ಸ್ತುತಿಯಿಸಿ ಬಂ
ದವನತಮಕುಟಂ ಶ್ರೀಧರ
ದಿವಿಜಂ ಬೆಸಗೊಂಡನಖಿಳಭವಭಯಹರನಂ ೭೨

ಪ್ರೀತಿಂಕರ ಶಂಕರ ವಿ
ದ್ಯಾತಿಶಯನಿಧಾನ ನಿನ್ನ ದಯೆವೆರಸಿದತಿ
ಪ್ರೀತಿಯೊಳಾನತ್ಯುತ್ತಮ
ಜಾತಿಗಳೊಳ್ ಪುಟ್ಟಿ ಸುಖಮನುಣುತುಂ ಬಂದೆಂ ೭೩

ಆನಂಬರಚರನಾದಂ
ದಾ ನಾಲ್ವರೊಳಲ್ಲಿ ಮೂವರುಂ ಮಂತ್ರಿಗಳಂ
ತೇನಾದರಖಿಳಮಿಥ್ಯಾ
ಜ್ಞಾನಾವೃತಚರಿತರುಚಿತಪರಹಿತಚರಿತಾ ೭೪

ಬೆಸಸೆನೆ ದಿವಿಜನ ಮನದೊಳ್
ಪಸರಿಸಿದ ತಮಸ್ತಮಂ ತೆರಳ್ದಿರೆ ಪರಮಂ
ಬೆಸಸಿದನಾಗಳ್ ಭವ್ಯ
ಪ್ರಸಾದಕರನಿಜವಚೋಂಶುಗಳ್ ಬೆಳಗುವಿನಂ ೭೫

ಸಂಭಿನ್ನಮಹಾಮತಿಗಳ್
ಗಂಭೀರನಿಗೋದದೊಳ್ ತಮೋಮಯದೊಳ್ ದುಃ
ಖಾಂಭೋಧಿಯ ಕಡೆಗಾಣದೆ
ಜೃಂಭಿತದುಷ್ಕರ್ಮದಿಂದೆ ನಮೆದಪರಿನ್ನುಂ ೭೬

ಅನೇಕಾಶ್ಚರ್ಯಗಳಿಂದ ಅಪೂರ್ವಪ್ರಭೆಯನ್ನು ಹೊಂದಿದ್ದ ಉನ್ನತವಾದ ಶ್ರೀಪ್ರಭಾಚಲಕ್ಕೆ ಹೋಗಿ, ೭೨. ಭವದ ಭಯವನ್ನು ಹೋಗಲಾಡಿಸಬಲ್ಲ ಪ್ರೀತಿಂಕರಾರ್ಯರನ್ನು ವಿವಿಧಾರ್ಚನೆಗಳಿಂದ ಅರ್ಚಿಸಿದನು, ಅನೇಕ ವಿಧವಾಗಿ ಸ್ತೋತ್ರಮಾಡಿದನು. ತನ್ನ ಕಿರೀಟದೊಡನೆ ತಲೆಬಾಗಿದನು ಮತ್ತು ಬೆಸಗೊಂಡನು. ೭೩. "ಪ್ರೀತಿಂಕರ, ಶಂಕರ, ವಿದ್ಯಾತಿಶಯಕ್ಕೆ ಆಶ್ರಯ! ನಿನ್ನ ದಯಾಪೂರ್ಣವಾದ ಪ್ರೀತಿಯಿಂದಾಗಿ ನಾನು ಅತ್ಯುತ್ತಮ ಜಾತಿಯಲ್ಲಿ ಹುಟ್ಟಿದೆನು, ಸುಖವನ್ನು ಉಣ್ಣುತ್ತ ಬಂದೆನು. ೭೪. ಪರಹಿತವನ್ನೇ ಬಯಸುವ ಎಲೈ ಮಹಾತ್ಮನೇ! ನಾನು ಮಹಾಬಲನೆಂಬ ಅಂಬರಚರನಾಗಿದ್ದಾಗ, ಮಿಥ್ಯಾಜ್ಞಾನಾವೃತಚರಿತರಾದ ನನ್ನ ಜೊತೆಯಲ್ಲಿದ್ದ ಆ ಮೂವರು ಮಂತ್ರಿಗಳು ಏನಾದರು, ಹೇಳು" ಎಂದು ಕೇಳಿದನು. ೭೫. ಆಗ ಆ ದಿವಿಜನ ಮನದಲ್ಲಿ ಉಂಟಾಗಿದ್ದ ಅಜ್ಞಾನವೆಂಬ ಕತ್ತಲೆಯು ನಾಶವಾಗುವಂತೆ ಉತ್ಕೃಷ್ಟನಾದ ಆ ಮುನಿಯು ಭವ್ಯಜನರ ಹೃದಯವನ್ನು ತಣಿಸಬಲ್ಲ ನಿಜವಚೋಂಶುಗಳು ಪ್ರಸರಿಸುವಂತೆ ಹೇಳಿದನು. ೭೬. "ಸಂಭಿನ್ನಮತಿ ಮತ್ತು ಮಹಾಮತಿಗಳಿಬ್ಬರು ಕತ್ತಲೆಯಿಂದ ಕೂಡಿದ ನಿಗೋದದಲ್ಲಿ (ನರಕದಲ್ಲಿ)

ಶತಮತಿ ಮಿಥ್ಯಾಜ್ಞಾನಾ
ವೃತಮತಿ ಸಂದಂ ದ್ವಿತೀಯನರಕಕ್ಕೀ ಸಂ
ಸೃತಿಯೊಳ್ ಧರ್ಮಾಧರ್ಮ
ಸ್ಥಿತಿಯೆ ವಲಂ ಸ್ವರ್ಗನರಕಸುಖದುಃಖಕರಂ ೭೭

ಧರ್ಮಮಮರೇಂದ್ರಗತಿಯನ
ಧರ್ಮಮಧೋಗತಿಯನೆಸಗುವೆಸಕದೊಳೀಗುಂ
ಧರ್ಮಾಧರ್ಮಕ್ರಿಯೆಗಳೆ
ನೆರ್ಮಂ ಜೀವಕ್ಕೆ ಮನುಜಗತಿಯೊಳೆ ಮಾೞ್ಕುಂ ೭೮

ಪುಸಿಯದುದು ಪರಾಂಗನೆಗಾ
ಟಿಸದುದು ಕೊಲ್ಲದುದು ಮೋಹಮಿಲ್ಲದುದುಱಿವಂ
ಪೊಸಯಿಸುವುದು ವೈರಾಗ್ಯದ
ದೆಸೆಗೆಸಪುದು ಧರ್ಮಮದಱ ತಡೆವುದಧರ್ಮಂ ೭೯

ಮಾಂಸಮಧುಮದ್ಯಸೇವನೆ
ಹಿಂಸಾರುಚಿ ಪರಮಜಿನಮತಾರುಚಿ ಕುಲಟಾ
ಸಂಸರ್ಗಮೆಂಬಿವಲ್ಲದೆ
ಸಂಸಾರಭ್ರಮಣಕಾರಣಂ ಪೆಱವೊಳವೇ ೮೦

ಕಳಿಪಂ ಕಳ್ವನಗುರ್ವು ಪರ್ವೆ ಕೊಲಿಪಂ ಕೊಲ್ವಂ ಪರಸ್ತ್ರೀಯರಂ
ಕೊಳಿಪಂ ಕೊಳ್ವನೆನಿಪ್ಪ ಪಾಪಿಯುಮತಿಕ್ರೂರಾತ್ಮನುಂ ಸಾಧುಸಂ
ಕುಳಮಂ ಕಂಡೊಡೆ ಕಾಯ್ವನುಂ ಪಟಿವನುಂ ಧರ್ಮಕ್ಕತಿದ್ರೋಹನುಂ
ಖಳನುಂ ಕಳ್ಳುಣಿಯುಂ ಘಳುಮ್ಮನಿೞಿಗುಂ ಶ್ವಭ್ರಾಂತಮಂ ತಾಪಿನಂ ೮೧

ದುಃಖಸಾಗರದಂಚನ್ನು ಕಾಣದೆಯೆ ತಮ್ಮ ದುಷ್ಕರ್ಮವಿಜೃಂಭಿತದಿಂದಾಗಿ ನವೆಯುತ್ತಿದ್ದಾರೆ. ೭೭. ಮಿಥ್ಯಾಜ್ಞಾನದಿಂದ ಕೂಡಿದ ಶತಮತಿಯು ಎರಡನೆಯ ನರಕದಲ್ಲಿ ಬಿದ್ದು ಓಲಾಡುತ್ತಿದ್ದಾನೆ. ಈ ಸಂಸೃತಿಯಲ್ಲಿ ಧರ್ಮಾಧರ್ಮದ ಸ್ಥಿತಿಯೇ ಸ್ವರ್ಗದ ಸುಖಕ್ಕೂ ನರಕದ ದುಃಖಕ್ಕೂ ಕಾರಣವಷ್ಟೆ?" ೭೮. ನಾವು ಮಾಡುವ ಕಾರ್ಯಗಳಿಂದಾಗಿ ಧರ್ಮವು ಅಮರೇಂದ್ರಗತಿಯನ್ನೂ ಅಧರ್ಮವು ಅಧೋಗತಿಯನ್ನೂ ನಮಗುಂಟುಮಾಡುವುವು. ನಾವು ಮಾಡಿದ ಧರ್ಮಾಧರ್ಮಕ್ರಿಯೆಗಳೇ ಮನುಜಗತಿಯಲ್ಲಿ ಜೀವಕ್ಕೆ ಆಶ್ರಯಗೊಡುವುವು. ೭೯. ಸುಳ್ಳು ಹೇಳದಿರುವುದು, ಪರಸ್ತ್ರೀಯರನ್ನು ಬಯಸದಿರುವುದು, ಕೊಲ್ಲದಿರುವುದು, ಮೋಹವಿಲ್ಲದಿರುವುದು, ಜ್ಞಾನವನ್ನು ವಿಶಾಲವಾಗಿಸುವುದು. ವೈರಾಗ್ಯದ ಕಡೆಗೆ ಮನವನ್ನೊಯ್ಯುವುದು ಧರ್ಮ. ಅದನ್ನು ತಡೆವುದು ಅಧರ್ಮ. ೮೦. ಮಾಂಸ ಸೇವನೆ, ಮಧುಮದ್ಯಗಳ ಸೇವನೆ, ಹಿಂಸಾರುಚಿ, ಜಿನಮತದಲ್ಲಿ ಅರುಚಿ, ಕುಲಟೆಯ ಸಂಸರ್ಗ-ಇವು ಸಂಸಾರಭ್ರಮಣಕ್ಕೆ ಕಾರಣಗಳಲ್ಲದೆ ಬೇರಾವ ಕಾರಣಗಳಿವೆ? ೮೧. ಕದಿಯಲು ಕಳುಹುವವನೂ ತಾನೇ ಕದಿಯುವವನೂ ಭಯವೊದಗಿದಾಗ

ವ|| ಆ ನರಕಂಗಳುಂ ರತ್ನಶರ್ಕರಾವಾಳುಕಾಪಂಕಧೂಮತಮೋಮಹಾತಮಃಪ್ರಭಾನಾಮಮಂ ತಾಳ್ದಿದುವವಱೊಳ್,

ಮೇಗಣ ನಾಲ್ಕಱೊಳೈದಱ
ಮೇಗಣ ಭಾಗದೊಳಗುರ್ವ ಘರ್ಮಂ ಹಿಮದಿಂ
ದಾಗಳೆ ಮುಱುಂಟುವರ್ ಮಿಹಿ
ಭಾಗದೊಳುೞಿದವಱೊಳಿನ್ನವೇೞುಂ ನರಕಂ ೮೨

ವ|| ಮತ್ತವಱೊಳನುಕ್ರಮಂದಪ್ಪದೆ,

ಮೂವತ್ತಿರ್ಪತ್ತೈದ
ತ್ತಾವಗೆ[೧] ಪದಿನೈದು ಪತ್ತು ಮೂಱೈಯ್ದೂನಂ
ಭಾವಿಪೊಡಿಂತಿವು ಲಕ್ಕೆಗ
ಳೇವೊಗಟ್ಟುದೊ ಬೞಿಯಮಯ್ದು ನರಕಬಿಲಂಗಳ್ ೮೩

ವ|| ಆ ಬಿಲಂಗಳುಮಿಂದ್ರಕಶ್ರೇಣಿಬದ್ಧಪ್ರಕೀರ್ಣಕಂಗಳೆಂದು ಮೂಱುತೆಱನಕ್ಕುಂ ಅವಱ ಮೇಗಣಟ್ಟುಗಳೊಳಿಟ್ಟ ಜೇನ ಪುಟ್ಟಗಳನನುಕರಿಸುವತಿರೌದ್ರಬೀಭತ್ಸಕುತ್ಸಿತೋತ್ಪತ್ತಿಸ್ಥಾನಂಗಳೊಳ್ ಕೃಷ್ಣನೀಲ ಕಪೋತಲೇಶ್ಯಾಬಹ್ವಾರಂಭಪರಿಗ್ರಹತ್ವಾದ್ಯಶುಭಪರಿಣಾಮಂಗಳಿಂ ಜೀವಂ ನೆಲಸಿ ಬೞೆಯು

ಕೊಲ್ಲಿಸುವವನೂ ತಾನೇ ಕೊಲ್ಲುವವನೂ ಪರಸ್ತ್ರೀಯರನ್ನು ಭೋಗಿಸಲು ಕಳುಹಿಸುವವನೂ ತಾನೇ ಪರಿಗ್ರಹಿಸುವವನೂ ಪಾಪಿಯೂ ಸಾಧುಸಂತರನ್ನು ನೋಡಿದೊಡನೆ ಸಿಟ್ಟಾಗುವವನೂ ಮತ್ತು ನಿಂದಿಸುವವನೂ ಧರ್ಮಕ್ಕೆ ದ್ರೋಹ ಬಗೆಯುವವನೂ ಹೆಂಡವನ್ನು ಕುಡಿಯುವವನೂ ಖಳನೂ ಇವರೆಲ್ಲರೂ ತಾಪದಾಯಕವಾದ ನರಕವನ್ನು ತಾಗುವವರೆಗೆ ಘುಳುಮ್ಮನೆ ಬೀಳುತ್ತಾರೆ. (ತಾಪಿನಂ = ತಾಗುವವರೆಗೆ). ವ|| ಆ ನರಕಗಳ ಹೆಸರು ರತ್ನಪ್ರಭಾ, ಶರ್ಕರಪ್ರಭಾ, ವಾಲುಕಪ್ರಭಾ, ಪಂಕಪ್ರಭಾ, ಧೂಮಪ್ರಭಾ, ತಮಃಪ್ರಭಾ, ಮಹಾತಮಃಪ್ರಭಾ ಎಂಬುದಾಗಿ. ಅವುಗಳಲ್ಲಿ, ೮೨. ಮೇಲೆ ಹೇಳಿದ ಮೊದಲನೆಯ ನಾಲ್ಕು ನರಕಗಳಲ್ಲಿ ಅತಿಯಾದ ಉಷ್ಣವಿರುತ್ತದೆ. ಐದನೇ ನರಕದ ಮೇಲ್ಭಾಗದಲ್ಲಿಯೂ ಉಷ್ಣವಿದೆ. ಐದನೇ ನರಕದ ಇನ್ನೊಂದು ಭಾಗದಲ್ಲಿಯೂ ಆರು ಮತ್ತು ಏಳನೇ ನರಕದಲ್ಲಿಯೂ ಚಳಿಯಿಂದ ಮುರುಟಿಹೋಗುತ್ತಾರೆ. ಏಳು ನರಕಗಳು ಈ ಬಗೆಯವು. ವ|| ಮತ್ತೂ ಅವುಗಳಲ್ಲಿ ಆ ನರಕಗಳಲ್ಲಿ-ಅನುಕ್ರಮವಾಗಿ ೮೩. ಮೂವತ್ತು ಲಕ್ಷ, ಇಪ್ಪತ್ತೈದು ಲಕ್ಷ, ಹದಿನೈದು ಲಕ್ಷ, ಹತ್ತು ಲಕ್ಷ, ಮೂರು ಲಕ್ಷ, ಐದು ಕಡಿಮೆಯಾಗಿ ಒಂದುಲಕ್ಷ-ಹೀಗೆ ನರಕಬಿಲಗಳಿವೆ. ಕಡೆಯ ಏಳನೆಯ ನರಕದಲ್ಲಿ ಕೇವಲ ಐದು ನರಕ ಬಿಲಗಳಿವೆ, ಏನು ಹೇಳೋಣ! ವ|| ಆ ನರಕಬಿಲಗಳು ಇಂದ್ರಕ, ಶ್ರೇಣಿಬದ್ಧ ಮತ್ತು ಪ್ರಕೀರ್ಣಕ ಎಂದು ಮೂರುತೆರನಾಗಿರುವುವು. ಅವುಗಳ ಮೇಲಿನ ಎತ್ತರ ಪ್ರದೇಶಗಳಲ್ಲಿಟ್ಟ ಜೇನುಗೂಡುಗಳನ್ನು ಹೋಲುತ್ತಿರುವ ಅತಿರೌದ್ರ, ಬೀಭತ್ಸ ಮತ್ತು ಕುತ್ಸಿತೋತ್ಪತ್ತಿ

೧ ಐದು + ಅತ್ತ + ಆವಗೆ. ಆವಗೆ = ನರಕಬಿಲ

ಮಂತರ್ಮುಹೂರ್ತದೊಳಾಹಾರಶರೀರೇಂದ್ರಿಯೋಚ್ಛ್ವಾಸಭಾಷಾಮನಃಪರ್ಯಾಪ್ತಿಗಳೊಳ್ ನೆರೆದು,

ಕೊಟ್ಟಸುಗಟ್ಟುಗಳಿಂದಂ
ತೊಟ್ಟನೆ ಪಱಿಪಟ್ಟು ಬೀಟ್ಪವೊಲ್ ಬಿರ್ದು ನಭಂ
ಮುಟ್ಟೆ ಸಿಡಿಲ್ದೆಡೆಗಿಡುವಿನ
ಮೊಟ್ಟದ ಕೈದುಗಳ ಮೇಲೆ ಬಿರ್ದನನಾಗಳ್ ೮೪

ಮನದೊಳ್ ಮುನಿಸೊದವೆ ಪುರಾ
ತನನಾರಕರೋವದಿವನನಿಱಿ ತಱಿ ಕೊಲ್ ಮೆಲ್
ಎನೆ ಬಗೆದು ಬಗೆದು ಮನದೊಳ್
ಜನಿಯಿಸುಗುಮವಂಗೆ ಖಳವಿಭಂಗಜ್ಞಾನಂ ೮೫

ವ॥ ಅಂತು ಪುಟ್ಟಿದ ವಿಭಂಗಜ್ಞಾನದಿಂದಪಗತನರಕಲೋಕವೃತ್ತಾಂತರಾದಿಂಬೞಿಯು ಮೋರೊರ್ವರ ನೆಱಿಂಗಳುಮನನ್ಯೋನ್ಯವೈರಕಾರಣಂಗಳುಮನುಗ್ಘಡಿಸುತ್ತುಮೋರೊರ್ವರೋರೊರ್ವರ ನಿಕ್ಕುಯಂತ್ರಂಗಳೊಳ್ ಕಬ್ಬಂ ಪಿೞಿವಂತೆ ಪಿೞಿವರುಂ, ಕಾಯ್ದ [1]ವಜ್ರಮೂಷೆಯೊಳಿಕ್ಕಿ ಲೋಹಮಂ ಕರಗಿಸುವಂತೆ ಕರಗಿಸುವರುಂ, ಬಾೞಿವಾೞಿ ತಿದಿಯುಗಿವರುಂ, ಮಿಡುಮಿಡುಕೆ ಬಡಿತಂಗಾಸುವರುಂ, ನೋಡೆ ನೋಡೆ ಕಣ್ಗಳಂ ಮೀಂಟುವರುಂ, ನುಡಿಯೆ ನುಡಿಯೆ ನಾಲಗೆಯಂ ಪಿಡಿದು ಪೆಡತಲೆಯಿಂದುರ್ಚುವರುಂ, ಕಾಯ್ದ ಕರ್ಬೊನ್ನ ಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ ನಟ್ಟು

ಸ್ಥಾನಗಳಲ್ಲಿ ಕೃಷ್ಣ ನೀಲ ಕಪೋತ ಲೇಶ್ಯಾ ಬಹ್ವಾರಂಭ ಪರಿಗ್ರಹತ್ವವೇ ಮೊದಲಾದ ಅಶುಭ ಪರಿಣಾಮಗಳಿಂದ ಜೀವವು ಅವುಗಳಲ್ಲಿ ನೆಲಸಿರುವುದು. ಅನಂತರ ಅಂತರ್ಮುಹೂರ್ತದಲ್ಲಿ ಆಹಾರ, ಶರೀರ, ಇಂದ್ರಿಯೋಚ್ಛ್ವಾಸ, ಮಾತು ಮತ್ತು ಮನಃ ಪರ್ಯಾಪ್ತಿಗಳಿಂದ ಕೂಡಿ; ೮೪. ಸುಟ್ಟ ಮಾಂಸವು ಕಟ್ಟುಗಳಿಂದ[1] (?) ಥಟ್ಟನೆ ಕತ್ತರಿಸಿ ಬೀಳುವಂತೆ ಬಿದ್ದು, ಆಕಾಶಕ್ಕೆ ಮುಟ್ಟುವಂತೆ ಸಿಡಿದು ಹಾರಿ, ಅಲ್ಲಿ ಪೇರಿಸಿರುವ ಆಯುಧಗಳ ಮೇಲೆ ನಾರಕಿಯು ಬೀಳುತ್ತಾನೆ. ಅವನನ್ನು ನೋಡಿ, ೮೫. ಅಲ್ಲಿರುವ ಹಳೆಯ ನಾರಕಿಗಳು ಕೋಪಗೊಂಡು 'ಅವನನ್ನು ಇರಿ! ತರಿ! ಕೊಲ್ಲು! ತಿನ್ನು!' ಎಂದು ಹೇಳುತ್ತಾರೆ. ಆಗ ದುಷ್ಟವಾದ ವಿಭಂಗಜ್ಞಾನ[2] ಹುಟ್ಟುತ್ತದೆ. ವ॥ ಹಾಗೆ ಹುಟ್ಟಿದ ವಿಭಂಗಜ್ಞಾನದಿಂದ ಮೊದಲಿನಿಂದ ಕೊನೆಯವರೆಗೆ ನರಕವೃತ್ತಾಂತವನ್ನರಿತು ಒಬ್ಬೊಬ್ಬರ ಮರ್ಮವನ್ನೂ ಅನ್ಯೋನ್ಯ ವೈರಕಾರಣಗಳನ್ನೂ ಸಾರಿ ಹೇಳುತ್ತ ಅವರು ಒಬ್ಬೊಬ್ಬರನ್ನೂ ಕಬ್ಬಿನಗಾಣದಲ್ಲಿ ಕಬ್ಬನ್ನು ಹಿಂಡುವಂತೆ ಹಿಂಡುವರು. ಕಾಯಿಸಿದ ವಜ್ರಮೂಷೆಯಲ್ಲಿಟ್ಟು ಲೋಹವನ್ನು

---

1 ಕೊಟ್ಟಸ = ಸುಟ್ಟ ಮಾಂಸ. ಈ ಶಬ್ದವು ಮೊದಲು 'ಕೊಟ್ಟಸು' ಎಂದು ಉಕಾರಾಂತವಾಗಿದ್ದಿರಬಹುದು. "ತೂಗುಹಾಕಿದ ಸುಟ್ಟಮಾಂಸವು ಕಟ್ಟಿನಿಂದ ಕಳಚಿ ಬೀಳುವಂತೆ" ಎಂಬ ಉಪಮಾನವು ಯಾತನೆಯನ್ನನುಭವಿಸುವ ನಾರಕಿಗೆ ಯೋಗ್ಯವಾಗಿಯೇ ಇದೆ. ಪೂರ್ವಪುರಾಣದಲ್ಲಿ 'ತೊಟ್ಟು ಕಳಚಿದ ಎಲೆಯಂತೆ,' ಎಂಬ ಉಪಮಾನವಿದೆ (೧೦-೩೫)

2 ಆತ್ಮನಿಗೆ ಅಹಿತವನ್ನುಂಟುಮಾಡುವ ಪದಾರ್ಥಗಳನ್ನು ತಿಳಿಯುವ ಮಿಥ್ಯಾಜ್ಞಾನ.

**ಪರಗುವರುಂ, ತಳ್ತಳನೆ ಕುದಿವ ಕರ್ಬೊನ್ನ ಕಾಯ್ಗೊಂಡೆಣ್ಣೆಯೊಳ್ ಬಳಲೆ ತೆಗಪುವರುಂ, ಪಸಿಯ ತೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವರುಂ, ಕಾಯ್ದ ಕಾವಲಿಗಳೊಳ್ ಮೊರ್ಮುರನಾಗೆ ತಾಳಿಸುವರುಂ, ಕೂಟಶಾಲ್ಮಲಿಗಳನಡರವೇಟ್ಟಿದಿರಂ ಬಟೆಯನುರ್ಚುವರುಂ, ಉರಿವ ಕೈದೀವಿಗೆಗಳೊಳ್ ಮೊಗಮಂ ಚುರ್ಚುವರುಂ, ಒಳ್ಪನುರಿವ ಪುಣ್ಗಳೊಳ್ ಕ್ಷಾರವಾರಿಗಳನೆಱೆದೊರಸಿ ಕರ್ಚುವರುಂ ಅಂತುಮಲ್ಲದೆಯುಂ,**

**ಅಡಗಿನ ಬಸನಿಗನೈ ತಿನ್**
**ಪಿಡಿಯೆಂದವನಡಗನವನ ಬಾಯೊಳ್ ಗಿಡಿವರ್**
**ಕುಡಿ ಕಳ್ಳನೆಂದು ಕರಗಿಸಿ**
**ಕುಡಿಯಿಸುವರ್ ಲೋಹರಸಮನೆರ್ದೆಗರಗುವಿನಂ ೮೬**

**ಪುಸಿ ಬಸನಮೆಂದು ಕೆಲಬರ್**
**ಕುಸಿವರ್ ನಾಲಗೆಯನಿಕ್ಕುಟಿೞೊಳ್ ಪರವಧುಡು**
**ವ್ಯಸನಂ ನಿನಗೆಂದಮರ್ದ**
**ಪ್ಪಿಸುವರ್ ಕೆಂಪೆಸೆಯೆ ಕಾಯ್ದಯಃಪುತ್ರಿಕೆಯಂ ೮೭**

**ವ|| ಅಂತು ಸದ್ಯಸ್ಸಂತಾಪಿತಲೋಹಪುತ್ರಿಕಾಪರಿರಂಭಸಂಭೃತಪ್ಲೋಷಚಲಜ್ಜಾಂಗಳಗಳದ್ರುಧಿರ ವಿಚಳದಸ್ಥಿನಿರ್ಯನ್ಮಜ್ಜಾಶುಷ್ಯತ್ಕಂಠಸ್ವಿದ್ಯದ್ವದನನಿಮೀಳನ್ನೇತ್ರಸೀದದ್ಗಾತ್ರಮುಹ್ಯನ್ಮನಸಾಕ್ರಂದತ್**

ಕರಗಿಸುವಂತೆ ಕರಗಿಸುವರು. ಬದುಕಿರುವಂತೆಯೆ ಚರ್ಮ ಸುಲಿಯುವರು. ಮಿಡುಕುತ್ತಿರುವಂತೆಯೆ ಬಡಿದು ಕಾಯಿಸುವರು. ನೋಡುತ್ತಿರುವಾಗಲೇ ಕಣ್ಣುಗಳನ್ನು ಕೀಳುವರು. ಮಾತನಾಡುತ್ತಿರುವಾಗಲೇ ನಾಲಗೆಯನ್ನು ಹಿಡಿದುಕೊಂಡು ಹೆಡತಲೆಯಿಂದೆಳೆಯುವರು. ಕಾಯಿಸಿದ ಕಬ್ಬಿಣದ ಸೂಜಿಗಳನ್ನು ಬೆರಳುಗಳಿಗೆ ಚುಚ್ಚುವರು. ತಕತಕನೆ ಕುದಿಯುತ್ತಿರುವ ಕಬ್ಬಿಣದ ಕಾಯಿಸುವ ಹಂಡೆಯ ಎಣ್ಣೆಯಲ್ಲಿ ಕರಿದು ತೆಗೆಯುವರು. ಹಸಿಯ ತೊಗಲಿನ ತಿದಿಯಲ್ಲಿ ಸೇರಿಸಿ ಪುಟಪಾಕವಿಡುವರು. ಕಾಯ್ದ ಕಾವಲಿಗಳಲ್ಲಿ ಚಿಟಪಟವೆನ್ನುವಂತೆ ಹುರಿಯುವರು. ಮುಳ್ಳಿನ ಗದೆಗಳನ್ನು ಹತ್ತುವಂತೆ ಹೇಳಿ ಎದುರಿನಲ್ಲಿಯೂ ಅಕ್ಕಪಕ್ಕಗಳಲ್ಲಿಯೂ ಚುಚ್ಚುವರು. ಉರಿಯುತ್ತಿರುವ ಕೈದೀವಿಗೆಗಳಿಂದ ಮುಖವನ್ನು ತಿವಿಯುವರು. ಉರಿಯುತ್ತಿರುವ ಹುಣ್ಣುಗಳನ್ನು ಉಪ್ಪುನೀರಿನಿಂದೊರಸಿ ತೊಳೆಯುವರು! ಅಂತಲ್ಲದೆ; ೮೬. ಮಾಂಸಾಹಾರಿಯಾದ ನೀನು ನಿನ್ನ ಮಾಂಸವನ್ನು ತಿನ್ನೆಂದು ಅವನ ಮಾಂಸವನ್ನೇ ಅವನ ಬಾಯಲ್ಲಿ ಗಿಡುಗುವರು. ಮದ್ಯವನ್ನು ಕುಡಿಯೆಂದು ಹೇಳಿ ಲೋಹರಸವನ್ನು ಕರಗಿಸಿ ಎದೆ ಕರಗುವಂತೆ ಕುಡಿಯಿಸುವರು. ೮೭. 'ಸುಳ್ಳು ಹೇಳುವುದೇ ನಿನ್ನ ಸ್ವಭಾವ' ಎನ್ನುತ್ತಾ ಅವನ ನಾಲಗೆಯನ್ನು ಇಕ್ಕುಳ ದಿಂದೆಳೆಯುವರು. ಪರಸ್ತ್ರೀಯರ... ನಿನಗೆ ಅತ್ಯಾಸಕ್ತಿಯೆನ್ನುತ್ತಾ ಕಾದ ಕಬ್ಬಿಣದ ಹೆಣ್ಣುಬೊಂಬೆಯನ್ನು ಅಪ್ಪಿಸುವ... ವ|| ಆಗ ತಾನೆ ಕಾಯಿಸಿದ ಕಬ್ಬಿಣದ ಹೆಣ್ಣುಬೊಂಬೆಯನ್ನು ತಬ್ಬಿಕೊಂಡ ಕಾರಣ ಸು... ಬೀಳುತ್ತಿರುವ ಮಾಂಸ, ಸೋರುತ್ತಿರುವ ರಕ್ತ, ಬಂಧದಿಂದ ಕಳಚಿಕೊಳ್ಳುತ್ತಿರುವ ಮೂ... ಹೊರಹೊರಡುತ್ತಿರುವ ನೆಣ, ಒಣಗಿದ ಕಂಠ, ಬೆವರಿದ ಮುಖ, ಮುಚ್ಚಿದ ಕ...

**ಸ್ವರಪರಿಗತರ್ ಸ್ವೈರಿಸಲಾಱದೆ ತಡ್ತಡಿಸಿ ಪರಿತಂದತಿದ್ರುತಪ್ರವಾಹಮಾನಾರುಷ್ಕರದ್ರವಾವರ್ತಗರ್ತ ಗಂಭೀರೆಯುಂ ಗಂಭೀರನಾರಕಭೀಷಣಮಕರಮುಖಕುಹರನಿಪತಿತಾಕ್ರಂದದಾರ್ತಪರುಷಸ್ವರವಿರಸಭಯಂಕರೆಯುಂ ಭಯಂಕರಶಿಂಶುಮಾರವಿಕಟದಂಷ್ಟ್ರಾಕ್ರಕಚಪಾಟ್ಯಮಾನನಾರಕನಿಕರರುಧಿರಚ್ಛಟಾಚ್ಛಾರುಣಾರುಣಿತ ಸಲಿಲಹರಿಕಾನಿಕರಕರಾಳೆಯುಂ ಕರಾಳನಕ್ರಚಕ್ರಚರ್ವಿತನಿಕೀರ್ಣನಿರಯಜನಿಕುರುಂಬಶಲ್ಕಶಕಲಪರಿಪೂರಿತಧವಳಪ್ಲವದುರ್ನಿರೀಕ್ಷಣವಿಷಮೆಯುಂ ವಿಷಮಕಠೋರಕೂರ್ಮಘರ್ಮನಿರ್ಭರೋಚ್ಛ್ವಾಸಭರದ್ವೈಧೀಭವದಂಭಃಪ್ರಕಟಿತಾಗಾಧರಂಧ್ರಾವರ್ತಮಾನಜಳಚರಸಂಚರಣವಿಸ್ಮಯನೀಯಭಯಾನಕೆಯುಂ ಭಯಾನಕೋಭಯತಟಗುಹಾಗಹ್ವರನಿರ್ಯಜ್ವರದಜಗರಗಳಗಳಿತಗರಳಶಬಳಿತಸಲಿಲಪ್ರವಾಹೆಯುಂ ಪ್ರವಾಹಾತ್ಯುಷ್ಣತಾಪಹಸಿತಪ್ರಳಯಕಾಲಪ್ರೌಢತರತರಣಿಯುಂ ವೈತರಣಿಯುಂ ಪೊಕ್ಕಾಗಳ್,**

ಸುಡುವುದು ನಂಜುನೀರ್ ಪಿಡಿದು ನುಂಗುವುವಲ್ಲಿಯ ಮೀಂಗಳೆತ್ತಮೋ
ರಡಿ ಮಿಡುಕಲ್ಕೆ ಬಾರದೆಮಗಾರ್ ಶರಣೆಲ್ಲಿಗೆ ಪೋಪೆವೆಂದು ಮ
ಳ್ಳಡಿನಸಿಪತ್ರನಂದನಮನೊಯ್ಯನೆ ಸಾರ್ವುದುಮಲ್ಲಿ ಮೆಯ್ಯೊಳ
ರ್ದಿಡುವುವು ಪತ್ರಪುಷ್ಪಫಲಸಂಕುಳದಂದದ ಶಸ್ತ್ರಕೋಟಿಗಳ್ ೮೮

ವ॥ ಅಂತು ಶಾರೀರಮಾನಸಕ್ಷೇತ್ರಜಪರಸ್ಪರೋದೀರಿತ ದನುಜೋದೀರಿತಂಗಳೆಂಬಯ್ದುಂ ತೆಱದ ದುಃಖಂಗಳೊಳರ್ದು ನಿಮಿಷಮಾತ್ರಮುಪ್ಪೊಡಮುಸಿರ್ಪೊತ್ತಂ ಪಡೆಯದೆ.

ಸಂಕಟಕ್ಕೀಡಾದ ಶರೀರ, ಮೋಸಗೊಂಡ ಮನಸ್ಸು, ಗೋಳಾಟದ ಧ್ವನಿ-ಇವುಗಳಿಂದ ಕೂಡಿ ನಾರಕಿಗಳು ಏಳುತ್ತ ಬೀಳುತ್ತ ಓಡಿಬಂದು ಅತಿವೇಗವಾಗಿ ಪ್ರವಹಿಸುತ್ತಿರುವ ಗೇರುಕಾಯಿ (Marking nut) ರಸಗಳ ಸುಳಿಗಳ ಗುಂಡಿಗಳಿಂದ ಭಯಾನಕವಾಗಿ ತೋರುತ್ತಿರುವ ಅಗಾಧವಾದ ನರಕದ ಭೀಕರವಾದ ಮೊಸಳೆಗಳ ಮುಖದಂತಿರುವ ಗುಂಡಿಯಲ್ಲಿ ಬಿದ್ದು ಕೂಗಿಕೊಳ್ಳುತ್ತಿರುವವರ ಆರ್ತಧ್ವನಿಯಿಂದ ಕಠೋರವೂ ಕರಾಳವೂ ಆದ, ಮೊಸಳೆಗಳ ಹರಿತವಾದ ಹಲ್ಲುಗಳೆಂಬ ಗರಗಸದಿಂದ ಕೊಯ್ಯಲ್ಪಟ್ಟ ನಾರಕಿಗಳ ದೇಹಗಳಿಂದ ಸ್ರವಿಸುತ್ತಿರುವ ರಕ್ತದ ಕೆಂಪಿನಿಂದ ಕೆಂಪಾದ ನೀರಿನಲೆಗಳ ಸಮೂಹದಿಂದ ಭೀಕರೆಯಾದ, ಕ್ರೂರವಾದ ಮೊಸಳೆಗಳಿಂದ ಜಗಿಯಲ್ಪಟ್ಟು ಕಕ್ಕಲಾದ ನಾರಕಿಗಳ ಮೂಳೆತುಂಡುಗಳಿಂದ ಬೆಳ್ಳಗಾದ ಪ್ರವಾಹದಿಂದ ನೋಡಲಾಗದಷ್ಟು ಭಯಂಕರೆಯಾದ, ವಿಷಮವೂ ಕಠೋರವೂ ಆದ ಆಮೆಗಳ ಉಚ್ಛ್ವಾಸವೇಗದಿಂದ ಎರಡಾಗಿ ಸೀಳಿದ ನೀರಿನ ಸುಳಿಗಳಲ್ಲಿ ಸುಳಿದಾಡುತ್ತಿರುವ ಜಲಚರಗಳಿಂದ ಕೂಡಿ ಭಯಂಕರೆಯಾದ, ಎರಡೂ ದಡಗಳಲ್ಲಿರುವ ಗುಹಾರಂಧ್ರಗಳಿಂದ ಹೊರಬಿದ್ದ ಹೆಬ್ಬಾವುಗಳ ಗಂಟಲ ವಿಷದಿಂದ ನಾನಾವರ್ಣಗೊಂಡ ಜಲಪ್ರವಾಹವುಳ್ಳ, ಪ್ರವಾಹದ ಅತ್ಯುಷ್ಣತಾಪದಿಂದ ಪ್ರಳಯಕಾಲ ಸ್ಥಿತನಾದ ಸೂರ್ಯನನ್ನು ನೋಡಿ ನಗುತ್ತಿರುವ ವೈತರಣಿನದಿಯನ್ನು ಹೊಗುತ್ತಾರೆ. ಅಗ, ೮೮. “ವಿಷದ ನೀರು ಸುಡುತ್ತಿದೆ. ಮೀನುಗಳು ಹಿಡಿದು ನುಂಗುತ್ತಿವೆ. ಒಂದು ಹೆಜ್ಜೆಯನ್ನೂ ಇಡಲಿಕ್ಕಾಗದಿದೆ. ನಮಗೆ ರಕ್ಷಕರಾರು? ಎಲ್ಲಿಗೆ ಹೋಗೋಣ?” ಎಂದು ಭ್ರಾಂತಿಯಿಂದ ಅಸಿಪತ್ರನಂದನವನವನ್ನು ನಾರಕಿಗಳು ಬೇಗನೆ ಹೊಗುವರು. ಆದರೆ ಅಲ್ಲಿ ಪತ್ರ ಪುಷ್ಪಗಳಂತಿರುವ ಶಸ್ತ್ರಕೋಟಿಗಳು ಅವರ ಮೈಯನ್ನು ಚುಚ್ಚತೊಡಗುತ್ತವೆ. ವ॥ ಹಾಗೆ ಶಾರೀರ, ಮಾನಸ, ಕ್ಷೇತ್ರಜ, ಪರಸ್ಪರೋದಿತ, ದನುಜೋದೀರಿತ ಎಂಬ

॥ಮಾಲಿನಿ॥

ನರಕನಗರಲಾಕ್ಷಾಕಸ್ಮಿಕಾಗ್ನಿಸ್ಫುಲಿಂಗ
ಸ್ಫುರದವಿರಳಲಾಕ್ಷಾಗೇಹಪೂರೈಕಭಾವ
ತ್ವರಿತವಿಚಳದಸ್ಥಿಗ್ರಂಥಿಸಂಸ್ಥಾನಬಂಧರ್
ಖರಪರುಷನಿನಾದರ್ ನಾರಕರ್ ಬರ್ದುಕಿರ್ಪರ್ ೮೯

ವಾನರವಾರಣೋಷ್ಟ್ರಖರಮತ್ಸ್ಯಕಳೇವರಪೂತಿಗಂಧಮೋ
ನೇನೊಳವುಳ್ಳವೊಂದೆಡೆಗೆ ಬಂದುಮಿವಂದಿರ ಮೆಯ್ಯ ಗಂಧದು
ದ್ದಾನಿಗೆ ವಾರದೆಂಬಿನಮದೇಂ ನೆಱೆ ಪೋಲ್ತುದೊ ಚಂಡಹುಂಡಸಂ
ಸ್ಥಾನದೆ ಗುಂಡುದೀವಿದ ತಡಂಗಮನಂಗದ ಪಾಂಗವಂದಿರಾ ೯೦

ದೊರೆಕೊಂಡ ಕೃಷ್ಣಲೇಶ್ಯಾ
ಪರಿಣಾಮಮೆ ಕೃಷ್ಣವರ್ಣಮಂ ಪುಟ್ಟಿಸಿದಂ
ತಿರೆ ಕರಿಕರ್ ಪೇಡಿಗಳತಿ
ಪರುಷಸ್ವರಪರುಷನಯನಪರುಷಶರೀರರ್ ೯೧

ಏೞ್ ಧನು ಮೂಱು ಮೊೞನಿಂ
ಪೇೞ್ ಪಡಂಗುಲಮೆ ಮೊದಲ ನಾರಕರೊಡಲಂ
ತೇೞುವರಂ ತದ್ದ್ವಿಗುಣಂ
ಸೂೞೊಳ್ ನಾರಕರ ಕಠಿನದೇಹೋತ್ಸೇಧಂ ೯೨

ಐದು ಬಗೆಯ ದುಃಖಗಳಲ್ಲಿ ಮುಳುಗಿ ಒಂದು ನಿಮಿಷಮಾತ್ರವೂ ಉಸಿರಾಡಲಿಕ್ಕಾಗದೆ, ೮೯. ನರಕನಗರದಲ್ಲಿ ಕಾಣಿಸಿಕೊಂಡ ಆಕಸ್ಮಿಕವಾದ ಬೆಂಕಿಯ ಕಿಡಿಗಳಿಂದ ಹತ್ತಿಕೊಂಡು ಉರಿಯುತ್ತಿರುವ ಅರಗಿನ ಮನೆಗಳ ಪ್ರವಾಹದಿಂದ ನಾರಕದ ಮೂಳೆಗಳ ಕೀಲುಗಳೂ ಶರೀರಸಂಸ್ಥಾನಬಂಧಗಳೂ ಸಡಿಲಗೊಳ್ಳುತ್ತವೆ. ಅದರಿಂದ ಗಟ್ಟಿಯಾಗಿ ಕೂಗುತ್ತಾ ಅರಚುತ್ತಾ ಜೀವಿಸಿರುತ್ತಾರೆ. ೯೦. ಕೋತಿ, ಆನೆ, ಒಂಟೆ, ಕತ್ತೆ, ಮೀನು-ಇವರೆಲ್ಲರ ಹೆಣಗಳ ದುರ್ಗಂಧವು ಒಂದೆಡೆ ಒಟ್ಟಿಗೆ ಕೂಡಿದರೂ ಈ ನಾರಕಿಗಳ ಶರೀರಗಳ ದುರ್ಗಂಧಾತಿಶಯಕ್ಕೆ ಸಾಟಿಯಾಗದು. ನಪುಂಸಕರೂ ಹುಂಡಸಂಸ್ಥಾನವುಳ್ಳವರೂ ಆದ ಆ ನಾರಕಿಗಳ ಶರೀರದ ರೀತಿಯು ಅತಿಕುರೂಪವಾದ ಅವಯವಗಳಿಂದ ತುಂಬಿದ ಗುಂಡುದೀವಿದ (ಕೊಳೆತ?) ಕೆರೆಯನ್ನು (?) ಹೋಲುತ್ತದೆ. ೯೧. ಮಾಡಿದ ದುಷ್ಕರ್ಮಗಳ ಪರಿಣಾಮವೇ ಕೃಷ್ಣವರ್ಣ (ಕಪ್ಪುಬಣ್ಣ)ವನ್ನು ಹುಟ್ಟಿಸಿದಂತಿರಲು ನಾರಕಿಗಳು ಕರಿಯರಾಗಿಯೂ ಹೇಡಿಗಳಾಗಿಯೂ ಒರಟಾದ ಧ್ವನಿಯುಳ್ಳವರಾಗಿಯೂ ಕ್ರೂರವಾದ ಕಣ್ಣುಳ್ಳವರಾಗಿಯೂ ಕಠಿಣವಾದ ಶರೀರವುಳ್ಳವರಾಗಿಯೂ ಆಗಿರುವರು. ೯೨. ಆ ನಾರಕಿಗಳ ಕಠಿಣದೇಹಪ್ರಮಾಣವು ಒಂದನೆಯ ನರಕದಲ್ಲಿ ಏಳು ಬಿಲ್ಲು, ಮೂರು ಮೊಳ, ಆರು ಅಂಗುಲ ಎತ್ತರವಿರುತ್ತದೆ. ಅನಂತರ ಒಂದೊಂದು ನರಕದಲ್ಲಿಯೂ ಪ್ರಮಾಣವು ಎರಡರಷ್ಟಾಗುತ್ತ ಏಳನೆಯ ನರಕದವರೆಗೆ ಹೆಚ್ಚುವುದು. (ಏಳನೆಯ ನರಕದಲ್ಲಿ

ಮೊದಲಿಂದಂ ತುದಿಯೆಯ್ದೆ ಸಂದ ನರಕಾಯುಷ್ಯಾಬ್ಧಿ ಕೇಳೊಂದು ಮೂ
ಱೆದಱಿಂದಂ ಬೞಿಕೇೞು ಪತ್ತು ಪದಿನೇೞಿರ್ಪತ್ತೆರಡುಮ್ಮೞು ಪೆ
ರ್ಚಿದ ಮೂವತ್ತನೆ ತಮ್ಮ ಮುಂ ನೆರಪಿದಾಯುಷ್ಯಂಬರಂ ಮಾಯಮಾ
ಗದು ಮೆಯ್ಸಣ್ಣಿಗೆಯೊಳ್ ಮಗುಟ್ಚಿದೊಡಮೇಂ ದುಃಖಕ್ಕವರ್ ನೋಂತರೋ ೯೩

ಕ್ರಮದೊಳಸಂಜ್ಞಿಯುಂ ಸರಿಸೃಪಾವಳಿಯುಂ ವಿಹಗಾಳಿಯುಂ ಭುಜಂ
ಗಮತತಿಯುಂ ಮೃಗಾರಿಗಣಮುಂ ಲಲನಾಜನಮುಂ ಮನುಷ್ಯದು
ಸ್ತಿಮಿಕುಳಮುಂ ಹಿಮಾಂಶುನಯನಾಗ್ನಿಕಷಾಯಹೃಷೀಕಷಣ್ಮುನಿ
ಕ್ರಮನರಕಂಗಳೊಳ್ ನೆಲಸುಗುಂ ದಿವಿಜೋತ್ತಮ ನಂಬು ನೀನಿದಂ ೯೪

ವ|| ಮುನ್ನೆ ನಿನ್ನ ಬೆಸಗೊಂಡ ಶತಬುದ್ಧಿಯುಮತ್ಯಂತಪಾಪಬುದ್ಧಿಯಿಂದಮಿಂತುಟಪ್ಪ ದುಃಖಮನೆರಡನೆಯ ನರಕದೊಳನುಭವಿಸಿದಪ್ಪನೆಂಬುದುಂ ಶ್ರೀಧರಾಮರನತ್ಯಂತಧರ್ಮಸಂವೇಗಪರಾಯಣನಾಗಿ ಸರ್ವಾಂಗಾಲಿಂಗಿತಮಹೀತಳಂ ಗುರೂಪದೇಶದಿಂದಾತನಂ ಪ್ರತಿಬೋಧಿಸಲಲ್ಲಿಗೆ ಪೋಗಿ,

ಐದುನೂರು ಬಿಲ್ಲುಗಳಷ್ಟಿರುವುದು). ೯೩. ಮೊದಲಿಂದ ತುದಿಯವರೆಗೆ ಇರುವ ನರಕಾಯುಷ್ಯಸಮುದ್ರದ ವಿಷಯವನ್ನು ಕೇಳು. ಅದು ಕ್ರಮವಾಗಿ ಒಂದು, ಮೂರು, ಏಳು, ಹತ್ತು, ಹದಿನೇಳು, ಇಪ್ಪತ್ತೆರಡು ಮತ್ತು ಮೂವತ್ತಮೂರು ಸಮುದ್ರೋಪಮ ನರಕಾಯುಷ್ಯಗಳನ್ನೊಳಗೊಂಡಿದೆ. ಮೊದಲು ತಾವು ಅನುಭವಿಸಿದ ಆಯುಷ್ಯದ ಪೂರ್ತಿಯಾಗುವವರೆಗೆ ಒರಳಿನಲ್ಲಿ ಹಾಕಿ ತಿರುಗಿಸಿದರೂ ಶರೀರವು ನಾಶವಾಗುವುದಿಲ್ಲ! ಅವರು ಅದೇನು ದುಃಖಪಡುವುದಕ್ಕಾಗಿಯೇ ಶ್ರಮಿಸಿದರೊ! ೯೪. ಅಸಂಜ್ಞಿಜೀವಗಳೂ ಸರೀಸೃಪಗಳೂ ಹಕ್ಕಿಗಳೂ ಹಾವುಗಳೂ ಸಿಂಹಗಳೂ ಲಲನಾಜನರೂ ಮನುಷ್ಯರೂ ಅಲ್ಲದೆ ದುಷ್ಟ ತಿಮಿಂಗಿಲಗಳೂ ಒಂದನೆಯ (ಹಿಮಾಂಶು) ಎರಡನೆಯ (ನಯನ) ಮೂರನೆಯ (ಅಗ್ನಿ) ನಾಲ್ಕನೆಯ (ಕಷಾಯ) ಐದನೆಯ (ಹೃಷೀಕ) ಆರನೆಯ (ಷಟ್) ಏಳನೆಯ (ಮುನಿ) ನರಕಗಳಲ್ಲಿ ಕ್ರಮವಾಗಿ ನೆಲೆಸುವರು.[1] ಎಲೈ ದಿವಿಜಶ್ರೇಷ್ಠನೇ! ಇದನ್ನು ನೀನು ನಂಬು. ವ|| ಈ ಮೊದಲು ನೀನು ಬೆಸಗೊಂಡ ಶತಮತಿಯು ಪಾಪಬುದ್ಧಿಯಿಂದ ಎರಡನೆಯ ನರಕದಲ್ಲಿ ಇಂಥ ದುಃಖವನ್ನು ಅನುಭವಿಸುತ್ತಿದ್ದಾನೆ." ಎನ್ನಲು ಶ್ರೀಧರಾಮರನು ಧರ್ಮಾತ್ವರೆಯಿಂದ ಕೂಡಿ ಅಡ್ಡಬಿದ್ದು ಗುರೂಪದೇಶದಿಂದ ಅವನನ್ನು (ಶತಮತಿಯನ್ನು)

---

1 ಪೂ. ಪುರಾಣಾನುಸಾರವಾಗಿ ಈ ಜೀವಿಗಳು ಆಯಾ ಸಂಖ್ಯೆಯ ನರಕದಲ್ಲಿಯೂ ಮತ್ತು ಹಿ.ಂದಿನ ನರಕಗಳಲ್ಲಿಯೂ ನೆಲೆಸುತ್ತವೆ. ಮನುಷ್ಯ ಮತ್ತು ದುಸ್ತಿಮಿಗಳು (ಮೀನುಗಳು) ಏಳನೆಯ ರಕದಲ್ಲಿಯೂ ಹಿಂದಿನ ನರಕಗಳಲ್ಲಿಯೂ ನೆಲೆಸುತ್ತವೆ. ಹಿಮಾಂಶು, ನಯನ-ಮೊದಲಾದವು ಖ್ಯಾಸೂಚಕ ಶಬ್ದಗಳು.

ಅಱಿಯಮೆ ತಿಣ್ಣಂ ನಿನಗೇ
ನಱಿವೊ ಮಹಾಬಳನೆನೆನ್ನೆಲೆ ಶತಮತಿ ನಿ
ನ್ನಱಿಯಮೆಯೆ ನಿನ್ನನಿನಿತಂ
ಮಱುಗಿಸಿದುದು ಪಾಪಕರ್ಮ ನೀಂ[೧] ಕಂಡುಂಡೈ ೯೫

ಇನ್ನುಂ ನಿಜಮಿಥ್ಯಾಜ್ಞಾ
ನೋನ್ನತಿಯಂ ಬಿಸುಟು ನಂಬು ಸಮ್ಯಕ್ತ್ವಮನಿಂ
ತೆನ್ನನೆ ಕಂಡಿಂ ತಿಳಿಯೆನೆ
ಸನ್ನುತಸಮ್ಯಕ್ತ್ವ ರತ್ನಮಂ ಕೈಕೊಂಡಂ ೯೬

ವ|| ಕೈಕೊಂಡು ಕಾಲಾಂತರದಿಂದಾ ನರಕದಿಂದಾತಂ ಬಂದು ಪುಷ್ಕರವರದ್ವೀಪದ ಪೂರ್ವಮಂದರದ ಪ್ರಾಗ್ವಿದೇಹದ ಮಂಗಳಾವತೀವಿಷಯದ ರತ್ನಸಂಚಯಪುರಮನಾಳ್ವ ಮಹೀಧರಂಗಂ ತತ್ಸುಂದರಿ ಸುಂದರಿಗಂ ಜಯಸೇನನೆಂಬ ಮಗನಾಗಿ ಪುಟ್ಟಿ, ವಿವಾಹಸಮಯದೊಳ್ ತನ್ನನಾ ಶ್ರೀಧರದೇವನೇ ಬಂದು ಮಗುಳ್ದುಂ ಮೂದಲಿಸೆ, ಯಮಧರಗುರುಗಳ ಪಾದಮೂಲದೊಳ್ ದುಶ್ಚರತಪಶ್ಚರಣಪರಾಯಣಂ ಜೀವಿತಾಂತ್ಯದೊಳ್ ಸಮಾಹಿತಚಿತ್ತನಾಗಿ,

ಪಡೆದಂ ಬ್ರಹ್ಮೇಂದ್ರತೆಯಂ
ಗಡಮಾತಂ ಬಗೆದು ನೋಡೆ ನಾರಕನೆತ್ತಲ್
ಗಡ ದೇವನೆತ್ತ ಕರ್ಮಮೆ
ಕಡುಬಲ್ಲಿತ್ತದಱ ತಿರಿವದೇಂ ಬಹುವಿಧಮೋ ೯೭

ಎಚ್ಚರಿಸಲು ಅಲ್ಲಿಗೆ ಹೊರಟನು. ಅಲ್ಲಿಗೆ ಹೋಗಿ, ೯೫. "ಎಲೈ ಶತಮತಿ, ನಿನ್ನ ಅಜ್ಞಾನವು ಹೆಚ್ಚಿನದು. ನಾನು ಮಹಾಬಲನೆಂದು ತಿಳಿದುಕೋ. ನಿನ್ನ ಅಜ್ಞಾನವೇ ನಿನ್ನನ್ನು ಇಷ್ಟು ಕಷ್ಟಕ್ಕೊಳಪಡಿಸಿತು. ಎಲೈ ಪಾಪಕರ್ಮನೆ, ಪಾಪದ ಫಲವನ್ನು ಕಂಡು ಅನುಭವಿಸಿರುವೆ. ೯೬. ಇನ್ನುಮೇಲಾದರೂ ನೀನು ನಿನ್ನ ಮಿಥ್ಯಾಜ್ಞಾನದ ಉನ್ನತಿಯನ್ನು ತೊರೆ. ಸಮ್ಯಕ್ತ್ವವನ್ನು ನಂಬು. ನನ್ನನ್ನು ಕಂಡು ತಿಳಿದುಕೋ" ಎಂದನು. ಆಗ ಶತಮತಿಯು ಸ್ತುತ್ಯವಾದ ಸಮ್ಯಕ್ತ್ವರತ್ನವನ್ನು ಕೈಕೊಂಡನು. ವ|| ಬಳಿಕ ಕಾಲಾಂತರದಲ್ಲಿ ಅವನು ಆ ನರಕದಿಂದ ಬಂದು ಪುಷ್ಕರವರದ್ವೀಪದ, ಪೂರ್ವಮಂದರದ ಪ್ರಾಗ್ವಿದೇಹದ ಮಂಗಲಾವತೀದೇಶದಲ್ಲಿನ ರತ್ನಸಂಚಯಪುರವನ್ನು ಆಳುತ್ತಿರುವ ಮಹೀಧರನಿಗೂ ಅವನ ಹೆಂಡತಿ ಸುಂದರಿಗೂ ಜಯಸೇನನೆಂಬ ಮಗನಾಗಿ ಜನಿಸಿದನು. ಅವನ ವಿವಾಹಕಾಲದಲ್ಲಿ ಶತಮತಿಯನ್ನು ಶ್ರೀಧರದೇವನೇ ಸ್ವತಃ ಬಂದು ಮೂದಲಿಸಿದನು. ತತ್ಫಲವಾಗಿ ಅವನು ಯಮಧರಗುರುಗಳ ಬಳಿಯಲ್ಲಿ ದುಸ್ಸಾಧ್ಯವಾದ ತಪಸ್ಸನ್ನು ಕೈಕೊಂಡು ಜೀವಿತದ ಕೊನೆಯಲ್ಲಿ ಶಾಂತ ಮನಸ್ಸಿನಿಂದ, ೯೭. ಅವನು (ಬ್ರಹ್ಮಕಲ್ಪದಲ್ಲಿ) ಬ್ರಹ್ಮೇಂದ್ರತ್ವವನ್ನು ಪಡೆದನು. ವಿಚಾರಿಸಲಾಗಿ

೧. 'ಪಾಪಕರ್ಮಮ' ಎಂದು ಶುದ್ಧಪಾಠವಿರಬಹುದು.

ವ|| ಅನ್ನೆಗಂ,

ಉಪಕಾರಸ್ಮರಣೆ ಮನ
ಕ್ಕೆ ಪುಟ್ಟಿ ತದ್ದಿವಿಜವಲ್ಲಭಂ ಶ್ರೀಧವನಂ
ನಿಪುಣಂ ಪೂಜಿಸಿದಂ ಗಡ
ಮುಪಕಾರಮನಱಿಯದಾತನುಂ ಮಾನಸನೇ ೯೮

ವ|| ಅನ್ನೆಗಂ,

ದಿವಿಜವನಿತಾಸವಿಭ್ರಮ
ಧವಳಾಪಾಂಗಮೆ ನಿಜಾಯುರಂಭೋನಿಧಿಯಂ
ತವೆ ಪೀರ್ದುದೆನಿಸೆ ತೊಟ್ಟನೆ
ದಿವದಿಂದಂ ಶ್ರೀಧರಂ ಪರಿಚ್ಯುತನಾದಂ ೯೯

ವ|| ಆಗಿ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀವಿಷಯದ ಸುಸೀಮಾನಗರಮನಾಳ್ವ ಸುದೃಷ್ಟಿಮಹೀಪಾಳಂಗಂ ಸುಂದರನಂದಾಮಹಾದೇವಿಗಂ,

ತವೆ ನೋಡಲ್ ನೋಡಿ ಮೆಚ್ಚಲ್ ಮನದೊಳಸದಳಂ ಮೆಚ್ಚಿ ನಾನಾವಿಶೇಷ
ಸ್ತವದಿಂದಂ ಕೀರ್ತಿಸಲ್ಕತ್ತಳಗಮಮರನಾಥಂಗಮೆಂಬನ್ನೆಗಂ ರೂ
ಪವಿಳಾಸಶ್ರೀಯೊಳಾ ಶ್ರೀಧರನಧಿಕಯಶಶ್ರೀಧರಂ ಪುತ್ರನಾದಂ
ಸುವಿಧಿಶ್ರೀನಾಮದಿಂದಂ ಸುಕವಿಜನಮನೋಮಾನಸೋತ್ತಂಸಹಂಸಂ ೧೦೦

ನಾರಕನೆಲ್ಲಿ? ದೇವನೆಲ್ಲಿ? ಕರ್ಮವೇ ಬಲಿಷ್ಠವಾದುದು. ಅದರ ತಿರಿವು (ಭ್ರಮಣ) ಬಹುವಿಧ. ವ|| ಆಗ ೯೮. ಶತಮತಿಗೆ ಶ್ರೀಧರನ ಉಪಕಾರಸ್ಮರಣೆಯು ಮನಸ್ಸಿಗೆ ಬಂದಿತು. ಅವನು ದಿವಿಜನಾಯಕನಾದ ಶ್ರೀಧರನನ್ನು ಚೆನ್ನಾಗಿ ಪೂಜಿಸಿದನು. ಮಾಡಿದುಪಕಾರವನ್ನು ನೆನೆಯದಾತನು ಮನುಷ್ಯನೇ? ವ|| ಅಷ್ಟರಲ್ಲಿ ೯೯. ಅಮರಸುಂದರಿಯರ ಬೆಡಗಿನ ಬಿಳುಪಿನ ಕಣ್ನೋಟವೇ ಅವನ ಆಯುಸ್ಸೆಂಬ ಸಮುದ್ರವನ್ನು ಕುಡಿದುಬಿಟ್ಟಿತೋ ಎನ್ನುವಂತೆ, ಸ್ವರ್ಗದಿಂದ ಶ್ರೀಧರನು ಪರಿಚ್ಯುತನಾದನು. ವ|| ಆಗ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀದೇಶದಲ್ಲಿನ ಸುಸೀಮಾನಗರವನ್ನು ಆಳುವ ಸುದೃಷ್ಟಿಯೆಂಬ ರಾಜನಿಗೂ ಅವನ ಹೆಂಡತಿ ಸುಂದರನಂದೆಗೂ ೧೦೦. ಸುವಿಧಿಯೆಂಬ ಹೆಸರಿನಿಂದ ಶ್ರೀಧರನು ಮಗನಾಗಿ ಹುಟ್ಟಿದನು. ಅವನು ರೂಪವಿಲಾಸಯುಕ್ತನು. ಅವನು ಅಧಿಕವಾದ ಯಶಸ್ಸೆಂಬ ಸಂಪತ್ತನ್ನು ಧರಿಸಿದವನು. ಇಂದ್ರನಿಗೆ ಅವನನ್ನು ಎಷ್ಟು ನೋಡಿದರೂ ತೃಪ್ತಿಯುಂಟಾಗದು,

ಪ್ರಿಯಪುಷ್ಪಸ್ತಬಕಂಗಳಿಂ ತುಱುಗಿದೊಂದಿಮ್ಮಾವನತ್ಯಂತಕಾಂ
ತಿಯೊಳಾಶಾಂತರಮೆಲ್ಲಮಂ ತೊಳಪ ಸಂಪೂರ್ಣೇಂದುವಂ ತನ್ನ ಶೋ
ಭೆಯ ತನ್ನುಜ್ಜ್ವಳಕಾಂತಿಯೊಂದು ವಿಭವಂ ಗೆಲ್ವನ್ನೆಗಂ ಯೌವನೋ
ದಯದೊಳ್ ನೋಡಿದರಂ ಮನಂಗೊಳಿಸಿದಂ ಸಂಸಾರಸಾರೋದಯಂ ೧೦೧

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾ
ಪ್ರಸರ ಪ್ರಸಾದೋದೀರ್ಣಸೂಕ್ತಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಸುವಿಧಿ ಮಹೀಮೋತ್ಪತ್ತಿವರ್ಣನಂ
ಪಂಚಮಾಶ್ವಾಸಂ

ವಿಧವಿಧವಾಗಿ ಅವನನ್ನು ಸ್ತೋತ್ರಮಾಡುವುದಕ್ಕೆ ಅವನಿಗೂ ಅಸಾಧ್ಯ. ಅವನು ಸುಕವಿಗಳ ಮನಸ್ಸೆಂಬ ಮಾನಸ ಸರೋವರಕ್ಕೆ ಅಲಂಕಾರವಾದ ಹಂಸ. ೧೦೧. ಅವನು ತನ್ನ ಯೌವನೋದಯಕಾಲದಲ್ಲಿ ನೋಡಿದವರೆಲ್ಲರ ಮನಸ್ಸನ್ನು ಆನಂದಗೊಳಿಸಿದನು. ತನ್ನ ಉಜ್ವಲಕಾಂತಿಯಿಂದ, ಸುಂದರವಾದ ಹೂಗಳ ಗೊಂಚಲುಗಳಿಂದ ತುಂಬಿದ ಇಮ್ಮಾವನ್ನೂ, ತನ್ನ ಕಾಂತಿಗಳಿಂದ ದಿಗ್ವಿಭಾಗಗಳೆಲ್ಲವನ್ನೂ ಬೆಳಗಿಸುವ ಪೂರ್ಣಚಂದ್ರನನ್ನೂ ಗೆಲ್ಲುವಂತೆ ತನ್ನ ಯೌವನದಾರಂಭದಲ್ಲಿ ಸಂಸಾರಸಾರೋದಯನಾದ ಆ ಸುವಿಧಿಯು ನೋಡಿದವರ ಮನಸ್ಸಿಗೆ ಆನಂದವನ್ನುಂಟುಮಾಡಿದನು,

ಇಂತು ಸುವಿಧಿ ಮಹೀಮೋತ್ಪತ್ತಿ ವರ್ಣನವೆಂಬ
ಐದನೆಯ ಆಶ್ವಾಸ ಮುಗಿಯಿತು.

# ಷಷ್ಠಾಶ್ವಾಸಂ

ಶ್ರೀಯುಂ ಸೊಗಯಿಪ ವಚ
ಶ್ರ್ರೀಯುಂ ತನ್ನೇಳ್ಗೆಯೊಳ್ ಪೊದಳ್ದಿಸೆಯೆಯುಮಾ
ಶ್ರೀಯುಮನೇಂ ಸುಭಗವಯ
ಶ್ರ್ರೀಯುಮನಾಂತನೊ ಸರಸ್ವತೀಮಣಿಹಾರಂ ೧

ನೆಗಳ್ದಭಯಘೋಷಚಕ್ರಿಯ
ಮಗಳ ಮನೋರಮೆಯ ಮದುವೆಗಂ ರಾಜ್ಯದ ಪ
ತ್ತುಗೆಗಂ ಗುರೂಪರೋಧ
ಕ್ಕಗಿದು ಮನಂದಂದನೇಂ ಜಿತಾತ್ಮನೊ ಪುರುಷಂ ೨

ವ|| ಅಂತಗಣ್ಯಪುಣ್ಯನಿಧಿಯೆನಿಸಿದ ಸುವಿಧಿಗಮಾತನ ಮನೋರಮೆ ಮನೋರಮೆಗಂ ಶ್ರೀಮತೀಚರನೆನಿಸಿದಾ ಸ್ವಯಂಪ್ರಭದೇವಂ ದೇವಲೋಕದಿಂದವತರಿಸಿ,

ಪ್ರಿಯುವನಿತಾಚರನೆ ಗಡಂ
ಪ್ರಿಯತನಯಂ ಕೇಶವಾಂಕನಾದನಿದೇಂ ವಿ
ಸ್ಮಯಕರಮೊ ಸಂಸೃತಿಸ್ಥಿತಿ
ಬಯಸುವುದೆಂತಯ್ಯ ಪೇಟಿಮಿಂತಪ್ಪುದುಮಂ ೩

ವ|| ಮತ್ತಮಾವಿಷಯದೊಳ್ ಶಾರ್ದೂಲಚರನಪ್ಪ ಚಿತ್ರಾಂಗದದೇವಂ ದೇವಲೋಕದಿಂದ

೧. ಶ್ರೀಯೂ ಸೊಗಯಿಸುವ ವಾಕ್‌ಶ್ರೀಯೂ ಸುವಿಧಿಯ ಏಳ್ಗೆಯಲ್ಲಿ ಶೋಭಿಸಿದವು. ಸರಸ್ವತಿಯ ಮಣಿಹಾರನಾದ ಸುವಿಧಿಯು ಆ ಉಮಾಶ್ರೀಯನ್ನೂ (?)[1] ಸುಭಗವೆನಿಸಿದ ವಯಃಶ್ರೀಯನ್ನೂ ಪಡೆದನು. ೨. ತಂದೆಯ ನಿರ್ಬಂಧಕ್ಕೆ ಕಟ್ಟುಬಿದ್ದು ಅಭಯಘೋಷಚಕ್ರವರ್ತಿಯ ಮಗಳಾದ ಮನೋರಮೆಯನ್ನು ಮದುವೆಯಾಗಲೂ ರಾಜ್ಯಭಾರವನ್ನು ವಹಿಸಿಕೊಳ್ಳಲೂ ಸುವಿಧಿಯು ಸಮ್ಮತಿಸಿದನು. ಅವನು ಎಷ್ಟು ಜಿತಾತ್ಮನೊ! ವ|| ಹೀಗೆ ಅತಿಶಯಪುಣ್ಯಕ್ಕೆ ಆಗರನಾದ ಸುವಿಧಿಗೂ ಅವನ ಮಡದಿಯಾದ ಮನೋರಮೆಗೂ ಶ್ರೀಮತೀಚರನಾದ (ಹಿಂದೆ ಶ್ರೀಮತಿಯಾಗಿದ್ದ) ಸ್ವಯಂಪ್ರಭದೇವನು ದೇವಲೋಕದಿಂದ ಇಳಿದು, ೩. ಪೂರ್ವಜನ್ಮದಲ್ಲಿ ಮಡದಿಯ ರೂಪದಿಂದಿದ್ದವನೇ ಇಂದು ಕೇಶವಾಂಕನೆಂಬ ಹೆಸರಿನಿಂದ ಪುತ್ರರೂಪದಿಂದ ಹುಟ್ಟಿದನಲ್ಲವೆ? ಇದೆಂಥ ಆಶ್ಚರ್ಯಕರವಾದ ಸಂಸಾರಸ್ಥಿತಿ! ಹೀಗಾಗುವುದನ್ನು ಯಾವನು ಬಯಸುತ್ತಾನೆ, ಹೇಳಿ. (ಸ್ವಯಂಪ್ರಭನು ಕೇಶವನೆಂಬ ಮಗನಾಗಿ ಹುಟ್ಟಿದನು). ವ|| ಮತ್ತೆ ಅದೇ

---

1 'ಯುಮಾ' ಎಂಬ ಸ್ಥಳದಲ್ಲಿ 'ಜಯ' ಎಂದೋ 'ಯಶಃ' ಎಂದೋ ಶುದ್ಧಪಾಠವಿರಬಹುದು. 'ಏಸೆಯೆಯುಂ + ಆ ಶ್ರೀಯುಮಂ' ಎಂದು ವಿಭಾಗಮಾಡಿದರೆ ಅರ್ಥಪುಷ್ಟಿ ಏನೂ ಇಲ್ಲ.

**ವತರಿಸೆ ಬಂದು ಸಮಾನಪುಣ್ಯತ್ವಂ ಕಾರಣಮಾಗಿ ಸುವಿಧಿಸಮಾನನಪ್ಪ ಮಂಡಳಿಕಂ ವಿಭೀಷಣಂಗಂ ಪ್ರಿಯದತ್ತೆಯೆಂಬ ತತ್ಪ್ರಿಯಲಲನೆಗಂ ವರದತ್ತನೆಂಬೊಂ ಮಗನಾದೊಂ; ವರಾಹಾರ್ಯಚರನಪ್ಪ ಮಣಿಕುಂಡಲದಿವಿಜಂ ನಂದಿಷೇಣಂಗಮನಂತಮತಿಗಂ ವರಸೇನನೆಂಬೊಂ ತನಯನಾದಂ; ವಾನರಾರ್ಯಚರನಪ್ಪ ಮನೋಹರಾಮರಂ ರತಿಷೇಣಂಗಂ ಚಂದ್ರಮತಿಗಂ ಚಿತ್ರಾಂಗದನೆಂಬೊಂ ತನಯನಾದಂ; ನಕುಳಾರ್ಯಚರನಪ್ಪ ಮನೋರಥಕಲ್ಪಜಂ ಪ್ರಭಂಜನಂಗಂ ಚಿತ್ರಮಾಲೆಗಂ ಶಾಂತಮದನನೆಂಬ ಪುತ್ರನಾಗಿ**

**ಪೂರ್ವಭವಸ್ನೇಹಮದೋ**
**ರೊರ್ವರನಲೆದೊಂದು ಮಾಡೆ ತಮ್ಮನಿಬರುಮಂ**
**ದೊರ್ವಳಿ ನೆರೆದತಿಲಲಿತತ**
**ರೋರ್ವೀತಳಸುಖಮನುಣುತುಮಿರೆ ಪಲಕಾಲಂ** ೪

**ವ|| ಒಂದುದಿವಸಂ ಸುವಿಧಿಧರಾಧೀಶಂ ತಮ್ಮ ಮಾವನಪ್ಪಭಯಘೋಷಚಕ್ರವರ್ತಿ ವಿಮಲವಾಹನಜಿನಚರಣವಂದನಾಭಕ್ತಿಗೆ ಪೋಗೆ, ತಾನುಂ ವರದತ್ತ ವರಸೇನ ಚಿತ್ರಾಂಗದ ಶಾಂತಮದನರೆಂಬ ನಾಲ್ವರ್ ಸಹಾಯರುಂ ತನ್ನ ಮಗಂ ಕೇಶವನುಂ ಬೆರಸು ಪೋಗಿ ಸುವಿಧಿಯಿಂ[೧] ಜಿನೇಂದ್ರಪಾದಾರವಿಂದಂಗಳಂ ವಂದಿಸುತ್ತಿರ್ಪನ್ನೆಗಮಭಯಘೋಷಂ ಧರ್ಮಾಮೃತರಸಮನಾಸ್ವಾದಿಸಿ ಸಂಸಾರಶರೀರಭೋಗನಿರ್ವೇಗಪರಾಯಣನಾಗಿ,**

ದೇಶದಲ್ಲಿ ಹುಲಿಯ ಜನ್ಮವನ್ನು ತಳೆದಿದ್ದ ಚಿತ್ರಾಂಗದದೇವನು ಸಮಾನಪುಣ್ಯತ್ವದ ಫಲವಾಗಿ ದೇವಲೋಕದಿಂದ ಅವತರಿಸಿ ಸುವಿಧಿಯಂತೆಯೇ ಮಂಡಲಿಕನಾಗಿರುವ ವಿಭೀಷಣನಿಗೂ ಅವನ ಪ್ರಿಯಭಾರ್ಯೆಯಾದ ಪ್ರಿಯದತ್ತೆಗೂ ವರದತ್ತನೆಂಬ ಹೆಸರಿನಿಂದ ಮಗನಾಗಿ ಹುಟ್ಟಿದನು. ಹಿಂದಿನ ಜನ್ಮದಲ್ಲಿ ವರಾಹಾರ್ಯನೆಂದು ಪ್ರಖ್ಯಾತನಾಗಿದ್ದ ಮಣಿಕುಂಡಲ ದಿವಿಜನು ನಂದಿಷೇಣ ಮತ್ತು ಅನಂತಮತಿಯರಿಗೆ ವರಸೇನನೆಂಬ ಹೆಸರಿನಿಂದ ಮಗನಾದನು. ಹಿಂದಿನ ಜನ್ಮದಲ್ಲಿ ವಾನರಾರ್ಯನೆಂದು ಹೆಸರುಗೊಂಡಿದ್ದ ಮನೋಹರಾಮರನು ರತಿಷೇಣ ಮತ್ತು ಚಂದ್ರಮತಿಯರಿಗೆ ಚಿತ್ರಾಂಗದನೆಂಬ ಹೆಸರಿನಿಂದ ಮಗನಾದನು. ಹಿಂದಿನ ಜನ್ಮದಲ್ಲಿ ನಕುಲಾರ್ಯನೆಂದು ಪ್ರಖ್ಯಾತನಾಗಿದ್ದ ಮನೋರಥಕಲ್ಪಜನು ಪ್ರಭಂಜನ ಮತ್ತು ಚಿತ್ರಮಾಲೆಯರಿಗೆ ಶಾಂತಮದನನೆಂಬ ಹೆಸರಿನಿಂದ ಪುತ್ರನಾಗಿ ಹುಟ್ಟಿದನು. ೪. ಪೂರ್ವಜನ್ಮಸ್ನೇಹವು ಅವರಲ್ಲಿ ಪ್ರತಿಯೊಬ್ಬರನ್ನೂ ಅಲೆದಾಡಿಸಿ ಒಂದುಗೂಡಿಸಿತು. ಅವರೆಲ್ಲರೂ ಒಂದುಕಡೆ ಸೇರಿ ಕೆಲವು ಕಾಲ ಭೂಲೋಕದ ಸೌಖ್ಯವನ್ನು ಅನುಭವಿಸಿದರು. ವ|| ಒಂದುದಿನ ಸುವಿಧಿನರಪತಿಯ ಮಾವನಾದ ಅಭಯಘೋಷಚಕ್ರವರ್ತಿಯು ವಿಮಲವಾಹನಜಿನನ ಚರಣಾಭಿವಂದನೆಗಾಗಿ ತೆರಳಿದನು. ಆಗ ಸುವಿಧಿಯೂ ತನ್ನ ಸಹಾಯಕರಾದ ವರದತ್ತ, ವರಸೇನ, ಚಿತ್ರಾಂಗದ,

---

೧ ಇಲ್ಲಿ 'ಸುವಿಧಿಸುವಿಧಿಯಿಂ' ಎಂದು ಸರ್ವತ್ರ ಪಾಠವಿದೆ. ಒಂದು 'ಸುವಿಧಿ' ಅಧಿಕ. ಏಕೆಂದರೆ 'ಸುವಿಧಿಧರಾಧೀಶಂ' ಎಂದು ಈ ವಾಕ್ಯದಲ್ಲಿಯೇ ಇದೆ.

ಸಾಸಿರ್ವರ್ ವನಿತೆಯರ
ಯ್ಬಾಸಿರ್ವರ್ ಪ್ರಿಯತನೂಜರಱಿಕೆಯ ಪದಿನೆ
ಣ್ಬಾಸಿರ್ವರರಸುಗಳ್ ವೆರ
ಸಾಸಾಸಿಗನುಚಿತದೀಕ್ಷೆಯಂ ಕೈಕೊಂಡಂ ೫

ಸುವಿಧಿಯುಮಾತ್ಮತನೂಭವ
ಭವವಿಪುಳಸ್ನೇಹನಿಗಳದಿಂದಮೆ ತೊಡರ್ದಾ
ಧವಳಾತಪವಾರಣಕಕು
ದವಿಭೂತಿಯನುೞಿದು ನೆಗೞ್ದುಪಾಸಕನಾದಂ ೬

ಪದಪು ಜಿನೇಂದ್ರಪಾದಕಮಳಂಗಳೊಳಾವಗಮಾಗೆ ಕರ್ಮಬಂ
ಧದ ಬಿಗಿಪೊಯ್ಯನೊಯ್ಯನೆ ಸಡಿಲ್ದಿರೆ ಬಾದರರೂಪದಿಂದೆ ಕೊ
ಲ್ಲದ ಪರನಾರಿಗಾಟಿಸದ ಕಳ್ಳದಸತ್ಯದೊಳೊಂದದಾಗಳುಂ
ಕುದಿದಪತೃಷ್ಣೆಯಂ ಕುಸಿದು ಮಾಣಿಸುವಯ್ದುಮಣುವ್ರತಂಗಳಂ ೭

ದೆಸೆಗಳ ಮೇರೆಯಂ ನಿಱಿಸಿ ಪೋಪುದುಮಾಭರಣಪ್ರಸೂನಸ
ದ್ವಸನವಿಲೇಪನಾದಿಗಳೊಳಂ ಕೆಲವಂ ಗುಱಿಮಾಡಿಕೊಂಡು ಸೇ
ವಿಸುವುದುಮಸ್ತ್ರದಂಡವಿಷಪಾಶವಿಶೇಷಮನೀಯದಿರ್ಪುದೊಂ
ದೆಸಕಮುಮೆಂದು ಮೂಱುತೆಱದಿಂ ನೆಗೞ್ದಿರ್ದ ಗುಣವ್ರತಂಗಳಂ ೮

ಶಾಂತಮದನರೊಡನೆಯೂ ತನ್ನ ಪುತ್ರನಾದ ಕೇಶವನೊಡನೆಯೂ ಹೋಗಿ ಆ ಜೀನೇಂದ್ರಪಾದಾರವಿಂದಗಳಿಗೆರಗಿದನು. ಅಷ್ಟರಲ್ಲಿ ಅಭಯಘೋಷಚಕ್ರವರ್ತಿಯು ಜಿನಧರ್ಮವೆಂಬ ಅಮೃತದ ಆಸ್ವಾದನದಿಂದ ಶರೀರೋಪಭೋಗದಲ್ಲಿ ವಿರಕ್ತಮನಸ್ಕನಾದನು. ೫. ಒಂದು ಸಾವಿರ ಮಡದಿಯರೊಡನೆಯೂ ಐದು ಸಾವಿರ ಪುತ್ರರೊಡನೆಯೂ ಹದಿನೆಂಟು ಸಾವಿರ ರಾಜರೊಡನೆಯೂ ಸಾಹಸಿಗನಾದ ಅಭಯಘೋಷನು ಉಚಿತದೀಕ್ಷೆಯನ್ನು ಕೂಡಲೇ ಕೈಕೊಂಡನು. ೬. ಪ್ರೀತಿಯ ಮಕ್ಕಳ ಮೇಲಿನ ಸ್ನೇಹವೆಂಬ ಬೇಡಿಗಳಿಂದ ಬದ್ಧನಾಗಿ ಸುವಿಧಿಯು (ಗೃಹಸ್ಥಧರ್ಮವನ್ನು ಬಿಡದೆ) ಶ್ವೇತಛತ್ರವನ್ನೂ ಶ್ರೇಷ್ಠವಾದ ಐಶ್ವರ್ಯವನ್ನೂ ತೊರೆದು, ಭಕ್ತಿಯಿಂದ (ಶ್ರಾವಕನಾಗಿ) ಜಿನೋಪಾಸನೆಯಲ್ಲಿ ತೊಡಗಿದನು. ೭. ಕರ್ಮಬಂಧದ ಬಿಗಿ ಮೆಲ್ಲನೆ ಸಡಿಲಗೊಳ್ಳುತ್ತಿರಲಾಗಿ ಜಿನೇಂದ್ರನ ಪಾದಕಮಲಗಳಲ್ಲಿ ಪ್ರೀತಿ ಹೆಚ್ಚುತ್ತಿರಲು ಬಾದರರೂಪದಿಂದ[1] ಕೊಲ್ಲದಿರುವುದು, ಪರರ ಹೆಂಗಸರನ್ನು ಬಯಸದಿರುವುದು, ಕಳವು ಮಾಡದಿರುವುದು, ಸುಳ್ಳನ್ನು ಹೇಳದಿರುವುದು, ಅತ್ಯಾಸೆಗಳನ್ನು ಅದುಮಿಕೊಳ್ಳುವುದು (ಎಂಬ ಐದು ಅಣುವ್ರತಗಳನ್ನೂ) ೮. ದಿಕ್ಕುಗಳ ಎಲ್ಲೆಯನ್ನು ಗೊತ್ತುಪಡಿಸಿಕೊಂಡು ಸಂಚರಿಸುವುದು,

---

1 ಬಾದರ = ಸ್ಥೂಲ. ವನಸ್ಪತಿ ಸೂಕ್ಷ್ಮವಾದ ಏಕೇಂದ್ರಿಯ ಜೀವ. ಗೃಹಸ್ಥನು ಅದನ್ನು ಕೊಲ್ಲಬಹುದು. ಕ್ರಿಮಿ ಮೊದಲಾದ ದ್ವೀಂದ್ರಿಯಾದಿಗಳು ಸ್ಥೂಲ. ಅವನ್ನು ಕೊಲ್ಲದಿರುವುದು ಗೃಹಸ್ಥನಿಗೆ ಅಹಿಂಸಾವ್ರತ.

ವಿವಿಧಪ್ರಾಣಿಗಣಂಗಳೊಳ್ ಸಮತೆ ಸಂದಾಹಾರದಾನಂ ಜಿನ
ಸ್ತವನಕ್ಕಂ ಜಿನಪೂಜೆಗಂ ಮನಮನೊಲ್ದೋರಂತೆ ತಂದಾದಮು
ತ್ಸವದಿಂ ನೋಂಪುದು ಜೀವಿತಾಂತ್ಯದೆಡೆಯೊಳ್ ಸನ್ಯಾಸಮಂ ಮಾಳ್ಪುದೆಂ
ಬಿವು ನೇರ್ಪಟ್ಟಿಸೆವನ್ನೆಗಂ ನೆಗಳ್ದುವಂ ಶಿಕ್ಷಾವ್ರತಂ ನಾಲ್ಕುಮಂ ೯

ವ॥ ತಾಳ್ದಿ

ನುತಸಮ್ಯಕ್ತ್ವಮಣುವ್ರತಸ್ಥಿತಿ ಸಮತ್ವೀಭಾವನಂ ಪ್ರೋಷದ
ಬ್ರತಮೆಂದುಂ ಪಸಿಯೊಂದುಮಂ ಮುಟೆಯೆನೆಂಬೀ ಪೂಣ್ಕೆ ಮಾಡೆಂ ಪಗಲ್
ರತಿಯಂ ಸ್ತ್ರೀಯರೊಳೆಂಬುದೊಂದು ನಿಯಮಂ ಸದ್ಬ್ರಹ್ಮಚರ್ಯವ್ರತಂ
ಸತತಾರಂಭಪರಿಗ್ರಹಚ್ಯುತಿ ಪರಿತ್ಯಕ್ತಾನುಮೋದೋದಯಂ ೧೦

ಪರಮಮುನಿಗದಿತಮಾರ್ಗಾ
ಚರಣಮುಮೆಂದಿಂತು ನೆರೆಯೆ ಭೂಭುವನದೊಳಂ
ಪರೆದೇಕಾದಶನಿಳಯಮು
ನರಸನನುಕ್ರಮದಿನಿನಿತುಮಂ ಕೈಕೊಂಡಂ ೧೧

ವ॥ ಅಂತು ಕೈಕೊಂಡುತ್ಕೃಷ್ಟಚಾರಿತ್ರದೊಳ್ ನೆಗಳ್ದು ಜೀವಿತಾವಸಾನದೊಳ್ ಸಂಸಾರಕ್ಷಪಕನಾಗಿ ಸಮಾಧಿವಿಧಿಯಿಂ ಶರೀರಪರಿತ್ಯಾಗಂಗೆಯ್ದು,

ಆಭರಣ, ಹೂವು, ಬಟ್ಟೆಬರೆ ಮತ್ತು ಲೇಪನಾದಿಗಳಲ್ಲಿ ಕೆಲವನ್ನು ಮಾತ್ರ ಬಳಸುವುದು. ಅಸ್ತ್ರ, ದಂಡ, ವಿಷ ಮತ್ತು ಪಾಕವಿಶೇಷಗಳನ್ನು ಬಳಸದಿರುವುದು (ಎಂಬ ಮೂರು ಪ್ರಖ್ಯಾತವಾದ ಗುಣವ್ರತಗಳನ್ನೂ) ೯. ವಿವಿಧ ಪ್ರಾಣಿಸಮೂಹದಲ್ಲಿ ಸಮತಾಬುದ್ಧಿ (ಅತಿಥಿಗಳಿಗೆ) ಆಹಾರದಾನ, ಜಿನನ ಮಹಿಮೆಯನ್ನು ಹೊಗಳಿ ಜಿನಪೂಜನೆಯನ್ನು ಮಾಡುತ್ತಾ ಉತ್ಸಾಹದಿಂದ ವ್ರತಗಳನ್ನು ಕೈಗೊಳ್ಳುವುದು, ಜೀವಿತದ ಕೊನೆಯಲ್ಲಿ ಸಂನ್ಯಾಸವನ್ನು ಸ್ವೀಕರಿಸುವುದು (ಎಂಬ ನಾಲ್ಕು ಶಿಕ್ಷಾವ್ರತಗಳನ್ನೂ) ವ॥ ತಳೆದು, ೧೦. ೧೧. ಸಮ್ಯಗ್‌ದರ್ಶನ, ಅಣುವ್ರತ, ಸಮತ್ವೀಭಾವನೆಯೆಂಬ ಸಾಮಯಿಕ, ಪ್ರೋಷಧೋಪವಾಸ. ಹಸಿಯದಾದ ಹಣ್ಣು, ಹೂ ಮೊದಲಾದ್ದನ್ನು ಸ್ವೀಕರಿಸುವುದಿಲ್ಲವೆಂಬ ಪ್ರತಿಜ್ಞೆ (ಸಚಿತ್ತವಸ್ತುತ್ಯಾಗ) ಹಗಲು ಸ್ತ್ರೀಸಂಗವರ್ಜನೆ, ಬ್ರಹ್ಮಚರ್ಯ, ಆರಂಭತ್ಯಾಗ, ಪರಿಗ್ರಹತ್ಯಾಗ, ಅನುಮತಿತ್ಯಾಗ, ಉದಯತ್ಯಾಗ (ಉದ್ದಿಷ್ಟತ್ಯಾಗ) ಎಂಬ ಹನ್ನೊಂದು ಗೃಹಸ್ಥರ ನಿಲಯಗಳನ್ನೂ ಸುವಿಧಿರಾಜನು ಕ್ರಮವಾಗಿ ಸಾಧಿಸಿದನು. ಪರಮಮುನಿಗಳಿಂದ ಉಪದಿಷ್ಟವಾದ ಈ ಮಾರ್ಗದ ಆಚರಣೆ ಭೂಲೋಕದಲ್ಲಿ ವಿಸ್ತರಿಸಿತು. ವ॥ ಹೀಗೆ ಉತ್ಕೃಷ್ಟವಾದ ಚರಿತ್ರದಲ್ಲಿದ್ದು ತನ್ನ ಜೀವಿತದ ಕೊನೆಯಲ್ಲಿ ಸಂಸಾರ ಬಂಧವನ್ನು ಕಳಚಿಕೊಂಡು ಸಮಾಧಿವಿಧಿಯಿಂದ ಆತನು ಶರೀರವನ್ನು ತ್ಯಜಿಸಿದನು.

ಎನಗಿದು ಚೋದ್ಯಂ ಪನ್ನೊಂ
ದನೆಯದು ನೆಲೆ ತನ್ನ ನೆಗಬ್ದುದಂತದು ಪದಿನಾ
ಱನೆಯ ನೆಲೆಗುಯ್ದುದೆಂಬುದ
ನೆನೆ ಸುವಿಧಿನರೇಂದ್ರನಚ್ಯುತೇಂದ್ರನುಮಾದಂ ೧೨

ವ|| ಕೇಶವನುಮಾತ್ಮೀಯಗುರುವಿಯೋಗದೊಳ್ ಪರಿತ್ಯಕ್ತಸಕಲರಾಜ್ಯಪರಿಚ್ಛೇದಂ ಪ್ರವ್ರಜ್ಯ ಪದವಿಯೊಳ್ ಪರಿತ್ಯಕ್ತನುಮಾಗಿ ತದಚ್ಯುತಕಲ್ಪದೊಳ್ ಪ್ರತೀಂದ್ರನಾದಂ,

||ತ್ರಿಪದಿ||

ವರದತ್ತಂ ಮೊದಲಾಗೆ ಧರಣೀಶರವರ್ಗೆಲ್ಲಂ
ಸುರಲೋಕಂ ಸುವಿಧಿಯೊಡನಾದುದಂತುಟೆ
ನೆರೆದರನಿತೀ ಸುರಲೋಕಂ ೧೩

ವ|| ಅಂತು ಮೇರುಮೂಲದಿಂ ತಗುಳ್ದಾಱುರಜ್ಜು ನೆಗೆದೆಡೆಯೊಳಚ್ಯುತಕಲ್ಪಮಿರ್ದುದು, ಅಲ್ಲಿ ತನ್ನ ನಾಲ್ವರುಂ ಸಹಾಯರಪ್ಪ ಸಾಮಾನಿಕದೇವರುಂ ತತ್ಪ್ರತೀಂದ್ರನುಂ ಬೆರಸಚ್ಯುತೇಂದ್ರಂ ನವಪಂಚಾಶದಧಿಕತ್ರಿಶತವಿಮಾನಾಧೀಶನುಂ, ತ್ರಯಸ್ತ್ರಿಂಶತ್ಪರಿಮಿತತ್ರಾಯಸ್ತ್ರಿಂಶಾಮರಪರಿವೃತನುಂ, ಆಯುತ ಪ್ರಮಿತಸಾಮಾನಿಕಸುರಾನೀಕನುಂ, ಚತುರಯುತಮಿತಾಂಗರಕ್ಷಕಪರಿವೃತನುಂ, ಲೋಕಪಾಲಚತುಷ್ಟಯಾಧಿಷ್ಠಿತನುಂ, ಹಸ್ತ್ಯಶ್ವರಥಪದಾತಿವೃಷಭಗಂಧರ್ವನರ್ತಕೀಪ್ರಮುಖ ಸಪ್ತಾನೀಕ ಸಮೇತನುಂ ಅಂತರ್ಮಧ್ಯಬಾಹ್ಯಪರಿಷತ್ಪ್ರಕಟಿತವಿಭವನುಂ, ಅಷ್ಟಪ್ರಧಾನದೇವೀನಿವಹ

೧೨. ತಾನು ಆಚರಿಸಿದ, ಹನ್ನೊಂದನೆ ನೆಲೆಯು, (ಉದ್ದಿಷ್ಟತ್ಯಾಗವು) ಹದಿನಾರನೆಯ ನೆಲೆಗೆ[1] ಸುವಿಧಿಯನ್ನು ಒಯ್ದಿತು! ಆದಕಾರಣ ಅವನು (ಸುವಿಧಿ) ಅಚ್ಯುತೇಂದ್ರನಾದನು, ನನಗಿದು ಆಶ್ಚರ್ಯ! ವ|| ತನ್ನ ತಂದೆಯ ಅಗಲಿಕೆಯಿಂದಾಗಿ ಕೇಶವನು ರಾಜ್ಯದ ಸಮಸ್ತ ವೃತ್ತಾಂತಗಳೆಲ್ಲವನ್ನೂ ತೊರೆದು ಸಂನ್ಯಾಸ ಹೊಂದಿ ಸತ್ತು ಅಚ್ಯುತಕಲ್ಪದಲ್ಲಿ ಪ್ರತೀಂದ್ರನಾದನು. ೧೩. ವರದತ್ತನೇ ಮೊದಲಾದ ರಾಜರೆಲ್ಲರೂ ಸುವಿಧಿಯೊಡನೆ ಸುರಲೋಕದಲ್ಲಿ ಸೇರಿಕೊಂಡರು. ಹೀಗೆ ಸುರಲೋಕವು ಅವರೆಲ್ಲರಿಂದ ಯುಕ್ತವಾಯಿತು. ವ|| ಅಚ್ಯುತಕಲ್ಪವು ಮೇರುವಿನ ಬುಡದಿಂದ ಆರುರಜ್ಜುಗಳಷ್ಟು ದೂರ ಮೇಲ್ಗಡೆಯಲ್ಲಿದೆ. ಅಲ್ಲಿ ತನ್ನ ನಾಲ್ವರು ಸಹಾಯಕರಾದ ಸಾಮಾನಿಕ ದೇವರೊಡನೆಯೂ ಆ ಪ್ರತೀಂದ್ರನೊಡನೆಯೂ ಕೂಡಿ ಅಚ್ಯುತೇಂದ್ರನು ನೂರೈವತ್ತೊಂಬತ್ತು ವಿಮಾನಗಳಿಗೊಡೆಯನಾಗಿಯೂ ಮೂವತ್ತುಮೂರು ತ್ರಾಯಸ್ತ್ರಿಂಶ ದೇವತೆಗಳಿಂದ ಪರಿವೃತನೂ ಹತ್ತು ಸಾವಿರ ಸಾಮಾನಿಕ ಸುರಸೈನ್ಯಯುಕ್ತನೂ ನಲವತ್ತು ಸಾವಿರ ಅಂಗರಕ್ಷಕರಿಂದ ಸಹಿತನೂ ನಾಲ್ಕುಜನ ಲೋಕಪಾಲರಿಗೊಡೆಯನೂ ಆನೆ, ಕುದುರೆ, ರಥ, ಕಾಲಾಳು, ಎತ್ತು, ಗಂಧರ್ವ, ನರ್ತಕಿಯರೆಂಬ ಏಳುಬಗೆಯ ಸೈನ್ಯ ಸಮೇತನೂ ಅಂತರ್-ಮಧ್ಯ-ಬಾಹ್ಯ (ಎಂಬ ಮೂರು) ಪರಿಷತ್ತುಗಳಿಂದ ಪ್ರಕಟಿತವಾದ ವೈಭವವುಳ್ಳವನೂ ಎಂಟು

1 ಹದಿನಾರನೆಯ ಅಚ್ಯುತಸ್ವರ್ಗಕ್ಕೆ

ವಿಳಾಸಧವಳ ವಿಲೋಚನಗೋಚರನುಂ, ತ್ರಿಷಷ್ಟಿಸಂಖ್ಯಾತವಲ್ಲಭಿಕಾವಿಭ್ರಮಭ್ರೂಲತಾತ್ರಿಭಾಗ ಭಾಜನನುಮಾಗಿ,

ಮಾದೇವಿಯರೆಣ್ಬರ್ ಮದ
ನೋದಯಮಂ ಕುಡೆ ಮನಃಪ್ರವೀಚಾರದೊಳಂ
ತಾದೇವಂ ಸಂಚಿತಪು
ಣ್ಯೋದಯದಿಂದನಿತು ಮಹಿಮೆಯಂ ಕೈಕೊಂಡಂ ೧೪

ದೇವಿಯರೊಳೊರ್ವರೊರ್ವರ್
ದೇವಿಯ ಪರಿವಾರದಪ್ಸರೋಗಣಮುಂ ತ
ದ್ದೇವೀವಿಕರಣ ಸಂಭವ
ದೇವಿಯರುಂ ಪಲಬರೆನಗೆ ಪೊಗಟಲಳುಂಬಂ ೧೫

ಸ್ಮರಿಯಿಪನಿರ್ಪತ್ತಿರ್ಚ್ಛಾ
ಸಿರಬರಿಸಕ್ಕೊರ್ಮೆ ಮನದೊಳುಣಿಸಂ ಸುಯ್ವಂ
ಸುರಯಿಯ ಕಂಪನೆ ಗೆಲೆ ತ
ತ್ಸುರಪತಿ ಪನ್ನೊಂದು ತಿಂಗಳಿಂಗೊರ್ಮೆ ಗಡಂ ೧೬

ದ್ವಾವಿಂಶತ್ಯಂಬುಧಿಮಿತ
ಜೀವಿತಮುಂ ಮೂಱುಮೊಟದ ದಿವ್ಯಾಂಗಮುಮಾ
ದೇವಂಗಾಯ್ತು ಜಿನಾಗಮ
ಭಾವನೆಯಿಂ ಪಿರಿದುಮಕ್ಕುಮಿದು ಪಿರಿದಾಯ್ತೇ ೧೭

ಪ್ರಧಾನದೇವಿಯರ ವಿಲಾಸಯುಕ್ತವಾದ ಧವಳಲೋಚನಗಳಿಗೆ ಗುರಿಯಾದವನೂ ಅರುವತ್ತೂರು ವಲ್ಲಭಿಕೆಯರ ವಿಭ್ರಮಯುಕ್ತವಾದ ಭ್ರೂಲತೆಯುಳ್ಳ ಕಡೆಗಣ್ಣೋಟಕ್ಕೆ ಪಾತ್ರನೂ ಆಗಿ, ೧೪. ಎಂಟುಜನ ಮಾದೇವಿಯರೂ ಮಾನಸಸಂಭೋಗ ಪ್ರಕಾರದಿಂದ ಮದನೋದಯವನ್ನು ಕೊಟ್ಟರು. ಅವನು ಸಂಚಿತ ಪುಣ್ಯೋದಯದಿಂದ ಅಷ್ಟು ಮಹಿಮೆಯನ್ನು ಕೈಕೊಂಡನು. ೧೫. ಆ ದೇವಿಯರಲ್ಲಿ ಒಬ್ಬೊಬ್ಬರಿಗೂ ಪರಿವಾರದ ಅಪ್ಸರೆಯರು ಹಲವರು ಇರುವರು.[1] ಹಾಗೆಯೇ ಒಬ್ಬೊಬ್ಬರೂ ವಿಕ್ರಿಯಾಸಾಮರ್ಥ್ಯದಿಂದ ಅನೇಕ ರೂಪ ಧರಿಸಿ ಇರುವ ದೇವಾಂಗನೆಯರು ಹಲವರು.[2] ಅದನ್ನು ಹೊಗಳುವುದು ಅಸಾಧ್ಯ. ೧೬. ಅಚ್ಯುತೇಂದ್ರನು ನಲವತ್ತು ಸಾವಿರ ವರ್ಷಗಳಿಗೊಮ್ಮೆ ಮನಸ್ಸಿನಲ್ಲಿ ಉಣಿಸನ್ನು ಸ್ಮರಿಸುವನು, ಹನ್ನೊಂದು ತಿಂಗಳಿಗೊಮ್ಮೆ ಸುರಗಿಹೂವಿನ ಸುವಾಸನೆಯನ್ನು ಗೆಲ್ಲುವ ಉಸಿರನ್ನು ಬಿಡುವನು. ೧೭. ಆ ದೇವನಿಗೆ ಇಪ್ಪತ್ತೆರಡು ಅಂಬುಧಿಯಷ್ಟು (ಸಂಖ್ಯಾವಿಶೇಷ) ಆಯುಸ್ಸೂ (ಜೀವಿತವೂ) ಮೂರು ಮೊಳದಷ್ಟು ಉದ್ದವಾದ

---

1 ಒಬ್ಬೊಬ್ಬರಿಗೂ ೨೫೦ ಪರಿವಾರದೇವಿಯರು, ಅಚ್ಯುತೇಂದ್ರನಿಗೂ ಒಟ್ಟು ೨೦೭೧ ದೇವಿಯರು.

2 ಪ್ರತಿಯೊಬ್ಬ ದೇವಿಯೂ ವಿಕ್ರಿಯಾಸಾಮರ್ಥ್ಯದಿಂದ ೧೨೪೦೦೦ ದಿವ್ಯರೂಪಗಳನ್ನು ಧರಿಸುತ್ತಾಳೆ.

ವ॥ ಅಂತು ದಿವ್ಯಭೋಗಸಂಪತ್ಪರಂಪರಾಪರಿಗತನಾಗಿ,

ದೆಸೆಯೆಲ್ಲಂ ಪಂಚರತ್ನದ್ಯುತಿಜಟಳಿತ ನಾನಾವಿಮಾನಂಗಳೊಳ್ ರಂ
ಜಿಸೆ ದೇಹಚ್ಛಾಯೆಯೆಲ್ಲಂ ಸಹಜಮಣಿವಿಭೂಷಾಮಯೂಖಂಗಳೊಳ್ ರಂ
ಜಿಸೆ ತನ್ನಾಸ್ಥಾನಮೆಲ್ಲಂ ಲಲಿತಸುರವಧೂರಮ್ಯಸಂಗೀತದಿಂ ರಂ
ಜಿಸೆ ಷೀರ್ದಂ ದಿವ್ಯಭೋಗಾಮೃತರಸಮನೊಱಲ್ದಟ್ಟೆಯಿಂದಚ್ಯುತೇಂದ್ರಂ ೧೮

ಸಮೆತಂದಪುದು ಸಮುದ್ರೋ
ಪಮಮೆನೆ ಮಂದಾರಮಾಳಿಕಾಮ್ಲಾನತೆಯುಂ
ಸಮಕೊಳಿಸಲಾರ್ತುದಿಲ್ಲ ದ
ಲಮರೇಂದ್ರನದೊಂದು ಮುಖಪರಿಮ್ಲಾನತೆಯಂ ೧೯

ಜಿನಪತಿಪದಪಂಕಜಮನೆ
ಮನದೊಳ್ ಬಗೆದಮರೆ ಮುಗಿದ ಕೈವೆರಸು ಸುರಾಂ
ಗನೆಯರ್ ನಿಜವದನಮನಿ
ಮ್ಮನೆ ನೋಟ್ಪಿನಮಚ್ಯುತಂ ಪರಿಚ್ಯುತನಾದಂ ೨೦

ವ॥ ಅಂತಾ ದೇವನಲ್ಲಿಂ ತಳರ್ದು ಜಂಬೂದ್ವೀಪದ ಪ್ರಾಗ್ವಿದೇಹದ ಸೀತಾನದಿಯ ಬಡಗಣ ತಡಿಯ ಪುಷ್ಕಳಾವತೀ[ವಿಷಯಪ್ರತಿಬದ್ಧ][೧] ಪುಂಡರೀಕಿಣೀಪುರದೊಳ್,

ದಿವ್ಯಾಂಗವೂ ಇದ್ದುವು. ಜಿನಾಗಮಭಾವನೆಯಿಂದ ಇದಕ್ಕಿಂತ ಹೆಚ್ಚಿನ ಆಯುಸ್ಸು ಸಂಭವಿಸುವುದು, ಇದೇನು ಹಿರಿದೇ? ವ॥ ಹೀಗೆ ಶ್ರೇಷ್ಠವಾದ ಭೋಗದ ಸಂಪತ್ತಿನ ಪರಂಪರೆಯಿಂದ ಕೂಡಿದವನಾಗಿ ೧೮. ಪಂಚರತ್ನಗಳ ಕಾಂತಿಗಳಿಂದ ವ್ಯಾಪ್ತವಾದ ನಾನಾ ವಿಮಾನಗಳಿಂದ ದಿಕ್ಕುಗಳೆಲ್ಲವೂ ರಂಜಿಸಿದ್ದುವು. ಸಹಜವಾದ ಮಣಿಮಯಾಭರಣಗಳ ಕಾಂತಿಗಳಿಂದ ದೇಹಕಾಂತಿಯೆಲ್ಲವೂ ರಂಜಿಸುತ್ತಿತ್ತು. ಅವನ ಆಸ್ಥಾನವೆಲ್ಲವೂ ಸುಂದರಿಯರಾದ ಸುರಸ್ತ್ರೀಯರ ರಮ್ಯವಾದ ಸಂಗೀತದಿಂದ ರಂಜಿಸಿತ್ತು. ಹೀಗೆ ಅಚ್ಯುತೇಂದ್ರನು ಪ್ರೀತಿಯಿಂದ ದಿವ್ಯಭೋಗದ ಅಮೃತರಸವನ್ನು ಕುಡಿದನು. ೧೯. ಸಮುದ್ರಕ್ಕೆಣೆಯಾದ ಐಶ್ವರ್ಯವು[1] ಕ್ಷೀಣಿಸುವುದೆಂದು ಸೂಚಿಸುವುದಕ್ಕಾಗಿ ಆ ಅಮರೇಂದ್ರನ ಮುಖವು ಬಾಡಿಹೋಯಿತು. ಮಂದಾರಪುಷ್ಪದ ಮಾಲಿಕೆಯ ಮ್ಲಾನತೆಯೂ ಕೂಡ ಅದಕ್ಕೆ ಸರಿಗಟ್ಟಿದಾಯಿತು. ೨೦. ಜಿನಪತಿಯ ಪಾದಪಂಕಜಗಳನ್ನು ಮನಸ್ಸಿನಲ್ಲಿ ಭಾವಿಸುತ್ತಿರಲು ಅಮರಾಂಗನೆಯರು ಕೈಮುಗಿದು ಅವನ ಮುಖವನ್ನು ನಟ್ಟ ದೃಷ್ಟಿಯಿಂದ ನೋಡುತ್ತಿರಲು ಅಚ್ಯುತೇಂದ್ರನು ಶರೀರವನ್ನು ತ್ಯಜಿಸಿದನು, ವ॥ ಹೀಗೆ ಆ ದೇವನು ಅಲ್ಲಿಂದ ಹೊರಬಿದ್ದು ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ

---

೧ ವಿಷಯದ ಪ್ರತಿಬದ್ಧ (ಅನ್ಯತ್ರ)

1 ಸಮುದ್ರಪರಿಮಿತ ಆಯುಸ್ಸು ಎಂದೂ ಹೇಳಬಹುದು.

ಅಮರೇಂದ್ರಾವಳಿಯಿಂದಮಿಂದ್ರಗಿರಿಯೊಳ್ ಜನ್ಮಾಭಿಷೇಕಕ್ಕೆ ನೋಂ
ತು ಮಹೀವಲ್ಲಭನಪ್ಪುದೊಂದು ಪದದೊಳ್ ರಾಜ್ಯಾಭಿಷೇಕಕ್ಕಮಾ
ದಮೆ ನೋಂತುನ್ನತವಜ್ರಸೇನವಿಭುಗಂ ಶ್ರೀಕಾಂತೆಗಂ ಪುತ್ರನಾ
ಗಿ ಮನೋಜಾಕೃತಿ ವಜ್ರನಾಭಿವೆಸರಿಂದುತ್ಸಾಹಮಂ ತಾಳ್ದಿದಂ ೨೧

**ವ॥ ಮತ್ತಮಾ ಪುಣ್ಯದಂಪತಿಗೆ ಮುಂ ಪೇಳ್ದ ಶಾರ್ದೂಲಾರ್ಯಸುರವರದತ್ತಚರ ಸಾಮಾನಿಕನುಂ, ವರಾಹಾರ್ಯದಿವಿಜವರಸೇನಾಚರಸಾಮಾನಿಕನುಂ, ವಾನರಾರ್ಯವೈಮಾನಿಕ ಚಿತ್ರಾಂಗದಚರ ಸಾಮಾನಿಕನುಂ, ನಕುಳಾರ್ಯಾಮರಶಾಂತಮದನಚರಸಾಮಾನಿಕನುಮನುಕ್ರಮದೊಳ್ ವಿಜಯವೈಜಯಂತಜಯಂತಾಪರಾಜಿತರೆಂಬ ನಾಲ್ವರ್ ತನೂಜರಾದರ್, ವಜ್ರಜಂಘನಾವ ಭವದೊಳಾತನ ಮಂತ್ರಿ ಪುರೋಹಿತಸೇನಾಧಿಪಪ್ರಧಾನರಾಜಶ್ರೇಷ್ಠಿಗಳಪ್ಪ ಮತಿವರಾನಂದಾ ಕಂಪನಧನಮಿತ್ರರೆಂಬ ನಾಲ್ವರುಮಧೋಗ್ರೈವೇಯಕದೊಳಹಮಿಂದ್ರರಾಗಿರ್ದವರಲ್ಲಿಂ, ಬಂದು ಸುಬಾಹುಮಹಾಬಾಹುಪೀಠಮಹಾಪೀಠರೆಂಬ ತನಯರಾಗಿ ವಜ್ರನಾಭಿಗೆ ಸಹೋದರರಾದರ್, ಆ ಶ್ರೀಮತ್ಯಾರ್ಯಾಸ್ವಯಂಪ್ರಭದೇವಂ ಕೇಶವಚರಪ್ರತೀಂದ್ರಂ ಬಂದಾ ಪುರದೊಳ್ ವಣಿಗ್ವಂಶಾಗ್ರಣಿ ಕುಬೇರನಿಂದಧಿಕನೆನಿಸಿದ ಕುಬೇರದತ್ತಂಗಮನಂತಮತಿಗಂ ಧನದೇವನೆಂಬ ಪ್ರಿಯತನೂಭವನಾದಂ. ಇಂತು,**

ಉತ್ತರದ ದಡದಲ್ಲಿರುವ ಪುಷ್ಕಳಾವತೀದೇಶದ ಪುಂಡರೀಕಿಣೀನಗರದಲ್ಲಿ, ೨೧. ಅಮರೇಂದ್ರಾವಳಿಯಿಂದ ತನಗೆ ಇಂದ್ರಗಿರಿಯಲ್ಲಿ ಜನ್ಮಾಭಿಷೇಕವು ನಡೆಯಬೇಕೆಂದೂ ತಾನು ಭೂಮಿಯೊಡೆಯನಾಗಿ ಸಿಂಹಾಸನದಲ್ಲಿ ರಾಜ್ಯಾಭಿಷೇಕ ಪಡೆಯಬೇಕೆಂದೂ ಮಾಡಿದ ತಪಸ್ಸಿಗೆ ಅನುಗುಣವಾಗಿ ವಜ್ರಸೇನನಿಗೂ ಅವನ ಪತ್ನಿಯಾದ ಶ್ರೀಕಾಂತೆಗೂ ವಜ್ರನಾಭಿಯೆಂಬ ಹೆಸರಿನಿಂದ ಸುಂದರನಾದ ಮಗನಾಗಿ ಹುಟ್ಟಿ ಉತ್ಸಾಹಸಂಪನ್ನನಾದನು. ವ॥ ಪುನಃ ಆ ಪುಣ್ಯದಂಪತಿಗಳಿಗೆ ಹಿಂದೆ ಹೇಳಿದ ಶಾರ್ದೂಲಾರ್ಯವರದತ್ತಚರ ಸಾಮಾನಿಕನೂ ವರಾಹಾರ್ಯ ವರಸೇನಚರಸಾಮಾನಿಕನೂ ವಾನರಾರ್ಯ ಚಿತ್ರಾಂಗದಚರಸಾಮಾನಿಕನೂ ನಕುಲಾರ್ಯ ಶಾಂತಮದನಚರಸಾಮಾನಿಕನೂ ಅನುಕ್ರಮವಾಗಿ ವಿಜಯ, ವೈಜಯಂತ, ಜಯಂತ, ಅಪರಾಜಿತರೆಂಬ ಹೆಸರಿನಿಂದ ನಾಲ್ಕು ಜನ ಮಕ್ಕಳಾಗಿ ಹುಟ್ಟಿದರು. ವಜ್ರಜಂಘನಾದ ಜನ್ಮದಲ್ಲಿ ಆತನ ಮಂತ್ರಿ-ಪುರೋಹಿತ-ಸೇನಾಧಿಪ-ಪ್ರಧಾನ ಶ್ರೇಷ್ಠಿಗಳಾಗಿದ್ದ ಮತಿವರ, ಆನಂದ, ಅಕಂಪನ ಮತ್ತು ಧನಮಿತ್ರರೆಂಬ ಸಹಾಯಕರು ಅಧೋಗ್ರೈವೇಯಕದಲ್ಲಿ ಅಹಮಿಂದ್ರರಾಗಿ ಹುಟ್ಟಿದ್ದರು. ಅವರು ಅಲ್ಲಿಂದ ಇಳಿದುಬಂದು ಸುಬಾಹು, ಮಹಾಬಾಹು, ಪೀಠ ಮಹಾಪೀಠರೆಂಬ[1] ಹೆಸರಿನಿಂದ ಆ ದಂಪತಿಗಳಲ್ಲಿಯೇ ಮಕ್ಕಳಾಗಿ ಹುಟ್ಟಿ ವಜ್ರ ನಾಭನಿಗೆ ಸಹೋದರರಾದರು. ಶ್ರೀಮತ್ಯಾರ್ಯಾ ಸ್ವಯಂಪ್ರಭದೇವಜನ್ಮಗಳಲ್ಲಿದ್ದ

---

1 ಸುಬಾಹು = ಮುಂದೆ ಭರತನಾಗತಕ್ಕವನು. ಮಹಾಬಾಹು = ಮುಂದೆ ಬಾಹುಬಲಿಯಾಗತಕ್ಕವನು. ಪೀಠ = ಮುಂದೆ ವೃಷಭಸೇನನಾಗತಕ್ಕವನು. ಮಹಾಪೀಠ = ಮುಂದೆ ಅನಂತವಿಜಯನಾಗತಕ್ಕವನು.

ನಿಗಳಂಬೊಲ್ ತೊಡರ್ದೊಂದು ಮೋಹನಿಗಳಂ ತಜ್ಜನ್ಮದೊಳ್ ನೋಡೆ ತೊ
ಟ್ಟಗೆ ಮತ್ತಂ ಪೊಸತಾಗೆ ತಮ್ಮ ಮನದೊಳ್ ತಳ್ತೊಯ್ದು ತಳ್ತಾತಗು
ಳ್ವುಗಳೊಳ್ ಪೊಕ್ಕುವು ವಜ್ರಲೇಪದ ತಗುಳ್ವಂ ಪೋಲ್ವಿನಂ ವಜ್ರನಾ
ಭಿಗತಿಪ್ರೀತಿಯನುಂಟುಮಾಡಿದರವರ್ ಜನ್ಮಾಂತರಸ್ನೇಹದಿಂ ೨೨

ವ|| ಅಂತು ವಜ್ರನಾಭ ಚೆಲ್ವಿಂಗೆ ನಾಭಿಯುಂ ವಿಳಾಸಕ್ಕಾವಾಸಮುಂ ಅಳವಿಂಗೆ ದಳಮುಂ ಅಱಿವಿಂಗೆ ಗುಱಿಯುಂ ಕೆಳೆಗೆ ಕುಲಭವನಮುಂ ಪ್ರತಾಪಕ್ಕಡರ್ಪುಮಾಗಿ ಬಳೆವನ್ನೆಗಂ ; ವಜ್ರಸೇನಮಹಾರಾಜಂ ಆ ಕುಮಾರನೊಳಾದೊಂದು ಯೋಗ್ಯತೆಗೆ ಸಂತೋಷಂಬಟ್ಟು,

ನೆಱಿದಂ ಭೂತಳರಾಜ್ಯಭೂರಿಭರಮಂ ತಾಳಲ್ಕೆ ಮತ್ಪುತ್ರನೀ
ಪೊಱಿಗಿನ್ನೀತನೆ ಯೋಗ್ಯನೆಂಬ ಬಗೆಯಿಂ ರಾಜ್ಯಾಭಿಷೇಕೋತ್ಸವಂ
ಪೊಱಪೊಣ್ಮುತ್ತಿರೆ ರಾಜ್ಯಮಂ ಕುಡೆ ಮಗಂಗಾಶ್ಚರ್ಯದೊಳ್ ತಳ್ತದೇ
ನೊಱಿಯಿಂದುರ್ಚಿದ ಬಾಳ್ವೊಲಾದುದೊ ಪರಿಚ್ಛೇದಂ ಧರಾಧೀಶನಾ ೨೩

ವ|| ತದನಂತರಮೇ ಲೋಕಾಂತಿಕಾಮರವೃಂದಂ ಬಂದು ಬಿಚ್ಚಳಿಸೆ ವಜ್ರಕ್ಕೆ ಬಳಮಿತ್ತಂತೆ

ಕೇಶವಚರಪ್ರತೀಂದ್ರನು ಬಂದು ಆ ಪುರದಲ್ಲಿ ವರ್ತಕಶ್ರೇಷ್ಠನಾದ, ಕುಬೇರನಿಗಿಂತಲೂ ಅಧಿಕ ಧನವಂತನಾಗಿರುವ ಕುಬೇರದತ್ತನಿಗೂ ಅನಂತಮತಿಗೂ ಧನದೇವನೆಂಬ ಪುತ್ರನಾದನು. ಹೀಗೆ, ೨೨. ಆ ಜನ್ಮದಲ್ಲಿ ಸಂಕೋಲೆಯಂತೆ ಮೋಹವೆಂಬ ಒಂದು ಬೇಡಿಯು ತಗುಲಿಕೊಂಡಿತು. ಅದು ಬೇಗನೆ ಮತ್ತಷ್ಟು ಪ್ರಬಲವಾಗಿ ಗಾಢವಾಗಿ ಬೆಸುಗೆಗೊಂಡಿತು. ಕೊನೆಗೆ ವಜ್ರಲೇಪದಂತೆ ಅತಿಗಟ್ಟಿಯಾಯಿತು. ಹೀಗೆ ಅವರಲ್ಲಿ ಪ್ರತಿಯೊಬ್ಬರೂ ವಜ್ರನಾಭಿಗೆ ಜನ್ಮಾಂತರಸ್ನೇಹದ ಫಲವಾಗಿ ಅಧಿಕ ಪ್ರೀತಿಯನ್ನುಂಟು ಮಾಡಿದರು, ವ|| ಹಾಗೆ ವಜ್ರನಾಭಿಯು ಸೌಂದರ್ಯಕ್ಕೆ ಕೇಂದ್ರಸ್ಥಾನವಾಗಿಯೂ ವಿಲಾಸಕ್ಕೆ ಆವಾಸಸ್ಥಾನವಾಗಿಯೂ ಸಾಮರ್ಥ್ಯಕ್ಕೆ ಆಸರೆಯಾಗಿಯೂ ಜ್ಞಾನಕ್ಕೆ ಲಕ್ಷ್ಯವಾಗಿಯೂ ಸ್ನೇಹಕ್ಕೆ ವಾಸಸ್ಥಳವಾಗಿಯೂ ಪ್ರತಾಪಕ್ಕೆ ವಿಶ್ವಸನೀಯಸ್ಥಾನವಾಗಿಯೂ ಬೆಳೆದನು. ಆಗ ವಜ್ರಸೇನಮಹಾವೀರನು ತನ್ನ ಆ ಕುಮಾರನ ಯೋಗ್ಯತೆಗೆ ಸಂತೋಷಪಟ್ಟು, ೨೩. "ಈ ನನ್ನ ಮಗನು ಭೂಮಿಯ ಭಾರವನ್ನು ಹೊರಲು ಸಮರ್ಥ ಮತ್ತು ಯೋಗ್ಯ" ಎಂದು ಬಗೆದನು. ಆಶ್ಚರ್ಯಕರವಾದ ರೀತಿಯಲ್ಲಿ ರಾಜ್ಯಾಭಿಷೇಕೋತ್ಸವವನ್ನು ಮಾಡಿ ಮಗನಿಗೆ ರಾಜ್ಯವನ್ನು ಕೊಟ್ಟನು. ಆ ನೃಪನ ಈ ನಿರ್ಧಾರವು ಒರೆಯಿಂದ ಹೊರತೆಗೆದ ಕತ್ತಿಯಂತಾಯಿತು. ವ|| ಬಳಿಕ ಲೋಕಾಂತಿಕಾಮರಸಮೂಹವು[1] ಬಂದು ವಜ್ರಕ್ಕೆ ಹೊಳಪುಗೊಟ್ಟ ಹಾಗೆ ವಜ್ರಸೇನನ ಗುಣಗಳನ್ನು ಪ್ರಶಂಸೆಮಾಡಿತು. ಆಗ ವಜ್ರಸೇನಮಹಾರಾಜನು ಪರಿನಿಷ್ಕ್ರಮಣ ಕಲ್ಯಾಣದೀಕ್ಷೆಯನ್ನು ಪಡೆಯಲು ಸಾವಿರಜನ

---

1 ಬ್ರಹ್ಮಸ್ವರ್ಗದ ಅಂತ್ಯಪಟಲದಲ್ಲಿನ ಸಾರಸ್ವತ ಆದಿತ್ಯ ಮುಂತಾದ ಅಷ್ಟವಿಧ ದೇವತೆಗಳು, ಇವರು ವಿಷಯವಿರಕ್ತರು, ಚತುರ್ದಶಪೂರ್ವಧರರು, ತೀರ್ಥಂಕರರಿಗೆ ವೈರಾಗ್ಯವುಂಟಾದಾಗ ಅವರ ಪ್ರಶಂಸೆಗಾಗಿ ಭೂಲೋಕಕ್ಕೆ ಬರುವರು. ಇಲ್ಲಿ 'ಲೌಕಾಂತಿಕಾಮರ' ಎಂದು ಶುದ್ಧಪಾಠವಿರಬಹುದು.

ವಜ್ರಸೇನಮಹಾರಾಜಂ ಪರಿನಿಷ್ಕ್ರಮಣಕಲ್ಯಾಣಪರಿಣತಮನನಾಮ್ರವನೋದ್ಯಾನದೊಳ್ ಸಹಸ್ರಸಂಖ್ಯಾವನಿಪಾಲಕರೊಡನೆ,

ಬಡಗಮೊಗದಿರ್ದು ಕರ್ಮದ
ತೊಡರಂ ಪಱಿವಂತೆ ಕೇಶಪಾಶಮನಂತಾ
ಗಡೆ ಪಱಿದು ತಪಂಗೊಂಡಂ
ಪೊಡರ್ವರಿಯಂ ವಜ್ರನಾಭಿಯುಂ ಬೆಂಕೊಂಡಂ ೨೪

ವ॥ ಅಂತಾ ತ್ರಿಲೋಕಗುರು ಧರಾತಳಂ ಪೊಗೞ್ವಿನಂ ಯತ್ಯಾಶ್ರಮದೊಳ್ ನಿಂದಂ, ಈ ಧರಾಧಿಪಂ ಗುರುರಾಜ್ಯಾಶ್ರಮದೊಳ್ ನಿಂದಂ; ಆ ಮುನೀಂದ್ರಂ ತಪೋನುಷ್ಠಾನದೊಳ್ ನಿಷ್ಠಿತನಾದಂ, ಈ ನರೇಂದ್ರಂ ರಾಜ್ಯಾನುಷ್ಠಾನದೊಳ್ ನಿಷ್ಠಿತನಾದಂ; ಆ ಮುನೀಶಂ ಮುಮುಕ್ಷುವೃತ್ತಿಯೊಳ್ ನೆಗೞ್ದಂ, ಈ ಕ್ಷಿತೀಶಂ ಕ್ಷತ್ರವೃತ್ತಿಯೊಳ್ ನೆಗೞ್ದಂ; ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ, ಈ ಮಹೀನಾಥಂ ಮಂತ್ರಗುಪ್ತಿಯೊಳ್ ನೆರೆದಂ; ಆ ತಪಸ್ವಿ ಪರೀಷಹಂಗಳಂ ಗೆಲ್ದಂ ಈ ತೇಜಸ್ವಿ ಬಲ್ಲಿದರಂ ಗೆಲ್ದಂ; ಆ ಮಹಾಯೋಗಿ ಗುಣಂಗಳಂ ಪಾಲಿಸಿದಂ, ಈ ಮಹಾಭೋಗಿ ನೆಲನಂ ಪರಿಪಾಲಿಸಿದಂ; ಆ ಮುನಿಯ ಮನೋಗಾರದೊಳ್ ಧ್ಯಾನಚಕ್ರಂ ಪುಟ್ಟಿತ್ತು, ಈ ರಾಜ್ಯಾಶ್ರಮಮುನಿಯ ಆಯುಧಾಗಾರದೊಳ್ ಚಕ್ರರತ್ನಂ ಪುಟ್ಟಿತ್ತು; ಆ ಮುನಿಚಕ್ರವರ್ತಿಯ ಮನದೊಳ್ ಮೂಱುರತ್ನಂಗಳ್ ಬೆಳಗಿದುವು, ಆ ಸಕಳಚಕ್ರವರ್ತಿಯ ಮನೆಯೊಳ್ ಪದಿನಾಲ್ಕುರತ್ನಂಗಳ್ ಬೆಳಗಿದುವು; ಆ

ರಾಜರೊಡನೆ ಮಾವಿನತೋಪಿನಲ್ಲಿ (ಆಮ್ರವನೋದ್ಯಾನ) ಉದ್ಯುಕ್ತನಾದನು. ೨೪. ಉತ್ತರಾಭಿಮುಖದಲ್ಲಿದ್ದುಕೊಂಡು, ಕರ್ಮದ ಕಟ್ಟನ್ನು ಕತ್ತರಿಸಿ ಬಿಸುಡುವ ಹಾಗೆ, ತನ್ನ ಕೇಶಪಾಶಗಳನ್ನು ಕಿತ್ತೊಗೆದು ವಜ್ರಸೇನನು ತಪಸ್ಸಿನಲ್ಲಿ ತೊಡಗಿದನು. ಇತ್ತ ವಜ್ರನಾಭಿಯು ಯುದ್ಧಾಭಿಲಾಷಿಗಳಾದ ವೈರಿಗಳನ್ನು ಬೆನ್ನಟ್ಟಿದನು. ವ॥ ಅಂತು ತ್ರಿಲೋಕಗುರುವೆನಿಸಿದ ವಜ್ರಸೇನನು, ಭೂಮಿಯೆಲ್ಲವೂ ಹೊಗಳುತ್ತಿರಲು ಯತ್ಯಾಶ್ರಮದಲ್ಲಿ ನಿಂತನು. ಈ ವಜ್ರನಾಭಿಯು ತಂದೆ ಕೊಟ್ಟ ರಾಜ್ಯಾಶ್ರಮದಲ್ಲಿ ನಿಂತನು. ಮುನೀಂದ್ರನು ತಪೋನುಷ್ಠಾನದಲ್ಲಿ ತೊಡಗಿದರೆ, ಈ ನರೇಂದ್ರನು ರಾಜ್ಯಾನುಷ್ಠಾನದಲ್ಲಿ ತೊಡಗಿದನು. ಆ ಮುನೀಶನು ಮುಮುಕ್ಷುವೃತ್ತಿಯಲ್ಲಿ ಆಸಕ್ತನಾದರೆ, ಈ ಭೂಮೀಶನು ಕ್ಷತ್ರವೃತ್ತಿಯಲ್ಲಿ ಆಸಕ್ತನಾದನು. ಆ ಮುನಿನಾಥನು ತ್ರಿಗುಪ್ತಿಯಲ್ಲಿ ನೆರೆದರೆ, ಈ ಕ್ಷಿತೀಶನು ಮಂತ್ರಗುಪ್ತಿಯಲ್ಲಿ ನೆರೆದನು. ಆ ತಪಸ್ವಿಯು ಪರೀಷಹಗಳನ್ನು ಗೆದ್ದರೆ, ಈ ತೇಜಸ್ವಿಯು ಶೂರರನ್ನು ಗೆದ್ದನು. ಆ ಮಹಾಯೋಗಿಯು ಗುಣಗಳನ್ನು ಪಾಲಿಸಿದರೆ ಈ ಮಹಾಭೋಗಿಯು ನೆಲವನ್ನು ಪರಿಪಾಲಿಸಿದನು. ಆ ಮುನಿಯ ಮನಸ್ಸೆಂಬ ಮನೆಯಲ್ಲಿ ಧ್ಯಾನಚಕ್ರವು ಹುಟ್ಟಿದರೆ, ಈ ರಾಜ್ಯಾಶ್ರಮ ಮುನಿಯ ಆಯುಧಾಗಾರದಲ್ಲಿ ಚಕ್ರರತ್ನವು ಹುಟ್ಟಿತು. ಆ ಮುನಿಸಾಮ್ರಾಟನ ಮನದಲ್ಲಿ ಮೂರು ರತ್ನಗಳು ಬೆಳಗಿದರೆ, ಈ ಸಕಲಚಕ್ರವರ್ತಿಯ ಮನೆಯಲ್ಲಿ ಹದಿನಾಲ್ಕು ರತ್ನಗಳು ಬೆಳಗಿದುವು. ಆ ಮುನಿ ಶ್ರೇಷ್ಠನಿಗೆ ಕೇವಲಜ್ಞಾನೋತ್ಪತ್ತಿಯುಂಟಾದರೆ, ಈ ರಾಜಶ್ರೇಷ್ಠನಿಗೆ ಸಮಸ್ತ ಸಾಮ್ರಾಜ್ಯದ ಸಂಪತ್ತಿಯುಂಟಾಯಿತು. ಆ ಪರಮೇಶ್ವರನಿಗೆ ಇಂದ್ರಾದಿಗಳು

ಮುನಿವೃಷಭಂಗೆ ಕೇವಲಜ್ಞಾನೋತ್ಪತ್ತಿಯಾದುದು, ಈ ರಾಜ್ಯವೃಷಭಂಗೆ ಸಕಳ ಸಾಮ್ರಾಜ್ಯಸಂಪತ್ತಿಯಾದುದು; ಆ ಪರಮೇಶ್ವರಂಗೆ ದೇವೇಂದ್ರರ್ಕಳೆಱಗಿದರ್, ಈ ಧರಾಧೀಶ್ವರಂಗೆ ನರೇಂದ್ರರ್ಕಳೆಱಗಿದರ್: ಆ ತ್ರಿಲೋಕತಿಲಕಂಗೆ ದಿವ್ಯಧ್ವನಿ ನೆಗೞ್ದುದು, ಈ ಕುಲತಿಲಕಂಗೆ ದಿಗ್ವಿಜಯದುಂದುಭಿಧ್ವನಿ ನೆಗೞ್ದುದು; ಆ ಮುನಿರಾಜಂ ಕರ್ಮಂಗಳಂ ಗಾಳಿಸಿದಂ, ಈ ರಾಜರಾಜಂ ಷಟ್ಖಂಡಮಂಡಳಮಂ ಬಾಯ್ಕೇಳಿಸಿದಂ; ಆ ಭವ್ಯವರರತ್ನಾಕರಂ ಚತುಸ್ತ್ರಿಂಶದತಿಶಯಭೋಗದೊಳ್ ಕೂಡಿದಂ, ಈ ಪುರುಷರತ್ನಾಕರಂ ದಶಾಂಗಭೋಗದೊಳ್ ಕೂಡಿದಂ. ಇಂತು,

ಗೃಹಪತಿರತ್ನಮಾಗೆ ಧನದೇವನಿಳಾತಳನಾಥನಾ ಮಹಾ
ಮಹಿತಳಭೋಗಮಂ ನೆಱೆಯೆ ಭೋಗಿಸೆ ಸಂಸೃತಿಭೋಗಮೆಯ್ದೆ ನಿ
ಸ್ಪೃಹತೆಯನಾ ಮಹೀಪತಿಗೆ ತಂದುದು ಭವ್ಯತೆ ಪುಣ್ಯಜೀವಮಂ
ಸಹಜಸುಖಾಸ್ಪದಂಬರೆಗಮುಯ್ದುದಮಲ್ಲಿ ತೊಡಂಕಲೀಗುಮೇ ೨೫

ವ|| ಅಂತು ವಿಷಯವಿರಕ್ತನಾಗಿ,

ನೆಗೞ್ದೀ ಷಟ್ಖಂಡಮಂ ಸಾಧಿಸಿದೊಡೆ ಫಲಮೇಂ ಭೋಗದಿಂ ಸಾಧ್ಯಮೇಂ ಬಂ
ಧುಗಳಿಂದಂ ಬರ್ಪುದೇಂ ಸುತ್ತಿದ ಪರಿಜನದಿಂದಪ್ಪುದೇನೊಂದುಮಿಲ್ಲ
ಟ್ಟಗಮೊಂದುಂಟಲ್ಲಿ ಗಾಂಪಿಂ ತೊಡರ್ವೆನೆ ಪಡೆವೆಂ ಶಾಶ್ವತಶ್ರೀಯನೆಂಬು
ಜ್ಜುಗದೊಳ್ ಚಿತ್ತಂ ಕರಂ ತಣ್ಮಲೆಯೆ ನೆಱೆಯೆ ನಿಶ್ಚೈಸಿದಂ ಸಾರ್ವಭೌಮಂ ೨೬

ನಮಸ್ಕರಿಸಿದರೆ, ಈ ರಾಜನನ್ನು ಸಕಲ ರಾಜರೂ ನಮಸ್ಕರಿಸಿದರು. ಆ ತ್ರಿಲೋಕತಿಲಕನಿಗೆ ದಿವ್ಯಧ್ವನಿಗಳು ಕೇಳಿ ಬಂದರೆ, ಈ ಕುಲತಿಲಕನಿಗೆ ದಿಗ್ವಿಜಯದ ದುಂದುಭಿಧ್ವನಿಗಳು ಕೇಳಿಬಂದುವು. ಆ ಮುನಿಪುಂಗವನು ಕರ್ಮಗಳನ್ನು ಘಾತಿಸಿದರೆ ಈ ರಾಜರಾಜನು ಷಟ್ಖಂಡರಾಜ್ಯಮಂಡಲವನ್ನು ವಶಪಡಿಸಿಕೊಂಡನು. ಆ ಮುನಿರತ್ನಾಕರನು ಮೂವತ್ನಾಲ್ಕು ಅತಿಶಯ ಭೋಗಗಳಿಂದ ಕೂಡಿದರೆ ಈ ಪುರುಷರತ್ನಾಕರನು ದಶಾಂಗಭೋಗಗಳಿಂದ ಕೂಡಿದನು. ೨೫. (ಹಿಂದೆ ಶ್ರೀಮತಿಯಾಗಿದ್ದ) ಧನದೇವನು (ರಾಜ್ಯಕ್ಕೆ ಅಂಗಭೂತವಾದ) ಗೃಹಪತಿರತ್ನವಾದನು. ಭೂಮಿಗೊಡೆಯನಾದ ವಜ್ರನಾಭಿಯು ಭೂಮಂಡಲದ ಭೋಗವನ್ನು ಚೆನ್ನಾಗಿ ಉಂಡನು. ಕೊನೆಗೆ ಈ ಸಂಸೃತಿಭೋಗವು ವಜ್ರನಾಭಿಗೆ ನಿಸ್ಪೃಹತೆಯನ್ನು ತಂದಿತು, ಭವ್ಯತೆಯು ಈ ಪುಣ್ಯಜೀವವನ್ನು ಸಹಜಸುಖಕ್ಕೆ ಆಸ್ಪದವಾಗುವವರೆಗೂ ಒಯ್ದಿತು. ಅಲ್ಲಿ ಯಾವುದೇ ವಿಧವಾದ ತೊಡಕಿಗೂ ಅವಕಾಶವಿಲ್ಲ. ವ|| ಅಂತು ವಿಷಯವಸ್ತುಗಳಿಂದ ವಿಮುಖನಾಗಿ ೨೬. "ಈ ಷಟ್ಖಂಡಮಂಡಿತವಾದ ಭೂಮಂಡಲವನ್ನು ಗೆದ್ದದ್ದರಿಂದ ಸಾಧಿಸುವುದು ಏನನ್ನು? ಭೋಗಾನುಭವದಿಂದ ಸಾಧಿಸತಕ್ಕುದು ಏನು? ಬಂಧು ಬಳಗದವರಿಂದ ಆಗತಕ್ಕುದೇನು? ನನ್ನನ್ನು ಸುತ್ತುಗಟ್ಟಿರುವ ಪರಿಜನರಿಂದ ಅಪ್ಪುದೇನು? ಇವೆಲ್ಲವುಗಳಿಂದ ಆಗುವುದು ಮನಸ್ಸಿಗೆ ಕಳವಳವೊಂದು ಮಾತ್ರ. ನಾನು ಮೂಢತೆಗೊಳಗಾಗಿ ಕಷ್ಟಕ್ಕೆ ಸಿಗಬೀಳೆನು" ಎಂಬುದಾಗಿ ಶಾಶ್ವತಶ್ರೀಯನ್ನು ಪಡೆಯಬೇಕೆಂಬುಜ್ಜುಗದಲ್ಲಿ ಅವನ ಮನಸ್ಸು ಅತ್ಯಾಸಕ್ತವಾಯಿತು.

ವ|| ಅಂತು ನಿಶ್ಚಯಿಸಿ ವಸುಂಧರಾಭಾರಮಂ ವಜ್ರದಂತನೆಂಬ ನಿಜಾಗ್ರತನೂಜನೊಳ್ ನಿಱಿಸಿ ನಿಜಗುರುಚರಣಸಮೀಪದೊಳ್,

|| ಅಕ್ಕರಂ||

ನಿಜತನೂಭವರೈಸಾಸಿರ್ವರ್ ಪದಿನಾಱುಸಾಸಿರ್ಬರ್ ಮಕುಟಬದ್ಧರುಂ
ನಿಜಲತಾಂಗಿಯರಯ್ವತ್ತುಸಾಸಿರ್ವರೆಣ್ಬರುಮಣುಗಿನ ಸೋದರರ್ಕಳ್
ನಿಜಸಹಾಯಂ ಗೃಹಪತಿರತ್ನಂ ಧನದೇವನುಂ ಬೆರಸಾಗಳ್ ವಜ್ರನಾಭಿ
ನಿಜದ ರೂಪಮಂ ನಿರ್ಗ್ರಂಥರೂಪಮಂ ಕೈಕೊಂಡು ನೆಗಳ್ದನಿಂತೀಮಾೞ್ಕೆಯಿಂ ೨೭

ವ|| ಅದೆಂತೆಂದೊಡೆ ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹಪರಿತ್ಯಾಗವೆಂಬಯ್ದುಂ ಮಹಾವ್ರತಂಗಳೊಳ್ ನೆರೆದು,

ನಡೆವ ನುಡಿವುಣ್ಬ ಕೊಳ್ವಿಡು
ವೆಡೆಯೊಳ್ ತಾಂ ಕಾಯಮಲಮನುಗುೞ್ವೆಡೆಯೊಳೊಡಂ
ಬಡನೆನಿಸದೋವಿ ಜೀವಮ
ನಡಕಂಬೆರಸಯ್ದುಸಮಿತಿಯೊಳ್ ಮುನಿ ನೆಗೞ್ದಂ ೨೮

ವ|| ಮತ್ತಮಿವು ಮೊದಲಾಗಿರ್ಪತ್ತೆಂಟುಮೂಲಗುಣಂಗಳೊಳಮುತ್ತರಗುಣಂಗಳೊಳ ಮುತ್ತರೋತ್ತರಂ ನೆಗೞ್ದು,

ವ|| ಹಾಗೆ ನಿಶ್ಚಯಿಸಿ ಭೂಭಾರವನ್ನು ವಜ್ರದಂತನೆಂಬ ತನ್ನ ಜ್ಯೇಷ್ಠಪುತ್ರನಲ್ಲಿಟ್ಟು ತನ್ನ ಗುರುಪಾದಮೂಲದಲ್ಲಿ ೨೭. ಐದುಸಾವಿರ ಮಕ್ಕಳೊಡನೆಯೂ ಹದಿನಾರುಸಾವಿರ ಮಕುಟಬದ್ಧರಾದ ಸಾಮಂತರೊಡನೆಯೂ ಐವತ್ತು ಸಾವಿರ ಹೆಂಡಿರೊಡನೆಯೂ ಪ್ರೀತಿಪಾತ್ರರಾದ ಎಂಟುಜನ ಸಹೋದರರೊಡನೆಯೂ ನಿಜಸಹಾಯಕನೂ ಗೃಹಪತಿರತ್ನನೂ ಆದ ಧನದೇವನೊಡನೆಯೂ ಕೂಡಿ ವಜ್ರನಾಭಿಯು ನಿಜರೂಪವೆನಿಸಿದ ನಿರ್ಗ್ರಂಥರೂಪವನ್ನು ಕೈಕೊಂಡು ಖ್ಯಾತನಾದನು. ವ|| ಅದು ಹೇಗೆಂದರೆ: ಹಿಂಸೆ, ಸುಳ್ಳು, ಕಳ್ಳತನ, ಅಬ್ರಹ್ಮ(ಇಂದ್ರಿಯನಿಗ್ರಹವಿಲ್ಲದಿರುವುದು), ಪರಿಗ್ರಹ (ಸ್ವೀಕಾರ) ಇವುಗಳ ತ್ಯಾಗಗಳೆಂಬ ಐದು ಮಹಾವ್ರತಗಳಿಂದ ಕೂಡಿ ೨೮. ನಡೆಯುವಾಗಲೂ (ಈರ್ಯಾ) ನುಡಿಯುವಾಗಲೂ (ಭಾಷಾ) ಉಣ್ಣುವಾಗಲೂ (ಏಷಣಾ), ತೆಗೆದುಕೊಳ್ಳುವ ಮತ್ತು ಇಡುವೆಡೆಗಳಲ್ಲಿಯೂ (ಆದಾನನಿಕ್ಷೇಪಣ) ಕೊಳೆ ಕಶ್ಮಲಗಳನ್ನು ಪರಿತ್ಯಜಿಸುವೆಡೆಗಳಲ್ಲಿಯೂ (ಉತ್ಸರ್ಗ) ಜೀವಹಿಂಸೆಯೊದಗದಂತೆ ತನ್ನನ್ನು ನೋಡಿಕೊಂಡು ಈ ಐದು ಸಮಿತಿಗಳಲ್ಲಿ ಅಡಕಗೊಳಿಸಿ ಆ ಮುನಿಯು ಪ್ರಖ್ಯಾತನಾದನು. ವ|| ಮತ್ತೂ ಇವು ಮೊದಲಾಗಿ ಇಪ್ಪತ್ತೆಂಟು ಮೂಲಗುಣಗಳಲ್ಲಿಯೂ ಉತ್ತರಗುಣಗಳಲ್ಲಿಯೂ[1] ಉತ್ತರೋತ್ತರವಾಗಿ

---

1 ಉತ್ತರಗುಣಗಳು ಬಳ.

ಮನಮಂ ನುಡಿಯಂ ಮೆಯ್ಯಂ
ತನಗೆ ವಶಂಮಾಡಿ ಗುಪ್ತಿಗುಪ್ತಂ ಮುನಿಯೆಂ
ಬಿನೆಗಂ ನೆಗಳ್ದಂ ಗುಪ್ತಿಯೆ
ತನಗಿಲ್ಲದೆ ಕರ್ಮರಿಪುಗೆ ಮುನಿವುದು ಮೊಗ್ಗೇ ೨೯

ವ|| ಮತ್ತಂ ಚತುರಶೀತಿಶತಸಹಸ್ರಗುಣಮಣಿವಿಭೂಷಣವಿಭೂಷಿತನುಂ ಅಷ್ಟಾದಶಸಹಸ್ರಶೀಲ ರತ್ನಾಕರನುಂ ಆಗಿ ಪಂಚದಶಪ್ರಮಾದಂಗಳಂ ಬಂಚಿಸಿ,

ಏಕಧನುರ್ಧರನಾದನಿ
ಳಾಕಾಂತೆಯನೊಲಿಸುವಂದು ಮುನಿಪತಿಯಾಗಿ
ರ್ದೇಕೆಂದಜೆಯೆಂ ದಶಧನು
ರಾಕಳಿತಕರಾಗ್ರನಾದನೆನಗಿದು ಚೋದ್ಯಂ ೩೦

ವ|| ಎಂಬಿನಮುತ್ತಮಕ್ಷಮಾಮಾರ್ದವಾರ್ಜವಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮ ಚರ್ಯಾಪರ್ಯಾಪ್ತದಶಧರ್ಮಂಗಳುಮಂ ಕೈಕೊಂಡು ಸಾಕಾರನಿರಾಕಾರಗತಮಪ್ಪನಶನಮೆಂಬ ಮೊದಲ ತಪದೊಳಂ, ಏಕಕಬಳೋನಾದ್ಯೇಕಸಿಕ್ಥಪ್ರಮಾಣಾಹಾರಂಬರಂ ಬರ್ಪವಮೋದರ್ಯಮೆಂಬೆರಡನೆಯ ತಪದೊಳಂ, ಇತೆಂಬೆಡೆಯೊಳಿಂತೆಂಬವರ್ ನಿಱಿಸಿದೊಡಲ್ಲದೆ ನಿಲ್ಲೆನೆಂಬ ನಿಯಮಂ ಮೊದಲಾಗೆ ವೃತ್ತಿಪರಿಸಂಖ್ಯಾನನಾಮಮಾದ ಮೂಱನೆಯ ತಪದೊಳಂ, ಕ್ಷೀರದಧಿಘೃತಲವಣತೈಲಾದಿ ರಸಂಗಳಂ

ಪ್ರಸಿದ್ಧಿಪಡೆದು, ೨೯. ಮನಸ್ಸನ್ನೂ ಮಾತುಗಳನ್ನೂ ಮೈಯನ್ನೂ ತನ್ನ ವಶಪಡಿಸಿಕೊಂಡು ತ್ರಿಗುಪ್ತಿ (ತ್ರಿಕರಣ ಗುಪ್ತಿ)ಗಳೆಂಬ ರಕ್ಷೆಯಿಂದ ರಕ್ಷಿತನಾಗಿ ಮುನಿಯೆಂದು ಪ್ರಖ್ಯಾತನಾದನು. ಗುಪ್ತಿರಹಿತನು ಕರ್ಮರಿಪುವನ್ನು ಗೆಲ್ಲಲು ಸಾಧ್ಯವೇ? ವ|| ಮತ್ತು ಎಂಬತ್ತುನಾಲ್ಕುಲಕ್ಷ ಗುಣಗಳೆಂಬ ಮಣಿಭೂಷಣಗಳಿಂದ ಅಲಂಕೃತನೂ ಹದಿನೆಂಟುಸಾವಿರ ಶೀಲರತ್ನಗಳಿಗೆ ಆಶ್ರಯನೂ ಹದಿನೈದು ಪ್ರಮಾದಗಳನ್ನು ತೊರೆದವನೂ ಆದನು. ೩೦. ಆತನು ಹಿಂದೆ ಭೂಕಾಂತೆಯನ್ನೊಲಿಸುವಾಗ ಒಂದೇ ಧನುಸ್ಸನ್ನು ಹಿಡಿದಿದ್ದನು (ಅದೇನೋ ಸರಿ). ಈಗ ಮುನಿಪತಿಯಾದ ಮೇಲೆ ಹತ್ತುಧನುಸ್ಸುಗಳನ್ನು ಹಿಡಿದನು! ಇದೇನೋ ತಿಳಿಯದು. ನನಗೆ ಚೋದ್ಯವೆನಿಸಿದೆ! (ಮುಂದೆ ಹೇಳುವ ಹತ್ತು ಧರ್ಮಗಳನ್ನು ಸ್ವೀಕರಿಸಿದನೆಂದು ಭಾವ. ಧರ್ಮವನ್ನು ಧನುಸ್ಸೆಂದು ಕರೆಯಲಾಗಿದೆ) ವ|| ಎಂಬಂತೆ ಉತ್ತಮವಾದ ಕ್ಷಮೆ, ಮೃದುತ್ವ, ಋಜುತ್ವ, ಸತ್ಯ, ಶೌಚ, ಸಂಯಮ, ತಪಸ್ಸು, ತ್ಯಾಗ, ಆಕಿಂಚನ್ಯ ಎಂಬ ಪರ್ಯಾಯ ಪರ್ಯಾಪ್ತವಾದ ಹತ್ತು ಧರ್ಮಗಳನ್ನು ಅಂಗೀಕರಿಸಿದನು. ಸಾಕಾರ ನಿರಾಕಾರಗತವಾದ ಅನಶನವೆಂಬ ಮೊದಲನೆಯ ತಪಸ್ಸಿನಲ್ಲಿಯೂ ಒಂದು ತುತ್ತಿನಿಂದ ಹಿಡಿದು ಒಂದು ಅಗುಳಿನ ಪ್ರಮಾಣದವರೆಗೆ ಬರುವ ಅವಮೋದರ್ಯವೆಂಬ ಎರಡನೆಯ ತಪಸ್ಸಿನಲ್ಲಿಯೂ ಇಂಥ ಸ್ಥಳದಲ್ಲಿ ಇಂಥವರು ನಿಲ್ಲಿಸಿದರೆ ಆಹಾರವನ್ನು ಸ್ವೀಕರಿಸುತ್ತೇನೆಂಬ ವೃತ್ತಿಪರಿಸಂಖ್ಯಾನ ನಾಮದ ಮೂರನೆಯ ತಪಸ್ಸಿನಲ್ಲಿಯೂ ಹಾಲು, ಮೊಸರು, ತುಪ್ಪ, ಉಪ್ಪು, ಎಣ್ಣೆ ಮುಂತಾದ ರಸಗಳನ್ನು ಪರಿತ್ಯಜಿಸುವ ರಸಪರಿತ್ಯಾಗವೆಂಬ ನಾಲ್ಕನೆಯ

ಪರಿತ್ಯಾಗಂಗೆಯ್ದು ರಸಪರಿತ್ಯಾಗಮೆಂಬ ನಾಲ್ಕನೆಯ ತಪದೊಳಂ, ಸ್ತ್ರೀಪುನ್ನಪುಂಸಕಮೃಗ ಪಶುಪರಿವರ್ಜಿತ ವಿವಿಕ್ತಸ್ಥಾನಂಗಳೊಳ್ ನೆಲಸುವ ವಿವಿಕ್ತವಾಸಮೆಂಬಯ್ದನೆಯ ತಪದೊಳಂ ನೆಱೆದು, ಕಾಯಕ್ಲೇಶ ಮೆಂಬಾಱನೆಯ ತಪಮನೆತ್ತಿಕೊಂಡು,

ಸುತ್ತಲುಮುರಿಮಾಲೆಗಳನೆ
ಪೊತ್ತಿಸಿದವೊಲಳುರೆ ತಪನಕಿರಣಾಳಿ ಮುನೀಂ
ದ್ರೋತ್ತಮಗುರು ಕಲ್ಲೆನೆ ನಿಂ
ದೆತ್ತಿದ ಬೆಳ್ಗೊಡೆಯ ನೆಟಿಲೊಳಿರ್ಪಂತಿರ್ದಂ ೩೧

ಮೊರೆದೆಱಗಿ ಕೊಳ್ವ ಮೞಿ ಭೋ
ರ್ಗರೆದೂದುವ ಗಾಳಿ ಸಿಡಿದು ಪೊಯ್ವ ಸಿಡಿಲ್ ಕಾ
ರಿರುಳೊಳಗುರ್ವಂ ಪಡೆದಿರೆ
ಮರುವಾನಸನೆನೆ ತಪಸ್ವಿ ಮರಮೊದಲಿರ್ದಂ ೩೨

ತನು ಪಂಜಿವೊಲ್ ಬೆಳರ್ತಿ
ರ್ಪನೆಗಂ ಹಿಮಮೆಕ್ಕಿದರಲೆವೋಲ್ ಪುದಿದಿರೆಯುಂ
ತನು ತನಗಲ್ತೆಂದೇಕಾಂ
ತನಿವಾಸದೊಳಿಂತು ಬೆಳ್ಳವಾಸದೊಳಿರ್ದಂ ೩೩

ವ|| ಮತ್ತಮಭ್ಯಂತರತಪಷ್ಷಟ್ಕದೊಳಂ ಪ್ರಾಯಶ್ಚಿತ್ತವಿನಯವೈಯಾಪೃತ್ಯಸ್ವಾಧ್ಯಾಯ ಧ್ಯಾನವ್ಯುತ್ಸರ್ಗಂಗಳಂ ಕೈಕೊಂಡು ಪನ್ನೆರಡುತಪದೊಳ್ ನೆಱೆದಿರ್ಪತ್ತೆರಡುಪರೀಷಹಂಗಳಂ ಗೆಲ್ದು ಗಣಧರಗಣಮಂ ಬಿಟ್ಟೇಕವಿಹಾರಿಯಾಗಿ ಬೞಿಯಂ ತ್ರೈಲೋಕ್ಯಕ್ಷೋಭಕಾರಣತೀರ್ಥಕರಪುಣ್ಯಹೇತುಗಳಪ್ಪ

ತಪಸ್ಸಿನಲ್ಲಿಯೂ ಸ್ತ್ರೀಯರೂ ಪುರುಷರೂ ನಪುಂಸಕರೂ ಮೃಗಪಶುಗಳೂ ಇಲ್ಲದ ವಿಜನಸ್ಥಾನಗಳಲ್ಲಿ ನೆಲಸುವ ವಿವಿಕ್ತಾವಾಸವೆಂಬ ಐದನೆಯ ತಪಸ್ಸಿನಲ್ಲಿಯೂ ನೆರೆದು ಕಾಯಕ್ಲೇಶವೆಂಬ ಆರನೆಯ ತಪಸ್ಸನ್ನೆತ್ತಿಕೊಂಡನು. ೩೧. ಸುತ್ತಲೂ ಉರಿಮಾಲೆಗಳನ್ನು ಹೊತ್ತಿಸಿದಂತೆ ಪ್ರಖರವಾದ ಸೂರ್ಯನ ಕಿರಣಗಳು ಹರಡಿದ್ದಾಗ ಮುನೀಂದ್ರರಿಗೆಲ್ಲ ಮುನಿಶ್ರೇಷ್ಠನಾದ ಆತನು ಕಲ್ಲೋ ಎಂಬಂತೆಯೂ ಎತ್ತಿಹಿಡಿದ ಬೆಳ್ಗೊಡೆಯ ನೆಳಲಲ್ಲಿದ್ದಂತೆಯೂ ನಿಂತಿರುತ್ತಿದ್ದನು. ೩೨. ಅಬ್ಬರಿಸುತ್ತ ಮಳೆಯು ಮೇಲೆ ಸುರಿಯುತ್ತಿತ್ತು. ಭೋರೆಂದು ಗಾಳಿಯು ಬೀಸುತ್ತಿತ್ತು. ಸಿಡಿಲು ಸಿಡಿದೆರಗುತ್ತಿತ್ತು. ಹೀಗೆ ಕಗ್ಗತ್ತಲೆಯು ಭಯಂಕರವಾಗಿದ್ದರೂ ಮರವಾನಸನಂತೆ ಆ ತಪಸ್ವಿಯು ಮರದ ಬುಡದಲ್ಲಿ ಯಾವುದನ್ನೂ ಲೆಕ್ಕಿಸದೆ ನಿಂತಿದ್ದನು. ೩೩. ಅವನ ದೇಹವು ಹೆಕ್ಕಿದ ಹಂಜಿಯಂತೆ ಶುಭ್ರತೆಯಿಂದಿತ್ತು. ಹಿಮವು ಎಕ್ಕಿದ ಹತ್ತಿಯಂತೆ ಸುತ್ತ ವ್ಯಾಪಿಸಿತ್ತು. ದೇಹವು ತನ್ನದಲ್ಲವೆಂದು ತಿಳಿದು ಏಕಾಂತವಾಗಿ ಪ್ರವಾಹದ ನೀರಲ್ಲಿ ನಿಂತು ತಪಸ್ಸುಮಾಡಿದನು. ವ|| ಮತ್ತೂ ಪ್ರಾಯಶ್ಚಿತ್ತ, ವಿನಯ, ವೈಯ್ಯಾಪೃತ್ಯ, ಸ್ವಾಧ್ಯಾಯ, ಧ್ಯಾನ, ವ್ಯುತ್ಸರ್ಗಗಳೆಂಬ ಆರು ಅಭ್ಯಂತರ ತಪಸ್ಸುಗಳನ್ನೊಳಕೊಂಡ ಹನ್ನೆರಡು ವಿಧ ತಪಸ್ಸುಗಳಲ್ಲಿ ತೊಡಗಿದನು. ಇಪ್ಪತ್ತೆರಡು

ಷೋಡಶಭಾವನೆಗಳಂ ಭಾವಿಸಿ, ಭಾವನೆಯೊಳಾದ ಬುದ್ಧಿತಪೋವಿಕ್ರಿಯೌಷಧಿ ರಸಬಲಾಕ್ಷೀಣಾಭಿಧಾನಸಪ್ತರ್ಧಿಗಳೊಳಂ ನೆಱೆದು, ಬೞಿಯಂ ಮೋಹನೀಯಕರ್ಮೋಪಶಮದೊಳ್ ವಿಶುದ್ಧಾತಿಶಯವಿಶೇಷದಿನುಪಶಮಶ್ರೇಣ್ಯಾರೋಹಣಂಗೆಯ್ದು ನಿರವಶೇಷಮೋಹೋಪಶಮೋದ್ಭೂತ ಯಥಾಖ್ಯಾತಚಾರಿತ್ರಸಂಪನ್ನನಂತರ್ಮುಹೂರ್ತದಿಂ ಸ್ವಸ್ಥಾನಸ್ಥಿತನಾಗಿ ಕಾಲಾಂತರದೊಳ್ ಶ್ರೀಪ್ರಭಾದ್ರಿಶಿಖರದೊಳ್ ಪ್ರಾಯೋಪಗಮನವಿಧಿಯಿಂ ತ್ವಗಸ್ಥಿಭೂತಸರ್ವಾಂಗಂ ಧೈರ್ಯಮನೆ ಮನದೊಳವಲಂಬಿಸಿ,

ಬಿಸಿಲ್ಶೈಕಿಲ್ ಪಸಿವುಗ್ರದಂಶಮಶಕವ್ಯಾಬಾಧೆ ನೀರೞ್ಕೆ ಪೊ
ಯ್ವ ಸಿಡಿಲ್ ತಿಂಬರೆವಾವು ಪಾಯ್ವ ಪುಲಿಯೆಂಬೀಬಾಧೆಯೊಳ್ ಮೆಯ್ಯನೊ
ಡ್ಡಿಸಿ ಮೆಯ್ಯೊಳ್ ಮಿಡುಕುಳ್ಳ ತಾಣಮಣಮಿಲ್ಲೆಂಬಂತು ನಿಷ್ಪಂದನಾ
ಗಿ ಸಮನ್ವಿತಮನಂ ಗುಣಂಗೊಳಿಸಿದಂ ಯೋಗೀಂದ್ರವೃಂದಂಗಳಂ ೩೪

ವ॥ ಅಂತಿರ್ದನಿತ್ಯಾದಿ ದ್ವಾದಶಾನುಪ್ರೇಕ್ಷಾನುಸ್ಮರಣಪರಿಣತಾಂತಃಕರಣನಾಗಿ ಮತ್ತಮೆರಡನೆಯ ಸೋಪಾನಮುಪಶಮಶ್ರೇಣಿಯನೇಱಿ ಚತುರ್ವಿಧಶುಕ್ಲಧ್ಯಾನದೊಳ್ ಪೂರ್ವಾಪರವಿಷಯವಿವಿಕ್ತಾರ್ಥವ್ಯಂಜನಯೋಗಸಂಕ್ರಮಣಲಕ್ಷಣಲಕ್ಷಿತಮಪ್ಪ ಪೃಥಕ್ತ್ವವಿತರ್ಕವಿಚಾರಮೆಂಬ ಮೊದಲ ಶುಕ್ಲಧ್ಯಾನದೊಳ್ ಸಮಾಹಿತನುಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳಹಮಿಂದ್ರನಾದಂ; ಅದು ಜಂಬೂದ್ವೀಪೋಪಮಾನವಿಸ್ತಾರಪರಿಣಾಹಪರಿಮಾಣಮಂ ಕೈಕೊಂಡು,

ಪರೀಷಹಗಳನ್ನು ಗೆದ್ದು ಗಣಧರಗಣವನ್ನು ತೊರೆದು ಏಕವಿಹಾರಿಯಾದನು. ಬಳಿಕ ತ್ರಿಲೋಕಕ್ಷೋಭೆಗೆ ಕಾರಣಗಳಾದ ತೀರ್ಥಂಕರಪುಣ್ಯಕ್ಕೆ ಹೇತುಗಳಾದ ಷೋಡಶ ಭಾವನೆಗಳನ್ನು ಭಾವಿಸಿದನು. ಅದರಿಂದಾಗಿ ಬುದ್ಧಿ, ತಪ, ವಿಕ್ರಿಯೆ, ಔಷಧಿ, ರಸ, ಬಲ ಮತ್ತು ಅಕ್ಷೀಣಗಳೆಂಬ ಏಳು ಋದ್ಧಿಗಳಿಂದ ನೆರೆದನು. ಬಳಿಕ ಮೋಹನೀಯ ಕರ್ಮೋಪಶಮದಿಂದ ಅತಿಶಯ ವಿಶುದ್ಧಿಯನ್ನು ಪಡೆದು ಉಪಶಮಶ್ರೇಣಿಯನ್ನು ಏರಿದನು. ಸಂಪೂರ್ಣ ಮೋಹೋಪಶಮವನ್ನು ಪಡೆದು ತನ್ಮೂಲಕ ಯಥಾಖ್ಯಾತ ಚಾರಿತ್ರಸಂಪನ್ನನಾಗಿ ಅಂತರ್ಮುಹೂರ್ತದಿಂದ ಸ್ವಸ್ಥಾನಸ್ಥಿತನಾದನು. ಬಳಿಕ ಕಾಲಾಂತರದಲ್ಲಿ ಶ್ರೀಪ್ರಭಪರ್ವತದ ಶಿಖರದಲ್ಲಿ ಪ್ರಾಯೋಪಗಮನವಿಧಿಯಿಂದ ತನ್ನೆಲ್ಲ ಅವಯುವಗಳಲ್ಲಿಯೂ ಚರ್ಮ-ಮೂಳೆಗಳಿಂದ ಮಾತ್ರ ಅವಶಿಷ್ಟನಾಗಿ ತನ್ನ ಮನದಲ್ಲಿ ಧೈರ್ಯವನ್ನವಲಂಬಿಸಿ, ೩೪. ಬಿಸಿಲು, ಶೀತ, ಹಸಿವು, ಸೊಳ್ಳೆನೊಣಗಳ ಕಾಟ, ನೀರಡಿಕೆ, ಸಿಡಿಲು, ನುಂಗುವ ಹೆಬ್ಬಾವು, ನುಗ್ಗಿ ಬರುವ ಹುಲಿ-ಇವುಗಳ ಬಾಧೆಗೆ ದೇಹವನ್ನು ಒಡ್ಡಿ ಅಲ್ಲಾಡುವ ಸ್ಥಾನವೇ ದೇಹದಲ್ಲಿ ಇಲ್ಲವೆಂಬಂತೆ ಸಮಸ್ತಗುಣಸಂಪನ್ನನಾದ ಆ ಯೋಗಿಶ್ರೇಷ್ಠನು ನಿಶ್ಚಲನಾಗಿದ್ದನು. ವ॥ ಅನಿತ್ಯಾದಿ ಹನ್ನೆರಡು ಅನುಪ್ರೇಕ್ಷೆಗಳ ಸ್ಮರಣೆಯಿಂದ ಪಕ್ವವಾದ ಅಂತಃಕರಣವುಳ್ಳವನಾಗಿ, ಮತ್ತೆರಡನೆಯ ಪಾಳಿಯಲ್ಲಿ ಉಪಶಮಶ್ರೇಣಿಯನ್ನೇರಿ ನಾಲ್ಕು ಬಗೆಯ ಶುಕ್ಲಧ್ಯಾನದಲ್ಲಿ "ಪೂರ್ವಾಪರವಿಷಯ ವಿವಿಕ್ತಾರ್ಥ ವ್ಯಂಜನಯೋಗ ಸಂಕ್ರಮಣಲಕ್ಷಣವಾದ ಪೃಥಕ್ತ್ವವಿತರ್ಕ ವಿಚಾರವೆಂಬ" ಮೊದಲನೆಯ ಶುಕ್ಲಧ್ಯಾನದಲ್ಲಿ ಸಮಾಹಿತನಾಗಿ ಉಪಶಾಂತಗುಣಸ್ಥಾನದಲ್ಲಿ ಪ್ರಾಣತ್ಯಾಗಮಾಡಿ ಸರ್ವಾರ್ಥಸಿದ್ಧಿಯೆಂಬ ವಿಮಾನದಲ್ಲಿ ಅಹಮಿಂದ್ರನಾದನು. ಅದು ಜಂಬೂದ್ವೀಪಕ್ಕೆ ಸದೃಶವಾದ ವಿಸ್ತಾರ ಪರಿಣಾಹ

ಪನ್ನೆರಡುಯೋಜನಂ ಲೋ
ಕೋನ್ನತಿಯೆನೆ ತತ್ತ್ರಿಷಷ್ಟಿಪಟಲದ ತುದಿಯೊಳ್
ರನ್ನದ ಕಳಶಕ್ಕೆಸೆಯೆಂ
ಬನ್ನೆಗಮದು ಸುಖಸುಧಾಕರಂ ಸ್ವಸ್ತಿಕರಂ ೩೫

ಅದು ನೀಲಮಯಮಹೀತಳ
ಮದು ನವಪುಷ್ಪೋಪಹಾರತಾರಕಿತಮದ
ಭ್ಯುದಯಸುಖನಿಳಯಮದು ಮೋ
ಕ್ಷದ ನೆರೆಮನೆ ಲಂಬಮಾನಮುಕ್ತಾದಾಮಂ ೩೬

ನೆರೆದಹಮಿಂದ್ರರ ತನುಪರಿ
ಕರದ ನೆಬಲ್ಗಳ್ ಪಳಚ್ಚನೆಸೆದಿರೆ ನೋಟ
ಕ್ಕೆರಡನೆಯ ನಾಕಲೋಕದ
ವಿರಚನೆಯನೆ ಪಡೆವುದದಱ ರನ್ನದ ಕೇರ್ಗಳ್ ೩೭

ವ|| ಅದಱ ಪರಾರ್ಘ್ಯರತ್ನರಚನಾವಿಚಿತ್ರೋಪಪಾದಶಯನತಳದೊಳಂತರ್ಮುಹೂರ್ತದೊಳ್ ಪರ್ಯಾಪ್ತಿಯಂ ಕೈಕೊಂಡು,

ಧಾತುಮಳದೋಷರಹಿತಂ
ವೀತನಖಶ್ಮಶ್ರುಕೇಶಲೋಮಂ ಶೋಭಾ
ನ್ವಿತಪರಿಪೂರ್ಣಯೌವನ
ಮಾತತಶುಭಲಕ್ಷಣಂ ಮನೋಹರರೂಪಂ ೩೮

ಪರಿಮಾಣವನ್ನು ಹೊಂದಿದೆ. ೩೫. ಲೋಕದ ಉನ್ನತಿಯು ಇನ್ನು ಹನ್ನೆರಡು ಯೋಜನವಿದೆಯೆಂಬಲ್ಲಿ ಸರ್ವಾರ್ಥಸಿದ್ಧಿ ಇದೆ. ಅದು ಅರವತ್ತೂರನೆಯ ಪಟಲದ ತುದಿಯಲ್ಲಿ ರತ್ನಕಲಶಕ್ಕೆಣೆಯಾಗಿದೆ. ಸುಖವೆಂಬ ಅಮೃತಕ್ಕೆ ಆಕರವಾಗಿ ಸ್ವಸ್ತಿಕರವಾಗಿದೆ. ೩೬. ಅದರ ಭೂಮಿಯು ನೀಲಿಯಾದುದು. ಹೊಸಹೂವುಗಳ ಉಪಹಾರದಂತಿರುವ ತಾರಗೆಗಳಿಂದ ವಿಭೂಷಿತವಾಗಿದೆ. ಅದು ಅಭ್ಯುದಯಸುಖಕ್ಕೆ ನಿಲಯ, ಮೋಕ್ಷದ ನೆರೆಮನೆ, ಮುತ್ತಿನಹಾರಗಳು ಅಲ್ಲಿ ಜೋತುಬಿದ್ದಿವೆ. ೩೭. ಅಲ್ಲಿ ನೆರೆದ ಅಹಮಿಂದ್ರರ ದೇಹಚ್ಛಾಯೆಗಳು ರತ್ನದ ಗೋಡೆಗಳ ಮೇಲೆ ಪ್ರತಿಫಲಿಸಿ ಎರಡನೆಯ ನಾಕಲೋಕದ ಸೃಷ್ಟಿಯಾದಂತೆ ಕಂಡುಬರುತ್ತವೆ. ವ|| ಅದರ ಶ್ರೇಷ್ಠವಾದ ರತ್ನವಿನ್ಯಾಸಗಳಿಂದ ವಿಚಿತ್ರವಾಗಿರುವ ಉಪಪಾದಶಯನತಳದಲ್ಲಿ ಅಂತರ್ಮುಹೂರ್ತದಲ್ಲಿ ಅಹಮಿಂದ್ರನಾಗಿ 'ಪರ್ಯಾಪ್ತಿ'ಯನ್ನು[1] ಕೈಕೊಂಡನು. ೩೮. (ಅವನ ರೂಪವು) ಧಾತುಮಲದೋಷ ರಹಿತವೂ ಉಗುರು, ಮೀಸೆ, ಕೇಶ, ಲೋಮರಹಿತವೂ ಶೋಭಾನ್ವಿತವೂ

1 ಆಹಾರ, ಶರೀರ, ಇಂದ್ರಿಯ, ಉಚ್ಛ್ವಾಸ-ನಿಃಶ್ವಾಸ, ಭಾಷಾ, ಮನ ಎಂಬ ಆರು ಪರ್ಯಾಪ್ತಿಗಳು.

ಪಳುಕಿನ ಪಾಪೆಯನಮರ್ದಿಂ
ತೊಳೆದಂತೊರ್ಮೊಬಿದ ದಿವ್ಯವಪು ಮಣಿಮಯಕುಂ
ಡಳಮಕುಟಕಟಕಭೂಷಣ
ವಿಳಾಸದಿಂದೇಂ ವಿಳಾಸಮಂ ತಾಳ್ದಿದುದೋ ೩೯

ಬಾಡದ ಬಾಸಿಗಮುಡೆ ಚೆ
ಲ್ವೋಡದ ದಿವ್ಯಾಂಬರಂ ಮನಂಗೊಳೆ ಸುಖದೊಳ್
ಮೂಡುವ ಮುಟ್ಕಾಡುವ ತಡು
ಮಾಡುವ ಬಗೆಯಿಲ್ಲದಲ್ಲಿ ಬಗೆ ಪೆಜಿತುಂಟೇ ೪೦

ಅಣಿಮಾದ್ಯಷ್ಟಗುಣಂಗಳ
ಕಣಿಯಿರ್ಪಂತಿರ್ದುಮಖಿಳಸುರಲೋಕಶಿಖಾ
ಮಣಿಗಳ್ ಲೋಕೈಕಶಿಖಾ
ಮಣಿಗಳುಮಲ್ಲಿರ್ದು ವಿನತಮಸ್ತಕರಪ್ಪರ್ ೪೧

ಶುಭಭಾವಶುಕ್ಲಲೇಶ್ಯಾ
ನುಭಾವದಿಂ ಧವಳಪುಂಡರೀಕನಿಕಾಶ
ಪ್ರಭೆ ದೊರೆಕೊಂಡುದು ಪರಿಣಾ
ಮಭೇದಮೇಂ ಚಿತ್ರವಿಧಮೊ ತನುಭೃದ್ಗಣದಾ ೪೨

ಪದಿನಾಜು ತಿಂಗಳಿಂದಂ
ತುದಿಯೊಳ್ ಪದಿನೈದು ದಿವಸಮಾದೊಡೆ ಸುಯ್ವಂ
ತೊದಳುಂಟೆ ನಿಃಪ್ರವೀಚಾ
ರದಿಂದಮಹಮಿಂದ್ರನಖಿಳಸುಖಮಂ ಪಡೆವಂ ೪೩

ಪೂರ್ಣಯೌವನಯುಕ್ತವೂ ಶುಭಲಕ್ಷಣಸಮೇತವೂ ಸುಂದರವಾದ ರೂಪಿನಿಂದ ಕೂಡಿದುದೂ ಆಗಿತ್ತು. ೩೯. ಸ್ಫಟಿಕದ ಬೊಂಬೆಯನ್ನು ಅಮೃತದಿಂದ ತೊಳೆದಂತಿರುವ ಒಂದು ಮೊಳದ ದಿವ್ಯದೇಹವು ಮಣಿಮಯವಾದ ಕುಂಡಲ, ಮಕುಟ, ಕಡಗ ಮುಂತಾದ ಆಭರಣಗಳ ಬೆಡಗಿನಿಂದ ವಿಲಾಸವನ್ನು ತಳೆದಿತ್ತು. ೪೦. ಅಲ್ಲಿರುವವರಿಗೆಲ್ಲ ತೊಡಲು ಬಾಡದ ಹೂವಿನ ದಂಡೆಗಳಿದ್ದುವು. ಸೊಗಸುವಡೆದ ದಿವ್ಯಾಂಬರಗಳು ಮನಸ್ಸನ್ನು ಸೆಳೆಯುತ್ತಿದ್ದುವು. ಅಂದಮೇಲೆ ಅವರಿಗೆ ಸುಖದಲ್ಲಿ ಮೂಡುವ ಮುಳುಗಾಡುವ ನೆಲೆಯಾಗಿ ನಿಲ್ಲುವ ಬಗೆಯಲ್ಲದೆ ಮತ್ತೊಂದಿರಲಿಲ್ಲ. ೪೧. ಅಣಿಮಾದಿ ಎಂಟು ಗುಣಗಳಿಗೆ ಆಶ್ರಯರಾಗಿದ್ದರೂ ಸಮಸ್ತ ದೇವಲೋಕಶ್ರೇಷ್ಠರೂ ಲೋಕೈಕಶ್ರೇಷ್ಠರೂ ಅಲ್ಲಿಯೇ ಇದ್ದುಕೊಂಡು (ಅಹಮಿಂದ್ರನಿಗೆ) ತಲೆಬಾಗುವರು. ೪೨. ಶುಭಭಾವ ಶುಕ್ಲಲೇಶ್ಯೆಗಳ ಪ್ರಭಾವದಿಂದ ಬಿಳಿಯ ಕಮಲಗಳಿಗೆ ಸದೃಶವಾದ ಪ್ರಭೆಯು ದೊರೆಕೊಂಡಿತ್ತು. ಶರೀರಗಳ ಗುಣಗಳ ಪರಿಣಾಮಭೇದಗಳು ಚಿತ್ರವಿಚಿತ್ರವಾದುವು. ೪೩. ಅಹಮಿಂದ್ರನು ಹದಿನಾರು ತಿಂಗಳು ಮತ್ತು ಹದಿನೈದು ದಿವಸಗಳು ಆದೊಡನೆಯೆ ಒಂದು ಬಾರಿ ಶ್ವಾಸಬಿಡುವನು. ಮೈಥುನೇಚ್ಛೆಯಿಂದ ವಿರಹಿತನಾಗಿ ಅಹಮಿಂದ್ರನು ಸಕಲ ಸೌಖ್ಯವನ್ನೂ ಅನುಭವಿಸುವನು.

ಸ್ತ್ರೀಸಂಸರ್ಗಂ ಸುಖಮೆಂ
ಬೀ ಸಂಸಾರಿಗಳೆ ಜಡರದಪ್ಪೊಡೆ ತನುಗಾ
ಯಾಸಕರಂ ಶುಕ್ರಾರ್ತವ[೧]
ವಾಸಿತಮಾಪಾತಮಾತ್ರರಮಣೀಯತರಂ ೪೪

ಅದಱಿಂದಂ ತನ್ನೊಳ್ ಪು
ಟ್ಟಿದ ಸಂತಸದಿಂದಮಾದ ಸುಖಮದು ಸುಖಮ
ಲ್ಲದುದಲ್ತು ವಸ್ತುವಿಂದಾ
ದುದು ವಸ್ತುವೆ ಕುಂದೆ ಕುಂದುಗುಂ ನಿಮಿರ್ದಪುದೇ ೪೫

ಆ ನಾಕನಿಕಾಯದ ಸುಖ
ಮೇನುಂ ದೊರೆಯಲ್ಲದರ್ಕೆ ಮೋಕ್ಷದ ಸುಖದಿಂ
ದೇನಾನುಂ ಕುಂದುಗುಮದು
ತಾನೆನೆ ಬಣ್ಣಿಸುವನಾವನಲ್ಲಿಯ ಸುಖಮಂ ೪೬

ನೆನೆದಹಮಿಂದ್ರಂ ತಣಿವೊಂ
ಮನದೊಳ್ ಮೂವತ್ತುಮೂಱುಸಾಸಿರವರ್ಷ
ಕ್ಕನತಿಶಯಸುಧಾಶನದೊಳ್
ವನನಿಧಿ ಮೂವತ್ತುಮೂಱುಮಂ ಸಲೆ ಬಾಳ್ವಂ ೪೭

ಧನದೇವನುಮೆಣ್ಬರ್ ತ
ನ್ನನುಜರುಮಹಮಿಂದ್ರರಾಗೆ ನೆಱೆದವರೊಳ್ ಮು
ನ್ನಿನ ಭವದ ಪುಣ್ಯಕಲ್ಪಾ
ವನಿಜದ ತನಿವಣ್ಣ ರಸದೆ ತಣ್ಣನೆ ತಣಿವಂ ೪೮

೪೪. ಸ್ತ್ರೀಸಂಗವನ್ನೇ ಸುಖವೆನ್ನುವ ಸಂಸಾರಿಗಳು ಜಡರು, ಅದು ಆಯಾಸಕರ. ಶುಕ್ರಶೋಣಿತಗಳ ಸಂಸರ್ಗದಿಂದ ಕೂಡಿದುದು. ಅದು ಮೇಲ್ನೋಟಕ್ಕೆ ಮಾತ್ರ ರಮಣೀಯ. ೪೫. ಆದಕಾರಣ ತೃಪ್ತಿಯಿಂದ ತನ್ನಲ್ಲುಂಟಾದ ಸುಖವೇ ಸುಖ. ಅದಲ್ಲದ್ದು ಸುಖವೇ ಅಲ್ಲ. ವಸ್ತುವಿನಿಂದಾದ ಸುಖವು ವಸ್ತುವು ನಷ್ಟವಾದೊಡನೆ ತನ್ನಷ್ಟಕ್ಕೆ ತಾನೆ ನಷ್ಟ ಹೊಂದುವುದು. ಅದು ನಿಮಿರುವುದೇ? ೪೬. ಆ ಸ್ವರ್ಗಲೋಕದ ಸೌಖ್ಯವು ಅಸದೃಶವಾದುದು. ಅದಕ್ಕೆ ಮೋಕ್ಷಸುಖಕ್ಕಿಂತ ಸ್ವಲ್ಪ ನ್ಯೂನತೆಉಂಟು. ಹೀಗಿರುವಾಗ ಯಾವನು ತಾನೆ ಆ ಸುಖವನ್ನು ಬಣ್ಣಿಸಿಯಾನು? ೪೭. (ಸರ್ವಾರ್ಥಸಿದ್ಧಿಯಲ್ಲಿರುವ ಅಹಮಿಂದ್ರನು) ಮೂವತ್ತುಮೂರು ಸಾವಿರ ವರ್ಷಗಳಿಗೊಮ್ಮೆ ಸ್ಮರಿಸಿಕೊಂಡು ದಿವ್ಯವಾದ ಅಮೃತಾನ್ನವನ್ನು ಮಾನಸಾಹಾರವಾಗಿ ಸೇವಿಸಿ ತೃಪ್ತನಾಗುವನು. ಅವನು ಮೂವತ್ತುಮೂರು ಸಾಗರೋಪಮ ಆಯುಷ್ಯವುಳ್ಳವನಾಗಿರುತ್ತಾನೆ. ೪೮. ಧನದೇವನೂ ವಜ್ರನಾಭಿಯ ಎಂಟು ಮಂದಿ ಸೋದರರೂ ಅಲ್ಲಿ ಅಹಮಿಂದ್ರರಾಗಿ ಜನಿಸಿದರು. ಅವರೊಡನೆ

೧ 'ಶುಕ್ಲಾರ್ತವ' ಎಂಬ ಪಾಠವನ್ನೇ ಅನ್ಯತ್ರ ಸ್ವೀಕರಿಸಿದ್ದಾರೆ.

ವ॥ ಅನ್ನೆಗಮಿತ್ತ ಮೇರುಗಿರಿಯೇ ತನಗೆ ನಾಭಿಯಾಗೆ ಸೊಗಯಿಸುವ ಜಂಬೂಮಹೀರುಹ ಲಾಂಛನದ್ವೀಪಾಂತರ್ಗತಭರತಕ್ಷೇತ್ರಮಧ್ಯಮಧ್ಯಮಖಂಡದೊಳ್ ಮುಖ್ಯಂ ವ್ಯವಹಾರಮೆಂಬೆರಡುಂ ಕಾಲದೊಳಗಾದಿಮಧ್ಯಾವಸಾನವಿರಹಿತಮುಂ ವರ್ತನಾಲಕ್ಷಣಮುಂ [ಪರಿಣಾಮಿ][೧] ದ್ರವ್ಯಪರಿವರ್ತನ ಕಾರಣಮುಂ ಲೋಕಾಕಾಶಪ್ರದೇಶಪ್ರಮಾಣಪರಿಮಾಣಮುಂ ಅಸ್ಮದಾದ್ಯನುಮೇಯಮುಂ ಸರ್ವಜ್ಞ ಪ್ರತ್ಯಕ್ಷಗೋಚರಮುಮಪ್ಪುದು ಮುಖ್ಯಕಾಲಂ. ವ್ಯವಹಾರಕಾಲಮೆಂಬುದು ಮುಖ್ಯಕಾಲನಿರ್ವರ್ತಿತ ಕ್ರಿಯಾರೂಪಂ; ಅದು ಸಮಯಾವಳಿಕೋಚ್ಛ್ವಾಸಸ್ತೋಕನಿಮೇಷನಾಳಿಕಾಮೂಹೂರ್ತದಿವಸ ಪಕ್ಷಮಾಸರ್ತ್ವಯನ ಸಂವತ್ಸರಾದಿ ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು. ಅದು ಶರೀರ ಬಳಾಯುರ್ದೇಹಪ್ರಮಾಣೋಪಚಯಾಪಚಯಹೇತುತ್ವದಿಂದಮುತ್ಸರ್ಪಿಣಿಯ ವಸರ್ಪಿಣಿನಾಮಮಂ ಪಡೆದುದದೊಂದು ಪತ್ತುಕೋಟಿಕೋಟಿ ಸಾಗರೋಪಮಸಂಖ್ಯೆಯಂ ತಾಳ್ದಿ ಸುಷಮಸುಷಮಂ ಸುಷಮಂ ಸುಷಮದುಷ್ಷಮಂ ದುಷ್ಷಮಸುಷಮಂ ದುಷ್ಷಮಂ ಅತಿದುಷ್ಷಮಂ ಎಂದು ಒಂದೊಂದು ಷಡ್ಭೇದಭಿನ್ನಮಾದುವು. ಅಲ್ಲಿ ಮುನ್ನಮವಸರ್ಪಿಣಿಯೊಳುತ್ತಮಭೋಗ ಭೂಮಿಸ್ಥಿತಿಯೊಳ್ ನಾಲ್ಕು ಕೋಟಿ ಕೋಟಿ ಸಾಗರೋಪಮಪ್ರಮಾಣಂ, ಸುಷಮಸುಷಮಮೆಂಬ ಕಾಲಮುಂ ಮಧ್ಯಮಭೋಗ ಭೂಮಿಸ್ಥಿತಿಯೊಳ್ ಮೂಱುಕೋಟಿಕೋಟಿ ಸಾಗರೋಪಮ ಪ್ರಮಾಣಂ ಸುಷಮಮೆಂಬ ಕಾಲಮುಂ ಜಘನ್ಯಭೋಗಭೂಮಿಸ್ಥಿತಿಯೊಳ್ ಎರಡುಕೋಟಿಕೋಟಿ

ವಜ್ರನಾಭಿಯು ಹಿಂದಿನ ಜನ್ಮದ ಪುಣ್ಯಕಲ್ಪವೃಕ್ಷದ ಸಿಹಿಹಣ್ಣಿನ ರಸದಿಂದ ತಣ್ಣನೆ ತಣಿಯುತ್ತಿದ್ದನು. ವ॥ ಮೇರುಪರ್ವತವನ್ನೇ ತನಗೆ ಕೇಂದ್ರಸ್ಥಾನವನ್ನಾಗಿ ಪಡೆದು ಜಂಬೂವೃಕ್ಷದಿಂದ ಗುರುತಾಂತದ್ವೀಪ ಸೊಗಯಿಸುತ್ತಿದೆ. ಅದರ ಅಂತರವರ್ತಿಯಾಗಿ ಮಧ್ಯಮಖಂಡವೆಂದು ಭರತಖಂಡ ಶೋಭಿಸುತ್ತಿದೆ. ಅಲ್ಲಿ ಮುಖ್ಯ, ವ್ಯವಹಾರ ಎಂದು ಕಾಲವು ಎರಡು ತೆರ. ಆದಿ, ಮಧ್ಯ ಮತ್ತು ಅಂತಗಳಿಲ್ಲದ ವರ್ತನಾಸ್ವರೂಪದ (ಒಂದು ಅವಸ್ಥೆಯಿಂದ ಮತ್ತೊಂದು ಅವಸ್ಥೆಗೆ ಹೊಂದಿಸಬಲ್ಲ) ತಮ್ಮ ಯೋಗ್ಯತಾನುಗುಣವಾಗಿ ಗುಣಪರ್ಯಾಯಗಳಿಂದ ಪರಿವರ್ತನೆಯನ್ನು ಹೊಂದುವ ಪದಾರ್ಥಗಳನ್ನು ಪರಿವರ್ತನಗೊಳಿಸಲು ಸಹಾಯಕವೂ ಲೋಕಾಕಾರಪ್ರದೇಶ ಪರಿಮಾಣವೂ ನಮ್ಮಂಥವರಿಗೆ ಅನುಮೇಯವೂ ಸರ್ವಜ್ಞ ಪ್ರತ್ಯಕ್ಷಗೋಚರವೂ ಆದುದು ಮುಖ್ಯಕಾಲ. ಮುಖ್ಯಕಾಲದಿಂದ ಪರಿವರ್ತನೆಗೊಂಡ (ಪೂರ್ವಾಪರೀಭಾವವೆಂಬ) ಕ್ರಿಯುಳ್ಳದ್ದು ವ್ಯವಹಾರಕಾಲ. ಅದು ಸಮಯ, ಆವಲಿಕಾ, ಉಚ್ಛ್ವಾಸ, ಸ್ತೋಕ, ನಿಮೇಷ, ನಾಡಿಕಾ, ಮುಹೂರ್ತ, ದಿವಸ, ಪಕ್ಷ, ಮಾಸ, ಋತು, ಅಯನ, ಸಂವತ್ಸರಗಳೇ ಮೊದಲಾದ ಏರಿಕೆಯ ಎಣಿಕೆಗಳಿಂದ ಕೂಡಿರುವುದು. ಅದು ಶರೀರಬಲ, ಆಯುಸ್ಸು, ದೇಹಪ್ರಮಾಣಗಳ ಅಭಿವೃದ್ಧಿ ಹ್ರಾಸಗಳಿಗೆ ಕಾರಣವಾದ್ದರಿಂದ ಉತ್ಸರ್ಪಿಣೀ ಅವಸರ್ಪಿಣಿಗಳೆಂದು ಹೆಸರು ಪಡೆದಿದೆ. ಅವೆರಡರಲ್ಲಿ ಒಂದೊಂದು ಕಾಲವೂ ಹತ್ತು ಕೋಟಿ ಕೋಟಿ ಸಾಗರ ಪ್ರಮಿತವಾಗಿದ್ದು ಸುಷಮ-ಸುಷಮ, ಸುಷಮ, ಸುಷಮ-ದುಃಷಮ, ದುಃಷಮ-ಸುಷಮ, ದುಃಷಮ, ಅತಿದುಃಷಮ ಎಂದು

---

೧ ಪರಿಣಾಮುದ್ರವ್ಯ (ಅನ್ಯತ್ರ)

ಸಾಗರೋಪಮಪ್ರಮಾಣಂ ಸುಷಮದುಷ್ಷಮಮೆಂಬ ಕಾಲಮುಂ ಕ್ರಮದೊಳ್ ಷಟ್ಚತುರ್ದ್ವಿಸಹಸ್ರ ಚಾಪೋತ್ಸೇಧಂಗಳುಂ ತ್ರಿದ್ವ್ಯೇಕ ಪಲ್ಯೋಪಮಾಯುಷ್ಯಂಗಳುಂ ತ್ರಿದ್ವ್ಯೇಕದಿನಾಂತರಿತ ಬದರಾಕ್ಷಧಾತ್ರೀ ಫಳಪ್ರಮಾಣಾಹಾರಂಗಳುಮಪ್ಪ ಮಿಥುನಂಗಳ್ಗೆ ಸಂಭೋಗ್ಯಮಾಗಿ ಸಲೆ ಜಘನ್ಯಭೋಗಭೂಮಿಯ ಕಡೆಯ ಪಳಿತೋಪಮದೆಂಟನೆಯ ಭಾಗಮುೞಿದುದೆಂಬನ್ನೆಗಂ,

ಉತ್ತಮಮಧ್ಯಮಾಧಮಗುಣಂ ನಿಜದಾನದ ಭೋಗಭೂತಳ
ಕ್ಕೆತ್ತಮೊಡಂಬಡಂ ಪಡೆಯೆ ಬೇಡಿದ ಭೋಗಮನಿತ್ತು ಪೇೞಿಮಿ
ತ್ತಿತ್ತಿವರ್ಗಿತ್ತೆನೆಂಬ ಬಗೆ ತೊಟ್ಟನೆ ಪುಟ್ಟಿರೆ ಮುನ್ನಮಿತ್ತು ಬೆ
ಳ್ಕುತ್ತಿನಿಸಿರ್ದ ಪಾರ್ಥಿವರೊಳೇಂ ದೊರೆಯಾದುದೊ ಕಲ್ಪಪಾರ್ಥಿವಂ ೪೯

ಮರಗಳೆ ಮುನ್ನಿತ್ತಿನಿಸಂ
ಮರವಟ್ಟುವು ಪೆಟ್ಟುವೆರ್ಚೆ ಕುದಿದಿತ್ತೊಡಮೀ
ಧರಣಿತಳಕ್ಕವಿವೇಕಿಯ
ಮರವಾನಸನಿತ್ತ ಚಾಗಮೇನಿರ್ದಪುದೇ ೫೦

ಆರುಭೇದಗಳನ್ನು ತಳೆದಿದೆ. ಭರತಕ್ಷೇತ್ರದಲ್ಲಿ ಮುನ್ನ ಅವಸರ್ಪಿಣಿಯ ಕಾಲದಲ್ಲಿ ಉತ್ತಮ ಭೋಗಭೂಮಿಯಲ್ಲಿರುವಂತೆ[1] ಸುಷಮ-ಸುಷಮವೆಂಬ ಕಾಲವು ನಾಲ್ಕು ಕೋಟಿ ಕೋಟಿ ಸಾಗರ ಪ್ರಮಾಣವುಳ್ಳುದಾಗಿತ್ತು. ಮಧ್ಯಮಭೋಗಭೂಮಿ[2] ಸ್ಥಿತಿಯಲ್ಲಿ ಸುಷಮ ಎಂಬ ಕಾಲವು ಮೂರು ಕೋಟಿ ಕೋಟಿ ಸಾಗರ ಪ್ರಮಾಣವುಳ್ಳುದು. ಜಘನ್ಯ ಭೋಗಭೂಮಿ[3] ಸ್ಥಿತಿಯಲ್ಲಿ ಸುಷುಮ-ದುಃಷಮ ಎಂಬ ಕಾಲವು ಎರಡು ಕೋಟಿ ಕೋಟಿ ಸಾಗರ ಪ್ರಮಾಣವುಳ್ಳುದು. ಕ್ರಮವಾಗಿ ಮನುಷ್ಯರ ಶರೀರದ ಪ್ರಮಾಣವು ಆರು, ನಾಲ್ಕು ಮತ್ತು ಎರಡುಸಾವಿರ ಧನುಸ್ಸುಗಳಷ್ಟು ಎತ್ತರವುಳ್ಳುದಾಗಿಯೂ ಮೂರು, ಎರಡು ಮತ್ತು ಒಂದು ಪಲ್ಯೋಪಮದಷ್ಟು ಆಯುಸ್ಸುಳ್ಳುದ್ದಾಗಿಯೂ ಇದ್ದಿತು. ಮೂರು, ಎರಡು ಮತ್ತು ಒಂದು ದಿನಗಳನ್ನು ಬಿಟ್ಟು ಯಗಚಿಹಣ್ಣು, ತಾರೆಕಾಯಿ ಮತ್ತು ನೆಲ್ಲಿಕಾಯಿಗಳಷ್ಟು ಆಹಾರಗಳನ್ನು ಸ್ವೀಕರಿಸುವ ಸ್ತ್ರೀಪುರುಷರಿಗೆ ಕಲ್ಪವೃಕ್ಷವು ಭೋಗ್ಯವಾಗಿತ್ತು. ಹೀಗೆ ಕಳೆಯಲಾಗಿ (ಸುಷಮ-ದುಃಷಮವೆಂಬ ಮೂರನೆಯ ಕಾಲದಲ್ಲಿ) ಜಘನ್ಯಭೋಗಭೂಮಿಯ ಕಡೆಯ ಪಲಿತೋಪಮದೆಂಟನೆಯ ಭಾಗವು ಉಳಿದುದೆಂಬಂದಿಗೆ ೪೯. ತಮ್ಮ ತಮ್ಮ ದಾನದ ಫಲವಾಗಿ ಉತ್ತಮ, ಮಧ್ಯಮ ಮತ್ತು ಅಧಮ ಗುಣಗಳು ಭೋಗಭೂತಳದಲ್ಲಿಯೂ ಹುಟ್ಟಿದುವು. ಬೇಡಿದ ಭೋಗಗಳೆಲ್ಲವನ್ನೂ ಇವರ್ಗೆ ಕೊಟ್ಟೆವು; ಅವರ್ಗೆ ಕೊಟ್ಟೆವೆಂಬ ಬುದ್ಧಿಯು ಕಲ್ಪವೃಕ್ಷಗಳಿಗೆ ತೊಟ್ಟನೆ ಹುಟ್ಟಿತು. ಕಲ್ಪವೃಕ್ಷಗಳು ಹೀಗೆ ಕೊಟ್ಟು ಕುದಿಯುತ್ತಿದ್ದ ರಾಜರಿಗೆ ಸಮನಾದುವು. ೫೦. ಮರಗಳು ಈ ಮೊದಲು ಬೇಕಾದುವನ್ನೆಲ್ಲ ಇತ್ತು ಶಕ್ತಿಗುಂದಿದುವು. ಅವಿವೇಕಿಯಾದ ಮರವಾನಸನು ಅಸೂಯೆಯಿಂದ ಧರಣೀತಲಕ್ಕೆ

1 ಉತ್ತಮ ಭೋಗಭೂಮಿ = ದೇವಕುರು, ಉತ್ತರಕುರು ಪ್ರದೇಶಗಳು.

2 ಮಧ್ಯಮ ಭೋಗಭೂಮಿ = ಪರಿವರ್ಷ, ರಮ್ಯಕಕ್ಷೇತ್ರಗಳು

3 ಜಘನ್ಯ ಭೋಗಭೂಮಿ = ಹೈಮವತ, ಹೈರಣ್ಯವತ ಪ್ರದೇಶಗಳು, ಭರತ, ಐರಾವತ ವಿದೇಹ ಕ್ಷೇತ್ರಗಳು ಕರ್ಮಭೂಮಿಗಳು.

ಪಿಂಗದೆ ಬೆಳಗುವ ಗುಣಮದು
ಪಿಂಗಲೊಡಂ ಜ್ಯೋತಿರಂಗಭೂಜಂಗಳ ತೇ
ಜಂಗಳ್ ಮಸುಳ್ದುವು ದಾನಗು
ಣಂಗಳ್ ಕಿಡೆ ತೇಜದುಡುಕಮೇಂ ಪಿರಿದಾಯ್ತೇ ೫೧

ವ|| ಅನ್ನೆಗಮಾಷಾಢಪೌರ್ಣಮಾಸೀವಾಸರಸಾಯಂತನಸಮಯದೊಳ್ ಪರಭಾಗಂಬಡೆದು ಗಗನೋಭಯಭಾಗದೊಳ್ ದಿಗ್ಭಿತ್ತಿಗಳುಂ ಭೋಗಭೂಮಿಜರ ಚಿತ್ತಭಿತ್ತಿಗಳುಂ ಒಡನೊಡನೆ ಬೆಳಗೆ ಕಾಲರಾಜನ ಜಗದ್ಗೃಹಪ್ರವೇಶಕ್ಕೆ ನಿಱಿಸಿದ ಕನಕಕಳಶಯುಗಳಮುಮಂ ಪೌರ್ಣಮಾಸೀಸೌಂದರಿಯ ಸಿಂದೂರಾರುಣಕ್ರೀಡಾಗೋಳಕಂಗಳುಮಂ ಪೋಲ್ತು,

ಗಗನಗಜಕ್ಕಿಕ್ಕಿದ ಪೊಂ
ನ ಗಂಟೆಯೆರಡೆನಲುಮಂಬರಾಂಭೋನಿಧಿಯೊಳ್
ನೆಗೆದುರಿವೌರ್ವಾನಳನು
ರ್ಬುಗಳೆನಲುಂ ನೆಗೆದುವಹಿಮಹಿಮಕರಬಿಂಬಂ ೫೨

ವ|| ಅಂತವಂ ಕಂಡು ಬೆರ್ಚಿ ಬೆಗಡುಗೊಂಡ ಭೋಗಭೂಮಿಜರಂ ಜಾಜ್ವಲ್ಯಮಾನಮಕುಟ ಕುಂಡಳನುಂ ನಾನಾಭರಣಭಾಸುರೋದಾರವಿಗ್ರಹನುಂ ನಿಜತೇಜೋನಿರ್ಭರನಿರ್ಭರ್ತ್ಸಿತರವಿಗ್ರಹನುಂ ಜನ್ಮಾಂತರಾಭ್ಯಾಸಜನಿತಾವಧಿಬೋಧೋದಯವಿದಿತಕಾಲನಿಯೋಗನುಂ ಅಷ್ಟಶತಾಧಿಕಚಾಪ ಸಹಸ್ರೋತ್ಸೇಧನುಂ ಪಲ್ಯೋಪಮದಶಮಭಾಗಾಯುಷ್ಯನುಮಪ್ಪಗ್ರಿಮಕುಳಧರಂ ಪ್ರತಿಶ್ರುತಿಯೆಂಬಂ,

ಅತಿಯಾಗಿ ದಾನ ಮಾಡಿದರೂ ಅದು ಕಲ್ಪವೃಕ್ಷದ ದಾನಕ್ಕಿಂತ ಹೆಚ್ಚಿನದಾಗಬಲ್ಲುದೆ? ೫೧. ಸತತವೂ ಬೆಳಗುವ ಆ ಗುಣವು ತೊಲಗಿದ ಕೂಡಲೇ ಜ್ಯೋತಿರಂಗ ಕಲ್ಪವೃಕ್ಷದ ತೇಜಸ್ಸುಗಳು ಮಂಕಾದುವು. ದಾನಗುಣಗಳು ಕೆಟ್ಟರೆ (ನಿರುಪಯುಕ್ತವಾದರೆ) ತೇಜಸ್ಸಿನ ಗುಣಗಳು ಕುಂದುವುದು ಹೆಚ್ಚೆ? ವ|| ಅಷ್ಟರಲ್ಲಿ ಆಷಾಢದ ಹುಣ್ಣಿಮೆಯ ಸಾಯಂಕಾಲದಲ್ಲಿ ಶೋಭಾತಿಶಯವನ್ನು ಹೊಂದಿ, ಅಗಸದ ಎರಡೂ ಭಾಗಗಳಲ್ಲಿ ದಿಕ್ಕುಗಳೆಂಬ ಗೋಡೆಗಳೂ ಭೋಗಭೂಮಿಜರ ಮನಸ್ಸೆಂಬ ಗೋಡೆಗಳೂ ಬೆಳಗಿದುವು. ಸೂರ್ಯಚಂದ್ರರು ಕಾಲರಾಜನ ಜಗತ್ತೆಂಬ ಮನೆಯ ಪ್ರವೇಶಕ್ಕೆ ಇರಿಸಿದ ಚಿನ್ನದ ಕಲಶಗಳನ್ನೂ ಪೌರ್ಣಮಾಸೀ ಸುಂದರಿಯ ಸಿಂಧೂರಾರುಣವಾದ ಕ್ರೀಡಾಕಂದುಕಗಳನ್ನೂ ಹೋಲಿದುವು. ೫೨. ಆಕಾಶವೆಂಬ ಗಜಕ್ಕೆ ಕಟ್ಟಿದ ಎರಡು ಚಿನ್ನದ ಗಂಟೆಗಳಂತೆಯೂ ಆಕಾಶವೆಂಬ ಸಮುದ್ರದಲ್ಲಿದ್ದ ಬಡಬಾಗ್ನಿಯ ಉಬ್ಬುಗಳೋ ಎನ್ನುವಂತೆಯೂ ಸೂರ್ಯಚಂದ್ರ ಬಿಂಬಗಳು ಕಾಣಿಸಿಕೊಂಡವು. ವ|| ಹಾಗೆ ಅವನ್ನು ನೋಡಿ ಬೆಚ್ಚಿ ಭೋಗಭೂಮಿಜರು ಆಶ್ಚರ್ಯಗೊಂಡರು. ಅವರನ್ನು ನೋಡಿ ಕಿರೀಟ ಮತ್ತು ಮಕರಕುಂಡಲಗಳಿಂದಲೂ ನಾನಾವಿಧವಾದ ಆಭರಣಗಳ ಕಾಂತಿಗಳಿಂದಲೂ ಬೆಳಗುತ್ತಿದ್ದ ತನ್ನೊಂದು ತೇಜಸ್ಸಿನಿಂದ ಸೂರ್ಯನನ್ನೇ ತಿರಸ್ಕರಿಸುತ್ತಿದ್ದ, ಜನ್ಮಾಂತರದ ಅಭ್ಯಾಸದಿಂದಾಗಿ ಹೊಳೆದ ಅವಧಿ ಜ್ಞಾನದಿಂದ ಕಾಲನಿಯೋಗವನ್ನು ತಿಳಿದ ಒಂದು ಸಾವಿರ ಎಂಟುನೂರು ಧನುಸ್ಸಿನಷ್ಟು ಎತ್ತರವುಳ್ಳ, ಪಲ್ಯೋಪಮಕಾಲದ ಹತ್ತನೆಯ ಒಂದು ಭಾಗ ಆಯುಷ್ಯವನ್ನು ಪಡೆದ

ಜ್ಯೋತಿರ್ಭೂಜಾತತೇಜಂ ಪಸರಿಸುವುದಱಿಂದಿನ್ನೆಗಂ ಕಂಡುದಿಲ್ಲಿಂ
ತೀ ತೇಜೋರೂಪಮಾಗಿರ್ದಪ್ಪುವಿನಶಶಿಬಿಂಬಂಗಳೀ ತೋರ್ಪುದೇನಾ
ಜ್ಯೋತಿರ್ಲೋಕಂ ಮನಂಗುಂದದಿರಿಮಿವು ಮನಸ್ತಾಪಮಂ ಮಾಡವೆಂದಾ
ಭೀತಾತ್ಮಾರ್ಯರ್ಕಳಂ ಸಂತಯಿಸಿದನಮೃತಾಸಾರಸಾರಪ್ರಣಾದಂ ೫೩

ವ|| ಆ ಮನ್ವಂತರಮಸಂಖ್ಯೇಯವರ್ಷಕೋಟಿ ಕುಂದುತ್ತುಂ ಬರ್ಪಿನಂ ತತ್ಪ್ರಸ್ತಾವದೊಳ್ ತ್ರಿಶತಯುತಸಹಸ್ರದಂಡೋಚ್ಛ್ರಿತಶರೀರನುಂ ಅಮಮಮಿತಪರಮಾಯುಷ್ಯನುಮಪ್ಪ ಸನ್ಮತಿಯೆಂಬೆರಡನೆಯ ಮನು ಪುಟ್ಟಿದಂದು,

ತಾರಗೆಗಳಗೆಗಳಂತಿರೆ
ತಾರಾಪಥದೊಳ್ ನಿರಂತರಂ ತುಱುಗಿರೆ ಕಂ
ಡೋರಂತೆ ನಡುಗುವಾರ್ಯರ
ನಾರಾಧಿತಬೋಧನಾತನಿಂತಿರೆ ನುಡಿದಂ ೫೪

ಉದಯಾಸ್ತಸಮಯಮೀ ಚಂ
ದ್ರದಿವಾಕರಮಂಡಲಕ್ಕಮಿಲ್ಲಿಂದಂ ತೋ
ರ್ಪುದು ತಾರಕಾಳಿ ನಭಮಂ
ಪುದಿದಿರ್ಕುಮಿದರ್ಕೆ ನಿಮಗೆ ಮನಕತಮುಂಟೇ ೫೫

ಮೊದಲನೆಯ ಕುಲಧರನಾದ (ಮನುವಾದ) ಪ್ರತಿಶ್ರುತಿಯೆಂಬುವನು ೫೩. "ಜ್ಯೋತಿರ್ವೃಕ್ಷದ ತೇಜಸ್ಸು ಹರಡಿದ್ದುದರಿಂದ ಇಂದಿನವರೆಗೂ ಈ ತೇಜೋರೂಪಗಳಾದ ಸೂರ್ಯಚಂದ್ರಬಿಂಬಗಳನ್ನು ನೀವು ಕಂಡಿರಲಿಲ್ಲ. ಇಲ್ಲಿ ಕಾಣುವುದೇ ಆ ಜ್ಯೋತಿರ್ಲೋಕ. ಎದೆಗುಂದಬೇಡಿ, ಇವು ನಿಮ್ಮ ಮನಸ್ಸಿಗೆ ತಾಪವೇನನ್ನೂ ಉಂಟುಮಾಡವು" ಎಂದು ತನ್ನ ಅಮೃತೋಪಮವಾದ ಮಾತುಗಳಿಂದ ಭೀತರಾದ ಆರ್ಯರನ್ನು ಸಮಾಧಾನಗೊಳಿಸಿದನು. ವ|| ಎಣಿಕೆಗೆ ಸಿಗದಷ್ಟು ವರ್ಷಕೋಟಿಗಳುಳ್ಳ ಆ ಮನ್ವಂತರವು ಸಮಾಪ್ತಿಗೊಳ್ಳುತ್ತಾ ಬಂದಿತು. ಆಗ ಒಂದು ಸಾವಿರದ ಮುನ್ನೂರು ದಂಡದಷ್ಟು ಎತ್ತರವಾದ ದೇಹವುಳ್ಳವನೂ ಅಮಮ ಸಂಖ್ಯೆಯಷ್ಟು[1] ಆಯುಷ್ಯವುಳ್ಳವನೂ ಆದ ಸನ್ಮತಿ ಎಂಬ ಎರಡನೆಯ ಮನುವು ಹುಟ್ಟಿದನು. ೫೪. ಸಸ್ಯಗಳಂತೆ ನಕ್ಷತ್ರಗಳು ಆಕಾಶದಲ್ಲಿ ನಿರಂತರವಾಗಿ ಕವಿದುವು. ಅವನ್ನು ಕಂಡು ಆರ್ಯರು ಒಂದೇ ಸಮನಾಗಿ ನಡುಗಲಾರಂಭಿಸಿದರು. ಆಗ ಜ್ಞಾನಿಯಾದ ಸನ್ಮತಿಯೆಂಬ ಎರಡನೆಯ ಮನುವು ೫೫. "ಸೂರ್ಯಚಂದ್ರರಿಗೆ ಉದಯಾಸ್ತಮಯಗಳು ಆಗುತ್ತವೆ. ಆದ್ದರಿಂದ ನಕ್ಷತ್ರ ಸಮೂಹವು ಆಕಾಶವನ್ನು ಅಲಂಕರಿಸಿದೆ. ಇದಕ್ಕಾಗಿ ನೀವೇಕೆ ದುಃಖಿಸುವಿರಿ?" ವ|| ಎಂದು ಚಿತ್ತಕ್ಷೋಭೆಗೊಂಡ ಜನರಿಗೆ ತಿಳಿಸಿದನು. ಹೀಗೆ ಬುದ್ಧಿವಿಕಾಸವನ್ನುಂಟುಮಾಡಿದ ಕಾರಣ ಆ ಮನುವು ಸನ್ಮತಿಯೆಂದು ಪ್ರಖ್ಯಾತಿಗೊಂಡನು. ಬಳಿಕ ಗಣನೆಗೆ ನಿಲುಕದಷ್ಟು ವರ್ಷಗಳು ಕಳೆದಮೇಲೆ ಎಂಟುನೂರು ಧನುಸ್ಸಿನಷ್ಟು ಎತ್ತರವಿರುವವನೂ

1 ಜೈನಪರಿಭಾಷಾನುಗುಣವಾದ ಕಾಲವಿಭಾಗವನ್ನು ಅನುಬಂಧದಲ್ಲಿ ಕೊಟ್ಟಿದೆ.

ವ|| ಎಂದವರ್ಗೆ ಸನ್ಮತಿವಿಕಾಸಮಂ ಮಾಡಿದುದಱಿನಾ ಮನುಗೆ ಸನ್ಮತಿಯೆಂಬ ಪೆಸರಾದುದು. ಆತನಿಂ ಬೞಿಯಮಸಂಖ್ಯೇಯಸಂವತ್ಸರಪ್ರಮಿತ ಮನ್ವಂತರಾವಸಾನದೊಳಷ್ಟಶತವಿಶಿಖಾಸನೋತ್ಸೇಧನುಮಟಟಪ್ರಮಿತಸಂಖ್ಯಾಯುಷ್ಯನುಮಾಗಿ ಮೂಱನೆಯ ಕುಳಧರನಾದಂ, ಆ ಕಾಲದೊಳ್,

ಎಳಸಿ ಬಳಸಿರ್ಪ ಮೃಗಸಂ
ಕುಳಂಗಳಂದನಿತುಮೊಡನೆ ಕೋಟಲೆಸಗಿದೊಡಾ
ಕುಳರಾದಾರ್ಯಜನಕ್ಕವ
ನಳವಡಿಸುವ ಬಗೆಯನಾ ಮಹಾತ್ಮಂ ಪೇೞ್ದಂ ೫೬

ವ|| ಅದಱಿಂದಾತನಂ ಕ್ಷೇಮಂಕರನೆಂದು ಪೆಸರನಿಟ್ಟರ್, ಆತನಿಂಬೞಿಯಮೆನಿತಾನುಂ ಕಾಲದಿಂ ಪಂಚೋತ್ತರಸಪ್ತತಿಯುತ ಸಪ್ತಶತಕಾರ್ಮುಕೋತ್ಸೇಧಕಾಯನುಂ ತುಟಿತಾಬ್ದಪ್ರಮಿತ ಜೀವಿತನುಮಾಗಿ ನಾಲ್ಕನೆಯ ಕುಳಧರಂ ಪುಟ್ಟಿ ಪಾಪಸತ್ವಂಗಳ್ ಕಾಡೆ ಲಕುಟಪ್ರಾಕೃದಿ ವಿಧಿಯನು ಪದೇಶಂಗೆಯ್ದಾತಂ ಕ್ಷೇಮಂಧರನೆಂಬ ಪೆಸರಂ ಪಡೆದಂ, ಅಲ್ಲಿಂ ಬೞಿಯಮನೇಕ ಕೋಟಿಸಂವತ್ಸರಂಗಳ್ ಪೋದಿದಿಂ ಬೞಿಯಂ ಪಂಚಾಶದಭ್ಯಧಿಕಸಪ್ತಶತಕೋದಂಡಪ್ರಮಾಣ ಮೂರ್ತಿಯಂ ಕಮಳ ಪ್ರಮಿತಾಯುಷ್ಯನುಮಾಗಿ ಕಮಳವದನಂ ಪಂಚಮಕುಳಧರಂ ಪುಟ್ಟಿ,

ಸೀಮಾವಿವಾದದಿಂ ತ
ದ್ಭೂಮಿಜರೋರೊರ್ವರಂ ಪಳಂಚಲಿವೆಡೆಯೊಳ್
ಸೀಮೆಗಳ ತೊಡರನುಡುಗಿಸಿ
ಸೀಮಂಕರನೆಂಬುದೊಂದು ಪೆಸರಂ ಪಡೆದಂ ೫೭

ಅಟಟಪ್ರಮಿತಾಯುಷ್ಯನೂ ಆಗಿ ಮೂರನೆಯ ಕುಲಧರನು ಹುಟ್ಟಿದನು. ಆ ಕಾಲದಲ್ಲಿ ೫೬. ಸುತ್ತಲೂ ಬಳಸಿರುವ ಮೃಗಸಮೂಹಗಳೆಲ್ಲವೂ ಒಟ್ಟಿಗೆ ಆರ್ಯರನ್ನೆಲ್ಲ ಹಿಂಸೆ ಮಾಡಲಾರಂಭಿಸಿದುವು. ಆಗ ಅವರಿಗೆ ಅವನ್ನು ಹತೋಟಿಯಲ್ಲಿಟ್ಟುಕೊಳ್ಳುವ ಬಗೆಯನ್ನು ಅವನು ಹೇಳಿಕೊಟ್ಟನು. ವ|| ಆ ಕಾರಣದಿಂದ ಆತನನ್ನು ಕ್ಷೇಮಂಕರನೆಂದು ಕರೆದರು. ಬಳಿಕ ಬಹುಕಾಲದ ಮೇಲೆ ಏಳುನೂರಾಎಪ್ಪತ್ತೈದು ಧನುಸ್ಸಿನಷ್ಟು ಎತ್ತರವಾದ ದೇಹವುಳ್ಳ, ತುಟಿತಾಬ್ಧಪ್ರಮಿತಜೀವಿತನಾಗಿ ನಾಲ್ಕನೆಯ ಕುಲಧರನು ಜನ್ಮಪಡೆದನು. ಹಿಂಸಿಸುವ ಹಿಂಸ್ರಕ ಪ್ರಾಣಿಗಳಿಂದ ತಮ್ಮನ್ನು ದೊಣ್ಣೆ ಕೋಲು ಮುಂತಾದವುಗಳಿಂದ ಕಾಪಾಡಿಕೊಳ್ಳಬೇಕೆಂದು ಹಿತವಾದ ಕೊಟ್ಟನು. ಆದ್ದರಿಂದ ಅವನು ಕ್ಷೇಮಂಧರನೆಂದು ಖ್ಯಾತಿಗೊಂಡನು. ಅಲ್ಲಿಂದ ಮುಂದಕ್ಕೆ ಅನೇಕ ಕೋಟಿ ಸಂವತ್ಸರಗಳು ಕಳೆದ ಮೇಲೆ ಏಳುನೂರುಐವತ್ತು ಧನುಸ್ಸಿನಷ್ಟು ಉನ್ನತಕಾಯನೂ ಕಮಲಮಿತಾಯುಷ್ಯನೂ ಕಮಲವದನನೂ ಆದ ಐದನೆಯ ಕುಲಧರನು ಜನ್ಮತಳೆದನು. ೫೭. ಯಾವ ಕಲ್ಪವೃಕ್ಷ ಯಾರಿಗೆ ಸೇರಿದ್ದೆಂದು ಕಲ್ಪವೃಕ್ಷದ ಎಲ್ಲೆಗಾಗಿ ಜಗಳವಾಡುತ್ತ ಆ ಪ್ರದೇಶದ ಜನರೆಲ್ಲರೂ ಒಬ್ಬರೊಡನೊಬ್ಬರು ಹೊಯ್ದಾಡುತ್ತಿದ್ದರು. ಅವರ ಆ ಸೀಮಾ ವಿವಾದವನ್ನು (ಮಾತಿನ ಒಪ್ಪಂದದಿಂದ) ಬಗೆಹರಿಸಿ ಈ ಕುಲಧರನು ಸೀಮಂಕರನೆಂಬ ಹೆಸರಿನಿಂದ ಪ್ರಸಿದ್ಧನಾದನು.

ವ॥ ಆತನ ವಿರಾಮದೊಳನೇಕಾಬ್ದಕೋಟಿಗಳ ಕಡೆಯೊಳ್ ಪಂಚವಿಂಶತ್ಯನ್ವಿತಸಪ್ತಶತಬಾಣಾಸನೋಚ್ಛ್ರಯನುಂ ನಳಿನಪ್ರಮಾಣಾಯುಷ್ಯನುಮಾಗಿ ನಳಿನಾನನನಾಱನೆಯ ಕುಳಧರಂ ಪುಟ್ಟಿ ಮರ್ಯಾದಾವಿಪ್ರತಿಪತ್ತಿಯಿಂದಮುಳ್ಳಾರ್ಯಜನಕ್ಕಾಘಾಟಶುದ್ಧಿಯಂ ಮಾಡಿ ಸೀಮಂಧರನೆಂಬನಾದಂ ಆ ಮಹಾಪುರುಷನಿಂ ಬೞಿಯಮನೇಕವರ್ಷಕೋಟ್ಯಂತರದೊಳ್ ಸಪ್ತಶತಶಿಲೀಮುಖಾಸನೋನ್ನತಾಪಘನನುಂ ಪದ್ಮಪ್ರಮಿತಾಯುಷ್ಯನುಮಾಗಿ ಪದ್ಮವದನನೇೞನೆಯ ಕುಳಧರಂ ಪುಟ್ಟಿ,

ಬನಕಂ ಪೊಲಕಂ ನಡೆಯ
ಲ್ಕಿನಿಸಾಱದೆ ಮಱುಗುವಾರ್ಯರಂ ಕಂಡು ಮನೋ
ಜನಿತದಯಂ ಕರಿಹರಿವಾ
ಹನಂಗಳಂ ಪಡೆದು ವಿಮಳವಾಹನನಾದಂ ೫೮

ವ॥ ಆತನಿಂ ಬೞಿಯುಮಸಂಖ್ಯಾತವರ್ಷಂಗಳ್ ಸಲೆ ಪಂಚಸಪ್ತತ್ಯುತ್ತರಷಟ್ಛತಬಾಣಾಸನೋತ್ಸೇಧನುಂ ಪದ್ಮಾಂಗಪ್ರಮಿತಾಯುಷ್ಯನುಮಪ್ಪೆಂಟನೆಯ ಮನು ಪುಟ್ಟಿ,

ಸುತಮುಖಕಮಳಾಲೋಕನ
ಮತಿವಿಸ್ಮಯಮಾಗೆ ಮಱುಗುವಾರ್ಯಜನಕ್ಕಾ
ಯತಿಯುಕ್ತಂ ತದ್ಯುಕ್ತಿಯ
ನತಿವಿದಿತಂಮಾಡಿ ತಿಳಿಪಿದಂ ಚಕ್ಷುಷ್ಮಂ ೫೯

ವ॥ ಆತನ ಅನಂತರ ಅನೇಕ ಕೋಟಾಕೋಟಿ ವರ್ಷಗಳು ಕಳೆದಮೇಲೆ ಏಳುನೂರಾಇಪ್ಪತ್ತೈದು ಧನುಸ್ಸಿನಷ್ಟು ಎತ್ತರವುಳ್ಳವನೂ, ನಲಿನ ಪ್ರಮಾಣಾಯುಷ್ಯನೂ ಕಮಲಮುಖನೂ ಆದ ಆರನೆಯ ಕುಲಧರನು ಹುಟ್ಟಿದನು. ಅವನು (ಕಲ್ಪವೃಕ್ಷಗಳ) ಸೀಮಾವಿಪ್ರತಿಪತ್ತಿಯಿಂದ (ಗಡಿ ವಿವಾದದಿಂದ) ತೊಳಲುತ್ತಿದ್ದ ಆರ್ಯಜನಕ್ಕೆ (ಗಿಡ ಪೊದರು ಮೊದಲಾದ ಚಿಹ್ನೆಗಳ ಮೂಲಕ) ಸೀಮಾಶುದ್ಧಿಯನ್ನುಂಟುಮಾಡಿ ಸೀಮಂಧರನೆಂದು ವಿಖ್ಯಾತನಾದನು. ಆ ಮಹಾಪುರುಷನ ಬಳಿಕ ಅನೇಕ ಕೋಟಾಕೋಟಿ ವರ್ಷಗಳು ಕಳೆದಮೇಲೆ ಏಳುನೂರು ಧನುಸ್ಸಿನ ಪ್ರಮಾಣಯುಕ್ತ ದೇಹವುಳ್ಳ ಪದ್ಮಪ್ರಮಿತಾಯುಷ್ಯವನುಳ್ಳ ಪದ್ಮವದನನೂ ಆದ ಏಳನೆಯ ಕುಲಧರನು ಜನ್ಮವಡೆದು, ೫೮. ವನಕ್ಕೂ ಹೊಲಗಳಿಗೂ ಸ್ವಲ್ಪವೂ ನಡೆಯಲಿಕ್ಕಾಗದೆ ಪರಿತಪಿಸುತ್ತಿದ್ದ ಆರ್ಯರನ್ನು ಕಂಡು ಅವನು ಮರುಗಿದನು. ಅವರಿಗಾಗಿ ಆನೆ, ಕುದುರೆ ಮುಂತಾದ ವಾಹನಗಳನ್ನು ಸೃಷ್ಟಿಸಿ ವಿಮಲವಾಹನನೆಂದು ವಿಶ್ರುತನಾದನು. ವ॥ ಅನಂತರ ಅಸಂಖ್ಯಾತ ವರ್ಷಗಳು ಕಳೆಯಲಾಗಿ ಆರುನೂರೆಪ್ಪತ್ತೈದು ಧನುಃಪರಿಮಾಣವುಳ್ಳವನೂ ಪದ್ಮಾಂಗಪರಿಮಿತಾಯುಷ್ಯನೂ ಆದ ಎಂಟನೆಯ ಮನು ಹುಟ್ಟಿದನು. ೫೯. ಜನರಿಗೆ ಮಕ್ಕಳ ಮುಖದ ದರ್ಶನವೇ ಅಚ್ಚರಿಯನ್ನುಂಟು[1] ಮಾಡುತ್ತಿತ್ತು. ಅದಕ್ಕಾಗಿ ಜನರು ಮರುಗುತ್ತಿದ್ದರು. ಮನುವು ಆರ್ಯರಿಗೆ ಯುಕ್ತಿಯುಕ್ತವಾದ ಮಾತನ್ನಾಡಿ ತಿಳಿವಳಿಕೆ ಹೇಳಿದನು. ಆ ಮನುವಿನ ಹೆಸರು

---

1 ಆ ಕಾಲದವರೆಗೆ ಮಕ್ಕಳು ಹುಟ್ಟಿದೊಡನೆ ತಂದೆ ತಾಯಿಗಳು ಸಾಯುತ್ತಿದ್ದರು. ಮಕ್ಕಳನ್ನು ನೋಡುವ ಸಂಭವವೇ ಅವರಿಗಿರಲಿಲ್ಲ. ಆದ್ದರಿಂದ ಆಶ್ಚರ್ಯವಾಯಿತು.

ವ|| ಅಂತಾತನಿಂ ಬೞಿಯಂ ಕೆಲವುಕಾಲಂ ಕೞಿಯೆ ಪಂಚಾಶದಧಿಕಷಟ್ಛತಚಾಪೋತ್ಸೇಧವಪುವುಂ ಕುಮುದಪರಿಮಿತಾಯುಷ್ಯನುಮಪ್ಪೊಂಭತ್ತನೆಯ ಮನು ಪುಟ್ಟಿ,

ಪೆಸರಿಲ್ಲದಾರ್ಯರೆಂಬೀ
ಪೆಸರೊಳ್ ಮುಂನಡೆಯೆ ನಡೆಯದೀ ವ್ಯವಹಾರಂ
ಪೆಸರಿಲ್ಲದೊಡೆಂದಾ ಮನು
ಪೆಸರಿಟ್ಟು ಯಶಸ್ವಿಯೆಂಬ ಪೆಸರಂ ಪಡೆದಂ ೬೦

ವ|| ಆತನಿಂ ಬೞಿಯಮನೇಕಸಂವತ್ಸರಸಹಸ್ರಾತಿಕ್ರಮದೊಳ್ ಪಂಚವಿಂಶತ್ಯಧಿಕಷಟ್ಛತಧನುರುತ್ಸೇಧನುಂ ಕುಮುದಾಂಗಸಂಖ್ಯಾತವರ್ಷಾಯುಷ್ಯನುಮಾಗಿ ದಶಮಕುಲಧರಂ ಪುಟ್ಟಿ ಚಂದ್ರನಂ ತೋಱಿ ಕೂಸುಗಳಾನಾಡಿಸುವುದಂ ತೋಱುವನಪ್ಪುದಱಿಂದಾತನಭಿಚಂದ್ರನೆಂಬ ನಾಮಮೆಸೆಯೆ ಪೆಸರ್ವಡೆದಂ, ಆ ಮನುವಿನ ಕಡೆಯೊಳನೇಕವರ್ಷಸಹಸ್ರಂ ಸಲೆ ಷಟ್ಛತಕಾಂಡಾಸನೋತ್ಸೇಧರಶರೀರನು ಮಯುತಪ್ರಮಾಣಾಯುಷ್ಯನುಮಾಗಿ ಪನ್ನೊಂದನೆಯ ಕುಳಧರಂ ಪುಟ್ಟಿ,

ಮಂಜಿನ ಮೞಿಯೊಳ್ ಮಸುಳ್ದಿರೆ
ಕಂಜಪ್ರಿಯಕುಮುದಬಂಧುಗಳ್ ಜನಮಂ ನೀ
ಮಂಜಲಿಮೆಂದಱಿವರ್ಮರ್ವಿನ
ಮಂಜಮೆಗೊಟ್ಟಱಿದು ನಿಱಿಸಿದಂ ಚಂದ್ರಾಭಂ ೬೧

ಚಕ್ಷುಷ್ಮಂತ. ವ|| ಆತನ ಬಳಿಕ ಹಲವು ಕಾಲವು ಕಳೆಯಲಾಗಿ ಆರುನೂರಾಐವತ್ತು ಧನುಸ್ಸಿನಷ್ಟು ಎತ್ತರವಿರುವ ದೇಹವುಳ್ಳ ಕುಮುದಮಿತಾಯುಷ್ಯನಾದ ಒಂಬತ್ತನೆಯ ಮನುವು ಹುಟ್ಟಿದನು. ೬೦. ಆರ್ಯರೆಂಬ ಹೆಸರಿನಿಂದಲೇ ವ್ಯವಹಾರವು ಮುನ್ನಡೆಯುತ್ತಿತ್ತು. ಒಬ್ಬೊಬ್ಬರಿಗೂ ಬೇರೆ ಬೇರೆ ಹೆಸರಿಲ್ಲದಿದ್ದರೆ ಈ ವ್ಯವಹಾರವು ಜರುಗದೆಂದು ತಿಳಿದು ಅವರಿಗೆ ಹೆಸರಿಟ್ಟು ಅವನು ಯಶಸ್ವಿಯೆಂಬ ಹೆಸರಿನಿಂದ ಖ್ಯಾತನಾದನು.[1] ವ|| ಆತನಾದ ಮೇಲೆ ಅನೇಕ ಸಹಸ್ರ ವರ್ಷಗಳು ಅತಿಕ್ರಮಿಸಿದುವು. ಆರುನೂರು ಇಪ್ಪತ್ತೈದು ಧನುಸ್ಸುಗಳಷ್ಟು ಎತ್ತರವಿರುವ ಕುಮುದಾಂಗಪ್ರಮಿತವಾದ ಆಯುಷ್ಯವುಳ್ಳ ಹತ್ತನೆಯ ಕುಲಧರನು ಹುಟ್ಟಿದನು. ಅವನು ಚಂದ್ರನನ್ನು ತೋರಿ ಕೂಸುಗಳನ್ನಾಡಿಸುವ ವಿಧಾನವನ್ನು ಹೇಳಿಕೊಟ್ಟಕಾರಣ ಅಭಿಚಂದ್ರನೆಂಬ ಹೆಸರಿನಿಂದ ಪ್ರಖ್ಯಾತನಾದನು. ಅವನ ಕೊನೆಯಲ್ಲಿ ಅನೇಕ ಸಂವತ್ಸರಗಳು ಕಳೆದುಹೋಗಲು ಆರುನೂರು ಧನುಸ್ಸುಗಳಷ್ಟು ಎತ್ತರದ ದೇಹವುಳ್ಳ ಅಯುತ[2] ಪ್ರಮಾಣಾಯುಷ್ಯನಾಗಿ ಹನ್ನೊಂದನೆಯ ಕುಲಧರನು ಹುಟ್ಟಿದನು. ೬೧. ಮಂಜಿನ ಮಳೆಯಲ್ಲಿ ಸೂರ್ಯಚಂದ್ರರು ಕಾಂತಿಗುಂದಿದ್ದರು. ಅದನ್ನು ಕಂಡು ಜನರು

---

1 ಮಕ್ಕಳನ್ನು ಆಶೀರ್ವದಿಸುವ ಬಗೆಯನ್ನು ಆರ್ಯರಿಗೆ ಹೇಳಿಕೊಟ್ಟುದರಿಂದ ಯಶಸ್ವಾನ್ ಎಂದು ಹೆಸರಾಯಿತೆಂದು ಪೂರ್ವಪುರಾಣದಲ್ಲಿದೆ. (೩-೧೨೮)

2 ಪೂರ್ವ ಪುರಾಣದಲ್ಲಿ 'ನವುತ' 'ನಯುತ' ಎಂಬೆರಡು ಪಾಠಗಳು ದೊರೆಯುತ್ತವೆ. 'ನಯುತ' ಎಂಬುದನ್ನಾಶ್ರಯಿಸಿ ಪಂಪನು ಆಯುತ ಎಂದು ಬರೆದಿರಬಹುದು. ನ + ಯುತ = ಆಯುತ.

ವ|| ಆತನ ಕಡೆಯೊಳಸಂಖ್ಯೇಯವರ್ಷಾನಂತರವಿರಾಮದೊಳ್ ಪಂಚಸಪ್ತತ್ಯುತ್ತರಪಂಚಶತ ಶರಾಸನೋತ್ಸೇಧಸಂಹನನುಂ ಅಯುತಾಂಗಾಯುಷ್ಯನುಮಾಗಿ ಪನ್ನೆರಡನೆಯ ಕುಲಧರಂ ಪುಟ್ಟಿದಂದು,

ತುಱುಗಿದ ಮುಗಿಲಾ ಮುಗಿಲಿಂ
ದೆಱಗುವ ಮೞೆ ಕದಡಿ ಬರ್ಪ ತೊಱೆ ಬೆಟ್ಟು ತೆವರ್
ಮೊಱಡುಜಲಧಿಗಳೆನೆ ಜನ
ಮಱೆಯಱೆಯೆ ದಲುದ್ದಬಿದ್ದಮಾಯ್ತವನಿತಳಂ ೬೨

ವ|| ಅಂತು ಕರ್ಮಭೂಮಿಸ್ಥಿತಿಯೊಳುಪನದ್ಯುಪಸಮುದ್ರಮುಪಪರ್ವತಂಗಳತಿಪ್ರಕಟಮಾಗೆ ಸೋಪಾನಪದ್ಧತಿಗಳೊಳ್ ಗಿರಿದುರ್ಗಾರೋಹಣಮುಮಂ ದ್ರೋಣಿಯಾನಪಾತ್ರಾದಿಗಳೊಳ್ ಜಲದುರ್ಗೋತ್ತರಮಣುಮನುಪದೇಶಂಗೆಯ್ದು,

ಇದು ಕರ್ಮಭೂಮಿಯಂದಂ
ಪೊದಟ್ಟು ತೋಱಿದುದು ಭೋಗಭೂಮಿಸ್ಥಿತಿ ಕುಂ
ದಿದುದೆಂದು ಪೇೞ್ದು ಮನು ಜಸ
ಮೊದವೆ ಮರುದ್ದೇವನೆಂಬ ಪೆಸರಂ ಪಡೆದಂ ೬೩

ವ|| ಆತನ ಕಡೆಯೊಳುಚಿತಮನ್ವಂತರವ್ಯತಿಕರಣದೊಳ್,

ಆತತಯಶೋವಿತಾನನ
ಜಾತಭಯಂ ಪೂರ್ವಪರಿಮಿತಾಯುಷ್ಯಂ ಸಂ
ಜಾತದಯಂ ಪಂಚಾಶದು
ಪೇತಧನುಃಪಂಚಶತಸಮುಚ್ಛ್ರತದೇಹಂ ೬೪

ಹೆದರಿದರು. ಅವರನ್ನು 'ಅಂಜದಿರಿ' ಎಂದು ಸಂತೈಸಿ ಅವರ ಅಂಜುಬುರುಕತನವನ್ನು ಆತನು ಹೋಗಲಾಡಿಸಿದನು. ಆತನೇ ಚಂದ್ರಾಭನು. ವ|| ಅವನ ಅನಂತರ ಲೆಕ್ಕವಿಲ್ಲದಷ್ಟು ಸಂವತ್ಸರಗಳು ಕಳೆಯಲು ಐದುನೂರೆಪ್ಪತ್ತೈದು ಧನುಸ್ಸಿನಷ್ಟು ಎತ್ತರವುಳ್ಳ ದೇಹವಿರುವ, ಅಯುತಾಂಗಾಯುಷ್ಯನಾದ ಹನ್ನೆರಡನೆಯ ಮನುವು ಹುಟ್ಟಿದನು. ೬೨. ಆಕಾಶವನ್ನೆಲ್ಲ ವ್ಯಾಪಿಸಿಕೊಂಡ ಮೋಡಗಳಿಂದ ಸುರಿಯುವ ಮಳೆ, ಅದರಿಂದ ಕದಡಿ ಬರುವ ನದಿ ಇವುಗಳಿಂದ ಬೆಟ್ಟ ದಿಣ್ಣೆ ದಿಬ್ಬಗಳು ತುಂಬಿಕೊಂಡು ಜನರು ಆಶ್ರಯವೊಂದನ್ನು ಹುಡುಕಿಕೊಳ್ಳುವಷ್ಟು ಭೂತಳವು ಜಲಸಾಂದ್ರವಾಯಿತು. ವ|| ಹಾಗೆ ಕರ್ಮಭೂಮಿ ಸ್ಥಿತಿಯಲ್ಲಿ ಉಪನದಿಗಳೂ ಉಪಸಮುದ್ರಗಳೂ ಉಪಪರ್ವತಗಳೂ ಪ್ರಕಟಗೊಂಡವು. ಸೋಪಾನಪದ್ಧತಿಯಿಂದ ಗಿರಿದುರ್ಗಾದಿಗಳ ಆರೋಹಣಕ್ರಮವನ್ನೂ ದೋಣಿ ತೆಪ್ಪ ಮುಂತಾದುವುಗಳಿಂದ ನೀರುದಾಟುವ ಕ್ರಮವನ್ನೂ ಆತನು ಉಪದೇಶ ಮಾಡಿದನು. ೬೩. "ಇದು ಕರ್ಮಭೂಮಿ, ಅಂದಗೆಟ್ಟು ಈ ರೀತಿ ಆಯಿತು. ಭೋಗಭೂಮಿ ಸ್ಥಿತಿಯು ಈಗ ಕುಂದಿ ಹೋಗಿದೆ" ಎಂದು ಹೇಳಿ ಯಶಃಪಾತ್ರನಾಗಿ ಮರುದ್ದೇವನೆಂಬ ಹೆಸರಿನಿಂದ ಆತನು ಪ್ರಖ್ಯಾತಿಗೊಂಡನು. ವ|| ಆತನ ಬಳಿಕ ಉಚಿತ ಮನ್ವಂತರವ್ಯತಿಕ್ರಮವಾದ ಮೇಲೆ ೬೪. ಯಶೋಭಾಜನನೂ, ನಿರ್ಭೀತನೂ, ಪೂರ್ವ

ವ॥ ಪದಿಮೂಱನೆಯ ಕುಲಧರಂ ಪುಟ್ಟಿ,

ಪಸರಿಸೆ ಜರಾಯುಪಟಲಂ
ಪಸುಗೂಸುಗಳೊಡಲೊಳವನಗಲ್ಚುವ ಮತಿಯಂ
ವಸುಮತಿಗಱಿಪಿ ಮಹಾತ್ಮಂ
ಪ್ರಸೇನಜಿನ್ನಾಮಧೇಯಮಂ ಪ್ರಕಟಿಸಿದಂ ೬೫

ವ॥ ಆತನಿಂ ಬೞಿಯಮಸಂಖ್ಯೇಯವರ್ಷಪ್ರಮಿತ ಮನ್ವಂತರಾತಿಕ್ರಮದೊಳ್ ಪದಿನಾಲ್ಕನೆಯ ಮನು ಪುಟ್ಟಿದಂ, ಆತಂ,

ಶಶಿವಿಶದಯಶಂ ನಿಜಕುಲ
ವಿಶೇಷಕಂ ಕರುಣಿ ಪಂಚವರ್ಗಾಧಿಕಪಂ
ಚಶತಶರಾಸನತನು ಬುಧ
ಕುಶೇಶಯೋದ್ಬೋಧಕರಲಸತ್ತಿಗ್ಮಕರಂ ೬೬

ಸುಖದ ಕಣಿಯೆನಿಸಿ ಪೂ
ರ್ವಕೋಟಿಪರಮಾಯು ನಾಭಿನಾಮಮುಮಾಯ್ತ
ರ್ಭಕನಿಕರನಾಭಿನಾಳ
ಪ್ರಕರನಿಕರ್ತನಮನಱಿಯೆ ಪೇೞ್ದುದಱಿಂದಂ ೬೭

ಸಹಜಮಣಿಭೂಷಣಂಗಳ
ಬಹಳೋದ್ಯದ್ದೀಪ್ತಿಯಿಂದೆ ಚಂದ್ರಾದಿತ್ಯ
ಗ್ರಹತಾರಾನಕ್ಷತ್ರದಿ
ನಹರ್ನಿಶಂ ಬೆಳಗುವಮರಗಿರಿಯನೆ ಪೋಲ್ತಂ ೬೮

ಪರಿಮಿತಾಯುಷ್ಯನೂ ದಯಾವಂತನೂ ಐದುನೂರೈವತ್ತು ಧನುಸ್ಸಿನಷ್ಟು ಎತ್ತರವಾದ ದೇಹವುಳ್ಳವನೂ ಆಗಿ ಹದಿಮೂರನೆಯ ಕುಲಧರನು ಹುಟ್ಟಿದನು. ವ॥ ಹದಿಮೂರನೆಯ ಕುಲಧರನು ಹುಟ್ಟಿ ೬೫. ಹಸುಗೂಸುಗಳ ಒಡಲ ಮೇಲೆ ಪ್ರಸರಿಸಿದ ಗರ್ಭಕೋಶದ ಪೊರೆಯನ್ನು ಕಳಚುವ ವಿಧಾನವನ್ನು ಜನರಿಗೆ ಹೇಳಿಕೊಟ್ಟನು. ಅವನು ಪ್ರಸೇನಜಿತ್[1] ಎಂಬ ಹೆಸರಿನಿಂದ ವಿಶ್ರುತನಾದನು. ವ॥ ಆತನಾದ ಮೇಲೆ ಅಸಂಖ್ಯಾತ ವರ್ಷಯುಕ್ತವಾದ ಮನ್ವಂತರಾತಿಕ್ರಮದಲ್ಲಿ ಹದಿನಾಲ್ಕನೆಯ ಮನುವು ಹುಟ್ಟಿದನು. ೬೬. ಅವನು ಚಂದ್ರನಂತೆ ಶುಭ್ರವಾದ ಕೀರ್ತಿಯುಳ್ಳವನು. ಅವನು ತನ್ನ ಕುಲದಲ್ಲಿ ಶ್ರೇಷ್ಠನೆನಿಸಿದವನು, ದಯಾಶಾಲಿ, ಐದುನೂರಿಪ್ಪತ್ತೈದು ಧನುಸ್ಸಿನಷ್ಟು ಎತ್ತರವಾದ ದೇಹವುಳ್ಳವನು. ವಿದ್ವಾಂಸರೆಂಬ ಕಮಲಗಳನ್ನರಳಿಸುವ ಕಿರಣಗಳಿಂದ ಕೂಡಿದ ಸೂರ್ಯ. ೬೭. ಸುಖಕ್ಕೆ ಅವನು ಗಣಿ, ಪೂರ್ವಕೋಟಿಯವರೆಗೆ ಪರಮಾಯುಷ್ಯವುಳ್ಳವನು. ಮಕ್ಕಳ ಹೊಕ್ಕಳನ್ನು ಕತ್ತರಿಸುವ ವಿಧಾನವನ್ನು ಜಗತ್ತಿಗೆ ಹೇಳಿಕೊಟ್ಟವನು. ಆದ್ದರಿಂದ ನಾಭಿಯೆಂದು ಹೆಸರಾಂತನು. ೬೮. ಅವನು ತನ್ನ ಸಹಜವಾದ ರತ್ನಾಭರಣಗಳ ಕಾಂತಿಯಿಂದ ಚಂದ್ರ,

---

1 ಪ್ರಸೇನ = ಜರಾಯು, ಗರ್ಭದ ಪೊರೆ.

ಮಕರಸರಿಜ್ಜಳನಿಧಿ ಮ
ತ್ಸ್ಯಕೂರ್ಮಚಂದ್ರಾರ್ಕಲಕ್ಷಣಂ ಪದಯುಗದೊಳ್
ಪ್ರಕಟಂ ನೆಲಸೆ ಚರಾಚರ
ಮೆ ಕಾಲ್ಗೆ ಬಂದೆಱಗಿದಂದದಿಂ ಸೊಗಯಿಸುಗುಂ ೬೯

ಮನುಗಳೊಳೀತನೆ ಪದಿನಾ
ಲ್ಕನೆಯಾತಂ ತಪ್ಪದಪ್ಪನೆನಿಸಿಯುಮಂತಾ
ಮನುಗಳೊಳೀತನೆ ಮೊದಲಿಗ
ನೆನಿಸಿದನೇಂ ನಾಭಿ ನಾಭಿಯೋ ಗುಣಗಣದಾ ೭೦

ವ॥ ಆ ನಾಭಿರಾಜನ ಕಾಲದೊಳ್ ಪಯೋಧರಕಾಲಸ್ವರೂಪಂ ಚಿತ್ರರೂಪದಿಂ ನಭೋಭಾಗಮಂ ಪರ್ವಿದಾಗಳ್,

ತ್ರಿದಶಶರಾಸನಂ ತಳಿರ ತೋರಣಮಾಗಿರೆ ಕುಕ್ಕಿನೋಳಿ ಚೆ
ಲ್ವಿದಿರ್ಗೊಳೆ ಬರ್ಪ ಸೊಂನಲಿಗೆಯಾಗೆ ನಿಜಧ್ವನಿ ತೂರ್ಯಮಾಗೆ ರಾ
ಗದಿನಿನರಶ್ಮಿಯೆಂಬ ಕಸಮಂ ಕಳೆದಂಬರಮೆಂಬ ಪಾೞನೇ
ಱದುದಸಿತಾಂಬುವಾಹಕುಳಮೆಂಬ ಕುಟುಂಬಕದಂಬಕೋತ್ಕರಂ ೭೧

ನವಮೇಘಧ್ವನಿ ಪುಷ್ಕರಧ್ವನಿ ತರತ್ತಾರಾಳಿ ಪುಷ್ಪೋಪಹಾ
ರವಿಳಾಸಂ ರುಚಿರಾಂಬುದಂ ಯವನಿಕಾವಿನ್ಯಾಸಮಾದಲ್ಲಿ ಚಿ
ತ್ರವಿಧಂ ಬಂದವಸರ್ಪಿಣೀನಟನ ಪೇಟ್ಕೊಂದಂದದಿಂದೆತ್ತಮಾ
ಡೆ ವಿಯದ್ರಂಗದೊಳಂದವೇಂ ನಲಿದುದೋ ವಿದ್ಯುನ್ನಟೀನರ್ತನಂ ೭೨

ಸೂರ್ಯ, ಗ್ರಹ, ತಾರಾ ನಕ್ಷತ್ರಗಳಿಂದ ಹಗಲು ರಾತ್ರಿ ಬೆಳಗುತ್ತಿರುವ ಮೇರುಪರ್ವತಕ್ಕೆಣೆಯಾದನು. ೬೯. ನಾಭಿಯ ಕಾಲುಗಳಲ್ಲಿ ಮೊಸಳೆ, ಹೊಳೆ, ಸಮುದ್ರ, ಆನೆ ಮತ್ತು ಚಂದ್ರ ಸೂರ್ಯರ ಚಿಹ್ನೆಗಳು ಸ್ಪಷ್ಟವಾಗಿ ತೋರುತ್ತಿದ್ದುವಾದ್ದರಿಂದ ಚರಾಚರ ಜಗತ್ತೆಲ್ಲವೂ ಅವನ ಕಾಲುಗಳಿಗೆ ನಮಸ್ಕರಿಸಿದಂತೆ ತೋರಿದುವು. ೭೦ ಮನುಗಳಲ್ಲಿ ಈತನು ಹದಿನಾಲ್ಕನೆಯವನಾಗಿದ್ದರೂ ಅವರಲ್ಲಿ ನಾಭಿಯು ಮೊದಲಿಗನಾಗಿದ್ದಂತೆ ಕಂಡುಬಂದನು. ಅವನು ಗುಣಗಣಕ್ಕೆ ಕೇಂದ್ರಸ್ಥಾನನಾಗಿದ್ದನು. ವ॥ ಆ ನಾಭಿರಾಜನ ಕಾಲದಲ್ಲಿ ಜಲವನ್ನು ಧರಿಸಿದ ಮೇಘಗಳುಳ್ಳ ಕಾಲಸ್ವರೂಪವು ಚಿತ್ರರೂಪದಿಂದ ಆಕಾಶಭಾಗವನ್ನು ಹಬ್ಬಿತು. ಆಗ ೭೧. ಕಾಮನ ಬಿಲ್ಲು ತಳಿರ ತೋರಣವಾಯಿತು. ಸಾರಸಪಕ್ಷಿಗಳ ಸಾಲು ಇದಿರ್ಗೊಳ್ಳಲು ಬಂದ ಕಲಶವಾಯಿತು. ಮೋಡದ ಗುಡುಗಿನ ಶಬ್ದವು ವಾದ್ಯಧ್ವನಿಯಾಯಿತು. ಪ್ರೀತಿಯಿಂದ ಸೂರ್ಯರಶ್ಮಿಯೆಂಬ ಕಸವನ್ನು ಕಳೆದು, ಆಕಾಶವೆಂಬ ಬಂಜರುಭೂಮಿಯನ್ನು-ಹೊಲವನ್ನು ಕೃಷ್ಣಮೇಘಕುಲವೆಂಬ ಕುಟುಂಬ ಕದಂಬಕಗಳ[1] ಸಮೂಹವು ಏರಿತು. ೭೨. ಹೊಸದಾದ ಮೋಡದ ಧ್ವನಿಯು ನಗಾರಿಯ ಧ್ವನಿಯಾಯಿತು. ಪ್ರಕಾಶಮಾನ ನಕ್ಷತ್ರಸಮೂಹವು ಪುಷ್ಪೋಪಹಾರದ ವಿಲಾಸವನ್ನು ತಳೆಯಿತು.

---

1 ಕುಟುಂಬಕದಂಬಕೋತ್ಕರ = ಪುದ್ಗಲಗಳ ರಾಶಿ (?) ನೋಡಿ : - 'ಅರಬ್ಧಃ ಸೂಕ್ಷ್ಮ ಪುದ್ಗಲೈ' : (ಪೂ. ಪು. ೩-೧೬೬) ಅಥವಾ ಅನೇಕ ರೈತ ಕುಟುಂಬಗಳ ಸಮುದಾಯ.

ವ॥ ಅಂತು ಕೊಂಡ ಪದವಳಿಗಳೊಳ್ ಕಲಮಷಷ್ಟಿಕಾವ್ರೀಹಿಯವಯಾವನಾಳಗೋಧೂಮ ಕಂಗುಶ್ಯಾಮಾಕಕೋದ್ರವನೀವಾರತಿಲಾತಸಿಮಸೂರಿಕಾಕುಲಿತ್ಥಮುದ್ಗಮಾಷ ರಾಜಮಾಷಾಢಕೀನಿಷ್ಪಾವಚಣಕಕುಸುಂಭ ಕಾರ್ಪಾಸಸರ್ಷಪಜೀರಕಧಾನ್ಯಕಾದಿ ವಿವಿಧ ಧಾನ್ಯಭೇದಂಗಳುಂ ಕಲ್ಪವೃಕ್ಷಪರಿಕ್ಷಯದೊಳ್ ಪ್ರಜಾಜೀವನೋಪಾಯಹೇತುಗಳಕೃಷ್ಟಪಚ್ಯಂಗಳಾಗಿ,

ಬೆಳೆದೆಱಗಿರೆಯುಮವಂ ಪು
ಲ್ಗಳೆಂದೆ ಬಗೆದಳುರ್ವ ಪಸಿವನಾಮೇಗೊಂಡೇಂ
ಗಳ ಗೆಯ್ವೆವೆಂದು ಪಶ್ಚಿಮ
ಕುಳಧರನೆನೆ ನೆಗಟ್ಟಿ ನಾಭಿಯಲ್ಲಿಗೆ ವಂದರ್ ೭೩

ಬಂದತಿದೀನಮುಖರ್ ನೆಱೆ
ದೆಂದರ್ ಮರಪಟ್ಟು ಕುಡದೆ ಕಲ್ಪಮಹೀಜಂ
ನಿಂದುವು ಜಠರಾನಳನಿಂ
ಬೆಂದುವು ತನು ಬಾಟ್ಟುಪಾಯಮಾವುದು ದೇವಾ ೭೪

ಒಡಲನುಣಿಸಿಲ್ಲದಾಗಳ್
ನ್ನಡಪುವುದರಿದಾವನನ್ಯಶರಣರೆಮೆಮ್ಮಂ
ನಡಪುಪದೇಶದಿನಲ್ಲದೊ
ಡೊಡಗಟಿದಪೆವಸುವನಿಲ್ಲಿ ನಿನ್ನಡಿಮೊದಲೊಳ್ ೭೫

ಸುಂದರವಾದ ಮೋಡವು ತೆರೆಯ ರೂಪವನ್ನು ತಾಳಿತು. ಚಿತ್ರವಿಚಿತ್ರವಾಗಿ ಬಂದ ಅವಸರ್ಪಿಣಿಕಾಲವೆಂಬ ನಟನು ಹೇಳಿದೊಂದು ಅಂದದಿಂದ ಎತ್ತಲೂ ಆಡಲಾಗಿ ಆಕಾಶವೆಂಬ ರಂಗಸ್ಥಳದಲ್ಲಿ ವಿದ್ಯುನ್ನಟೀನರ್ತನವು ಸೊಗಸಾಗಿ ಜರುಗಿತು. ವ॥ ಅಂತು ಹದವಾದ ಮಳೆಗಳಲ್ಲಿ (ಹೊಲಗದ್ದೆಗಳಲ್ಲಿ) ಜನಜೀವನಕ್ಕೆ ಸಾಧಕವಾದ ಭತ್ತ, ಅರವತ್ತು ದಿನಗಳಲ್ಲಿ ಬೆಳೆಯುವ ಭತ್ತ, ಯಾವನಾಳ, ಗೋಧಿ, ನವಣೆ, ಸಾವೆ, ಬರಗು, ತೃಣಧಾನ್ಯ, ಎಳ್ಳು, ತಲಮಸೂರಿಗೆ, ಹುರುಳಿ, ಉದ್ದು, ತಡುಗುಣಿ, ತೊಗರಿ, ಅವರೆ, ಕಡಲೆ, ಕುಸುಮೆ, ಹತ್ತಿ, ಸಾಸುವೆ, ಜೀರಿಗೆ, ಕೊತ್ತಂಬರಿ ಮೊದಲಾದ ಬೇರೆಬೇರೆ ಧಾನ್ಯಭೇದಗಳು, ಕಲ್ಪವೃಕ್ಷ ಪರಿಕ್ಷೀಣಾವಸ್ಥೆಯಲ್ಲಿ, ಉತ್ತು ಬಿತ್ತದೆ ತಮ್ಮಷ್ಟಕ್ಕೆ ತಾವೆ, ೭೩. ಬೆಳೆದು ನೆಲಕ್ಕೊರಗಿದ್ದ ಧಾನ್ಯಗಳನ್ನು ಹುಲ್ಲೆಂದೇ ಜನರು ಭಾವಿಸಿದರು. "ನಾವು ಹಸಿವಿನ ಬಾಧೆಯಿಂದ ಪೀಡಿತರಾಗಿದ್ದೇವೆ; ಏನು ಮಾಡೋಣ?" ಎಂದು ಪಶ್ಚಿಮಕುಲಧರನೆಂದು ಪ್ರಸಿದ್ಧಿಗೊಂಡ ನಾಭಿಯ ಬಳಿಗೆ ಜನರು ಬಂದರು. ೭೪. ಅವರು ಅತಿ ದೀನಮುಖರಾಗಿ "ಈ ಕಲ್ಪವೃಕ್ಷಗಳು ಮೈಮರೆತು ಏನನ್ನೂ ಕೊಡದಿವೆ. ಜಠರಾಗ್ನಿಯು ನಮ್ಮನ್ನು ಕಾಡುತ್ತಿದೆ. ಈ ದೇಹಗಳು ಉಳಿದುಕೊಳ್ಳುವ ಬಗೆಯೆಂತು?" ಎಂದು ಕೇಳಿಕೊಂಡರು. ೭೫. "ಒಡಲಿಗೆ ಅನ್ನವಿಲ್ಲದಿದ್ದರೆ ಜೀವಿಸುವುದು ಕಷ್ಟ. ನಾವು ಅನನ್ಯಶರಣರು. ಈ ದೇಹಯಾತ್ರೆಯನ್ನು ನಡಸಿಕೊಳ್ಳುವ ಉಪಾಯವನ್ನು ಹೇಳಿಕೊಡಿ. ಇಲ್ಲದಿದ್ದರೆ ತಮ್ಮ ಪಾದಮೂಲದಲ್ಲಿಯೇ ಪ್ರಾಣಗಳನ್ನು ಕಳೆದುಕೊಳ್ಳುವೆವು" ಎಂದರು.

ಎಂಬುದುಮಂಜದಿರೆಂದಮೃ
ತಾಂಬುವನುಗುಳ್ವಭಯವಚನದಿಂದಾಱಿಸಿ ರ
ಕ್ತಾಂಬುಜದ ಚೆಲ್ವನಭಯಕ
ರಾಂಬುಜಮಳವಡಿಸೆ ನಾಭಿರಾಜಂ ನುಡಿದಂ ೭೬

ಬಗೆಯಲ್ವೇಡ ಸುಧಾಮಹೀರುಹದೊಳಾದೌದಾರ್ಯಮಂ ವೀರ್ಯಮೀ
ಯುಗದೊಳ್ ತತ್ತರುಗಿಲ್ಲ ಪಕ್ವಫಲನಮ್ರಾಮ್ರಾದಿಭೂಜಂಗಳೀ
ಯುಗದೊಳ್ ಕಲ್ಪಕುಜಂಗಳಿಂತಿವಱ ಪಣ್ ಭೋಜ್ಯಂಗಳಾರೋಗ್ಯಹೇ
ತುಗಳೀ ಪಣ್ಗಳೆ ಭೋಜ್ಯಮೆಂದು ವಿಳಸದ್ಭಾಗ್ಯೋದಯಂ ತೋಱಿದಂ ೭೭

ವ॥ ತೋಱೆ ಫಳಪಾಕಾಂತಂಗಳಪ್ಪೌಷಧಿಗಳಂ ಸ್ತಂಬಕರ್ಯಾದಿ ನಾನಾ ವಿಧ ಧಾನ್ಯಂಗಳಂ ಪದನಱಿದುಡುಗುವ ಕಣಂಮಾಡುವೊಕ್ಕುವಡುಕುವ ಬಯ್ತಿಡುವಕ್ಕಿಮಾಡುವ ವಿವಿಧಭಾಜನಂಗಳೊಳಡುವ ಘೃತಲವಣತೈಲಕ್ಷೀರದಧಿವ್ಯಂಜನಂಗಳೊಳ್ ಸಂಸ್ಕಾರಂಮಾಡುವಳವಿಯಱಿದುಣ್ಬುಪಾಯಮಂ ಪುಂಡ್ರೇಕ್ಷುದಂಡಂಗಳಂ ಕಡಿಕಡಿದು ಯಂತ್ರಪೀಡನೆಯಿಂ ರಸಂಗೊಳ್ವ ತೆಱನುಮನಱಿಯೆ ಪೇೞ್ದು

ಚ್ಯುತಿಯಾಗೆ ಭೋಗಭೂಮಿ
ಸ್ಥಿತಿ ಕಲ್ಪಮಹೀರುಹವ್ಯಪಾಯದೊಳಿಂತುಂ
ಕ್ಷಿತಿಪತಿ ಕಲ್ಪಮಹೀಜ
ಸ್ಥಿತಿಯಿಂ ತಾನಿಂತು ಜನಮನೇಂ ನಿಱಿಸಿದನೋ ೭೮

೭೬. 'ಅಂಜದಿರಿ' ಎಂದು ಅಮೃತಮಯವಾದ ಮಾತುಗಳಿಂದ ಅವರನ್ನು ಸಮಾಧಾನಗೊಳಿಸಿ, ರಕ್ತಾಂಬುಜವನ್ನು ಹೋಲುವ ಅಭಯಹಸ್ತದಿಂದ ನಾಭಿರಾಜನು ಹೇಳಿದನು: ೭೭. "ಚಿಂತಿಸದಿರಿ ಸುಧಾಮಹೀರುಹಕ್ಕೆ (ಕಲ್ಪವೃಕ್ಷಕ್ಕೆ) ಈ ಯುಗದಲ್ಲಿ ಬೇಡಿದ್ದನ್ನೆಲ್ಲ ಕೊಡುವ ಔದಾರ್ಯವಾಗಲೀ ವೀರ್ಯವಾಗಲೀ ಇಲ್ಲ. ಕಳಿತ ಹಣ್ಣುಗಳಿಂದ ಬಾಗಿದ ಮಾವೇ ಮೊದಲಾದ ವೃಕ್ಷಗಳು ಈ ಯುಗದಲ್ಲಿ ಕಲ್ಪವೃಕ್ಷಗಳು. ಈ ವೃಕ್ಷಗಳ ಹಣ್ಣುಗಳೇ ಭೋಗ್ಯವಾದುವು. ಮತ್ತು ಆರೋಗ್ಯಕರವಾದುವು" ಎಂದು ಭಾಗ್ಯೋದಯನಾದ ನಾಭಿಯು ಹೇಳಿ ಅವನ್ನು ತೋರಿದನು. ವ॥ ಫಲಪಾಕಾಂತಗಳಾದ ಓಷಧಿಗಳನ್ನೂ ನೆಲ್ಲೇ ಮೊದಲಾದ ಹಲವು ಬಗೆಯ ಧಾನ್ಯಗಳನ್ನೂ ಹದನರಿತು ಸ್ವಚ್ಛಮಾಡುವುದನ್ನೂ ಕಣಮಾಡಿ ಒಕ್ಕುವುದನ್ನೂ ಅಡಕುವುದನ್ನೂ ಮುಚ್ಚಿಡುವುದನ್ನೂ ಅಕ್ಕಿಮಾಡುವುದನ್ನೂ ವಿವಿಧ ಪಾತ್ರೆಗಳಲ್ಲಿ ಅಡಿಗೆಮಾಡುವುದನ್ನೂ ತುಪ್ಪ, ಉಪ್ಪು, ಎಣ್ಣೆ, ಹಾಲು, ಮೊಸರು ಮತ್ತು ವ್ಯಂಜನವಸ್ತುಗಳಿಂದ ಸಂಸ್ಕಾರ ಮಾಡುವುದನ್ನೂ ಶಕ್ತಿಗೆ ತಕ್ಕಂತೆ ತಿನ್ನುವ ವಿಧಾನವನ್ನೂ ಬಗೆಬಗೆಯ ಕಬ್ಬುಗಳನ್ನು ಕಡಿದು ಯಂತ್ರಕ್ಕೆ ಕೊಟ್ಟು ರಸತೆಗೆಯುವುದನ್ನೂ ತಿಳಿಯುವಂತೆ ಹೇಳಿದನು. ೭೮. ಕಲ್ಪವೃಕ್ಷಗಳಿಲ್ಲದೆ ಹೋಗಲು ಭೋಗಭೂಮಿಸ್ಥಿತಿಯು ಚ್ಯುತವಾಯಿತು. ಆದರೆ ನಾಭಿರಾಜನು ಕಲ್ಪವೃಕ್ಷಸದೃಶವಾದ ಮಾವಿನ ಗಿಡಗಳೇ ಮುಂತಾದುವುಗಳಿಂದ ಜೀವನವನ್ನು ನಿರ್ವಹಿಸುವಂತೆ ಹೇಳಿ ಜನರನ್ನು ನೆಲೆಗೊಳಿಸಿದನು.

ಕುಳಧರನುಂ ಕುಳಕರನುಂ
ಕುಳತಿಳಕನುಮೆನಿಪ ನಾಭಿರಾಜಂಗೆ ಲತಾ
ಲಳಿತೆ ದಳಿತಾಂಬುಜಾನನೆ
ವಿಳಾಸಲಾವಣ್ಯಕಾಂತಿಯುತೆ ಸತಿ ರತಿವೊಲ್ ೭೯

ಮರುದೇವಿಯೆಂಬಳಂಬರ
ಚರನರಸುರಯುವತಿರೂಪಸರ್ವಸ್ವಮನಾ
ದರದೆ ಬಿದಿ ನೆಱಪಿ ಲಲನಾ
ಸ್ವರೂಪದಿಂ ನಿಜೆಸಿತೆನ್ನದಿನ್ನೇವೊಗಳ್ವೆಂ ೮೦

ಪೊಳೆವಲರ್ಗಣ್ ಚಾಮರಮೆನೆ
ಲಳಿತಭ್ರೂಲತೆ ಪತಾಕೆಯೆನೆ ಪೆರ್ಮೊಲೆ ಪೊಂ
ಗಳಸಮೆನೆ ಮದನಮಂಗಳ
ವಿಳಾಸಚಿಹ್ನಂಗಳವಯವಂಗಳ್ ಸತಿಯಾ ೮೧

ಮದಕೋಕಿಳಕಳನಿನದೆಯ
ವದನಸುಧಾಸೂತಿ ಬೆಳಗೆ ಪೆಳಱೆದ ತಮಮಿಂ
ಪುದಿದು ಪೆಱಗಿರ್ದುದೆನಿಪುದು
ಮದಗಜಗಮನೆಯ ವಿನೀಳಕೇಶಕಳಾಪಂ ೮೨

ಘನಕುಚಕಳಶೆಯ ಮುಖರಸ
ವನಧಿಯಿನೊಗೆದೊಂದುಬಿಂದುವಿಂದು ಕರಂ ಚೆ
ಲ್ವೆನೆ ಮೆಱೆವ ಕುಮುದಕುವಳಯ
ವನಂಗಳಾಕೆಯ ಕಟಾಕ್ಷವಿಕ್ಷೇಪಂಗಳ್ ೮೩

೭೯. ನಾಭಿರಾಜನು ಕುಲಧರ, ಕುಲಕರ, ಮೇಲಾಗಿ ಕುಲತಿಲಕ, ಅವನಿಗೆ ಲತೆಯಂತೆ ಕೋಮಲೆಯೂ ಅರಳಿದ ಕಮಲದಂತೆ ಮುಖವುಳ್ಳವಳೂ ರತಿಯಂತೆ ವಿಲಾಸ ಲಾವಣ್ಯ ಕಾಂತಿಯುತೆಯೂ ಆದ ಸತಿ ಇದ್ದಳು. ೮೦. ಅವಳು ಮರುದೇವಿ. ಅವಳನ್ನು ಬ್ರಹ್ಮನು ವಿದ್ಯಾಧರಸ್ತ್ರೀಯರಲ್ಲಿಯೂ ಸುರನರ ಯುವತಿಯರಲ್ಲಿಯೂ ರೂಪಸರ್ವಸ್ವವನ್ನೂ ಆದರದಿಂದ ಒಟ್ಟುಗೂಡಿಸಿ ಸ್ತ್ರೀರೂಪದಿಂದಿರಿಸಿದನು. ಅಂದಮೇಲೆ ಅವಳನ್ನು ಏನೆಂದು ಹೊಗಳಲಿಕ್ಕೆ ಸಾಧ್ಯ? ೮೧. ಹೊಳೆಯುತ್ತಿರುವ, ಹೂವಿನಂತೆ ಚೆಲುವಾದ ಅವಳ ಕಣ್ಣು ಚಾಮರದಂತಿತ್ತು. ಸುಂದರವಾದ ಭ್ರೂಲತೆಯು ಪತಾಕೆಯಂತಿತ್ತು. ದಪ್ಪವಾದ ಮೊಲೆಗಳು ಚಿನ್ನದ ಕಲಶದಂತಿದ್ದುವು. ತತ್ಫಲವಾಗಿ ಆ ಸತಿಯ ಅವಯವಗಳು ಕಾಮನ ಮಂಗಳಕರವಾದ ವಿಲಾಸಚಿಹ್ನೆಗಳಂತೆ ತೋರುತ್ತಿದ್ದುವು. ೮೨. ಮದಿಸಿದ ಕೋಗಿಲೆಯಂತೆ ಇಂಪಾದ ಧ್ವನಿಯುಳ್ಳವಳಾಗಿ ಮದಗಜಗಮನೆಯಾದ ಮರುದೇವಿಯ ಮುಖಚಂದ್ರನು ವಿರಾಜಿಸುತ್ತಿರಲು, ಚಂದ್ರನಿಗೆ ಹೆದರಿ ಕತ್ತಲೆಯು ಒಟ್ಟುಸೇರಿ ಹಿಂದೆ ಅಡಗಿದೆಯೋ ಎಂಬಂತೆ ಅವಳ ನೀಲಕೇಶಕಲಾಪವು ರಂಜಿಸಿತು. ೮೩. ತೋರವಾದ ಕುಚಕಲಶಗಳನ್ನು ಪಡೆದ ಮರುದೇವಿಯ ಮುಖಕಾಂತಿಯೆಂಬ ಸಮುದ್ರದಿಂದ ಸಿಡಿದ ಒಂದು ಹನಿಯೋ

ಮದನತರುಕುಸುಮಮಂಜರಿ
ಮದನಾಂಬುಧಿವೇಳೆ ಮದನಮದಗಜವಿಳಸ
ನ್ಮದಲೇಖೆ ಮದನಲಕ್ಷ್ಮೀ
ಮದಲಕ್ಷ್ಮಿಯೆನಲ್ ಮದೇಭಗಮನೆಯೆ ತಕ್ಕಳ್ ೮೪

ಮೊಗಮಂ ತಾವರೆ ಕಣ್ಣನುತ್ಪಳದಳಂ ಧಮ್ಮಿಲ್ಲಮಂ ಸೋಗೆ ಸೆ
ಳ್ಳುಗುರಂ ಕೇದಗೆ ಪುರ್ಬನಂಗಜನ ಬಿಲ್ ದಂತಾಳಿಯಂ ಮುತ್ತು ಕೈ
ಮುಗಿದಾರಾಧಿಸಿ ಪೋಲ್ತುವೆನ್ನದೆ ಸರೋಜಾತಾದಿ ನಿಸ್ಸಾರವ
ಸ್ತುಗಳೊಳ್ ಪೋಲಿಸುವಂತುಟೇಮ್ಮರುಳನೇ ರೂಪಂ ವಿಚಿತ್ರಾಂಗಿಯಾ ೮೫

ಪಿರಿದುಂ ವಿಭೂತಿಯಿಂದಂ
ಸುರರಾಜನ ಬೆಸದೊಳಮರನಾಯಕರೆಲ್ಲಂ
ನೆರೆದು ವಿವಾಹಮನಾಕೆಗೆ
ದೊರೆಕೊಳಿಸಿದರಿಂತು ನೋಂತ ಕಾಂತೆಯರೊಳರೇ ೮೬

ಆ ಭುವನನಾಭಿಯೆನಿಸಿದ
ನಾಭಿಮಹೀಭುಜಭುಜಾಂತರಾಳಂ ಲಕ್ಷ್ಮೀ
ವ್ಯಾಭಾಸಿ ಮತ್ತಮತಿಶಯ
ಶೋಭೆಯನಾ ಕಾಂತೆಯಿರವಿನೊಳ್ ನೂರ್ಮಡಿಕುಂ ೮೭

ಧವಳಾಪಾಂಗವಿಲೋಕನಾಮೃತಮಯಂ ಭೂಲಕ್ಷ್ಮರಮ್ಯಂ ಮನೋ
ಭವರಾಜ್ಯೋದಯಹೇತು ಚಾರುಮರುದೇವೀವಕ್ತ್ರಚಂದ್ರಂ ಸಲೀ
ಲವಿಳಾಸಸ್ಮಿತಚಂದ್ರಿಕಾಪ್ರಸರದಿಂದೋಪಂಗೆ ನೇತ್ರೋತ್ಪಳೋ
ತ್ಸವಮಂ ಮಾಡಿಯುಮೇನೊ ಮಾಡುವುದು ತಚ್ಚಿತ್ತಾಂಬುಧಿಕ್ಷೋಭಮಂ ೮೮

ನಿಶ್ಚಯವಾಗಿ ಚಂದ್ರನಾಗಿದ್ದಾನೆ! ಆಕೆಯ ಕಲಾಕ್ಷವಿಕ್ಷೇಪಗಳೇ ಕುಮುದಕುವಲಯ ವನಗಳು! ೮೪. ಗಜಗಮನೆಯಾದ ಮರುದೇವಿಯು ಕಾಮನೆಂಬ ವೃಕ್ಷದ ಹೂವಿನ ಗೊಂಚಲು. ಅವಳು ಕಾಮಸಮುದ್ರದ ತಟ, ಕಾಮನೆಂಬ ಮದ್ದಾನೆಯ ವಿಲಸನ್ಮದದ ಗೆರೆ. ಮದನಲಕ್ಷ್ಮಿಗೆ ಮದಲಕ್ಷ್ಮಿಯೆನಿಸಿಕೊಳ್ಳಲು ಆ ಗಜಗಮನೆಯೇ ತಕ್ಕವಳು. ೮೫. ಮುಖವನ್ನು ತಾವರೆಯೂ ಕಣ್ಣನ್ನು ಉತ್ಪಲದಳವೂ ಕೇಶರಾಶಿಯನ್ನು ನವಿಲುಗರಿಯೂ ಸೆಳ್ಳುಗುರನ್ನು ಕೇದಗೆಯೂ ಹುಬ್ಬುಗಳನ್ನು ಕಾಮನಬಿಲ್ಲೂ ಹಲ್ಲುಗಳ ಸಾಲನ್ನು ಮುತ್ತೂ ಕೈಕಟ್ಟಿ ಆರಾಧಿಸಿ ಹೋಲಿದುವು. ಈ ವಿಚಿತ್ರಾಂಗಿಯ ರೂಪವನ್ನು ಕಮಲಾದಿ ನಿಸ್ಸಾರವಸ್ತುಗಳೊಡನೆ ಹೋಲಿಸುವಷ್ಟು ಮರುಳನು ನಾನೆಂದಿಗೂ ಅಲ್ಲ! ೮೬. ಸುರರಾಜನ ಆಜ್ಞೆಯು ಫಲವಾಗಿ ಸುರನಾಯಕರೆಲ್ಲರೂ ಕಲೆತು ಅತಿವಿಜೃಂಭಣೆಯಿಂದ ಆಕೆಗೆ ನಾಭಿರಾಜನೊಡನೆ ವಿವಾಹವನ್ನು ಏರ್ಪಡಿಸಿದ್ದರು. ಇಷ್ಟು ಪುಣ್ಯಮಾಡಿದ ಕಾಂತೆಯರು ಮತ್ತೆಲ್ಲಿ ಇದ್ದಾರು? ೮೭. ಭುವನಶ್ರೇಷ್ಠನಾದ ನಾಭಿರಾಜನ ತೋಳುಗಳ ಮಧ್ಯವು ಲಕ್ಷ್ಮಿಯಿಂದ ಶೋಭಿಸಿತು. ಈ ಕಾಂತೆಯ ಇರವಿನಿಂದಲಂತೂ ಅದು ನೂರ್ಮಡಿಯಷ್ಟು ಶೋಭಾತಿಶಯವನ್ನು ಪಡೆಯಿತು. ೮೮. ಮರುದೇವಿಯ ಮುಖಚಂದ್ರನು ಮುಗುಳ್ನಗೆಯೆಂಬ ಬೆಳದಿಂಗಳಿಂದ

ವ॥ ಅಂತನ್ಯೋನ್ಯಪ್ರೇಮಸಂಜಾತಸ್ವಾಂತಸಂಪತ್ಪರಂಪರಾಪರಿಗತಮಾಗಿ ನಿಳಿಂಪದಂಪತಿಯನೆ ಪೋಲ್ವ ತದ್ದಂಪತಿಯಿಂದಂ ಪವಿತ್ರೀಭೂತಮಪ್ಪ ಭೂತಳೋದ್ದೇಶದೊಳುತ್ಪತ್ಸ್ಯಮಾನಭಾವಿತೀರ್ಥಕರಪುಣ್ಯದೂತಾಹೂತಂ ಪುರುಹೂತಂ ಬಂದು,

ಕೆದಱಿ ಮನುಷ್ಯದಂಪತಿಗಳಿರ್ದುವನೊಂದೆಡೆಯೊಳ್ ತೆರಳ್ಚಿ ನಾ
ಕದ ಫಣಿಲೋಕದಂಕದ ಪೊಟಿಲ್ಗಳವೀ ಪೊಟಿಲೊಂದು ರಮ್ಯಹ
ರ್ಮ್ಯದ ಬೆಲೆಗಂಬರಲ್ ನೆಱೆಯವೆಂಬಿನಮುಜ್ಜ್ವಳಪಂಚರತ್ನಭಾ
ಸ್ವದಸದನಂಗಳಿಂ ನೆಱೆದುದಂ ಸಮೆದಂ ಪುರಮಂ ಪುರಂದರಂ ೮೯

ಕನಕಗಿರಿಶಿಖರರತ್ನಾಂ
ಶುನಿಕಾಯಂ ಬೆಳಗೆ ಮೊಳೆದು ಪಜ್ಜಳಿಸುತ್ತಿ
ರ್ಪಿನಪಥಮಣಿಮುಕುರದೊಳಿಂ
ದ್ರನ ಪೊಟಿಲಾ ಪೊಟಿಲ ನೆಟಿಲನನುಕರಿಸಿರ್ಕುಂ ೯೦

ಆ ಪುರಲಲನೆಯ ಕೇಶಕ
ಳಾಪದವೊಲ್ ಮಧುಪನಿಕರನಿಳಯಂ ಸುಮನ
ಶ್ಶ್ರೀಪರಿಪೂರ್ಣಮನಂಗನ
ಕಾಪೆನೆ ಸೊಗಯಿಪುದು ಬಳಸಿದುದ್ಯಾನವನಂ ೯೧

ನಾಭಿರಾಜನ ನೇತ್ರೋತ್ಪಲಗಳಿಗೆ ಉತ್ಸವವನ್ನು ಮಾಡಿದರೂ ಅವನ ಚಿತ್ತಾಂಬುಧಿಯನ್ನು ಕ್ಷೋಭೆಗೊಳಿಸುವನು! ಅವಳ ಶುಭ್ರವಾದ ಅಪಾಂಗವಿಲೋಕನವೇ ಮುಖಚಂದ್ರದ ಅಮೃತ. ಹುಬ್ಬುಗಳೆಂಬ ಕಲಂಕದಿಂದ ಆ ಚಂದ್ರನು ರಮ್ಯನು, ಮನ್ಮಥ ರಾಜ್ಯೋದಯಕ್ಕೆ ಹೇತು. ವ॥ ಅನ್ಯೋನ್ಯ ಪ್ರೇಮದಿಂದುಂಟಾದ ಸಂಪತ್ತುಗಳಿಂದ ಮೆರೆಯುವವರಾಗಿ ಮರುದೇವೀ ನಾಭಿರಾಜರು ದೇವದಂಪತಿಗಳನ್ನು ಹೋಲಿದರು. ಅವರಿಂದ ಪವಿತ್ರವಾದ ಭೂತಳದಲ್ಲಿ ಜನಿಸಲಿರುವ ತೀರ್ಥಂಕರನ ಪುಣ್ಯವೆಂಬ ದೂತನಿಂದ ಆಹೂತನಾಗಿ ಇಂದ್ರನು ಬಂದನು. ೮೯. ಚದುರಿದಂತೆ ವಾಸಿಸುತ್ತಿದ್ದ ಮನುಷ್ಯ ದಂಪತಿಗಳ ಮನೆಗಳನ್ನೆಲ್ಲ ಒಟ್ಟುಗೂಡಿಸಿ, ನಾಕಲೋಕ ಫಣಿಲೋಕಗಳಲ್ಲಿ ಕಟ್ಟಲಾದ ವಿಖ್ಯಾತ ಪಟ್ಟಣಗಳೂ ಈ ಪಟ್ಟಣದ (ಅಯೋಧ್ಯೆಯ) ಒಂದು ಪ್ರಾಸಾದದ ಬೆಲೆಗೂ ಬಾರದವೋ ಎಂಬಂತೆ ಉಜ್ವಲವೂ ಪಂಚರತ್ನಗಳಿಂದ ಭಾಸುರವೂ ಆದ ಮನೆಗಳಿಂದ ಕೂಡಿರುವ ಪಟ್ಟಣವನ್ನು (ಅಯೋಧ್ಯೆಯನ್ನು) ಇಂದ್ರನು ನಿರ್ಮಿಸಿದನು. ೯೦. ಮೇರುಪರ್ವತದ ಶಿಖರದ ರತ್ನಕಾಂತಿಗಳು ಹರಡಿರುವಾಗ ಸೂರ್ಯಪಥವೆಂಬ ಆಕಾಶಮಾರ್ಗವೇ ಒಂದು ಕನ್ನಡಿ. ಇಂದ್ರನ ಅಮರಾವತಿಯು ನಾಭಿರಾಜನಗರಿಯ ನೆರಳೆಂಬಂತೆ ಆ ಕನ್ನಡಿಯಲ್ಲಿ ತೋರುತ್ತಿತ್ತು! ೯೧: ಆ ಪುರವನಿತೆಯ ಕೇಶಸಮೂಹದಂತೆ ಅಳಿಕುಲದಿಂದ ನೀಲವೂ, ಕುಸುಮಶ್ರೀಭರಿತವೂ ಆದ ಪುರದ ಸುತ್ತಲಿದ್ದ ಉದ್ಯಾನವು ಮನ್ಮಥನ ಪ್ರಾಕಾರದ

ತುಂಬಿ ಗಿಳಿ ಪುರುಳಿ ಕೋಗಿಲೆ
ಯೆಂಬಿವುವೆರಸಮರತರುಗಳಿಂದ್ರನ ಬೆಸದಿಂ
ದಂ ಬಂದುವೆಂದೊಡುಪವನ
ಮಂ ಬಣ್ಣಿಸಲೆನಗೆ ನಾಡೆಯುಂ ಕುಜಿಪಲ್ತೇ ೯೨

ವಿಳಸದಳಿಗೀತಮುತ್ಕೋ
ಕಿಳನಾದಂ ಸಾಳಕಾನನಂ ಸತ್ತಿಳಕಂ
ಲಳಿತಲತಾಂಗಂ ರಮಣೀ
ವಿಳಾಸಮಂ ವನವಿಳಾಸಮೇನಿಟಿಸಿದುದೋ ೯೩

ಎಳಸುವ ಪುರುಳಿಯ ಗಳಪುವ
ಗಿಳಿಯ ತೆಱಂದಿರಿದು ಮೊರೆವ ಪೆಣ್ದುಂಬಿಯ ಬಿ
ಚ್ಚಳಿಪ ಪರಭೃತದ ಕಳಕಳ
ದೊಳೆ ಮಸುಳ್ದುದು ದಿವಿಜಯುಗಳಕಳಕಳನಿನದಂ ೯೪

ಸಾರಸಹಕಾರಧಾರಾ
ಸಾರಂ ಕೊಳದಳವಿಯಂತೆ ಸುರಿತರೆ ಪಲವುಂ
ಧಾರಾಗೃಹಂಗಳತನುವಿ
ಕಾರಮನೊದವಿಪುದು ದೇವದಂಪತಿಗದಱಿೊಳ್ ೯೫

ಕುಸುಮಾಪಚಯವ್ಯಸನಾ
ವಸಕ್ತ ಸುರಯುವತಿಪಾಣಿಪಲ್ಲವರಾಗಂ
ಮುಸುಕಿದುದೆನಿಸಿದುದಸುಗೆಯ
ಪೊಸದಳಿರ್ಗಳೊಳೆಸೆವ ಕಂಪು ನಂದನವನದೊಳ್ ೯೬

ಗೋಡೆಯಂತೆ ಸೊಗಯಿಸಿತು. ೯೨. ದುಂಬಿ, ಗಿಳಿ, ಹೆಣ್ಣುಗಿಳಿ, ಕೋಗಿಲೆಗಳಿಂದ ಕೂಡಿದ ದೇವವೃಕ್ಷಗಳೆಲ್ಲವೂ ಇಂದ್ರನ ಆಜ್ಞೆಯಿಂದ ಅಲ್ಲಿಗೆ ಬಂದುವೆಂದಮೇಲೆ ಆ ಉದ್ಯಾನವನ್ನು ವರ್ಣಿಸಲು ನನಗೆ ಪರಮಾವಧಿಯಾಗಲಿಲ್ಲವೆ? ೯೩. ದುಂಬಿವಿಂಡಿನ ಗಾನದಿಂದಲೂ ಕೋಗಿಲೆಯ ಕುಹೂರವದಿಂದಲೂ ಸಾಲತಿಲಕಾದಿ ವೃಕ್ಷಗಳಿಂದಲೂ ಕೋಮಲವಾದ ಬಳ್ಳಿಗಳಿಂದಲೂ ಯುಕ್ತವಾದ ವನವಿಲಾಸವು, ದುಂಬಿಗಳ ಗಾನದಂತಿರುವ ಗಾನವುಳ್ಳ, ಕೋಗಿಲೆಯ ನಾದದಂತಿರುವ ನಾದವುಳ್ಳ, ತಿಲಕಯುಕ್ತವಾದ ಮುಂಗುರುಳಿಂದ ಭೂಷಿತವಾದ ಮುಖವುಳ್ಳ ಕೋಮಲಾಂಗವುಳ್ಳ ಸುಂದರಿಯ ವಿಲಾಸವನ್ನು ಧಿಕ್ಕರಿಸಿತು. ೯೪. ತನ್ನ ನಲ್ಲನನ್ನು ಬಯಸುತ್ತಿರುವ ಹೆಣ್ಣು ಗಿಳಿ, ಹರಟುವ ಗಂಡುಗಿಳಿ, ಆನಂದದಿಂದ ಹಾರಾಡುತ್ತಿರುವ ಹೆಣ್ಣು ದುಂಬಿ, ಕೋಗಿಲೆಗಳ ಕುಹೂರವ-ಇವುಗಳ ಕಲಕಲ ಧ್ವನಿಗಳಲ್ಲಿ ದಿವಿಜಮಿಥುನದ ಕಲಕಲಧ್ವನಿಯು ಅಡಗಿ ಹೋಯಿತು. ೯೫. ಕೊಳದ ಬಿಡುಗಂಡಿಗಳಿಂದ ನೀರು ಹರಿದುಬರುವಂತೆ, ಸಾರವತ್ತಾದ ಮಾವಿನಗಿಡಗಳು ತಮ್ಮ ಮಕರಂದವನ್ನು ಸುರಿಸುತ್ತಿದ್ದುವು. ಅವೇ ಧಾರಾಗೃಹಗಳಾಗಿ ದೇವದಂಪತಿಗಳಿಗೆ ಕಾಮವಿಕಾರವನ್ನುಂಟುಮಾಡುತ್ತಿದ್ದುವು. ೯೬. ನಂದನವನದ ಅಶೋಕವೃಕ್ಷದ ಹೊಸ ಚಿಗುರುಗಳಲ್ಲಿ ಎಸೆಯುವ ಕೆಂಪುಬಣ್ಣವು, ಹೂ ಕೊಯ್ಯುವುದರಲ್ಲಿ

ಬಾಸಣಿಸಿದುದುತ್ಕಟಕುಸು
ಮಾಸವಸೌರಭದೆ ದೆಸೆಗಳೊಡನಳಿಕುಳಮಂ
ವಾಸವವನಿತಾವದನಾ
ಬ್ಜಾಸವಸೇಕಪ್ರಭಿನ್ನಮುಕುಳಂ ವಕುಳಂ ೯೭

ಕಿಱುನಿಱಿಯೊಳ್ ಕಿಱಿದೆಲೆಗಳ
ತುಱುಗಿದ ಚೆಲ್ವೆಳಸಿ ಬಳಸಿ ವನವನಿತೆಯ ಕಯ್
ನಿಱಿಯೆನೆ ನಿಱಿಗೊಂಡಿರೆ ನಿಱಿ
ನಿಱಿಗನ ನಿಱಿದಳಿರ ನಿಱಿಯನಱಿಯೆಂ ಪೊಗಟಲ್ ೯೮

ಶತಮುಖನರಸಿಗೆ ಕರ್ಣಾ
ವತಂಸಮಾಗಲ್ಕೆ ನೋಂತ ಪಲ್ಲವಪುಷ್ಪ
ಪ್ರತತಿಯನೆ ಮೆಱೆದು ಚೆಲ್ವಡೆ
ಗತಿಶಯಮೆನಿಸಿದುದು ಪಾರಿಜಾತಕುಜಾತಂ ೯೯

॥ತ್ರಿಪದಿ॥

ಸುರಯಿಯೊಳ್ಗಿಳಿ ಮಗುಟ್ವರಗಿಳಿ ಬರಯಿಗೆ
ಮೊರೆವಂತೆ ಮೊರೆವ ಮಱಿದುಂಬ ತಳಿರೊಳ್
ಪರಭೃತಂ ಮಗುಟ್ವ ಪರಭೃತಂ ೧೦೦

ವ॥ ಸೊಗಯಿಸುಗುಂ, ಮತ್ತಮಲ್ಲಿ,

ಸರಯೂತರಂಗಶೀಕರ
ಪರಿಚಿತಮೇಳಾಲವಂಗಕುಸುಮರಜೋಧೂ
ಸರಮಬಳಾಳಕಸಂಚಳ
ತರಳಂ ಪುಟಿಲೊಳಗೆ ಸುಟಿವುದುಪವನಪವನಂ ೧೦೧

ಆಸಕ್ತರಾದ ಸುರಸ್ತ್ರೀಯರ ಹರಡಿದ ಪಾಣಿಪಲ್ಲವರಾಗದಂತೆ ತೋರಿತು. ೯೭. ಶಚೀದೇವಿಯ ಮುಖಕಮಲದ ಮದ್ಯಸೇಚನೆಯಿಂದ ವಕುಲವೃಕ್ಷಗಳಲ್ಲಿನ ಮೊಗ್ಗುಗಳು ಅರಳಿದುವು. ಉತ್ಕಟವಾದ ಕುಸುಮಗಳ ಪುಷ್ಪರಸದ ಸುವಾಸನೆಯಿಂದ ದಿಕ್ಕುಗಳು ದುಂಬಿಗಳ ಗುಂಪನ್ನು ಆಕರ್ಷಿಸಿದುವು. ೯೮. ಉದ್ದಕ್ಕೆ ಚಾಚಿಕೊಂಡಿರುವ ಸಿಹಿಮಾವಿನ ಗಿಡದ ಚಿಕ್ಕಮಡಿಕೆಯ ಚಿಗುರಿನ ಗೊಂಚಲು, ವನಲಕ್ಷ್ಮಿಯ ಕೈನಿರಿಗೆಯ ಚೆಲುವನ್ನು ಪಡೆದಿರಲು, ಆ ಮಾವಿನ ಸೊಗಸನ್ನು ವರ್ಣಿಸಲು ನನಗೆ ಶಕ್ತಿ ಇಲ್ಲ. ೯೯. ಇಂದ್ರನ ಪತ್ನಿಯಾದ ಶಚೀದೇವಿಗೆ ಕರ್ಣಾವತಂಸವಾಗಲೆಂದೇ ತಪಸ್ಸು ಮಾಡಿದ ತಳಿರು ಹೂಗಳ ಸಮೂಹವನ್ನು ಮೆರೆಯಿಸಿ ಪಾರಿಜಾತವೃಕ್ಷವು ಚೆಲುವಿನ ವಿಷಯದಲ್ಲಿ ಅತಿಶಯವೆನಿಸಿತು. ೧೦೦. ಸುರಗಿಯ ಮರದಲ್ಲಿ ಗಿಳಿ ಮತ್ತು ಅದಕ್ಕೆ ಎರಗುವ ಅರಗಿಳಿಗಳೂ, ವಿರಹಿಯನ್ನು ಕಂಡು ಆರ್ಭಟಿಸುವಂತೆ ಮೊರೆಯುವ ಮರಿದುಂಬಿಗಳೂ, ತಳಿರಿನಲ್ಲಿ ಕೋಗಿಲೆಯೂ ಹಿಂದಿರುಗುವ ಕೋಗಿಲೆಗಳೂ, ವ॥ ಸೊಗಯಿಸಿದುವು. ಮತ್ತು ಅಲ್ಲಿ, ೧೦೧. ಸರಯೂ ನದಿಯ ಮಳಲಿನ ಮೇಲೆ ಉದ್ಯಾನವನದ ಗಾಳಿಯು ಬೀಸಿತು. ಅದರ ಅಲೆಗಳ

ವ|| ಮತ್ತಮಕೃತ್ರಿಮಪ್ರಣಯರಸವಿಸರವಶಗತ ವಿಬುಧಮಿಥುನಶತರತರಭಸಬಧಿರೀಕೃತ ಕೃತಕ ಗಿರಿಗಳೊಳಂ ಕೃತಕಗಿರಿಪರೀತನೂತಚೂತಲತಾಲಿಂಗಿತಶಾತಕುಂಭರಂಭಾವನಾಂತರ್ಗತ ಮಣಿಭವನಂಗಳೊಳಂ ಮಣಿಭವನಮರಕತಸೋಪಾನಪಙ್ತಿತಂತನ್ಯಮಾನದೀಪ್ತಿಸಂತಾನಾಮ್ಮತ ನಾನಾನೀರಜರಜಃಪಿಂಜರಿತಜಳಾಶಯಂಗಳೊಳಂ ನೆಱೆದು ಸೊಗಯಿಸುವುದ್ಯಾನವನದ ಕುಸುಮಕಿಸಲಯ ಪರಾಗಪಿಶಂಗಿತರಂಗತ್ತರಂಗಮಾದಂತೆ,

ಕನಕಸರೋಜಸಂಕುಳರಜಃಪಟಲಾರುಣಿತಂ ಸಮಗ್ರಕಾಂ
ಚನಮಯಸಾರದೀಪ್ತಿಜಟಳಂ ಕಳಗೀತವಿಹಂಗಭೃಂಗನಿ
ಸ್ವನಸುಭಗಂ ವಿಚಿತ್ರತರಪತ್ರಮಯಂ ನೆಱೆ ಪೋಲ್ಕುಮಾ ಪುರಾಂ
ಗನೆಯ ಪೊದಟ್ಟ ಹೇಮರಶನಾತ್ರಯಮಂ ಪರಿಖಾತ್ರಯಾಂತರಂ ೧೦೨

ಪರಿಖಾತ್ರಿತಯಕ್ಕೆ ಚತು
ಶ್ಯರಾಸನಾಂತರದೆ ಸುರಶರಾಸನಭಾಬಾ
ಸುರಮೊಪ್ಪಿ ತೋಱುಗುಂ ಪಂ
ಚರತ್ನಪಾಂಶೂಚ್ಚದೀಪ್ತಿದೀಪ್ತಂ ವಪ್ರಂ ೧೦೩

ವ|| ಆ ವಪ್ರಪ್ರಮುದೆಗೆ,

ಆಕಾಶಾಂತಮನೆಯ್ದೆ ನೀಳ್ದ ವಿಕಟಾಟ್ಟಾಲಂಗಳೊಳ್ ಕೇತನಾ
ನೀಕಂಗಳ್ ರವಿರಶ್ಮಿಗಳ್ ಪುಗಲೆವೇಡೀ ರಶ್ಮಿಗಳ್ ಸಾಲ್ದುಮಿಂ
ತೇಕಜ್ಞಂ ಬೆಳಗೆಂಬವೊಲ್ ತುಱುಗಿ ತಳ್ತಿಂಬಪ್ಪಿನಂ ಕಾಂಚನ
ಪ್ರಾಕಾರಂ ನಿಲೆ ತಾಳ್ದುಗುಂ ಕೃತಯುಗಪ್ರಾಕಾರದಾಕಾರಮಂ ೧೦೪

ತುಂತುರುಗಳಿಂದಲೂ ಏಲಾಲವಂಗ ಪುಷ್ಪಗಳ ಧೂಳಿಗಳಿಂದಲೂ ಅದು ಕೂಡಿತ್ತು. ಅದು ಅಬಲೆಯರ ಮುಂಗುರುಳುಗಳನ್ನು ಅಲುಗಾಡಿಸುತ್ತಿತ್ತು. ವ|| ಮತ್ತು ಸಹಜ ಪ್ರೇಮರಸಾಧೀನರಾದ ದೇವದಂಪತಿಗಳ ರತಿಕೂಜಿತಗಳಿಂದ ವ್ಯಾಪ್ತವಾದ ಬೆಟ್ಟಗಳಲ್ಲಿಯೂ ಕೃತ್ರಿಮವಾದ ಬೆಟ್ಟಗಳಲ್ಲೊಗೆದ ಶ್ರೇಷ್ಠವಾದ ಮಾವಿನ ಬಳ್ಳಿಗಳಿಂದ ಅಪ್ಪಲ್ಪಟ್ಟ ಚಿನ್ನದ ಬಾಳೆಯ ವನಗಳಲ್ಲಿನ ಮಣಿಭವನಗಳಲ್ಲಿಯೂ ಮಣಿಭವನ ಮತ್ತು ಮರಕತಸೋಪಾನಗಳ ಕಾಂತಿಸಮೂಹದಿಂದಿಡಿದ ಹಲವು ಬಗೆಯ ಕಮಲಗಳ ಧೂಳಿಯಿಂದ ಹೊಂಬಣ್ಣವಡೆದ ಜಲಾಶಯಗಳಲ್ಲಿಯೂ ನೆರೆದು ಸೊಗಯಿಸುವ ಉದ್ಯಾನದ ಹೂತಳಿರುಗಳ ಧೂಳಿಯಿಂದ ಕಂದುಬಣ್ಣಕ್ಕೆ ತಿರುಗಿದ ಅಲೆಗಳಿಂದ ಪುರದ ಪರಿಖಾತ್ರಯವು ಕೂಡಿತ್ತು. ಹಾಗೆಯೇ, ೧೦೨. ಆ ಪುರಾಂಗನೆಯ ಪ್ರಸಿದ್ಧವಾದ ಚಿನ್ನದ ರಸನಾತ್ರಯವನ್ನು ಪರಿಖಾತ್ರಯವು ಹೋಲುತ್ತಿತ್ತು. ಅದು ಸುವರ್ಣಕಮಲದ ಸಮೂಹದ ಧೂಳೀಪಟಲದಿಂದ ಕೆಂಪಾಗಿದೆ. ಸುವರ್ಣಸಾರದ ಕಾಂತಿಯಿಂದ ಕೂಡಿದೆ. ಕೋಗಿಲೆ, ಪಕ್ಷಿ ಮತ್ತು ದುಂಬಿಗಳ ಇನಿದನಿಗಳಿಂದ ಸುಂದರವಾಗಿದೆ. ವಿಚಿತ್ರತರ ಪತ್ರಮಯವಾಗಿದೆ. ೧೦೩. ಆ ಪರಿಖಾತ್ರಿತಯಕ್ಕೆ ನಾಲ್ಕು ಬಿಲ್ಲುಗಳಷ್ಟು ಅಂತರದಲ್ಲಿ ಪ್ರಾಕಾರವು ಕಾಮನಬಿಲ್ಲಿನಂತೊಪ್ಪಿ ತೋರುತ್ತಿತ್ತು. ಪಂಚರತ್ನಗಳ ಮೇಲೆದ್ದ ಕಾಂತಿಗಳಿಂದ ದೀಪ್ತವಾಗಿತ್ತು. ವ|| ಆ ಪ್ರಾಕಾರದ ಮೇಲೆ ೧೦೪. ಆಕಾಶದವರೆಗೂ ವ್ಯಾಪಿಸಿರುವ ಉನ್ನತವಾದ ಬುರುಜುಗಳಿದ್ದುವು. ಅವುಗಳ ಮೇಲೆ ಎದ್ದು ನಿಂತ ಬಾವುಟಗಳು "ಈ

ಸಾಲಹರಿನೀಲಮಣಿಕಿರ
ಣಾಳಿ ಪೊದಟ್ಟಿದೆಸೆಯೆ ರಾಹುಗೆತ್ತಗಿದಿರ್ದ
ಟ್ಟಾಳಿಗೆಗಳಲ್ಲಿ ನಾಡೆಯು
ಮಾಲೋಚಂಬೆರಸು ತಡೆದು ನಡೆವಂ ದಿನಪಂ ೧೦೫

ಎರಡೆರಡಟ್ಟಳಿಗೆ ತರಂ
ಬರದಿಂದೊಂದೊಂದು ಗೋಪುರಂ ಪ್ರವಿರಾಜ
ನ್ಮರಕತಮಣಿತೋರಣಪರಿ
ಕರಿತಂ ಪುರವಧುಗೆ ವದನಮಿರ್ಪಂತಿರ್ಕುಂ ೧೦೬

ವ|| ಅದಱೊಳಗೆ ಸುತ್ರಾಮನೆ ಸೂತ್ರಧಾರನಾಗಿಯುಂ ಕಲ್ಪಜರೆ ಶಿಲ್ಪಿಗಳಾಗಿಯುಂ ಸಮೆದ ಚೆಲ್ವಿಂಗೆ ಸರ್ವತೋಭದ್ರಮೆನಿಸಿದ ಸರ್ವತೋಭದ್ರಂಗಳೊಳಂ ಛಂದೋವಿದ್ಯೆಯಂತೆ ನಾನಾಚ್ಛಂದಮಪ್ಪ ವಳಭಿಚ್ಛಂದಗಳೊಳಂ ನಾಭಿರಾಜಾಂಗಸಂಗತಮಪ್ಪ ನಂದ್ಯಾವರ್ತದಂತೆ ಸೊಗಯಿಸುವ ನಂದ್ಯಾವರ್ತದೊಳಂ ಜನಿಷ್ಯಮಾಣವೃಷಭಜಿನಾವತರಣಮಂಗಳನಿಹಿತ ಕಳಶದರ್ಪಣದಂತೆ ಪ್ರಶಸ್ತ ಸ್ವಸ್ತಿಕಾಯ ಮಾನಸ್ವಸ್ತಿಕಾದಿನಾನಾಮಣಿಮಯಪ್ರಾಸಾದಂಗಳೊಳಂ ವಿವಿಧವೀಥೀಸನಾಥಚತುಷ್ಕ ಶೃಂಗಾಟಕ ವೇದಿಕೆಗಳೊಳಂ ವಂದಿವೃಂದಕ್ಕೆ ಚಿಂತಾಮಣಿಭೂಮಿಯುಂ ಗಾಯಕನಿಕಾಯಕ್ಕೆ ಗಂಧರ್ವಭೂಮಿಯುಂ ಕೃತಸುಕೃತಕ್ಕೆ ತಜ್ಜನ್ಮಭೂಮಿಯುಮಿರ್ಪಂತಿರ್ದ ನಗರಲಲನೆಯ ಲಪನಕ್ಕೆ ಕೇಳೀಲೀಲಾಲಲಾಮ ಲಕ್ಷ್ಮಿಯಂ ತಾಳ್ದಿ

ನಗರದೊಳಗೆ ಸೂರ್ಯರಶ್ಮಿಗಳು ಪ್ರವೇಶಿಸುವುದೇ ಬೇಡ! (ಪ್ರಾಕಾರಗಳ) ರತ್ನರಶ್ಮಿಗಳೇ ಸಾಕು. ಸೂರ್ಯರಶ್ಮಿಗಳ ಬೆಳಕಿನಿಂದಾಗಬೇಕಾದ್ದೇನು?" ಎಂಬಂತಿದ್ದುವು. ಈ ಪ್ರಕಾರವಾಗಿ ಸುಂದರವಾದ ಕಾಂಚನಪ್ರಾಕಾರವು ಕಲಿಯುಗವನ್ನು ಅಡ್ಡಗಟ್ಟಿದ ಪ್ರಾಕಾರದಂತೆ ರಂಜಿಸಿತು. ೧೦೫. ಪ್ರಾಕಾರದ ಇಂದ್ರನೀಲಮಣಿಗಳ ಕಿರಣಗಳ ಸಮೂಹವು ಹೊಮ್ಮಿ ಹೊಳೆಯುತ್ತಿತ್ತು. ಅದನ್ನು ರಾಹುವೆಂದು ತಿಳಿದು ಹೆದರಿ ಹೆದರಿ ಕೋಟೆಯ ಬುರುಜುಗಳಲ್ಲಿ ಆಲೋಚನಾಕ್ರಾಂತನಾಗಿ ಸೂರ್ಯನು ಮೆಲ್ಲಮೆಲ್ಲಗೆ ಸಂಚರಿಸುತ್ತಿದ್ದನು! ೧೦೬. ಎರಡೆರಡು ಅಟ್ಟಳೆಗೆ ಅನುಕ್ರಮವಾಗಿ ಒಂದೊಂದು ಗೋಪುರವುಂಟು. ಅದು ಪ್ರಕಾಶಿಸುತ್ತಿರುವ ಮರಕತಮಣಿತೋರಣಗಳಿಂದ ವಿಭೂಷಿತವಾಗಿ ಪುರವಧುವಿನ ಮುಖವಿದ್ದಂತೆ ತೋರುತ್ತಿತ್ತು. ವ|| ಅದರೊಳಗೆ ಇಂದ್ರನು ಸೂತ್ರಧಾರನಾಗಿಯೂ ಕಲ್ಪಜರು (ದೇವತೆಗಳು) ಶಿಲ್ಪಿಗಳಾಗಿಯೂ ಇದ್ದರು. ಅವರಿಂದ ಸಮೆದ ಚೆಲ್ವಿಗೆ ಅನೇಕ ಮೂಲೆಗಳಿಂದ ಕೂಡಿ ವರ್ತುಲಾಕೃತಿಯಲ್ಲಿ ನಿರ್ಮಿತವಾದ ಸರ್ವತೋಭದ್ರವೆನಿಸಿದ ಮನೆಯಲ್ಲಿಯೂ ಛಂದೋವಿದ್ಯೆಯಂತೆ ನಾನಾಚ್ಛಂದವೆನಿಸಿದ ವಲಭಿಚ್ಛಂದಗಳಲ್ಲಿಯೂ ನಾಭಿರಾಜನ ಅಂಗದಲ್ಲಿರುವ ನಂದ್ಯಾವರ್ತದಂತೆ ನಂದ್ಯಾವರ್ತದ ಹೂವಿನಾಕೃತಿಯಲ್ಲಿ ಸೊಗಯಿಸುವ ಮನೆಗಳಲ್ಲಿಯೂ ಭಾವಿಜಿನನ ಅವತರಣಮಂಗಳಕ್ಕಾಗಿಟ್ಟ ಕಲಶ ದರ್ಪಣದಂತೆ ಶ್ರೇಷ್ಠವಾದ ಸ್ವಸ್ತಿಕದ ಆಕೃತಿಯಲ್ಲಿರುವ ಸ್ವಸ್ತಿಕಾದಿ ನಾನಾಮಣಿಗಳಿಂದ ಖಚಿತವಾದ ಪ್ರಾಸಾದಗಳಲ್ಲಿಯೂ ಬಹುವಿಧವಾದ ಬೀದಿಗಳಿಂದ ಕೂಡಿದ ಚತುಷ್ಕ (ಚೌಕ) ಶೃಂಗಾಟಕ (ಚೌಕದ ವಿಶೇಷ) ಪೇಟಕ(ಪೇಟೆ)ಗಳಲ್ಲಿ ನೆರೆದು ಸ್ತುತಿಪಾಠಕರಾದ

ಧೃತದೇವೇಂದ್ರವಿಮಾನರುಂದ್ರಮಹಿಮಂ ಶ್ರೀಸಪ್ತಕಕ್ಷಾಸಮ
ನ್ವಿತಮಾಲೋಲದುಕೂಲಕೇತನಕುಳಂ ಮಾಣಿಕ್ಯಹರ್ಮ್ಯಾವಳೀ
ವೃತಮುದ್ಘೋತಿತ ಸಪ್ತಭೂಮಿಕಮನೇಕೋದಗ್ರಕೂಟಂ ವಿರಾ
ಜಿತಘಂಟಂ ಕಳಧೌತತುಂಗಕಳಶಂ ಚೆಲ್ವಾಯ್ತು ರಾಜಾಲಯಂ ೧೦೭

ವ॥ ಅಂತು ಸಮೆದ ಪುರವರಕ್ಕರಾತಿನಿಕರಕ್ಕಯೋಧ್ಯೆಯಪ್ಪುದಱಿಂದಯೋಧ್ಯೆಯುಮನೇಕ ನಿಕೇತನಸಮನ್ವಿತಮಪ್ಪುದಱಿಂ ಸಾಕೇತಮುಂ ವಿನೀತಜನಾಕೀರ್ಣಮಪ್ಪುದಱಿಂ ವಿನೀತೆಯುಂ ಭವಿಷ್ಯತ್ಕೌಶಲವಿಷಯಸಹಚರ್ಯದಿಂ ಸುಕೌಶಲೆಯುಮೆಂಬ ಪೆಸರ್ಗಳನಿಟ್ಟು ನಾಭಿರಾಜಂಗೆ ರಾಜ್ಯಾಭಿಷೇಕಂಗೆಯ್ದು ಮರುದೇವಿಮಹಾದೇವಿವೆರಸು ಸಾಮ್ರಾಜ್ಯಪಟ್ಟಮಂ ಕಟ್ಟಿ ಸಕಳಜನ ಮುಮನಾಜ್ಞಾಕರಣವಿಧಾನದೊಳ್ ನಿಯೋಜಿಸಿ ದಿವಿಜಕುಜಜನಿತವಸನಪ್ರಸವವಿಲೇಪನಾಭರಣಂಗಳಿಂ ಪೂಜಿಸಿ ಭಗವದಮರಲೋಕಾವತರಣವಿನಿಹಿತಾಂತಃಕರಣನಾಗಿರ್ಪನ್ನೆಗಂ,

ಜನರಿಗೆ ಚಿಂತಾಮಣಿಯಾದ ಭೂಮಿಯಾಗಿಯೂ ಗಾಯಕವೃಂದಕ್ಕೆ ಗಂಧರ್ವಭೂಮಿ ಯಾಗಿಯೂ, ಪುಣ್ಯವಂತಜನಕ್ಕೆ ಪುಣ್ಯವಜ್ಜನ್ಮಭೂಮಿಯಾಗಿಯೂ ಇದ್ದ ಅಯೋಧ್ಯಾ ನಗರವನಿತೆಯ ಮುಖಕ್ಕೆ ಅರಮನೆಯು ಲೀಲಾಲಲಾಮಲಕ್ಷ್ಮಿಯಾಯಿತು. ೧೦೭. ಎತ್ತರವಾದ ಚಿನ್ನದ ಕಲಶಗಳಿಂದ ಕೂಡಿದ ಆ ರಾಜಾಲಯವು ಚೆಲುವಾಯ್ತು. ಅದು ದೇವೇಂದ್ರವಿಮಾನದ ಮಹಿಮೆಯನ್ನು ಪಡೆದಿತ್ತು. ಏಳು ಅಂತಸ್ತುಗಳಿಂದ ಕೂಡಿದುದು. ಅಲುಗಾಡುತ್ತಿರುವ ರೇಷ್ಮೆಯ ಪತಾಕೆಗಳಿಂದ ವಿರಾಜಿತವಾಗಿ ಮಾಣಿಕ್ಯ ಮಯವಾದ ಪ್ರಾಸಾದಗಳಿಂದ ಮೆರೆಯುತ್ತಿತ್ತು. ಅದು ಸಪ್ತಭೂಮಿಕೆಗಳಿಂದಲೂ ಎತ್ತರವಾದ ಶಿಖರಗಳಿಂದಲೂ ಚಿನ್ನದ ಉತ್ತುಂಗಕಲಶಗಳಿಂದಲೂ ಘಂಟೆಗಳಿಂದಲೂ ವಿರಾಜಿಸುತ್ತಿದ್ದಿತು. ವ॥ ಹಾಗೆ ನಿರ್ಮಿಸಿದ ಆ ಶ್ರೇಷ್ಠವಾದ ಪಟ್ಟಣಕ್ಕೆ ಶತ್ರುಪಕ್ಷದವರಿಂದ ಜಯಿಸಲಾಗದ್ದರಿಂದ ಅಯೋಧ್ಯೆಯೆಂದೂ ಅನೇಕ ಪತಾಕೆಗಳಿಂದ ಮೆರೆಯುತ್ತಿದ್ದ ಮನೆಗಳಿದ್ದುವಾದ್ದರಿಂದ ಸಾಕೇತ[1]ವೆಂದೂ ವಿನೀತರಾದ ಜನರಿಂದ ಕೂಡಿದ್ದಿತಾದ ಕಾರಣ ವಿನೀತೆಯೆಂದೂ ಮುಂದೆ ಅತ್ಯಂತ ಕುಶಲಗಳಿಗೆ ಪಾತ್ರವಾಗುವುದರಿಂದ ಸುಕೌಶಲ ವೆಂದೂ ಇಂದ್ರನು ಹೆಸರನ್ನಿಟ್ಟನು. ಇಂದ್ರನು ನಾಭಿರಾಜನಿಗೆ ರಾಜ್ಯಾಭಿಷೇಕ ಮಾಡಿ ಮರುದೇವಿಮಹಾದೇವಿಯೊಡನೆ ಸಾಮ್ರಾಜ್ಯಪಟ್ಟವನ್ನು ಕಟ್ಟಿದನು. ಸಮಸ್ತ ಜನರನ್ನೂ ಅವನ ಆಜ್ಞಾಪಾಲಕರಾಗಿರುವಂತೆ ಮಾಡಿದನು. ಕಲ್ಪವೃಕ್ಷ ಲಬ್ಧವಾದ ಬಟ್ಟೆ, ಹೂವು, ಗಂಧ ಮತ್ತು ಆಭರಣಗಳಿಂದ ಪೂಜಿಸಿದನು. ಭಗವಾನ್ ವೃಷಭಸ್ವಾಮಿಯು ಅಮರಲೋಕ ದಿಂದ ಭೂಮಿಯಲ್ಲಿ ಅವತರಿಸುವನೆಂಬ ವಿಷಯದಲ್ಲಿ ಇಂದ್ರನು ಆಸಕ್ತಚಿತ್ತನಾಗಿದ್ದನು.

---

1 ಅಕೇತಗಳಿಂದ (ಗೃಹಗಳಿಂದ) ಸಹಿತವಾದುದು ಸಾಕೇತ.

ಸುರರಾಜಂ ತಾನೆ ರಾಜ್ಯಾಭಿಷವಣವಿಧಿಯಂ ಮಾಡಿದಂ ಸ್ವರ್ಗದಿಂದಂ
ಪುರುದೇವಂ ಬಂದಪಂ ನಂದನನೆನಗೆನಿಸಲ್ಕಾನೆ ಸಂಸಾರಸೌಖ್ಯಾ
ಕರನಾಗಿರ್ದಪ್ಪೆನೆಂಬುತ್ಸವದೊಳೆ ಸುಖದಿಂದಿರ್ದನೊಪ್ಪಿರ್ದಯೋಧ್ಯಾ
ಪುರದೊಳ್ ಶ್ರೀನಾಭಿರಾಜಂ ಸುಕವಿಜನಮನೋಮಾನಸೋತ್ತಂಸಹಂಸಂ ೧೦೮

ವ॥ ಆ ಪ್ರಸ್ತಾವದೊಳ್.

ಲಯಮಂ ಕರ್ಮತಮಸ್ತಮಕ್ಕೆ ಜಯಮಂ ಧರ್ಮಕ್ಕೆ ಪೀನಂ ಪರಾ
ಜಯಮುಮಂ ದೋಷಗಣಕ್ಕೆ ಲಕ್ಕೆಶೆಱದಿಂ ಮುಂ ಮಾಡಿ ಸರ್ವಾರ್ಥಸಿ
ದ್ಧಿಯುಮೀಯಲ್ಕೆ ವಿನೇಯಸಂತತಿಗಭಿಪ್ರಾಯಾರ್ಥಸರ್ವಾರ್ಥಸಿ
ದ್ಧಿಯುಮುದ್ಧೂತತಮಮಂ ಬರಲ್ಕೆ ಬಗೆದಂ ಸಂಸಾರಸಾರೋದಯಂ ೧೦೯

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರವಾಕ್ಚಂದ್ರಿಕಾ
ಪ್ರಸರಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ನಾಭಿರಾಜರಾಜ್ಯಲಾಭವರ್ಣನ
ಷಷ್ಠಾಶ್ವಾಸಂ

೧೦೮. "ದೇವೇಂದ್ರನು ಸ್ವತಃ ರಾಜ್ಯಾಭಿಷೇಕಕಾರ್ಯವನ್ನು ನೆರವೇರಿಸಿದನು. ಪುರುದೇವನು ನನಗೆ ಮಗನಾಗಿ ಹುಟ್ಟಲು ಬರುವನು. ನಾನೇ ಸಂಸಾರಸೌಖ್ಯಕ್ಕೆ ಆಗರ" ಎಂದುಕೊಂಡು ಅತ್ಯುತ್ಸಾಹದಿಂದ ಸುಕವಿಜನಮಾನಸೋತ್ತಂಸಹಂಸನಾದ ನಾಭಿರಾಜನು ಅಯೋಧ್ಯಾಪುರದಲ್ಲಿ ಸುಖದಿಂದ ಇದ್ದನು. ವ॥ ಆ ಸಂದರ್ಭದಲ್ಲಿ ೧೦೯. ಕರ್ಮವೆಂಬ ಕತ್ತಲೆಯ ಸಮೂಹಕ್ಕೆ ನಾಶವನ್ನೂ ಧರ್ಮಕ್ಕೆ ಅತಿಯಾದ ಜಯವನ್ನೂ ದೋಷ ಸಮೂಹಕ್ಕೆ ಸಾವಿರಾರು ರೀತಿಗಳಿಂದ ಅಪಜಯವನ್ನೂ ಮೊದಲೇ ಮಾಡಿ, ಶಿಷ್ಯರಿಗೆ ಸರ್ವಾರ್ಥಸಿದ್ಧಿಯನ್ನು ಕೊಡುವುದಕ್ಕಾಗಿ ಅಭಿಲಷಿತಸರ್ವಾರ್ಥಸಿದ್ಧಿಗಳಿಂದ ಅಜ್ಞಾನವನ್ನು ಕೊಡಹಿಕೊಂಡು ಸಂಸಾರಸಾರೋದಯನಾದ ವೃಷಭತೀರ್ಥಂಕರನು ಭೂಮಿಯಲ್ಲವತರಿಸಲು ಬಗೆದನು.

ಇಂತು ನಾಭಿರಾಜರಾಜ್ಯಲಾಭವರ್ಣನೆಯೆಂಬ
ಆರನೆಯ ಆಶ್ವಾಸ ಮುಗಿಯಿತು.

# ಸಪ್ತಮಾಶ್ವಾಸಂ

ಶ್ರೀನಿಳಯಮಿದುವೆ ನಾಭಿ
ಸ್ಥಾನಮೆನಲ್ ನೆಱೆದಯೋಧ್ಯೆಗವತರಿಸಲ್ ತ್ರಿ
ಜ್ಞಾನಧರಂ ಬಗೆದಂ ಭ
ವ್ಯಾನಂದಕರಂ ಸರಸ್ವತೀಮಣಿಹಾರಂ ೧

ವ॥ ಅನ್ನೆಗಮಿತ್ತಲ್,

ಯುಗಮಂ ನಿಪ್ಪೊಸತಪ್ಪಿನಂ ಕೃತಯುಗಂ ಮಾಡಲ್ ಸುರೇಂದ್ರಾಳಿಗಾ
ವಗಮುತ್ಸಾಹಮನುಂಟುಮಾಡಲೆಡೆಗೊಟ್ಟೀಧರ್ಮಮಂ ನೀಂ ಜಲ
ಕ್ಕಗೆ[೧] ಮಾಡಲ್ಬಗೆದಪ್ಪುದೆಂದು ನಯದಿಂ ಸಾಕೇತಮುತ್ಕೇತುಬಾ
ಹುಗಳಿಂದಂ ಕರೆವಂತದೇನೆಸೆದುದೋ ಸರ್ವಾರ್ಥಸಿದ್ಧೀಶನಂ ೨

ವ॥ ಅನ್ನೆಗಮಮರಪತಿ ಪರಮನ ಚರಮಗರ್ಭಾವತರಣಮನವಧಿಯಿಂದಮಱಿದಱು ದಿಂಗಳುಂಟೆನೆ ಮುನ್ನಮೆ,

ಸುರಿವುದು ತಡೆಯದಯೋಧ್ಯಾ
ಪುರದೊಳ್ ನೀನಿಂದೆ ತೊಡಗಿ ವಸುಧಾರೆಯನಾ
ದರದಿನೆನೆ ಸಹಜಭಕ್ತಿಯ
ಭರದಿಂ ಸುರಪತಿಯ ಬೆಸದಿನೊಸೆದಂ ಧನದಂ ೩

೧. ಇದು ಲಕ್ಷ್ಮಿಯ ನಿವಾಸಸ್ಥಾನ. ಇದು ನಾಭಿರಾಜನು ನೆಲಸಿರುವ ಅಯೋಧ್ಯೆ. ಇಲ್ಲಿ ಅವತರಿಸಬೇಕೆಂದು (ಮತಿ, ಶ್ರುತ ಮತ್ತು ಅವಧಿಜ್ಞಾನಗಳೆಂಬ) ಜ್ಞಾನತ್ರಯ ಭೂಷಿತನೂ ಭವ್ಯಜನರಿಗೆ ಸಂತೋಷದಾಯಕನೂ ಸರಸ್ವತೀಮಣಿಹಾರನೂ ಆದ ಪುರುದೇವನು ಬಗೆದನು. ವ॥ ಅಷ್ಟರಲ್ಲಿ ಈ ಕಡೆ ೨. "ಈ ಯುಗವನ್ನು ಅತಿನೂತನವಾದ ಕೃತಯುಗವನ್ನಾಗಿ ಮಾಡಲು, ಸುರೇಂದ್ರಾಳಿಗೆ ಹುರುಪನ್ನುಂಟು ಮಾಡಿದ ಈ ಧರ್ಮವನ್ನು ವಿಶದೀಕರಿಸಲು ಬಾ"ಯೆಂದು ಸಾಕೇತವು ಎತ್ತಿಕಟ್ಟಿದ ಬಾವುಟಗಳೆಂಬ ತನ್ನ ತೋಳುಗಳಿಂದ ಸರ್ವಾರ್ಥಸಿದ್ಧೀಶ್ವರನನ್ನು ಕರೆಯುತ್ತಿದೆಯೋ ಎಂಬಂತೆ ವಿರಾಜಿಸಿತು. ವ॥ ಅಷ್ಟರಲ್ಲಿ ಸರ್ವಾರ್ಥಸಿದ್ಧೀಶ್ವರನ ಚರಮ ಗರ್ಭಪ್ರವೇಶವನ್ನು ಅವಧಿಜ್ಞಾನದಿಂದ ಸುರೇಂದ್ರನರಿತು, ಆರು ತಿಂಗಳಿರುವಂತೆಯೇ ೩. "ಅಯೋಧ್ಯಾಪುರದಲ್ಲಿ ಇಂದಿನಿಂದಲೇ ಚಿನ್ನದ ಮಳೆಯನ್ನು ಸುರಿಸೆಂದು" ಕುಬೇರನಿಗೆ ಹೇಳಲು', ಕುಬೇರನು ಅದನ್ನು ಸಂತೋಷದಿಂದಲೂ ಭಕ್ತಿಭರದಿಂದಲೂ ಕೈಕೊಂಡನು.

---

೧. 'ಜಲಕ್ಕನೆ' ಎಂಬ ಅರ್ಥದಲ್ಲಿ 'ಜಲಕ್ಕಗೆ' ಎಂಬ ಶಬ್ದ ಉಂಟೆ ? 'ಜನಕ್ಕಗೆಮಾಡಲ್' ಎಂದು ಶುದ್ಧಪಾಠವಿರಬಹುದು. 'ಜನಕ್ಕೆ=ಜನರಿಗೆ, ಅಗೆ ಮಾಡಲ್=ಮೊಳಕೆಮಾಡಲು ಬೇರೂರಿಸು ವುದಕ್ಕಾಗಿ ಎಂದು ಅರ್ಥವಿರಬಹುದು.

ವ|| ಮತ್ತಂ ಕುಲಶಿಖರಿಶೇಖರಾಯಮಾಣ ಪದ್ಮಾದ್ರಿಸರೋವರನಿವಾಸಿನಿಯರಪ್ಪ ಶ್ರೀಹ್ರೀಧೃತಿ ಕೀರ್ತಿಬುದ್ಧಿಲಕ್ಷ್ಮಿಗಳೆಂಬಱುವರುಮನಾತ್ಮೀಯ ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯನಳಂ ಕರಿಸಲುಮನಾದ್ಯನಿಧನಜಿನನಿಳಯರುಚಿರರುಚಕಾಚಳದ ಪೂರ್ವದಿಗ್ಭಾಗದ ವೈಡೂರ್ಯ ಕಾಂಚನಕನ ಕಾರಿಷ್ಟದಿಕ್ಸ್ವಸ್ತಿಕನಂದನಾಂಜನಾಜನಮೂಳಕಂಗಳೆಂಬೆಂಟುಂ ಕೂಟಂಗಳೊಳ್ ರಮಿಯಿಸುವ ವಿಜಯೆ ವೈಜಯಂತೀ ಜಯಂತೀ ಅಪರಾಜಿತೆ ನಂದೆ ನಂದೋತ್ತರೆ ಆನಂದೆ ನಾಂದೀವರ್ಧನೆಯೆಂಬೆಣ್ಬರುಂ ದಿಗ್ವನಿತೆಯರಂ ಪರಮಜಿನೋತ್ಸವದೊಳ್ ಶೃಂಗಾರಂಬೆರಸು ಭೃಂಗಾರುಧಾರಿಗಳಾಗಲುಂ, [ತತ್ಕುಕ್ಷೀಲದ ಪಾಗ್‌ದಿಗ್‌ದೇಶ][1] ದಮೋಘ ಸುಪ್ರಬುದ್ಧ ಮಂದಿರ ವಿಮಳ ರುಚಕ ರುಚಕೋತ್ತರ ಚಂದ್ರ ಸುಪ್ರತಿಷ್ಠಮೆಂಬ ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪಣಮಮಂ ಪಿಡಿಯಲುಂ, ತನ್ಮಹೀಧರವರುಣಾಶಾವಿಶೇಷಕಮಾಗಿರ್ದ ಲೋಹಿತಾಕ್ಷ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ ಸಂಚರಿಸುವಿಳಾದೇವಿ ಸುರಾದೇವಿ ಪೃಥ್ವಿ ಪದ್ಮಾವತಿ ಕಾನನೆ ನವಮಿಕೆ ಯಶಸ್ವಿನಿ ಭದ್ರೆಯೆಂಬೆಣ್ಬರುಮಾಶಾವಧೂವರರನಾದಿಪುರುಷಾಂಬಿಕೆಗೆ ಗಾಯಕೀನಾಯಕಿಯರಾಗಿ ವಿಚಿತ್ರಾತಪತ್ರಂಗಳಂ ಪಿಡಿಯಲುಂ, ತದ್ಗಿರೀಂದ್ರೋತ್ತರಕಕುದ್ದೇಶದ ಸ್ಫಟಿಕಾಂಜನ ಕಾಂಚನ ರಜನ

ವ|| ಕುಲಪರ್ವತಗಳಿಗೆ ಮುಕುಟಪ್ರಾಯವಾದ ಪದ್ಮಾದ್ರಿ ಸರೋವರಗಳಲ್ಲಿ ನೆಲಸಿರುವ ಶ್ರೀ, ಹ್ರೀ, ಧೃತಿ,ಕೀರ್ತಿ, ಬುದ್ಧಿ ಮತ್ತು ಲಕ್ಷ್ಮಿಗಳೆಂಬ ಆರು ಜನರನ್ನು ತಮ್ಮ ಗುಣಸಮೂಹಗಳೆಂಬ ಮಣಿಭೂಷಣಗಳಿಂದ ಜಿನನ ತಾಯಿಯನ್ನು ಸಿಂಗರಿಸಲು ದೇವೇಂದ್ರನು ನಿಯಮಿಸಿದನು, ಅನಾದಿಯೂ, ಅನಿಧನವೂ ಎನಿಸಿದ ಜಿನನಿಲಯಗಳಿಂದ ರಮ್ಯವಾದ ರುಚಕಾಚಲದ ಪೂರ್ವದಿಗ್ಭಾಗದಲ್ಲಿ ವೈಡೂರ್ಯ, ಕಾಂಚನ, ಕನಕ, ಅರಿಷ್ಟ, ದಿಕ್ಸ್ವಸ್ತಿಕ, ನಂದನ. ಅಂಜನ, ಅಂಜನಮೂಲಕಗಳೆಂಬ ಎಂಟು ಶಿಖರಗಳಲ್ಲಿ ರಮಿಸುತ್ತಿರುವ ವಿಜಯ, ವೈಜಯಂತೀ, ಜಯಂತೀ, ಅಪರಾಜಿತೆ, ನಂದೆ, ನಂದೋತ್ತರೆ, ಆನಂದೆ ಮತ್ತು ನಾಂದೀವರ್ಧನೆಯರೆಂಬ ಎಂಟು ದಿಗ್ವನಿತೆಯರನ್ನು ಪರಮ ಜಿನನ ಜನ್ಮೋತ್ಸವದಲ್ಲಿ ಸಿಂಗರಿಸಿಕೊಂಡು ಚಿನ್ನದ ಬಿಂದಿಗೆಗಳನ್ನು ಹಿಡಿದು ಬರಲು ಆಜ್ಞಾಪಿಸಿದನು. ಆ ಶೈಲದ ದಕ್ಷಿಣ ಭಾಗದ ಅಮೋಘ, ಸುಪ್ರಬುದ್ಧ, ಮಂದಿರ, ವಿಮಲ, ರುಚಕ, ರುಚಕೋತ್ತರ, ಚಂದ್ರ ಮತ್ತು ಸುಪ್ರತಿಷ್ಠವೆಂಬ ಎಂಟು ಶಿಖರಗಳಲ್ಲಿ ರಮಿಸುತ್ತಿರುವ ಸುಪ್ರತಿಷ್ಠಿತೆ (ಸುಸ್ಥಿತೆ), ಸುಪ್ರಣಿಧಿ, ಸುಪ್ರಬುದ್ಧೆ, ಯಶೋಧರೆ, ಲಕ್ಷ್ಮೀಮತಿ, ಕೀರ್ತಿಮತಿ, ವಸುಂಧರೆ, ಚಿತ್ರೆಯರೆಂಬ ಎಂಟುಜನ ದಿಗಂಗನೆಯರನ್ನು ನಾಭಿರಾಜನ ಮಡದಿಗೆ ಮಣಿದರ್ಪಣವನ್ನು ಹಿಡಿದಿರುವಂತೆ ನಿಯೋಜಿಸಿದನು. ಅದೇ ಬೆಟ್ಟದ ಪಶ್ಚಿಮದಿಕ್ಕಿಗೆ ಅತಿಶಯವೆನಿಸಿದ ಲೋಹಿತಾಕ್ಷ, ಜಗತ್ಕುಸುಮ, ಪದ್ಮ, ನಳಿನ, ಕುಮುದ, ಸೌಮನಸ, ಯಶೋಭದ್ರ, ಸರ್ವತೋಭದ್ರಗಳೆಂಬ ಎಂಟು ಶಿಖರಗಳಲ್ಲಿ ಸಂಚರಿಸುವ ಇಳಾದೇವಿ, ಸುರಾದೇವಿ, ಪೃಥ್ವಿ, ಪದ್ಮಾವತಿ, ಕಾನನೆ, ನವಮಿಕೆ, ಯಶಸ್ವಿನಿ ಮತ್ತು

೧ ತತ್ಕುಕ್ಷೀಲ ಪ್ರಾಗ್ದಿಗ್ದೇಶ (ಅನ್ಯತ್ರ)

ಕುಂಡಲರುಚಿರ ಸುದರ್ಶನಂಗಳೆಂಬೆಂಟುಂ ಕೂಟಂಗಳೊಳಿರ್ಪ ಲಂಭೂಷೆ ಮಿಶ್ರಕೇಶಿ ಪುಂಡರೀಕಿಣಿ ವಾರುಣಿ ಆಶೆಹ್ರೀಶ್ರೀಧೃತಿಯೆಂಬೆಣ್ಬರುಂ ದಿಕ್ಕನ್ಯೆಯರಂ ಮರುದೇವಿಮಹಾದೇವಿಗೆ ಚಾಮರಮನಿಕ್ಕಲುಂ, ಮತ್ತಮಾ ಪರ್ವತದ ಪೂರ್ವದಿಗ್ಭಾಗದೊಳ್ ನೆಲಸಿದ ವಿಮಳ ನಿತ್ಯಾವಳೋಕ ಸ್ವಯಂಪ್ರಭ ನಿತ್ಯೋದ್ಯೋತಂಗಳೆಂಬ ನಾಲ್ಕುಕೂಟಂಗಳರಸಿಯರಪ್ಪ ಚಿತ್ರೆ ಕನಕಚಿತ್ರೆ ತ್ರಿಶಿರೆ ಸೂತ್ರಿಮಣಿ ಯೆಂಬ ನಾಲ್ವರುಂ ವಿದ್ಯುತ್ಕುಮಾರಿಯರನುದ್ಯದ್ವಿಳಾಸಮಣಿದರ್ಪಣಮನಾ ವಿಳಾಸರತ್ನಾಕರೆಯಿರ್ದಲ್ಲಿ ಕಣ್ಗೆ ಸೊಗಯಿಸಿ ತಳದಳಿಸಿ ಬೆಳಗಲುಂ, ತದವನೀಧರವಿದಿಙ್ನೆಳಯಂಗಳಪ್ಪ ವೈಡೂರ್ಯ ರುಚಕ ಮಣಿಪ್ರಭ ರುಚಕೋತ್ತಮಂಗಳೆಂಬ ವಿಕಟಕೂಟಾಧೀಶೆಯರಪ್ಪ ರುಚಕ ರುಚಕಾಭೆ ರುಚಕಾಂತೆ ರುಚಕಪ್ರಭೆಯೆಂಬೀ ನಾಲ್ವರುಂ ದಿಕ್ಕುಮಾರಿಕಾಮಹತ್ತರಿಕೆಯರುಮಂ ಮತ್ತಮಾ ನಗದ ನೆಗೆದ ರತ್ನಕೂಟ ರತ್ನಪ್ರಭ ಸರ್ವರತ್ನರತ್ನೋಚ್ಚಯಂಗಳೆಂಬ ಕೃತ ವಿದಿಕ್‌ಕೂಟಂಗಳೊಳ್ ಕೊಂಡಾಟದಿಂದಿರ್ಪ ವಿಜಯೆ ವೈಜಯಂತೆ ಜಯಂತೆ ಅಪರಾಜಿತೆಯೆಂಬ ವಿದ್ಯುತ್ಕುಮಾರೀ ಪುರಂಧ್ರಿಯರಂ ತೀರ್ಥಕರಕುಮಾರಜಾತಕರ್ಮಕರಣ ಗರ್ಭಶೋಧನಾದಿಗಳ್ಗೆ ವನಿತಾಗೂಢ ವ್ಯಾಪಾರದೊಳ್ ನೆಗಟಿಲುಂ ಮತ್ತಮನ್ಯನಗನಿವಾಸಿಗಳಪ್ಪ ಮಾಳಿಕೆ ಮಾಳಿನಿ ಕನಕದೇವಿ ಕನಕಚಿತ್ರೆ ಪುಷ್ಪಚೂಳಿಕೆ ಮಾಳತಿ ಸುರದೇವಿ ತ್ರಿಶಿರೆ ಮೊದಲಾಗಿ ಪೆಱರುಮಮರಕಾಂತೆಯರನಿಂತನಿತಾನುಂ ತೆಱದ ಬೆಸಂಗಳಂ ಧರ್ಮಾನುರಾಗದಿಂ ಸೌಧರ್ಮೇಂದ್ರಂ ಬೆಸಸುವುದುಮಾಕೆಗಳ್ ಬಂದು[೧]

ಭದ್ರೆಯರೆಂಬ ಎಂಟುಜನ ದಿಗ್ವನಿತೆಯರನ್ನು ಆದಿಪುರುಷನ ತಾಯಿಗೆ ಗಾಯಕೀ ನಾಯಕಿಯರಾಗಿ ನಿಯಮಿಸಿ ಚಿತ್ರವಿಚಿತ್ರವಾದ ಕೊಡೆಗಳನ್ನು ಹಿಡಿಯಲು ಏರ್ಪಡಿಸಿದನು. ಅದೇ ಪರ್ವತದ ಉತ್ತರ ದಿಗ್ದೇಶದಲ್ಲಿನ ಸ್ಫಟಿಕ, ಅಂಕ, ಅಂಜನ, ಕಾಂಚನ, ರಜತ, ಕುಂಡಲ, ರುಚಿಕ ಮತ್ತು ಸುದರ್ಶನಗಳೆಂಬ ಎಂಟು ಶಿಖರಗಳಲ್ಲಿ ನೆಲಸಿರುವ ಅಲಂಭೂಷೆ, ಮಿಶ್ರಕೇಶಿ, ಪುಂಡರೀಕಿಣಿ, ವಾರುಣೀ, ಆಶೆ, ಹ್ರೀ, ಶ್ರೀ ಮತ್ತು ಧೃತಿಗಳೆಂಬ ಎಂಟುಜನ ದಿಕ್ಕನ್ಯೆಯರನ್ನು ಮರುದೇವಿಗೆ ಚಾಮರವನ್ನಿಕ್ಕಲು ಆಜ್ಞಾಪಿಸಿದನು. ಅದೇ ಪರ್ವತದ ಪೂರ್ವದಿಗ್ಭಾಗದಲ್ಲಿನ ವಿಮಲ, ನಿತ್ಯಾಲೋಕ, ಸ್ವಯಂಪ್ರಭ ಮತ್ತು ನಿತ್ಯೋದ್ಯೋತಗಳೆಂಬ ನಾಲ್ಕು ಶಿಖರಗಳ ರಾಣಿಯರೆನಿಸಿದ ಚಿತ್ರೆ, ಕನಕಚಿತ್ರೆ, ತ್ರಿಶಿರೆ ಮತ್ತು ಸೂತ್ರಮಣಿಯರೆಂಬ ನಾಲ್ಕುಜನ ವಿದ್ಯುತ್ಕುಮಾರಿಯರಿಗೆ ವಿದ್ಯುದ್ವಿಲಾಸದಿಂದ ಆ ವಿಲಾಸರತ್ನಾಕರೆಯಿರುವೆಡೆಯಲ್ಲಿ ಕಣ್ಗೆ ಸೊಗಯಿಸಿ ತಳತಳಿಸುವ ಮಣಿಪ್ರದೀಪಗಳನ್ನು ಬೆಳಗಿಸಲು ಸೂಚಿಸಿದನು. ಅದೇ ಪರ್ವತದ ದಿಙ್ಮಧ್ಯನಿಲಯಗಳಾದ ವೈಡೂರ್ಯ,ರುಚಕ, ಮಣಿಪ್ರಭ, ರುಚಕೋತ್ತಮಗಳೆನಿಸಿದ ಭಯಂಕರ ಶಿಖರಗಳ ಅಧೀಶ್ವರಿಯರಾದ ರುಚಕೆ, ರುಚಕಾಭೆ, ರುಚಕಾಂತೆ ಮತ್ತು ರುಚಕಪ್ರಭೆಯರೆಂಬ ನಾಲ್ಕುಜನ ದಿಕ್ಕುಮಾರಿಕಾಮಹತ್ತರಿಕೆಯನ್ನೂ ಮತ್ತೆ ಅದೇ ಬೆಟ್ಟದ ರತ್ನಕೂಟ, ರತ್ನಪ್ರಭ, ಸರ್ವರತ್ನ ಮತ್ತು ರತ್ನೋಚ್ಚಯಗಳೆಂಬ ದಿಙ್ಮಧ್ಯದ ಶಿಖರಗಳಲ್ಲಿ ಕೊಂಡಾಟದಿಂದಿರುವ ವಿಜಯೆ, ವೈಜಯಂತೆ, ಜಯಂತೆ ಮತ್ತು ಅಪರಾಜಿತೆಯರೆಂಬ ವಿದ್ಯುತ್ಕುಮಾರೀ ಪುರಂಧ್ರಿಯರನ್ನೂ ತೀರ್ಥಂಕರಕುಮಾರನ ಜಾತಕರ್ಮ, ಗರ್ಭಶೋಧನಾದಿ ಕಾರ್ಯಗಳಿಗೆ ಸ್ತ್ರೀಯರು ಗುಟ್ಟಾಗಿ ಮಾಡುವ

೧ ಈ ಗದ್ಯವನ್ನು ತತ್ತ್ವಾರ್ಥರಾಜವಾರ್ತಿಕಕ್ಕನುಸಾರವಾಗಿ ಶೋಧಿಸಲಾಗಿದೆ. (ತ.ಸೂ. ೩-೩೫)

ಪದೆವ ಮನಂ 'ಬೆರಸೆಱಗಿದ
ಪದದೊಳದೇಂ ಚೆಲ್ವುವಡೆದುವೋ ಜಿನಜನನೀ
ಪದಪಲ್ಲವತಳದೊಳ್ ಸುರ
ಸುದತೀಚಯದಳಕವಲ್ಲರೀಕುಸುಮಂಗಳ್ ೪

ವ॥ ಅಂತು ಸುರಸುದತೀಸಂದೋಹಮಮರಕಾಮಿನೀಮಹತ್ತರಿಕಾನಿಯಮಿತಾತ್ಮೀಯ ನಿಯೋಗದಿಂ ಜಿನಜನನಿಯ ಮನಮನಱಿದೋಲಗಿಸುವಲ್ಲಿ,

ತುಡುಗೆಯ ಮಣಿದೀಧಿತಿಗಳ
ಪೊಡರ್ಪು ಮೇಗೊಗೆದು ಕೊಡೆವೊಲೆಸೆದಪುದೆಂಬೀ
ನುಡಿ ನೆಗೞೆ ಪಂಚರತ್ನದ
ಕೊಡೆಯಂ ಪಿಡಿದಮರಿಜನದ ಮನದಡಿವಿಡಿದಳ್[೧] ೫

ಮೃದುಕರತಳವದನದ ಚೆ
ಲ್ವೊದವಿರೆ ಮಣಿವಳಯಕಳರವಂ ಸೊಗಯಿಸೆ ಚೆ
ಲ್ವಿದಿರ್ಗೊಳೆ ಬೀಸುವ ಚಮರೀ
ಜದಿನೊರ್ವಳ್ ಹಂಸೆ ಪಾಯ್ವ ಲತೆಯನೆ ಪೋಲ್ತಳ್ ೬

ಕಾರ್ಯಗಳಲ್ಲಿ ತೊಡಗುವಂತೆ ನಿಯಮಿಸಿದನು. ಇತರ ಪರ್ವತನಿವಾಸಿಗಳಾದ ಮಾಳಿಕೆ, ಮಾಳಿನಿ, ಕನಕದೇವಿ, ಕನಕಚಿತ್ರೆ, ಪುಷ್ಪಚೂಲಿಕೆ, ಮಾಳಾವತಿ, ಸುರದೇವಿ ಮತ್ತು ತ್ರಿಶಿರೆ ಮೊದಲಾದ ಕೆಲವು ದೇವಸ್ತ್ರೀಯರಿಗೆ ಹೀಗೆ ಅನೇಕ ಬಗೆಯ ನಿರ್ದಿಷ್ಟ ಕಾರ್ಯಗಳನ್ನು ನಡೆಸಲು ಧರ್ಮಾನುರಾಗದಿಂದ ಸೌಧರ್ಮೇಂದ್ರನು ಆಜ್ಞಾಪಿಸಿದನು. ಅಂತೆ ಅವರೂ ಬಂದು ೪. ಜಿನನ ಮಾತೆಯ ಪದತಳದಲ್ಲಿ ಪ್ರೇಮಪೂರ್ಣವಾದ ಮನಸ್ಸಿನಿಂದೆರಗಲು, ಆ ಸುರಸ್ತ್ರೀಯರ ಮುಂಗುರುಳೆಂಬ ಬಳ್ಳಿಯ ಹೂವುಗಳು ಅತಿಶಯ ವಾಗಿ ಚೆಲ್ವುವಡೆದುವು. ವ॥ ಹೀಗೆ ದೇವಸ್ತ್ರೀಯರ ಸಮೂಹವು ಅಮರಕಾಮಿನೀ ಮಹತ್ತರಿಕೆಯರಿಂದ ನಿಯಮಿತರಾಗಿ ತಮ್ಮ ಕಾರ್ಯಗಳಿಂದ ಜಿನನ ತಾಯಿಯ ಹೃದಯ ವನ್ನರಿತು ಸೇವೆಸಲ್ಲಿಸುತ್ತಿರಲು ೫. ಜಿನನ ತಾಯಿಗೆ ಪಂಚರತ್ನಗಳ ಕೊಡೆಯನ್ನು ಒಬ್ಬ ದೇವಸ್ತ್ರೀಯು ಹಿಡಿದಿದ್ದಳು. ಅದು ಅವಳು ಧರಿಸಿದ್ದ ಆಭರಣಗಳಲ್ಲಿನ ಮಣಿಕಾಂತಿಗಳು ಮೇಲೆದ್ದು ಕೊಡೆಯಂತೆ ಭಾಸವಾಗುತ್ತಿರುವುವೋ ಎಂಬ ನುಡಿಗೆ ವಿಷಯವಾಯಿತು. ಆ ದೇವಸ್ತ್ರೀಯು ಜನರ ಮನಸ್ಸನ್ನು ಸೂರೆಗೊಂಡಳು. ೬. ಕೋಮಲವಾದ ಅಂಗೈ ಗಳಿಂದಲೂ ಮುಖದಿಂದಲೂ ಚೆಲ್ವಾದ, ಮಣಿಮಯವಾದ ಕಂಕಣಗಳಿಂದ ಮಂಜುಳ ವಾಗಿ ಧ್ವನಿಗೊಡುತ್ತಿರಲು ಸುಂದರವಾಗಿ ಚಾಮರವನ್ನು ಬೀಸುತ್ತಿರುವ ಒಬ್ಬ ಅಮರಸ್ತ್ರೀಯು

---

೧. "ಅಮರಿ = ಅಮರನಾರಿಯು, ಜನದ = ಜನರ. ಮನದ = ಮನಸ್ಸನ್ನು, ಅಡಿವಿಡಿದಳ್ = ಸೂರೆಗೊಂಡಳು" ಎಂದು ಅರ್ಥವಿರಬಹುದೇ? ಈ ಪಕ್ಷದಲ್ಲಿ 'ಅಡಿವಿಡಿವಳ್' ಎಂದು ಶುದ್ಧ ಪಾಠವನ್ನು ಒಪ್ಪಬೇಕಾಗುತ್ತದೆ. 'ಮನದಡಿವಿಡಿಗಳ್' (ಅನ್ಯತ್ರ).

ಈಕೆಯ ಮುಖೇಂದುಬಿಂಬದಿ
ನೀ ಕನಕಸರೋಜಮೆಂತುಮಲರ್ದತ್ತೆಂದೀ
ಲೋಕಂ ಪೊಗಳ್ವುದು ಕನಕಾ
ಬ್ಜಾಕಾರದ ಡವಕೆವಿಡಿದ ಸುರಸೌಂದರಿಯಂ ೭

ಅರುಣಸರಸೀರುಹಂ ಮೃದು
ಕರತಳವಿನ್ಯಾಸಮಮರೆ ಜಿನಜನನಿಯರೊ
ಳ್ಗುರುಳಂ ಸಮಱುವ ಕನ್ಯಕೆ
ಕರಮೆಸೆದಳ್ ತಳಿರೊಳಳಿಗಳಂ ಮುಚ್ಚುವವೋಲ್ ೮

ತಾಮರೆಗಂ ಚಂದ್ರಂಗಂ
ತಾಮಸಮಂ ಕಳೆದು ಕಾಣ್ಕೆಮಾಳ್ಪಂತೆವೊಲಾ
ತಾಮರಸನಿಭಾಸ್ಯೆಗೆ ಸುರ
ಕಾಮಿನಿ ಕಟ್ಟಿದಿರೊಳೆಸೆಯೆ ಕನ್ನಡಿವಿಡಿದಳ್ ೯

ಬಿನ್ನನೆ ಕುರುಳ ನೆಟಲ್ಗಳ್
ತನ್ನೊಳೆ ತಳ್ತೊಯ್ಯ ನೆಗಟ್ಟ ಕಱೆಯನೆ ಪೋಲ್ತುಂ
ನುಣ್ಣಂ ಸೊಗಯಿಸುತಿರೆ ಸಿರಿ
ಗನ್ನಡಿ ಕನ್ನಡಿಪುದಾದುದಿಂದುಶ್ರೀಯಂ ೧೦

ಅಡಿಯೂಡಲ್ಕಲತಗೆಯಂ
ತುಡಲ್ಕೆ ತುಡುಗೆಯನುಡಲ್ಕೆ ದಿವ್ಯಾಂಬರಮಂ
ಮುಡಿಯಲ್ ಪೂಮಾಲೆಯನೋ
ಗಡಿಸದೆ ಕುಡುವಮರಿ ಕಲ್ಪಲತೆಯನೆ ಪ್ರೋಲ್ತಳ್ ೧೧

ಹಂಸವು ಹಾಯುವ ಕಮಲಲತೆಗೆ ಎಣೆಯಾದಳು. ೭. ಚಿನ್ನದ ತಾವರೆಯಂತಿರುವ ಪೀಕದಾನಿಯನ್ನು ಕೈಯಲ್ಲಿ ಒಬ್ಬ ಸುರಸ್ತ್ರೀಯು ಹಿಡಿದಿರಲು, "ಈಕೆಯ ಮುಖಚಂದ್ರನಿಂದ ಈ ಚಿನ್ನದ ತಾವರೆ ಹೇಗೆ ಅರಳಿತು!" ಎಂದು ಜನ ಅವಳನ್ನು ಹೊಗಳಿತು. ೮. ಕೆಂದಾವರೆಯಂತಿರುವ ಕೋಮಲವಾದ ತನ್ನ ಅಂಗೈಗಳಿಂದ ಜಿನಮಾತೆಯ ಸುಂದರವಾದ ಕೂದಲುಗಳನ್ನು ಸವರುತ್ತಿದ್ದ ಕನ್ನಿಕೆಯೊಬ್ಬಳು ತಳಿರುಗಳಿಂದ ದುಂಬಿಗಳನ್ನು ಮುಚ್ಚುತ್ತಿರುವಂತೆ ಕಂಡುಬಂದಳು. ೯. ತಾವರೆಗೂ ಚಂದ್ರನಿಗೂ ಇರುವ ಸಹಜದ್ವೇಷವನ್ನು ಕಳೆದು ಅವರಿಬ್ಬರಿಗೂ ಸಂದರ್ಶನವನ್ನು ಮಾಡಿಸುವಂತೆ ಕಮಲಮುಖಿಯಾದ ಜಿನಜನನಿಯ ಎದುರಿನಲ್ಲಿ ಸುರವನಿತೆಯೊಬ್ಬಳು (ಚಂದ್ರನಂತಿರುವ) ಕನ್ನಡಿಯನ್ನು ಹಿಡಿದಳು! ೧೦. ಆ ಕಮಲಮುಖಿಯ ಕೇಶಪಾಶದ ನೆರಳು ಕನ್ನಡಿಯಲ್ಲಿ ಪ್ರತಿಫಲಿಸಿ ಚಂದ್ರನಲ್ಲಿರುವ ಕಳಂಕವನ್ನು ಹೋಲಿತು. ಇದರಿಂದಾಗಿ ಸಿರಿಗನ್ನಡಿಯು ಚಂದ್ರಶ್ರೀಯನ್ನು (ಚಂದ್ರನ ಸೌಂದರ್ಯವನ್ನು) ನಿಶ್ಚಯವಾಗಿ ಪ್ರಕಟಿಸಿದಂತಾಯಿತು. (೯ನೆಯ ಪದ್ಯಾರ್ಥಕ್ಕೆ ಇದು ಪೂರಕವಾಗಿದೆ) ೧೧. ಕಾಲುಗಳಿಗೆ ಹಚ್ಚಲು ಅರಗಿನ ರಸವನ್ನೂ ತೊಡಲಿಕ್ಕೆ ಆಭರಣವನ್ನೂ ಉಡಲಿಕ್ಕೆ ದಿವ್ಯಾಂಬರವನ್ನೂ ಮುಡಿಯಲು ಹೂದಂಡೆಯನ್ನೂ

ತಳದೊಳ್ ತಂಬುಲದೆಲೆಗಳ್
ಪೊಳೆಪಮರ್ದಿರೆ ದೇವಕನ್ಯೆ ಮತ್ತೊರ್ವಳ್ ಕೋ
ಮಳಲತೆಯ ನಿಮಿರ್ದ ಕುಡಿಯೊಳ್
ಗಿಳಿ ಪಾಯ್ದತ್ತೆನಿಸಿ ಸತಿಗೆ ತಂಬುಲಮಿತ್ತಳ್ ೧೨

ಭೀಷಣರಮಣೀಯತೆ ಸುರ
ಯೋಷಿನ್ನಿಕರಕ್ಕೆ ಕಿತ್ತ ಬಾಳಿಂ ಭೂಷಾ
ವೇಷದಿನಮರ್ದತ್ತೆನೆ ಕಳ
ಭಾಷಿಣಿಗಮರಿಯರೆ ಬಳಸಿ ಮೆಯ್ಗಾಪಾದರ್ ೧೩

ಅತಿಲಲಿತತರ್ಜನೀತ
ರ್ಜಿತಪರಿಜನೆಯರ್ ವಿಚಿತ್ರವೇತ್ರಲತಾಶೋ
ಭಿತತಳಕಮಳೆಯರಂತಃ
ಪ್ರತಿಹಾರಿಯರಾದರಮರಕಾಂತೆಯರರೆಬರ್ ೧೪

ಕಳಕಳಿಪಮರಿಯರಂ ಕ
ಣ್ಣೊಳೆ ಬಗ್ಗಿಸುವಲ್ಲಿ ಕಾಮಕಾರ್ಮುಕಕರಸಂ
ಚಳನಮನೆ ಪೋಲ್ತು ಕರಮೆರ್ದೆ
ಗೊಳಿಸಿದುದಾಕೆಗಳ ವಿಭ್ರಮಭ್ರೂಭಂಗಂ ೧೫

ಗಮಕಂ ಪ್ರಯೋಗಮಾಭೋ
ಗಮಳಂಕಾರಂ ಪೊಗರ್ ನಯಂ ಮಿಱುಗು ಪೊದ
ಳ್ದಮರೆ ಕೊಳೆ ಪಾಡುವಮರಿ ದ
ಲಮರ್ದಂ ಮುಕ್ಕುಳಿಸಿಯುಗುಳ್ವ ತೆಱಿನಂ ಪೋಲ್ತಳ್ ೧೬

ಬೇಸರಿಸದೆ ಕೊಡುವ ಅಮರಸ್ತ್ರೀಯು ಕಲ್ಪಲತೆಗೆ ಎಣೆಯಾದಳು. ೧೨. ದೇವ ವನಿತೆಯೊಬ್ಬಳು ತನ್ನ ಕರತಳದಲ್ಲಿರುವ ತಾಂಬೂಲದ ಪಟ್ಟಿಯನ್ನು ಜಿನಜನನಿಯ ಕೈಗಿತ್ತಳು. ಅದು ಕೋಮಲವಾದ ಬಳ್ಳಿಯ ನಿಮಿರಿದ ಕುಡಿಯಿಂದ ನೆಗೆದ ಗಿಳಿಯಂತೆಸೆಯಿತು. ೧೩. ಸುರಸ್ತ್ರೀಸಮೂಹಕ್ಕೆ ಹಿರಿದ ಕತ್ತಿಯಿಂದಲೂ, ಆಭರಣ ವಿಜೃಂಭಿತವಾದ ವೇಷದಿಂದಲೂ ಭಯಂಕರತೆಯೂ ರಮಣೀಯತೆಯೂ ಉಂಟಾದುವೋ ಎನ್ನುವಂತೆ ಸುರಸ್ತ್ರೀಯರು ಸುತ್ತ ನಿಂತು ಆ ಕಲಭಾಷಿಣಿಗೆ ಮೈಗಾವಲಾದರು. ೧೪. ಕೆಲವು ಜನ ಸುರಸ್ತ್ರೀಯರು ಅಂತಃಪುರದ ಪ್ರತಿಹಾರಿಯರಾದರು. ಅವರು ತಮ್ಮ ತೋರುಬೆರಳುಗಳಿಂದ ಪರಿಜನರನ್ನು ಬೆದರಿಸುತ್ತಿದ್ದರು. ಬೆತ್ತದ ಕೋಲುಗಳನ್ನು ತಮ್ಮ ಕೈಗಳಿಂದ ಹಿಡಿದಿದ್ದರು. ೧೫. ಗದ್ದಲ ಮಾಡುತ್ತಿರುವ ಅಮರಿಯರನ್ನು ತಮ್ಮ ಕಣ್ಣುಗಳಿಂದಲೇ ಗದರಿಸುವಾಗ ಅವರ ಶೋಭಾಯುಕ್ತವಾದ ಭ್ರೂಭಂಗವು ಬಿಲ್ಲನ್ನು ಬಗ್ಗಿಸುವಾಗಿನ ಕಾಮನ ಕೈಚಲನೆಗೆಣೆಯಾಗಿ ನೋಡುವವರ ಮನಸ್ಸಿಗೆ ಆನಂದವನ್ನು ತಂದಿತು. ೧೬. ಗಮಕ, ಪ್ರಯೋಗ, ಆಭೋಗ, ಅಲಂಕಾರ, ಕಾಂತಿ, ನಯ ಮತ್ತು ಮಿರುಗುಗಳು ವಿಸ್ತಾರವಾಗಿ ಪ್ರಕಟಗೊಳ್ಳುತ್ತಿರಲು ಹೃದಯಾವರ್ಜಕವಾಗಿ ಹಾಡುವ ಅಮರಸ್ತ್ರೀಯು ನಿಜವಾಗಿ

ಜೇನ ಮೞೆ ಕೊಂಡುದಮರ್ದಿನ
ಸೋನೆಯೆ ಸುರಿದತ್ತು ರಸದ ತೊಱೆ ಪರಿದತ್ತೆಂ
ಬೀನುಡಿಯನೆ ನುಡಿಯಿಸಿದ
ತ್ತಾ ನಾಕಸ್ತ್ರೀಯ ಗೇಯಮಾಸ್ಥಾಯಿಕೆಯೊಳ್ ೧೭

ಕರಣಾಂಗಹಾರಮೃದುಪದ
ಪರಿಕ್ರಮಂಗಳ ಬೆಡಂಗುಗಳ ಜತಿಯೊಳಳಂ
ಕರಿಸಿದುದೆಂಬಿನಮಾಡುವ
ಸುರನರ್ತಕಿ ಜಿನನ ಜನನಿಯಂ ಮೆಚ್ಚಿಸಿದಳ್ ೧೮

ವದನರಸಂ ಮದನರಸಂ
ಪೊದಲ್ದುದೆನಿಸುವಿನಮಮರಿ ನರ್ತಿಸೆ ಚೆಲ್ವಂ
ಪುದಿದುಱಚಲ್ಲಿಯೊಳೆಸೆದುದು
ತದುರೋಜಸರೋಜಮುಕುಳಯುಗಸಂಚಳನಂ ೧೯

ಇದಱ ದನಿ ಮದವದಳಿಕುಳ
ಮೃದುನಿನದದೊಳಂ ಮನೋಜಕಾರ್ಮುಕಗುಣನಾ
ದದೊಳಂ ಸೆಣಸುವುದೆನೆ ಸುರ
ಸುದತಿ ಪೆಱಳ್ ಮೆಱೆದು ಬೀಣೆಯಂ ಬಾಜಿಸಿದಳ್ ೨೦

ತಳದ ಕಡುಗೆಂಪು ಪುದಿದ
ವ್ವಳಿಸಿರೆ ಸುರಯುವತಿ ಮಧುರತಂತ್ರೀನಾದಂ
ಕೊಳೆ ಬೀಣೆಯ ದಂಡಿಗೆಯುಂ
ತಳಿರ್ತುದೆಂಬೊಂದು ಶಂಕೆಯಂ ಪುಟ್ಟಿಸಿದಳ್ ೨೧

ಅಮೃತವನ್ನು ಮುಕ್ಕಳಿಸಿಯುಗುಳುವ ರೀತಿಯನ್ನು ಹೋಲಿತಳು. ೧೭. ಆ ಸ್ವರ್ಗದ ಸ್ತ್ರೀಯು ಆಸ್ಥಾನದಲ್ಲಿ ಹಾಡಿದ ಹಾಡನ್ನು ಸಭಾಸದರು ಕೇಳಿ "ಜೇನಿನ ಮಳೆಯಾಯಿತು, ಅಮೃತದ ಸೋನೆಯು ಸುರಿಯಿತು, ರಸದ ತೊರೆಯು ಹರಿಯಿತು!" ಎಂದು ಹೊಗಳಿದರು. ೧೮. ಕರಣ, ಅಂಗಹಾರ, ಮೃದುಪದಚಲನೆ ಇವುಗಳ ಬೆಡಗುಗಳು ತಾಳದ ಗತಿಯಿಂದ ಅಂದವಾಗಿ ಕಾಣುವಂತೆ ಕುಣಿಯುವ ಸುರನರ್ತಕಿಯು ಜಿನನ ಮಾತೆಯನ್ನು ಮೆಚ್ಚಿಸಿದಳು. ೧೯. ವದನರಸವನ್ನೂ ಕಾಮರಸವನ್ನೂ ವಿಶೇಷವಾಗಿ ಉಕ್ಕಿಸುವಂತೆ ಅಮರಿಯು ನರ್ತಿಸುತ್ತಿರಲಾಗಿ ಅವಳ ಎದೆಗೆ ಕಟ್ಟಿಕೊಂಡಿದ್ದ ಕನ್ನಡಿಯಲ್ಲಿ ಸ್ತನಗಳೆಂಬ ಕಮಲದ ಮೊಗ್ಗುಗಳೆರಡರ ಚಲನೆಯು ಮನೋಹರರಾಗಿ ಕಂಗೊಳಿಸಿತು. (ಎರಡು ರಸಗಳನ್ನು ಎರಡು ಸ್ತನಗಳು ಸೂಚಿಸಿದವು). ೨೦. ಮತ್ತೊಬ್ಬ ದೇವತಾಸ್ತ್ರೀಯು ಮೆರೆಯುತ್ತಾ ವೀಣೆಯನ್ನು ಬಾರಿಸಿದಳು. ಅದರ ಧ್ವನಿಯು ಮದಿಸಿದ ದುಂಬಿಗಳ ಮೃದುಮಧುರವಾದ ದನಿಯೊಡನೆಯೂ, ಮನ್ಮಥನ ಬಿಲ್ಲಿನ ಹಗ್ಗದ ದನಿಯೊಡನೆಯೂ ಸ್ಪರ್ಧಿಸುತ್ತಿದೆಯೋ ಎಂಬಂತಿತ್ತು. ೨೧. ಸುರಯುವತಿಯೊಬ್ಬಳು ವೀಣೆಯನ್ನು ಹಿಡಿದು ಮಧುರವಾಗಿ ತಂತ್ರೀನಾದವನ್ನು ಮಾಡುತ್ತಿದ್ದಳು. ತಂತಿಯನ್ನು ಮೀಟುವಾಗ ಅವಳ

ವ|| ಮತ್ತಮಾಕೆಗಳ ವದನೇಂದುಬಿಂಬಂಗಳ ಬೆಳಗುಗಳೊಳೆ ಗಗನಮಂಡಲಂಗಳೆಲ್ಲಮಿಂದು ಮಂಡಲಮಯಮುಂ, ನಿಕಾಮಕೋಮಳಪದಪಲ್ಲವವಿನ್ಯಾಸಂಗಳೊಳೆ ಮಣಿಕುಟ್ಟಿಮಮೆಲ್ಲಂ ಪಲ್ಲವಮಯಮುಂ, ಅನರ್ಘ್ಯಾಭರಣಕಿರಣಜಾಲಂಗಳೊಳೆ ನರೇಂದ್ರಭವನಮೆಲ್ಲಮಿಂದ್ರ ಚಾಪಮಯಮುಂ, ವಿಲೋಲಲೋಚನಮಯೂಖಸಂತಾನದೊಳೆ ದೆಸೆಗಳೆಲ್ಲಂ ನೀಲೋತ್ಪಳ ಮಯಮುಂ, ಅಂಗಪ್ರಭಾ ಪ್ರವಾಹದೊಳೆ ದಿವಸಮೆಲ್ಲಂ ಲಾವಣ್ಯಮಯಮುಮಾಗಿ ನಾಭಿರಾಜನ ಭವನಮೆಲ್ಲಮಿಂತುಮದನಾಮೃತಮಯಮುಂ ಶೃಂಗಾರಮಯಮುಂ ಸೌಕುಮಾರ್ಯಮಯಮುಮನು ರಾಗಮಯಮುಮಾಶ್ಚರ್ಯಮಯಮುಮಾಗಿ ತೋಱೆ, ಸುರಮಹತ್ತರಿಕೆಯರಮರಗಣಿಕೆಯರಂ ಪೆಸರ್ವೆಸರೊಳೆ ಕರೆದು, ನಿಪುಣಿಕೆಯಂ ಜಿನಜನನಿಯ ಸೆಜ್ಜೆಯನುಜ್ಜ್ವಳಂ ಮಾಡಲುಂ, ಚಂದ್ರಿಕೆಯಂ ಚಂದ್ರಕಾಂತದ ಕರಗಮಂ ತೀವಲುಮ ಮೃತಮತಿಯನಮೃತಾಹಾರದ ಬೋನಮನೆತ್ತಲುಂ, ಲವಲವಿಕೆಯಂ ಪರಿಮಳಮಂ ಬಿತ್ತರಿಸಲುಂ, ಪದ್ಮಿಕೆಯನಗಲಂ ತಂದು ಮುಂದಿರಿಸಲುಂ, ಮನೋಹರಿಕೆಯಂ ಪಡಿಸಣವಂಗೆಯ್ಯಲುಂ ಮಾಳತಿಕೆಯಂ ಬಡ್ಡಿಸಲುಂ, ಉತ್ಪಳಿಕೆಯಂ ಕೈಘಟ್ಟನೀಡಲುಂ, ಮಂದಾರಿಕೆಯಂ ಮಂದಾರಮಾಲಿಕೆಯನೆತ್ತಲುಂ, ವಿಳಾಸವತಿಯಂ ಪಸದನಂಗೊಳಿಸಲುಂ, ಲವಂಗಿಕೆಯಂ ಲವಂಗಪಲ್ಲವರಸದೊಳ್ ವಿಳಾಸಾವಾಸಭವನಮನುತ್ತರಿಸಲುಂ, ಪ್ರಭಾವತಿಯನಿಂದ್ರನೀಲಮಣಿಭವನದೊಳ್ ಮಣಿಪ್ರದೀಪಮಂ ಬೆಳಗಲುಂ, ಚಿತ್ರಲೇಖೆಯಂ

ಅಂಗ್ರಿಯ ಕಡುಕೆಂಪು ಹರಡಿ ವೀಣೆಯ ದಂಡಿಗೆಯು ಚಿಗುರಿತೋ ಎಂಬ ಶಂಕೆಯನ್ನುಂಟು ಮಾಡಿತು. ವ|| ಮತ್ತೆ ಅಮರಿಯರ ಮುಖಗಳೆಂಬ ಚಂದ್ರಗಳ ಬೆಳಗುಗಳಲ್ಲಿ ಆಕಾಶ ಮಂಡಲವೆಲ್ಲವೂ ಚಂದ್ರಮಂಡಲಮಯವಾಯಿತು. ಅತಿ ಕೋಮಲವಾದ ಚಿಗುರಿನಂತಿರುವ ಪಾದಗಳ ನಿಕ್ಷೇಪಣಗಳಿಂದ ಮಣಿಕುಟ್ಟಿಮವೆಲ್ಲ ಪಲ್ಲವಮಯವಾಯಿತು. ಅಮೂಲ್ಯಾಭರಣಗಳ ಕಿರಣಸಮೂಹಗಳಿಂದ ರಾಜಗೃಹವೆಲ್ಲವೂ ಕಾಮನಬಿಲ್ಲಿನಿಂದ ವ್ಯಾಪ್ತವಾಯಿತು. ಚಂಚಲವಾದ ಕಣ್ಣುಗಳ ಕಿರಣಗಳ ಸಮೂಹದಿಂದ ದಿಕ್ಕುಗಳೆಲ್ಲವೂ ನೀಲೋತ್ಪಲಮಯವಾದುವು. ಅವಯವಗಳ ಕಾಂತಿಪ್ರವಾಹದಿಂದ ದಿನವೆಲ್ಲವೂ ಲಾವಣ್ಯ ಮಯವಾಯಿತು. ಹೀಗೆ ನಾಭಿರಾಜನ ಗೃಹವೆಲ್ಲವೂ ಕಾಮಾಮೃತಪ್ರಚುರವಾಗಿಯೂ ಶೃಂಗಾರರಸಪ್ರಚುರವಾಗಿಯೂ ಸೌಕುಮಾರ್ಯಮಯವಾಗಿಯೂ ಅನುರಾಗಮಯ ವಾಗಿಯೂ ಆಶ್ಚರ್ಯಮಯವಾಗಿಯೂ ತೋರಿಬಂದಿತು. ಸುರಮಹತ್ತರಿಕೆಯರು ಅಮರಗಣಿಕೆಯರನ್ನು ಹೆಸರು ಹಿಡಿದು ಕರೆದು- "ನಿಪುಣಿಕೆ! ನೀನು ಜಿನಜನನಿಯ ಹಾಸಿಗೆಯನ್ನು ಉಜ್ವಲಗೊಳಿಸು; ಚಂದ್ರಿಕೆ! ನೀನು ಚಂದ್ರಕಾಂತದ ಜಲಪಾತ್ರೆಯನ್ನು ತುಂಬು; ಅಮೃತಮತಿ! ನೀನು ಅಮೃತಾನ್ನವನ್ನು ಒಯ್ಯು; ಲವಲವಿಕೆ! ನೀನು ಪರಿಮಳವನ್ನು ಬಿತ್ತರಿಸು; ಪದ್ಮಿಕೆ! ನೀನು ಊಟದ ತಟ್ಟೆಯನ್ನು ತಂದು ಮುಂದಿರಿಸು; ಮನೋಹರಿಕೆ! ನೀನು ಮೇಲ್ವಿಚಾರಣೆಮಾಡು[1]; ಮಾಲತಿಕೆ! ನೀನು ಬಡಿಸು; ಉತ್ಪಲಿಕೆ! ನೀನು ಕೈಗಟ್ಟಿಯನ್ನು (ಸುಗಂಧಲೇಪನವನ್ನು?) ನೀಡು; ಮಂದಾರಿಕೆ! ನೀನು ಮಂದಾರಪುಷ್ಪಮಾಲೆಯನ್ನು

1 ಪಡಿಸಣ = ಪ್ರತೀಕ್ಷಣ (ಮೇಲ್ವಿಚಾರಣೆ). ಪಡಿಸಣಿಗನೆಂದರೆ ಸೇವಕನೆಂದು ಭಟ್ಟಾಕಳಂಕನು ಹೇಳಿದ್ದಾನೆ (ಶಬ್ದಾನುಶಾಸನ-೪೦೭). ಅವನ ಮತದಂತೆ ಪ್ರತಿಸ್ಥಾನ = ಪಡಿಸಣ = ಉಚ್ಛಿಷ್ಟಭೋಜನ.

ಮಣಿಸ್ತಂಭಸಾಲಭಂಜಿಕಾಸ್ತನಂಗಳೊಳ್ ಕುಂಕುಮರಸಪತ್ರಲೇಖೆಯಂ ವಿರಚಿಸಲುಂ, ಮಯೂರಿಕೆಯಂ ಧಾರಾಗೃಹಕ್ಕೆ ಗೃಹಮಯೂರಂಗಳಂ ನಡೆಯಿಸಲುಂ, ಚೂತಲತಿಕೆಯಂ ಕನಕಪಂಜರಾಂತರ್ಗತಕೋಕಿಳಕ್ಕೆ ಚೂತಲತಿಕಾಂಕುರಂಗಳಂ ನೀಡಲುಂ, ಮೃಣಾಳಿಕೆಯಂ ಭವನಕಳಹಂಸೆ ಬಾಳಮೃಣಾಳನಾಳಂಗಳಂ ನೀಡಲುಮಿಂತು ಪೆಱವುಮಿಸುವೆಸಂಗಳನವರವರ್ಗೆ ತಕ್ಕುವಂ ತಕ್ಕಂದದಿಂ ಪೇೞ್ದಾಗಳ್,

ವಸುಧೆಯನೇನಿವಳ್ದಿರರುಣಾಬ್ಜದಳಂಗಳೊಳರ್ತಿಯಿಂದಮ
ರ್ಚಿಸಿದರೊ ಪೇೞಿಮೆಂಬನೆಗಮುಣ್ಮುವ ಪಾದತಳಂಗಳೊಂದು ಕೆಂ
ಪೆಸೆವಿನಮತ್ತಲಿತ್ತಲೆಡೆಯಾಡುವ ದಂದುಗದಾಗಳೀಂ ಪೊದ
ೞ್ದಿಸಿದದೊ ಚಾರುದೇವಗಣಿಕಾಮಣಿನೂಪುರಮಂಜುಶಿಂಜಿತಂ ೨೨

ಮನಮೊಲ್ದಿಂದ್ರನಿವಾಸಸಂಭವಶುಚಿತದ್ರವ್ಯಂಗಳಿಂ ಗರ್ಭಶೋ
ಧನಮಂ ದೇವಿಯರಿರ್ದು ಮಾಡೆ ಪೆಱದಿನ್ನೇನೆಂಬುದಾಕಾಂತೆಗಂ
ದು ನಯಂ ಬೇಱೆ ಬೆಡಂಗು ಬೇಱೆ ಪೊಳೆವಂಗಚ್ಛಾಯೆಯುಂ ಬೇಱೆ ತೊ
ಟ್ಟನೆ ಮೆಯ್ವೋಱೆ ವಿಶುದ್ಧಮಪ್ಪ ಪಳಿಕಿಂ ಪೆಣ್ಮಾಡಿದಂತೊಪ್ಪಿದಳ್ ೨೩

ಕಟ್ಟಿಕೊಡು; ವಿಲಾಸವತಿ! ನೀನು ಜಿನಜನನಿಗೆ ಅಲಂಕಾರ ಮಾಡು; ಲವಲಿಕೆ! ನೀನು ಲವಂಗಪಲ್ಲವರಸವನ್ನು ವಿಲಾಸಭವನದಲ್ಲಿ ಚಿಮುಕಿಸು; ಪ್ರಭಾವತಿ! ನೀನು ಇಂದ್ರನೀಲಭವನದಲ್ಲಿ ಮಣಿಪ್ರದೀಪವನ್ನು ಹಚ್ಚು; ಚಿತ್ರಲೇಖೆ! ನೀನು ಮಣಿಮಯವಾದ ಕಂಬಗಳಲ್ಲಿರುವ ಬೊಂಬೆಗಳ ಸ್ತನಗಳಲ್ಲಿ, ಕುಂಕುಮರಸದಿಂದ ಪತ್ರರೇಖೆಗಳನ್ನು ವಿರಚಿಸು; ಮಯೂರಿಕೆ! ನೀನು ಧಾರಾಗೃಹಕ್ಕೆ ಮನೆ ನವಿಲುಗಳನ್ನು ಕರೆದುಕೊಂಡು ಹೋಗು; ಚೂತಲತಿಕೆ! ನೀನು ಚಿನ್ನದ ಪಂಜರಗಳಲ್ಲಿರುವ ಕೋಗಿಲೆಗಳಿಗೆ ಮಾವಿನಬಳ್ಳಿಯ ಚಿಗುರು"ಗಳನ್ನು ನೀಡು. ಮೃಣಾಲಿಕೆ! ನೀನು ಭವನ ಕಲಹಂಸಗಳಿಗೆ ಎಳದಾವರೆಯ ದಂಟುಗಳನ್ನು ನೀಡು"- ಹೀಗೆ ಅವರವರಿಗೆ ತಕ್ಕುವೆನಿಸಿದ ಸೇವಾವೃತ್ತಿಗಳಲ್ಲಿ ಅವರನ್ನು ತೊಡಗಿಸಿ ಹೇಳುತ್ತಿದ್ದರು.[1] ೨೨. ಆ ಕಾರ್ಯದಲ್ಲಿ ನಿಯುಕ್ತರಾದ ಅಮರಸ್ತ್ರೀಯರು ಕೆಲಸವನ್ನು ನಿರ್ವಹಿಸಲು ಭವನದಲ್ಲಿ ಅತ್ತ ಇತ್ತ ತಿರುಗಾಡುತ್ತಿದ್ದುದರಿಂದ ಅವರ ಅಂಗಾಲುಗಳ ಕೆಂಪುಕಾಂತಿಯು ನೆಲದಲ್ಲಿ ಹರಡಿತು. ಅದು ಇವರು ಪ್ರೀತಿಯಿಂದ ಕೆಂದಾವರೆಗಳ ಎಸಳುಗಳಿಂದ ಭೂಮಿಯನ್ನು ಪೂಜಿಸಿದರೋ ಎಂಬಂತಿತ್ತು. ಆ ದೇವಗಣಿಕೆಯರ ರತ್ನನಿರ್ಮಿತವಾದ ಕಾಲಂದುಗೆಗಳ ಮಧುರಧ್ವನಿಯು ಸುತ್ತ ಹರಡಿ ಪ್ರಕಾಶಿಸಿತು. ೨೩. ಇಂದ್ರನ ಮನೆಯಲ್ಲಿರುವ ಶುಚಿದ್ರವ್ಯಗಳಿಂದ ಸ್ವತಃ ದೇವಿಯರೇ ನಿಂತುಕೊಂಡು ಗರ್ಭಶೋಧನೆಯನ್ನು ನಡೆಯಿಸಿದರೆಂದ ಮೇಲೆ ಹೇಳತಕ್ಕುದೇನು? ತತ್ಫಲವಾಗಿ ಆ ಕಾಂತೆಯಲ್ಲಿ (ಮರುದೇವಿಯಲ್ಲಿ) ಹೊಸತಾದ ಒಂದು ನಯವೂ ಬೆಡಗೂ

---

1 ಈ ಗದ್ಯದಲ್ಲಿರುವ ವರ್ಣನೆ ಬಾಣಕವಿಯ ಸಂಸ್ಕೃತ ಕಾದಂಬರಿಯಿಂದ ಪ್ರಭಾವಿತವಾಗಿದೆ. (ನೋಡಿ : ಕಾದಂಬರಿಯ ಅಂತಃಪುರವರ್ಣನೆ). ಪಂಪನ ಗದ್ಯದಲ್ಲಿರುವ ಅಮರಿಯರ ಹೆಸರನ್ನು ಅನುವಾದದಲ್ಲಿ ಸಂಬುದ್ಧ್ಯಂತವಾಗಿ ಮಾರ್ಪಡಿಸಿಕೊಂಡಿದೆ.

ವ|| ಮತ್ತಮಮರಾಧೀಶಶಾಸನದೊಳ್ ನಾಭಿರಾಜರಾಜಮಂದಿರಾಂಗಣದೊಳ್,

ಧನದಂ ಕಾಂಚನಪಂಚರತ್ನಮಯಮಂ ರೈವೃಷ್ಟಿಯಂ ಮಾಡುವ
ಲ್ಲಿ ನಭೋಭಾಗದಿನಿಂದ್ರಚಾಪಮನಿತುಂ ಭೂಭಾಗದೊಳ್ ಬಂದು ತೊ
ಟ್ಟನೆ ಬೇರೂಱಿದುವೋ ಕವಲ್ತುವೊ ಚಳದ್ವಿದ್ಯುಲ್ಲತಾದೀಪ್ತಿಯಿಂ
ಬಿನಮೇಂ ನಾಡೆ ಬೆಡಂಗನಾಳ್ದುದೊ ವಿಯದ್ದಿಗ್ಭೂಮಿಭೂಮಂಡಲಂ ೨೪

ಕೂಡಿತ್ತುದ್ದಾಮರತ್ನಾಂಶುಗಳೊಳೆ ಧರಣೀಭಾಗಮಾಗಳ್ ಬೆಡಂಗಂ
ಮಾಡಿತ್ತಂದೊಂದು ಮಂದಾರದ ಸರಿ ಏರುವದ್ಭೃಂಗಸಂಗೀತಿ ಚೆಲ್ವಂ
ನೀಡಿತ್ತಾ ರುಂದ್ರದೇವಾನಕದೊಡನೆ ಜಯೋದ್ಘೋಷಣಂ ಮಂದಮಂದಂ
ತೀಡಿತ್ತಾಲೋಲಗಂಗಾಲಲಿತಲಹರಿಕಾಸಾರಸಾರಂ ಸಮೀರಂ ೨೫

ವ|| ಅಂತು ಧನದಂ ಸಾರ್ಧಕೋಟಿತ್ರಯಪ್ರಮಿತಪಂಚರತ್ನವೃಷ್ಟಿಯಂ ಪ್ರತಿದಿನಂ ಸುರಿಯೆ,

ಧರೆ ರತ್ನಗರ್ಭೆಯಾದುದು
ಸುರರೆಲ್ಲಂ ಹರ್ಷಗರ್ಭರಾದರ್ ಪಿರಿದ
ಚ್ಚರಿಯೆನೆ ಹಿರಣ್ಯಗರ್ಭನ
ನಿರುಪಮಗರ್ಭಾವತರಣಂಗಳ ವಿಧಿಯೊಳ್ ೨೬

ವ|| ಮತ್ತೊಂದು ದಿವಸಮಾ ಮರುದೇವಿಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮದುಕೂಲವಸನೆಯುಮೂರ್ಜಿತದಶನಮಯೂಖಜಳಪ್ರಕ್ಷಾಳಿತ ದಶನವಸನೆಯುಂ ಸರ್ವಾಂಗೀಣ

ಹೊಳೆಯುವ ಅಂಗಚ್ಛಾಯೆಯೂ ಕಾಣಿಸಿಕೊಂಡುವು. ಅವಳಾಗ ವಿಶುದ್ಧವಾದ ಸ್ಫಟಿಕದಿಂದ ಮಾಡಿಟ್ಟ ಹೆಣ್ಣಿನಂತೆ ಒಪ್ಪಿದಳು. ವ|| ಮತ್ತಲ್ಲದೆ ಇಂದ್ರನಾಜ್ಞೆಯಿಂದ ನಾಭಿರಾಜನ ಗೃಹಾಂಗಣದಲ್ಲಿ, ೨೪. ಕುಬೇರನು ಚಿನ್ನ ಮತ್ತು ಪಂಚರತ್ನಗಳಿಂದ ಪ್ರಚುರವಾದ ಧನವೃಷ್ಟಿಯನ್ನು ಮಾಡಿದನು. ಅವು ಆಕಾಶದಿಂದ ಕಾಮನಬಿಲ್ಲುಗಳೆಲ್ಲವೂ ತೊಟ್ಟನೆ ಭೂಮಿಗೆ ಬಂದು ಬೇರೂರಿದುವೋ, ಚಲಿಸುವ ಮಿಂಚಿನ ಬಳ್ಳಿಯ ಬೆಳಕುಗಳು ಕವಲೊಡೆದುವೋ ಎಂಬಂತೆ ಕಾಣಿಸಿದುವು. ಅದರಿಂದ ಆಕಾಶ, ದಿಕ್‌ಪ್ರದೇಶ ಮತ್ತು ಭೂಮಂಡಲಗಳು ಅತಿಯಾದ ಬೆಡಗನ್ನು ಪಡೆದುವು. ೨೫. ಭೂಭಾಗವು ಶ್ರೇಷ್ಠವಾದ ರತ್ನಾಂಶುಗಳಿಂದ ಮೆರೆಯುತ್ತಿತ್ತು. ಮಂದಾರಪುಷ್ಪಗಳ ಮಳೆಯು ಝೇಂಕರಿಸುವ ದುಂಬಿಗಳ ಸಂಗೀತದ ಚೆಲುವನ್ನುಂಟು ಮಾಡಿತು. ಗಂಗಾನದಿಯ ಜಡಿಮಳೆಯ ಝೇಂಕರಿಸುವ ದುಂಬಿಗಳ ಸಂಗೀತದ ಚೆಲುವನ್ನುಂಟು ಮಾಡಿತು. ಗಂಗಾನದಿಯ ಜಡಿಮಳೆಯ ತುಂತುರುಗಳನ್ನು ಹೊತ್ತ ಗಾಳಿಯು ದೇವದುಂದುಭಿಗಳೊಡನೆ ಜಯೋದ್ಘೋಷಣೆಯನ್ನು ಮೆಲ್ಲಮೆಲ್ಲನೆ ಹರಡಿತು. ವ|| ಹೀಗೆ ಕುಬೇರನು ಮೂರುವರೆ ಕೋಟಿಯಷ್ಟು ಪಂಚರತ್ನಗಳ ಮಳೆಯನ್ನು ಪ್ರತಿದಿನವೂ ಸುರಿಯಿಸಿದನು. ೨೬. ಹಿರಣ್ಯಗರ್ಭನ ಮರುದೇವೀಗರ್ಭಪ್ರವೇಶಕಾಲದಲ್ಲಿ ನಡೆದ ಮಂಗಳಕಾರ್ಯಗಳಿಂದ ಭೂಮಿಯು ರತ್ನಗರ್ಭಳಾದಳು. ದೇವತೆಗಳೆಲ್ಲರೂ ಹರ್ಷಗರ್ಭರಾದರು. ಇದು ಹಿರಿಯ ಅಚ್ಚರಿ. ವ|| ಮತ್ತೊಂದು ದಿನ ಮರುದೇವಿಮಹಾದೇವಿಯು ಚತುರ್ಥಸ್ನಾನ ಮಾಡಿದಳು.

ಮೌಕ್ತಿಕಾಭರಣ ಕಿರಣಾಕೀರ್ಣಸುವರ್ಣದುರ್ಲಕ್ಷಹರಿಚಂದನಾಂಗರಾಗೆಯುಂ, ಝುಂಕಾರಾನುಮಿತ ಕುಂತಳ ಕುಳಕಾಂತಿ ಮಧುಕರನಿಕರನಿಭೃತನಿಳಯಮನೋಹರ ಸನ್ಮಲ್ಲಿಕಾದಾಮಪರಾಗೆಯುಮಾಗಿ,

ಪೊಳೆವಮೃತಾಂಶುಬಿಂಬದಧಿದೇವತೆ ದುಗ್ಧಪಯೋಧಿಯಿಂದಮೀ
ಗಳೆ ಪೊಱಮಟ್ಟು ಬಂದ ಕಮಳಾಸನೆ ನಾಭಿನರೇಂದ್ರನೆಯ್ದೆ ಸಂ
ಗಳಿಸಿದ ಕೀರ್ತಿ ಮೂರ್ತಿಮತಿ ತದ್ವದನಾಬ್ಜವಿಳಾಸವಾಸದೊಳ್
ತಳರದೆ ನಿಂದ ವಾಗ್ವನಿತೆಯೆಂಬಭಿಶಂಕೆಯನುಂಟುಮಾಡಿದಳ್ ೨೨

ವ|| ಅಂತು ಸೂೞ್ಗಿವಂದನೇಕಮಸೃಣಭಿತ್ತಿವಿಲಿಖಿತೋಪವನಲತಾಭವನ ಮನೋಭವ ಕೇಳೀಲಂಪಟನಿಳಿಂಪದಂಪತಿ ವಿದ್ಯಾಧರಮಿಥುನಮನ್ಮಥೋದ್ದೀಪನದೊಳಾತ್ಮೀಯದೇಹಪ್ರಭಾ ಪ್ರವಾಹಲಲಿತ ಮಣಿದೀಪ್ತಿಪ್ರಸರದೊಳತುಚ್ಛಮಳಯಜಚ್ಛಟಾಸಿಕ್ತ ಮರಕತಮಣಿಕುಟ್ಟಿಮಪ್ರಕೀರ್ಣ ಮಧುಕರ ಕುಳಶ ಬಳಮಲ್ಲಿಕಾಮುಕುಳದೊಳತಿಬಹಳಕಾಳಾಗರುಧೂಪಧೂಮಜಾಳೋದ್ಗಾರಿ ಹರಿನೀಲಗವಾಕ್ಷಜಾಲದೊಳವಿರಳಮುಕ್ತಾದಾಮನಿಕಾಮಕಮನೀಯವಿತಾನದೊಳಮೃತಕಿರಣಮಣಿ ಪೀಠಿಕಾಧಿಷ್ಠಿತಪರ್ಯಂಕದೊಳ್

ಕಲ್ಪವೃಕ್ಷವು ಕೊಟ್ಟ ದುಗುಲವನ್ನುಟ್ಟಳು. ದಂತಕಾಂತಿಯೆಂಬ ಜಲಪ್ರವಾಹದಿಂದ ಹಲ್ಲುಗಳನ್ನೂ ತುಟಿಗಳನ್ನೂ ತೊಳೆದಳು. ಸಮಸ್ತಾವಯವಗಳಲ್ಲಿನ ಮುತ್ತಿನೊಡವೆಗಳ ಕಿರಣಗಳಿಂದ ತುಂಬಿದ ಶುಭ್ರವರ್ಣದಿಂದ ಅವಳ ಹರಿಚಂದನದ ಅಂಗರಾಗವು ಕಾಣುತ್ತಿರಲಿಲ್ಲ. ಝೇಂಕಾರಮಾತ್ರದಿಂದ ಊಹಿಸಲರ್ಹವಾದ ಕೇಶಸಮೂಹದ ಕಾಂತಿಯುಳ್ಳ ದುಂಬಿವಿಂಡಿನ ಭದ್ರಕರವಾದ ಮನೆಯೆನಿಸಿದ ಮಲ್ಲಿಕಾಮಾಲೆಯ ಧೂಳಿಯಿಂದ ಯುಕ್ತಳಾದಳು. ೨೨. ಅವಳು ಹೊಳೆಯುವ ಚಂದ್ರಬಿಂಬದ ಅಧಿದೇವತೆ, ಹಾಲಿನ ಕಡಲಿನಿಂದ ಆಗತಾನೇ ಹೊರಬಂದ ಲಕ್ಷ್ಮಿ, ನಾಭಿರಾಜನು ಗಳಿಸಿಕೊಂಡ ಅದೊಂದು ಮೂರ್ತಿಮತ್ತಾದ ಕೀರ್ತಿ, ಅವನ ಮುಖವೆಂಬ ಕಮಲದ ವಿಲಾಸವಾಸದಲ್ಲಿ ಅಲುಗದೆ ನಿಂತ ಸರಸ್ವತಿ ಎಂಬ ಶಂಕೆಯನ್ನುಂಟುಮಾಡಿದಳು. ವ|| ಆ ಸಮಯದಲ್ಲಿ ಭಾವಿಜಿನಜನನಿಯಾದ ಮರುದೇವಿಯು ಲಕ್ಷ್ಮಿಯ ಕುಲಭವನವೋ ಎಂಬಂತಿದ್ದ ಮಣಿಭವನದಲ್ಲಿ ಪವಡಿಸಿದಳು. ಅದರ ಗೋಡೆಗಳು ಉದ್ಯಾನವನದ ಲತಾಭವನಗಳಲ್ಲಿ ದೇವದಂಪತಿಗಳೂ ವಿದ್ಯಾಧರದಂಪತಿಗಳೂ ಕಾಮಕೇಳಿಯಲ್ಲಿ ನಿರತವಾದಂತಿದ್ದ ಚಿತ್ರಗಳಿಂದ ಮನ್ಮಥೋದ್ದೀಪಕವಾಗಿದ್ದುವು. ಮಣಿಭವನವು ತಮ್ಮೊಂದು ದೇಹಕಾಂತಿಗಳ ಪ್ರಭಾವದಿಂದ ಹೆಚ್ಚುಗೊಳಿಸಿದ ಮಣಿಕಾಂತಿಗಳಿಂದ ತುಂಬಿದ್ದಿತು. ಶ್ರೀಗಂಧದ ನೀರಿನಿಂದ ಪರಿಮಳಿತವಾದುದೂ ದುಂಬಿಗಳಿಂದೆರಗಿದುದೂ ಆದ ಮಲ್ಲಿಗೆಗಳಿಂದ ಕೂಡಿದ ಮಣಿಕುಟ್ಟಿಮಗಳಿಂದ ಮೆರೆಯುತ್ತಿತ್ತು. ಕಾಲಾಗರುವಿನ ಹೊಗೆಗಳನ್ನು ಹೊರಹಾಕುತ್ತಿದ್ದ ಪಚ್ಚೆಗಳಿಂದ ನಿರ್ಮಿತವಾದ ಗವಾಕ್ಷಗಳಿಂದ ಶೋಭಿಸುತ್ತಿತ್ತು. ಮೇಲುಗಟ್ಟುಗಳು ಮುತ್ತಿನ ಗೊಂಡೆಗಳಿಂದಲೂ ಸುಂದರವಾದ ಬಿಳಿಯ ಬಟ್ಟೆಗಳಿಂದಲೂ ಆವೃತವಾಗಿದ್ದುವು. ಅಲ್ಲಿನ ಚಂದ್ರಕಾಂತಮಣಿಗಳ ನೆಲಗಟ್ಟಿನ ಮೇಲೆ ನಿಕ್ಷಿಪ್ತವಾದ ಮಂಚದಲ್ಲಿ (ಮರುದೇವಿ ಮಲಗಿದ್ದಳು).

## ॥ ಲಲಿತರಗಳೆ ॥[೧]

ಶ್ರೀಗೆ ಕುಳಸದನಮೆನೆ ತೊಳಪ ಮಣಿಭವನದೊಳ್
ರಾಗರಸಮೊದವೆ ಸರಸಿರುಹಸಮವದನದೊಳ್
ಪೊಳೆವ ಪಚ್ಚದೊಳೆ ಸೊಗಯಿಸುವ ಮೃದುತಲ್ಪದೊಳ್
ಲಲಿತಗಂಗಾನದೀಲಹರಿಕಾತಲ್ಪದೊಳ್ ೧

ದೇವವನಿತೆಯರೆ ಪರಿವಿಡಿಯೊಳಡಿಗುಟ್ಟೆಯುಂ
ದೇವಗಣಿಕೆಯರೆ ಕೊಳೆ ಪಾಡೆ ದನಿ ಮುಟ್ಟೆಯುಂ
ದೇವಿ ಮರುದೇವಿ ವಿಶದೀಕೃತಾಶಾಂತದೊಳ್
ಭಾವಿಜಿನಜನನಿ ಸತಿ ಪವಡಿಸಿ ನಿಶಾಂತದೊಳ್ ೨

ಚಂಡಗಜಗಮನೆ ಪರಿಖಂಡಿತಾಘಾಳಿಯಂ
ಕಂಡಳೀರೆಂಟುಮೊಳ್ಗನಸಿನೆಸೆವೋಳಿಯಂ
ಕರಟತಟಗಳಿತಮದರುಚಿರಮುಖತೇಜನಂ
ಶರದಮಳಜಳದನಿಭ ಧವಳಗರಾಜನಂ ೩

ಹಿಮಶಿಖರಿಶಿಖರಸಮವಿಗ್ರಹಸನಾಥನಂ
ಕುಮುದದಳಧವಳರುಚಿರುಚಿರವೃಷನಾಥನಂ
ಬಾಲಹಿಮಕಿರಣದಂಷ್ಟ್ರಾನನಜ್ಯೋತಿಯಂ
ಲೋಲಲಾಂಗೂಲಮದಸಿಂಧುರಾರಾತಿಯಂ ೪

### ಲಲಿತ ರಗಳೆ

೧. ಆ ಮಣಿಭವನವು ಲಕ್ಷ್ಮಿಯ ತವರುಮನೆಯೆಂಬಂತೆ ಶೋಭಿಸುತ್ತಿತ್ತು. ಮರುದೇವಿಯ ಕಮಲವದನದಲ್ಲಿ ಅನುರಾಗರಸವು ಉದಯಿಸಿತ್ತು. ಹೊಳೆವ ವಸ್ತ್ರಗಳಿಂದ ಕೂಡಿ ಗಂಗಾನದಿಯ ಮೃದುತರಂಗದಂತೆ ಇದ್ದ ಮೃದುಶಯ್ಯೆಯಲ್ಲಿ ಅವಳು ಪವಡಿಸಿದ್ದಳು. ೨. ದೇವತಾಸ್ತ್ರೀಯರು ಅನುಕ್ರಮವಾಗಿ ಹೆಜ್ಜೆಹಾಕಿ ಕುಣಿಯುತ್ತಿರಲು, ಅಪ್ಸರೆಯರು ಮೆಚ್ಚಿ ಇಂಪಾದ ಧ್ವನಿಯಿಂದ ಹಾಡಿದರು. ಹೀಗಿರಲು ಮುಂದೆ ಜಿನಜನನಿಯಾಗಲಿರುವ ಮರುದೇವಿಯು ಮಲಗಿದ್ದು ಬೆಳಗಿನ ಜಾವದಲ್ಲಿ ದಿಕ್ಕುಗಳೆಲ್ಲವೂ ಸ್ವಚ್ಛವಾಗಿರುವಾಗ (ಮುಂದೆ ಹೇಳುವ ಪದಾರ್ಥಗಳನ್ನು ಕಂಡಳು). ೩. ಆ ಗಜಗಮನೆ, ಪಾಪೌಘಗಳನ್ನೆಲ್ಲ ತೊಡೆದುಹಾಕಬಲ್ಲ ಹದಿನಾರು ಒಳ್ಗನಸುಗಳನ್ನು ನಿಶಾಂತದಲ್ಲಿ ಕಂಡಳು. ಆಗ ಗಂಡಸ್ಥಲದಿಂದ ಸತತವಾಗಿ ಹೊರಬೀಳುತ್ತಿರುವ ಮದಜಲದಿಂದ ಮೆರೆಯುತ್ತಿರುವ ಮುಖದ ತೇಜಸ್ಸುಳ್ಳ, ಶರತ್ಕಾಲದ ಮೋಡದಂತೆ ಬೆಳ್ಳಗಿರುವ ಗಜಶ್ರೇಷ್ಠನನ್ನೂ ೪. ಹಿಮವಂತನ ಶಿಖರದಂತಾಕೃತಿವೆತ್ತ, ನೈದಿಲೆಯ ದಳಗಳಂತೆ ಬಿಳುಪಾದ ಕಾಂತಿಯಿರುವ

---

೧ ಟಿಪ್ಪಣಿ : ಓದುಗರ ಸೌಕರ್ಯಕ್ಕಾಗಿ ಈ ಲಲಿತ ರಗಳೆಯನ್ನು ನಾಲ್ಕು ಸಾಲುಗಳಿಗೆ ಒಂದೊಂದು ಖಂಡವೆಂಬಂತೆ ವಿಂಗಡಿಸಿ ಹದಿನೇಳರವರೆಗೆ ಸಂಖ್ಯೆಯನ್ನು ಕೊಡಲಾಗಿದೆ.

ಕರಿಕರೋದ್ಧೃತಪಯಃಪೂರ್ಣಘಟವಳಯೆಯಂ
ದರದಳಿತಕರಕಳಿತಸರಸಿರುಹನಿಳಯೆಯಂ
ಪ್ರಕಟಮೃದುಮಧುರರಸನಿಪತದಳಿಮಾಳೆಯಂ
ವಿಕಚನವಮಾಳಿಕಾಕುಸುಮನವಮಾಳೆಯಂ ೫

ಕುಮುದವನವನಧಿವನವಿಶದಕರಕಿರಣನಂ
ವಿಮಳತರಗಗನತಳತಿಳಕಹಿಮಕಿರಣನಂ
ವಿದಿತಕರನಿಕರದಳಿತಾಬ್ಜಿನೀಷಂಡನಂ
ಉದಯಗಿರಿಶಿಖರಗತತರುಣಮಾರ್ತಂಡನಂ ೬

ಲಲಿತವಿದ್ಯುಲ್ಲತಾರುಚಿರನಿಜಮಾಳೆಯಂ
ಮಿಳಿರ್ವ ಜಳದೊಳಗೆ ಪೊಳೆವೆರಡುವಿಳೆವಾಳೆಯಂ
ಕಳಿತಸರಸಿಜರಜೋರಂಜಿತಾಚ್ಛಾಂಭಮಂ
ಜಳಜದಳನಯನಯುಗೆ ಪೊಣರ್ದ ಮಣಿಕುಂಭಮಂ ೭

ಚಳಿತಜಳವಿಹಗರವರಮ್ಯದಿಗ್ವಳಯಮಂ
ಜಳಜಕುಳನಿಭೃತಜಳಪದ್ಮಿನೀನಿಳಯಮಂ
ಶರದಮಳಗಗನತಳವಿಭವಸಂಕಾಶಿಯಂ
ಕರಿಮಕರಕರದಳಿತವೀಚಿವಾರಾಶಿಯಂ ೮

ಶ್ರೇಷ್ಠವಾದ ಗೂಳಿಯೊಂದನ್ನೂ ಎಳೆಯಚಂದ್ರನಂತೆ ಹೊಳೆಯುತ್ತಿರುವ ಕೋರೆಹಲ್ಲುಗಳಿಂದ ಶೋಭಿತವಾದ ಮುಖಕಾಂತಿಯುಳ್ಳ ಬಾಲವನ್ನು ಅಲುಗಿಸುತ್ತಿರುವ ಮದ್ದಾನೆಯ ಶತ್ರುವೆನಿಸಿದ ಸಿಂಹವನ್ನೂ, ೫. ಆನೆಗಳು ತಮ್ಮ ಸೊಂಡಿಲಿನಿಂದ ಎತ್ತಿಹಿಡಿದ ನೀರಿನ ಗಡಿಗೆಗಳುಳ್ಳ, ಅರಳುತ್ತಿರುವ ತಾವರೆಗಳನ್ನೂ, ಕೈಗಳಿಂದ ಹಿಡಿದ ಕಮಲನಿವಾಸಿನಿಯಾದ ಕಮಲೆ (ಲಕ್ಷ್ಮಿ)ಯನ್ನೂ, ಪುಷ್ಪರಸಕ್ಕೆರಗಿದ ದುಂಬಿವಿಂಡುಳ್ಳ, ಅರಳಿದ ನವಮಾಲಿಕಾ ಕುಸುಮಗಳ ನವಮಾಲೆಯನ್ನೂ[1] ೬. ಕುಮುದವನವೆಂಬ ಕಡಲಿನ ನೀರನ್ನು ಸ್ವಚ್ಛಗೊಳಿಸುವ ಕಿರಣಗಳುಳ್ಳವನೂ, ಶುಭ್ರವಾದ ಗಗನತಲಕ್ಕೆ ತಿಲಕಪ್ರಾಯನೂ, ಆದ ಚಂದ್ರನನ್ನೂ, ತನ್ನ ಕಿರಣಗಳ ಸಮೂಹದಿಂದ ಅರಳಿಸಿದ ಕಮಲಸಮೂಹವುಳ್ಳ, ಪೂರ್ವಾಚಲದ ಶಿಖರವನ್ನಲಂಕರಿಸಿರುವ ತರುಣನಾದ ಸೂರ್ಯನನ್ನೂ, ೭. ವಿದ್ಯುಲ್ಲತೆಯಂತೆ ಸುಂದರವಾದ ನಿಜಲೀಲೆಯುಳ್ಳ, ನೀರಿನಲ್ಲಿ ಚಲಿಸುತ್ತಿರುವ ಎರಡು ಮೀನುಗಳನ್ನೂ, ಕಮಲನಯನೆಯಾದ ಮರುದೇವಿಯು ಅರಳಿದ ಕಮಲಗಳ ಧೂಳಿಯಿಂದ ಬಣ್ಣವಡೆದ ಸ್ವಚ್ಛವಾದ ನೀರುಳ್ಳ ಜೋಡಿಯ ಮಣಿಕುಂಭವನ್ನೂ, ೮. ನೀರ್ವಕ್ಕಿಗಳ ಶಬ್ದಗಳಿಂದ ರಮ್ಯವಾದ ದಿಗ್ವಲಯವುಳ್ಳ ತಾವರೆಯ ಸಮೂಹದಿಂದ ಯುಕ್ತವಾದ

1. ಪೂರ್ವಪುರಾಣದಲ್ಲಿ ಎರಡು ಮಾಲೆಗಳನ್ನು ಕಂಡಂತೆ ಹೇಳಿದೆ (೧೨-೧೦೮)

ಸೌಂದರಾನೇಕಮಣಿರುಚಿಜಳಸ್ಯಂದಿಯಂ
ಮಂದರೋತ್ತುಂಗಕಂಠೀರವಾಸಂದಿಯಂ
ವ್ಯಾಳಸುರಸುಂದರೀಜನಿತಬಹುಮಾನಮಂ
ಸ್ಥೂಳಮಣಿಖಚಿತಸುರಪರಿವೃಢವಿಮಾನಮಂ ೯

ಫಣಿಫಣಾಸ್ಫುರಿತ ಮಣಿದೀಪಿಕಾವ್ಯೂಹಮಂ
ಕ್ವಣಿತಮಣಿಕಿಂಕಿಣೀನಿನದ ಫಣಿಗೇಹಮಂ
ವಿರಚಿತೋದ್ದಾಮಸುರಪತಿಧನುವ್ರಾತಮಂ
ಸುರುಚಿರಾಂಶೂಲ್ಲಸದ್ರತ್ನಸಂಘಾತಮಂ ೧೦

ಧೃತಧಗದ್ಧಗಿತರವ ನಿರ್ಮಳಶಿಖಾಳಿಯಂ
ಸತತಗತಿಪಥಮನಡರ್ವುಜ್ಜ್ವಳಜ್ವಾಲೆಯಂ
ರಜತಗಿರಿರುಂದ್ರನಂ ಜಿತಶರಚ್ಚಂದ್ರನಂ
ನಿಜವದನವನಜಮಂ ಪುಗುವ ವೃಷಭೇಂದ್ರನಂ ೧೧

ನೋಡಿ ಗಜಗಮನೆ ಕನಸೆಂದು ಬಗೆವನ್ನೆಗಂ
ತೀಡೆ ಕಿವಿಗುಚಿತಮಂಗಳನಿನದಮನ್ನೆಗಂ
ನಿಜಮುಖಾಂಬುಜಮುಮಂಬುಜಮುಮೊಡನಲರ್ವಿನಂ
ನಿಜದ ಚೆಲ್ವಮರೆ ನಿಡುವುರ್ವುಗಳ್ ನಿಮಿರ್ವಿನಂ ೧೨

ಕೊಳವನ್ನೂ, ಶರತ್ಕಾಲದಂತೆ ನಿರ್ಮಲವೂ ಗಗನತಲದ ವಿಭವಕ್ಕೆ ಸದೃಶವೂ ಎನಿಸಿದ, ನೀರಾನೆಯ ಸೊಂಡಿಲಿಂದ ಸೀಳಲ್ಪಟ್ಟ ಅಲೆಗಳುಳ್ಳ ಸಮುದ್ರವನ್ನೂ ೯. ಸುಂದರವಾದ ವಿವಿಧ ರತ್ನಗಳ ಕಾಂತಿಗಳೆಂಬ ಜಲವನ್ನು ಸುರಿಸುತ್ತಿರುವ, ಮಂದರಪರ್ವತದಂತೆ ಉನ್ನತವಾದ ಸಿಂಹಾಸನವನ್ನೂ, ನಾಗಿನಿ ಮತ್ತು ಸುರಸುಂದರೀಜನರಿಂದ ಬಹುಮಾನಿತವಾದ ದಪ್ಪವಾದ ಮಣಿಗಳಿಂದ ಮೆಟ್ಟಲ್ಪಟ್ಟ ಸುರರಾಜನ ವಿಮಾನವನ್ನೂ ೧೦. ಹಾವಿನ ಹೆಡೆಗಳಲ್ಲಿನ ಮಣಿಗಳೆಂಬ ದೀಪಸಮೂಹವುಳ್ಳ, ದನಿಗೊಡುವ ಮಣಿಕಿಂಕಿಣಿಗಳ ಶಬ್ದದಿಂದ ಯುಕ್ತವಾದ ನಾಗಗೇಹವನ್ನೂ (ಹುತ್ತವನ್ನೂ), ಶ್ರೇಷ್ಠವಾದ ಕಾಮನಬಿಲ್ಲುಗಳ ಬಣ್ಣವನ್ನುಂಟು ಮಾಡುತ್ತಿರುವ, ಮನೋಜ್ಞವಾದ ಕಾಂತಿಗಳನ್ನು ಹೊರಸೂಸುವ ರತ್ನಗಳ ಸಮೂಹವನ್ನೂ, ೧೧. ಧಗಧಗ ಛಟಪಟ ಎಂದು ಶಬ್ದಗೊಡುವ ನಿರ್ಮಲ ಜ್ವಾಲೆಗಳುಳ್ಳ, ಆಕಾಶಮಾರ್ಗವನ್ನೆಲ್ಲ ವ್ಯಾಪಿಸಿಕೊಳ್ಳುತ್ತಿರುವ ಅಗ್ನಿಯನ್ನೂ, ಕೈಲಾಸವನ್ನೆಲ್ಲಾ ವ್ಯಾಪಿಸಿಕೊಂಡಿರುವ, ಶರತ್ಕಾಲದ ಚಂದ್ರನನ್ನು ಗೆದ್ದ, ತನ್ನ ಮುಖವೆಂಬ ತಾವರೆಯನ್ನು ಪ್ರವೇಶಿಸುತ್ತಿರುವ ವೃಷಭೇಂದ್ರನನ್ನೂ ಆ ಗಜಗಮನೆಯು ಕಂಡು ಅದನ್ನು ಕನಸೆಂದು ಬಗೆದಳು. ೧೨. * ಅಷ್ಟರಲ್ಲಿ ಕಿವಿಗುಚಿತವಾದ ಮಂಗಲ ನಿನದವು ಮುಟ್ಟಿತು. ಅವಳ ಮುಖಕಮಲವೂ ಕಮಲವೂ ಒಟ್ಟಿಗೆ ಅರಳಿದವು. ತನ್ನ ಸೌಂದರ್ಯವು ವರ್ಧಿಸಿತು

* ಇಲ್ಲಿಂದ ಮುಂದೆ ೨೮ನೆಯ ಪದ್ಯದವರೆಗಿನ ನುಡಿಗಳು ಪ್ರಕ್ಷಿಪ್ತಗಳೆಂದು ಡಾ|| ಎಲ್. ಬಸವರಾಜು ಅವರು ಹೇಳಿದ್ದಾರೆ.

ತಱಿತಱಿಗಿರ್ದ ಕುಂಕುಮದ ನಿಜವದನಮಂ
ತೆಱೆದ ಕಣ್ಗಳೊಳೆ ಧವಳಿಸಿದ ನಿಜವದನಮುಂ
ಚಲಿತಧಮ್ಮಿಲ್ಲದೊಳ್ ತೊಡರ್ವ ಪೂಮಾಲೆಯಂ
ಲಲಿತಮುಖಸೌರಭ್ಯಕ್ಕೆಱಗುವಳಿಮಾಳೆಯಂ ೧೩

ಬಗೆಗೊಳಿಸಿ ತಳರ್ದು ಗಜಗಮನೆ ಸುರನಾರಿಯರ್
ಮುಗಿದ ಕೈವೆರಸು ಬರೆ ಜನಮನೋಹಾರಿಯರ್
ಬಂದು ಜಗದಧಿಪನಂ ಸೋಂಕಿ ಕುಳ್ಳಿರ್ಪುದುಂ
ಬಂದ ಬರವವನಿಪತಿಗೊಸಗೆಯಂ ತರ್ಪುದುಂ ೧೪

ಕುಂದದಳಧವಳದಶನಾಂಶುಗಳ್ ಪೊಳೆವಿನಂ
ಸಂದ ಕನಸುಗಳನವನೊಸೆದು ಸತಿ ಬಗೆವಿನಂ
ಕ್ರಮದಿನಱಿಪುವುದುಮವನಱಿದು ಧರಣೀಶ್ವರಂ
ನಿಮಗೆ ಮಗನುಚಿತಧವಳಾತಪತ್ರೇಶ್ವರಂ ೧೫

ದಿವದಿನವತರಿಪನಪರಿಮಿತಪುಣ್ಯೋದಯಂ
ದಿವಿಜಪತಿಕೃತಮಹಾಶ್ಚರ್ಯಮಹಿಮೋದಯಂ
ದುರಿತಬಳತಿಮಿರದಳ[ದ]ಳನಕರ ದಿನಕರಂ
ಲಲಿತಬುಧ ಕುವಲಯಾನಂದಕರಹಿಮಕರಂ ೧೬

ತಡೆಯದೆನೆ ವನಜಮುಖಿ ಪಿರಿದುಮನುರಾಗದಿಂ
ದಡಿಗಡಿಗೆ ಸೊಗಯಿಸಿದಳಾಗ ಮೊಗರಾಗದಿಂ

ಹುಬ್ಬುಗಳು ನಿಮಿರಿದುವು. ೧೩. ತರತರವಾಗಿ ಕುಂಕುಮಯುಕ್ತವಾದ ಅವಳ ವದನವು ತೆರೆದ ಕಣ್ಗಳಿಂದ ಧವಳಿಸಿತು. ಅಲುಗುತ್ತಿರುವ ಅವಳ ಮುಡಿಯಲ್ಲಿ ಹೂಮಾಲೆಯು ತೊಡರಿತು. ಅವಳ ಸುಂದರವಾದ ಮುಖದ ಸುವಾಸನೆಗೆ ದುಂಬಿವಿಂಡುಗಳೆರಗಿದುವು. ೧೪. ಕೈಮುಗಿದು ಬಂದ ಜನಮನೋಹಾರಿಯರಾದ ಸುರಸುಂದರಿಯರಿಂದ ಪರಿವೃತಳಾದ ಗಜಗಮನೆ ಮರುದೇವಿಯು ಜಗದಧಿಪನಾದ ನಾಭಿರಾಜನನ್ನು ಸೋಂಕಿ ಕುಳಿತಳು. ಆಗ ಅವಳ ಬರವು ಅವನಿಗೆ ಪರಮಾನಂದವನ್ನು ತಂದಿತು. ೧೫. ಕುಂದಪುಷ್ಪದಂತೆ ಬಿಳುಪಾದ ಹಲ್ಲುಗಳ ಕಾಂತಿಗಳು ಹೊಳೆದುವು. ಸತಿ ಮರುದೇವಿಯು ತನ್ನ ಕನಸಿನಲ್ಲಿ ಕಂಡ ಸ್ವಪ್ನಗಳನ್ನು ಪ್ರೀತಿಯಿಂದ ತನ್ನ ಕಾಂತನಾದ ಧರಣೀಶ್ವರನಲ್ಲಿ ವಿಜ್ಞಾಪಿಸಿಕೊಂಡಳು. ಅದನ್ನು ಕೇಳಿ ರಾಜನಾದ ನಾಭಿರಾಜನು "ಶ್ವೇತಚ್ಛತ್ರಿಗೊಡೆಯನಾಗಬಲ್ಲವನೂ ೧೬. ಪಾಪಸಮೂಹವೆಂಬ ಕತ್ತಲೆಯನ್ನು ಬಡಿದೋಡಿಸಬಲ್ಲ ಸೂರ್ಯನೂ ವಿದ್ವಾಂಸರೆಂಬ ನೈದಿಲೆಗಳನ್ನು ಅರಳಿಸಬಲ್ಲ ಚಂದ್ರನೂ ಅಮಿತ ಪುಣ್ಯೋದಯನೂ ಇಂದ್ರಕೃತವಾದ ಮಹಾಶ್ಚರ್ಯಗಳಿಗೆ ಪಾತ್ರನೂ ಮಹಿಮವಂತನೂ ಆದ ಪುತ್ರನೊಬ್ಬನು ನಿನ್ನಲ್ಲಿ ಸ್ವರ್ಗದಿಂದ ಅವತರಿಸುವನು" ಎಂದು ಹೇಳಿದನು. ೧೭. ಅದನ್ನು ಕೇಳಿ ಕಮಲಮುಖಿಯಾದ ಮರುದೇವಿಯು ಅನುರಾಗಯುಕ್ತವಾದ ಮುಖರಾಗದಿಂದ ಅಡಿಗಡಿಗೆ ಸೊಗಯಿಸಿದಳು. ಹೀಗೆ ಕವಿತಾಗುಣಾರ್ಣವನಾದ ಮಹಾಕವಿ ಪಂಪನು

ನೆಗಟ್ದಿ ಕವಿತಾಗುಣಾರ್ಣವನ ವರ್ಣಿಸುವುದಂ
ಪೊಗಟ್ದು ಬಗೆದೋದುವರ್ ಮನದೊಳಾಟಿಸುವುದಂ
ಪಡೆವರೀ ಷೋಡಶಸ್ವಪ್ನದ ಫಲಂಗಳಂ
ಪಡೆಯಲಣಮಾಗದ ಸುಖಂಗಳಂ ಮಂಗಳಂ ೧೭

ಕಂಡುಸ್ವಪದಿಸಿ ಮಜ್ಜನ
ಮಂಡನವಿಧಿಯಂ ಲತಾಂಗಿ ನಿರ್ವರ್ತಿಸಿ ಭೂ
ಮಂಡಳಪತಿಗಱಿಪಿದೊಡಿರ್ದೆ
ಗೊಂಡದಱ ಫಲಂಗಳನಿತುಮಂ ಮನು ತಿಳಿದಂ ೨೮

ನಿಮಗೆ ತನೂಜಂ ದಿವದಿಂ
ದಮೋಘಮವತರಿಸಿದಪ್ಪನಖಿಳವಿನೇಯ
ಪ್ರಮದಕರಂ ದಿವಿಜೇಂದ್ರ
ಪ್ರಮೋದಕರನೆನೆ ಗುಣಾಕರಂ ತೀರ್ಥಕರಂ ೨೯

ಎಂಬುದುಮಧೀಶವಚನಕ
ದಂಬಕಮೆಂಬೊಂದು ತೆಂಕಣೆಲರೊಳ್ ನನೆವೋ
ಯ್ತೆಂಬಿನಮಾಕೆಯ ತನುಲತೆ
ತುಂಬಿದುದತಿಬಹಳಪುಳಕವಿಪುಳಶ್ರೀಯಿಂ ೩೦

ವರ್ಣಿಸಿರುವ ಷೋಡಶ ಮಹಾಸ್ವಪ್ನಗಳನ್ನು ಭಕ್ತಿಯಿಂದೋದುವವರು ಮನದ ಇಷ್ಟಾರ್ಥಗಳೆಲ್ಲವನ್ನೂ ಹೊಂದುವರು. ಇದು ಮಂಗಳ. ೨೮. ಈ ಕನಸುಗಳನ್ನು ಕಂಡು ಲತಾಂಗಿಯು ಹಾಸಿಗೆಯಿಂದೆದ್ದಳು. ಸ್ನಾನ ಮತ್ತು ಅಲಂಕಾರ ಕಾರ್ಯಗಳನ್ನು ಪೂರ್ಣಗೊಳಿಸಿ ಈ "ಷೋಡಶ ಸ್ವಪ್ನ"ಗಳ ವಿಚಾರವನ್ನು ರಾಜನಿಗರುಹಿದಳು. ಮನು[1]ವಾದ ಆ ರಾಜನು ಸಂತುಷ್ಟನಾಗಿ ಕನಸಿನ ಫಲಗಳನ್ನೆಲ್ಲ ತಿಳಿದನು. ೨೯. "ನಿನಗೆ ಯಶಸ್ವಿಯಾದ ಮಗನೊಬ್ಬನು ಸ್ವರ್ಗದಿಂದ ಇಳಿದು ಪುತ್ರನಾಗಿ ಹುಟ್ಟುವನು. ಅವನು ಎಲ್ಲ ವಿನೇಯರಿಗೂ ಸಂತೋಷಪ್ರದನು. ಅವನು ಇಂದ್ರನಿಗೂ ಸಂತೋಷದಾಯಕನಾಗಿ ಗುಣಾಕರನಾಗಿ ತೀರ್ಥಂಕರನಾಗಿ ಬಾಳುವನು." ೩೦. ಹೀಗೆ ನಾಭಿರಾಜನು ಹೇಳಲು, ಅವನ ವಚನಕದಂಬಕವೆಂಬ ತೆಂಕಣಗಾಳಿಯಲ್ಲಿ ಆಕೆಯ ತನುಲತೆಯು ಮೊಗ್ಗುಬಿಟ್ಟ ತೆಂಬಂತೆ ರೋಮಾಂಚಾಧಿಕ್ಯಪ್ರಯುಕ್ತವಾದ ಕಾಂತಿಯಿಂದ ತುಂಬಿತು. ವ॥ ಅಷ್ಟರಲ್ಲಿ ಪೂರ್ವೋಕ್ತನಾದ ಸರ್ವಾರ್ಥಸಿದ್ಧೀಶ್ವರನು ಆ ಭುವನಾಂಬಿಕೆಯ ಮುಖಕಮಲವನ್ನು ಹೊಕ್ಕು ಅವಳ ಗರ್ಭವೆಂಬ ಸರೋವರದ ನೀರಿನಲ್ಲಿ ಚಂದ್ರಬಿಂಬದಂತೆ ಸಂಕ್ರಮಿಸಿದನು.

1. ನಾಭಿರಾಜನು ಹದಿನಾಲ್ಕನೆಯ ಮನು.

ವ॥ ಅನ್ನೆಗಂ ಪೂರ್ವೋಕ್ತಸರ್ವಾರ್ಥಸಿದ್ಧೀಶ್ವರನಾ ಭುವನಾಂಬಿಕೆಯ ಮುಖಾಂಬುಜಾತಮಂ ಪೊಕ್ಕುಮಾ ಗರ್ಭಸರೋವರಾಂಬುವಿನೊಳ್ ಚಂದ್ರಬಿಂಬದಂತೆ ಸಂಕ್ರಮಿಸಿದಾಗಳಾಗರ್ಭಸ್ಥಿತಾರ್ಭಕನ ವದನಚಂದ್ರನಿರ್ಗತಾಚ್ಛಧವಳಚಂದ್ರಿಕೆಯೊಳೊದವಿದಂತಾ ಮಹಾದೇವಿಯ ಮುಖೇಂದುಮಣಿದರ್ಪಣಾ ಲಾವಣ್ಯರಸವಿಸರಮನೊದವಿಸೆ ವಿಕಚಧವಳಕಮಳದಳದೀರ್ಘವಿಳೋಚನಂಗಳಾ ಲಾವಣ್ಯರಸ ಪ್ರವಾಹಕ್ಕಾಯತಪ್ರಯಾಣಂಗಳಂ ಪೋಲ್ತು ಗರ್ಭಂ ಬಳೆಯೆ ಬಳೆಯೆ,

॥ ಉಜ್ವಳ ॥

ಬಸಿಱ ತೆಳ್ಪಳಿದತ್ತೆ ಮೊಗಂ ಬೆಳ್ಪೇಱೆದುದೇ ಕುಚಚೂಚುಕಂ
ಮಸುಳ್ದುದೇ ತ್ರಿವಳೀರುಚಿಯುಂ ಮೇಣ್ಕುಂದಿತೆ ಮುನ್ನಿನ ಚೆಲ್ವಿನ?
ಪ್ಪಸಿಯ ಬಾಸೆಗೆ ಕರ್ಪೆಸೆದತ್ತೇ ಚೋದ್ಯಮಿದೆಂದು ಮಱಲ್ದು ಬ
ಣ್ಣಿಸಿದರಿಂದ್ರನ ಕಾಂತೆಯರಂತರ್ವತ್ನಿಯನಾ ನೃಪಪತ್ನಿಯಂ ೩೧

ಜ್ಞಾನಮಯಂ ತೇಜೋನಿಧಿ
ತಾನಿರ್ದುಂ ತಾಯ ಗರ್ಭದೊಳ್ ಪೀಡೆಯನಂ
ತೇನಂ ಮಾಡಿದನಿಲ್ಲ ಕೃ
ಶಾನುವ ನೆೞಲಳುರದಂತೆವೊಲ್ ಕನ್ನಡಿಯಂ ೩೨

ವ॥ ಗರ್ಭಾವತರಣಂ ಆಷಾಢಬಹುಳಬಿದಿಗೆಯುತ್ತರಾಷಾಢಾನಕ್ಷತ್ರದ ಬೆಳಗಪ್ಪ ಜಾವದೊಳ್ ಗರ್ಭಕ್ಕವತರಿಸಲೊಡಂ ದೇವೇಂದ್ರಂ ಚತು[ರ್ಣಿ][೧]ಕಾಯಾಮರರ್ವೆರಸಿ ಪ್ರಥಮಕಲ್ಯಾಣಮಂ ನಿರ್ವರ್ತಿಸಿದಂ,

ಆಗ ಗರ್ಭದಲ್ಲಿರುವ ಮಗುವಿನ ಮುಖಚಂದ್ರನಿಂದ ಬೆಳದಿಂಗಳೊದವಿದಂತೆ, ಮಹಾ ದೇವಿಯ ಮುಖೇಂದುವೆಂಬ ಮಣಿದರ್ಪಣವು ಲಾವಣ್ಯರಸದ ಪ್ರವಾಹವನ್ನುಂಟು ಮಾಡಿತು. ಅರಳಿದ ಬಿಳಿದಾವರೆಯ ದಳಗಳಂತಿರುವ ವಿಶಾಲವಾದ ಕಣ್ಣುಗಳು ಆ ಲಾವಣ್ಯರಸಪ್ರವಾಹಕ್ಕೆ ವಿಸ್ತೃತವಾದ ಕಾಲುವೆಗಳಂತೆ ತೋರಿದುವು. ಹೀಗೆ ಗರ್ಭವು ಬೆಳೆಯುತ್ತಿರಲು, ೩೧. "ಹೊಟ್ಟೆಯ ತೆಳುಪು ಅಳಿಯಿತೇ? ಮುಖವು ಬಿಳುಪನ್ನು ಪಡೆದಿತೇ? ಸ್ತನಾಗ್ರವು ಮಸುಳಿತೇ? ತ್ರಿವಳಿಗಳ ಕಾಂತಿಯೂ ನಿಸ್ತೇಜವಾಯಿತೇ? ಕಿರಿದಾದ ಹೊಕ್ಕಳರೋಮರಾಜಿಯ ಕಪ್ಪು ಅಳಿಸಿಹೋಯಿತೇ? ಅದು ಅಚ್ಚರಿ"ಯೆಂದು ಗರ್ಭಿಣಿಯಾದ ನೃಪಪತ್ನಿಯನ್ನು ಇಂದ್ರನ ನಲ್ಲೆಯರು ಮತ್ತೆ ಮತ್ತೆ ಬಣ್ಣಿಸಿದರು. ೩೨. ಬೆಂಕಿಯ ನೆರಳು ಕನ್ನಡಿಯನ್ನು ಸುಡದಿರುವಂತೆ, ಜ್ಞಾನಸ್ವರೂಪನಾದ ಈ ತೇಜೋ ನಿಧಿಯು ತಾಯಗರ್ಭದಲ್ಲಿದ್ದರೂ ಅವಳಿಗೆ ಪೀಡೆಯನ್ನೇನೂ ಮಾಡಲಿಲ್ಲ. ವ॥ ಆಷಾಢ ಬಹುಳ ಬಿದಿಗೆಯ ಉತ್ತರಾಷಾಢ ನಕ್ಷತ್ರದ ಬೆಳಗಿನ ಜಾವದಲ್ಲಿ ಗರ್ಭಾವತರಣವಾಯಿತು. ಆಗ ದೇವೇಂದ್ರನು ಚತುರ್ಣಿಕಾಯಾಮರರಿಂದ ಕೂಡಿ ಪ್ರಥಮ ಕಲ್ಯಾಣವನ್ನು

---

೧ ರ್ಣಿ (ಅನ್ಯತ್ರ), ನೋಡಿ : ದೇವತಾಶ್ಚತುರ್ಣಿಕಾಯಾ : (ತ.ಸೂ. ೪-೧)

ಪಳಿಕಿನ ಕೊಡದೊಳ್ ಸೊಡರ್ಗುಡಿ
ಬೆಳಗುವವೊಲ್ ಶುದ್ಧಗರ್ಭಗೃಹದೊಳ್ ತೇಜೋ
ನಿಳಯಂ ಬೆಳಗಿದನಱಿವಿನ
ಬೆಳಗಿನ ಮೊಳೆ ಮೊಳೆತು ಬಳೆವುದೊಂದಚ್ಚರಿಯೇ ೩೩

ಸುರತಾರಂಭವಿಭೂತಿಯೊಂದು ತಣಿವಂ ಚಿತ್ತಕ್ಕೆ ಮಾಡಲ್ ಮುಖಾಂ
ಬುರುಹಾಮೋದಮೆ ಸಾಲ್ಗುಮೆಂದು ಮನದೊಳ್ ತಾಳ್ದಿರ್ದದೊಂದಲ್ಕಱಿಂ
ಮರುದೇವೀವದನಾಂಬುಜಾತರಸಮಂ ಪೀರ್ದಂ ನೃಪಂ ತುಂಬಿ ಕೇ
ಸರಮಂ ಮುಟ್ಟದೆ ಬಂದು ಪದ್ಮಿನಿಯ ಪದ್ಮಾಮೋದಮಂ ಪೀರ್ವವೊಲ್ ೩೪

ವ|| ಅಂತು ನಿಜಮನೋನಯನಕಾಂತ ಕಾಂತಾವದನರಸಸರಸಿಜಸೌರಭಮನಾಸ್ವಾದಿಸಿ,

ಕಿಡಿಸಲ್ ಪಂಕಜದುರ್ಕನೇಂ ನೆಱೆಯದೋ ನೇತ್ರೋತ್ಪಲಾನಂದಮಂ
ಪಡೆಯಲ್ ಸಾಲದೊ ಮನ್ಮಥಂಗೆ ಜಯಮಂ ಮೇಣೀಯದೋ ಸಾಲದೇಂ
ಗಡಮೀಕಾಂತೆಯ ವಕ್ತ್ರಚಂದ್ರನೆಲೆ ತಾನೇನೆಂದು ಚಂದ್ರಂ ನಭ
ಕ್ಕಡರ್ವಂ ಗೆಲ್ಲದೆ ತನ್ನೊಳುಳ್ಳಮೃತಮಂ ಬಿಂಬಾಧರಸ್ಥಾಮೃತಂ ೩೫

ವ|| ಅಂತು ನಾಭಿರಾಜನನುನಯಪ್ರಚುರವಚನರಚನೆಗಳಿನಂತಃಕರುಣಾನುರಾಗಮಂ ಮಾಡೆ ಯುಮಮರಮನೋರಮೆಯರುಂ ಮನಮಱಿದು ನಿಜಮನೋರಥಂಗಳಂ ಸಲಿಸೆಯುಮನುಕ್ರಮದೊಳ್ ಪರಿಪೂರ್ಣಪ್ರಸವಸಮಯದೊಳ್,

ನೆರವೇರಿಸಿದನು. ೩೩. ಸ್ಫಟಿಕದ ಕೊಡದಲ್ಲಿ ದೀಪದ ಕುಡಿಯು ಬೆಳಗುವಂತೆ ಆ ಶುದ್ಧವಾದ ಗರ್ಭಗೃಹದಲ್ಲಿ ತೇಜೋನಿಧಿಯು ಬೆಳಗಿದನು. ಜ್ಞಾನಪ್ರಕಾಶಗಳ ಮೊಳಕೆಯು ಮೊಳೆತು ಬೆಳಗುವುದರಲ್ಲಿ ಏನು ಆಶ್ಚರ್ಯ? ೩೪. ಸುರತಾರಂಭದ ವೈಭವವು ನಾಭಿರಾಜನ ಚಿತ್ತಕ್ಕೆ ತಣಿವನ್ನುಂಟುಮಾಡಲು ಮರುದೇವಿಯ ಮುಖಕಮಲದ ಸುವಾಸನೆಯೊಂದೇ ಸಾಕೆಂದು ನಿಶ್ಚಯಿಸಿ, ದುಂಬಿಯು ಕೇಸರಗಳನ್ನೊಲ್ಲದೆಯೆ ಸರೋವರದ ತಾವರೆಯ ಪರಿಮಳವನ್ನು ಹೀರುವಂತೆ, ಅವಳ ಮುಖಕಮಲದ ರಸವನ್ನು ನಾಭಿರಾಜನು ಹೀರಿದನು. ವ|| ಅಂತು ತನ್ನ ಕಣ್ಮನಗಳಿಗೆ ಪ್ರಿಯಳಾದ ಕಾಂತೆಯ ಮುಖಕಮಲದ ಸೌರಭವನ್ನು ಆಸ್ವಾದಿಸಿದನು. ೩೫. "ಈ ಕಾಂತೆಯ ಮುಖಚಂದ್ರನು ಕಮಲದ ಉರ್ಕನ್ನು (ಕೊಬ್ಬನ್ನು) ಅಡಗಿಸಲು ಶಕ್ತನಾಗನೇ? ಕಣ್ಣುಗಳೆಂಬ ಕನ್ನೈದಿಲೆಗೆ ಆನಂದವನ್ನುಂಟು ಮಾಡಲು ಅಸಮರ್ಥನೆ? ಮನ್ಮಥನಿಗೆ ಗೆಲುವನ್ನು ತಂದುಕೊಡಲು ಈ ಮುಖಚಂದ್ರವೇ ಸಾಲದೆ? ತೊಂಡೆಹಣ್ಣಿನಂತಿರುವ ಕೆಳೆದುಟಿಯ ಅಮೃತವು ಚಂದ್ರನಲ್ಲಿರುವ ಅಮೃತವನ್ನು ಗೆಲ್ಲಲು ಸಾಲದೆ? ಹೀಗಿರುವಾಗ ಆ ಚಂದ್ರನು ಯಾವ ಪ್ರಯೋಜನಕ್ಕಾಗಿ (ಆಕಾಶದಲ್ಲಿ ಉದಯಿಸಿ) ಮೇಲೇರುತ್ತಿರುವನು?"[1] ವ|| ಹೀಗೆ ನಾಭಿರಾಜನು ಮೃದುಮಧುರವಾದ ಮಾತುಗಳಿಂದ

1. "ಕಿಂ ಪದ್ಮಸ್ಯರುಚಿಂ ನ ಹಂತಿ...." ಎಂಬ ಸಂಸ್ಕೃತಶ್ಲೋಕದೊಡನೆ (ಕುವಲಯಾನಂದ, ರೂಪಕೋದಾಹರಣೆ) ಹೋಲಿಸಿ. ಆ ಶ್ಲೋಕದ ಅನುವಾದವೇ ಇದು.

ಬರೆ ಚೈತ್ರಂ ಕೃಷ್ಣಪಕ್ಷಂ ದೊರೆಕೊಳೆ ನವಮೀವಾಸರಂ ಪೊರ್ದೆ ಲೋಕೋ
ತ್ತರಮಾಗಿರ್ದುತ್ತರಾಷಾಢದೊಳತಿಶುಭದಂ ಬ್ರಹ್ಮಯೋಗಂ ಮನಂಗೊಂ
ಡಿರೆ ಭಾಸ್ವನ್ನಾಭಿರಾಜಾಂಗನೆ ವಿಶದಯಶೋಭಾಗಿಯಂ ಭವ್ಯಪದ್ಮಾ
ಕರಬೋಧಾದಾಯಿಯಂ ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳಾಗಳ್ ೩೬

ವ|| ಆ ತ್ರಿಲೋಕನತಿಳಕನ ಜನ್ಮೋತ್ಸವದೊಳೇಕಸಮಯಸಮವತೀರ್ಣ ಸರ್ವರ್ತುಕ ನಂದನವಿಕಸದಶೋಕವಿಕಚ ಮಲ್ಲಿಕಾಬದ್ಧಕುಟ್ಮಳಾಡಂಬರಕದಂಬಸಾನಂದಾರವಿಂದ ವಿಕಸಿತಸಿಂಧುವಾರ ಪ್ರಬುದ್ಧಲೋಧ್ರಂಗಳಿಂ ರಾಗಮಂ ಬೀಱುವಂತೆ ಮುಗುಳ್ನಗೆ ನಗುವಂತೆ ಪುಳಕಮನೊಳಕೊಂಡಂತೆ ನಗೆಗಣ್ಗಳ ಪೊಳೆಪಂ ಕೆದಱಿದಂತೆ ಚಿನ್ನಪೂಗಳಂ ಮೆಱೆವಂತೆ ಚಂದ್ರಕಬಳಮಂ ತೊಡೆವಂತೆ ಮಹೀಕಾಂತೆ ಸೊಗಯಿಸೆ, ನಿಜಪರಿರಕ್ಷಣಕ್ಷಮಕ್ಷಮಾವಲ್ಲಭಲಾಭ ಪ್ರಮುದಿತಮೇದಿನೀಹೃದಯದಂತೆ ಜಳಮಪಗತ ಕಲುಷಮಾಗೆ, ಕರ್ಮಭೂತಲೋಪಸರ್ಗ ವಿಧ್ವಂಸನನಿಮಿತ್ತಮಾಗಿ ನೀರಾಜನಂಗೆಯ್ವಂತೆ ತದ್ಧರಾನಳಂ ದಕ್ಷಿಣಾವರ್ತಮಾಗಿ ಪಜ್ಜಳಿಸೆ, ಗಗನ ಗಂಗಾಶೀಕರನಿಕರಂಗಳಿಂದಮಾನಂದನಯನಜಲಂಗಳಂ ಸೂಸುವಂತೆ ದಿವ್ಯಾನಿಳಂ ತೀಡೆ, ಶರದ್ವಿಧುವಿಶದತದೀಯಯಶಃಪ್ರಸರಕ್ಕವಕಾಶಂಗುಡುವಂತೆ ಜಲಧರಪಟಲನಿರೋಧ ರಹಿತಮಾಕಾಶಮತಿಪ್ರಕಾಶಿತಾಶಾಂತಮಾಗೆ,

ಅಂತಃಕರಣಪೂರ್ವಕವಾಗಿ ತೃಪ್ತಿವಡೆದನು. ಆ ದೇವಸ್ತ್ರೀಯರು ಮರುದೇವಿಯ ಮನೋರಥಗಳನ್ನು ಅರಿತು ಸೇವೆ ಸಲ್ಲಿಸಲು ತೊಡಗಿದರು. ಕ್ರಮವಾಗಿ ಪ್ರಸವಕಾಲವು ಸಮೀಪಿಸಲು ೩೬. ಚೈತ್ರಮಾಸದ ಕೃಷ್ಣಪಕ್ಷವು ಬಂದಿತು. ನವಮೀ ತಿಥಿಯಲ್ಲಿ ಲೋಕೋತ್ತರವಾದ ಉತ್ತರಾಷಾಢ ನಕ್ಷತ್ರವೂ ಮಂಗಳಕರವಾದ ಬ್ರಹ್ಮಯೋಗ[1] ವೂ ಸೇರಿಕೊಂಡುವು. ನಾಭಿರಾಜನ ರಾಣಿಯಾದ ಮರುದೇವಿಯು ಸ್ವಚ್ಛವಾದ ಯಶಸ್ಸಿಗೆ ಪಾತ್ರನೂ ಭವ್ಯರೆಂಬ ತಾವರೆಗೊಳಕ್ಕೆ ಜ್ಞಾನ[2] ಗೊಡುವವನೂ ಆದ ಪುತ್ರನನ್ನು ಸೂರ್ಯೋದಯಕಾಲದಲ್ಲಿ ಹೆತ್ತಳು. ವ|| ಆ ಮೂರು ಲೋಕದೊಡೆಯನ ಜನ್ಮೋತ್ಸವ ಕಾಲದಲ್ಲಿ ಎಲ್ಲ ಋತುಗಳು ಏಕಕಾಲದಲ್ಲಿ ಕಾಣಿಸಿಕೊಂಡುವು. ನಂದನವನದಲ್ಲಿ ಅರಳಿದ ಅಶೋಕಗಳಿಂದಲೂ ಮಲ್ಲಿಗೆಯ ಮೊಗ್ಗುಗಳ ಆಡಂಬರಗಳಿಂದಲೂ ಕದಂಬಗಳಿಂದಲೂ ಆನಂದಯುಕ್ತವಾದ ಅರವಿಂದಗಳಿಂದಲೂ ವಿಕಸಿತವಾದ ಸಿಂಧುವಾರಗಳಿಂದಲೂ ಅರಳಿದ ಲೋಧ್ರಪುಷ್ಪಗಳಿಂದಲೂ (ಕ್ರಮವಾಗಿ) ರಾಗವನ್ನು ಬೀರುವಂತೆ, ಮುಗುಳ್ನಗೆಯನ್ನು ತೋರಿಸುವಂತೆ, ರೋಮಾಂಚನಗಳನ್ನೊಳಕೊಳ್ಳುವಂತೆ, ನಗೆಗಣ್ಣುಗಳ ಹೊಳಪನ್ನು ಕೆದರುವಂತೆ, ಚಿನ್ನದ ಹೂಗಳನ್ನು ಮೆರೆಯಿಸುವಂತೆ, ಚಂದ್ರಕವಳವೆಂಬ ಲೇಪನವನ್ನು ಲೇಪಿಸುವಂತೆ ಭೂಕಾಂತೆಯು ಸೊಗಯಿಸಿದಳು. ತನ್ನನ್ನು ಕಾಪಾಡಿಕೊಳ್ಳಲು ಸಮರ್ಥನಾದ ರಾಜನ ಲಾಭದಿಂದ ಸಂತುಷ್ಟಳಾದ ಭೂದೇವಿಯ ಹೃದಯದಂತೆ ನೀರು ಪ್ರಸನ್ನವಾಗಲು,

1. ಬ್ರಾಹ್ಮ ಮುಹೂರ್ತ.
2. ತಾವರೆಗೊಳವನ್ನರಳಿಸುವ ಸೂರ್ಯನಾದ

**ಪುರುಪರಮೇಶ್ವರನಿಳೆಗವ**
**ತರಿಸಿದನಿಂದರಸುವಡೆದೆವೆಂಬಂತೆ ವಲಂ**
**ಪರಮಾನಂದಪರಂಪರೆ**
**ದೊರೆಕೊಂಡತ್ತಿಂತು ಪಂಚಭೂತಂಗಳೊಳಂ** ೩೭

**ವ|| ಆಗಳುತ್ತುಂಗಪ್ರಾಸಾದಕೂಟಕೋಟಗಳ ಮೇಲೆ ಪುರಶ್ರೀವಿಳಾಸಿನಿಯ ರಾಗದ ದಾಂಗುಡಿ ಮಿಳಿರ್ವಂತೆ ಮಿಳಿರ್ವ ನವಾಮ್ರಕಮ್ರಕಿಸಲಯರಕ್ತಾಂಶುಕಧ್ವಜಂಗಳುಂ, ಆಕೆಯ ಶೃಂಗಾರಮೆ ಪಲ್ಲವಿಸಿದಂತೆ ಮಹಾದ್ವಾರತೋರಣಸ್ತಂಭಂಗಳೊಳಗೆಸೆವಭಿನವೋಲ್ಲಸತ್ಪಲ್ಲವಸಂದಾನಿತ ಸೌಂದರವಂದನ ಮಾಲೆಗಳುಂ, ಆಕೆಯ ವಿಳಾಸಹಾಸಮೆ ಪೊಱಪೊಣ್ಮಿದಂತೆ ಬೀದಿ ಬೀದಿಗಳೊಳೆಡೆಗಿಡೆದು ಕೆದಱಿದ ಕುಸುಮರಜಂಗಳುಂ, ಆಕೆಯ ನಿರ್ಭರಾನಂದಸಾಂದ್ರಲಾವಣ್ಯದ್ರವಮೆ ದೆಸೆದೆಸೆಗೆ ಪಸರಿಸಿದಂತೆ ಕುಂಕುಮಚ್ಛದ ಪಂಕಚ್ಛಟಾಚ್ಛಾದನದೊಳೆ ಸೊಗಯಿಸುವ ಗೃಹಾಂಗಣಂಗಳುಂ, ಆಕೆಯ ಪರಿವಾರವಾರಾಂಗನಾಗಣದಂತೆ ಯೌವನಮದಮುದಿತಮಾರ್ದಳಿಕವಾಂಶಿಕಪ್ರಹಸ್ತಮಾನ ವಾದ್ಯಮೃದಂಗವಂಶನಿನದಲಯಚ್ಛಂದಸುಂದರ ನಟತ್ಸುಂದರೀಸಂದೋಹಮುಂ ಅಪೂರ್ವರಮಣೀಯ ಮಾಗೆ,**

ಕರ್ಮಪ್ರಧಾನವಾದ ಭೂಮಿಯಲ್ಲಿನ ತೊಂದರೆಗಳ ವಿನಾಶಕ್ಕಾಗಿ ನೀರಾಜನ ಮಾಡುವಂತೆ ಭೂಲೋಕದ ಅಗ್ನಿಯು ದಕ್ಷಿಣಾವರ್ತವಾಗಿ ಪ್ರಜ್ವಲಿಸಲು, ಗಗನಗಂಗೆಯ ತುಂತುರು ಹನಿಗಳೆಂಬ ಆನಂದಪ್ರಯುಕ್ತವಾದ ಕಂಬನಿಗಳನ್ನು ಸೂಸುವಂತೆ ದಿವ್ಯವಾದ ಗಾಳಿ ಬೀಸಲು, ಶರತ್ಕಾಲದ ಚಂದ್ರನಂತೆ ಬೆಳ್ಳಗಿರುವ ಅವನ ಕೀರ್ತಿಪ್ರಸಾರಕ್ಕೆ ಅವಕಾಶ ಕೊಡುವಂತೆ ಮೋಡಗಳ ಸಮೂಹಗಳಿಂದ ವಿರಹಿತವಾದ ಆಕಾಶವು ದಿಗಂತವನ್ನು ಅಧಿಕವಾಗಿ ಪ್ರಕಾಶಗೊಳಿಸಿತು. ೩೭. ಆ ಪುರುಪರಮೇಶ್ವರನು ಭೂಮಿಯಲ್ಲಿ ಅವತರಿಸಿದನು. ಆದ್ದರಿಂದಲೇ ನಾವು ಒಳ್ಳೆಯ ರಾಜತ್ವವನ್ನು ಪಡೆದೆವೆಂಬಂತೆ ಪಂಚಭೂತಗಳೆಲ್ಲವೂ ಈ ಪ್ರಕಾರವಾಗಿ (ಹಿಂದಿನ ಗದ್ಯದಲ್ಲಿ ವರ್ಣಿಸಿದಂತೆ) ಪರಮಾನಂದ ಭರಿತವಾದುವು. ವ|| ಆಗ ಎತ್ತರವಾದ ಪ್ರಾಸಾದಗಳ ಮೇಲೆ ಪುರಶ್ರೀವನಿತೆಯ ರಾಗದ ನೀಳ್ಗುಡಿಗಳೇ ನೆಟ್ಟಗೆ ನಿಲ್ಲುವಂತೆ ಚಲಿಸುವ ನೂತನವಾದ ಮಾವಿನ ಮಿದುವಾದ ಚಿಗುರುಗಳಂತಿರುವ ಕೆಂಬಟ್ಟೆಯ ಧ್ವಜಗಳೂ, ಆಕೆಯ ಶೃಂಗಾರವೇ ಚಿಗುರಿದಂತೆ ಮಹಾದ್ವಾರದ ತೋರಣಸ್ತಂಭಗಳಲ್ಲಾಗತಾನೇ ಕಟ್ಟಿದ ಚಿಗುರಿನ ಸುಂದರ ವಂದನ ಮಾಲೆಗಳೂ, ಆಕೆಯ ವಿಲಾಸಹಾಸವೇ ಹೊರಹೊಮ್ಮಿತೋ ಎಂಬಂತೆ ಬೀದಿಬೀದಿಗಳಲ್ಲಿ ಕೆದರಿದ ಹೂವಿನ ಧೂಳಿಗಳೂ, ಆಕೆಯ ಆನಂದಪೂರ್ಣವಾದ ಲಾವಣ್ಯದ್ರವವು ದಿಕ್ಕು ದಿಕ್ಕುಗಳಿಗೆ ಹರಡಿದಂತೆ ಕುಂಕುಮರಸದ ಆಚ್ಛಾದನೆಯಿಂದ ಸೊಗಯಿಸುವ ಮನೆಯಂಗಳಗಳೂ ಆಕೆಯ ಪರಿವಾರದ ವಾರಸ್ತ್ರೀಜನರಂತೆ ಯೌವನವೆಂಬ ಮದ್ಯದ ಮದದಿಂದ ಹರ್ಷಿತಳಾದ ಮದ್ದಳೆಗಾರ ಕೊಳಲುಗಾರರಿಂದ ಬಾರಿಸಲ್ಪಡುವ ಮದ್ದಳೆ ಕೊಳಲುಗಳ ಶಬ್ದಕ್ಕನುಗುಣವಾಗಿ ಕುಣಿಯುವ ಸುಂದರಿಯರ ಸಮೂಹವೂ ಹಿಂದೆಂದೂ

ವಿತತೋದ್ಯತ್ಪಟವಾಸವಾಸಿತ ದಿಶಾಕಾಂತಾಗಣಂ ನಿರ್ಭರೋ
ತ್ಥಿತಪಿಷ್ಟಾತಕಪಿಂಜರೀಕೃತವಿಯಚ್ಚಕ್ರಂ ಧ್ವನತ್ತೂರ್ಯಸಂ
ತತಿನಾದಪ್ರತಿಪೂರಿತಾಖಿಳಕುಳಕ್ಷೋಣೀಧ್ರಕುಂಜಂ ಜಗ
ಕೃತಿಚೋದ್ಯಾವಹಮಾಗೆ ಪೆಂಪುವಡೆದತ್ತಂತಾತ್ಮಜನ್ಮೋತ್ಸವಂ ೩೮

ವ॥ ಆ ಪ್ರಮೋದಪ್ರಸ್ತಾವದೊಳ್;

ತ್ರಿದಶಾನೇಕಾನಕಂಗಳ್ ಮೊಳಗಿದುವು ಕರಾಸ್ಫಾಳನಂ ದೇವರಿಂದಾ
ಗದೆಯುಂ ಕಲ್ಪದ್ರುಮಂಗಳ್ ಪೊಸತಲರ್ದಲರಂ ತಾಮೆ ಸಾಲ್ವನ್ನೆಗಂ ಸೂ
ಸಿದುವೇಕಾಯ್ತೀಕಿರೀಟಕ್ಕವನತಿಯೆನೆ ದೇವೋತ್ತಮಾಂಗಂಗಳುಂ ಬಾ
ಗಿದುವಾ ತ್ರೈಲೋಕ್ಯನಾಥೋದಯಮನಱಿಪುವುಂತಾ ತ್ರಿಲೋಕಕ್ಕಮಾಗಳ್ ೩೯

ಭವನವನಜ್ಯೋತಿಃಕ
ಲ್ಪವಾಸದೊಳ್ ಕ್ರಮದೆ ಶಂಖಭೇರೀಕಂಠೀ
ರವಘಂಟಾಧ್ವನಿಗಳ್ ನೆಗ
ೞ್ದುವು ಭೋಂಕೆನೆ ಸಕಳವಿಶ್ವಪಾಶ್ಚರ್ಯಂಗಳ್ ೪೦

ತ್ರಿದಶಾಸನಂಗಳಲ್ಲಾ
ಡಿದುವು ಜಗದ್ಗುರುಗೆ ಬೇಗಮುಚ್ಚಾಸನದಿಂ
ದಿದಿರೇೞಿಮೆಂದು ಪೇೞ್ವವೊ
ಲದೇಂ ಕರಂ ತೀರ್ಥಂಕರರ ಪುಣ್ಯಂ ಪಿರಿದೋ ೪೧

ಇಲ್ಲದಷ್ಟು ಸುಂದರವಾದುವು. ೩೮. ದಿಕ್ಕಾಂತೆಯರ ಸಮೂಹವು ಬುಕ್ಕಿಯ ಹಿಟ್ಟಿನ ಸುವಾಸನೆಯಿಂದ ಕೂಡಿತು. ಆಕಾಶವೆಲ್ಲವೂ ಮೇಲಕ್ಕೆದ್ದ ಚಲ್ಲೆಹಿಟ್ಟಿನ ಹೊಂಬಣ್ಣದಿಂದ ಮೆರೆಯಿತು. ಕುಲಪರ್ವತಗಳ ಸಮೂಹವೆಲ್ಲ ತೂರ್ಯಧ್ವನಿಗಳಿಂದ ತುಂಬಿದ್ದಿತು. ಹೀಗೆ ನಾಭಿರಾಜಪುತ್ರನ ಜನ್ಮೋತ್ಸವವು ಜಗತ್ತಿಗೆಲ್ಲ ಅತ್ಯಾಶ್ಚರ್ಯಕರವಾಯಿತು. ವ॥ ಆ ಸಂತೋಷಕಾಲದಲ್ಲಿ, ೩೯. ತ್ರೈಲೋಕ್ಯನಾಥನ ಪ್ರಾದುರ್ಭಾವವನ್ನು ಜಗತ್ತಿಗೆಲ್ಲ ತಿಳಿಸುವುದಕ್ಕಾಗಿಯೇ ದೇವತೆಗಳು ಬಾರಿಸದಿದ್ದರೂ ದೇವದುಂದುಭಿಗಳು ಮೊಳಗಿದುವು. ಕಲ್ಪವೃಕ್ಷಗಳು ಆಗತಾನೆ ಅರಳಿದ ಹೂವುಗಳ ಮಳೆಯನ್ನು ತಾವಾಗಿಯೇ ಸಾಕಷ್ಟು ಸುರಿಸಿದುವು. ಕಿರೀಟಕ್ಕೆ ಅವನತಿಯೇಕಾಯಿತೆಂಬಂತೆ ದೇವತೆಗಳ ತಲೆಗಳು ತಮ್ಮಷ್ಟಕ್ಕೆ ತಾವೇ ಬಾಗಿದುವು. ೪೦. ಭವನದೇವತೆಗಳು, ವ್ಯಂತರದೇವತೆಗಳು, ಜ್ಯೋತಿರ್ದೇವತೆಗಳು ಮತ್ತು ಕಲ್ಪದೇವತೆಗಳು - ಇವರ ಭವನಗಳಲ್ಲಿ ಕ್ರಮವಾಗಿ ಶಂಖ, ಭೇರಿ, ಸಿಂಹ (ವಾದ್ಯವಿಶೇಷ), ಘಂಟೆ-ಇವುಗಳ ಧ್ವನಿಗಳು ಸಕಲಲೋಕಗಳಿಗೂ ಆಶ್ಚರ್ಯಕರವಾಗಿ ತಾನಾಗಿ ನಡೆದುವು. ೪೧. "ಉಚ್ಚಾಸನಗಳಿಂದ ಎದ್ದು ಜಗದ್ಗುರುವನ್ನು ಎದುರುಗೊಳ್ಳಿ" ಎಂದು ಹೇಳುವಂತೆ ದೇವತೆಗಳ ಆಸನಗಳು ಅಲ್ಲಾಡಿದುವು! ತೀರ್ಥಂಕರರ ಪುಣ್ಯವು

ವಾಸವನಾಸನಕಂಪದಿ
ನಾಸಮಯದೊಳವಧಿಯಂ ಪ್ರಯೋಗಿಸಿ ಬೋಧಾ
ವಾಸಾಶಯನುದಯಮನಱಿ
ದಾಸನದಿಂದೆರ್ದು ಮೂಱುಸೂಟ್ ಪೊಡೆವಟ್ಟಂ ೪೨

ವ॥ ಅಂತು ಪೊಡೆವಟ್ಟು ಜನ್ಮಾಭಿಷೇಕೋದ್ಯುಕ್ತಚಿತ್ತನಾದಾಗಳ್ ಚತುರ್ನಿ[ರ್ಣಿ]ಕಾಯಾಮರೇಂದ್ರಸಮುದಯಮಂಭೋಧಿವೇಳಾವಿಳಾಸದಿಂ ಸಾಮಾನಿಕತ್ರಾಯಸ್ತ್ರಿಂಶಪಾರಿಷದಾತ್ಮರಕ್ಷಲೋಕಪಾಳಾಭಿಯೋಗ್ಯಕಿಲ್ಬಿಷರೊಡನೆ ಗಜತುರಗರಥವೃಷಭಗಂಧರ್ವನರ್ತಕೀಪದಾತ್ಯನೀಕಂಬೆರಸು ಬಂದು ಮುಂದೆ ನಿಲ್ವುದುಂ,

ನೆಗಱ್ದಾ ದೇವೇಂದ್ರರೆಲ್ಲಂ ಬಳಸಿ ಬರೆ ಮದಶ್ರೀಯುತೈರಾವತಸ್ಕಂ
ಧಗತಂ ನಾನಾತಪತ್ರಸ್ಥಗಿತದಶದಿಶಾಮಂಡಲಂ ದೇವತೂರ್ಯಾ
ನುಗದೇವೀಗೀತಜೈನಸ್ತವಸಮುಪಹಿತಾತ್ಮೀಯಚಿತ್ತಂ ವಿಳಾಸಂ
ಮಿಗೆ ಸೌಧರ್ಮೇಂದ್ರನಂದಾಶಚಿವೆರಸು ಮಹೋತ್ಸಾಹದಿಂ ಬಂದನಾಗಳ್ ೪೩

ವ॥ ಅಂತು ಗಗನತಳದಿನವನೀತಳಕ್ಕವತರಿಸಿ ವಿವಿಧಮಣಿನಿಕೇತನಾಗ್ರಾವಲಗ್ನ ಕೇತುಮಾಳಾವಿಳಸಿತಸಾಕೇತಮಂ ಬಳಸಿ ದೇವನಿಕಾಯಮಿರೆ ಸೌಧರ್ಮೇಂದ್ರಪ್ರಮುಖಚತುರ್ನಿಕಾಯಾಮರೇಂದ್ರ

ಅದೆಷ್ಟು ಹಿರಿದಾದುದೊ? ೪೨. ಆ ಕಾಲದಲ್ಲಿ ದೇವೇಂದ್ರನ ಆಸನವೂ ಅಲುಗಿತು. ಅವನು ತನ್ನ ಅವಧಿಜ್ಞಾನದಿಂದ ಬೋಧಾವಾಸಾಶಯನ[1] (ತೀರ್ಥಂಕರನ) ಉದಯವಾಯಿತೆಂದು ತಿಳಿದು ಆಸನದಿಂದಿಳಿದು ಮೂರು ಬಾರಿ ಬಲವಂದು ನಮಸ್ಕರಿಸಿದನು. ವ॥ ಹೀಗೆ ನಮಸ್ಕರಿಸಿ ಇಂದ್ರನು ಜನ್ಮಾಭಿಷೇಕೋತ್ಸವದಲ್ಲಿ ಆಸಕ್ತಚಿತ್ತನಾದನು. ಆಗ ಚತುರ್ನಿಕಾಯಾಮರೇಂದ್ರಸಮೂಹವು ಸಮುದ್ರ ವೇಲಾವಿಲಾಸದಿಂದ ಸಾಮಾನಿಕರು, ಪಾರಿಷದರೆನಿಸಿದ ತ್ರಾಯಸ್ತ್ರಿಂಶ[2] ಪಾರಿಷದ, ಆತ್ಮರಕ್ಷ, ಲೋಕಪಾಲ, ಅಭಿಯೋಗ್ಯ, ಕಿಲ್ಬಿಷರೊಡನೆ ಆನೆ, ಕುದುರೆ, ರಥ, ಎತ್ತು, ಗಂಧರ್ವ, ನರ್ತಕೀ ಮತ್ತು ಕಾಲಾಳುಗಳ ಸೈನ್ಯಗಳಿಂದ ಕೂಡಿ ಮುಂದೆ ಬಂದು ನಿಂತಿತು. ೪೩. ಹೆಸರಾಂತ ಆ ದೇವೇಂದ್ರರೆಲ್ಲರೂ ಸುತ್ತಲೂ ಬರುತ್ತಿರಲು ಸೌಧರ್ಮೇಂದ್ರನು ಮದಲಕ್ಷ್ಮೀವಿಭೂಷಿತವಾದ ಐರಾವತವೆಂಬ ಆನೆಯ ಹೆಗಲನ್ನೇರಿ ನಾನಾ ಬಗೆಯ ಛತ್ರಿಗಳಿಂದ ದಿಙ್ಮಂಡಲವನ್ನೆಲ್ಲಾ ಮುಚ್ಚಿ, ದೇವದುಂದುಭಿಗಳ ಶಬ್ದಕ್ಕನುಸಾರವಾಗಿ ಹಾಡಲಾಗುತ್ತಿದ್ದ ಮರುದೇವಿಯನ್ನು ಕುರಿತ ಹಾಡುಗಳಲ್ಲಿಯೂ ಜಿನಸ್ತೋತ್ರಗಳಲ್ಲಿಯೂ ಚಿತ್ತವಿಟ್ಟು ಶಚೀಸಮೇತನಾಗಿ ಮಹೋತ್ಸಾಹದಿಂದ ಅಲ್ಲಿಗೆ ಬಂದನು. ವ॥ ಹೀಗೆ ಗಗನತಲದಿಂದ ದೇವತೆಗಳು ಭೂಮಿಗಿಳಿದು ಬಂದು ನಾನಾ ಮಣಿಗೃಹಗಳ ಮೇಲೆ ಹಾರಾಡುತ್ತಿರುವ ಪತಾಕೆಗಳಿಂದ ರಮ್ಯವಾದ

1. 'ಬೋಧಾವಾಸಪ್ರಿಯನುದಯಮನ್' ಎಂದು ಪಾಠಾಂತರವಿದೆ. ಈ ಪಕ್ಷದಲ್ಲಿ ಬೋಧಾವಾಸಪ್ರಿಯನೆಂದು ವಾಸವನಿಗೆ ವಿಶೇಷಣ. ಬೋಧಾವಾಸಾಶಯ = ಜ್ಞಾನಕ್ಕೆ ನೆಲೆಯಾದ ಹೃದಯವುಳ್ಳವನು.

2. 'ತ್ರಾಯಸ್ತ್ರಿಂಶ, ಪಾರಿಷದ, ಆತ್ಮರಕ್ಷ, ಲೋಕಪಾಲ, ಅಭಿಯೋಗ್ಯ, ಕಿಲ್ಬಿಷ-ಇವರು ದೇವತಾಭೇದಗಳು.

ವೃಂದಂ ನಾಭಿರಾಜರಾಜಗೇಹಾಂಗಣದೊಳ್ ಸಂದಣಿಸಿ ಬಂದಿರೆ ಶುಚಿಶಚಿಮಹಾದೇವಿ ತಿರೋಹಿತ ಶರೀರೆಯಾಗಿ,

ಮರುದೇವೀವಿಳಸತ್ಪ್ರಸೂತಿಗೃಹಮಂ ರತ್ನಪ್ರಭಾಭಾರಭಾ
ಸುರಮಂ ಪೊಕ್ಕು ತದಂಗನಾಂಕತಳದೊಳ್ ಬಾಲಾರ್ಕನಂ ಪೋಲ್ತು ಭಾ
ಸುರತೇಜೋಧಿಕನಪ್ಪ ಬಾಳನನೊಱಲ್ದಟ್ಕರ್ತು ನೋಡುತ್ತುಮಿ
ರ್ಬರುಮಂ ಮೂಮೆ ಸುರೇಂದ್ರಕಾಂತೆ ಬಲಗೊಂಡುದ್ಯನ್ಮನಃಪ್ರೀತಿಯಿಂ ೪೪

ಎಱಗಿ ಜಗತ್ತ್ರಯಗುರುಗೆರ್ದೆ
ಯೆಱಕದೆ ಪೊಗೞ್ದಖಿಳಭುವನಜನನಿಯನಾಗಳ್
ಮಱೆಯಿಸಿ ಮಾಯಾನಿದ್ರೆಯಿ
ನುಱೆ ಮಾಯಾಶಿಶುವನಿರಿಸಿ ಮುಂದಂಬಿಕೆಯಾ ೪೫

ಪಡೆಯಲ್ಕಾಗದ ನಿಧಿಯಂ
ಬಡವಂ ಪಡೆದಂತೆ ಕಮಳದಳಕರತಳದಿಂ
ಪಿಡಿದೆತ್ತಿಕೊಂಡ ಸಂತಸ
ದೊಡಮೆಯನಾಂ ಪೊಗೞಲಱಿಯೆನಿಂದ್ರಾಂಗನೆಯಾ ೪೬

ಅಲರ್ದಲರ್ಗಣ್ಗಳ ನೋಟದೆ
ಸುಲಲಿತತನು ಶಿಶುವ ಮೆಯ್ಯ ತೀಟದೆ ತನಗ
ಗ್ಗಲಿಸಿದಲಂಪಂ ಕುಡೆ ಪೊಸ
ತಲರ್ದಂಕುರಿಸಿರ್ದ ಕಲ್ಪಲತೆಯನೆ ಪೋಲ್ತಳ್ ೪೭

ಸಾಕೇತವನ್ನು ಬಳಸಿ ಬಂದರು. ಸೌಧರ್ಮೇಂದ್ರನೇ ಮೊದಲಾದ ಚತುರ್ನಿಕಾಯಾಮರರ ಗುಂಪು ನಾಭಿರಾಜನ ಗೃಹಾಂಗಣದಲ್ಲಿ ನೆರೆಯಿತು. ಆಗ ಪವಿತ್ರಳಾದ ಶಚೀದೇವಿಯು ಅದೃಶ್ಯಳಾಗಿ, ೪೪. ರತ್ನಪ್ರಭೆಗಳಿಂದ ಭಾಸುರವಾದ ಮರುದೇವಿಯ ಬಾಣಂತಿಮನೆಯನ್ನು ಹೊಕ್ಕಳು. ಮರುದೇವಿಯ ತೊಡೆಯನ್ನು ಮಂಡಿಸಿದ್ದ ಬಾಲಸೂರ್ಯನಿಗೆಣೆಯಾದ ಆ ಮಗುವನ್ನು ಪ್ರೀತಿಯಿಂದ ದಿಟ್ಟಿಸಿ ನೋಡಿದಳು. ಇಬ್ಬರನ್ನೂ ಮನಃಪ್ರೀತಿಯಿಂದ ಮೂರು ಬಾರಿ ಬಲವಂದಳು. ೪೫. ಜಗತ್ತ್ರಯಗುರುವಾದ ಆ ಬಾಲಕನನ್ನು ಹಾರ್ದಿಕವಾದ ಪ್ರೀತಿಯಿಂದ ಹೊಗಳಿದಳು. ಎಲ್ಲ ಲೋಕಕ್ಕೂ ಜನನಿಯಾದ ಮರುದೇವಿಯನ್ನು ಮಾಯಾನಿದ್ರೆಯಿಂದ ಮರೆಯಿಸಿ ಅವಳ ಮುಂದೆ ಮಾಯಾಶಿಶುವನ್ನಿರಿಸಿದಳು. ೪೬. ಪಡೆಯಲಾಗದ ನಿಧಿಯನ್ನು ಬಡವನು ಪಡೆಯುವ ಹಾಗೆ, ತಾವರೆಯೆಸಳಿನಂತಿರುವ ತನ್ನೊಂದು ಕರತಳದಿಂದ ಇಂದ್ರಾಂಗನೆಯ ಮಗುವನ್ನು ಎತ್ತಿಕೊಂಡಳು. ಅವಳ ಸಂತೋಷಾಧಿಕ್ಯವನ್ನು ನನಗೆ ಹೊಗಳಲು ಶಕ್ತಿಯಿಲ್ಲ. ೪೭. ಅರಳಿದ ಹೂವಿನಂತಿರುವ ಕಣ್ಣೋಟವೂ ಶಿಶುವಿನ ದೇಹಸ್ಪರ್ಶವೂ ಅತಿಶಯವಾದ ಆನಂದವನ್ನು ಕೊಟ್ಟಿತು. ಆದ್ದರಿಂದ ಮೃದುವಾದ ದೇಹವನ್ನು ಪಡೆದ ಶಚೀದೇವಿಯು ಆಗತಾನೇ ಚಿಗುರಿ ಹೂಬಿಟ್ಟ ಕಲ್ಪಲತೆಗೆ

ಮಂಗಳಮನೆ ಪಾಡುತ್ತುಂ
ಮಂಗಳಧಾರಿಣಿಯರಾಗಿ ಮುಂದಂ ನಡೆವಾ
ಶಾಂಗನೆಯರಿಂದೆ ದಿವಿಜೇಂ
ದ್ರಾಂಗನೆ ಕರಮೆಸೆದು ಹಂಸಗತಿಯೊಳ್ ಬಂದಳ್ ೪೮

ವ|| ಅಂತು ಬಂದು ಜಗತ್ತ್ರಿತಯಪತಿಯಂ ತ್ರಿದಶಪತಿಯ ನೀಡಿದ ಕೇಯೂರರಶ್ಮಿರಂಜಿತ ಭುಜಯುಗಳಕ್ಕೆ ನೀಡಿದಾಗಳ್ ದಿವಿಜಕುಜಜನಿತಸುಗಂಧದ್ರವ್ಯದ್ರವಸ್ಥಾಸಕಾಂಕಮಂ ನಿಜಾಂಕಮನೇಱಿಸಿ ಕೊಂಡು,

ತ್ರಿಜಗನ್ನಾಥನ ಮಜ್ಜನಕ್ಕೆ ಮಣಿಪೀಠಾಕಾರದಂತಾಗಿ ವಿ
ಶ್ವಜಗತ್ಪೂಜಿತಮಾಗಿ ಪೆಂಪುವಡೆದಾ ಹೇಮಾಚಳೇಂದ್ರಕ್ಕೆ ಕ
ಲ್ಪಜರಂ ಪೋಗಲೆ ಸನ್ನೆಗೆಯ್ಯೆ ಭಗವಜ್ಜನ್ಮಾಭಿಷೇಕೋತ್ಸವ
ಧ್ವಜಮಂ ಪೋಲ್ತುದು ರತ್ನರಂಜಿತಭುಜಾದಂಡಂ ಸುರಾಧೀಶನಾ ೪೯

ವ|| ಆಗಳ್ ಸೌಧರ್ಮೇಂದ್ರನೇಱಿದೈರಾವತಗಜೇಂದ್ರಕ್ಕೆ ನಿಜಗಜೇಂದ್ರಂಗಳಂ ಪಕ್ಕುಮಾಡಿ,

ಹಿಮಕರಬಿಂಬನಿಭಚ್ಛ
ತ್ರಮನೀಶಾನೇಂದ್ರನೆತ್ತಿದಂ ತತ್ಕರವಿ
ಭ್ರಮದಿಂ ಪದಪೊದವೆ ಸನ
ತ್ಕುಮಾರಮಾಹೇಂದ್ರರಿಕ್ಕಿದರ್ ಚಾಮರಮಂ ೫೦

ಲಟಹಯುತಂಗಳ್ ದುಗ್ಧ
ಚ್ಛಟೋಜ್ಜ್ವಲಂಗಳ್ ತದಮರಚಮರರುಹಂಗಳ್
ಸ್ಫುಟಹಸಿತಮುಕ್ತಿಲಕ್ಷ್ಮೀ
ಕಟಾಕ್ಷವಿಕ್ಷೇಪರುಚಿಯನೇಂ ತಾಳ್ದಿದುವೋ ೫೧

ಎಸೆಯಾದಳು. ೪೮. ಮಂಗಳಗೀತೆಗಳನ್ನು ಹಾಡುತ್ತಾ ಮಂಗಳದ್ರವ್ಯಗಳನ್ನು ಕೈಯಲ್ಲಿ ಹಿಡಿದು ಮುನ್ನಡೆಯುತ್ತಿದ್ದ ದಿಗಂಗನೆಯರೊಡನೆ ಶಚೀದೇವಿಯು ಹಂಸಗತಿಯಲ್ಲಿ ಬಂದಳು. ವ|| ಅಂತು ಬಂದು ಶಚಿಯು ಮೂರು ಲೋಕಗಳಿಗೂ ಒಡೆಯನಾದ ಶಿಶುವನ್ನು ಬಾಹುಮುರಿಯ ರತ್ನಕಾಂತಿಗಳಿಂದ ರಂಜಿತವಾಗಿ ಇಂದ್ರನು ನೀಡಿದ ಭುಜಯುಗಳಕ್ಕೆ ಕೊಟ್ಟಳು. ಬಳಿಕ ಕಲ್ಪವೃಕ್ಷಲಬ್ಧವಾದ ಸುಗಂಧದ್ರವದಿಂದ ಹಚ್ಚಿದ ತನ್ನ ತೊಡೆಗಳ ಮೇಲೆ ದೇವೇಂದ್ರನು ಆ ಮಗುವನ್ನು ಇಟ್ಟುಕೊಂಡನು. ೪೯. ತ್ರೈಲೋಕ್ಯನಾಥನ ಅಭಿಷೇಕಕ್ಕೆ ಮಣಿಪೀಠವೋ ಎಂಬಂತಿದ್ದ, ಸಮಸ್ತ ಜಗತ್ಪೂಜಿತವೆಂದು ಪ್ರಖ್ಯಾತಿಗೊಂಡ ಹೇಮಾಚಲಕ್ಕೆ ಹೋಗಲು ಕಲ್ಪಜರೆಲ್ಲರಿಗೂ ದೇವೇಂದ್ರನು ಸನ್ನೆಗೈದನು. ಕೈಯೆತ್ತಿ ಸನ್ನೆಗೈದಾಗ ರತ್ನರಂಜಿತವಾದ ಸುರಾಧೀಶನ ದೀರ್ಘವಾದ ಭುಜವು ಭಗವಜ್ಜನ್ಮಾಭಿಷೇಕೋತ್ಸವದ ಧ್ವಜವನ್ನು ಹೋಲಿತು. ವ|| ಆಗ ಸೌಧರ್ಮೇಂದ್ರನೇರಿದ ಐರಾವತಕ್ಕೆ ತಮ್ಮ ಗಜೇಂದ್ರಗಳೆಲ್ಲವನ್ನೂ ಹಿಂಬಾಲಿಸುವಂತೆ ಮಾಡಿ ೫೦. ಚಂದ್ರಬಿಂಬಸದೃಶವಾದ ಬೆಳ್ಗೊಡೆಯನ್ನು ಈಶಾನೇಂದ್ರನು ಎತ್ತಿದನು. ಕೈಗಳ ಬೆಡಗಿನಿಂದ ಸೊಗಸಾಗಿರುವಂತೆ ಸನತ್ಕುಮಾರ ಮಾಹೇಂದ್ರಸ್ವರ್ಗಗಳ ಇಂದ್ರರು ಚಾಮರಗಳನ್ನು ಬೀಸಿದರು. ೫೧. ಅಮರರ ಚಾಮರಗಳು ಸೌಂದರ್ಯಯುಕ್ತವೂ ಕ್ಷೀರಕಾಂತಿಯಂತೆ ಉಜ್ವಲವೂ ಆಗಿದ್ದವು. ಅವು

॥ಮಾಲಿನಿ॥

ವ॥ ಆಗಳ್,

ಎಱಗುವ ಮಕುಟಂಗಳ್ ಚೋದ್ಯಮೆಂದತ್ತಮಿತ್ತಂ
ನಿಱಿವ ಕರಯುಗಂಗಳ್ ಪೊಯ್ವ ದೇವಾನಕಂಗಳ್
ಮುಱುಕದಮರಕಾಂತಾನರ್ತನಂಗಳ್ ಬೆಡಂಗಂ
ಮೆಱೆಯೆ ದಿವಿಜವೃಂದಂ ತಂದುದಂದೊಂದು ಚೆಲ್ವಂ ೫೨

ವ॥ ಆ ಪ್ರಸ್ತಾವದೊಳ್,

ನೆಗೞ್ದೈರಾವತದಂತಿಗಾದುದು ಮೊಗಂ ಮೂವತ್ತೆಱಟ್ಕೋಟ್ಪಿಡಾ
ಮೊಗಮೊಂದೊಂದಱೊಳೆಂಟು ಕೋಡವಱೊಳಂತೊಂದೊಂದಱೊಳ್ ಪೂಗೊಳಂ
ನೆಗೞ್ದೊಂದೊಂದೆಸದಿರ್ಕುಮಾಕೊಳಗಳಂತೊಂದೊಂದಱೊಳ್ ಚಿತ್ರಪ
ತ್ರಗಣಂ ಪದ್ಮಿನಿ ನಾಡೆ ಚೆಲ್ವನೊಳಕೊಂಡೊಂದೊಂದೆ ಕಣ್ಗೊಪ್ಪುಗುಂ ೫೩

ಪೊಸಪೂವಬ್ಜನಿಯೊಂದಱೊಳ್ಪೊಗಯಿಕುಂ ಮೂವತ್ತೆರಡ್ಪೂವಿನೊಳ್
ಪೊಸಗಂಪಂ ಪುದಿದೊಪ್ಪಿ ತೋಱುವೆಸಳ್ಗಳ್ಮೂವತ್ತೆಱಟ್ಚೆಲ್ವನ
ಪ್ಪೆಸಳೋರೊಂದಱ ಮೇಲೆ ಲೀಲೆ ಮಿಗೆ ಮೂವತ್ತಿರ್ವರೋರಂತೆ ನ
ರ್ತಿಸೆ ದೇವಾಂಗನೆಯರ್ ಬೆಡಂಗನೊಳಕೊಂಡತ್ತಿಂದ್ರರುಂದ್ರದ್ವಿಪಂ ೫೪

ಸ್ಪಷ್ಟವಾಗಿ ನಗುವ ಮುಕ್ತಿಯೆಂಬ ಲಕ್ಷ್ಮಿಯ ಕಟಾಕ್ಷವಿಕ್ಷೇಪಗಳ ಕಾಂತಿಯನ್ನು ಅತಿಶಯವಾಗಿ ಧಾರಣೆ ಮಾಡಿದುವು. ವ॥ ಆಗ ೫೨. ನಮಸ್ಕರಿಸುವ ಕಿರೀಟಗಳೂ, ಆಶ್ಚರ್ಯಕರ ಎಂದು ಅತ್ತ ಇತ್ತ ನೀಡಿದ ಎರಡು ಕೈಗಳೂ, ಬಾರಿಸಲ್ಪಡುವ ದೇವದುಂದುಭಿಗಳೂ, ಸತತವಾಗಿ ನಡೆಯುತ್ತಿದ್ದ ಅಮರಸ್ತ್ರೀಯರ ನೃತ್ಯವೂ ಬೆಡಗನ್ನುಂಟುಮಾಡಿದುವು. ಹೀಗೆ ಅಮರವೃಂದವು ಸಮಾರಂಭಕ್ಕೆ ಚೆಲ್ವನ್ನು ತಂದಿತು. ವ॥ ಆ ಪ್ರಸ್ತಾಪದಲ್ಲಿ ೫೩. ಐರಾವತವೆಂಬ ಪ್ರಸಿದ್ಧ ಗಜಕ್ಕೆ ಮೂವತ್ತೆರಡು ಮುಖಗಳಾದವು. ಆ ಮುಖಗಳೊಂದೊಂದರಲ್ಲಿಯೂ ಎಂಟೆಂಟು ಕೋರೆಹಲ್ಲುಗಳಿದ್ದುವು. ಅವುಗಳಲ್ಲೊಂದೊಂದರಲ್ಲಿಯೂ ಒಂದೊಂದು ಹೂಗೊಳವು ಶೋಭಿಸುತ್ತಿತ್ತು. ಅವುಗಳಲ್ಲೊಂದೊಂದರಲ್ಲಿಯೂ ಚಿತ್ರಪತ್ರಗಳುಳ್ಳ ಒಂದೊಂದು ತಾವರೆಬಳ್ಳಿ ಕಂಗೊಳಿಸಿತು. ೫೪. ಒಂದೊಂದು ತಾವರೆಬಳ್ಳಿಯಲ್ಲಿ ಮೂವತ್ತೆರಡು ಹೊಸ ಕಮಲಗಳಿದ್ದುವು. ಅವುಗಳೊಂದೊಂದರಲ್ಲಿಯೂ ಸುವಾಸನಾಯುಕ್ತವಾದ ಮೂವತ್ತೆರಡು ಎಸಳುಗಳಿದ್ದುವು. ಚೆಲ್ವಾದ ಆ ಎಸಳುಗಳ ಮೇಲೆ ಮೂವತ್ತೆರಡು ದೇವಾಂಗನೆಯರು ಅಂದವಾಗಿ ಕುಣಿಯುತ್ತಿರಲು ಇಂದ್ರನ ವಿಶಾಲವಾದ ಐರಾವತವು ಬೆಡಗಿನಿಂದ

ವದನಕ್ಕೆಮ್ಮ ತಳಕ್ಕೆ ನೀಳ್ದ ನಗೆಗಣ್ಗಂ ತಾಂ ಗಡಂ ತನ್ನ ನೀ
ಳ್ದ ದಳಂಗಳ್ ಗಡ ಪೋಲ್ವೆಯೆಂಬ ಸೆಣಸಿಂ ಮಿಕ್ಕೇವದಿಂದಿಕ್ಕಿ ಮೆ
ಟ್ಟಿದರೀಕಾಂತೆಯರೀಸರೋರುಹದಳವ್ರಾತಂಗಳಂ ತಪ್ಪದೆಂ
ಬುದನೆಂಬನ್ನೆಗಮೇಂ ಬೆಡಂಗೆಸೆದುದೋ ದೇವಾಂಗನಾನರ್ತನಂ ೫೫

॥ಮಾಲಿನಿ॥

ನವಕಮಳದಳಂಗಳ್ ಭೀಕರಂ ಬಲ್ಪುಮಾಗಿ
ರ್ಪುವು [ದಳಕೆ][೧] ತಳಂಗಳ್ ನೋಯವೇ ಮೆಟ್ಟಿದಂದೆಂ
ದವಜಿಸಳನವಳ್ದಿರ್ ಮೆಟ್ಟಿದರ್ ಮೆಟ್ಟರೆಂಬಂ
ತವಯವದೊಳೆ ಲೀಲಾನೃತ್ಯದಿಂ ಕಣ್ಗೆವಂದರ್ ೫೬

ನಡೆನೋಡಲ್ ರೂಪು ಕೇಳಲ್ ನುಡಿ ಪುರದ ಜನಕ್ಕಾಯ್ತು ಮುನ್ನಂತೆ ಮೇಗ
ಣ್ಗಡರ್ದಾಗಳ್ ಮೆಯ್ಯ ಕಾಣಲ್ ಕಳಕಳಮಿನಿಸಂ ಕೇಳಲಾಯ್ತಂತುಮತ್ತಂ
ನಡೆಗೊಂಡಾಗಳ್ ತನುವ್ಯಕ್ತಿಯನಜೆಯಲಣಂ ಬಾರದಾಯ್ತತ್ತಣಂ ಕಾ
ಣ್ಬೆಡೆಗಂ ಗೆಂಟಾದುದೆಂಬಂತಿರೆ ಗಗನತಳೋದ್ಗಾಮಿಯಾಯ್ತಿಂದ್ರಸೈನ್ಯಂ ೫೭

**ವ॥ ಆಗಳ್ ಮೇರುಗಿರೀಂದ್ರಂಬರಮಿಂದ್ರನೀಲಶಿಲಾತಳಮಣಿಮಯಸೋಪಾನಪಜ್ತ್ತಿತ್ರಯ ರೂಪದಿನಂಬರಮೆ ಜಿನರಾಜಭಕ್ತಿಯಿಂ ಪರಿಣಾಮಿಸಿದಂತೆ ಸೊಗಯಿಸಿರ್ದ ಸೋಪಾನಪಜ್ತ್ತಿ ಮಾರ್ಗಂಗಳೊಳ್ ನಿಜಸ್ತಂಬೇರಮಘಂಟಾಟೋಪಂ ಬೆರಸಿಂಬಾಗಿ ಪೋಗೆವೋಗೆ,**

ಪ್ರಕಾಶಿಸಿತು. ೫೫. ನಮ್ಮ ಮುಖ ಮತ್ತು ಪಾದತಳಗಳಿಗೆ ಕಮಲವೂ, ನಗೆಗಣ್ಣುಗಳಿಗೆ ಅದರ ನೀಳ್ದಳಗಳೂ ಹೋಲುವವೆಂಬ ಅಸೂಯೆಯಿಂದ ಈ ಕಾಂತೆಯರು ಕಮಲದಳಗಳ ಗುಂಪನ್ನು ಕೆಡಹಿ ಮೆಟ್ಟಿದ್ದಾರೋ ಎಂಬಂತೆ ದೇವಾಂಗನೆಯರ ಕುಣಿತವು ಬೆಡಗುವಡೆದು ಎಸೆಯಿತು! ೫೬. 'ನೂತನ ಕಮಲದೆಸಳುಗಳು ಅತಿಯಾಗಿ ಶಕ್ತಿಯುತವಾಗಿರುತ್ತವೆಯೆ? ಅವನ್ನು ಮೆಟ್ಟಿದರೆ ಅವುಗಳ ದಳಗಳು ನೋವನ್ನು ಪಡೆಯವೆ? ಎಂಬೊಂದು ಕನಿಕರದಿಂದ ಅವುಗಳ ಎಸಳುಗಳನ್ನು ಮೆಟ್ಟಿದರೂ ಮೆಟ್ಟದಂತೆ ಸೌಲಭ್ಯದಿಂದ ಲೀಲಾನೃತ್ಯವನ್ನೆಸಗುತ್ತ ಶೋಭಿಸಿದರು. ೫೭. ಗಗನತಳದಲ್ಲಿ ಇಂದ್ರನ ಸೈನ್ಯವು ಹೋಗುತ್ತಿತ್ತು. ಆಗ ಅದರ ರೂಪವನ್ನು ನೋಡಲೂ ಅದರ ನುಡಿಯನ್ನು ಕೇಳಲೂ ಮೊದಲು ಪುರಜನರಿಗೆ ಸಾಧ್ಯವಾಯಿತು. ಆಮೇಲೆ ಅದು ಇನ್ನೂ ಮೇಲೆ ಹೋಗಲು ಕೊಂಚ ನೋಡಲೂ ಕಲಕಲಧ್ವನಿಯನ್ನು ಕೇಳಲೂ ಸಾಧ್ಯವಾಯಿತು. ಸುರಸೇನೆ ಇನ್ನೂ ಮೇಲೆ ಹೋಗಲಾಗಿ ಅದರ ಸೂಕ್ಷ್ಮವಾದ ಆಕೃತಿಯನ್ನೂ ನೋಡಲು ಶಕ್ಯವಾಗಲಿಲ್ಲವೆನ್ನುವಂತೆ ಕಾಣಲಿಕ್ಕಾಗ ದಿರುವಷ್ಟು ದೂರ ಇಂದ್ರಸೈನ್ಯವು ಹೋಯಿತು. ವ॥ ಆಗ ಮೇರುಪರ್ವತದವರೆಗೆ ಇಂದ್ರನೀಲದ ಚಪ್ಪಡಿಗಳಿಂದ ನಿರ್ಮಿತವಾದ ಮೂರು ಸಾಲುಮೆಟ್ಟಿಲುಗಳ ರೂಪವಾಗಿ ಆಕಾಶವೇ ಜಿನಭಕ್ತಿಯಿಂದ ಪರಿಣಮಿಸಿತೋ ಎಂಬಂತೆ ಸೊಗಯಿಸುತ್ತಿರುವ

---

೧ ತಳಕೆ (ಅನ್ಯತ್ರ)

ಕಡುಗೆಂಪೇಱಿತ್ತು ನಾನಾಭರಣಕಿರಣದಿಂದಾಗಳಾಕಾಶದೊಂದೊಂ
ದೆಡೆ ಬಿಳ್ಪೇಱಿತ್ತು ಚಂಚಚ್ಚಮರರುಹಸಹಸ್ರಂಗಳಿಂ ವ್ಯೋಮದೊಂದೊಂ
ದೆಡೆ ಕರ್ಪೇಱಿತ್ತು ದೇವದ್ವಿರದದ ಘಂಟೆಯಿಂದಂ ನಭೋಭಾಗದೊಂದೊಂ
ದೆಡೆಯೆಂಬಂತಾಗೆ ಚೆಲ್ವಾವೆಡೆಯುಮೆಸೆವಿನಂ ರಮ್ಯಮಾಯ್ತಿಂದ್ರಸೈನ್ಯಂ ೫೮

॥ ಪೃಥ್ವಿ ॥

ಅದೊಂದೆಡೆ ಸುರಾನಕಪ್ರಕಟಘೋಷದಿಂ ಚೆಲ್ವುವೆ
ತ್ತದೊಂದೆಡೆ ಸುರಾಂಗನಾಮಧುರಗೀತಿಯಿಂದೊಳ್ಪುವೆ
ತ್ತದೊಂದೆಡೆ ಸುರೇಂದ್ರಸೌಂದರಿಯರಾಟದಿಂ ಗಾಡಿವೆ
ತ್ತದೇಂ ಗಗನಮಂಡಲಂ ನೆಱೆಯೆ ಶೋಭೆಯಂ ಪೆತ್ತುದೋ ೫೯

ನಾಕಿನಿಕಾಯಂ ಜ್ಯೋತಿ
ರ್ಲೋಕಮನವಯವದಿನುಱೆಯೆ ಪೋಗೆ ಬಱಿಕ್ಕಾ
ಲೋಕಿಪ್ಪುದಾಯ್ತದನುತ್ಪಳ
ಕೋಕನದಾಕರಮೆ ಗೆತ್ತು ವಿಸ್ಮಯದಿಂದಂ ೬೦

ವ॥ ಅಂತು ಪೋಗಿ ಮಂದರಾಚಳಮನೈದಿದಾಗಳ್,

ಇದಿರಂ ಬರ್ಪಂತುಟಾಯ್ತುಚ್ಚಳಿಸುವಮರತೂರ್ಯಪ್ರತಿಧ್ವಾನದಿಂ ರಾ
ಗದಿನಟ್ಟರ್ತಾಡುವಂತಾಯ್ತನಿಲವಶಚಳಚ್ಛಾಖಶಾಖಾಳಿಯಿಂ ಬಂ
ದಿದಿರ್ಗೊಳ್ವಂತಾಯ್ತು ಕಲ್ಪಕ್ಷಿತಿರುಹಬಹುಪುಷ್ಪಾರ್ಘ್ಯದಿಂದೆಂಬಿನಂ ಚೆ
ಲ್ವಿದಿರ್ಗೊಂಡತ್ತಿಂದ್ರಶೈಲಕ್ಕತಿಶಯಮಹಿಮಂ ಬಂದೊಡಂದಾದಿದೇವಂ ೬೧

ಸೋಪಾನಮಾರ್ಗಗಳಲ್ಲಿ ತಮ್ಮ ಆನೆಗಳ ಘಂಟಾಡಂಬರಗಳಿಂದ ಕೂಡಿ ಸೈನ್ಯವು ಇಂಬಾಗಿ ಹೋಗುತ್ತಿರಲು, ೫೮. ಆಗ ಆಕಾಶದೊಂದು ಭಾಗವು ಆಭರಣ ಕಿರಣಗಳಿಂದ ತುಂಬ ಕೆಂಪಾಯಿತು. ಆಕಾಶದ ಮತ್ತೊಂದು ಭಾಗವು ಬೀಸಲ್ಪಡುತ್ತಿರುವ ಸಾವಿರಾರು ಚಾಮರಗಳಿಂದ ಬಿಳುಪಾಯಿತು! ಬೇರೊಂದು ನಭೋಭಾಗವು ದೇವಗಜಸಮೂಹದಿಂದ ಕಪ್ಪಾಯಿತು! ಹೀಗೆ ಎಲ್ಲೆಡೆಗಳಿಗೂ ಚೆಲ್ವನ್ನು ಹರಡುತ್ತ ಇಂದ್ರಸೈನ್ಯವು ರಮ್ಯವಾಗಿ ಕಾಣಿಸಿತು. ೫೯. ಗಗನದ ಒಂದೆಡೆಯು ಸುರರು ಬಾರಿಸುತ್ತಿದ್ದ ನಗಾರಿಗಳಿಂದ ಚೆಲುವಾಯಿತು. ಮತ್ತೊಂದೆಡೆಯು ಸುರಸ್ತ್ರೀಯರ ಮಧುರಗೀತದಿಂದ ಮನೋಹರವಾಯಿತು. ಬೇರೊಂದೆಡೆಯು ಸುರೇಂದ್ರಸ್ತ್ರೀಯರ ಕುಣಿತದಿಂದ ಸುಂದರವಾಯಿತು. ಹೀಗೆ ಗಗನಮಂಡಲವು ಬಹುವಾಗಿ ಶೋಭಿಸಿತು. ೬೦. ದೇವತಾಸಮೂಹವು ಜ್ಯೋತಿರ್ಲೋಕ ವನ್ನು ನಿರಾಯಾಸದಿಂದ ದಾಟಿ ಹೋಗಿ ಆ ಮೇರುಪರ್ವತವನ್ನು ಕಂಡಿತು. ಅದೇನು ನೈದಿಲೆ ಮತ್ತು ಕೆಂದಾವರೆಗಳ ಸಮುದಾಯವೋ ಎಂದು ಭ್ರಮಿಸಿ ವಿಸ್ಮಯದಿಂದ ನೋಡಿತು[1] ವ॥ ಹಾಗೆ ಮಂದರಪರ್ವತವನ್ನು ಸೇರಿದಾಗ ೬೧. ಮಹಿಮಾನ್ವಿತನಾದ ಆದಿದೇವನು ಮಂದರಶೈಲವನ್ನು ಮುಟ್ಟಲಾಗಿ, ದೇವತೆಗಳ ತುತೂರಿಗಳ ಪ್ರತಿಧ್ವನಿಯಿಂದ

---

1. ಪರ್ವತದ ಒಂದು ಭಾಗವು ಕಪ್ಪಾಗಿಯೂ, ಇನ್ನೊಂದು ಭಾಗವು ಕೆಂಪಾಗಿಯೂ ಇದ್ದುದರಿಂದ ಹಾಗೆ ಭ್ರಾಂತಿಯಾಯಿತು.

ಕಂಬುಲತಾಸುಲಲಿತಲವ
ಣಾಂಬುಧಿ ಪರಿಧಾನಮಾಗೆ ಚೆಲ್ವಂ ಪಡೆದೀ
ಜಂಬೂದ್ವೀಪಪ್ರಭುಗಿದು
ಪೊಂಬೆಸದೊಳ್ ಸಮೆದ ಮಕುಟಮಿರ್ಪಂತಿರ್ಕುಂ ೬೨

ಎಳಿಸಿ ಸುರಸಮಿತಿ ಕಲ್ಪಂ
ಗಳ ದೆಸೆಯನೆ ಬಿಸುಟು ರಮಿಸಿಯುತ್ತುಮದಲ್ಲಿಂ
ತಳರದುದಱಿನೀ ಸುರನಗ
ಮೊಳಕೊಂಡುದು ತಾನೆ ನಾಕಲೋಕಶ್ರೀಯಂ ೬೩

ಸಾಸಿರಯೋಜನಮಮರ್ದು ಸು
ರಾಸುರಸಂಸೇವ್ಯಮಾಗಿ ತೊಂಭತ್ತೊಂಬೈ
ಸಾಸಿರಯೋಜನಮಂ ನೆಗೆ
ದೀ ಸುರಗಿರಿ ಪೆಂಪನೇಂ ಪುದುಂಗೊಳಿಸಿದುದೋ ೬೪

ಜಿನಸವನಮಂಗಳಕ್ಕಾ
ನೆ ನೋಂತೆನೆಂಬಂತೆ ಶಿಖರಿ ನಿಜಶಿಖರದ ಪೆಂ
ಪನೆ ಮೆಱೆದು ಪೊಸತೆ ಮಾಡಿದು
ದೆನಗಂ ವಿಸ್ಮಯಮನದಱಿನೀನಗಮೀಗಳ್ ೬೫

ಪರ್ವತವು ಎದುರುಬರುವಂತೆಯೂ ಗಾಳಿಯಿಂದ ಇತ್ತ ಅತ್ತ ಅಲುಗಾಡುತ್ತಿರುವ ಮರದ ಕೊಂಬೆಗಳಿಂದ ಪ್ರೀತಿಯಿಂದ ಎದುರಿನಲ್ಲಿ ಕುಣಿದಂತೆಯೂ, ಕಲ್ಪವೃಕ್ಷಗಳ ಪುಷ್ಪಾರ್ಘ್ಯಗಳಿಂದ ಎದುರ್ಗೊಂಡು ಬಂದಂತೆಯೂ ಆಗಿ, ಇವುಗಳಿಂದ ಆ ಇಂದ್ರಶೈಲಕ್ಕೆ ಚೆಲುವು ಉಂಟಾಯಿತು. ೬೨. ಶಂಖದ ಬಳ್ಳಿಗಳಿಂದ ಸುಂದರವಾಗಿರುವ ಲವಣಾಂಬುಧಿಯು ಜಂಬೂದ್ವೀಪವೆಂಬ ಪ್ರಭುವಿಗೆ ಪರಿಧಾನ (ಉಡುವಬಟ್ಟೆ) ವಾಗಿರಲು, ಹಾಗೆಯೇ ಚೆಲ್ವುವಡೆದ ಆ ರಾಜನಿಗೆ ಅದು (ಮಂದರಪರ್ವತ) ಚಿನ್ನದ ಬೆಸುಗೆವಡೆದ ಕಿರೀಟವಿದ್ದಂತೆ ತೋರಿತು. ೬೩. ಸುರಸಮೂಹವು ಆಶಿಸಿ ಸ್ವರ್ಗಗಳ ಗೊಡವೆಯನ್ನೇ ಬಿಟ್ಟು ಅಲ್ಲಿಯೇ ರಮಿಸಿತು. ಆದ್ದರಿಂದ ಈ ಸುರನಗರವು ನಾಕಲೋಕದ ಕಾಂತಿಯನ್ನು ತನ್ನಷ್ಟಕ್ಕೆ ತಾನೇ ಒಳಕೊಂಡಿತ್ತು. ೬೪. ಸುರಗಿರಿಯು ಸಾವಿರ ಯೋಜನದಷ್ಟು ಹರಡಿಕೊಂಡಿದೆ, ಸುರಾಸುರರಿಂದ ಸೇವಿಸಲ್ಪಡುತ್ತಿದೆ, ತೊಂಬತ್ತೊಂಬತ್ತು ಸಾವಿರ ಯೋಜನದಷ್ಟು ಎತ್ತರವಾಗಿದೆ. ಈ ಗಿರಿಯು ಅದೇನು ಹಿರಿಮೆಯನ್ನು ತಳೆದಿದೆಯೋ! ೬೫. 'ಜಿನನ ಅಭಿಷೇಕ ರೂಪವಾದ ಮಂಗಳಕಾರ್ಯವು ನಡೆಯಲು ತೀವ್ರತಪವನ್ನು ನಾನೇ ಆಚರಿಸಿದ್ದೇನೆ' ಎಂದು ಹೇಳುವಂತೆ ಆ ಬೆಟ್ಟವು ತನ್ನ ಶಿಖರದ ಔನ್ನತ್ಯವನ್ನು ಮೆರೆಯಿಸಿತು. ಈ ನಗವು ಈಗ ನನಗೂ ವಿಸ್ಮಯವನ್ನು ಹೊಸದು ಮಾಡುತ್ತಿದೆ!

ಜಿನನಿಳಯಂಗಳ್ ನಾಲ್ಕುಂ
ಬನದೊಳಮವು ನಾಲ್ಕು ನಾಲ್ಕು ನೆಲಸಿರೆ ಗಿರಿ ಪಾ
ವನಮುಂ ಪ್ರಸಿದ್ಧಮುಂ ಸುರ
ವಿನುತಮುಮಾಯ್ತದಱ ದೊರೆಗೆ ಗಿರಿಗಳುಮೊಳವೇ ೬೬

ವ|| ಎಂದು ಮಂದರಮಹೀಧರದ ಮಹಿಮೆಯನಮರೇಂದ್ರನಮರಸಮಿತಿಗೆಲ್ಲಂ ಪೇೞ್ದು ಪೊಗೞುತ್ತುಮದಂ ತ್ರಿಃಪ್ರದಕ್ಷಿಣಂಗೆಯ್ಯೆ

ತೆರಳ್ದು ಸುರಭೂರುಹಪ್ರಸವಧೂಳಿಯಂ ಪೊಕ್ಕಳಂ
ಸುರುಳ್ದು ಸರಸೀಸರೋರುಹದಳಂಗಳಂ ಬಂದು ಮಂ
ದರೋಪವನಸಂಭವಂ ನಯದಿನಾಡಿಸಿತ್ತಾಗಳ
ಪ್ಸರಃಪ್ರಕರದೊಳ್ಗುರುಳ್ಗಳನದೊಂದು ಮಂದಾನಿಳಂ ೬೭

ಸುರಗಿರಿಯಂ ಸುರನಿಕರಂ
ತರತರದಡರ್ವಾಗಳಮರಗಣಿಕೆಯರ ಮನಂ
ವಿರುವದ[೧]ಳಿನಿಕರದೊಡನೊಡ
ನಿರದೆಱಗಿದುವಮರತರುಲತಾಂತಾವಳಿಯೊಳ್ ೬೮

ಸುರಗಿಗಿವು ಲಂಬಣಕ್ಕಿವು
ಬರಗಲೆಗಿವು ಮುಗುಳ್ಗಳಿಮ್ಮೆ ಮೇಖಳೆಗಿವು ನೂ
ಪುರರಚನೆಗಿಂತಿವೆಂದಾ
ದರದಿಂದಂ ಕೊಯ್ದರಾಯ್ದು ದಿವಿಜಾಂಗನೆಯರ್ ೬೯

೬೬. ನಾಲ್ಕು ನಾಲ್ಕು ಜಿನನಿಲಯಗಳು ನಾಲ್ಕು ವನ[1]ಗಳಲ್ಲಿ ನೆಲಸಿದ್ದವು. ಆ ಕಾರಣದಿಂದಾಗಿ ಆ ಸುರಪರ್ವತವು ಪವಿತ್ರವೂ ಪ್ರಸಿದ್ಧವೂ ದೇವವಿನುತವೂ ಆಯಿತು. ಮತ್ತಾವ ಪರ್ವತಗಳೂ ಅದನ್ನು ಸರಿಗಟ್ಟವು. ವ|| ಎಂದು ಇಂದ್ರನೂ ಮಹೇಂದ್ರಪರ್ವತದ ಮಹಿಮೆಯನ್ನು ಸುರಸಮೂಹಕ್ಕೆಲ್ಲ ಸಾರಿದನು. ಅದನ್ನು ಮೂರು ಬಾರಿ ಪ್ರದಕ್ಷಿಣೆ ಮಾಡಿದನು. ೬೭. ಕಲ್ಪವೃಕ್ಷದ ಪುಷ್ಪಪರಾಗಗಳ ಮೇಲೆ ಹೊರಳಿ ಸರೋವರದ ಕಮಲದಳಗಳಲ್ಲಿ ಸಂಚರಿಸಿ ಮಂದರೋದ್ಯಾನದಲ್ಲಿ ಒಗೆದ ಮಂದಮಾರುತವು ಅಪ್ಸರಸ್ತ್ರೀಯರ ಒಳ್ಗುರುಳುಗಳನ್ನು ನಯದಿಂದ ಆಡಿಸಿತು. ೬೮. ಸುರಗಿರಿಯನ್ನು ಸುರಸಮೂಹವು ತರತರವಾಗಿ ಹತ್ತುತ್ತಿರಲು ಅಮರಗಣಿಕೆಯರ ಮನಸ್ಸು ಝೇಂಕರಿಸುವ ದುಂಬಿಗಳೊಡನೆ ಕಲ್ಪವೃಕ್ಷಲತೆಗಳಲ್ಲಿ ನೆಟ್ಟಿತು. ೬೯. "ಸರಿಗೆಯೆಂಬ ಆಭರಣಕ್ಕಾಗಿ ಈ ಹೂಗಳು, ಇವು ಹಾರಗಳಿಗಾಗಿ, ಇವು ಬರಗಲೆಗಳೆಂಬ ಒಡವೆಗಳಿಗಾಗಿ, ಇವು

೧. ವಿರುವತ್ = ಝೇಂಕರಿಸುವ.

1. ಮೇರುಪರ್ವತದಲ್ಲಿ ಭದ್ರಶಾಲ, ನಂದನ, ಸೌಮನಸ, ಪಾಂಡುಕ ಎಂದು ನಾಲ್ಕು ವನಗಳಿವೆ.

ಪೊಸಗಂಪುಗೊಂಡುಮವಱೊಳ್
ಪಸದನಮಂ ನೆಱೆಯೆ ತಮಗೆ ಮಾಡಿಯುಮೆಂತುಂ
ಪೊಸಪೂವಿನ ಪೊಸದುಡುಗೆಯ
ಪಸವೋಡಿದುದಿಲ್ಲ ದಿವಿಜವನಿತೆಯರ್ಗಾಗಳ್ ೭೦

ಅಮರೇಶ್ವರನಿಂ ಶಚಿಯಿಂ
ನಮಗಿದನಾಘ್ರಾತಪೂತಮೆನಿಸಿ ಪರೀತ
ಭ್ರಮರಾವತಂಸಮಾದುದು
ನಮೇರುಮಂದಾರಪಾರಿಜಾತಸ್ತಂಬಕಂ ೭೧

ಘನಸಾರಸರಳಚಂದನ
ವನಮೃದುಪಲ್ಲವಮನಗ್ರಹಸ್ತದೆ ಕೊಂಡೊ
ಯ್ಯನೆ ಬೀಸೆ ಚೆಲ್ವುವಡೆದುದು
ಜಿನಂಗೆ ಚಾಮರಮನಿಕ್ಕುವಂತಮರಗಜಂ ೭೨

ಇಡಿದಿರೆ ಪೂತಮರದ್ರುಮ
ದಿಡುವುಗಳೊಳ್ ಬದ್ದವಣದ ಪುಡಿವೊಲ್ ಬೆನ್ನೊಳ್
ಬಿಡದಲುಗೆ ಕುಸುಮಕುಳರಜ
ಮಡರ್ದುದು ಸುರಗಿರಿಯನಿಂದ್ರರುಂದ್ರಗಜೇಂದ್ರಂ ೭೩

ವII ಅಂತು ಬಂದು ಪಾಂಡುಕವನದ ಪೂರ್ವೋತ್ತರಾಶಾಮುಖನಿವಾಸಿಯಾಗಿ ಶತಯೋಜನ ವಿಷ್ಕಂಭದೊಳಂ ಪಂಚಷಡ್ಯೋಜನವಿಸ್ತಾರದೊಳಮಷ್ಟಯೋಜನೋತ್ಸೇಧದೊಳಮಷ್ಟಮೀಚಂದ್ರಾ ಕೃತಿಯೊಳಮಷ್ಟಮಂಗಳಪರಿವೇಷ್ಟನದೊಳಂ ನೆಱೆದು,

ಅಂದುಗೆಗಳ ನಿರ್ಮಾಣಕ್ಕೆ ಇವು ಒಡ್ಯಾಣಗಳ ರಚನೆಗೆ" ಎಂದು ಹೇಳುತ್ತಾ ದೇವಸ್ತ್ರೀಯರು ಆ ಹೂಗಳನ್ನು ಅಥವಾ ಮೊಗ್ಗುಗಳನ್ನು ಆದರದಿಂದ ಆಯ್ದು ಕೊಯ್ದರು. ೭೦. ಗಂಧಯುಕ್ತವಾದ ಹೊಸ ಹೂವುಗಳಿಂದ ಸುರವನಿತೆಯರಿಗೆ ಅಲಂಕಾರವು ನಡೆದಿದ್ದರೂ, ಅವರಿಗೆ ಹೊಸ ಹೂಗಳ ಮತ್ತು ಹೊಸ ಉಡುಗೆಗಳ ಮೇಲಿನ ಬಯಕೆ ಹೋಗಲಿಲ್ಲ. ೭೧. 'ಇಂದ್ರ ಮತ್ತು ಇಂದ್ರಾಣಿಯರ ಅನುಗ್ರಹದ ಫಲವಾಗಿಯೇ ಭ್ರಮರಯುಕ್ತವೂ, ಅನಾಘ್ರಾತ ಪೂತವೂ ಆದ ನಮೇರು, ಮಂದಾರ, ಪಾರಿಜಾತಪುಷ್ಪಗಳ ಗೊಂಚಲುಗಳು ನಮಗೆ ಅವತಂಸವಾದುವು" ಎಂದು ದೇವಸ್ತ್ರೀಯರು ಹೇಳಿಕೊಂಡರು. ೭೨. ದೇವಗಜವು ಕರ್ಪೂರ, ದೇವದಾರು ಮತ್ತು ಚಂದನವನಗಳ ಮೃದುಪಲ್ಲವಗಳನ್ನು ಸೊಂಡಿಲಿನಿಂದ ಹಿಡಿದು ಒಯ್ಯನೆ ಬೀಸಲಾಗಿ, ಐರಾವತವು ಜಿನನಿಗೆ ಚಾಮರವನಿಕ್ಕು ವಂತೆ ಚೆಲ್ಲುವಡೆಯಿತು. ೭೩. ಕಲ್ಪವೃಕ್ಷದ ಸಂದುಗೊಂದುಗಳಲ್ಲಿ ತುಂಬಿದ ಹೂಗಳ ಪರಾಗಗಳು ಮಂಗಳವಾದ್ಯಗಳಿಗೆ ಬಳಸುವ ಪುಡಿಯಂತೆ ಬೆನ್ನಿನ ಹಿಂದೆ ಅಲುಗುತ್ತಿರಲು ಇಂದ್ರನ ಐರಾವತವು ಸುರಗಿರಿಯನ್ನು ಹತ್ತಿತು. ವII ಅಂತು ಬರಲಾಗಿ, ಪಾಂಡುಕವನದ ಈಶಾನ್ಯದಿಕ್ಕಿನಲ್ಲಿರುವ, ನೂರು ಯೋಜನದ ಸುತ್ತಳತೆಯಲ್ಲಿ ಐದಾರು ಯೋಜನದ

ಕ್ಷೀರೋದವಾರಿಧಾರಾ
ಪೂರದ ಚೆಲ್ವಿಂಗೆ ಸೆಣಸುವಂತಭಿನವನೀ
ಹಾರದ ಹಾರದ ಬೆಳ್ಪನೆ
ಬಾರಿಸಿ ಪಾಂಡುಕಶಿಲಾತಳಂ ಸೊಗಯಿಸುಗುಂ ೭೪

ಕಡೆಯೊಳ್ ತಗುಳ್ದ ರತ್ನದ
ಬೆಡಂಗುವೆತ್ತೆಸೆವ ದೀಪ್ತಿವಳಯದ ಚೆಲ್ವಂ
ಪಡೆದು ಸಲೆ ದೇವಚಾಪದ
ನಡುವಣ ಲಲಿತಾರ್ಧಚಂದ್ರನಿರ್ಪಂತಿರ್ಕುಂ ೭೫

ತನ್ಮಧ್ಯಭಾಗದಲ್ಲಿ ಕ
ನನ್ಮಣಿಮಯಸಿಂಹಪೀಠದೆರಡುಂ ಕೆಲದೊಳ್
ಜನ್ಮಾಭಿಷೇಕಕಾರ್ಯದೊ
ಳುನ್ಮನರಪ್ಪಿಂದ್ರರೆರಡುಮಾಸನಮಿರ್ಕುಂ ೭೬

ವ|| ಅಲ್ಲಿ ದೇವರಾಜನನೇಕಮಣಿಖಚಿತವಿಚಿತ್ರಸ್ತಂಭಸಂಭೃತಮುಮುತ್ತುಂಗವಸ್ತ್ರಾಂಗಕುಜಸಮುದ್ಭೂತವಸನವಿನಿರ್ಮಿತವಿತಾನವಿರಾಜಿತಮುಂ ತಾರಾತರಳಮುಕ್ತಾಫಳಲಂಬಲಂಬೂಷಭೂಷಿತಮುಂ ಆವಲಂಬಿತ ಸುರಭಿಕುಸುಮದಾಮಾಕೀರ್ಣಮುಂ ಚತುರ್ನಿಕಾಯಾಮರೇಂದ್ರವೃಂದಸಂಕೀರ್ಣಮುಮಪ್ಪ ಶ್ರೀಮಂಟಪಮಂ ವಿರಚಿಸಿ ಮೃಗರಾಜವಿಷ್ಟರದೊಳ್ ಬಾಲಕನಂ ಪೂರ್ವಾಭಿಮುಖನಿವಿಷ್ಟನಂ ಮಾಡುವುದುಂ,

ವಿಸ್ತಾರದಲ್ಲಿ ಎಂಟು ಯೋಜನದೆತ್ತರದಲ್ಲಿ, ಅಷ್ಟಮೀಚಂದ್ರನ ಆಕೃತಿಯಲ್ಲಿ ಅಷ್ಟಮಂಗಳಗಳಿಂದ ಕೂಡಿದ, ೭೪. ಕ್ಷೀರಸಮುದ್ರದ ಹೊನಲ ಚೆಲ್ವಿಗೆ ಸ್ಪರ್ಧಿಸುವಂಥದೂ ಮಂಜಿನ ಪ್ರವಾಹದ ಮತ್ತು ಮುತ್ತಿನಹಾರದ ಬಿಳುಪನ್ನು ಅಲ್ಲಗಳೆಯಬಲ್ಲುದೂ ಆಗಿ ಪಾಂಡುಕಶಿಲಾತಲವು ಅಲ್ಲಿ ಸೊಗಯಿಸಿತು. ೭೫. ಅಂಚಿನಲ್ಲಿ ರತ್ನದ ಬೆಡಗನ್ನು ತೋರುತ್ತಿರುವ ಕಾಂತಿಮಂಡಲದ ಚೆಲುವನ್ನು ಪಡೆದು ಪಾಂಡುಕಶಿಲೆಯು ಕಾಮನಬಿಲ್ಲಿನ ಮಧ್ಯದಲ್ಲಿರುವ ಸುಂದರವಾದ ಅರ್ಧಚಂದ್ರದಂತೆ ಶೋಭಿಸಿತು.[1] ೭೬. ಅದರ ನಡುವೆ ಮಣಿಮಯವಾದ ಸಿಂಹಪೀಠದ ಎರಡೂ ಪಕ್ಕಗಳಲ್ಲಿ ಜನ್ಮಾಭಿಷೇಕ ಕಾರ್ಯೋನ್ಮುಖರಾದ ಇಂದ್ರರಿಬ್ಬರ[2] ಎರಡಾಸನಗಳಿವೆ. ವ|| ಅಲ್ಲಿ ಇಂದ್ರನು, ಮಣಿಗಳಿಂದ ಮೆಟ್ಟಲ್ಪಟ್ಟ ವಿಚಿತ್ರ ಸ್ತಂಭಗಳಿಂದ ಕೂಡಿದುದೂ, ವಸ್ತ್ರಾಂಗವೃಕ್ಷಗಳಿಂದೊಗೆದ ಬಟ್ಟೆಗಳಿಂದ ಕಟ್ಟಲ್ಪಟ್ಟ ಮೇಲ್ಚಪ್ಪರಗಳಿಂದ ವಿರಾಜಿತವೂ, ತಾರೆಗಳಂತೆ ಮಿನುಗುವ ಮುತ್ತಿನ ಎಳೆಳೆ ಹಾರಗಳಿಂದ ಯುಕ್ತವೂ ಸುವಾಸನಾಮಯವಾದ ಪುಷ್ಪಹಾರಗಳಿಂದ ಸಂಕೀರ್ಣವೂ

1 ಪಾಂಡುಕಶಿಲೆಯ ಸುತ್ತಲೂ ರತ್ನಕಾಂತಿ ಹರಡಿದ್ದರಿಂದ ಕಾಮನಬಿಲ್ಲು ವಿಸ್ತರಿಸಿದಂತಿತ್ತು. ಪಾಂಡುಕಶಿಲೆ ಅರ್ಧಚಂದ್ರಾಕಾರವಾದ್ದರಿಂದ ಅರ್ಧಚಂದ್ರನಂತೆ ಶೋಭಿಸಿತು.

2. ಸೌಧರ್ಮೇಂದ್ರ, ಈಶಾನೇಂದ್ರರು.

ತನು ಕಿಱಿದಾದೊಡಮುದ್ಧ
ತ್ತನುಪ್ರಭಾಪ್ರಸರಮೆಸೆದು ಪಸರಿಸಿ ಸಿಂಹಾ
ಸನಮಂ ಪುದಿದಿರೆ ದೇವಂ
ಕನಕಕನಚ್ಛಿಖರಿಶಿಖರಶೇಖರನಾದಂ ೭೭

ವ|| ಆಗಳಾ ಸೌಧರ್ಮೇಂದ್ರನುಮೀಶಾನೇಂದ್ರನುಂ ಸಿಂಹಾಸನದೆರಡುಂ ಮಗ್ಗುಲದೊಳಂ ದಕ್ಷಿಣೋತ್ತರ ಭಾಗದೊಳಿದಿರಾಗಿರ್ದ ಮಣಿಮಯಭದ್ರಾಸನಂಗಳೊಳ್ ಕುಳ್ಳಿರ್ದು ದಿಕ್ಪಾಳರುಮನವರವರ ದಿಗ್ಭಾಗದೊಳೆ ನಿಜಪರಿವಾರವಾಹನಾಂಗನಾಯುಧಸಮೇತಮಿರಿಸಿ ಶೇಷಾಶೇಷದೇವನಿಕಾಯಮನುಚಿತ ಸ್ಥಾನದೊಳ್ ನಿಱಿಸಿ ಜನ್ಮಾಭಿಷವಣಪರಿಣತಾಂತಃಕರ[ರಾ][೧]ದಾಗಳ್,

ಸುರಕರನಿರ್ಭರಹತಿಯಿಂ
ಸುರದುಂದುಭಿನಿನದಮಮರವನಿತಾವದನಾಂ
ಬುರುಹದಿನೊರ್ಮೆಯೆ ಮಂಗಳ
ಪರಂಪರಾಗೀತನಿನದಮೊದವಿತ್ತೆತ್ತಂ ೭೮

ದುರಿತಘನತಿಮಿರಮೆತ್ತಂ
ತೆರಳ್ದು ಜಿನಸವನಮಂಗಳಕ್ಕಗಿದಾಗಳ್
ಪರೆವಂತಾದುದು ಕಾಳಾ
ಗರುಧೂಪಶ್ಯಾಮಧೂಮಮಾತ್ತವ್ಯೋಮಂ ೭೯

ಚತುರ್ನಿಕಾಯಾಮರೇಂದ್ರಸಮೂಹದಿಂದ ಯುಕ್ತವೂ ಆದ ಶ್ರೀ ಮಂಟಪವನ್ನು ನಿರ್ಮಿಸಿದನು. ನಡುವೆ ಸಿಂಹಾಸನದಲ್ಲಿ ಬಾಲಕನನ್ನು ಪೂರ್ವದಿಕ್ಕಿಗೆದುರಾಗಿ ಕುಳ್ಳಿರಿಸಿದನು. ೭೭. ಪುರುದೇವನ ದೇಹವು ಕಿರಿದಾಗಿದ್ದರೂ, ಅದರ ಮೇಲೆದ್ದ ಕಾಂತಿರಾಶಿಯು ಸುತ್ತಲೂ ಹರಡಿಕೊಂಡು ಸಿಂಹಾಸನವನ್ನು ವ್ಯಾಪಿಸಿರಲಾಗಿ, ಆದಿದೇವನು ಹೊಳೆಯುವ ಮೇರುಪರ್ವತದ ಶಿಖರಕ್ಕೆ ಆಭರಣವಾದನು. ವ|| ಆಗ ಸೌಧರ್ಮೇಂದ್ರನೂ, ಈಶಾನ್ಯೇಂದ್ರನೂ ಸಿಂಹಾಸನದ ಎರಡೂ ಪಕ್ಕಗಳಲ್ಲಿ ದಕ್ಷಿಣೋತ್ತರ ಭಾಗಗಳಲ್ಲಿ ಇದಿರಾಗಿದ್ದ ಮಣಿಮಯವಾದ ಭದ್ರಾಸನದಲ್ಲಿ ಕುಳಿತರು. ಅವರು ದಿಕ್ಪಾಲಕರನ್ನು ಅವರವರ ದಿಗ್ಭಾಗಗಳಲ್ಲಿಯೂ, ಅವರವರ ಪರಿವಾರ, ವಾಹನ, ಸ್ತ್ರೀಯರು ಮತ್ತು ಆಯುಧಗಳಿಂದ ಸಮೇತರನ್ನಾಗಿಯೂ ಕುಳ್ಳಿರಿಸಿದರು. ಉಳಿದೆಲ್ಲ ದೇವತೆಗಳನ್ನೂ ಅವರವರಿಗುಚಿತವಾದ ಸ್ಥಾನಗಳಲ್ಲಿ ನೆಲೆಗೊಳಿಸಿದರು. ಜನ್ಮಾಭಿಷೇಕ ಕಾರ್ಯದಲ್ಲಿ ಆಗ ಮನಸ್ಸುಮಾಡಿದರು. ೭೮. ದೇವತೆಗಳ ನಿರ್ಭರವಾದ ಬಡಿತದಿಂದ ದೇವದುಂದುಭಿಶಬ್ದವೂ, ಸುರವನಿತೆಯರ ಕಮಲಸದೃಶವಾದ ಮುಖಗಳಿಂದ ಮಂಗಲಗೀತಗಳೂ ಏಕಕಾಲದಲ್ಲಿ ಎಲ್ಲೆಲ್ಲೂ ಉಂಟಾದುವು. ೭೯. ಕಾಲಾಗುರುಧೂಪದ ಕಪ್ಪು ಹೊಗೆಯು ಆಕಾಶವನ್ನು ಆಕ್ರಮಿಸಿಕೊಂಡು ಪಾಪವೆಂಬ ದಟ್ಟವಾದ ಕತ್ತಲೆಯು ಜಿನಾಭಿಷೇಕಮಂಡಲಕ್ಕೆ ಹೆದರಿ ಎಲ್ಲ ಕಡೆಯಿಂದಲೂ

೧ ನಾ (ಅನ್ಯತ್ರ)

ಕಳಮಧವಳಾಕ್ಷತಂಗಳ
ಪೊಳೆವಲರ್ಗಳ ಚಂದನದ್ರವೋನ್ಮಿಶ್ರಜಲಂ
ಗಳ ಪೊಳೆಪಿನೊಳೆಸೆದು ವಿಯ
ತ್ತಳಂಬರಂ ನೆಗೆದುದಿಂದ್ರನರ್ಘ್ಯೋದ್ಧರಣಂ ೮೦

ವ॥ ಅಲ್ಲಿಂ ಬಟೆಯಮಶೋಕಪಲ್ಲವೋಲ್ಲಸಿತಚಂದನಚರ್ಚಿತಮಾಳತೀಮಾಳಾವೇಷ್ಟಿತ ಮಣಿದರ್ಪಣಪ್ರಸಾರಿತ ವಿಮಳಾರ್ಣವಪಯಃಪೂರ್ಣಕಳಧೌತಕಳಶಂಗಳಂ ಕಳಶೋದ್ಧಾರ ಮಂತ್ರಪೂರ್ವಕಂ ಪ್ರಣತಿಪ್ರಸ್ತವನಪುರಸ್ಸರಂ ಮಾಡಿ ಪ್ರಥಮಕಲ್ಪೇಶ್ವರನುಮೀಶಾನೇಂದ್ರನುಮೆತ್ತಿಕೊಂಡು.

ಇತರೇಂದ್ರರ್ ಪರಿಚಾರಕಪ್ರಭೃತಿಯಿಂ ಮುಂದಾಡೆ ದೇವಾಂಗನಾ
ನ್ವಿತದೇವಾಧಿಪಕಾಂತೆ ಕನ್ನಡಿ ಸೊಡರ್ ಪೂಮಾಲೆ ಭೃಂಗಾರಮ
ಕ್ಷತಮೆಂಬುಜ್ಜ್ವಳಮಂಗಳೋಪಕರಣದ್ರವ್ಯಂಗಳಂ ನೀಡೆ ಸಂ
ತತಮೇನೆಂದು ಜಿನಾರ್ಭಕಂಗೆಸೆದುದೋ ಜನ್ಮಾಭಿಷೇಕೋತ್ಸವಂ ೮೧

ಕ್ಷೀರಾಬ್ಧಿಯ ನೀರಲ್ಲದೆ
ಧೀರನ ಮಜ್ಜನಕೆ ಪೆಱವು ನೀರ್ ತಗವೆಂದಾ
ವಾರಾಶಿವರಂ ಸುರಜನ
ದಾರಿ[೧] ಮನೋಹಾರಿ ನೀಳ್ದುದೆರಡುಂ ಕೆಲದೊಳ್ ೮೨

ಓಡಿಹೋಗುವಂತೆ ಕಾಣಿಸಿತು. ೮೦. ಬಿಳಿಯ ಅಕ್ಷತೆಯ ಕಾಳುಗಳಿಂದಲೂ ಹೊಳೆಯುವ ಹೂವುಗಳಿಂದಲೂ ಗಂಧದ್ರವ ಮಿಶ್ರಿತವಾದ ನೀರಿನ ಹೊಳಪಿನಿಂದಲೂ ಯುಕ್ತವಾದ ಅರ್ಘ್ಯಜಲದ ಪ್ರಕಾಶದಲ್ಲಿ ಆಕಾಶತಲದವರೆಗೆ ನೆಗೆದು ಇಂದ್ರನ ಅರ್ಘ್ಯೋದ್ಧರಣವು ಪ್ರಕಾಶಿಸಿತು. ವ॥ ಅನಂತರ ಅಶೋಕದ ಚಿಗುರುಗಳಿಂದಲೂ ಚಂದನಮಿಶ್ರಿತವಾದ ಮಾಲತೀಪುಷ್ಪಮಾಲೆಗಳಿಂದಲೂ ವೇಷ್ಟಿತವಾದ, ಮಣಿಗನ್ನಡಿಗಳಿಂದ ಕೂಡಿದ ಸಮುದ್ರದ ನಿರ್ಮಲೋದಕದಿಂದ ತುಂಬಿದ ಚಿನ್ನದ ಕಲಶಗಳನ್ನೂ ಕಲಶೋದ್ಧಾರಮಂತ್ರ ಪೂರ್ವಕವಾಗಿ ಓಂಕಾರೋಚ್ಚಾರಣೆಯ ಮೂಲಕ ಮೊದಲನೆಯ ಕಲ್ಪೇಶ್ವರನೂ (ಸೌಧರ್ಮೇಂದ್ರನೂ) ಈಶಾನೇಂದ್ರನೂ ಎತ್ತಿಕೊಳ್ಳಲು ೮೧. ಇತರ ಕಲ್ಪಗಳ ಇಂದ್ರರು ಪರಿಚಾರಕರ ಮೇಲ್ವಿಚಾರಕರಾಗಿ ಮುಂದೆ ಓಡಾಡಿದರು. ದೇವಸ್ತ್ರೀಯರೊಡನೆ ಇಂದ್ರನ ರಾಣಿಯಾದ ಶಚಿಯು ಕನ್ನಡಿ, ಸೊಡರು, ಹೂಮಾಲೆ, ಗಿಂಡಿ ಮತ್ತು ಅಕ್ಷತೆಗಳೆಂಬ ಉಜ್ವಲ ಮಂಗಲಸಾಧಕದ್ರವ್ಯಗಳನ್ನು ನೀಡಿದಳು. ಸತತವಾಗಿ ಜಿನಾರ್ಭಕನಿಗೆ ಜನ್ಮಾಭಿಷೇಕೋತ್ಸವವು ಅಂದು ವೈಭವದಿಂದ ಜರುಗಿತು. ೮೨. ಕ್ಷೀರಸಮುದ್ರದ ನೀರನ್ನುಳಿದು ಇನ್ನು ಯಾವ ನೀರೂ ಧೀರನಾದ ಜಿನಬಾಲಕನ ಮಜ್ಜನಕ್ಕೆ ಯೋಗ್ಯವಲ್ಲವೆಂದು ಬಗೆದು, ಸುರಜನರ ದಾರಿಯು ಕ್ಷೀರಸಮುದ್ರಪರ್ಯಂತವಾಗಿ ಮನೋಹರ ರೀತಿಯಿಂದ ಎರಡು ಕಡೆಗಳಲ್ಲಿಯೂ ನೀಳವಾಗಿ ನಿಂತಿತು.

---

೧ 'ಸುರಜನದಾರಿ' ಎಂದು ಪದ್ಯದಲ್ಲಿದೆ. 'ದಾರಿ' ಎಂದರೆ ಶ್ರೇಣಿಯೆಂದು ಅರ್ಥವಾಗದು. ಮಾರ್ಗವೆಂಬ ಅರ್ಥದ ಕನ್ನಡ ಪದವಾದರೆ ಅರಿಸಮಾಸವಾಗುತ್ತದೆ.

ವ॥ ಅಂತು ಸೌಧರ್ಮೇಂದ್ರನುಮೀಶಾನೇಂದ್ರನುಮೆರಡುಂ ದೆಸೆಯೊಳಮರನಿಕರುಂಬ ಮೋಳಿವಟ್ಟಷ್ಟಯೋಜನಗಂಭೀರೈಕಯೋಜನಮುಖವಿಸ್ತಾರಶಾತಕುಂಭಕುಂಭಂಗಳಂ ಕೊಂಡು,

ಅಯ್ದನೆಯ ಜಲಧಿವರಮಿರ
ದೆಯ್ದುವ ಮೊಗೆವಂತೆ ಮೊಗೆದುಮೋರೊರ್ಬರ ಕೈ
ಗೆಯ್ದಿಸುವ ಬೇಗಮಂ ಮನ
ಮೆಯ್ದಿದುದಿಲ್ಲಮರಚರಿತಮೇನಚ್ಚರಿಯೋ ೮೩

ಕಳಧೌತಘಟಂ ಮುಕ್ತಾ
ಫಳಾಂಚಿತಗ್ರೀವಮೆಳೆದುಕೊಂಡುದು ತಾರಾ
ವಳಿಪರಿವೃತನವಸಂಧ್ಯಾ
ಜಳದದ ಗಾಡಿಯನನೇಕಸುರಕರತಳದೊಳ್ ೮೪

ಪೊಸಸಂಜೆ ಮುಗಿಲ ತುಱುಗಲ್
ಮುಸುಕಿದುದು ಪಯಃಪಯೋಧಿಯೆಲ್ಲಮನೆಂಬಂ
ತಸದಳಮೆಸೆದುದು ಮೊಗೆವು
ದ್ದೆಸದೊಳೆ ತಳತಳಿಸಿ ಪೊನ್ನ ಪೊಸಕಳಸಂಗಳ್ ೮೫

ವ॥ ಅಂತು ದೇವರ್ ದೇವನೊಳಾವಗಮಾದ ತಮ್ಮಾಧ್ಧರದಿಂ ಮಾಲೆಗಟ್ಟಿ ದುಗ್ಧವಾರಿಪೂರಿತ ಕನಕಕಳಶಂಗಳಂ ತಂದು ಗೊಂದಳಿಸಿ ಸಂದಣಿಸಿ ನೀಡಿದಾಗಳ್,

ವ॥ ಹಾಗೆ ಸೌಧರ್ಮೇಂದ್ರ ಮತ್ತು ಈಶಾನೇಂದ್ರರ ಎರಡು ಪಾರ್ಶ್ವಗಳಲ್ಲಿಯೂ ದೇವತೆಗಳು ಸಾಲಾಗಿ ನಿಂತು, ಎಂಟು ಯೋಜನ ಆಳವೂ ಒಂದು ಯೋಜನದಗಲವಾದ ಬಾಯಿಯೂ ಉಳ್ಳ ಚಿನ್ನದ ಕಲಶಗಳನ್ನು ತೆಗೆದುಕೊಂಡರು. ೮೩. ಐದನೆಯ[1] ಸಮುದ್ರದವರೆಗೂ ಬಿಡದೆ ಹೋಗಿ ನೀರನ್ನು, ಆ ಚಿನ್ನದ ಗಡಿಗೆಗಳಿಂದ ತುಂಬಿಕೊಂಡು ಒಬ್ಬರ ಕೈಯಿಂದ ಮತ್ತೊಬ್ಬರ ಕೈಗೆ ಮನಸ್ಸಿಗೂ ಅರಿವಾಗದಷ್ಟು ವೇಗದಿಂದ ತಲುಪಿಸಿದರು. ದೇವತೆಗಳ ಚರಿತ್ರೆಯು ಅತ್ಯಾಶ್ಚರ್ಯಕರವಾದುದು. ೮೪. ದೇವತೆಗಳ ಕರತಳದಲ್ಲಿದ್ದ ಮುತ್ತಿನ ಸರಗಳಿಂದ ಸುತ್ತಿದ ಚಿನ್ನದ ಕೊಡಗಳು ನಕ್ಷತ್ರಗಳ ಸಮೂಹದಿಂದೆಸೆಯುವ ಸಂಜೆಯ ಮೋಡಗಳ ಸೌಂದರ್ಯವನ್ನು ತಳೆದುವು. ೮೫. ಮೊಗೆಯುವಾಗ ತಳತಳಿಸಿ ಹೊಳೆಯುವ ಚಿನ್ನದ ಕಲಶಗಳು ಹೊಸ ಸಂಜೆಯ ಮುಗಿಲ ಗುಂಪು ಹಾಲಿನ ಸಮುದ್ರವನ್ನು ಮುಸುಕಿತೋ ಎಂಬಂತೆ ಕಾಣಿಸಿತು. ವ॥ ದೇವತೆಗಳಾಗ ಜಿನಬಾಲಕನ ಮೇಲುಂಟಾದ ತಮ್ಮಾದರಗಳಿಂದ ಸಾಲಾಗಿ ನಿಂತು ಹಾಲುತುಂಬಿದ ಚಿನ್ನದ ಕೊಡಗಳನ್ನು ಒಟ್ಟಾಗಿ

---

1 ಐದನೆಯ ಸಮುದ್ರ = ಕ್ಷೀರಸಮುದ್ರ.

ಸುರಸಂದೋಹದ ತೀವಿತಂದ ಘಟಸಂಘಾತಂಗಳಾನಲ್ಕೆರ
ಟ್ಕರದಿಂ ಬಾರದೆ ಮಾಣೆ ನಿರ್ಮಿಸಿದ ದೋರ್ದಂಡಂಗಳೊಳ್ ಭೂಷಣೋ
ತ್ಕರಮಿಂಬಾಗಿರೆ ಭೂಷಣಾಂಗತರುವಂ ಕುಂಭಂಗಳಾ ತೋಳ್ಗಳೊಳ್
ಕರಮಿಂಬಾಗಿರೆ ಭಾಜನಾಂಗತರುವಂ ಪೋಲ್ತಂ ಸುರಾಧೀಶ್ವರಂ ೮೬

ವ॥ ಅಂತು ನಿಜಭುಜಸಹಸ್ರೋದ್ಧೃತಕನಕಕುಂಭಮುಖವಿಗಳಿತ ಕ್ಷೀರವಾರಿಧಾರೆಯಂ ಜಯಜಯನಿನದಪೂರ್ವಕಂ ಜಿನಸವನಪ್ರಥಮಪ್ರಾರಂಭದೊಳ್ ಸೌಧರ್ಮೇಂದ್ರಂ ಸುರಿದಾಗಳ್,

ಆ ದುಗ್ಧಧಾರೆ ಕರಮಿಂ
ಬಾದುದು ಜಿನಮಸ್ತಕಾಗ್ರದಲ್ ಗಂಗಾಕೂ
ಟೋದಗ್ರಶಿಖರದೊಳ್ ಚೆ
ಲ್ವಾದಮೆ ಮಿಗೆ ಸುರಿವ ಗಗನಗಂಗಾನದಿವೊಲ್ ೮೭

ಆಗಳ್ ಕಲ್ಪೇಶ್ವರನನು
ರಾಗದಿನೊಡನೊಡನೆ ಸುರಿಯೆ ಪಾಲ್ಗಡಲೊಂದುಂ
ಟಾಗದೆ ಮೇರುವ ತುದಿಯೊಳ
ಮೀಗಳೆನಲ್ ನೆಱೆದುದಾ ಪಯಃಪ್ಲವದೆಸಕಂ ೮೮

ಸುರಜಳದಂಗಳ್ ದುಗ್ಧಾಂ
ಬುರಾಶಿಯೊಳ್ ಪೇಱೆ ಬಂದ ನೀರ್ಗಳನೆತ್ತಂ
ಸುರಿದುವು ಜಿನಾರ್ಭಕಾಚಳ
ಶಿರದೊಳ್ ಜಳದಂಗಳೆಂತು ನಗದೊಳ್ ಸುರಿಗುಂ ೮೯

ಸೇರಿ ಕೊಡಲು ೮೬. ದೇವವೃಂದವು ತುಂಬಿಕೊಂಡು ತಂದ ಹಾಲಿನ ಚಿನ್ನದ ಬಿಂದಿಗೆಗಳನ್ನು ಎರಡು ಕೈಗಳಿಂದಲೂ ಇಂದ್ರನು ಅತುಕೊಳ್ಳಲಾರದಾದನು. ಆಗ ಅವನ್ನು ಆತುಕೊಳ್ಳಲಿಕ್ಕಾಗಿಯೇ ನಿರ್ಮಿಸಿದ[1] ದೋರ್ದಂಡಗಳಲ್ಲಿ ಆಭರಣಸಮೂಹವು ವಿರಾಜಿಸಿದ್ದರಿಂದ ಭೂಷಣಾಂಗವೃಕ್ಷವನ್ನೂ ಕುಂಭಗಳು ಆ ತೋಳ್ಗಳಲ್ಲಿ ಇಂಬಾದುದರಿಂದ ಭಾಜನಾಂಗವೃಕ್ಷವನ್ನೂ ಸುರಾಧಿಪನು ಹೋಲಿದನು, ವ॥ ಹೀಗೆ ತನ್ನ ಸಾವಿರ ತೋಳುಗಳಿಂದಲೂ ಎತ್ತಿಹಿಡಿದ ಚಿನ್ನದ ಕೊಡಗಳಿಂದ ಹೊರಬಿದ್ದ ಹಾಲಿನ ಧಾರೆಯನ್ನು, ಜಯಜಯ ಎನ್ನುತ್ತಾ ಜಿನಾಭಿಷೇಕದ ಆರಂಭದಲ್ಲಿ ಸೌಧರ್ಮೇಂದ್ರನು ಸುರಿಯಲು, ೮೭. ಜಿನನ ತಲೆಯ ಮೇಲೆ ಸುರಿದ ಆ ಹಾಲಿನ ಧಾರೆಯು ಹಿಮಾಚಲದ ಅಗ್ರಶಿಖರದಲ್ಲಿ ಸುರಿವ ಗಗನಗಂಗೆಯ ತೊರೆಯಂತೆ ಚೆಲ್ವಾಗಿ ಕಾಣಿಸಿತು. ೮೮. ಕಲ್ಪೇಶ್ವರನು ಪ್ರೀತಿಯಿಂದ ಕ್ಷೀರವನ್ನು ಸುರಿಯಲು, ಮೇರುವಿನ ತುದಿಯಲ್ಲಿ ಪಾಲ್ಗಡಲೊಂದುಂಟಾಗದೆ? ಎನ್ನುವಂತೆ ಹಾಲಿನ ಸುರಿಸಾಟದ ಕಾರ್ಯವು ಜರುಗಿತು. ೮೯. ಮೋಡಗಳು ಬೆಟ್ಟದ ಮೇಲೆ ನೀರನ್ನು ಸುರಿಸುವಂತೆ, ಸುರರೆಂಬ ಮೋಡಗಳು ಕ್ಷೀರಾಂಬುರಾಶಿಯಲ್ಲಿ ಹೀರಿಕೊಂಡು

1 ದೇವೇಂದ್ರನು ಸಾವಿರ ಕೈಗಳನ್ನು ನಿರ್ಮಿಸಿಕೊಂಡನು.

ಜಳನಿಧಿ ತೊಱೆಗಳನೆನಿತುಮ
ನೊಳಕೊಳ್ವವೊಲಿನಿಸು ತರಳದಾಢ್ಯೆರ್ಯಮಹಾ
ಜಳನಿಧಿ ಪಯಃಪ್ಲವಂಗಳ
ನೊಳಕೊಂಡಂ ಸುರರ ಮಿಸಿಸುವವಸರದಾಗಳ್ ೯೦

ಬಾಳಂ ಬಾಳಮೃಣಾಳದಂತಸುನೆಱಂ ದುಗ್ಧಪ್ಲವಂ ಸ್ಥೂಳಕ
ಲ್ಲೋಳಾಸ್ಫಾಳಿತ ಹೇಮಶೈಲಮಿದನಿನ್ನೇವಣ್ಣಿದಂ ಶಕ್ರನೆಂ
ಬಾಳೋಚಂ ಬೆರಸಿರ್ಪ ದೇವಗಣಮಂ ನಂಬಿಪ್ಪುದಾಯ್ತಾಗಳಾ
ಲೀಳೋಚ್ಛ್ವಾಸಮೆ ತೂಳ್ದೆ ದೇವರೊಡನಾ ನಾನಾವಿಮಾನಂಗಳಂ ೯೧

ಪಸರಿಸಿದ ಪಯಃಪೂರದ
ಪೊಸವೆಳ್ಪು ನಿಜಾಂಗರುಚಿಯ ಪೊಱಪೊಱಗೆ ಪೊದ
ಱಿಸೆದಿರೆ ಬೆಳ್ಮುಗಿಲಿಂದಂ
ಮುಸುಕಿದ ಬಾಳಾರ್ಕಬಿಂಬಮಿರ್ಪಂತಿರ್ದಂ ೯೨

ಉರದೊಳ್ ಹಾರಂಗಳನೊ
ಳ್ಗುರುಳ್ಗಳೊಳ್ ಚಿನ್ನಪೂಗಳಂ ಪೋಲ್ತು ಮನೋ
ಹರಮಾದುದಮರಕಾಂತೆಯ
ರುರದೊಳ್ ಕುರುಳೊಳ್ ತಗುಳ್ದ ದುಗ್ಧಲವಂಗಳ್ ೯೩

ತಂದ ನೀರೆಲ್ಲವನ್ನೂ ಜಿನಾರ್ಭಕನೆಂಬ ಗಿರಿಯ ಶಿರದ ಮೇಲೆ ಸುರಿಸಿದುವು. ೯೦. ಸಮುದ್ರವು ತೊರೆಗಳೆಲ್ಲವನ್ನೂ ತನ್ನಲ್ಲಿಯೇ ಸೇರಿಸಿಕೊಳ್ಳುವಂತೆ, ಆ ಧೈರ್ಯಮಹಾಸಮುದ್ರನು (ಜಿನನು) ಸುರರು ಸ್ನಾನಮಾಡಿಸಿದ ಕಾಲದಲ್ಲಿ ಕ್ಷೀರಪ್ರವಾಹಗಳನ್ನೆಲ್ಲ ಹಿಂದೆಗೆಯದೆ ತನ್ನಲ್ಲೊಳಕೊಂಡನು, ೯೧. "ಈ ಬಾಲನು ಎಳೆಯ ತಾವರೆದಂಟಿನಂತೆ ಸುಕುಮಾರ (ಬಹುಸೂಕ್ಷ್ಮ). ಈ ಹಾಲಿನ ಪ್ರವಾಹವಾದರೋ ತನ್ನ ಸ್ಥೂಲವೂ ಉನ್ನತವೂ ಆದ ಅಲೆಗಳಿಂದ ಮೇರುಪರ್ವತವನ್ನೇ ಅಪ್ಪಳಿಸುತ್ತಿದೆ. ಇಂದ್ರನು ಅದೇಕೆ ಹೀಗೆ ಮಾಡಿದನೋ ತಿಳಿಯದು!" ಎಂದು ದೇವತೆಗಳು ಆಲೋಚಿಸಲಾರಂಭಿಸಿದರು. ಅಷ್ಟರಲ್ಲಿ ಆ ಬಾಲನು ಲೀಲೆಯಿಂದ ಬಿಟ್ಟ ಉಚ್ಛ್ವಾಸವು ದೇವತೆಗಳೊಡನೆ ಅವರ ವಿಮಾನಗಳನ್ನೂ ಹಾರಿಸಿತು! ತತ್ಫಲವಾಗಿ "ಈ ಬಾಲಕನು ನಾವು ತಿಳಿದಂತಲ್ಲ!" ಎಂಬ ನಂಬುಗೆಯು ದೇವತೆಗಳಲ್ಲುಂಟಾಯಿತು. ೯೨. ಆ ಹಾಲಿನ ಹೊನಲಿನ ಬಿಳುಪು ಅವನ ದೇಹಕಾಂತಿಯ ಹೊರಗೆ ಪ್ರಕಾಶಿಸಿತು. ಆಗ ಜಿನಬಾಲಕನು ಬಿಳಿಯ ಮೋಡದಿಂದ ಆಚ್ಛಾದಿತವಾದ ಎಳೆಯ ಸೂರ್ಯನ ಬಿಂಬದಂತೆ ತೋರಿದನು. ೯೩. ಅಮರಕಾಂತೆಯರ ಎದೆಯಲ್ಲಿಯೂ, ಕೂದಲುಗಳಲ್ಲಿಯೂ ಅಂಟಿಕೊಂಡ ಹಾಲಿನ ಕಣಗಳು ಅವರ ಎದೆಯ ಮೇಲೆ ಹಾರದಂತೆಯೂ ಮುಂಗುರುಳುಗಳ ಮೇಲೆ ತಲೆಯಲ್ಲಿ

ಆಕಾಶಕ್ಕುಚ್ಚಳಿಸುವ
ನೇಕಪಯಶ್ಶೀಕರಂಗಳಿಂದಂ ಜ್ಯೋತಿ
ರ್ಲೋಕಮಿದೊಂದುಂಟೆಂಬ ವಿ
ವೇಕಮನೊಡರಿಸಿದುದಮರಸಮಿತಿಯ ಮನದೊಳ್ ೯೪

ಕೆಲದೊಳ್ ತೆರಳ್ದು ಸೂಸುವ
ಜಲಲವಮಂಜರಿಗಳುಂಟುಮಾಡಿದುವು ದಿಶಾ
ಲಲನೆಯರ ವಕ್ತ್ರಮಂಡನ
ವಿಲಾಸದೊಳ್ ನೆಗಟ್ದ ಕರ್ಣಪೂರಶ್ರೀಯಂ ೯೫

ಜಿನನಾಥಸ್ನಪನಾಂಬು ತಜ್ಜಿನತನುಶ್ರೀಸಂಗದಿಂ ತಾನೆ ಪಾ
ವನಮಾಯ್ತೇ ತನಗಿಕ್ಕೆಯಾದ ಕಡಲಂ ಕುಂಭಂಗಳಂ ಪೊಕ್ಕ ದೇ
ವನಿಕಾಯಂಗಳನಿಂದ್ರರಂ ಸುರವಧೂವೃಂದಂಗಳಂ ಮೇರುನಂ
ದನಭೂಪ್ರಾಂತಮುಮಂ ಪವಿತ್ರಮೆನಿಸಿತ್ತಾನೀರ್ಗದಾಶ್ಚರ್ಯಮೇ ೯೬

ತ್ರಿದಶೇಂದ್ರಪ್ರಮುಖಾಮರರ್ ಕಳಕಳಪ್ರಧ್ವಾನದಿಂ ಶಾತಕುಂ
ಭದ ಕುಂಭಂಗಳ ನೀರನೊರ್ವೊದಲೆ ಭೋರ್ಭೋರೆಂದು ಪೊಯ್ವಾಗಳ
ತ್ತ ದಿಗಂತಂ ದಿವಿಜೇಂದ್ರದುಂದುಭಿನಿನಾದೋನ್ಮಿಶ್ರಮೇನುಣ್ಮಿ ಪೊ
ಣ್ಮಿದುದೋ ಮಂದರಕಂದರೋತ್ಥಿತಪಯಃಕಲ್ಲೋಳಕೋಳಾಹಳಂ ೯೭

ವ|| ಅಂತು ತಜ್ಜಿನೇಂದ್ರಸವನಸಮಯದೊಳಮರೇಂದ್ರಕರತಳೋದ್ಧೃತ ಕಾರ್ತಸ್ವರವಿಳಾಸಕಳಶ

ಧರಿಸುವ ಆಭರಣದಂತೆಯೂ ತೋರಿದುವು. ೯೪. ಆಕಾಶಕ್ಕೆ ನೆಗೆದ ಹಾಲಿನ ಕಣಗಳಿಂದ ದೇವಸಮೂಹದ ಮನದಲ್ಲಿ ಅತಿರಿಕ್ತವಾದ ಜ್ಯೋತಿರ್ಲೋಕವೊಂದುಂಟೆಂಬ ಬುದ್ಧಿಯನ್ನು ಅಭಿಷೇಕವು ಉಂಟುಮಾಡಿತು. ೯೫. ದೇವಸ್ತ್ರೀಯರ ಕೆಲದಲ್ಲಿ ತಗುಳ್ದು ಸುಳಿಯುವ ಜಲಕಣಗಳ ಗೊಂಚಲುಗಳು ದಿಗ್ವನಿತೆಯರ ಮುಖಾಲಂಕಾರದ ವಿಲಾಸಕಾಲದಲ್ಲಾದ ಕರ್ಣಪೂರದ ಕಾಂತಿಯನ್ನು ತಂದುವು. ೯೬. ಜಿನನಾಥನ ಅಭಿಷೇಕದ ನೀರು, ಜಿನ ದೇಹಕಾಂತಿಯ ಸಂಪರ್ಕದಿಂದ ತನ್ನಷ್ಟಕ್ಕೆ ತಾನೆ ಪವಿತ್ರವಾಯಿತು. ಅದು ಅವನ ನೆಲೆವೀಡಾದ ಸಮುದ್ರವನ್ನೂ, ಕುಂಭಗಳನ್ನು ಹೊತ್ತ ದೇವಸಮೂಹವನ್ನೂ, ಇಂದ್ರರನ್ನೂ, ದೇವಸ್ತ್ರೀಯರನ್ನೂ, ಮೇರುನಂದನಗಳೇ ಮೊದಲಾದ ಭೂಪ್ರದೇಶಗಳನ್ನೂ ಪವಿತ್ರಗೊಳಿಸಿತು. ಜಿನಪೂತವಾದ ಆ ನೀರಿಗೆ ಇದೇನು ಆಶ್ಚರ್ಯ? ೯೭. ತ್ರಿದಶೇಂದ್ರನೇ ಮೊದಲಾದ ದೇವತೆಗಳು ಕಲಕಲಧ್ವನಿಗಳನ್ನು ಮಾಡುತ್ತಾ ಚಿನ್ನದ ಕಲಶದ ನೀರನ್ನು ಭೋರ್ ಭೋರೆಂದು ಮೊದಲೇ ಸುರಿಸುತ್ತಿದ್ದರು. ಅತ್ತ ದಿಗಂತವು ದೇವ ದುಂದುಭಿಗಳ ಶಬ್ದಗಳೊಡನೆ ಮಿಶ್ರವಾಗಿ, ಮಂದರಪರ್ವತದ ಗುಹೆಗಳಿಂದ ಹರಿದು ಬಂದು ದೊಡ್ಡದೊಡ್ಡ ಅಲೆಗಳ ಕೋಲಾಹಲವನ್ನುಂಟುಮಾಡಿತು. ವ|| ಆ ಜಿನೇಂದ್ರನ ಅಭಿಷೇಕ ಸಮಯದಲ್ಲಿ ದೇವೇಂದ್ರನ ಕೈಗಳಿಂದ ಎತ್ತಲ್ಪಟ್ಟ ಚಿನ್ನದ ಕೊಡಗಳ ಬಾಯಿಂದ ಹೊರಬಿದ್ದ

ಮಖವಿಗಳಿತಸ್ಥೂಲದುಗ್ಧವಾರಿಧಾರಾಸಹಸ್ರಂಗಳೊಂದೊಂದಱೊಳ್ ಕೂಡಿ ಮಂದರಾಚಳಮರಕತ ಶಿಳಾತಳಮಂ ಸೋಂಕಿದಲ್ಲಿ ಪಸುರ್ಪಸೆದು ಪದ್ಮರಾಗಗ್ರಾವಂಗಳೊಳ್ ಕೆಂಪೆಸೆದು ಚಂದ್ರಕಾಂತಶಿಳಾತಳ ದೊಳೇಕವರ್ಣಮಾಗಿಯುಂ ವನಷಂಡಂಗಳೊಳ್ ತಱುಂಬಿಯುಂ, ಸರೋಜಷಂಡಂಗಳೊಳ್ ತುಂಬಿಯುಂ, ಪರಿದು, ತತ್ಪ್ರವಾಹಂ ಜ್ಯೋತಿರ್ಲೋಕಮನೆಯ್ದುವಂದಾಗಳ್,

ಬೆಳಗುವ ತಾರಕಾನಿಕರಮಾಕಡಲೊಳ್ ನಸುತೇಂಕುದೇಂಕಿ ಬೊ
ಬ್ಬುಳಿಕೆಗಳಂತೆ ತೋಱಿದವು ತೀವ್ರಕರಂ ಕರಮೆಯ್ದೆ ಕಾಯ್ದು ಪ
ಜ್ವಳಿಸುವ ಲೋಹಪಿಂಡಮನೆ ಭೋಂಕೆನೆ ನೀರೊಳಗರ್ದಿದಂತೆವೊಲ್
ಪೊಳೆಪುಡಿದಿರ್ದನೆಂದೊಡಱಿಯೆಂ ಪೊಗಟಲ್ ಜಿನಮಜ್ಜನಾಂಬುವಂ ೯೮

ಜಿನಸವನಾಂಬುವಿನೊಳ್ ಭೋಂ
ಕೆನೆ ಚಂದ್ರಂ ತೇಂಕಿ ಹಂಸವೃದ್ಧನನಿನಿಸಂ
ನೆನೆಯಿಸಿ ಕೊಳದೊಳಗಣ ಸಿತ
ವನರುಹಲಕ್ಷ್ಮಿಯುಮನಿನಿಸು ತನಗೊಳಕೊಂಡಂ ೯೯

ಕಳಧೌತೋಜ್ಜ್ವಳಕುಂಭನಿರ್ಗತಪಯಃಪೂರಂ ಪೊದಱ್ದೆಯ್ದೆ ಮೇ
ಖಳೆಗಳ್ ನಾಲ್ಕುಮನೀ ನಗಂ ಸುರನಗಂ ಮುನ್ನೀಗಳೆಂತೋ ಹಿಮಾ
ಚಳಮಾಯ್ತೆಂಬಿನಮುರ್ವಿ ಪರ್ವಿ ಪರಿದತ್ತಾಶಾಂತರಕ್ಕಂ ವಿಯ
ದ್ವಳಯಕ್ಕಂ ಕನಕಾದ್ರಿಕಂದರತಟಾಚ್ಛಾಚ್ಛೋಚ್ಛಳಚ್ಛೀಕರಂ ೧೦೦

ಸ್ಥೂಲವಾದ ಹಾಲಿನ ಧಾರಾಸಹಸ್ರಗಳು ಒಂದು ಮತ್ತೊಂದರೊಡನೆ ಕಲೆತು ಮಂದರಪರ್ವತದಲ್ಲಿನ ಮರಕತದ ಬಂಡೆಯನ್ನು ಸೋಂಕಿ ಅಲ್ಲಿ ಹಸುರುಬಣ್ಣವನ್ನು ತಳೆದುವು. ಮುಂದೆ ಹರಿದು ಪದ್ಮರಾಗ ಬಂಡೆಗಳ ಮೇಲೆ ಬಿದ್ದು ಕೆಂಪಾಗಿ ಎಸೆದುವು. ಇನ್ನೂ ಮುಂದೆ ಸರಿದು ಇಂದ್ರನೀಲ ಬಂಡೆಗಳ ಮೇಲೆ ಹರಿದು ಕಪ್ಪಾಗಿ ಕಾಣಿಸಿದುವು. ಚಂದ್ರಕಾಂತಶಿಲೆಗಳ ಮೇಲೆ ಹರಿದು ಸಮಾನ ವರ್ಣವುಳ್ಳುದಾಗಿ ಪ್ರಕಾಶಿಸಿದವು. ಬಳಿಕಾ ಪ್ರವಾಹವು ವನಷಂಡಗಳಲ್ಲಿ ತೂರಿಕೊಂಡು ತಾವರೆಗಳ ಗುಂಪಿನ ಮೇಲೆ ಪ್ರವಹಿಸಿ ಜ್ಯೋತಿರ್ಲೋಕವನ್ನು ಸೇರಿಬಂದಾಗ ೯೮. ಬೆಳಗುವ ನಕ್ಷತ್ರಗಳು ಆ (ಪ್ರವಾಹ) ಸಮುದ್ರದಲ್ಲಿ ತೇಲುತ್ತಾ ನೀರುಗುಳ್ಳೆಗಳಂತೆ ತೋರಿದುವು. ಸೂರ್ಯನು ಅತಿ ಕೆಂಪಗೆ ಕಾಯ್ದು ಪ್ರಜ್ವಲಿಸುವ ಕಬ್ಬಿಣದ ಗುಂಡಿನಂತೆ ಬೆಳಗಿ ನೀರೊಳಗದ್ದಿದಂತೆ ಕಾಂತಿಹೀನ ನಾದನು. ಅಂದಮೇಲೆ ಜಿನಾಭಿಷೇಕದ ನೀರನ್ನು ಹೊಗಳಲು ಸಾಧ್ಯವೇ? ೯೯. ಜಿನನು ಮಿಂದ ಜಲದಲ್ಲಿ ತೇಲುತ್ತಿದ್ದ ಚಂದ್ರನು ಮುದಿಹಂಸದ ನೆನಪನುಂಟುಮಾಡಿ ಕೊಳ ದೊಳಗಿನ ಬೆಳ್ದಾವರೆಯ ಕಾಂತಿಯನ್ನು ತನಗುಂಟುಮಾಡಿಕೊಂಡನು. ೧೦೦. ಚಿನ್ನದ ಕಲಶಗಳಿಂದ ಹರಿದುಬಂದ ಹಾಲಿನ ಪ್ರವಾಹವು ಬೆಟ್ಟದ ಸಾನುಪ್ರದೇಶಗಳನ್ನೆಲ್ಲ ಹರಡಿ ಮುಚ್ಚಿಕೊಂಡಿತು. ಆದುದರಿಂದ ಮೊದಲು ಮಂದರವೆನಿಸಿದ್ದ ಈ ಪರ್ವತವು ಈಗ ಹಿಮಾಲಯವಾಯಿತೋ ಎಂಬಂತೆ ಕಾಣಿಸಿತು! ಉಕ್ಕಿ ಹರಡಿ ಚಿನ್ನದ ಬೆಟ್ಟದ ಗುಹೆಗಳಿಂದ ಹರಿದುಬಂದ ನೀರಿನ ಸ್ವಚ್ಛ ತುಂತುರುಗಳು ದಿಙ್ಮಧ್ಯಗಳಿಗೂ ಆಕಾಶಮಂಡಲಕ್ಕೂ ಹರಿದವು.

ನರಲೋಕಂಬರಮುಣ್ಮಿ ಪೊಣ್ಮಿದ ಪಯಃಪೂರಂಗಳಿಂದಂ ಮಹೀ
ಧರಕಾಂತಾರನದೀನದಪ್ರಕರಮುಂ ವಿಶ್ವಾವನೀಭಾಗಮುಂ
ನರನಾರೀಜನಮುಂ ಪವಿತ್ರತರಮಾಯ್ತೆಂದಂದೆ ಕೇಳ್ವಂಗೆ ಬಿ
ತ್ತರಿಪಂಗಾದಮಳುಂಬಮಲ್ತೆ ಭಗವಜ್ಜನ್ಮಾಭಿಷೇಕೋತ್ಸವಂ ೧೦೧

ವII ತದನಂತರಮೆ ಸುರೇಂದ್ರಸಮಿತಿ ಸುರತರುಪ್ರಸೂನಕರ್ಪೂರಪಾಂಸುಗೋಶೀರ್ಷಚಂದನ ದ್ರವಪರಿಮಳಸುಗಂಧಿಜಲಸಂಭೃತಹಾಟಕಘಟಿತಘಟಕೋಟಿಗಳನೆತ್ತಿಕೊಂಡು ಸುರಿದಾಗಳ್,

ವರಗಂಧದ್ರವ್ಯಸಂದೋಹಮೆ ಜಿನತನುಗಂಧಕ್ಕೆ ಸೋಲ್ತಾದ ಲಜ್ಜಾ
ಭರದಿಂ ನೀರಾಗಿ ತಾನುರ್ಕಿದುದೆನಿಸಿ ನಗೇಂದ್ರೋಪಕಂಠಂಗಳೊಳ್ ನಿ
ರ್ಝರಮಂ ಮಾಡುತ್ತುಮುದ್ಯಲ್ಲವನಿವಹದೆ ದೇವೇಂದ್ರಲೋಕಕ್ಕಮತ್ಯಾ
ದರಮಂ ಮಾಡುತ್ತುಮೇನಾಜೆಸಿದುದೊ ದಿವಿಜವ್ರಾತಮಂ ಗಂಧತೋಯಂ ೧೦೨

ಮಜ್ಜನಪೀಠಂ ಸುರಗಿರಿ
ಮಜ್ಜನಜಳವಮೃತಜಳಧಿಜಳವಮರೇಂದ್ರಂ
ಮಜ್ಜನವಳ್ಳನುಮೆನೆ ಜಿನ
ಮಜ್ಜನಮಹಿಮೆಯ ಬೆಡಂಗನೇವಣ್ಣಿಪುದೋ ೧೦೩

ಎನಿತಾನುಂ ಪಟಹಗಳ್ ಘನ
ನಿನದಮನನುಕರಿಸೆ ಮನದೊಳೊದವಿದಲಂಪಿಂ
ಜಿನಸವನಗಂಧತೋಯದಿ
ನನಿಮಿಷಲೋಚನರ್ಗಮಾದುದವಭೃಥಸವನಂ ೧೦೪

೧೦೧. ನರಲೋಕದವರೆಗೆ ಉಕ್ಕಿ ಹರಿದುಬಂದ ಜನ್ಮಾಭಿಷೇಕದ ನೀರಿನಿಂದ ಪರ್ವತ, ಕಾಡು, ತೊರೆ, ನದಿಗಳೂ, ಭೂಭಾಗವೂ, ನರನಾರೀಜನವೂ ಪವಿತ್ರಗೊಂಡರೆಂದ ಮೇಲೆ ಕೇಳುವವನಿಗೂ ಬಿತ್ತರಿಸುವವನಿಗೂ ಭಗವಜ್ಜನ್ಮಾಭಿಷೇಕೋತ್ಸವವು ಅತಿಶಯ ವೆನಿಸದೆ? ವII ಬಳಿಕ ಸುರೇಂದ್ರಸಮೂಹವು ಕಲ್ಪವೃಕ್ಷದ ಹೂವು, ಪಚ್ಚಕರ್ಪೂರ, ಗೋರೋಚನ, ಚಂದನ ದ್ರವಗಳೇ ಮುಂತಾದ ಪರಿಮಳಯುಕ್ತವಾದ ನೀರಿನಿಂದ ತುಂಬಿದ ಚಿನ್ನದ ಕಲಶಗಳನೇಕವನ್ನು ಎತ್ತಿ ಸುರಿಯಿತು. ಆಗ ೧೦೨. ಜಿನನ ತನುಗಂಧಕ್ಕೆ ಸೋತು ಲಜ್ಜೆಯಿಂದ ನೀರಾಗಿ ಹರಿಯಿತೋ ಎಂಬಂತಿರುವವರ ಗಂಧದ್ರವ್ಯಸಮೂಹವು ಪರ್ವತದ ಸಮೀಪದಲ್ಲಿ ಸಣ್ಣ ಸಣ್ಣ ಝರಿಗಳನ್ನುಂಟುಮಾಡಿ, ಪುಟಿದೆದ್ದ ಅಲ್ಪಾಲ್ಪ ಜಲದಿಂದ ದೇವಲೋಕಕ್ಕೂ ಸಂತಸವನ್ನುಂಟುಮಾಡಿತು. ಹೀಗೆ ಗಂಧತೋಯವು ದೇವತೆಗಳ ಗುಂಪನ್ನು ತಣಿಸಿತು. ೧೦೩. ಸ್ನಾನಪೀಠವು ಮೇರುಪರ್ವತ, ಸ್ನಾನದ ನೀರು ಕ್ಷೀರಸಮುದ್ರದ ನೀರು, ದೇವೇಂದ್ರನು ಸ್ನಾನಮಾಡಿಸುವವನು, ಅಂದಮೇಲೆ ಜಿನನ ಸ್ನಾನದ ಮಹಿಮೆಯ ಬೆಡಗನ್ನು ವರ್ಣಿಸುವುದೇನು? ೧೦೪. ವಾದ್ಯಗಳು ಮೋಡಗಳ ಗುಡುಗಾಟವನ್ನು ಅನುಕರಿಸಿದುವು. ಮನದಲ್ಲೊಗೆದ ಸಂತೋಷದಿಂದಲೂ ಜಿನಸ್ನಾನಪ್ರಯುಕ್ತವಾದ ಗಂಧತೋಯದಿಂದಲೂ ದೇವತೆಗಳಿಗೆ ಅವಭೃತಸ್ನಾನವಾಯಿತು.

ಜಳಗಂಧಾಕ್ಷತೆ ಪುಷ್ಪಾ
ವಳಿ ಚರು ದೀಪಪ್ರದೀಪಧೂಪಫಲಂಗಳ್
ಕುಳಿಶಾಯುಧನರ್ಚಿಸೆ ತೊಳ
ತೊಳತೊಳಗಿದುವೆಳಸಿ ಬಳಸಿ ಜಿನನಡಿದಳಿರೊಳ್ ೧೦೫

ವ|| ಅಂತರ್ಚಿಸಿ,

ಜಯ ಗುಣಮಣಿರತ್ನಾಕರ
ಜಯ ಭುವನತ್ರಯಲಲಾಮ ಜಯ ಮನಸಿಜದು
ರ್ಜಯ ಜಯ ವಿನೇಯಬಾಂಧವ
ಜಯ ಮಂದರಶಿಖರಿಶಿಖರರತ್ನೋತ್ತಂಸಾ ೧೦೬

ವ|| ಎಂದಿಂತು ಪರಿಸಮಾಪ್ತಿ ಸವನಾರ್ಚನಸ್ತವನಸಮಯಾನಂತರಮಿಂದ್ರಾಣಿ ಭಗವದಂಗ ಸಂಗತಜಳಕಣಂಗಳಂ ದೇವಾಂಗವಸ್ತ್ರಂಗಳೊಳೊತ್ತಿಕಳೆದು ಸಹಜಸುರಭಿಗಂಧಬಂಧುರೌದಾರಿಕವಪುವಂ [ನಿಜಪ್ರಮೋದಪ್ರಬೋಧಿತ] ನಿಜದಿವ್ಯಪರಿಮಳಾಮೋದಿತ ದಿಗಂಗನಾಮುಖಂಗಳಪ್ಪ ಸುಗಂಧದ್ರವ್ಯಂಗಳಂ ಪೂಸಿ ಇಕ್ಷ್ವಾಕುಕುಳತಿಳಕಂಗೆ ತಿಳಕಮನಿಟ್ಟು ಮುಕ್ತಿಸಾಮ್ರಾಜ್ಯಕಂಠಿಕಾರ್ಹಂಗೆ ಮಣಿಮಯಕಂಠಿಕೆಯಂ ಕಟ್ಟಿ ವಿಜಯಶ್ರೀನಿವಾಸಬಾಹುಗೆ ಬಾಹುಯುಗಳಂಗಳೊಳ್ ಕೇಯೂರ ಹಾರಾಂಗದಕಟಕಾಳಂಕಾರಂ ಮಾಡಿ ಸಿಂಹವಿಷ್ಟರಾರೋಹಣೋಚಿತಕಟಿತಟಂಗೆ ಕಟಿತಟದೊಳ್ ಮಾಣಿಕ್ಯಮಣಿಕಿಂಕಿಣೀದಾಮಮಂ ತಗುಳ್ಚಿ ಸುರಾಸುರೇಂದ್ರವೃಂದವಂದಿತಪಾದಂಗೆ ಮೃದುಪದಂಗಳೊಳ್ ಕಳರವರಣಿತನೂಪುರಂಗಳಂ ತುಡಿಸಿ ದಿವಿಜೇಂದ್ರೋತ್ಸಂಗಸಂಗತಂ ಮಾಡಿದಾಗಳ್,

೧೦೫. ಇಂದ್ರನು ಜಿನನ ಅಡಿದಾವರೆಗಳನ್ನು ನೀರು, ಗಂಧ, ಅಕ್ಷತೆ, ಹೂವು, ಚರು (ದೇವತೆಗಳಿಗಾಗಿ ಸಮರ್ಪಿಸುವ ಅನ್ನ, ತುಪ್ಪ ಮುಂತಾದವು) ದೀಪ, ಮಂಗಳಾರತಿ, ಧೂಪ, ಫಲಗಳಿಂದ ಅರ್ಚಿಸಿದನು. ಅವು ತಳಿರಂತಿರುವ ಜಿನನ ಪದತಳವನ್ನು ಬಳಸಿಕೊಂಡು ಥಳಥಳನೆ ಹೊಳೆದುವು. ವ|| ಅಂತು ಅರ್ಚಿಸಿ; ೧೦೬. "ಗುಣಗಳೆಂಬ ಮಣಿಗಳಿಗೆ ಸಮುದ್ರನೇ! ನಿನಗೆ ಜಯ. ಭುವನತ್ರಯಕ್ಕೂ ತಿಲಕಪ್ರಾಯನಾದವನೇ! ನಿನಗೆ ಜಯ. ಮನ್ಮಥನಿಂದಲೂ ಗೆಲ್ಲಲಾಗದವನೇ! ನಿನಗೆ ಜಯ. ಬಂಧುಗಳನ್ನು ಸನ್ಮಾರ್ಗಕ್ಕೊಯ್ದವನೇ! ನಿನಗೆ ಜಯ. ಮಂದರಪರ್ವತದ ಶಿಖರಕ್ಕೆ ರತ್ನೋತ್ತಂಸನೇ! ನಿನಗೆ ಜಯ" ಎಂದು ಸ್ತುತಿಸಿದನು. ವ|| ಸ್ನಾನ, ಪೂಜೆ, ಸ್ತುತಿಗಳು ಮುಗಿದ ಮೇಲೆ ಇಂದ್ರಾಣಿಯು ಭಗವಂತನ ದೇಹಸಂಗತವಾದ ನೀರಿನ ಹನಿಗಳನ್ನು ದೇವಾಂಗವಸ್ತ್ರದಿಂದ ಒರಸಿದಳು. ಸಹಜಸುವಾಸನೆಯೂ ಗಂಧಯುಕ್ತವೂ ಬಂಧುರವೂ ಪರಮೌದಾರಿಕವೂ ಆದ ದೇಹಕ್ಕೆ ದಿಗಂಗನಾಮುಖದವರೆಗೆ ಪರಿಮಳವನ್ನು ಬೀರಿದ ಸುವಾಸನಾದ್ರವ್ಯಗಳಿಂದ ಪೂಸಿದಳು. ಇಕ್ಷ್ವಾಕುಕುಲತಿಲಕನಿಗೆ ತಿಲಕವನ್ನಿಟ್ಟಳು. ಮುಕ್ತಿಸಾಮ್ರಾಜ್ಯವೆಂಬ ಕಂಠಹಾರಕ್ಕರ್ಹನಾದ ಜಿನನಿಗೆ ಕಂಠಿಕೆಯನ್ನು ಕಟ್ಟಿದಳು. ವಿಜಯಲಕ್ಷ್ಮಿಯ ನಿವಾಸಸ್ಥಾನವೆನಿಸಿದ ಬಾಹುಗಳುಳ್ಳ ಆತನಿಗೆ ತೋಳೆರಡರಲ್ಲಿ ಬಾಹುಮುರಿಯನ್ನೂ ತೋಳ್ಬಳೆಯನ್ನೂ ಬಳೆಯನ್ನೂ ತೊಡಿಸಿದಳು. ಸಿಂಹಾಸನವನ್ನೇರಲು ಯೋಗ್ಯವಾದ

ಪರಮನ ನಿರತಿಶಯಾಂಗ
ಸ್ವರೂಪಮಂ ನೆಱೆಯೆ ನೋಡಲಾವೆಡೆಗಂ ತ
ನ್ನೆರಡುಂ ಕಣ್ಗಳ್ ನೆಱೆಯದೆ
ಸುರೇಂದ್ರನುಂ ಗಡ ಸಹಸ್ರಲೋಚನನಾದಂ ೧೦೭

ವ|| ಅಂತು ನಿರ್ವರ್ತಿತ ಜನ್ಮಾಭಿಷೇಕನನೇಕದುಂದುಭಿಬಧಿರಿತ ಸಕಳದಿಙ್ಮಂಡಳನಾಖಂಡಳ ಸಮರ ಸಮಿತಿವೆರಸಯೋಧ್ಯಾಪುರಕ್ಕಭಿಮುಖನಾದಾಗಳ್,

ಪರಮಜಿನಸವನಜಳನಿ
ರ್ಝರಮುಂ ಸುರಬಲಪಯೋಧಿಕಳಕಳಮುಂ ಮಾ
ಣ್ದಿರೆ ನೋಡೆ ಬಿನ್ನನಿರ್ದುದು
ಸುರಶೈಳಮದೊಂದು ಮದುವೆಗಳಿಪಿದ ಮನೆವೊಲ್ ೧೦೮

ವ|| ಆಗಳ್ ಕಲ್ಪಾಮರೇಂದ್ರಪ್ರಬಲಬಳಸಮಿತಿ ಗಗನತಳದಿಂದಮಂದಂಬಡೆದು ವಿನೀತಾ ಪುರಕ್ಕವತರಿಸಿ,

ಗಗನಾಭೋಗದೊಳೊಪ್ಪಿ ಬರ್ಪ ಪಲವುಂ ಯಾನಂಗಳಂ ತೋರ್ಪ ವೇ
[ಳಿಗೆ][1]ಗಳ್ಗೆತ್ತು ವಿಲೋಳಕೇತುತತಿಯಂ ಮೀಂಗೆತ್ತುಮಾದ್ಯದ್ಗಜಾ
ಳಿಗಳಂ ನಾವೆಯೆಗೆತ್ತು ದೇಹರುಚಿಯಂ ರತ್ನಾಂಶುಗೆತ್ತಿಂದ್ರಸೇ
ನೆಗಳಂ ವಾರ್ಧಿಯೆಗೆತ್ತು ನೋಡಿದುದು ಬಂದೆತ್ತಂ ಪುರಸ್ತ್ರೀಜನಂ ೧೦೯

ಸೊಂಟವುಳ್ಳವನಿಗೆ ಸೊಂಟದಲ್ಲಿ ಮಣಿಕಿಂಕಿಣಿಗಳಿಂದ ವಿಭೂಷಿತವಾದ ಸರಪಳಿಗಳನ್ನು ಕಟ್ಟಿದಳು. ಸುರಾಸುರೇಂದ್ರರಿಂದ ವಂದಿತವಾದ ಪಾದವುಳ್ಳವನಿಗೆ ಪಾದಗಳಲ್ಲಿ ಮಂಜುಳದನಿಗೊಡುವ ನೂಪುರಗಳನ್ನು ತೊಡಿಸಿ ಇಂದ್ರನ ತೊಡೆಯ ಮೇಲೆ ಕುಳ್ಳಿರಿಸಿದಳು. ೧೦೭. ಜಿನನ ಶ್ರೇಷ್ಠವಾದ ಅವಯವಗಳನ್ನು ಎಲ್ಲ ಕಡೆಗಳಿಂದಲೂ ಸಂದರ್ಶಿಸಲು ಇಂದ್ರನಿಗೆ ಎರಡು ಕಣ್ಣುಗಳು ಸಾಲದಾದವು. ಆಗ ಅವನು ಸಾವಿರ ಕಣ್ಣುಗಳನ್ನು ತಳೆದನು. ವ|| ಹೀಗೆ ಜನ್ಮಾಭಿಷೇಕವನ್ನು ನೆರವೇರಿಸಿ ದೇವೇಂದ್ರನು ಸುರರೊಡಗೂಡಿ, ನಗಾರಿ ಶಬ್ದಗಳು ದಿಕ್ಕುಗಳೆಲ್ಲವನ್ನೂ ಕಿವುಡಾಗಿಸುತ್ತಿರಲು, ಅಯೋಧ್ಯೆಯನ್ನು ಕುರಿತು ತೆರಳಿದನು. ೧೦೮. ಜಿನನ ಸ್ನಾನದ ನೀರಿನ ಪ್ರವಾಹವೂ ದೇವಸೈನ್ಯವೆಂಬ ಸಮುದ್ರದ ಕಲಕಲಧ್ವನಿಗಳೂ ನಿಂತುಹೋದುವು. ಆಗ ನೋಡಲು ಸುರಶೈಲವು, ಬಂದಿದ್ದ ಜನರೆಲ್ಲ ಹೊರಟುಹೋದ ಮದುವೆಯ ಮನೆಯಂತೆ ಬಿಕೋ ಎನ್ನತೊಡಗಿತು. ವ|| ಆಗ ಕಲ್ಪಾಮರೇಂದ್ರರೇ ಮುಂತಾದ ಬಲಿಷ್ಠ ಬಲಸಮೂಹವೂ ಆಕಾಶತಲದಿಂದ ಸುಂದರವಾದ ರೀತಿಯಿಂದ ವಿನೀತಾಪುರದಲ್ಲಿ (ಅಯೋಧ್ಯೆಯಲ್ಲಿ) ಇಳಿಯಿತು. ೧೦೯. ಆಕಾಶವನ್ನೆಲ್ಲಾ ಆವರಿಸಿಕೊಂಡು ಬರುತ್ತಿರುವ ಹಲವು ಯಾನಗಳನ್ನು ಅಲೆಗಳೆಂದೂ, ಅಲುಗಾಡುತ್ತಿರುವ ಬಾವುಟಗಳ ಸಮೂಹವನ್ನು ಮೀನೆಂದೂ, ಆನೆಗಳ

---

೧ ವೇಲಾ-ವೇಲಿಕಾ-ವೇಳಿಗೆ = ಅಲೆ, ಸಮುದ್ರಪ್ರವಾಹ

ವ|| ಅಂತವತರಿಸಿ ಚಂಚಚ್ಚೀನಾಂಶುಕಮಣಿದರ್ಪಣಾನೇಕಪ್ರಸೂನಪಲ್ಲವೋಲ್ಲಸಿತ ವಿವಿಧ ಮಂಡನಮಾಲಾಲಂಕೃತರಾಜಮಾರ್ಗದಿಂದಂ ಪರಿಮಿತಾಮರೇಂದ್ರಸಮಾಜಂಬೆರಸು ರಾಜಭವನಮಂ ಪೊಕ್ಕು,

ಕಳಧೌತೋಜ್ಜ್ವಳಕೂಟಕೋಟಿಘಟಿತಶ್ರೀಗೇಹದಿಂ ಮುಂದೆ ಮಂ
ಗಳಕಾರ್ಯೋಚಿತಮಾಗೆ ಮುನ್ನಮೆ ಸುರಾನೀಕಂ ಜನಂಗಳ್ ಮನಂ
ಗೊಳೆ ಮಾಡಿಟ್ಟ ವಿಚಿತ್ರಮಂಟಪದ ಸಿಂಹಾಸಂದಿಯೊಳ್ ಬಾಲನಂ
ಕುಳಿತಾಸ್ತ್ರಂ ಪಿರಿದುಂ ವಿಭೂತಿವೆರಸಿಟ್ಟೇಂ ಸಂತಸಂಬಟ್ಟನೋ ೧೧೦

ವ|| ಆಗಳ್ ಸುತಮುಖನಿರೀಕ್ಷಣಸಮಯಸಮುಪಜನಿತಪುಳಕಕಳಿಕಾಕಳಿತ ಕಲ್ಪವೃಕ್ಷನಪ್ಪ ನಾಭಿಮಹೀಭುಜನುಂ ಇಂದ್ರಾಣೀವದನಚಂದ್ರಚಂದ್ರಿಕಾವಿಘಟಿತನಿಕೃತನಿದ್ರಾ[1] ಮುದ್ರಿತನಯನನೀಳೋತ್ಪಳೆಯಪ್ಪ ಜಗದ್ಗುರುಜನನಿಯುಂ ಬಂದು ನಿಜತನೂಜವದನವನಜಮನಟ್ಟುರ್ತು ನೋಡಿ,

ಆ ದೊರೆಯ ವಿಭವದೊಳ್ ಪರ
ಮಾದರದಿಂ ದಿವಿಜಸಮಿತಿಯಿಂ ತಮ್ಮ ಮಗಂ
ಗಾದ ಮಹಿಮೆಗೆ ಮನಂಗೊಳ
ಲಾದುತ್ಸವಮರಿದು ಪೊಗಟಲಾ ದಂಪತಿಯಾ ೧೧೧

ವ|| ಆಗಳ್,

ಹಿಂಡನ್ನು ಹಡಗೆಂದೂ, ದೇಹಕಾಂತಿಯನ್ನು ರತ್ನಾಂಶುವೆಂದೂ, ಇಂದ್ರಸೇನೆಯನ್ನು ಸಮುದ್ರವೆಂದೂ ಭ್ರಮಿಸಿ ಆ ಪುರಸ್ತ್ರೀಜನವು ಎಲ್ಲ ಕಡೆಯಿಂದಲೂ ನೋಡಿತು. ವ|| ಹೀಗೆ ಭೂಮಿಗೆ ಬಂದು, ಚೀನಾಂಶುಕಗಳಿಂದಲೂ ಮಣಿದರ್ಪಣಗಳಿಂದಲೂ ಹೂ ಚಿಗುರುಗಳೇ ಮೊದಲಾದ ಬಗೆಬಗೆಯ ಅಲಂಕಾರಮಾಲೆಗಳಿಂದಲೂ ಅಲಂಕೃತವಾದ ರಾಜಮಾರ್ಗಗಳ ಮೂಲಕ ಪರಿಮಿತವಾದ ಅಮರೇಂದ್ರಸಮಾಜದಿಂದ ಕೂಡಿ ರಾಜಭವನವನ್ನು ದೇವತಾಸಮೂಹವು ಹೊಕ್ಕಿತು. ೧೧೦. ಸಾವಿರಾರು ಚಿನ್ನದ ಗೋಪುರಗಳಿಂದ ಪ್ರಕಾಶಿಸುವ ಶ್ರೀಗೇಹದಲ್ಲಿ ಮುನ್ನಡೆಯಲಿರುವ ಮಂಗಳಕಾರ್ಯಕ್ಕಾಗಿ ದೇವಸಮುದಾಯವು ಜನರಿಗೆ ಸಂತೋಷವಾಗುವಂತೆ ಈ ಮೊದಲೇ ಮಾಡಿಟ್ಟ ಸಿಂಹಾಸನದ ಮೇಲೆ ವಜ್ರಾಯುಧನಾದ ಇಂದ್ರನು ಅತಿವೈಭವದಿಂದ ಬಾಲನನ್ನು ಕುಳ್ಳಿರಿಸಿ ಬಹುವಾಗಿ ಸಂತೋಷಪಟ್ಟನು. ವ|| ಆಗ ಪುತ್ರನ ಮುಖದರ್ಶನದ ಕಾಲದಲ್ಲುಂಟಾದ ರೋಮಾಂಚಗಳೆಂಬ ಮೊಗ್ಗುಗಳಿಂದ ಕೂಡಿದ ಕಲ್ಪವೃಕ್ಷವೆನಿಸಿದ ನಾಭಿರಾಜನೂ ಇಂದ್ರಾಣೀಮುಖಚಂದ್ರನ ಬೆಳ್ದಿಂಗಳಿಂದ ಮಾಯಾನಿದ್ರೆಯನ್ನು ತೊರೆದು ಅರಳಿದ ಕಣ್ಣುಗಳೆಂಬ ಕನ್ನೈದಿಲೆಯುಳ್ಳ ಜಗಜ್ಜನನಿಯಾದ ಮರುದೇವಿಯೂ ಬಂದು ತಮ್ಮ ಮಗನ ಮುಖಕಮಲವನ್ನು ಪ್ರೀತಿಯಿಂದ ನೋಡಿದರು. ೧೧೧. ದಿವಿಜ ಸಮಿತಿಯು ರಾಜವೈಭವದಿಂದ ತಮ್ಮ ಮಗನಿಗೆ ನಡೆಸಿದ ಮಹಿಮೆಯನ್ನು ಕಂಡು ಆ ರಾಜದಂಪತಿಗಳಿಗಾದ ಸಂತೋಷವನ್ನು ವರ್ಣಿಸಲು ಸಾಧ್ಯವಾಗದು. ವ|| ಆಗ,

---

೧ ನಿಕೃತನಿದ್ರಾ = ಮಾಯಾನಿದ್ರಾ, ನಿಕೃತ = ಛಲದಿಂದ ಕೂಡಿದ್ದು. 'ವಿಕೃತನಿದ್ರಾ' ಎಂಬ ಪಾಠ ತಪ್ಪು.

ದೊರೆ ನಿಮಗಿಲ್ಲ ಭೂಭುವನದೊಳ್ ಪೆಱರಿರ್ವರೆ ನೋಂತಿರೀ ಜಗ
ದ್ಗುರುಗೆ ಪಿತೃದ್ವಯಂಗಳೆನಿಸಲ್ ಮೆಱೆವರ್ ಪೆಱರಾರೊ ನೀವೆ ಪೂ
ಜ್ಯರಿರೆಮಗೆಂದು ದಿವ್ಯವಸನಪ್ರಸವಾಭರಣಂಗಳಿಂದಮಾ
ದರಮಮರ್ವಂತು ತದ್ಯುಗಳಮಂ ಪರಿಪೂಜಿಸಿದಂ ಸುರೇಶ್ವರಂ ೧೧೨

ವ॥ ಅಂತು ಪೂಜಿಸಿ ಜನ್ಮಾಭಿಷೇಕವ್ಯತಿಕರ[೧]ಮನವರ್ಗೆ ಮಹೋತ್ಸಾಹಕರವಾಗೆ ಸವಿಸ್ತರಮಱಿಪಿ ಜಾತಕರ್ಮೋತ್ಸವದೊಳ್ ಪರಿಜನಮುಂ ಪುರಜನಮುಮೊಸಗೆಮುಱುಳ್ಕೊಂಡು ನಿರ್ಭರ ಕ್ರೀಡಾರಸಪರವಶರಾದಾಗಳ್,

ನೆಲೆಮಾಡಂಗಳೊಳೋಳಿವಟ್ಟ ಗುಡಿಗಳ್ ಗಂಧಾಂಬುವಿಂದಾದ ಪೂ
ವಲಿಯಿಂ ಚೆಲ್ವೆಸೆದಿರ್ದ ಬೀದಿಗಳನೇಕಾತೋದ್ಯನಾದಂಗಳೊಳ್
ನಲಿಯುತ್ತುಂ ಕುಣಿಯುತ್ತುಮಿರ್ಪ ಗಣಿಕಾಸಂದೋಹದಿಂ ಚೆಲ್ವನ
ಗ್ಗಲಿಸುತ್ತಿತ್ತುವು ತತ್ಪುರಕ್ಕೆ ಸುರರಾಜಾವಾಸಸಾಮ್ರಾಜ್ಯಮಂ ೧೧೩

ಪುರಜನಮಟ್ಟೆಯಿಂ ಮುಡಿವ ಕೂಡೆ ತುಱುಂಬುಪ ಕಿಂಕಿರಾತಶೇ
ಖರರಜದಿಂದೆ ಚಾರುಪಟವಾಸದ ಧೂಳಿಯ ಪರ್ಬಿನಿಂದಮಾ
ಭರಣದ ಮಾಣಿಕಂಗಳ ಪೊದಳ್ದರುಣಾಂಶುಗಳಿಂದಮಂದು ಪಿಂ
ಜರಿತ ಪಿಶಂಗಿತಾರುಣಿತ ದಿಙ್ಮುಖಮಾದುದು ತನ್ಮಹೋತ್ಸವಂ ೧೧೪

೧೧೨. "ಈ ಪ್ರಪಂಚದಲ್ಲಿ ನಿಮಗೆಣೆಯಾದವರು ಮತ್ತೊಬ್ಬರಿಲ್ಲ. ಈ ಜಗದ್ಗುರುವಿಗೆ ತಾಯಿತಂದೆಗಳಾಗಲು ನೀವಿಬ್ಬರೇ ನೋಂತಿರಿ. ನೀವೇ ನಮಗೆ ಪೂಜ್ಯರು" ಎಂದು ಹೇಳಿ ಸುರೇಶ್ವರನು ಶ್ರೇಷ್ಠವಾದ ಬಟ್ಟೆ, ಹೂವು ಮತ್ತು ಆಭರಣಗಳಿಂದ ಆ ದಂಪತಿಗಳನ್ನು ಪೂಜಿಸಿದನು. ವ॥ ಹಾಗೆ ಪೂಜಿಸಿ ಮಹೋತ್ಸಾಹಕರವಾದ ಜನ್ಮಾಭಿಷೇಕ ವೃತ್ತಾಂತವನ್ನು ಅವರಿಗೆ ವಿಸ್ತಾರವಾಗಿ ತಿಳಿಸಿದನು. ಜಾತಕರ್ಮೋತ್ಸವಪ್ರಮುಕ್ತವಾದ ಆನಂದದಲ್ಲಿ ಪರಿಜನರೂ ಪುರಜನರೂ ತಲ್ಲೀನರಾಗಿ ನಿರ್ಭರಕ್ರೀಡಾರಸದಲ್ಲಿ ಮುಳುಗಿದರೂ ೧೧೩. ನೆಲಮಾಡಗಳ ಮೇಲೆ ಸಾಲಾಗಿ ಕಟ್ಟಿದ ಪತಾಕೆಗಳೂ, ಪರಿಮಳಭರಿತವಾದ ಪುಷ್ಪಬಲಿಗಳಿಂದ ಸುಂದರವಾದ ಬೀದಿಗಳೂ, ವಿವಿಧವಾದ್ಯಧ್ವನಿಗಳೊಡನೆ ನಲಿಯುತ್ತಲೂ ಕುಣಿಯುತ್ತಲೂ ಇರುವ ಗಣಿಕೆಯರೂ ಆ ಪಟ್ಟಣಕ್ಕೆ ಸೌಂದರ್ಯವನ್ನು ಹೆಚ್ಚಿಸುತ್ತಾ ಅದಕ್ಕೆ ಇಂದ್ರನ ಆವಾಸಸ್ಥಾನವಾದ ಅಮರಾವತಿಯ ಸೌಭಾಗ್ಯವನ್ನು ತಂದವು. ೧೧೪. ಆ ಪಟ್ಟಣದ ಜನರು ತಲೆಗೆ ಮುಡಿದ ಮತ್ತು ಸಿಕ್ಕಿಸಿಕೊಂಡ ಗೋರಂಟೆ ಹೂದಂಡೆಗಳ ಪರಾಗದಿಂದಲೂ ಬುಕ್ಕಿಹಿಟ್ಟಿನ ಹರಡಾಟದಿಂದಲೂ ಆಭರಣ ಮತ್ತು ಮಾಣಿಕಗಳ ಕೆಂಪಾದ ಕಿರಣಗಳಿಂದಲೂ ಆ ಮಹೋತ್ಸವದಲ್ಲಿ ದಿಙ್ಮುಖಗಳು (ಕ್ರಮವಾಗಿ) ಕೆಂಪು ಹಳದಿಯುಳ್ಳುವಾಗಿಯೂ, ಕೆಂಪು ಬಿಳುಪುಗಳುಳ್ಳುವಾಗಿಯೂ ಕೆಂಪುಳ್ಳುವಾಗಿಯೂ

---

೧ ವ್ಯತಿಕರ - incident, occurence. 'ವ್ಯತಿರೇಕ' ಎಂಬ ಪಾಠಕಲ್ಪನೆ ತಪ್ಪು

ನೂತನಮಣಿಭೂಷಣಬಾ
ಳಾತಪಸಿತಮಣಿಮರೀಚಿಚಂದ್ರಾತಪಪಿ
ಷ್ಟಾತಕಪರಾಗಪಿಂಜರಿ
ತಾತಪಮಯಮಾದುದಾ ಧರಾಧಿಪಭವನಂ ೧೧೫

ವ॥ ಅಂತು ಪುರಮುಮಂತಃಪುರಮುಮಾದಿಪುರುಷಜನ್ಮೋತ್ಸವಸುಧಾಂಬುರಾಶಿಯೊಳ್ ಕೂಡಿ ಮೂಡಿ ಮುಳ್ಕಾಡುವುದಂ ನೋಡಿ ತಾನುಮಾನಂದನಾಟಕಮನಾಡಲ್ಬಗೆದು ಕೃತಾನುಕರಣಮೆ ನಾಟಕಮಪ್ಪುದಱಿಂ ಭಗವಜ್ಜನ್ಮಾಭಿಷೇಕಸಂಬಂಧಿಯಾಗೆ ತನ್ನ ಪೊಸತೆ ಸಮೆದ ಸಮವತಾರ ರೂಪಮುಮಂ ದಶಾವತಾರರೂಪಗರ್ಭಸಂದರ್ಭಂಗಳಪ್ಪ ಶೇಷಾಶೇಷರೂಪಕಂಗಳುಮಂ ಸುರಾಸುರಸಭೆಗಂ ನಾಭಿರಾಜಾದಿ ಮನುಜಸಭೆಗಂ ಮೆಱೆಯಲೆಂದು ಶುದ್ಧಚಿತ್ರಮೆಂಬ ಪೂರ್ವರಂಗ ಪ್ರಸಂಗದೊಳ್ ಜರ್ಜರಪೂಜಾಮಂಗಳಪದೋಚ್ಚಾರಣ ಪುಷ್ಪಾಂಜಲಿವಿಕ್ಷೇಪಣಾದಿ ನಾಂದೀವಿಧಿಯಂ ನಿರ್ವರ್ತಿಸಿ ದೃಶ್ಯಶ್ರವ್ಯದೃಢಸೂತ್ರಾದಿ ಪ್ರಯೋಗಂಗಳೊಳಂ ನಾನಾವಿಧ ವಾದ್ಯಂಗಳೊಳಂ ಆಂಗಿಕಾಭಿನಯಂಗಳೊಳಮೆಸೆಯೆ ಮಘವನಘವಿಘಾತಾರ್ಥಮುದ್ಧತಾಭಿನಯಪ್ರಾಯಮುಮಾರಭಟೀ ವೃತ್ತಿಯುಕ್ತಮುಮಪ್ಪ ತಾಂಡವಮನಾಡಲುದ್ಯೋಗಂಗೆಯ್ದು ಮಂಗಳಾಳಂಕಾರಾಲಂಕೃತನಾಗಿ ನಾಟ್ಯ ವೇದಾವತಾರವನೆ ಪೋಲ್ತು ರಂಗಂಬೊಕ್ಕು,

ಆದುವು. ೧೧೫. ಆ ರಾಜಭವನವು ಹೊಸವಾದ ರತ್ನಾಭರಣಗಳಿಂದ ಎಳೆಬಿಸಿಲುಳ್ಳುದಾಯಿತು. ಬೆಳ್ಳನೆಯ ರತ್ನಕಿರಣಗಳಿಂದ ಚಂದ್ರಾತಪವುಳ್ಳುದಾಯಿತು. ಬುಕ್ಕಿಹಿಟ್ಟಿನ ಧೂಳಿಂದ ಕೆಂಪು ಹಳದಿಬಣ್ಣದ ಪ್ರಕಾಶದಿಂದ ಕೂಡಿದುದಾಯಿತು! ವ॥ ಅಂತು ಪಟ್ಟಣವೂ ಅಂತಃಪುರವೂ ಆದಿಪುರುಷನ ಜನ್ಮೋತ್ಸವವೆಂಬ ಅಮೃತದ ಕಡಲಿನಲ್ಲಿ ಮುಳುಗಿರುವುದನ್ನು ಇಂದ್ರನು ನೋಡಿದನು. ತಾನೂ ಆನಂದನಾಟಕವನ್ನು ಆಡಲು ಬಗೆದನು. ಮಾಡಿದುದನ್ನು ಅನುಕರಿಸುವುದು ನಾಟಕ. ಭಗವಜ್ಜನ್ಮಾಭಿಷೇಕ ಸಂಬಂಧಿಯಾಗಿ ತಾನು ಹೊಸತಾಗಿ ಮಾಡಿದ ರೂಪಕವನ್ನೂ ದಶಾವತಾರಗಳಿಗೆ[1] ಸಂಬಂಧಿಸಿದ ಸಂದರ್ಭಗಳನ್ನೊಳಗೊಂಡ ಶೇಷಾಶೇಷರೂಪಕಗಳನ್ನೂ ಸುರಾಸುರರ ಸಭೆಗೂ ನಾಭಿರಾಜಾದಿ ಮಾನವರ ಸಭೆಗೂ ಪ್ರಕಾಶಪಡಿಸಲಾಶಿಸಿದನು. ಶುದ್ಧಚಿತ್ರಗಳೆಂಬ ಪೂರ್ವರಂಗದಲ್ಲಿ ಜರ್ಜರ ಪೂಜೆಯನ್ನೂ ಮಂಗಲಪದೋಚ್ಚಾರಣೆಯನ್ನೂ ಪುಷ್ಪಾಂಜಲಿ-ಕ್ಷೇಪಣವೇ ಮೊದಲಾದ ನಾಂದೀವಿಧಿಯನ್ನೂ ಇಂದ್ರನು ನೆರವೇರಿಸಿದನು. ದೃಶ್ಯ, ಶ್ರವ್ಯ, ದೃಢಸೂತ್ರಾದಿ ಪ್ರಯೋಗಗಳಿಂದಲೂ ನಾನಾವಿಧ ವಾದ್ಯಗಳಿಂದಲೂ ಆಂಗಿಕಾಭಿನಯಗಳಿಂದಲೂ ಇಂದ್ರನು ಪಾಪವಿನಾಶಕ್ಕಾಗಿ ಉದ್ಧತಾಭಿನಯವನ್ನೂ ಆರಭಟೀವೃತ್ತಿಯುಕ್ತವಾದ ತಾಂಡವನೃತ್ಯವನ್ನೂ ಆಡಲುದ್ಯೋಗಿಸಿದನು. ಮಂಗಳಾಲಂಕಾರಗಳಿಂದ ಅಲಂಕೃತನಾಗಿ ನಾಟ್ಯವೇದದ ಅವತಾರವನ್ನೇ ಹೋಲಿ

1 ಮಹಾಬಲ, ಲಲಿತಾಂಗ, ವಜ್ರಜಂಘ, ವಜ್ರಜಂಘಾರ್ಯ, ಶ್ರೀಧರದೇವ, ಸುವಿಧಿ', ಅಚ್ಯುತೇಂದ್ರ, ವಜ್ರನಾಭಿ, ಅಹಮಿಂದ್ರ, ಆದಿನಾಥ-ಇವು ದಶಾವತಾರಗಳು.

ಲೋಕಾಕಾರಮನಭಿನಯಿ
ಪಾಕಾರಂ ನೆಗಟಿ ನಿಂದು ವೈಶಾಖಸ್ಥಾ
ನಾಕಾರದೊಳ್ ಮರು[ದ್ವೃತ್ತ]೧
ನಾ ಕುಳಿಶಾಯುಧನದೊಂದು ಚೆಲ್ವಂ ಪಡೆದಂ ೧೧೬

ಸೂಸಿದ ಪುಷ್ಪಾಂಜಳಿಯನೆ
ಬಾಸಣಿಸಿದ ಮದವದಳಿಕುಳಂಗಳ ಚೆಲ್ವಂ
ಮಾಸಿಸಿದುವು ವಾಸವನ ವಿ
ಳಾಸಂಬೆರಸಡರೆ ತೊಡರೆ ಬಳಸುವ ಕಣ್ಗಳ್ ೧೧೭

ರಸಭಾವಾಲಸನಯನ
ಪ್ರಸರಂಗಳ ಪೊಳೆವ ಪೊಳೆಪುಗಳ್ ಬಳ್ವಳನೀ
ಳ್ದೆಸೆದುವು ರಂಗದೊಳೆತ್ತಂ
ಪೊಸಯಿಸುತುಂ ಯವನಿಕಾವಿಳಾಸಮನಾಗಳ್ ೧೧೮

ಪದವಿನ್ಯಾಸದ ತುಱುಗಲ್
ಪೊದಟೆ ಲಯಂಬೆರಸು ರಂಗಮಂ ಬಳಸಿದನಾ
ತ್ರಿದಶಾಧಿನಾಥನಳೆವವೊ
ಲುದನ್ವದಾವೇಷ್ಟಿತಾಖಿಳಾವನಿತಳಮಂ ೧೧೯

ವ।। ಆಗಳ್ ನಾಕಲೋಕವಾದ್ಯಂಗಳೊಳನೇಕಭೇದಂಗಳಪ್ಪುಪವಾದಕ ಪರಿವಾದಕ ವಾದ್ಯಂಗಳೊಳ್ ಕಿನ್ನರೀಜನಮಧುರಗೀತಾನುಗತಂಗಳನುಕ್ರಮದೊಳೆ ನೆಗಟೆ

ರಂಗವನ್ನು ಪ್ರವೇಶಿಸಿದನು. ೧೧೬. ಲೋಕಾಕಾರವನ್ನಭಿನಯಿಸುವ ಆಕೃತಿಯಲ್ಲಿದ್ದು ವೈಶಾಖಸ್ಥಾನದಲ್ಲಿ (ಸೊಂಟದ ಮೇಲೆ ಎರಡೂ ಕೈಗಳನ್ನಿಟ್ಟುಕೊಂಡು ಕಿಸುಗಾಲಿನಲ್ಲಿ ನಿಲ್ಲುವುದು) ನಿಂತು ದೇವಪರಿವೃತನೂ ವಜ್ರಪಾಣಿಯೂ ಆದ ಇಂದ್ರನು ಅದೊಂದು ಚೆಲ್ವನ್ನು ಪಡೆದನು. ೧೧೭. ವಿಲಾಸಯುಕ್ತವಾಗಿಯೂ ಅಡರು ತೊಡರಾಗಿಯೂ ಬಳಸುವ ಇಂದ್ರನ ಕಣ್ಣುಗಳು, ತಾನು ಎರಚಿದ ಪುಷ್ಪಾಂಜಲಿಗೆ ಮುತ್ತಿದ ಮದಿಸಿದ ದುಂಬಿಗಳ ಚೆಲ್ವನ್ನು ಕಾಂತಿಗುಂದಿಸಿದುವು. ೧೧೮. ರಸಭಾವಗಳ ಅಭಿನಯದಿಂದ ಅಲಸವಾದ ಕಣ್ಣಹರಹಿನ ಮಿರುಗುಗಳು ರಂಗಸ್ಥಳದ ಮೇಲೆ ಜವನಿಕೆಯ (ಪರದೆಯ) ಶೋಭೆಯನ್ನು ಹೊಸರೀತಿಯಲ್ಲಿ ಅಧಿಕವಾಗಿ ಹರಡಿ ಶೋಭಿಸಿದುವು. ೧೧೯. ತಾಲಮಾನಯುಕ್ತವಾಗಿ ಹೆಜ್ಜೆಗಳನ್ನು ಹಾಕುವುದರಲ್ಲಿ ವೈವಿಧ್ಯವನ್ನು ಕಾಣಿಸುತ್ತಾ ರಂಗವನ್ನು ಅವನು ಬಳಸಿದನು. ಅದು ದೇವೇಂದ್ರನು ಸಮುದ್ರದಿಂದ ಸುತ್ತುವರಿದ ಭೂಮಿಯನ್ನು ಅಳೆಯುವಂತೆ ತೋರಿತು. ವ।। ಆಗ ಸ್ವರ್ಗಲೋಕದ ವಾದ್ಯಭೇದಗಳಾದ ಉಪವಾದಕ ಪರಿವಾದಕಗಳೆಂಬ ವಾದ್ಯಗಳಲ್ಲಿ ಕಿನ್ನರಸ್ತ್ರೀಯರ ಮಧುರವಾದ ಗೀತಾನುಗೀತಗಳು

---

೧ ಮರುದ್ವೃತ (ಅನ್ಯತ್ರ) ನೋಡಿ : 'ಮರುದ್ಭಿರಭಿತೋವೃತಃ' (ಪೂ. ಪು. ೧೪-೧೦೮)

ಕರಣಂ ರೇಚಕಮಂಗಹಾರಮಿನಿತೆಂದೋದುತ್ತುಮಿರ್ಪೋದದ
ತ್ತಿರಲೀ ನಾಟ್ಯರಸಂ ಸಮಸ್ತಸುರವೃಂದಾಧೀಶನಿಂದಂ ಪೊನ
ಲ್ವರಿದತ್ತೆಂಬಿನಮಾಡುವಲ್ಲಿ ಮಕುಟವ್ಯಾಲಗ್ನರತ್ನಪ್ರಭಾ
ಪರಿವೇಷಂ ಲಲಿತೇಂದ್ರಚಾಪರುಚಿಯಂ ಮಾಡಿತ್ತು ದಿಕ್ಚಕ್ರದೊಳ್ ೧೨೦

ಕುಳಶೈಲಂಗಳ್ ಪದಾಘಾತದೊಳಲುಗುವಿನಂ ತಾರಕಾಸಂಕುಳಂ ತೋ
ಳ್ಗಳದೊಂದಳ್ಳೇಱನೊಳ್ ಪೂವಲಿವೊಲುದುರ್ವಿನಂ ವಾರ್ಧಿಗಳ್ ರೇಚಿಕೋತ್ಥಾ
ನಿಳತೀವ್ರಾಘಾತದಿಂದುಚ್ಚಳಿಪಿನಮಖಿಳಾಶಾಂತರಂ ದೇವತೂರ್ಯಾ
ವಳಿಗೀತಧ್ವಾನದಿಂದಂ ಪುದುವಿನಮೆಸೆದತ್ತಿಂದ್ರನಾನಂದನೃತ್ಯಂ ೧೨೧

ಎಳೆಯೊಳ್ ತೋಱಿದ ರೂಪನಾಗಳೆ ನಭೋಭಾಗಾಗ್ರದೊಳ್ ತೋರ್ಪನಾ
ಗಳೆ ಗೆಂಟಾಗಳೆ ಸಾರೆಯಾಗಿ ಪೊಳೆವಂ ಸೂಕ್ಷ್ಮಾಂಗನಾಗಿರ್ಪನಾ
ಗಳೆ ದಿಗ್ವ್ಯಾಪಕನಪ್ಪನಿಂತು ಪಲವುಂ ಚೋದ್ಯಂಗಳಂ ವಿಕ್ರಿಯಾ
ಬಳದಿಂದಾಡಿ ಮಹೇಂದ್ರಜಾಲಿಗನುಮಂ ಪೋಲ್ತಂ ಸುರಾಧೀಶ್ವರಂ ೧೨೨

ವ|| ಅಂತು ತನ್ನ ತಾಂಡವಾರಂಭದೊಳಳವಿಗಳಿದ ರಾಗದಿಂ ನಿರ್ಮಿಸಿದ ಭುಜಶಾಖಾ ಸಹಸ್ರಂಗಳೊಳ್ ದಾಂಗುಡಿವಿಟ್ಟನಂಗಜಂಗಮಲತೆಗಳನನುಕರಿಸಿ ದೇವಗಣಿಕೆಯರಾಡುವಾಗಳ್,

ಕ್ರಮವಾಗಿ ಜರುಗುತ್ತಿದ್ದುವು ೧೨೦. ಕರಣ, ರೇಚಕ ಮತ್ತು ಅಂಗಹಾರಗಳ ಸಂಖ್ಯೆಯಿಷ್ಟೆಂಬ ಪರಿಗಣನೆಯು ಸಾಕು, ಸಮಸ್ತ ಸುರರಿಗೂ ಒಡೆಯನಾದ ದೇವೇಂದ್ರನಿಂದ ಈ ನಾಟ್ಯರಸವು ಹೊನಲಾಗಿ ಹರಿಯಿತೋ ಎಂಬಂತೆ ಕಿರೀಟದಲ್ಲಿ ಲಗ್ನವಾದ ರತ್ನಪ್ರಭೆಗಳ ಗುಡಿಕಟ್ಟು ದಿಙ್ಮಂಡಲದಲ್ಲಿ ಕಾಮನಬಿಲ್ಲಿನ ಕಾಂತಿಯನ್ನು ಹರಡಿತು. ೧೨೧. ಇಂದ್ರನು ಆನಂದದಿಂದ ಮಾಡಿದ ನೃತ್ಯವು ತಾನೇ ತಾನಾಗಿ ಜರುಗುತ್ತಿತ್ತು. ಆಗ ಅವನ ಕಾಲುಗಳ ತುಳಿತದಿಂದ ಕುಲಪರ್ವತಗಳು ಅಲುಗಾಡಿದುವು. ಅವನ ನೀಳವಾದ ತೋಳುಗಳ ಸ್ಪರ್ಶದಿಂದ ನಕ್ಷತ್ರಗಳು ಹೂವುಗಳಂತೆ ಉದುರಲಾರಂಭಿಸಿದುವು. ಅವನ ರೇಚಕದಿಂದೆದ್ದ ಗಾಳಿಯಿಂದ ಸಮುದ್ರಗಳು ಅಲ್ಲೋಲಕಲ್ಲೋಲವಾದುವು. ದಿಗಂತರಗಳು ದೇವನಗಾರಿಗಳ ಶಬ್ದಗಳಿಂದ ವ್ಯಾಪ್ತವಾದುವು. ೧೨೨. ದೇವೇಂದ್ರನು ತನ್ನೊಂದು ವಿಕ್ರಿಯಾಬಲದಿಂದ ಅನೇಕಾಶ್ಚರ್ಯಗಳನ್ನು ನಡೆಸಿ ಮಹೇಂದ್ರಜಾಲಿಗನನ್ನು ಹೋಲಿದನು. ಮೊದಲು ಭೂಮಿಯ ಮೇಲೆ ತೋರಿಸಿದ ರೂಪವನ್ನು ನಭೋಭಾಗದ ತುದಿಯಲ್ಲಿ ತೋರುವನು. ಒಡನೆ ಬಹುದೂರ ಸರಿದು ಪುನಃ ಸಮೀಪಿಸಿ ಸೂಕ್ಷ್ಮಾಂಗನಾಗಿ ಕಾಣಿಸಿಕೊಳ್ಳುವನು. ಸ್ವಲ್ಪಹೊತ್ತಿನಲ್ಲಿಯೇ ಅವನು ಎಲ್ಲ ದಿಕ್ಕುಗಳನ್ನೂ ವ್ಯಾಪಿಸುವನು. ವ|| ಹಾಗೆ ಇಂದ್ರನ ತಾಂಡವನೃತ್ಯದ ಆರಂಭಕಾಲದಲ್ಲಿ ಅಪಾರವಾದ ಪ್ರೀತಿಯಿಂದ ಅವನ ಭುಜಶಾಖಾಸಹಸ್ರಗಳಲ್ಲಿ ಉದ್ದವೂ ಸಂಚರಣಶೀಲವೂ ಆದ ಮನ್ಮಥನ ಬಳ್ಳಿಯೋ ಎಂಬಂತಿರುವ ದೇವಗಣಿಕೆಯರು ನೃತ್ಯವೆಸಗುತ್ತಿದ್ದರು. ಆಗ,

ರಸಭಾವಾಭಿನಯಂಗಳಂ ಭುಜಲತಾಭ್ರೂಚಾಪನೇತ್ರೋತ್ಪಲ
ಪ್ರಸರಂಗಳ್ ಪಸರಂಗೆಯುತ್ತಿರೆ ಲಸನ್ನೇತ್ರಂಗಳಂ ಕೂಡೆ ಬಂ
ಚಿಸುತುಂ ಮೆಟ್ಟುವ ಮೆಟ್ಟಿನೊಳ್ಪು ಜನತಾನೇತ್ರಂಗಳಂ ನಾಡೆ ಚೆ
ಲ್ವೆಸೆದತ್ತಿಂದ್ರನ ನೀಳ್ದ ತೋಳ್ದುಱುಗಲೊಳ್ ದೇವಾಂಗನಾನರ್ತನಂ ೧೨೩

ಆನಂದಂಬೆರಸಂಕದಚ್ಚರಸಿಯರ್ ದೇವೇಂದ್ರನೈರಾವತಾ
ಳಾನಸ್ತಂಭಸಮಂಗಳಪ್ಪ ಭುಜಸಂದೋಹಂಗಳೊಳ್ ವೀರಕಾಂ
ತಾನೀಕಕ್ಕೆಣೆಯಾಗಿ ಕೂಡೆ ಕುಣಿದರ್ ಮತ್ತಂ ಕೆಲರ್ ನೋಡಿ ಸೂ
ಚೀನಾಟ್ಯಂಗಳನಾಡಿದರ್ ಕರನಖಪ್ರಾಂತಂಗಳೊಳ್ ಶಕ್ರನಾ ೧೨೪

ತ್ರಿದಶಗಣಾಧಿನಾಯಕನ ಪರ್ವಿದ ತೋಳ್ದುಱುಗಲ್ಗಳೊಳ್ ಪಳಂ
ಚಿದೆ ಗಗನಂಬರಂ ನೆಗೆದು ಸೂಸುವ ಬಾಹುಪರಿಭ್ರಮಂಗಳೊಳ್
ಬೆದಱದೆ ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ತವ
ಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂಕದಂಬಕಂ ೧೨೫

ಯುವಸಂಘಾತಮದೊಂದು ತೋಳ್ದುಱುಗಲೊಳ್ ಮತ್ತೊಂದು ತೋಳೋಳಿಯೊಳ್
ಯುವತೀವ್ರಾತಮನೇಕಭೇದರಸಭಾವಂಗಳ್ ಪೊದಟ್ಟುಣ್ಮೆ ಪೊ
ಣ್ಮುವಿನಂ ನರ್ತಿಸೆ ಸೂತ್ರಧಾರವಿಧಿಯಿಂ ಸುತ್ರಾಮನಂದಿಂತು ತಾಂ
ಡವಲಾಸ್ಯಂಗಳ ಚೆಲ್ವನೊರ್ಮೆಯೆ ತದೀಯಾಸ್ಥಾನದೊಳ್ ತೋಱಿದಂ ೧೨೬

೧೨೩. ಇಂದ್ರನ ನೀಳ್ದ ತೋಳುಗಳ ಮೇಲೆ ಜರುಗುತ್ತಿದ್ದ ದೇವಾಂಗನೆಯರ ನರ್ತನವು ಚೆಲ್ವಾಗಿತ್ತು. ಬಳ್ಳಿಯಂತಿರುವ ಅವರ ತೋಳುಗಳ ಬಿಲ್ಲಿನಂತಿರುವ ಹುಬ್ಬುಗಳ ಮತ್ತು ಕಮಲದಂತಿರುವ ಕಣ್ಣುಗಳ ಹರಹುಗಳು ರಸಭಾವಗಳ ಅಭಿವ್ಯಕ್ತಿಯನ್ನು ಪ್ರಕಾಶಗೊಳಿಸುತ್ತಿದ್ದುವು. ಪಾದವಿಕ್ಷೇಪಗಳಲ್ಲಿನ ಸೊಗಸು ಜನತೆಯ ನೇತ್ರಗಳನ್ನು ಸೆಳೆಯುತ್ತಿದ್ದುವು. ೧೨೪. ಐರಾವತವನ್ನು ಕಟ್ಟುವ ಕಂಭಕ್ಕೆ ಸಮನಾಗಿರುವ ದೇವೇಂದ್ರನ ತೋಳುಗಳ ಮೇಲೆ ಸಂತೋಷಾಧಿಕ್ಯದಿಂದ ಧೀರ ಅಪ್ಸರೆಯರು ವೀರವನಿತೆಯರ ಸಮೂಹಕ್ಕೆಣೆಯಾಗಿ ಕುಣಿದರು. ಮತ್ತೆ ಕೆಲವರು ಇಂದ್ರನ ಕೈ ಉಗುರುಗಳ ಬಳಿ (ಬೆರಳುಗಳ ತುದಿಯಲ್ಲಿ) ಸೂಚೀನಾಟ್ಯವನ್ನು ಆಡಿದರು. ೧೨೫. ಇಂದ್ರನ ಹಬ್ಬಿದ ತೋಳುಗಳ ಗುಂಪಿನಲ್ಲಿ ಒಬ್ಬರಿಗೊಬ್ಬರು ತಾಗದೆ ಆಕಾಶದವರೆಗೆ ನೆಗೆದರೂ ಕೆಳಕ್ಕೆ ಬೀಳದೆಯೆ ತೋಳ್ಗಳ ಪರಿಭ್ರಮಣಕ್ಕೂ ಬೆದರದೆಯೆ ಇಂದ್ರನ ಕುಣಿತಕ್ಕೆ ಅನುಗುಣವಾಗಿ ಕುಣಿಯುವಲ್ಲಿ ಜತ್ತವಟ್ಟ[1]ದ ಮಣಿಗಳಂತೆ ದಿವ್ಯಸ್ತ್ರೀಸಮೂಹವು ಅದೆಷ್ಟು ಸೊಗಯಿಸಿತೊ! ೧೨೬. ಅವನ ಒಂದು ತೋಳುಗಳ ಗುಂಪಿನಲ್ಲಿ ಯುವಕರ ತಂಡವೂ ಮತ್ತೊಂದು ತೋಳ್ಗುಂಪಿನಲ್ಲಿ ಯುವತಿಯರ ತಂಡವೂ ರಸಭಾವಗಳ ಅನೇಕ ಭೇದವನ್ನು ವ್ಯಕ್ತೀಕರಿಸುವಂತೆ ನರ್ತಿಸುತ್ತಿದ್ದುವು. ಹೀಗೆ ನಾಭಿರಾಜನ ಆಸ್ಥಾನಮಂಟಪದಲ್ಲಿ ಇಂದ್ರನು

1 ಜತ್ತವಟ್ಟ = ವರ್ತುಲವಾದ ಯಂತ್ರ, ಬೊಂಬೆಗಳನ್ನು ಕುಣಿಸುವ ಹಲಗೆ. ಅದಕ್ಕೆ ಅಲಂಕಾರವಾಗಿ ಕಟ್ಟಿದ ಮಣಿಗಳಂತೆ ಎಂದರ್ಥ. 'ಜತ್ತವಟ್ಟದ ಮಣಿ' ಎಂಬ ಪಾಠ ಸರಿಯಲ್ಲ. ಮಣಿಗೂ ಅಪ್ಸರಸ್ತ್ರೀಯರಿಗೂ ಹೋಲಿಕೆ ಅಸಂಗತ.

ವ|| ಅಂತು ದೇವೇಂದ್ರಕರಸರೋಜಾಕರದೊಳ್ ಸಮುತ್ಫುಲ್ಲಮುಖಪದ್ಮಂಗಳಿಂ ಪದ್ಮಿನಿಗಳೆನಿಸಿ ಸುರೇಂದ್ರತಾರಹಾರಮುಕ್ತಾಫಳಪ್ರತಿಬಿಂಬಿತ ತನುಗಳಿಂ ವಿದ್ಯಾದೇವತೆಗಳೆನಿಸಿ ದಿವಿಜಸೌಂದರಿಯರ್ ಗೊಂದಣಂ ಮಾಡುವಲ್ಲಿ ಕಡೆಗಣ್ಣೊಳ್ ತುಳುಂಕಿಯುಂ ಕದಪಿನೊಳ್ ಪೊಂಪುಳಿಯಾಗಿಯುಂ ಭ್ರೂವಿಭ್ರಮದೊಳ್ ಪೊನಲ್ವರಿದುಂ ಅರುಣಾಧರದೊಳ್ ಕೊಳಂಗೊಂಡುಂ ದರಹಸಿತದೊಳ್ ಬಳ್ಳಂಗೆಡೆದುಂ ಅಂಗರಾಗದೊಳ್ ರಂಗಂಬಡೆದುಂ ಸಿರಿಸದಾಮಕೋಮಲೆಯರ ಭುಜಲತೆಗಳೊಳ್ ಪಸರಿಸಿಯುಂ ಘನಸ್ತನಂಗಳೊಳೆಡಪಿಯುಂ ಗಂಭೀರನಾಭಿಯೊಳ್ ಸುಟಿಗೊಂಡುಂ ನಿತಂಬದೊಳ್ ತುಱುಂಬಿಯುಂ ಮೃದುಪದದೊಳಂದಬಡೆದುಂ ಆಕೆಗಳಂಗೋಪಾಂಗದೊಳಿಂತು ನಾಟ್ಯರಸಮೆ ತೀವಿ ತುಳುಂಕುಗುಟ್ಟ ದಿವಿಜಸಾಮಾನಿಕಜನಕ್ಕಂ ನಾಭಿರಾಜಾದಿ ಮನುಜಸಭೆಗಂ ಅತ್ಯಾಶ್ಚರ್ಯಮಂ ಮಾಡಿದಾಗಳ್,

ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯ ನರ್ತಕಂ
ಸುರರಾಜಂ ಸಭೆ ದೇವಮರ್ತ್ಯಸಭೆ ಸಂದಾರಾಧ್ಯನೀಶಂ ಜಗ
ದ್ಗುರು ತನ್ನೃತ್ಯಫಲಂ ತ್ರಿವರ್ಗವಿಭವಂ ತಾನೆಂದೊಡೇಮಾತೊ ಸಾ
ಸಿರಮುಂ ನಾಲಗೆಯುಳ್ಳ ವಾಸುಕಿಯುಮಿನ್ನೇನೆಂದದಂ ಬಣ್ಣಿಪಂ ೧೨೭

ವ|| ಅಂತು ಪುರಂದರನಾನಂದನೃತ್ಯಾವಸಾನದೊಳೀ ಪರಮೇಶ್ವರಂ ಧರ್ಮಾಮೃತವರ್ಷದಿಂ ಭವ್ಯಸಸ್ಯಸಮೃದ್ಧಿಯಂ ಮಾಡುವುದಱಿಂ ವೃಷಮೆಂಬುದು ಧರ್ಮಮದಱಿಂದೊಪ್ಪುವುದಱಿಂದಂ ಸ್ವರ್ಗಾವತರಣಸಮಯದೊಳ್ ನಿಜಜನನೀವದನವನಜಮಂ ಸ್ವಪ್ನದೊಳ್ ಧವಳವೃಷಭಾಕಾರದಿಂ

ತಾಂಡವಲಾಸ್ಯಗಳ ಚೆಲ್ವನ್ನು ಸೂತ್ರಧಾರನ ಪರಿಯಿಂದ ಏಕಕಾಲದಲ್ಲಿ ತೋರಿಸಿದನು. ವ|| ಹೀಗೆ ದೇವೇಂದ್ರನ ಕೈಗಳೆಂಬ ಕಮಲಾಕರದಲ್ಲಿ ಅರಳಿದ ಮೊಗದಾವರೆಗಳಿಂದ ತಾವರೆಬಳ್ಳಿಗಳಾಗಿಯೂ ದೇವೇಂದ್ರನ ತಾರಹಾರಗಳಲ್ಲಿನ ಮುತ್ತುಗಳಲ್ಲಿ ಪ್ರತಿಬಿಂಬಿತವಾದ ದೇಹಗಳಿಂದ ವಿದ್ಯಾದೇವತೆಗಳಾಗಿಯೂ ತೋರಿಕೊಂಡ ದೇವಪ್ರಿಯರು ಮೇಳನೃತ್ಯವನ್ನು ಮಾಡಿದರು. ನಾಟ್ಯರಸವು ಆಗ ಅವರ ಕಡೆಗಣ್ಣುಗಳಲ್ಲಿ ತುಳುಕಿ, ಕೆನ್ನೆಗಳಲ್ಲಿ ರೋಮಾಂಚಗೊಂಡು, ಭ್ರೂವಿಭ್ರಮಗಳಲ್ಲಿ ಹೊನಲಾಗಿ ಹರಿದು, ಕೆಂದುಟಿಗಳಲ್ಲಿ ಆಳವಾಗಿ ನಿಂತು, ನಸುನಗೆಯಲ್ಲಿ ಬಿಳುಪಾಗಿ, ಅಂಗರಾಗದಲ್ಲಿ ರಾಗವಡೆದು, ಬಾಗೆಹೂವಿನಂತೆ ಕೋಮಲವಾದ ಭುಜಲತೆಗಳಲ್ಲಿ ಹರಡಿಕೊಂಡು, ಸಾಂದ್ರವಾದ ಸ್ತನಗಳಲ್ಲೆಡಹಿ, ಗಂಭೀರವಾದ ನಾಭಿಗಳಲ್ಲಿ ಸುಳಿಯಾಗಿ, ನಿತಂಬದಲ್ಲಿ ನುಗ್ಗಿ, ಕೋಮಲವಾದ ಕಾಲುಗಳಲ್ಲಿ ಆಶ್ರಯವಡೆಯಿತು! ಅವರ ಅಂಗೋಪಾಂಗಗಳಲ್ಲಿ ಹೀಗೆ ನಾಟ್ಯರಸವೇ ತುಂಬಿತುಳುಕಾಡುವಂತೆ ನರ್ತಿಸಿ ದೇವಸಾಮಾನಿಕಜನರಿಗೂ ನಾಭಿರಾಜಾದಿ ಮನುಜಸಭೆಗೂ ಅತ್ಯಾಶ್ಚರ್ಯವನ್ನುಂಟುಮಾಡಿತು. ೧೨೭. ಭೂಮಿಯು ರಂಗಸ್ಥಳವಾಯಿತು. ಆಕಾಶವು ರಮ್ಯವಾದ ನಾಟ್ಯಾಲಯವಾಯಿತು. ನರ್ತಕನು ದೇವರಾಜನಾದನು. ದೇವಮಾನವರ ಸಭೆಯೇ ಸಭೆಯಾಯಿತು. ಜಗದ್ಗುರುವಾದ ಜಿನೇಶನು ನಾಟ್ಯಕ್ಕೆ ಆರಾಧ್ಯನಾದನು. ಆ ನೃತ್ಯದ ಫಲವು ತ್ರಿವರ್ಗವಿಭವವಾಯಿತು. ಅಂದಮೇಲೆ ಸಹಸ್ರ ನಾಲಗೆಗಳುಳ್ಳ ವಾಸುಕಿ ತಾನೆ ಆ ಸಭೆಯನ್ನು ಏನೆಂದು ವರ್ಣಿಸಿಯಾನು? ವ|| ಹೀಗೆ ಪುರಂದರನು ಆನಂದನೃತ್ಯದ ಕೊನೆಯಲ್ಲಿ ಪರಮೇಶ್ವರನು ಧರ್ಮವೆಂಬ ಅಮೃತದ ವರ್ಷದಿಂದ ಭವ್ಯರೆಂಬ ಸಸ್ಯಸಮೃದ್ಧಿಯನ್ನುಂಟು

ಪೊಕ್ಕುದಱಿಂದಂ ವೃಷಭಸ್ವಾಮಿಯೆಂದು ಪೆಸರನಿಟ್ಟು ಮಜ್ಜನಮಂಡನಕ್ರಿಯೆಗಳ್ಗೆ ದೇವಿಯರನೇ ದಾದಿಯರ್ಮಾಡಿ ಸಮವಯೋನುರೂಪವೇಷದ ಸುರಕುಮಾರಕರನೊಡನಾಡಿಗಳ್ಮಾಡಿ ದೇವಸಮಾಜಂ ಬೆರಸು,

ಕ್ರಮದಿಂ ಜನ್ಮಾಭಿಷೇಕೋತ್ಸವಮನಮರಶೈಲಾಗ್ರದೊಳ್ ಮಾಡಿ ಲೋಕೋ
ತ್ತಮನಂ ಕೊಂಡೊಯ್ದಯೋಧ್ಯಾಪುರದೊಳೊಸಗೆಯಂ ಮಾಡಿ ಜನ್ಮೋತ್ಸವಪ್ರ
ಕ್ರಮಮೆಂದಾನಂದನೃತ್ಯಪ್ರಮದಮನಧಿಕಂ ಮಾಡಿ ತನ್ನಿಂದ್ರಲೋಕ
ಕ್ಕಮರೇಂದ್ರಂ ಪೋದನಾಗಳ್ ಸುಕವಿಜನಮನೋಮಾನಸೋತ್ತಂಸಹಂಸಂ ೧೨೮

ವ|| ಅನ್ನೆಗಮಿತ್ತಲ್,

ಕಿವಿಗಿಂಪಂ ತೊದಳೊಳ್ ಪೊದಟ್ದ ನುಡಿಗಳ್ ಕಣ್ಗಲ್ಪಿಱಿಂ ರಾಗದಾ
ಡುವ ಕೂಸಾಟದ ಚೆಲ್ವುಗಳ್ ಕುಡೆ ಪಿತೃದ್ವಂದ್ವಕ್ಕೆ ನಿಚ್ಚಂ ಮನೂ
ದ್ಭವನುಂ ಬಂಧುಜನಕ್ಕೆ ಮುಗ್ಧಮುಖಚಂದ್ರಾಲೋಕಮಾಲೋಕನೋ
ತ್ಸವಮಂ ಪೆರ್ಚಿಸೆ ಜಾಣನಿಂತೊದವಿದಂ ಸಂಸಾರಸಾರೋದಯಂ ೧೨೯

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರವಾಕ್ಚಂದ್ರಿಕಾ
ಪ್ರಸರಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಮಹೇಂದ್ರಾನಂದನೃತ್ಯಂ
ಸಪ್ತಮಾಶ್ವಾಸಂ

ಮಾಡುವುದರಿಂದ ವೃಷದಿಂದ (ಧರ್ಮದಿಂದ) ಒಪ್ಪುವನಾದ್ದರಿಂದಲೂ ಸ್ವರ್ಗಾವತರಣ ಕಾಲದಲ್ಲಿ ತನ್ನ ತಾಯಿಯ ಮುಖಕಮಲವನ್ನು ಸ್ವಪ್ನದಲ್ಲಿ ಬಿಳಿಯ ವೃಷಭದ ಆಕಾರದಿಂದ ಹೊಕ್ಕನಾದ್ದರಿಂದಲೂ ಆತನಿಗೆ ವೃಷಭಸ್ವಾಮಿ ಎಂದು ಹೆಸರನ್ನಿಟ್ಟನು. ಸ್ನಾನ-ಅಲಂಕಾರ-ಸ್ತನ್ಯಪಾನಾದಿ ಕಾರ್ಯಗಳಿಗೆ ದೇವಿಯರನ್ನೇ ದಾದಿಯರನ್ನಾಗಿಯೂ ಸಮವಯೋವೇಷ ಯುಕ್ತರಾದ ಸುರಕುಮಾರರನ್ನು ಒಡನಾಡಿಗಳನ್ನಾಗಿಯೂ ದೇವಸಮಾಜದೊಡನೆ ಕೂಡಿ ಗೊತ್ತುಮಾಡಿದನು. ೧೨೮. ಹೀಗೆ ಅಮರೇಂದ್ರನು ಜನ್ಮಾಭಿಷೇಕೋತ್ಸವವನ್ನು ಮೇರುಪರ್ವತಾಗ್ರದಲ್ಲಿ ನಿರ್ವಹಿಸಿದನು. ಬಳಿಕ ಆ ಲೋಕೋತ್ತಮನನ್ನು (ಜಿನನನ್ನು) ಅಯೋಧ್ಯೆಗೆ ಕೊಂಡೊಯ್ದು ಅಲ್ಲಿ ಜನ್ಮೋತ್ಸವದೊಸಗೆಯನ್ನು ನಿರ್ವರ್ತಿಸಿದನು. ಸ್ವಾಮಿಯ ಆ ಜನ್ಮೋತ್ಸವದ ಸಂತೋಷಾತಿಶಯಕ್ಕಾಗಿಯೇ ಆನಂದನೃತ್ಯವನ್ನು ಕೈಕೊಂಡನು. ಬಳಿಕ ತನ್ನ ಇಂದ್ರಲೋಕಕ್ಕೆ ಸುಕವಿಜನ ಮಾನಸೋತ್ತಂಸಹಂಸನಾದ ಇಂದ್ರನು ಪ್ರಯಾಣ ಬೆಳಸಿದನು. ವ|| ಆಗ ಇತ್ತಕಡೆ, ೧೨೯. ತೊದಳಿನಿಂದ ಕೂಡಿದ (ಮಗುವಿನ) ಮಾತುಗಳು ಕಿವಿಗಿಂಪನ್ನೂ ಪ್ರೀತಿಯಿಂದ ಆಡುವ ಬಾಲ್ಯದ ಚೆಲ್ವುಗಳು ತಾಯಿ ತಂದೆಗಳ ಕಣ್ಣುಗಳಿಗೆ ಹಬ್ಬವನ್ನೂ ತರುತ್ತಿದ್ದುವು. ಭುವನವಂದಿತನೂ ಮುಗ್ಧಮುಖಚಂದ್ರಕಾಂತಿಯುಳ್ಳವನೂ, ಸಂಸಾರಸಾರೋದಯನೂ ಆದ ಆ ಬಾಲಕನು ಬಂಧುಜನರಿಗೆ ದರ್ಶನೋತ್ಸವವನ್ನು ಹೆಚ್ಚಿಸುತ್ತಾ ಬೆಳೆದನು.

ಏಳನೆಯ ಆಶ್ವಾಸ ಮುಗಿಯಿತು.

# ಅಷ್ಟಮಾಶ್ವಾಸಂ

ಶ್ರೀಪತಿ ಸುರದಾರಕರೊಡ
ನಾಪ್ಪೊತ್ತುಂ ನೆಱೆದು ರತ್ನಧೂಳೀಪಟಲ
ವ್ಯಾಪಿತತನು ಮೃದುಮುಗ್ಧಾ
ಳಾಪಂ ಬಳೆದಂ ಸರಸ್ವತೀಮಣಿಹಾರಂ ೧

ಕನಕಮಣಿಕಿಂಕಿಣೀಮೃದು
ನಿನದಂ ಕಟಿತಟದೊಳೆಸೆಯೆ ದಾದಿಯರೊಡವಂ
ದಿನಿಸಂ ನಡೆಯಿಸೆ ಲಲಿತೇಂ
ದ್ರನೀಲಮಣಿಭೂಮಿಯೊಳ್ ತಳರ್ನಡೆನಡೆದಂ ೨

ಸರಸಿಜದಿಂ ಮಕರಂದ
ಸ್ಫುರಿತಂ ಪುದಿದೊದವಿದಪ್ಪುದೆಂಬಿನಮುದ್ಯ
ತ್ಪರಿಮಳಮುಖಸರಸಿಜದೊಳ್
ದರಹಸಿತಂ ನೆಗಟ್ಟಿನಂ ತೊದಳ್ನುಡಿನುಡಿದಂ ೩

ವ|| ಅಂತು ಬಾಲ್ಯಕಾಲಮಂ ಬಾಳಕೇಳೀಲೀಲೆಯಿಂ ಕಳಿಪಿ ಕುಮಾರಕಾಲದೊಳ್ ಸುಕುಮಾರ ಪರಿವೃತಂ ಸಹೋತ್ಪನ್ನಮತಿಶ್ರುತಾವಧಿಬೋಧನಪ್ಪುದಱಿಂ ವಿಶ್ವವಿದ್ಯೇಶ್ವರನುಂ ಅವಗತಾನೇಕಲೋಕ ವ್ಯಾಪಾರಕನುಂ ಜನ್ಮಾಂತರಾಭ್ಯಸ್ತಕಳಾಕುಶಲನುಂ ಪ್ರತ್ಯಕ್ಷೀಕೃತ ಸಕಲವಾಙ್ಮಯನಪ್ಪುದಱಿಂದಂ ಛಂದೋವಿದ್ಯಾಳಂಕಾರಪದವಿಚಾರಕಾವ್ಯಗೀತನೃತ್ಯಾತೋದ್ಯಾದಿ ಗೋಷ್ಠಿಗಳೊಳಂ ಶುಕಶಿಖಂಡಿಹಂಸ

೧. ಶ್ರೀಪತಿಯು (ವೃಷಭಸ್ವಾಮಿ) ದೇವಕುಮಾರರೊಡಗೂಡಿ ಯಾವಾಗಲೂ ರತ್ನಧೂಳಿಗಳಿಂದ ತುಂಬಿದ ದೇಹವುಳ್ಳವನಾದನು. ಮೃದುವೂ ಸುಂದರವೂ ಆದ ಮಾತುಗಳಿಂದ ಕೂಡಿ ಸರಸ್ವತೀಮಣಿಹಾರನಾಗಿ ಬೆಳೆದನು. ೨. ಚಿನ್ನದಿಂದಲೂ ಮಣಿಗಳಿಂದಲೂ ಯುಕ್ತವಾದ ಕಿರುಗೆಜ್ಜೆಗಳು ಅವನ ಸೊಂಟದಲ್ಲಿ ಮೃದುಮಧುರವಾಗಿ ದನಿಗೊಳ್ಳುವಂತೆ ದಾದಿಯರು ಮೆಲ್ಲನೆ ನಡೆಯಿಸಲು, ಅವನು ಇಂದ್ರನೀಲ ಮಣಿಮಯವಾದ ಭೂಮಿಯ ಮೇಲೆ ತಪ್ಪುತಪ್ಪಾಗಿ ಹೆಜ್ಜೆಗಳನ್ನಿಟ್ಟು ನಡೆದನು. ೩. ಕಮಲದಿಂದ ಬಂಡು ಮಿಡಿಯುವುದೋ ಎಂಬಂತೆ ಪರಿಮಳಯುಕ್ತವಾದ ಕಮಲದಂತಿರುವ ಮುಖದಿಂದ ನಗೆಯು ಚಿಮ್ಮಿತೋ ಎನ್ನುವಂತೆ ತೊದಳ್ನುಡಿ ನುಡಿದನು. ವ|| ಹಾಗೆ ಬಾಲ್ಯವನ್ನು ಬಾಲಕ್ರೀಡೆಯಲ್ಲಿ ಕಳೆದನು. ಕುಮಾರಾವಸ್ಥೆಯಲ್ಲಿ ಅನೇಕ ಸುಕುಮಾರರಿಂದ ಕೂಡಿ, ಸಹಜವಾಗಿ ಜೊತೆಗೆ ಹುಟ್ಟಿದ ಮತಿ, ಶ್ರುತ ಮತ್ತು ಅವಧಿಜ್ಞಾನಗಳಿಂದ ಸಮಸ್ತ ವಿದ್ಯೆಗಳಿಗೂ ಅಧಿಪತಿಯಾಗಿ, ಅನೇಕ ಲೋಕವ್ಯಾಪಾರ ಗಳನ್ನರಿತನು. ಜನ್ಮಾಂತರಗಳಲ್ಲಿ ಕಲಿತ ಕಲಾಕೌಶಲ್ಯವುಳ್ಳವನಾಗಿ ಎಲ್ಲ ವಾಙ್ಮಯಗಳನ್ನೂ ಪ್ರತ್ಯಕ್ಷ ಮಾಡಿಕೊಂಡು ಛಂದಸ್ಸು, ಅಲಂಕಾರ, ವ್ಯಾಕರಣ, ನ್ಯಾಯ, ಕಾವ್ಯ, ಗೀತ,

ಸಾರಸಕ್ರೌಂಚಕರಿಕಳಭಮಲ್ಲಾದ್ಯನೇಕಾಕಾರವಿಕೃತಾಮರಪರಿಪಠನನಟನ ಮೃದುಕೂಜಿತರಸಿತದರಹಸಿತ ಕ್ರೇಂಕಾರಾರೋಹಣಾಯೋಧನಾದಿ ನಾನಾವಿನೋದಂಗಳೊಳಮಮಾರಾಧಿಪಪ್ರಹಿತ ಪ್ರತಿದಿನಪ್ರವರ್ಧಮಾನ ಸುರತರುಪ್ರಸೂನಗ್ರಥಿತ ಸುರಭಿದಾಮದುಕೂಲಾಂಬರ ವಿಚಿತ್ರಭೂಷಣ ಸುರಭಿವಿಲೇಪನ ಪ್ರಮುಖಭೋಗೋಪಭೋಗಂಗಳೊಳಂ ಪ್ರತಿದಿನಪ್ರವರ್ಧಮಾನತನುವಯೋವಿಭವನನುಕ್ರಮದೊಳಿ ಬಳೆಯೆ,

ಕರಿಕಳಭಂ ಮದದ್ವಿರದಲಕ್ಷ್ಮಿಯೊಳೊಂದಿದವೊಲ್ ಕಿಶೋರಕೇ
ಸರಿ ಮೃಗರಾಜಲೀಲೆಯೊಳಳಂಕರಿಸಿರ್ದವೊಲೆಯ್ದೆ ಮುಗ್ಧಸೌಂ
ದರಸುರಭೂರುಹಂ ಕುಸುಮಶೋಭೆಯೊಳಗ್ಗಲಿಸಿರ್ದವೊಲ್ ಮನೋ
ಹರಮೆನಿಸಿತ್ತು ಯೌವನವನೋದಯಮಿಂದ್ರನರೇಂದ್ರವಂದ್ಯನಾ ೪

ವII ಅಂತು ನಿಸ್ವೇದ ನಿರ್ಮಲಕ್ಷೀರಗೌರಕ್ಷತಜ ಸಮಚತುರಸ್ರಸಂಸ್ಥಾನ ವಜ್ರವೃಷಭನಾರಾಚ ಸಂಹನನನುಂ, ಸುರೂಪಸುರಭಿ ಸ್ವಸ್ತಿಕನಂದ್ಯಾವರ್ತಾದ್ಯಷ್ಟೋತ್ತರಶತಲಕ್ಷಣಲಕ್ಷಿತ ತಿಲಕಮಸೂರಿಕಾ ಪ್ರಭೃತಿ ನವಶತವ್ಯಂಜನರಂಜಿತತಪ್ತತಪನೀಯನಿಕಾಶವರ್ಣಸಂಪೂರ್ಣಶರೀರನುಂ, ಅಪಾರವೀರ್ಯನುಂ, ಶಸ್ತ್ರಪಾಷಾಣಾತಪವರ್ಷವಿಷಾಗ್ನಿಕಾಷ್ಠಕಂಟಕತ್ರಿದೋಷಸಂಭವಾಮಯ ಜರಾದಿ ಬಾಧಾವಿದೂರನುಂ,

ನೃತ್ಯ, ವಾದ್ಯ ಮೊದಲಾದ ಅರುವತ್ನಾಲ್ಕು ಕಲೆಗಳಲ್ಲಿಯೂ, ಗಿಳಿ, ನವಿಲು, ಹಂಸ, ಸಾರಸ, ಕ್ರೌಂಚ, ಆನೆಮರಿ, ಜಟ್ಟಿ ಮುಂತಾದ ಅನೇಕ ಆಕೃತಿಗಳಿಂದ ವೇಷಾಂತರಿತರಾಗಿ ದೇವಕುಮಾರರು ಕ್ರಮವಾಗಿ ಮಾಡುವ ಓದು, ಕುಣಿತ, ಮೃದುವಾದ ಕೂಗಾಟ, ಮಧುರಶಬ್ದ, ಕ್ರೇಂಕಾರ, ಗಜಾರೋಹಣ, ಯುದ್ಧಮಾಡುವುದೇ ಮುಂತಾದ ಹಲವು ಬಗೆಯ ವಿನೋದಗಳಲ್ಲಿಯೂ, ದೇವೇಂದ್ರನಿಂದ ಕಳುಹಿಸಲಾದ ಸುಗಂಧಪೂರ್ಣ ಕಲ್ಪಪುಷ್ಪಗಳ ಹಾರ, ರೇಷ್ಮೆವಸ್ತ್ರ, ವಿವಿಧಾಭರಣ, ಸುಗಂಧಲೇಪನಗಳೇ ಮೊದಲಾದ ಭೋಗೋಪಭೋಗಗಳಲ್ಲಿ ದಿನದಿನವೂ ಬೆಳೆಯುತ್ತಿರುವ ದೇಹವಯಸ್ಸಂಪತ್ತುಗಳಿಂದ ಕೂಡಿ ಆ ಕುಮಾರನು ಬಳೆಯುತ್ತಿದ್ದನು. ೪. ಆನೆಯ ಮರಿಯು ಮದ್ದಾನೆಯ ಕಾಂತಿಯಿಂದ ಕೂಡಿದಂತೆಯೂ, ಸಿಂಹದ ಮರಿಯು ಮೃಗರಾಜಲೀಲೆಯಿಂದ ಅಲಂಕೃತವಾದಂತೆಯೂ, ಮುಗ್ಧವೂ, ಸೌಂದರ್ಯಯುಕ್ತವೂ ಆದ ಕಲ್ಪವೃಕ್ಷವು ಕುಸುಮಶೋಭೆಯಿಂದ ಅಗ್ಗಳಿಸಿದಂತೆಯೂ ಇಂದ್ರನರೇಂದ್ರರಿಂದ ವಂದ್ಯನಾದ ಆ ರಾಜಕುಮಾರನ ಯೌವನವನೋದಯವು ಮನೋಹರವಾಯಿತು. ವII ಅಂತು ನಿಸ್ವೇದನಾಗಿಯೂ, ನಿರ್ಮಲನಾಗಿಯೂ, ಕ್ಷೀರಗೌರಕ್ಷತಜ[1]ನಾಗಿಯೂ, ಸಮಚತುರಸ್ರಸಂಸ್ಥಾನ[2]ನಾಗಿಯೂ, ವಜ್ರವೃಷಭನಾರಾಚಸಂಹನನ[3]ನಾಗಿಯೂ, ಸುರೂಪನಾಗಿಯೂ, ಸುರಭಿಯಾಗಿಯೂ,

---

1 ಕ್ಷೀರಗೌರಕ್ಷತಜ = ಹಾಲಿನಂತೆ ಬಿಳುಪಾದ ರಕ್ತವುಳ್ಳವನು.

2 ಸಮಚತುರಸ್ರಸಂಸ್ಥಾನ = ಮೇಲೆ, ಕೆಳಗೆ, ಮಗ್ಗಲುಗಳಲ್ಲಿ ದೇಹದ ಆಕಾರವು ಸಮನಾಗಿರುವುದು.

3. ವಜ್ರವೃಷಭನಾರಾಚಸಂಹನನ = ವಜ್ರಕ್ಕೆ ಸಮಾನವಾದ ಅಸ್ಥಿಪಂಜರವು ನಿರ್ಮಾಣವಾಗಿದ್ದು ವಜ್ರಸಮಾನವಾದ ಕೀಲುಗಳಿಂದ ಕೀಲಿತವಾದ ದೇಹ.

ಮೃದುಮಧುರಗಂಭೀರೋದಾರಪ್ರಿಯಹಿತವಚನನುಂ, ಚತುರುತ್ತರಾಶೀತಿಪೂರ್ವಲಕ್ಷೋಪಲಕ್ಷಿತಾನಪವರ್ತ್ಯಾಯುಷ್ಯನುಮಾಗಿ-

ಪರಮೌದಾರಿಕದಿವ್ಯಮೂರ್ತಿ ವಸನಾಳಂ ಸಾರಮಂದಾರಶೇ
ಖರರಮ್ಯಂ ಧೃತಯೌವನಂ ಮರುಳಿಸಲ್ವಾನಾರ್ತುಮತ್ಯಂತಸೌಂ
ದರಕಾಂತಾಜನಮಂ ಮರುಳ್ವದಣಮಿಲ್ಲಂತಾಕೆಗಳ್ಗೀನದ
ಚ್ಚರಿಯೋ ಚಿತ್ರದ ರೂಪು ರೂಪವಿಭವಂ ಮುಕ್ತ್ಯಂಗನಾಕಾಂತನಾ ೫

ಅನಿವಿರಿದೊಂದು ಯೌವನಮದಕ್ಕೆಡೆಯಾಗಿಯುಮಂದು ರಾಗಸಂ
ಜನನಮನೆಯ್ದೆ ತಾಳ್ದಿದದನಶ್ವರಕೀರ್ತಿಯೊಳಂ ಸರಸ್ವತೀ
ವನಿತೆಯೊಳಂ ವಿಚಾರಿಸೆ ತಟದ್ದ್ಯುತಿಚಂಚಲೆಯೆಂಬುದೊಂದು ಭಾ
ವನೆಯೊಳೆ ರಾಜ್ಯಲಕ್ಷ್ಮಿಯೊಳನಾದರಮಾಯ್ತು ಮನಂ ಚಿದಾತ್ಮನಾ ೬

ವ|| ಅಂತು ಪರಮಾತಿಶಯರೂಪರಸಗಂಧಸ್ಪರ್ಶಗುಣವತ್ಪರಮಾಣುಪರಿವೃತಮೂರ್ತಿಯಪ್ಪ ಪರಮನ ಪರಿಪೂರ್ಣಯೌವನಶ್ರೀಯಂ ನಾಭಿರಾಜಂ ನೋಡಿ,

ಸ್ವಸ್ತಿಕ, ನಂದ್ಯಾವರ್ತ್ಯಾದಿ ನೂರೆಂಟು ಲಕ್ಷಣಗಳಿಂದ ಕೂಡಿದವನಾಗಿಯೂ, ತಿಲ, ಮಸೂರಿಕಾದಿ ಒಂಬೈನೂರು ವ್ಯಂಜನರಂಜಿತನಾಗಿಯೂ, ಚಿನ್ನದ ಬಣ್ಣಕ್ಕೆ ಸಮನಾದ ಬಣ್ಣದಿಂದ ಪೂರ್ಣವಾದ ಶರೀರವುಳ್ಳವನೂ, ಅಪಾರವಾದ ವೀರ್ಯವುಳ್ಳವನೂ, ಶಸ್ತ್ರ, ಕಲ್ಲು, ಬಿಸಿಲು, ಮಳೆ, ಅಗ್ನಿ, ಕಂಟಕ, ತ್ರಿದೋಷಗಳಿಂದೊಗೆದ ರೋಗ ಮುಪ್ಪುಗಳೇ ಮೊದಲಾದ ಬಾಧೆಗಳಿಗೆ ದೂರವಾದವನೂ, ಮೃದುವೂ, ಮಧುರವೂ, ಗಂಭೀರವೂ, ಉದಾರವೂ, ಪ್ರಿಯವೂ, ಹಿತವೂ ಆದ ವಚನವುಳ್ಳವನೂ ಎಂಬತ್ನಾಲ್ಕು ಪೂರ್ವಲಕ್ಷೋಪಲಕ್ಷಿತಾನಪವರ್ತ್ಯಾಯುಷ್ಯನೂ ಆಗಿ (ಅನಪವರ್ತ್ಯ = ಶಸ್ತ್ರಹತಿ ಮುಂತಾದ ಕಾರಣಾಂತರದಿಂದ ಕುಗ್ಗದ) ೫. ವೃಷಭನಾಥನು ಪರಮೌದಾರಿಕವೂ[1] ದಿವ್ಯವೂ ಆದ ದೇಹವುಳ್ಳವನು. ಅವನು ವಸ್ತ್ರಾಲಂಕಾರಗಳಿಂದಲೂ, ಮಂದಾರ ಪುಷ್ಪದ ಶೇಖರಗಳಿಂದಲೂ ರಮ್ಯನಾದವನು. ತಾರುಣ್ಯವಿಭೂಷಿತನು. ಅತ್ಯುತ್ತಮರಾದ ಸುಂದರ ಕಾಂತಾಜನರನ್ನು ಮರುಳುಗೊಳಿಸುವಷ್ಟು ಸೌಂದರ್ಯವಿಭೂಷಿತನಾಗಿದ್ದರೂ ತಾನು ಮರುಳುಗೊಳ್ಳದವನು. ಹೀಗೆ ಮುಕ್ತ್ಯಂಗನಾಕಾಂತನಾದ ಅವನ ರೂಪವು ಚಿತ್ರದಲ್ಲಿ ಬರೆದ ರೂಪದಂತಿತ್ತು. ೬. ಅಷ್ಟೊಂದು ಯೌವನಮದಕ್ಕೆ ತುತ್ತಾಗಿದ್ದರೂ ಅವನ ಮನಸ್ಸು ಶಾಶ್ವತವಾದ ಕೀರ್ತಿಯ ಮೇಲೂ ಸರಸ್ವತಿಯ ಮೇಲೂ ಹೆಚ್ಚಿನ ಅನುರಾಗವನ್ನು ತಳೆಯಿತು. ಮಿಂಚಿನ ಕಾಂತಿಯಂತೆ ಬಹು ಚಂಚಲೆಯೆಂಬೊಂದು ಭಾವನೆಯಿಂದ ಆ ಚಿದಾತ್ಮನಿಗೆ ರಾಜ್ಯಲಕ್ಷ್ಮಿಯು ಮೇಲೆ ಅನಾದರವು ಮೂಡಿತು. ವ|| ಹೀಗೆ ಪರಮಾತಿಶಯವಾದ ರೂಪ, ರಸ, ಗಂಧ, ಸ್ಪರ್ಶಗುಣಗಳುಳ್ಳ ಪರಮಾಣುಗಳಿಂದ

1. ಅಭ್ಯುದಯಸುಖಕ್ಕೂ ಮೋಕ್ಷಸುಖಕ್ಕೂ ಮೂಲಕಾರಣವಾದ ದೇಹ.

ವನಿತಾಚಿತ್ತವಿಕಾರಕಾರಿ ನೆಱೆದತ್ತೀಗಳ್ ಕುಮಾರಂಗೆ ಯೌ
ವನಮೀತಂಗೆ ವಿವಾಹಮಂಗಳಮನಾಂ ಮಾಡಲ್ಕೆವೇಟ್ಕುಂ ತಪೋ
ವನಮಂ ಗಂಧಗಜಂ ವನಂಬುಗುವವೋಲ್ ಪೊಕ್ಕಾಗಳೇಗೆಯ್ವುದೀ
ತನ ಚಿತ್ತಕ್ಕಮನಂಗರಾಗರಸಮಂ ಮಾಳ್ಪಂದಮಿನ್ನಾವುದೋ ೭

ಕುಲರೂಪವಿಭವಯೌವನ
ವಿಳಾಸವತಿ ಪೇಟೆಮಾವಳಿನ್ನೀತನನಾ
ಳ್ವಳೊ ಚಿತ್ತಸರೋವರದೊಳ್
ಕಳಹಂಸೆವೊಲಗಲದಟ್ಕಱಿಂ ರಮಿಯಿಸುವಳ್ ೮

ವ॥ ಎಂದು ತನ್ನ ಮನದೊಳ್ ಬಗೆದು ಸಕಳವಿಷ್ಟಪಪ್ರಣೂತನನೀತನನನಂತದೊಳನಂತರ ಪರಮಾನಂದದದೊಳ್ ಮುಕ್ತಿಸಾಮ್ರಾಜ್ಯದೊಳತಿಪ್ರಾಜ್ಯ[ನಂ][೧]ಜನಿತನಿಸ್ಪೃಹನನ್ [ಅನವರತ] ಕಲ್ಯಾಣಪರಿಮಿತದೊಳ್ ನಿರಂತರ ತಂತ್ರಾವಾಪಚಿಂತಾಂತರಾಯಪ್ರಾಯಸುಖಲವದೋಳೀ ಮಹೀತಳ ರಾಜ್ಯದೊಳ್ ನಿಱಿಸುವುದುಂ ಮದುವೆನಿಱಿಸುವುದುಂ ಎನಗಶಕ್ಯಾನುಷ್ಠಾನಮಾದೊಡಂ, ಎನ್ನ ಬಗೆದ ಬಗೆಯನೊಡಂಬಡುಗುಮೊಡಂಬಡನೆಂಬ ಸಂಭ್ರಮದೊಳ್ ಆಸ್ಥಾನಮಂಡಪಮಂಡನೀಭೂತಮಣಿ ಮಯಾಸನಪ್ರಾಚ್ಯಾಚಳಶಿಖರರತ್ನಮಾಗಿರ್ದ ಕುಮಾರನಂ ಸಾರೆವಂದು ಯಥೋಚಿತ ಹೇಮಾಸನದೊಳ್ ಕುಳ್ಳಿರ್ದು ನಾಭಿರಾಜಂ,

ಸೃಷ್ಟಿಗೊಂಡ ಶರೀರವುಳ್ಳ ಆ ಪರಮನ ಪೂರ್ಣಯೌವನದ ಕಾಂತಿಯನ್ನು ನಾಭಿರಾಜನು ಕಂಡು ಹೀಗೆ ಆಲೋಚಿಸಿದನು. ೭. "ವನಿತೆಯರ ಮನಸ್ಸನ್ನು ವಿಕಾರಗೊಳಿಸುವ ಯೌವನವು ಈ ಕುಮಾರನಲ್ಲಿ ಬಂದು ಸೇರಿದೆ. ಇವನಿಗೆ ವಿವಾಹಮಂಗಳವನ್ನು ನೆರವೇರಿಸಬೇಕು. ಗಂಧಗಜವು ವನವನ್ನು ಪ್ರವೇಶಿಸುವಂತೆ ಇವನು ತಪೋವನವನ್ನು ಪ್ರವೇಶಿಸಿದರೆ ಏನು ಮಾಡುವುದು? ಈತನ ಮನಸ್ಸಿಗೆ ಅನಂಗರಾಗರಸದಲ್ಲಿ-ಸ್ರಕ್-ಚಂದನ-ವನಿತಾದಿ ವಸ್ತುಗಳ ಮೇಲೆ ಆಸೆ ಹುಟ್ಟಿಸುವ ಮಾರ್ಗವಾವುದೋ! ೮. ಕುಲ, ರೂಪ, ಐಶ್ವರ್ಯ, ಯೌವನ ಮತ್ತು ವಿಲಾಸಗಳಿಂದ ಮೆರೆಯುವ ಯಾವ ತರುಣಿ ಇವನನ್ನು ಆಳುವಳೋ! ಇವನ ಮನಸ್ಸೆಂಬ ಕೊಳದಲ್ಲಿ ಕಲಹಂಸಿಯಂತೆ ಯಾವಳು ಶಾಶ್ವತವಾದ ಪ್ರೀತಿಯಿಂದ ರಮಿಸುವಳೋ!" ಎಂದು ತನ್ನ ಮನಸ್ಸಿನಲ್ಲಿ ಆಲೋಚಿಸಿದನು. ವ॥ "ಸಮಸ್ತ ಲೋಕದ ಸ್ತುತಿಗೆ ಪಾತ್ರನೂ ಅನಂತವೂ ನಿರಂತರ ಪರಮಾನಂದವುಳ್ಳುದೂ ಆದ ಮುಕ್ತಿಸಾಮ್ರಾಜ್ಯದಲ್ಲಿ ಅತ್ಯುನ್ನತನೂ ಸ್ಪೃಹಾರಹಿತನೂ ಆದ ಕುಮಾರನನ್ನು ಕೀಳ್ಮಟ್ಟದ ಕಲ್ಯಾಣದಿಂದ ಪರಿಮಿತವೂ ಒಳಾಡಳಿತ (ತಂತ್ರ) ವಿದೇಶಾಂಗವ್ಯವಹಾರ (ಆವಾಪ)ಗಳ ಚಿಂತೆಗಳೆಂಬ ವಿಘ್ನಬಾಹುಲ್ಯದಿಂದ ಕೂಡಿ ಅತ್ಯಲ್ಪ ಸುಖವುಳ್ಳುದೂ ಆದ ಮಹೀರಾಜ್ಯದಲ್ಲಿ ಸ್ಥಾಪಿಸಲಿಕ್ಕೂ ಮದುವೆಗೆ ಒಪ್ಪಿಸಲಿಕ್ಕೂ ನನಗೆ ಸಾಧ್ಯವಿಲ್ಲ. ಆದರೂ ನನ್ನ ಆಲೋಚನೆಯ ಪರಿಗೆ ಇವನು ಒಪ್ಪಬಹುದು-ಒಪ್ಪದಿರಬಹುದು" ಎಂಬ ಮನಸ್ಸಿನ ತಾಕಲಾಟದಿಂದ

---

೧ ಸಂ (ಅನ್ಯತ್ರ)

ಉದಯಾಚಳಕ್ಕೆ ಪೆಸರಿನ
ನುದಯದಿನಾದಂತಿರೆಮಗೆ ಗುರುಗಂ ಗುರುವೆಂ
ದೊದವಿದ ಪೆಂಪಿದು ನಿನ್ನೊಂ
ದುದಯದಿನಾಯ್ತಮರಮೌಳಿಲಾಲಿತಚರಣಾ ೯

ತುಂಗಭವದ್ಬೋಧದ ಬೆಳ
ಗಿಂಗೊಳಗಪ್ಪನಿತನೆನ್ನ ಬಗೆ ಪುಗದು ತಮಂ
ಪಿಂಗೆ ದಿನಪತಿಯ ಬೆಳಪ ನ
ಭೋಂಗಣಮಂ ಜ್ಯೋತಿರಿಂಗಣಂ ಬೆಳಗುಗುಮೇ ೧೦

ಇದು ದಲವಸ್ತುವೆನ್ನದೆ ಮದುಕ್ತಿಯನೊಯ್ಯನೆ ಕೇಳ್ದು ದಿವ್ಯಚಿ
ತ್ತದೊಳವಧಾರಿಸೆಂತೆನೆ ಜಗದ್ಗುರು ಲೋಕಹಿತಾರ್ಥದಿಂದೆ ಸ
ಲ್ವುದು ವಲಮಿಂತಿದಂ ಬಗೆದು ಪುತ್ರಕಳತ್ರಪರಿಗ್ರಹಕ್ಕೆ ಮಾ
ಣದೆ ಬಗೆದರ್ಪುದೊಲ್ಲೆನಿದನೆಂದೊಡೆ ಸೃಷ್ಟಿಯೆ ಕೆಟ್ಟು ಪೋಗದೇ ೧೧

ಮನುಮಾರ್ಗನಿಪುಣನೆನಿಸಿದ
ನಿನಗಾಮೀ ರಾಜಮಾರ್ಗಮಂ ತೋಱೆ ಜಗ
ಜ್ಜನಕೆ ನಗೆಯಲ್ತೆ ಕಳಭಂ
ವನಪಥಮಂ ಯೂಥಪತಿಗೆ ತೋರ್ಪಂತಕ್ಕುಂ ೧೨

ನಾಭಿರಾಜನು ಆಸ್ಥಾನಮಂಟಪಕ್ಕೆ ಅಲಂಕಾರಪ್ರಾಯವಾದ ಮಣಿಮಯಪೀಠವೆಂಬ ಪೂರ್ವಾಚಲ ಪರ್ವತಕ್ಕೆ ಶಿರೋರತ್ನವಾಗಿದ್ದ (ಮಣಿಮಯಪೀಠದಲ್ಲಿ ಕುಳಿತಿದ್ದ) ಕುಮಾರನನ್ನು ಸಮೀಪಿಸಿದನು. ಯಥೋಚಿತವಾದ ಸಿಂಹಾಸನದಲ್ಲಿ ಕುಳಿತು ನಾಭಿರಾಜನು ಹೀಗೆಂದನು: ೯. "ದೇವತೆಗಳ ಕಿರೀಟಗಳಿಂದ ಲಾಲಿತವಾದ ಕಾಲುಗಳುಳ್ಳವನೇ! ಸೂರ್ಯನ ಉದಯದಿಂದ ಉದಯಾಚಲಕ್ಕೆ ಉದಯಪರ್ವತವೆಂಬ ಕೀರ್ತಿ ಯುಂಟಾದಂತೆ, ನೀನು ಜನಿಸಿದ್ದರಿಂದ 'ಗುರುವಿಗೂ ಗುರು (ತಂದೆ)' ಎಂಬ ಹಿರಿಮೆ ನನಗೆ ಸಂದಿತು! ೧೦. ನಿನ್ನ ಶ್ರೇಷ್ಠವಾದ ಜ್ಞಾನದ ಬೆಳಗಿಗೆ ಒಳಗಾದುದೆಲ್ಲವನ್ನೂ ನಮ್ಮ ಮನಸ್ಸು ಗ್ರಹಿಸಲಾರದು. ಕತ್ತಲೆಯು ಕಳೆಯುವ ಹಾಗೆ ಸೂರ್ಯನು ನಭೋಂಗಣವನ್ನು ಬೆಳಗುವಂತೆ ಮಿಂಚಿನ ಹುಳವು ಬೆಳಗಬಲ್ಲುದೇ? ೧೧. ಇದನ್ನು ಅವಸ್ತು (ಜಳ್ಳೆಂದು) ವೆನ್ನದೆ ನನ್ನ ಮಾತನ್ನು ನೆಟ್ಟನೆ ನಿನ್ನ ಶ್ರೇಷ್ಠವಾದ ಚಿತ್ತದಲ್ಲಿ ಲಕ್ಷ್ಯವಿಡು. ಜಗದ್ಗುರೋ! ಇವೆಲ್ಲವೂ ಲೋಕಹಿತಾರ್ಥವಾಗಿಯೇ ಸಲ್ಲುವುವು ಎಂದು ತಿಳಿದು ಪುತ್ರ-ಕಲತ್ರ ಪರಿಗ್ರಹಕ್ಕಾಗಿ ತಪ್ಪದೆ ಮನ ಕೊಡು. ನೀನು ಒಲ್ಲೆಯೆಂದರೆ ಸೃಷ್ಟಿಯೇ ಕೆಟ್ಟುಹೋಗುವುದು. ೧೨. ಮನುಮಾರ್ಗನಿಪುಣನಾದ ನಿನಗೆ ನನ್ನೀ ರಾಜಮಾರ್ಗಪ್ರದರ್ಶನವು, ಆನೆಮರಿಯು ವನಮಾರ್ಗವನ್ನು ಯೂಥಪತಿಗೆ (ಸಲಗ) ತೋರಿಸಿದಂತೆ. ಇದರಿದ ನನಗೆ ಜನಹಾಸ್ಯವು

ಶಾಂತಾತ್ಮ ಮದುವೆನಿಲ್ ನೀ
ನಿಂತೆನ್ನ ಗೃಹಸ್ಥಧರ್ಮದಿಂದಂ ನೀನೆಂ
ತಂತೆ ಸಲೆ ನೆಗಳೆ ಜಗತೀ
ಸಂತತಿ ನಿಲೆ ನಿನ್ನ ಧರ್ಮಸಂತತಿ ನಿಲ್ಕುಂ ೧೩

ಸುತನೆಂಬ ಮೋಳದಿಂ ನಿನ
ಗತರ್ಕ್ಯಬೋಧಂಗೆ ಯುಕ್ತಿಯಂ ತೋಱೆ ಜಗ
ನ್ನುತ ನೋಡ ನನ್ನಿಯಾದುದು
ಸುತಂಗೆ ಕಥೆವೇಟ್ವರೆಂಬ ನಾಟ್ನುಡಿ ಜಗದೊಳ್ ೧೪

ಎನೆ ದೇವನ ದರಹಸಿತಾ
ನನದೊಳ್ ತನಗಿಂಬುಕೆಯ್ದು ಬಗೆಯಂ ಪದಿನಾ
ಲ್ಕನೆಯ ಮನು ಜಲಕನಱೆದಂ
ದನಿತುಂ ಭುವನಮುಮನಾಗಳಾಳ್ದಂತೊಸೆದಂ ೧೫

ವ॥ ಅಂತು ತನ್ನುಪರೋಧದೊಳಂ ಪ್ರಜಾನುಗ್ರಹಬುದ್ಧಿಯೊಳಂ ಪೋಗಲಾಱದೊಡಂಬಟ್ಟಾದಿ ಪುರುಷನೊಡಂಬಡನಱೆದು ನಿಶ್ಶಂಕನಾಗಿ ದಿವಿಜೇಂದ್ರನನುಮತದೊಳ್ ಕಚ್ಛಮಹಾಕಚ್ಛರ ತಂಗೆಯರಪ್ಪ ಯಶಸ್ವತಿಮಹಾದೇವಿಯುಂ ಸುನಂದಾಮಹಾದೇವಿಯುಮೆಂಬ ಕನ್ಯಾರತ್ನಂಗಳಂ ಮಹೋತ್ಸಾಹದಿಂದಮೆರಡು ದೆಸೆಯೊಳಿರ್ದ ದೇವೇಂದ್ರಶಿಲ್ಪಿಗಳ್ ಸಮೆಯಿಸಿದ ಪಂಚರತ್ನಮಯ

ತಪ್ಪಿದ್ದಲ್ಲ. ೧೩. ಎಲೈ ಶಾಂತಾತ್ಮನೇ! ನೀನು ಮದುವೆಯಾಗು. ನನ್ನಂತೆಯೇ ನೀನು ಗೃಹಸ್ಥಧರ್ಮವನ್ನು ಪರಿಗ್ರಹಿಸಿದರೆ ಜಗತ್ತಿಗೂ ಸಂತತಿಯು ನಿಲ್ಲುವುದು. ನಿನಗೂ ಧರ್ಮಸಂತತಿಯು ನಿಲ್ಲುವುದು. ೧೪. ಜಗನ್ನುತ! ಅತರ್ಕ್ಯಜ್ಞಾನಿಯಾದ ನಿನಗೆ ಪುತ್ರಸ್ನೇಹದ ಫಲವಾಗಿ ನಾನು ಮಾರ್ಗದರ್ಶನ ಮಾಡಿದರೆ, ಸುತನಿಗೆ ಕಥೆ ಹೇಳಿದರೆಂಬ ನಾಣ್ಣುಡಿಯು ಜಗತ್ತಿನಲ್ಲಿ ಸತ್ಯವಾಗುವುದು!" ೧೫. ಎಂದು ಹೇಳಿದನು. ಆಗ ದೇವನ ಮುಖದಲ್ಲೊಗೆದ ಮುಗುಳ್ನಗೆಯು ತನ್ನ ಇಷ್ಟಾರ್ಥಸೂಚಕವೆಂದು ಹದಿನಾಲ್ಕನೆಯ ಮನುವಾದ ನಾಭಿರಾಜನು ತಿಳಿದನು. ಅವನು ಆಗ ಅಷ್ಟೂ ಲೋಕಗಳನ್ನು ತಾನು ಆಳಿದಂತೆ ಸಂತೋಷಿಸಿದನು. ವ॥ ರಾಜನ ಒತ್ತಾಯದಿಂದಲೂ ಪ್ರಜಾನುಗ್ರಹಬುದ್ಧಿಯಿಂದಲೂ ಪ್ರತಿಕೂಲನಾಗ ಲಾಶಿಸದೆ ವೃಷಭದೇವನು ಅದಕ್ಕೆ ಒಪ್ಪಿದನು. ನಾಭಿರಾಜನು ಇಂದ್ರನ ಅನುಮತಿಯನ್ನು ಪಡೆದು ಕಚ್ಛಮಹಾಕಚ್ಛರಾಜರ ತಂಗಿಯರಾದ ಯಶಸ್ವತೀ ಸುನಂದೆಯರೆಂಬ ರತ್ನಪ್ರಾಯರಾದ ಇಬ್ಬರು ಕನ್ಯೆಯರನ್ನು ಮಹೋತ್ಸಾಹದಿಂದ ಯಾಚಿಸಿದನು. ಬಳಿಕ ದೇವೇಂದ್ರನ ಶಿಲ್ಪಿಗಳು ನಿರ್ಮಿಸಿದ ಪಂಚರತ್ನಮಯವಾದ ವಿವಾಹಮಂಟಪದಲ್ಲಿ ಎಡೆಯರಿದಿಟ್ಟ ಚಿನ್ನ ಬೆಳ್ಳಿಗಳಿಂದ ಹಲವು ಆಕಾರಗಳಲ್ಲಿ ವಿನಿರ್ಮಿತವಾದ ಗಿಂಡಿಗಳೂ, ಅವುಗಳೊಡನೆ ಸಂಗತವಾದ ಮಣಿಗಟ್ಟುಗಳಲ್ಲಿನ ಕಿರಣಗಳೊಡನೆ ಸೆಣಸಿ ಬೆಳಗುವ ಮಣಿಗನ್ನಡಿಗಳೂ, ಅವಕ್ಕೆ ಪಾಂಗಾಗಿ ಪಚ್ಚೆಗಳಂತಿರುವ ಹುಲ್ಲುಗಳ ಹಸುರನ್ನು ಅಲ್ಲಗಳೆದು

ವಿವಾಹಾಮಂಟಪದೊಳೆಡೆಯಱಿದು ನಿಱಿಸಿದ ಕನಕರಜತಮಯಾನೇಕಭಂಗಿಭೃಂಗಾರಂಗಳುಮವಱೊಳ್ ಸಂಗತಂಗಳಾಗಿ ಮಣಿವಿತಾನ ನಾನಾ ಮಯೂಖಂಗಳೊಳ್ ಸೆಣಸಿ ಬೆಳಗುವ ಮಣಿಮುಕುರಂಗಳುಂ ಅವರ್ಕೆ ಪಾಂಗಾಗಿ ಪಚ್ಚೆಯ ಪಸಲೆಯ ಪಸುರನಸಕಳಿದು ನಿಮಿರ್ದ ನೆಲೆವಡಲಗೆಯ ಜಾಗಂಗಳುಮವನೆ ಸಂಗಡಂಗೊಂಡಿರ್ದ ಸತ್ತಿಸಂಗಡಂಗಳುಂ ಅವಱ ಕೆಲದೊಳನೇಕ ನಾಕಲೋಕೋದ್ಯಾನಪಲ್ಲವೋಲ್ಲಾಸಿತಂಗಳುಂ ಪದ್ಮಾದಿಸರೋವರ ಮಂಗಳಜಳವಿಳಸಿತಂಗಳುಮಾಗಿ ಸರ್ವಧಾನ್ಯದ ವಿವಾಹವೇದಿಕೆಯ ಮೇಲೆ ನಾಲ್ಕುಂದೆಸೆಯುಮನಳಂಕರಿಸಿರ್ದ ಪೂರ್ಣಕಳಶಂಗಳುಮಂ ಅವನಳಂಕಾರಿಸಿ ವಧೂವರರ ರಾಗಾಂಕುರಂಗಳೆಂಬಂತಿರ್ದ ರತ್ನಪ್ರದೀಪಂಗಳುಮೆಸೆಯೆ ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ ಸುತ್ತುಂಗೊಡ ಸುರಿಗೆಯ ಮುತ್ತಿನ ಬುಂಭುಕಂಗಳ ನಡುವೆ,

ಕಡೆಯಿಕ್ಕಿದ ಬಿಡುಮುತ್ತಿನ
ಪೊಡರ್ದುಣ್ಮುವ ಬೆಳಗು ಪೊಳೆವ ದುಗುಲದ ಪಸೆಯೊಳ್
ತೊಡರ್ದಿರೆ ಪೆಱತಲ್ತಿದೆ ಪಾ
ಲ್ಗಡಲೆನಿಸಿದುದಾ ವಿವಾಹವೇದಿವಿಳಾಸಂ ೧೬

ಭೃಂಗಾರಹೇಮಚಾಮರ
ಮಂಗಳಮಣಿದರ್ಪಣಪ್ರದೀಪಂಗಳ ಜಾ
ಗಂಗಳ ದೇವಾಂಗವಿತಾ
ನಂಗಳ ತುಱುಗಲ್ ಬೆಡಂಗುವಡೆದತ್ತದಱೊಳ್ ೧೭

ರಂಜಿಸೆ ಚರಣಾಲಕ್ತಕ
ರಂಜನೆ ಮಣಿಕುಟ್ಟಿಮಂಗಳಂ ಸುರಗಣಿಕಾ
ಗುಂಜನ್ಮಣಿರಶನಾಮಣಿ
ಮಂಜೀರಕಮಂಜುಶಿಂಜಿತಂ ರಂಜಿಸುಗುಂ ೧೮

ಸೆಟೆದು ನಿಂತಿದ್ದ ನೆಲವಡಲಗೆಯ (ಪಾತ್ರ-ವಿಶೇಷಗಳು) ಜಾಗಗಳೂ, ಅವುಗಳೊಡನಿದ್ದ ಸತ್ತಿಗೆಗಳೂ, ಅವುಗಳ ಬಳಿಯಲ್ಲಿದ್ದ ಸ್ವರ್ಗಲೋಕೋದ್ಯಾನದ ಪಲ್ಲವೋಲ್ಲಾಸಿತಗಳೂ ಪದ್ಮಾದಿಸರೋವರಗಳ ಜಲವಿಲಸಿತಗಳೂ ಸಮಸ್ತಧಾನ್ಯಗಳಿಂದ ಸಮೇತವಾದ ವಿವಾಹವೇದಿಕೆಯ ನಾಲ್ಕು ಪಕ್ಕಗಳಲ್ಲಿದ್ದ ಪೂರ್ಣಕಲಶಗಳೂ ವಧೂವರರ ರಾಗಾಂಕುರಗಳೋ ಎಂಬಂತಿದ್ದ ರತ್ನದೀಪಗಳೂ ಪ್ರಕಾಶಿಸುತ್ತಿದ್ದುವು. ಚಿನ್ನದ ಮಾವಿನ ಕಾಯ ಗೊಂಚಲುಗಳಿಂದಲೂ ಹೊಂದಳಿರ ಗೊಂಚಲುಗಳಿಂದಲೂ ಸುತ್ತುವರೆದ ಸುರಿಗೆ ಮತ್ತು ಮುತ್ತಿನ ಗೊಂಡೆಗಳ ನಡುವೆ ೧೬. ಅಂಚಿನಲ್ಲಿಟ್ಟ ಬಿಡುಮುತ್ತುಗಳಲ್ಲಿ ಮೇಲಕ್ಕೆದ್ದು ಹೊಳೆಯುವ ಬೆಳಕು ಹಸೆಯ ಮೇಲೆ ಹಾಸಿದ ಹೊಳೆಯುವ ದುಗುಲದ ಮೇಲೆ ಹರಡಿತು. ಅದರಿಂದ ಅದು ಹಾಲಿನ ಕಡಲಲ್ಲದೆ ಮತ್ತೇನಲ್ಲ ಎಂಬಂತೆ ವೇದಿಕೆಯು ಪ್ರಕಾಶಿಸಿತು. ೧೭. ಚಿನ್ನದ ಕಲಶ, ಚಿನ್ನದ ಚಾಮರ, ಮಂಗಲದರ್ಪಣ, ಮಂಗಳಪ್ರದೀಪ, ಮಂಗಲಾರ್ಥವಾಗಿ ಪಾತ್ರೆಗಳಲ್ಲಿ ಬೆಳೆಯಿಸಿದ ಸಸ್ಯ ಮತ್ತು ದೇವಾಂಗವೆಂಬ ವಸ್ತ್ರಗಳ ಮೇಲ್ಕಟ್ಟು ಇವುಗಳ ಗುಂಪು ವಿವಾಹಮಂಟಪದಲ್ಲಿ ಶೋಭಿಸಿತು. ೧೮. ಕಾಲುಗಳಲ್ಲಿನ ಅರಗಿನ ಅಲಂಕಾರಗಳು ಮಣಿಗಳಿಂದ ಮೆಟ್ಟಿದ ಪ್ರದೇಶಗಳನ್ನು ಬಣ್ಣಗೊಳಿಸಿದುವು. ದೇವಗಣಿಕೆಯರ ಮಣಿಮಯವಾದ ಒಡ್ಯಾಣಗಳ ಸುಂದರ ಶಬ್ದಗಳೂ ಕಾಲಂದುಗೆಗಳ

ಪರಿಪೂರ್ಣೋತ್ಸವಮುತ್ಸವ
ಮುರಜಧ್ವನಿಯಿಂದಮಾ ವಧೂವರರಂ ಪೋ
ಬರವೇಟೆಂಬಂತಿರ್ದುದು
ಸುರವಾರಸ್ತ್ರೀವಿಳಾಸಪರಿಣಯನಗೃಹಂ ೧೯

ಸುರಸಂಗೀತಮತ್ತಮೊಂದು ದಿಶೆಯೊಳ್ ಮತ್ತೊಂದು ದಿಗ್ಭಾಗದೊಳ್
ನರಸಂಗೀತಕಮೊಂದು ಮೆಯ್ಯೊಳಮರರ್ ಮತ್ತೊಂದು ಮೆಯ್ಯೊಳ್ ನರರ್
ನೆರೆದಿಂಬಾಗಿರೆ ದೇವಮಾನವಸಭಾಸಂದೋಹದಿಂ ನಾಡೆಯುಂ
ಪರಭಾಗಂಬಡೆದೇಂ ಬೆಡಂಗಿಡಿದುದೋ ತನ್ನಾಭಿರಾಜಾಲಯಂ ೨೦

||ಪೃಥ್ವೀ||

ನರಾಮರವಧೂಜನಂ ಬೆರಸಿ ರಾಗದಿಂದಾಡೆ ನೋ
ಟ್ಪರಲ್ಲಿ ಪಿರಿದೊಂದು ಸಂದೆಯದೆ ನೋಡೆ ಪೋಗಿಂತಿವಳ್
ನರಾಂಗನೆಯಿವಳ್ ಸುರಾಂಗನೆ ದಲೆಂಬಿನಂ ಮಾಡುಗುಂ
ಕರಂ ಮನದೊಳಲ್ಲಿ ಮರ್ತ್ಯರಮಣೀಶ್ರಮಾಂಭಃಕಣಂ ೨೧

ಇದು ಜನ್ಮಸ್ನಪನಕ್ಕೆ ನೂರ್ಮಡಿ ಮಿಗಿಲ್ ಕಲ್ಯಾಣಮೆಂದಬ್ಜಜಿಂ
ತ್ರಿದಶೇಂದ್ರಂ ತ್ರಿದಶಾಪ್ಸರಃಪರಿವೃತಂ ಬಂದಾ ವಿವಾಹಕ್ಕೆ ತ
ಕ್ಕುದನಟ್ಕರ್ತು ನಿರಂತರಂ ಸಮೆಜಿದಂ ಪೆಣ್ಬಂಡಮಿಂದ್ರಾಣಿಯೆಂ
ದುದನೇಂದೆಂದೆಡೆಯಾಡುತಿರ್ಪುವೆನೆ ಮತ್ತೇನೆಂದದಂ ಬಣ್ಣಿಪೆಂ ೨೨

ಮಂಜುಲಧ್ವನಿಗಳೂ ರಂಜಿಸಿದುವು. ೧೯. ದೇವಸ್ತ್ರೀಯರ ವಿಲಾಸದಿಂದ ಯುಕ್ತವೂ ಸಂತೋಷಪೂರ್ಣವೂ ಆದ ಮದುವೆಮನೆಯು, ಉತ್ಸವಕಾಲದಲ್ಲಿ ಬಾರಿಸಲಾಗುತ್ತಿದ್ದ ಮೃದಂಗಧ್ವನಿಗಳಿಂದ "ಹೋಗು! ಆ ವಧೂವರರನ್ನು ಬರಹೇಳು!" ಎಂಬಂತಿದ್ದಿತು. ೨೦. ನಾಭಿರಾಜನ ಅರಮನೆಯ ಒಂದು ಕಡೆಯಲ್ಲಿ ದೇವತೆಗಳ ಸಂಗೀತವೂ ಮತ್ತೊಂದು ದಿಗ್ವಿಭಾಗದಲ್ಲಿ ಮನುಷ್ಯರ ಸಂಗೀತವೂ ಇನ್ನೊಂದೆಡೆಯಲ್ಲಿ ದೇವತೆಗಳೂ ಬೇರೊಂದೆಡೆಯಲ್ಲಿ ಮನುಷ್ಯರೂ ನೆರೆದು ಇಂಬಾಗಿದ್ದರು. ಹೀಗೆ ನಾಭಿರಾಜಾಲಯವು ದೇವಮಾನವರ ಸಮೂಹದಿಂದ ಅತಿಶಯವಾಗಿ ಶೋಭೆವಡೆದು ಬೆಡಗುವಡೆಯಿತು. ೨೧. ದೇವಸ್ತ್ರೀಯರೂ ಮಾನವಸ್ತ್ರೀಯರೂ ಒಟ್ಟಾಗಿ ಕಲೆತು ಪ್ರೀತಿಯಿಂದ ನರ್ತಿಸುತ್ತಿದ್ದರು. ಆಗ ಇವಳು ದೇವಸ್ತ್ರೀಯೋ ನರಸ್ತ್ರೀಯೋ ಎಂಬೊಂದು ಸಂದೇಹವು ಕೆಲವರಲ್ಲುಂಟಾಯಿತು. ಆದರೆ ಅಷ್ಟರಲ್ಲಿ ಮರ್ತ್ಯಸ್ತ್ರೀಯರಲ್ಲುಂಟಾದ ಬೆವರಿನ ಹನಿಗಳು ಅವರ ಮನದಲ್ಲಿ 'ಇವಳು ಸುರಾಂಗನೆಯಲ್ಲ, ನರಾಂಗನೆ!" ಎಂಬ ನಿಶ್ಚಯವನ್ನು ತಂದುವು. ೨೨. ಈ ಮದುವೆಯ ಕಾರ್ಯವು ಜನ್ಮಾಭಿಷೇಕಕ್ಕಿಂತ ನೂರ್ಮಡಿಯಷ್ಟು ಮಿಗಿಲಾದುದೆಂದು ದೇವೇಂದ್ರನು ಭಾವಿಸಿದನು. ತತ್ಫಲವಾಗಿ ಅವನು ದೇವತೆಗಳು ಮತ್ತು ಅಪ್ಸರೆಯರೊಡನೆ ವಿವಾಹಕ್ಕೆ ಬಂದು ನಲ್ಮೆಯಿಂದ ತಕ್ಕುದೆಲ್ಲವನ್ನೂ ನಿರಂತರವಾಗಿ ನೆರವೇರಿಸಿದನು. ಸ್ತ್ರೀಯರ ಸಮೂಹವು ಇಂದ್ರಾಣಿಯು ಹೇಳಿದ್ದೆಲ್ಲವನ್ನೂ ನಡೆಯಿಸಿ

ವ॥ ಅಂತನುವಜೆದೊಸಗೆಯೊಳಮರರಾಜನುಂ ಸನಾಭಿಗಳ್ ವೆರಸು ನಾಭಿರಾಜನುಂ ಬಂದು ವಿಳಾಸವತಿಯೆನಿಸಿದ ಯಶಸ್ವತಿಯೊಳಂ ಮನೋನಯನಾನಂದೆಯೆನಿಸಿದ ಸುನಂದೆಯೊಳಂ ಒಂದೇ ಪಸೆಯೊಳ್ ಪಾಣಿಗ್ರಹಣಂಗೆಯ್ಸಿದಾಗಳ್,

ಆತನುಶ್ರೀಕಾಮಿನೀದರ್ಪಣಮೆನಿಸುವ ತದ್ವಕ್ತ್ರಶೀತಾಂಶು ನೇತ್ರಾ
ಸಿತನೀರೇಜಾತಯುಗ್ಮಕ್ಕಮೃತಸಲಿಲಸಂಸೇಕಮಂ ಮಾಡೆ ಕಲ್ಪ
ವ್ರತತೀಸಂಯುಕ್ತಕಲ್ಪಕ್ಷಿತಿರುಹಮನೆ ಪೋಲ್ತಿರ್ದನಾ ಕಾಂತೆಯರ್ ತ
ಮ್ಮತಿರಾಗಂ ಪೆರ್ಚೆ ತನ್ನಿರ್ಕೆಲದೊಳಮಿರೆ ತನ್ನಾಭಿರಾಜಾಗ್ರಪುತ್ರಂ ೨೩

ವ॥ ಅಂತಾ ಜಗತ್ಪವಿತ್ರಚರಿತ್ರಕ್ಷತ್ರನಂದನೆಯರೊಳ್ ಆ ನಾಭಿರಾಜನಂದನಂ, ಆ ನಿಜಕುಲ ತಿಲಕೆಯರೊಳ್ ಆ ಮನುಕುಲತಿಲಕಂ, ಆ ಮಧುಕರನಿಕರಕಾಂತಕುಂತಳಾಳಂಕೃತಾರ್ಧೇಂದುಸೌಂದರ ಲಲಾಟೆಯರೊಳ್ ಆ ಕುಟಿಲಕುಂತಳಮಂಡಿತವಿಪುಳಲಲಾಟಂ, ಆ ವಿಕಚಮೇಚಕೋತ್ಪಳಲೋಚನೆಯ ರೊಳ್ ಆ ವಿಮುಕುಳಕಮಳದಳವಿಲೋಲಲೋಚನಂ, ಆ ಚಂಪಕಕಳಿಕಾವಿಳಾಸನಾಸಿಕಾವಂಶೆಯರೊಳ್ ಆ ಲಾವಣ್ಯಾಂಭಃಪ್ಲವಪ್ರಣಾಳಾಯಮಾನೋತ್ತುಂಗನಾಸಾವಂಶಂ, ಆ ಮದನಮಂಗಳ ಮುಕುರಾನುಕಾರಿ ಕಪೋಲತಳೆಯರೊಳ್ ಆ ಕಲ್ಯಾಣಕಾರ್ತಸ್ವರಾದರ್ಶಸದೃಶ ಕಪೋಲತಳಂ, ಆ ಮಣಿಮಯಕುಂಡಳ ಮರೀಚಿ ಮಂಜರೀಮನೋಹರಕನ್ಯೆಯರೊಳ್ ಆ ಪರಾರ್ಘ್ಯರತ್ನಕರ್ಣಪೂರಮಯೂಖಪ್ರವಾಹ ಸಂದೋಹಾಲಂಕೃತಕರ್ಣಂ, ಆ ಪರಿಸ್ಫುರನ್ಮಯೂಖದಶನೆಯರೊಳ್ ಆ ರಾಜದ್ವಜ್ರೋಜ್ಜ್ವಳದ್ದಶನಂ, ಆ ಪ್ರವಾಳಪಾಟಲಾಧರೆಯರೊಳ್ ಆ ನವಾಮ್ರದ್ರುಮಪಲ್ಲವಾಧರಂ, ಆ ರೇಖಾತ್ರಯ

ತೆಂದಮೇಲೆ ನಾನೇನೆಂದು ಬಣ್ಣಿಸಲಿ? ವ॥ ಅಂತೆ ಅನುವರಿತು ಸಂತೋಷದಿಂದ ದೇವೇಂದ್ರನೂ, ಬಂಧುಗಳೊಡನೆ ನಾಭಿರಾಜನೂ ಬಂದು ವಿಲಾಸವತಿಯಾದ ಯಶಸ್ವತಿಯನ್ನೂ, ನೇತ್ರಮನಃಕಾಂತಳಾದ ಸುನಂದೆಯನ್ನೂ ಒಂದೇ ಹಸೆಯಲ್ಲಿ ಕುಳ್ಳಿರಿಸಿ ಪಾಣಿಗ್ರಹಣಮಾಡಿಸಿದರು. ೨೩. ಕಾಮನ ಕಾಮಿನಿಯ ಮಣಿದರ್ಪಣವೆನಿಸಿದ ಆ ವನಿತೆಯರ ಮುಖಚಂದ್ರಮನು ನಾಭಿರಾಜಪುತ್ರನ ನೇತ್ರಗಳೆಂಬ ಎರಡು ನೈದಿಲೆ ಹೂವುಗಳಿಗೆ ಅಮೃತದ ನೀರನ್ನೆರಚಿದನು. ಅತಿಪ್ರೀತಿಯುಕ್ತರಾಗಿ ಆ ಕಾಂತೆಯರು ಅವನೆರಡೂ ಪಕ್ಕಗಳನ್ನಲಂಕರಿಸಿರಲು, ಆ ನಾಭಿರಾಜರ ಜ್ಯೇಷ್ಠಪುತ್ರನು ಕಲ್ಪಲತೆಗಳನ್ನಪ್ಪಿದ ಕಲ್ಪವೃಕ್ಷಕ್ಕೆಣೆಯಾಗಿ ತೋರಿದನು. ವ॥ ಸದ್ವೃತ್ತಸಂಪನ್ನರಾದ ಆ ಕ್ಷತ್ರಿಯ ಕುಮಾರಿಯರಲ್ಲಿ ಆ ನಾಭಿರಾಜಕುಮಾರನೂ, ಆ ನಿಜಕುಲತಿಲಕೆಯರಲ್ಲಿ ಆ ಮನುಕುಲತಿಲಕನೂ, ದುಂಬಿವಿಂಡಿನಂತೆ ಮನೋಹರವಾದ ಮುಂಗುರುಳುಗಳಿಂದ ಅಲಂಕೃತರೂ ಅರ್ಧಚಂದ್ರ ನಂತೆ ಹಣೆವಡೆದವರೂ, ಆದ ಆ ತರುಣಿಯರಲ್ಲಿ ವಕ್ರಕೇಶಾಲಂಕೃತನಾಗಿ ವಿಶಾಲವಾದ ಹಣೆಯುಳ್ಳವನೂ, ಆ ಅರಳಿದ ನೀಲಕಮಲದಂತೆ ಕಣ್ಣುಳ್ಳವರಲ್ಲಿ ಅರಳಿದ ಕಮಲ ದೆಸಳಿನಂತೆ ಚಂಚಲವಾದ ಕಣ್ಣುಳ್ಳವನೂ, ಸಂಪಿಗೆಯ ಮೊಗ್ಗಿನಂತೆಸೆಯುವ ನಾಸಿಕೆ ಯುಳ್ಳವರಲ್ಲಿ ಲಾವಣ್ಯವೆಂಬ ನೀರು ಹರಿಯುವುದಕ್ಕೆ ನಿರ್ಗಮಮಾರ್ಗದಂತಾಚರಿಸುವ ಉನ್ನತನಾಸಾವಂಶನೂ, ಮನ್ಮಥನ ಮಂಗಲಮಯವಾದ ಕನ್ನಡಿಯನ್ನನುಕರಿಸುವ ಕೆನ್ನೆವಡೆದವರಲ್ಲಿ ಚಿನ್ನದ ಕನ್ನಡಿಗೆಣೆಯಾದ ಕಪೋಲತಲವಡೆದವನೂ, ಮಣಿಮಯ ಕರ್ಣಕುಂಡಲಗಳ ಕಾಂತಿಮಂಜರಿಗಳಿಂದ ಮನೋಹರವಾದ ಕನ್ಯೆಯರಲ್ಲಿ ಶ್ರೇಷ್ಠವಾದ ರತ್ನಗಳಿಂದ ಮೆಟ್ಟಿದ ಕರ್ಣಾಭರಣಗಳ ಕಾಂತಿಯಿಂದ ರಮ್ಯವಾದ ಕಿವಿಗಳುಳ್ಳವನೂ,

**ಬಂಧುರಕಂಧರೆಯರೊಳ್ ಆ ಕಂಬುಕುಬ್ಜಕಮನೀಯಕಂಧರಂ, ಆ ರಾಜಹಂಸೋನ್ನತಾಂಸೆಯರೊಳ್ ಆ ಕನಕಶಿಖರಿಶಿಖರೋನ್ನತಾಂಸಂ, ಆ ಶಿರೀಷಕುಸುಮದಾಮಸುಕುಮಾರಬಾಹುಲತೆಯರೊಳ್ ಆ ಪರಿಘಪರಿವೃತ್ತದೀರ್ಘಬಾಹುಯುಗಳಂ, ಆ ಬಾಹುಮೂಲಪರ್ಯಂತವಿಶ್ರಾಂತಕುಚಮಂಡಲೆಯರೊಳ್ ಆ ಲಕ್ಷ್ಮೀಲೀಲಾವಿಹಾರಾಚಳರುಚಿರವಕ್ಷಸ್ಸ್ಥಳಂ, ಆ ಕಾಮಕಾರ್ಮುಕಯಷ್ಟಿಮುಷ್ಟಿಸಮಾಯತಮಧ್ಯೆಯರೊಳ್ ಆ ರಾಜಕಂಠೀರವಮಧ್ಯಂ ಆ ಮದನಚಕ್ರವರ್ತಿಕ್ರೀಡಾಚಳೋನ್ನತಜಘನೆಯರೊಳ್ ಆ ಮಹೇಂದ್ರವಿರಚಿತ ಸಿಂಹಾಸನಾರೋಹಣೋಚಿತಜಘನಂ, ಆ ಕನಕಕದಳೀಸ್ತಂಭ ವಿಭ್ರಮ ಜಂಘಾಯುಗಳೆಯರೊಳ್ ಆ ಭುವನಭರಣೋತ್ತರಣಸ್ತಂಭರಮಣೀಯಜಂಘಾಯುಗಳಂ, ಆ ನವಮಣಿಗಣಮರೀಚಿಕುಸುಮೋಲ್ಲಸಿತಪದಪಲ್ಲವೆಯರೊಳ್ ಆ ಪುರಂದರಚೂಡಾರತ್ನಪ್ರತಿಬಿಂಬ ಚುಂಬಿತನಖೋಲ್ಲಸಿತಪದಪಲ್ಲವಂ, ಆ ಲಾವಣ್ಯಜಳಧಿವೇಳೆಯರೊಳ್ ಆ ಲಾವಣ್ಯಾರ್ಣವಕಲ್ಲೋಲಂ, ಆ ಮನೋಜರಾಜ [ಜೈ][೧]ತ್ರ ಪತಾಕೆಯರೊಳ್ ಆ ಮನಸಿಜವಿಜಯಕೇತನಂ ನೆರೆದಿರೆ,**

ಆ ಕಾಂತಿಮಯವಾದ ಹಲ್ಲುಗಳಿಂದ ಮೆರೆಯುವವರಲ್ಲಿ ವಜ್ರದಂತುಜ್ವಲವಾದ ಹಲ್ಲುಗಳುಳ್ಳವನೂ, ಹವಳದಂತೆ ಕೆಂಪಾದ ತುಟಿಯುಳ್ಳವರಲ್ಲಿ ಹೊಸತಾದ ಮಾವಿನ ಚಿಗುರಿನಂತೆ ಕೆಂದುಟಿಯುಳ್ಳವನೂ, ರೇಖಾತ್ರಯಗಳಿಂದ ಮಂಡಿತವಾದ ಸುಂದರ ಗ್ರೀವೆಯರಲ್ಲಿ ಶಂಖದಂತೆ ಹ್ರಸ್ವವೂ ಸುಂದರವೂ ಆದ ಕತ್ತುಳ್ಳವನೂ, ರಾಜಹಂಸದಂತೆ ಉನ್ನತವಾದ ಹೆಗಲುಳ್ಳವರಲ್ಲಿ ಮೇರುಶಿಖರದಂತೆ ಉನ್ನತವಾದ ಹೆಗಲುಳ್ಳವನೂ, ಬಾಗೆಹೂವಿನ ದಂಡೆಯಂತೆ ಮೃದುವಾದ ತೋಳುಬಳ್ಳಿಯುಳ್ಳವರಲ್ಲಿ ಪರಿಘದಂತೆ ದುಂಡಾಗಿಯೂ ಉದ್ದವಾಗಿಯೂ ಇರುವ ತೋಳೆರಡುಳ್ಳವನೂ, ಕಂಕುಳವರೆಗೆ ವ್ಯಾಪಿಸಿರುವ ಸ್ತನಮಂಡಲವುಳ್ಳವರಲ್ಲಿ ಲಕ್ಷ್ಮಿಯ ಲೀಲಾವಿಹಾರಾಚಲದಂತೆ ರುಚಿರವಾದ ವಕ್ಷಃಸ್ಥಲವುಳ್ಳವನೂ, ಕಾಮನಬಿಲ್ಲಿನ ಯಷ್ಟಿಮುಷ್ಟಿಯಕ್ಕೆ ಸಮವಾದ ನಡುವುಳ್ಳವರಲ್ಲಿ ಆ ರಾಜಸಿಂಹದ ನಡುವುಳ್ಳವನೂ, ಆ ಮನ್ಮಥಚಕ್ರವರ್ತಿಯ ಕ್ರೀಡಾಚಲದಂತೆ ಉನ್ನತವಾದ ಜಘನವುಳ್ಳವರಲ್ಲಿ ಇಂದ್ರನಿರ್ಮಿತವಾದ ಸಿಂಹಾಸನಕ್ಕುಚಿತವಾದ ನಿತಂಬವುಳ್ಳವನೂ, ಚಿನ್ನದ ಬಾಳೆಯಕಂಬದ ವಿಭ್ರಮವನ್ನು ತಳೆದಿರುವ ಜಂಘಾಯುಗಲೆಯರಲ್ಲಿ ಭುವನವೆಂಬ ಭವನದ ತೋರಣಸ್ತಂಭದಂತೆ ಸುಂದರವಾದ ಜಂಘಾಯುಗ್ಮವನ್ನು ಪಡೆದವನೂ, ಉಗುರುಗಳೆಂಬ ಮಣಿಸಮೂಹದ ಕಾಂತಿಗಳಂತಿರುವ ಕುಸುಮೋಲ್ಲಸಿತ ಪಲ್ಲವೆಯರಲ್ಲಿ ಇಂದ್ರನ ಕಿರೀಟರತ್ನಗಳ ಪ್ರತಿಬಿಂಬಗಳಿಂದ ಚುಂಬಿತವಾದ ಉಗುರುಗಳಲ್ಲಿ ಪ್ರಕಾಶಿತವಾದ ಪದಪಲ್ಲವವುಳ್ಳವನೂ, ಆ ಲಾವಣ್ಯಸಮುದ್ರದ ವೇಳೆಯರಲ್ಲಿ ಲಾವಣ್ಯಸಮುದ್ರದ ಕಲ್ಲೋಲನೂ, ಕಾಮರಾಜನ ಚಿತ್ರಪತಾಕೆಯೋ ಎಂಬಂತಿರುವವರಲ್ಲಿ ಮನ್ಮಥವಿಜಯಕೇತನನೂ ನೆರೆದಿರಲು,

---

೧ ಚೈತ್ರ, ಜಿತ್ರ (ಅನ್ಯತ್ರ)

ಸಮಲಾವಣ್ಯಪ್ರಸರದ
ಸಮವಿಭವದ ಸಮವಿಳಾಸದಗ್ಗಳಿಕೆಯೊಳಾರ್
ಸಮನಿವರ್ಗೆನೆ ಸಮರಸದೊಳ್
ಸಮಸಂದತ್ತವರ್ಗೆ ಸಮಸಮಾಯೋಗಸುಖಂ ೨೪

ವ|| ಅಂತಾ ಗರ್ಭೇಶ್ವರಿಯರ್ ಆ ಪುರುಪರಮೇಶ್ವರನ ಮನಸ್ಸರೋವರದೊಳ್ ತಮ್ಮ ಪಾದಪದ್ಮಂಗಳಂ ನೆಲೆಗೊಳಿಸಿಯುಂ, ಆ ನವಮಾಳಿಕೋದ್ದಾಮಕೋಮಳೆಯರ್ ಆ ತ್ರಿಲೋಕತಿಳಕನ ಮನೋಮದೇಭಮಂ ತಮ್ಮ ರಂಭಾಸ್ತಂಭಾಯಮಾನೂರುಸ್ತಂಭಂಗಳೊಳಾಳಿಸಿಯುಂ, ಆ ಜಿತಾಮರ ಕಾಮಿನಿಯರ್ ಆ ಮಹಾನುಭಾವನ ಮನೋಮದಕಳಹಂಸನಂ ತಮ್ಮ ಜಘನವಿಪುಳಪುಳಿತನತಳ ದೊಳಾಳಿಸಿಯುಂ, ಆ ಮದಾಲಸಗಮನೆಯರ್ ಆ ಜಗತ್ಪತಿಯ ಮನೋಯಾನಪಾತ್ರಮಂ ತಮ್ಮ ತಳೋದರಜಳಧಿನಾಭಿಗಂಭೀರಾವರ್ತದೊಳ್ ಸುೞಿಯಿಸಿಯುಂ, ಆ ತನೂದರಿಯರ್ ಆ ನಾಭೇಯನ ಮನಸ್ಸರಸ್ತಟಮಂ ತಮ್ಮ ವಳಿತ್ರಯತರಂಗಂಗಳಿಂದಮಳ್ಳಿಱಿಸಿಯುಂ, ಆ ಕುಸುಮಸುಕುಮಾರತನುಗಳ್ ಆ ಭುವನಭವನಮೂಲಸ್ತಂಭತನೂಜನ ಮನೋಮಂಗಳಗೇಹಮಂ ತಮ್ಮ ಕುಚಕುಂಭಂಗಳಿನಳಂಕರಿಸಿಯುಂ, ಆ ಮದಕೋಕಿಳಕಳಾಲಾಪೆಯರ್ ಆ ಸಕಳಕಳಾನಿಳಯನ ಮನೋಮೃಗಮಂ ತಮ್ಮ ಮೃದುಮೃಣಾಳಕೋಮಳಬಾಹುಪಾಶಂಗಳೊಳ್ ತೊಡರ್ಚಿಯುಂ, ಆ ಚಂಪಕಮುಕುಳವಿಳಾಸ ನಾಸಾವಂಶೆಯರ್ ಆ ವಿಶ್ವೇಶ್ವರನ ಮನೋಮಧುಕರಮಂ ತಮ್ಮ ಮುಖಾರವಿಂದದೊಳ್

೨೪. ಲಾವಣ್ಯದ ಹರಹಿನಲ್ಲಿಯೂ, ಐಶ್ವರ್ಯದಲ್ಲಿಯೂ ವಿಲಾಸದಗ್ಗಳಿಕೆಯಲ್ಲಿಯೂ ಇವರಿಗೆ ಸಮನಾದವರು ಯಾರೂ ಇರಲಿಲ್ಲ ಎಂಬಂತೆ ಸಮರಸದಲ್ಲಿ ಅವರ ಸುಖವು ಸಮನಾಗಿ ಅನುಭವಕ್ಕೆ ಬಂದಿತು. ವ|| ಅಂತು ಆಗರ್ಭಶ್ರೀಮಂತರಾದ ಯಶಸ್ವತೀ ಸುನಂದೆಯರು ಆ ಪುರುರಾಜೇಶ್ವರನ ಮನಸ್ಸೆಂಬ ಮಾನಸಸರೋವರದಲ್ಲಿ ತಮ್ಮ ಪಾದಪದ್ಮಗಳನ್ನು ನೆಲೆಗೊಳಿಸಿದರು. ನವಮಾಲಿಕೆಯ ಮಾಲೆಯಂತೆ ಕೋಮಲೆಯರಾದ ಆ ಸ್ತ್ರೀಯರು ಆ ತ್ರಿಲೋಕತಿಲಕನ ಮನಸ್ಸೆಂಬ ಮದ್ದಾನೆಯನ್ನು ಬಾಳೆಯ ಕಂಬದಂತಿರುವ ತೊಡೆಗಳಲ್ಲಿ ಕಟ್ಟಿಹಾಕಿದರು. ದೇವಸ್ತ್ರೀಯರನ್ನು ಅಲ್ಲಗಳೆದ ಆ ಸ್ತ್ರೀಯರು ಆ ಮಹಾನುಭಾವನ ಮನಸ್ಸೆಂಬ ಮತ್ತಕಲಹಂಸನನ್ನು ತಮ್ಮ ಸ್ಥೂಲಜಘನವೆಂಬ ಮರಳುಭೂಮಿಯಲ್ಲಿ ಬಂಧಿಸಿದರು. ಆ ಮದಾಲಸಗಮನೆಯರು ಜಗದೊಡೆಯನ ಮನಸ್ಸೆಂಬ ದೋಣಿಯನ್ನು ಕೃಶೋದರವೆಂಬ ಕಡಲಿನ ನಾಭಿಯೆಂಬ ಆಳವಾದ ಸುಳಿಯಲ್ಲಿ ತಿರುಗಿಸಿದರು. ಆ ಕೃಶೋದರಿಯರು ನಾಭಿರಾಜಪುತ್ರನ ಮನಸ್ಸೆಂಬ ಸರಸ್ತಟವನ್ನು ತಮ್ಮ ವಲಿತ್ರಯಗಳೆಂಬ ಅಲೆಗಳಿಂದ ಇರಿದರು. ಆ ಕುಸುಮ ಸುಕುಮಾರ ದೇಹವುಳ್ಳವರು ಪ್ರಪಂಚವೆಂಬ ಮನೆಯ ಮೂಲಸ್ತಂಭನೆನಿಸಿದ ನಾಭಿರಾಜತನೂಜನ ಮನೋಮಂಗಲಗೃಹವನ್ನು ತಮ್ಮ ಸ್ತನಕುಂಭಗಳಿಂದ ಅಲಂಕರಿಸಿದರು. ಕೋಗಿಲೆಯಂತೆ ಅಂದವಾಗಿ ಧ್ವನಿಗೈವ ರಮಣಿಯರು ಸಕಲಕಲಾನಿಪುಣನ ಮನೋಮೃಗವನ್ನು ಮೃದುವಾದ ತಾವರೆದಂಟಿನಂತೆ ಕೋಮಲವಾದ ತೋಳುಗಳೆಂಬ ಹಗ್ಗಗಳಿಂದ ಕಟ್ಟಿಹಾಕಿದರು. ಸಂಪಿಗೆಯ ಮೊಗ್ಗಿನಂತೆ ವಿಲಾಸವಡೆದ ಆ ನಾಸಾವಂಶೆಯುಳ್ಳವರು ಆ ವಿಶ್ವದೊಡೆಯನ

ನಲಿಯಿಸಿಯುಂ, ಆ ನೀಲನೀರೇಜನಯನೆಯರ್ ಆ ಮನುವಂಶಭವ್ಯಕುಮುದಾಕರಕುಮುದಬಾಂಧವನ ಮನೋಲತಾಂತಮಾಲೆಯಂ ತಮ್ಮ ಕೇಶಹಸ್ತದಿಂ ಕೈಕೊಂಡುಂ ಇಂತು,

ಆ ಪುಣ್ಯವತಿಯರಿರ್ಬರು
ಮಾ ಪರಮೇಶ್ವರನ ಮನಮನಿರ್ಕುಳಿಗೊಳೆ ಮ
ತ್ತಾ ಪೀನವೃಷಸ್ಕಂಧನು
ಮಾ ಪದ್ಮಾಸ್ಯೆಯರ ಮನಮನಿರ್ಕುಳಿಗೊಂಡಂ ೨೫

ವ|| ಅಂತಾ ಲತಾಂತೆಯರೊಳ್ ಆದಿಪುರುಷನಶೇಷಸಂಸಾರಸುಖಮನನುಭವಿಸುತ್ತಿರ್ಪನಂ, ಅನೇಕಸಂವತ್ಸರಂಗಳ್ ಅವಿದಿತಸ್ವರೂಪಂಗಳೇಕಸಂವತ್ಸರಸಮಾನಂಗಳಾಗಿ ಪೋಗೆ ಯಶಸ್ವತಿಮಹಾದೇವಿ ಮತ್ತೊಂದುದಿವಸಂ ಚತುರ್ಥಸ್ನಾನದೊಳ್ ಸುಧಾರಮ್ಯಹರ್ಮ್ಯತಳದೊಳೇೞನೆಯ ನೆಲೆಯೊಳ್ ಪುರುಪರಮೇಶ್ವರನೊಡನೆ ಪವಡಿಸಿ ಯಾಮಿನೀವಿರಾಮಸಮಯದೊಳ್,

ಗಗನಾಂಭೋರಾಶಿಶಂಖೋಪಮಹಿಮಕರನಂ ದೀಪ್ಯಮಾನಪ್ರತಾಪ
ಸ್ಥಗಿತಾಶಾಚಕ್ರಚಂಡಾಂಶುವನಮರಮನೋಹಾರಿಹೇಮಾದ್ರಿಯಂ ವ್ಯೋ
ಮಗಕಲ್ಲೋಲಾಬ್ಧಿಯಂ ತಾಮರಸಕರಪಯೋಜಾಶ್ರಿತಶ್ರೀಯನಾಳೋ
ಕಗತಾಂಶುವ್ರಾತರತ್ನೋಜ್ವಳಸುರತರುವಂ ಸ್ವಪ್ನದೊಳ್ ದೇವಿ ಕಂಡಳ್ ೨೬

ವ|| ಆಗಳಮರವಾದಕವಾದ್ಯಮಾನದುಂದುಭಿಶಂಖಕಾಹಳಾಪ್ರಭಾತಪಟಹಧ್ವನಿಗಳ್

ಮನಸ್ಸೆಂಬ ದುಂಬಿಯನ್ನು ತಮ್ಮ ಮುಖಾರವಿಂದದಲ್ಲಿ ನಲಿಯಿಸಿದರು. ಆ ನೀಲಕಮಲನಯನೆಯರು ಆ ಮನುವಂಶವೆಂಬ ಕುಮುದಾಕರಕ್ಕೆ ಚಂದ್ರನಾದವನ ಮನೋಲತಾಂತ (ಪುಷ್ಪ) ಮಾಲೆಯನ್ನು ತಮ್ಮ ಕೇಶಹಸ್ತದಿಂದ ಹಿಡಿದರು. ಇಂತು, ೨೫. ಆ ಪುಣ್ಯವತಿಯರಿಬ್ಬರೂ ಪರಮೇಶ್ವರನಾದ ವೃಷಭದೇವನ ಮನಸ್ಸನ್ನು ಆಕರ್ಷಿಸಿದರು. ಆ ವೃಷಸ್ಕಂಧನೂ ಆ ಕಮಲಾಸ್ಯೆಯರ ಮನಸ್ಸನ್ನು ಆಕರ್ಷಿಸಿದನು. ವ|| ಅಂತು ಆದಿಪುರುಷನು ಆ ಲತಾಂಗಿಯರೊಡನೆ ಸಂಸಾರದ ಸಮಸ್ತ ಸೌಖ್ಯವನ್ನು ಅನುಭವಿಸುತ್ತಿರಲು, ಅನೇಕ ವರ್ಷಗಳು ಒಂದು ವರ್ಷಕ್ಕೆ ಸಮನಾಗಿ ಕಳೆದುಹೋದುವು. ಯಶಸ್ವತೀದೇವಿಯು ಮತ್ತೊಂದು ದಿವಸ ಚತುರ್ಥಸ್ನಾನದಲ್ಲಿ ಸುಣ್ಣದಿಂದ ಸುಂದರವಾಗಿರುವ ಉಪ್ಪರಿಗೆಯ ಏಳನೆಯ ಅಂತಸ್ತಿನಲ್ಲಿ ಆ ಪುರುವಂಶಜನಾದ ರಾಜನೊಡನೆ ನಿದ್ರಿಸಿದಳು. ರಾತ್ರಿಯ ಕೊನೆಯ ಯಾಮದಲ್ಲಿ ೨೬. ಆಕಾಶವೆಂಬ ಕಡಲಲ್ಲಿನ ಶಂಖದಂತೆ ತೋರುವ ಚಂದ್ರನನ್ನೂ, ತನ್ನೊಂದು ಪ್ರತಾಪದ ಬೆಳಕಿನಿಂದ ಸ್ಥಗಿತಗೊಳಿಸಿದ ದಿಙ್ಮಂಡಲವುಳ್ಳ ಸೂರ್ಯನನ್ನೂ, ದೇವತೆಗಳ ಹೃದಯವನ್ನು ಸೂರೆಗೊಂಡ ಮೇರುಪರ್ವತವನ್ನೂ, ಆಕಾಶಸ್ಥವಾದ ಉಲ್ಲೋಲ ಸಮುದ್ರವನ್ನೂ, ಪದ್ಮಹಸ್ತಳಾಗಿ ಪದ್ಮದ ಮೇಲೆ ಕುಳಿತ ಲಕ್ಷ್ಮಿಯನ್ನೂ, ಪ್ರಕಾಶಮಾನವಾದ ಕಿರಣಸಮೂಹವುಳ್ಳ ರತ್ನಗಳಿಂದ ಉಜ್ವಲವಾದ ಕಲ್ಪವೃಕ್ಷವನ್ನೂ ತನ್ನ ಸ್ವಪ್ನದಲ್ಲಿ ಆ ಯಶಸ್ವತಿಯು ಕಂಡಳು. ವ|| ಆಗ ಸುರವಾದಕರು ಬಾರಿಸಿದ ನಗಾರಿ, ಶಂಖ, ಕಹಳೆ ಮುಂತಾದ ಪ್ರಾತಃಕಾಲದ

ದೆಸೆದೆಸೆಗೆಸೆಯೆಯುಂ, ಅನೇಕ ಮಾಗಧಮಂಗಳಪಾಠಕಕೋಳಾಹಳಂಗಳ್ ನೆಗೞೆಯುಂ, ಉದಯಾಚಳ ಚೂಡಾಮಣಿಮರೀಚಿನಿಚಯಚುಂಬಿತಾಂಬುಜವನಲಕ್ಷ್ಮಿಯೊಡನೆ ಲಬ್ಧಪ್ರಬೋಧೆಯಾಗಿ ಪೂಜಿತಕುಲ ದೇವತೆ ರಾಜ್ಯಾಧಿದೇವತೆಯಂತೆ ಗೃಹೀತಮಂಗಳಪ್ರಸಾಧನೆಯುಂ ಪರಿವಾರವಾರಾಂಗನಾ ಪರೀತೆಯುಮಾಗಿ ಮನೋವಲ್ಲಭನಲ್ಲಿಗೆ ವಂದು ತದರ್ಧಾಸನಮನಳಂಕರಿಸಿ ತನ್ನ ಕಂಡ ಕನಸುಗಳನನುಕ್ರಮಂದಪ್ಪದೞೆಪುವುದುಂ ಅನಿತುಮಂ ಪುರುಪರಮೇಶ್ವರನವಧಾರಿಸಿ, ತತ್ಸ್ವಪ್ನಫಲಂಗಳ ನಿಂತೆಂದು ಬೆಸಸಿದಂ,

ಪರಿಪೂರ್ಣೇಂದುವಿನನ್ವಯಾಭ್ರತಿಳಕಂ ತಿಗ್ಮಾಂಶುವಿಂ ತೀವ್ರಭಾ
ಸುರತೇಜಂ ಸುರಶೈಲದಿಂ ಸಕಳಭೂಭೃನ್ಮುಖ್ಯನಂಭೋಧಿಯಿಂ
ಪರಮಾಗಾಧಗುಣಂ ಪಯೋರುಹವಿಳಾಸಸ್ಥಾನೆಯಿಂ ಭೂವಧೂ
ವರನಬ್ಜೇಕ್ಷಣೆ ಕಲ್ಪವೃಕ್ಷದಿನಿಳಾಲೋಕೈಕಕಲ್ಪದ್ರುಮಂ ೨೭

ನಿನಗೆ ಭರತಾವನೀತಳ
ಮೆನಿತನಿತುಮನಾಳ್ವನೊರ್ವನಾದಪ್ಪಂ ನಂ
ದನನಾತನನುಜರಘಕುಳ
ವನದಹನರ್ ಪಲರುಮಪ್ಪರಪ್ರತಿಮಲ್ಲರ್ ೨೮

ವ॥ ಎಂದು ಬೆಸಸಿದಾಗಳ್,

ಪಟಹಧ್ವನಿಗಳು ಎಲ್ಲ ದಿಕ್ಕುಗಳಲ್ಲಿಯೂ ಮೊಳಗುತ್ತಿದ್ದುವು. ಅನೇಕ ವಂದಿಮಾಗಧರೇ ಮೊದಲಾದ ಮಂಗಲಪಾಠಕರ ಕೋಲಾಹಲಗಳು ಜರುಗುತ್ತಿದ್ದುವು. ಉದಯಪರ್ವತದ ಕಿರೀಟಮಣಿಯಾದ ಸೂರ್ಯನ ಕಾಂತಿಸಮೂಹದಿಂದ ಚುಂಬಿತವಾದ ಕಮಲ ಲಕ್ಷ್ಮಿಯೊಡನೆ ಯಶಸ್ವತಿಯು ಎಚ್ಚರ ಹೊಂದಿದಳು. ಕುಲದೇವತೆ ರಾಜ್ಯಾಧಿದೇವತೆಗಳನ್ನು ಪೂಜಿಸಿ ಮಂಗಳಾಲಂಕಾರಗಳನ್ನು ಕೈಕೊಂಡಳು. ಅವಳು ಪರಿವಾರದ ಗಣಿಕೆಯ ರೊಡನೆ ಕೂಡಿಕೊಂಡು ಮನೋವಲ್ಲಭನ ಬಳಿಗೆ ಬಂದು ಅವನ ಅರ್ಧಾಸನವನ್ನು ಪರಿಗ್ರಹಿಸಿದಳು. ತಾನು ಕಂಡ ಕನಸುಗಳನ್ನು ಕ್ರಮವಾಗಿ ಉಸುರಿದಳು. ಅವೆಲ್ಲವನ್ನೂ ಆ ವೃಷಭಚಕ್ರವರ್ತಿಯೂ ಕೇಳಿ ಸ್ವಪ್ನಫಲಗಳನ್ನು ಹೀಗೆಂದು ಹೇಳಿದನು. ೨೭. "ಪೂರ್ಣಚಂದ್ರದರ್ಶನದಿಂದ ವಂಶವೆಂಬಾಕಾಶಕ್ಕೆ ತಿಲಕಪ್ರಾಯನೂ, ಸೂರ್ಯದರ್ಶನದಿಂದ ತೇಜಸ್ವಿಯೂ, ಮೇರುಪರ್ವತದ ದರ್ಶನದಿಂದ ಸಮಸ್ತ ರಾಜರಿಗೂ ಸಾರ್ವಭೌಮನೂ, ಸಮುದ್ರ ದರ್ಶನದಿಂದ ಅಗಾಧವಾದ ಗುಣಗಳಿಂದ ಕೂಡಿರತಕ್ಕವನೂ, ಲಕ್ಷ್ಮಿಯ ದರ್ಶನದಿಂದ ಭೂವಧುವಿನ ವರನೂ, ಕಲ್ಪವೃಕ್ಷದರ್ಶನದಿಂದ ಭೂಮಂಡಲಕ್ಕೆ ಕಲ್ಪವೃಕ್ಷಪ್ರಾಯನೂ ಆದ ಮಗನನ್ನು, ಎಲೈ ಕಮಲಲೋಚನೆ, ನೀನು ಪಡೆಯುವೆ" - ಎಂದನು. ಮತ್ತು, ೨೮. "ನಿನಗೆ ಭರತಭೂಮಿಯೆಲ್ಲವನ್ನೂ ಆಳಬಲ್ಲ ಮಗನೊಬ್ಬನು ಹುಟ್ಟುವನು. ಅವನಿಗೆ ತಮ್ಮಂದಿರಾಗಿ ಪಾಪಸಮೂಹವೆಂಬ ಕಾಡನ್ನೇ ಸುಡಬಲ್ಲ ಕೆಲವುಜನ ಕೆಚ್ಚುಗಾರರು ಜನಿಸುವರು." ವ॥ ಎಂದು ಹೇಳಿದಾಗ,

ಪುಳಕಂ ಪುದಿದಿರೆ ರಾಗಂ
ಪೊಳೆಪಂ ತನುರುಚಿಗೆ ಕೂಡೆ ತಂಬೆಲರಲೆಪಿಂ
ಕಳಿಕೆಯೊಳೆ ತುಱುಗಿ ತಳಿರೊಳೆ
ತಳತಳಿಸಿದುದೊಂದಶೋಕಲತೆಯನೆ ಪೋಲ್ತಳ್ ೨೯

ವ॥ ಅನ್ನೆಗಂ ವ್ಯಾಘ್ರನುಂ ದಿವಾಕರಪ್ರಭನುಂ ಮತಿವರಮಂತ್ರಿಯುಂ ಅಧೋಗ್ರೈವೇಯಕ ದಿವಿಜನುಂ ಸುಬಾಹುಮಹೀಪತಿಯುಂ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದು ಯಶಸ್ವತಿ ಮಹಾದೇವಿಯ ಗರ್ಭಾವಾಸದೊಳ್ ಶುಕ್ತಿಪುಟೋದರವರ್ತಿಯಪ್ಪ ನಿರ್ಮಳೋದಕಬಿಂದುವಿನಂತೆ ಸಂಕ್ರಮಿಸೆ ಗರ್ಭಮಂ ತಾಳ್ದಿ

ನೆಗಟ್ಟಿ ಹಿರಣ್ಯಗರ್ಭನ ಮನಃಪ್ರಿಯವಲ್ಲಭೆ ರತ್ನಗರ್ಭಭೂ
ಮಿಗೆ ಫಳಗರ್ಭವಲ್ಲರಿಗೆ ಬಾಳದಿವಾಕರಗರ್ಭವಾಸವಾ
ಶೆಗೆ ಕಳಹಂಸಗರ್ಭಕಳಹಂಸಿಗೆ ಸಿಂಹಕಿಶೋರಗರ್ಭಸಿಂ
ಹಿಗೆ ದೊರೆಯಾಗಿ ಗರ್ಭನಿಳಯಾರ್ಭಕನುನ್ನತಿಯಂ ನಿಮಿರ್ಚಿದಳ್ ೩೦

ಜಗದ ಬಡತನಮನೊರ್ಮೆಯೆ
ಬಗೆದಂತಿರೆ ಕಿಡಿಪ ಚಕ್ರಿ ತನ್ನಿರ್ದೆಡೆಯೊಳ್
ನೆಗಟ್ಟಿ ಬಡತನಮನದನೇ
ಕೆ ಗಡಂ ಸೈರಿಸುವನೆನೆ ಪೊದಟ್ಟುದು ಮಧ್ಯಂ ೩೧

೨೯. ಅದನ್ನು ಕೇಳಿ ಯಶಸ್ವತಿಗೆ ರೋಮಾಂಚವುಂಟಾಯಿತು. ರಾಗವು ತನುರುಚಿಗೆ ಹೊಳಪನ್ನು ತಂದಿತು. ತಂಗಾಳಿಯು ಬೀಸಿ ಮೊಗ್ಗುಗಳು ತುಂಬಿ ತಳಿರುಗಳಿಂದ ತಳತಳಿಸಿ ಹೊಳೆಯುವ ಅಶೋಕಲತೆಯನ್ನು ಅವಳು ಹೋಲಿದಳು. ವ॥ ಅಷ್ಟರಲ್ಲಿ ಕ್ರಮದಿಂದ ವ್ಯಾಘ್ರನೂ, ದಿವಾಕರಪ್ರಭನೂ, ಮತಿವರಮಂತ್ರಿಯೂ, ಅಧೋಗ್ರೈವೇಯಕದ ದಿವಿಜನೂ, ಸುಬಾಹುರಾಜನೂ, ಅನಂತರ ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿದ ಅಹಮಿಂದ್ರನೂ ಆದ ಪುರುಷನು ಯಶಸ್ವತೀಮಹಾದೇವಿಯ ಗರ್ಭದಲ್ಲಿ ಕಪ್ಪೆಚಿಪ್ಪಿನಲ್ಲಿ ಸೇರಿದ ನಿರ್ಮಲವಾದ ನೀರಿನ ಹನಿಯಂತೆ ಸಂಕ್ರಮಿಸಲಾಗಿ ಅವಳು ಗರ್ಭವತಿಯಾದಳು. ೩೦. ಹಿರಣ್ಯಗರ್ಭನ ಹೆಂಡತಿಯಾದ ಯಶಸ್ವತೀದೇವಿಯು ತನ್ನ ಗರ್ಭವೆಂಬ ಮನೆಯಲ್ಲಿ ಮಗುವಿನುನ್ನತಿಯನ್ನು ನೋಡಿಕೊಂಡಳು. ಆಗ ಅವಳು ರತ್ನವನ್ನೇ ಗರ್ಭದಲ್ಲಿ ಪಡೆದ ಭೂಮಿಗೂ, ಹಣ್ಣನ್ನು ಗರ್ಭದಲ್ಲಿ ಪಡೆದ ಬಳ್ಳಿಗೂ, ಎಳೆಯ ಸೂರ್ಯನನ್ನೇ ಗರ್ಭದಲ್ಲಿ ಪಡೆದ ಐಂದ್ರೀದಿಕ್ಕಿಗೂ, ಕಲಹಂಸವನ್ನು ಗರ್ಭದಲ್ಲಿ ಪಡೆದ ಕಲಹಂಸಿಗೂ, ಸಿಂಹದ ಮರಿಯನ್ನು ಗರ್ಭದಲ್ಲಿ ಪಡೆದ ಸಿಂಹಿಗೂ ಸದೃಶಳಾದಳು. ೩೧. ಜಗತ್ತಿನ ಬಡತನವನ್ನು ನೆನೆದೊಡನೆ ನಾಶಪಡಿಸಬಲ್ಲ ಚಕ್ರವರ್ತಿಯು ತಾನಿದ್ದೆಡೆಯಲ್ಲಿ ಬಡತನವನ್ನು (ಕಾರ್ಶ್ಯವನ್ನು) ಹೇಗೆ ಸಹಿಸಿಯಾನೆನ್ನುವಂತೆ ಯಶಸ್ವತಿಯ ಸೊಂಟದ ಪ್ರದೇಶವು ಬಡತನ (ಕೃಶತೆ)ವನ್ನು

ಚತುರಂತಕ್ಷಿತಿ ಗರ್ಭ
ಸ್ಥಿತನದು ಗಡಿಮೆಂ[1]ದು ಮುದ್ರಿಪಂತಾಯ್ತು ಯಶ
ಸ್ವತಿಯ ಪದನ್ಯಾಸಂ ವಿಳ
ಸಿತ ಲಾಕ್ಷಾರಸಮಪೂರ್ವಮಣಿಕುಟ್ಟಿಮದೊಳ್ ೩೨

ವ॥ ಅಂತು ಗರ್ಭಚಿಹ್ನಂಗಳ್ ತೋಱಿ, ಲೀಲಾಭವನೋಪವನಕೃತಕಗಿರಿಗಳಿರ್ದಂತೆ ವಿಜಯಾರ್ಧಹಿಮವದಚಳಕೂಟಂಗಳೊಳ್ ವಿಹಾರಿಸಲುಂ, ನಿಜಗೃಹೋಪವನಕ್ರೀಡಾಸರೋವರಂಗಳಿರ್ದಂತೆ ಗಂಗಾಜಲಲವಣಾಬ್ಧಿವೇಳಾವನಸರಸೀಸಲಿಲಂಗಳೊಳ್ ಜಲಕ್ರೀಡೆಯಾಡಲುಂ, ವಿಳಾಸಮಂದಿರ ಪರಿಸರನಂದನಲತಾನಿಕೇತನಂಗಳಿರ್ದಂತೆ ಮಳಯಾಚಳಚಂದನನಂದನಂಗಳೊಳ್ ರಮಿಯಿಸಲುಂ, ಕುಮಾರಭೃತ್ಯಕುಶಲಭಿಷಕ್ಪರಿಷತ್ಸಂಪಾದಿತಕಲ್ಯಾಣಾಮೃತಾಹಾರಂಗಳಿರ್ದಂತೆ ಷಟ್ಖಂಡಕ್ಷೇತ್ರಮೃತ್ತಿಕೆಯನೆ ಸವಿನೋಡಲುಂ, ಸೇವಾಭಿಜ್ಞವಾರಾಂಗನಾಶೃಂಗಾರಸುಧಾಸಿಕ್ತಸೂಕ್ತಿಗಳಿರ್ದಂತೆ ನಿಸ್ಸಹಾಯ ಸಾಹಸೋತ್ಕೀರ್ಣಮಹಾಹವಾರ್ಣವಪ್ರವೀರಪ್ರಾರಬ್ಧಾರಭಟೀಸಮುದ್ಘಟಿತಕಥೆಗಳನೆ ಕೇಳಲುಂ, ಮೃದುಮಧುರವಿದಗ್ಧಮುಗ್ಧಪರಿಹಾಸಮನೋಹರಾಳಾಪಶುಕಶಾರಿಕೆಗಳಿರ್ದಂತೆ ಪಂಜರಗತಕುಂಜರಾರಾತಿ ಕಿಶೋರಕೇಸರಿಗಳನೆ ತರಿಸಿ ನೋಡುತ್ತಿರಲುಂ,

ಕಳೆದುಕೊಂಡಿತು! ೩೨. ಅಪೂರ್ವವೂ ಮಣಿನಿರ್ಮಿತವೂ ಆದ ನೆಲಗಟ್ಟಿನಲ್ಲಿ ಅರಗಿನ ರಸದಿಂದ ಶೋಭಿಸುತ್ತಿರುವ ಯಶಸ್ವತಿಯ ಪಾದನಿಕ್ಷೇಪವು ನಾಲ್ಕು ದಿಕ್ಕುಗಳೇ ಕೊನೆಯಾಗಿ ಉಳ್ಳ ಭೂಮಿಯು ಗರ್ಭಸ್ಥಿತನಾದ ಭರತನಿಗೆ ಸೇರಿದ್ದೆಂದು ಮುದ್ರೆಹಾಕುವಂತಾಯಿತು. ವ॥ ಹಾಗೆ ಗರ್ಭಚಿಹ್ನೆಗಳು ಕಾಣಿಸಿಕೊಂಡವು. ಕ್ರೀಡಾಭವನದ ಉದ್ಯಾನಗಳಲ್ಲಿನ ಕೃತ್ರಿಮ ಪರ್ವತಗಳಲ್ಲಿ ಹೇಗೋ ಹಾಗೆ ವಿಜಯಾರ್ಧ ಮತ್ತು ಹಿಮವತ್ಪರ್ವತಗಳ ಶಿಖರಗಳಲ್ಲಿ ಯಶಸ್ವತಿಗೆ ವಿಹರಿಸಲಾಶೆಯುಂಟಾಯಿತು. ತನ್ನ ಮನೆಯ ಉದ್ಯಾನದ ಕ್ರೀಡಾಸರೋವರಗಳೋ ಎಂಬಂತಿದ್ದ ಗಂಗಾ, ಸಿಂಧು ಮತ್ತು ಲವಣಸಮುದ್ರಗಳ ದಡದ ಕಾಡುಗಳಲ್ಲಿನ ಕೊಳಗಳ ನೀರಿನಲ್ಲಿ ಜಲಕ್ರೀಡೆಯಾಡಲಾಶೆಯಾಯಿತು. ವಿಲಾಸಭವನದ ಉದ್ಯಾನ ಲತಾನಿಕೇತನಗಳಿದ್ದಂತೆ ಮಲಯಾಚಲ ಚಂದನೋದ್ಯಾನಗಳಲ್ಲಿ ರಮಿಸುವಾಶೆ ಮೂಡಿತು. ಬಾಲವೈದ್ಯ, ಕುಶಲವೈದ್ಯರ ಸಂಘದಿಂದ ಸಂಪಾದಿತವಾದ ಅಮೃತಾಹಾರವಿದ್ದಂತೆ ಷಟ್ಖಂಡಕ್ಷೇತ್ರದ ಮಣ್ಣನ್ನು ರುಚಿ ನೋಡಲಿಚ್ಛೆಯೊದಗಿತು. ಸೇವಾಭಿಜ್ಞರಾದ ವಾರಾಂಗನೆಯರ ಶೃಂಗಾರಾಮೃತದಿಂದ ತೊಯ್ದ ಮಾತುಗಳಿದ್ದಂತೆ, ಅಸಹಾಯಶೂರರಿಂದ ಪ್ರಾರಬ್ಧವಾದ ಶೌರ್ಯೋಜ್ಜೃಂಭಿತವಾದ ಕಥೆಗಳನ್ನೇ ಕೇಳಲು ಕುತೂಹಲವುಂಟಾಯಿತು. ಮೃದುಮಧುರವಾಗಿಯೂ ರಸಿಕತೆಯಿಂದ ಬಂಧುಪರಿಹಾರಸಂಯುಕ್ತವೂ ಆದ ವಚನಗಳನ್ನಾಡಲು ದಕ್ಷವಾದ ಶುಕಸಾರಿಕೆಗಳಂತೆ

---

[1] ಗಡಯೆಂದು ಅಥವಾ ಗಡಿದೆಂದು (ಗಡ + ಇದೆಂದು) ಎಂದು ಶುದ್ಧಪಾಠವಿರಬೇಕು.

ಕೆಲದೊಳ್ ಶ್ರೀದರ್ಪಣಂ ಬಂದಿರೆಯುಮೊಸೆದು ವಕ್ತ್ರೇಂದುವಂ ಖಡ್ಗದೊಳ್ ನೋ
ಡಲುಮಾತೋದ್ಯಪ್ರಗೀತಧ್ವನಿಗಳಿರೆ ಧನುರ್ದಂಡಟಂಕಾರಮಂ ಕೇ
ಳಲುಮಟ್ಟರ್ಪೆರ್ಚೆ ತತ್ಕಾಂತೆಗೆ ನೆಗಳ್ದುವು ಗರ್ಭಸ್ಥನುತ್ಸಾಹಮಂ ತೋ
ಳ್ವಲಮಂ ಸಾಮ್ರಾಜ್ಯಮಂ ಸೂಚಿಸುವವೊಲತಿಚೋದ್ಯಂಗಳೀ ದೌಹೃದಂಗಳ್ ೩೩

ವ|| ಅಂತು ಚಕ್ರವರ್ತಿಜನ್ಮೋತ್ಸವಸೂಚಕಮಪ್ಪನೇಕದೋಹಳಸಂದೋಹಂ ನೆಗೞೆ ಸುಖ ಪ್ರಸೂತಿಸಮಯದೊಳ್,

ಮನುಗೋತ್ರಾಂಭೋಧಿಚಂದ್ರಂ ಮನುಕುಲಸರಸೀವಿಭ್ರಮೋತ್ತಂಸಹಂಸಂ
ಮನುವಂಶಪ್ರಾಚ್ಯಶೈಲದ್ಯುಮಣಿ ಮನುನೃಪಾಮ್ನಾಯದುರ್ಗಾದ್ರಿಸಿಂಹಂ
ಮನುಭೂಪಾಳಾನ್ವಯಶ್ರೀಭವನಕಳಶಮೆಂಬಂತು ವಿಖ್ಯಾತಪುಣ್ಯಂ
ಮನುಧಾತ್ರೀಪಾಲಚೂಡಾಮಣಿ ಜನಿಯಿಸಿದಂ ಚಕ್ರವರ್ತಿಪ್ರಧಾನಂ ೩೪

ವ|| ಆ ಪ್ರಸ್ತಾವದೊಳ್

|| ಮಾಲಿನಿ ||

ಎಸಗಿದುದು ಸಮೀರಂ ಶೈತ್ಯಸೌರಭ್ಯಮಾಂದ್ಯಾ
ವಸಥಮೆಸೆದುದಾಶಾಚಕ್ರಮಂಭೋದಮಾರ್ಗಂ
ಪೊಸತೆ ತೊಳೆದುದೀಗಳ್ ಪಾಲೊಳೆಂಬಂತುಟಾಯ್ತೇ
ನೆಸೆದು ಸೊಗಯಿಸಿತ್ತಾ ಚಕ್ರಿಜನ್ಮೋತ್ಸವಾಹಂ ೩೫

ಪಂಜರದಲ್ಲಿರುವ ಸಿಂಹಶಿಶುಗಳನ್ನು ತರಿಸಿ ನೋಡುತ್ತಿದ್ದಳು. ೩೩. ಅವಳ ಸಮೀಪದಲ್ಲಿ ಕನ್ನಡಿಯಿದ್ದರೂ ತನ್ನ ಮುಖಚಂದ್ರನನ್ನು ಖಡ್ಗದಲ್ಲಿ ಕಾಣಬೇಕೆಂದೂ, ಅವಳ ಸಮೀಪದಲ್ಲಿ ಗೀತವಾದ್ಯಧ್ವನಿಗಳು ಇಂಪಾಗಿ ಜರುಗುತ್ತಿದ್ದರೂ ಧನುಷ್ಟಂಕಾರವನ್ನು ಕೇಳಬೇಕೆಂದೂ ವೃಷಭದೇವನ ಕಾಂತೆಗೆ ಇಚ್ಛೆಯಾಯಿತು. ಅವಳಲ್ಲುಂಟಾದ ಈ ಆಶ್ಚರ್ಯಕರವಾದ ಬಸುರಿಯ ಬಯಕೆಗಳು ಗರ್ಭಸ್ಥನ ಉತ್ಸಾಹವನ್ನೂ, ತೋಳ್ಬಲವನ್ನೂ ಸಾಮ್ರಾಜ್ಯಾಕಾಂಕ್ಷೆಯನ್ನೂ ಸೂಚಿಸುತ್ತಿರುವುವೋ ಎಂಬಂತಿದ್ದುವು. ವ|| ಹೀಗೆ ಚಕ್ರವರ್ತಿ ಜನ್ಮೋತ್ಸವ ಸೂಚಕವಾದ ಅನೇಕ ಬಯಕೆಗಳು ಉಂಟಾದವು. ಅನಂತರ ಸುಖಪ್ರಸೂತಿಕಾಲದಲ್ಲಿ, ೩೪. ಮನುಗೋತ್ರವೆಂಬ ಕಡಲಿಗೆ ಚಂದ್ರನಂತೆಯೂ, ಮನುಕುಲವೆಂಬ ಸರಸ್ಸಿಗೆ ಹಂಸಪ್ರಾಯನಾಗಿಯೂ, ಮನುವಂಶವೆಂಬ ಪೂರ್ವಪರ್ವತದ ಸೂರ್ಯನಂತೆಯೂ, ಮನುಕುಲವೆಂಬ ದುರ್ಗಾದ್ರಿಯ ಸಿಂಹನಂತೆಯೂ, ಮನುಕುಲವೆಂಬ ಶ್ರೀಭವನಕ್ಕೆ ಕಲಶಪ್ರಾಯನಾಗಿಯೂ, ಮನುರಾಜರ ಚೂಡಾಮಣಿಯಾಗಿಯೂ ವಿಖ್ಯಾತಪುಣ್ಯನಾದ ಚಕ್ರವರ್ತಿ ಪ್ರಧಾನನು ಜನಿಸಿದನು. ವ|| ಆ ಪ್ರಸ್ತಾವದಲ್ಲಿ ೩೫. ಚಕ್ರಿಯ ಜನ್ಮೋತ್ಸವದ ದಿನವು ಅಂದು ಅತಿಶಯವಾಗಿ ಸೊಗಯಿಸಿತು. ಶೈತ್ಯ, ಸೌರಭ್ಯ, ಮಾಂದ್ಯಗಳಿಗೆ ಆಶ್ರಯವಾದ ಗಾಳಿಯು ಬೀಸಿತು. ದಿಕ್ಕುಗಳು ಪ್ರಸನ್ನವಾದವು. ಆಕಾಶವು ಹಾಲಿನಿಂದ

ವ॥ ಆಗಳ್ ಸರಭಸಪ್ರಚಾರಿತಪರಿಜನಪದಕ್ಷೋಭವಿಚಳಿತಮಹೀತಳಮುಂ ಪ್ರತಿನಿಕೇತನೋತ್ಥಾಪಿತವಿಚಿತ್ರಕೇತನಮುಂ, ಮೃಗಮದಜಳಚ್ಛಟಾಸಿಕ್ತಪ್ರಾಂಗಣಮುಂ, ಮಧುಕರನಿಕರಝುಂಕಾರಹಾರಿಕುಸುಮೋಪಹಾರಮುಂ, ಮಹೀಪತಿನಿವೇದನಸಂಭ್ರಮಗಮನಸ್ಖಲಿತವೃದ್ಧಕಂಚುಕಿನಿಕರಮುಂ, ಅಂತಃಪುರಪರಿಜನನಿರ್ದಯಸಂಮರ್ದನಪತಿತಕುಬ್ಜವಾಮನವರ್ಷಧರನಿಕರುಂಬಮುಂ, ನಾಭಿವಿಲಂಬಮಾನಲಂಬಸ್ತನ ವಿಸ್ರಸ್ತಾಂತರೀಯೋತ್ತರೀಯವೃದ್ಧಧಾತ್ರೀನರ್ತನನಿರೀಕ್ಷಣಜನತಾಜನಿತ ಹಾಸನಿವಾಸಮುಂ, ಯುಗಪದುತ್ಥಿತಮಂಗಳಗೀತನೃತ್ಯೋನ್ಮಿಶ್ರಿತಾನೇಕಾನಕಲಯಾನುಗತಲೀಲಾಲಾಸ್ಯ ಪ್ರಸಕ್ತಕಾಮಿನೀಕಮನೀಯಮುಮಾಗಿ,

ಮನುಜಾಧೀಶಸಮೂಹಸಂಚರಣದಿಂ ಸಾಮಂತಸೀಮಂತಿನೀ
ಜನಸಮ್ಮರ್ದದಿನುತ್ಸವಧ್ವಜಪಟಪ್ರಸ್ತಾರದಿಂ ರತ್ನವಂ
ದನಮಾಲಾಪ್ರಚುರಪ್ರಭಾಪ್ರಸರದಿಂದಾನಂದಭೇರೀಬೃಹ
ಧ್ವನಿಯಿಂದಾಲಯಮಾಯ್ತದೊಂದು ಪಿರಿದುಂ ಚೆಲ್ವಿಂಗೆ ರಾಜಾಲಯಂ ೩೬

ವ॥ ಆಗಳ್ ನಾಭಿರಾಜಕಚ್ಛಮಹಾಕಚ್ಛಪ್ರಮುಖಪ್ರಭುಗಳ್ ನೆರೆದು ಜಾತಕರ್ಮೋತ್ಸವಮಂ ಮಾಡಿದ ತದನಂತರದೊಳ್,

ಭಾವಿಭರತೇಶಪದಮುಮಿ
ಳಾವಿಪುಳಪ್ರೇಮಭರಮುಮೆರ್ದೆಗೊಂಡಿರೆ ಸ
ದ್ಭಾವದಿನಿಟ್ಟುದು ಬಂಧುಜ
ನಾವಳಿ ಕೂಸಿಂಗೆ ಭರತನೆಂಬೀ ಪೆಸರಂ ೩೭

ತೋರಿದ ಹಾಗೆ ಪ್ರಕಾಶಿಸಿತು. ವ॥ ಆಗ ವೇಗವಾಗೋಡಿದ ಪರಿಜನರ ಪಾದಗಳ ತುಳಿತದಿಂದ ಭೂಮಿಯು ಅಲುಗಿತು. ಪ್ರತಿಯೊಂದು ಮನೆಯ ಮೇಲೆ ವಿಚಿತ್ರವಾದ ಧ್ವಜಗಳು ಹಾರಾಡುತ್ತಿದ್ದುವು. ವಿಸ್ತಾರವಾದ ಅಂಗಳಗಳು ಕಸ್ತೂರಿನೀರಿನಿಂದ ಸಿಕ್ತವಾದವು. ಪುಷ್ಪಗಳನ್ನು ಎರಚಿದ್ದರು. ಅವುಗಳ ಮೇಲೆ ದುಂಬಿಗಳು ಮನೋಹರವಾಗಿ ಝೇಂಕರಿಸುತ್ತಿದ್ದುವು. ರಾಜನಿಗೆ ವಿಜ್ಞಾಪಿಸಲು ತ್ವರೆಯಿಂದ ನಡೆಯುತ್ತಿರುವಾಗ ಕಂಚುಕಿಜನರು ಜಾರಿಬೀಳುತ್ತಿದ್ದರು. ಅಂತಃಪುರದ ಪರಿಜನರು ನಿರ್ದಯವಾಗಿ ತಳ್ಳುತ್ತಿರಲು ಅರಮನೆಯಲ್ಲಿರುವ ಗಿಡ್ಡ, ಕುಳ್ಳ ಮತ್ತು ನಪುಂಸಕರು ಬೀಳುತ್ತಿದ್ದರು. ಹೊಕ್ಕಳುಗಳವರೆಗೆ ಜೋತುಬಿದ್ದ ಸ್ತನಗಳಿಂದ ಜಾರಿಬಿದ್ದ ಸೆರಗು ಮತ್ತು ಉತ್ತರೀಯವುಳ್ಳ ವೃದ್ಧರಾದ ಧಾತ್ರೀಜನರ ಕುಣಿತಗಳನ್ನು ನೋಡಿ ಸೇರಿದ್ದ ಜನರು ಹಾಸ್ಯಮಾಡಿ ನಗುತ್ತಿದ್ದರು. ಮಂಗಳಗೀತಗಳಿಂದ ಮಿಶ್ರಿತವೂ, ಲಯಾನುಗತವೂ ಆದ ಲೀಲಾಲಾಸ್ಯಗಳನ್ನು ಮಾಡುತ್ತಿದ್ದ ಕಾಮಿನಿಯರಿಂದ ಅರಮನೆಯು ಕಮನೀಯವಾಯಿತು. ೩೬. ರಾಜಸಮೂಹದ ಸಂಚಾರದಿಂದಲೂ, ಸಾಮಂತರಾಜಸ್ತ್ರೀಯರ ಸಮ್ಮರ್ದದಿಂದಲೂ, ಉತ್ಸವಕ್ಕಾಗಿ ಕಟ್ಟಿದ ಪತಾಕೆಗಳ ಪ್ರಸಾರದಿಂದಲೂ, ರತ್ನಪೂರ್ಣವಾದ ವಂದನಮಾಲೆಗಳ ಕಾಂತಿಪ್ರಸರಣದಿಂದಲೂ, ಸಂತೋಷಾರ್ಥವಾಗಿ ಬಾರಿಸಲಾದ ನಗಾರಿಗಳ ಮಹತ್ತರವಾದ ಧ್ವನಿಗಳಿಂದಲೂ ಆ ರಾಜಾಲಯವು ಹೆಚ್ಚಾದ ಚೆಲ್ವಿಗೆ ಆಗರವಾಯಿತು. ವ॥ ಆಗ ನಾಭಿರಾಜನೂ, ಕಚ್ಛ, ಮಹಾಕಚ್ಛರೇ ಮೊದಲಾದ ಮುಖ್ಯ ಮಹಾರಾಜರೂ ಸೇರಿ ಜಾತಕರ್ಮವನ್ನು ನೆರವೇರಿಸಿದರು. ಬಳಿಕ ೩೭. ಮುಂದೆ ಒದಗಲಿರುವ ಭರತೇಶಪದವಿಯೂ ವಿಶ್ವವಿಖ್ಯಾತವಾದ ಪ್ರೇಮದ ಭರವೂ ಬಂಧುಜನರ ಹೃದಯವನ್ನು

ವ|| ಅಂತು ನಿಜದೇಹಪ್ರಭಾಪ್ರವಾಹಜಲಂಗಳೊಳಂ ಕರಚರಣತಳರಕ್ತಾಂಭೋರುಹಂಗಳೊಳಂ ಅತಿಮೃದುಳಬಾಹುಬಾಳಮೃಣಾಳಕಾಂಡಂಗಳೊಳಂ ರಾಜ್ಯಲಕ್ಷ್ಮೀಲೀಲಾಕರನಪ್ಪುದಂ ನನ್ನಿಮಾಡುತ್ತುಮಂತಃಪುರಕಾಂತಾಕರಪರಂಪರಾಸಂಚಾರರತ್ನದರ್ಪಣನುಂ ಬಂಧುಜನಕರಕಮಳವನವಿಹಾರಕೇಳೀಕಳಹಂಸನುಂ ಗುರುಜನನಯನೇಂದೀವರಾನಂದನಶರಚ್ಚಂದ್ರನುಮಾಗಿ,

ದರಹಸಿತಂ ಹಸಿತಂ ಸುಂ
ದರಮನ್ಮಥಲಸಿತ[1] ರುಚಿತರಂಗಿತ[2]ಮೆಂಬೀ
ಪರಿವಡಿಯ ಬಾಲಕೇಳಿಯೆ
ಕರಮೆ ಮರುಳ್ಚಿದುದು ತಾಯುಮಂ ತಂದೆಯುಮಂ ೩೮

ನುಡಿಯ ತೊದಳ್ ನಡೆಯ ತಳರ್
ಜಡೆಗಳ ಕೆಂಪ[3]ಲರ್ದ ಮೊಗದ ಕಿಱುನಗೆ ಕೆಂಪಂ
ಪಡೆದಧರಮಣಿಯ ಚೆಲ್ವದಿ
ಗಡಿಗೆಸೆದುದು ಬಾಳಭಾವದೊಳ್ ಪುರುಸುತನಾ ೩೯

ಸೂರೆಗೊಂಡಿತಾದುದರಿಂದ ಅವರೆಲ್ಲರೂ ಸದ್ಭಾವದಿಂದ ಆ ಮಗುವಿಗೆ ಭರತನೆಂದು ಹೆಸರಿಟ್ಟರು. ವ|| ಹಾಗೆ ಆ ಬಾಲಕನು ತನ್ನ ದೇಹಕಾಂತಿಪ್ರವಾಹವೆಂಬ ನೀರುಗಳಿಂದಲೂ, ಅಂಗೈ, ಅಂಗಾಲುಗಳೆಂಬ ಕೆಂದಾವರೆಗಳಿಂದಲೂ, ಅತಿಕೋಮಲವಾದ ತೋಳುಗಳೆಂಬ ತಾವರೆದಂಟುಗಳಿಂದಲೂ, ರಾಜಲಕ್ಷ್ಮೀಲೀಲೆಗೆ ತಾನು ತಾವರೆಗೊಳವಾಗಿರುವುದನ್ನು ಸತ್ಯಗೊಳಿಸಿ, ಅಂತಃಪುರಸ್ತ್ರೀಯರ ಕೈಗಳಿಂದ ಕೈಗಳಿಗೆ ಸಂಚರಿಸುವ ರತ್ನಗನ್ನಡಿಯಾಗಿಯೂ ಬಂಧುಜನರ ಕೈಗಳೆಂಬ ತಾವರೆವನದಲ್ಲಿ ವಿಹರಿಸಬಯಸುವ ಕಲಹಂಸನಾಗಿಯೂ ಗುರುಜನರ ಕಣ್ಣುಗಳೆಂಬ ಕನ್ನೈದಿಲೆಗಳಿಗೆ ಸಂತೋಷವನ್ನುಂಟುಮಾಡುವ ಶರತ್ಕಾಲದ ಚಂದ್ರನಾಗಿಯೂ ೩೮. ಮುಗುಳುನಗೆ, ನಗೆ, ಮನ್ಮನ ಲಪಿತ ಮತ್ತು ಕಾಲೋಚಿತ ರಂಗಿತಗಳು ಸುಂದರವೂ ಮನಸ್ಸಿಗೆ ಆಹ್ಲಾದಕರವೂ ಆಗಿದ್ದುವು. ಈ ಪರಿಯಿಂದೊಪ್ಪುವ ಆ ಕೂಸಿನ ಹುಡುಗಾಟವು ಅವನ ತಾಯಿತಂದೆಗಳನ್ನು ಬಹುವಾಗಿ ಸಂತೋಷಗೊಳಿಸಿತು. ೩೯. ವೃಷಭರಾಜಪುತ್ರನ ಬಾಲ್ಯದ ತೊದಲ್ನುಡಿಯೂ, ನಡಿಗೆಯ ಎಡಹೂ, ಜಡೆಗಳ ಕೆಂಪೂ ಅರಳಿದ ಮುಖದ ಕಿರುನಗೆಯೂ, ಕೆಂಪಾದ ತುಟಿಗಳೂ, ಬಾರಿಬಾರಿಗೂ

---

೧. 'ಮನ್ಮಥಲಸಿತ' (ಅನ್ಯತ್ರ) ಮನ್ಮನ = ಅವ್ಯಕ್ತವಾದ, ಲಪಿತ = ಮಾತು, ತೊದಲ್ನುಡಿ ನೋಡಿ: (ಪೂ. ಪು. ೧೫-೧೬೨)

೨. ರಂಗಿತ = ಮಗುವಿನ ಹರೆದಾಟ

೩. 'ಜಡೆಗಳ ಕರ್ಪು' ಎಂದು ಶುದ್ಧಪಾಠವಿರಬಹುದು. ಇಲ್ಲದಿದ್ದರೆ ಈ ಪದ್ಯದಲ್ಲಿಯೇ 'ಕೆಂಪು' ಎಂಬುದರ ಪುನರುಕ್ತಿ ಆಗುತ್ತದೆ. ತಲೆಗೂದಲು ಕಪ್ಪಾಗಿದ್ದಿತು ಎಂಬುದೇ ಉಚಿತವೂ ಹೌದು.

ಕೊರಲೊಳ್ ಶಾರ್ದೂಲನಖಾಂ
ಕುರಂಗಳುಂ ಹರಿನಖಾಂಕುರಂಗಳುಮಂದೇಂ
ಕರಮೆಸೆದಿರ್ದುವೊ ಶೌರ್ಯಾಂ
ಕುರಂಗಳೆಂಬಿನೆಗಮಾದಿದೇವಾತ್ಮಜನಾ ೪೦

ನುಡಿಯ ಪೊದೞ್ಕೆಯೊಳೊಳ್ನುಡಿ
ನುಡಿದಂ ನಿಜಸಕಳಚಕ್ರವರ್ತಿತ್ವಕ್ಕಂ
ದಡಿಯಿಡುವಂತೆ ನಿರಂತರ
ಮಡಿಯಿಟ್ಟಂ ಪದ್ಮರಾಗಕುಟ್ಟಿಮತಳದೊಳ್ ೪೧

ವ|| ಅಂತು ನಿಜಾನ್ವಯಲೀಲಾಲಲಾಮಂಗೆ ಲೋಕಯಾತ್ರಾಪ್ರವರ್ತನನಿಮಿತ್ತಮಾದಿಬ್ರಹ್ಮ ನನ್ನಪ್ರಾಶನಚೌಲೋಪನಯನಾದಿಕ್ರಿಯೆಗಳನನುಕ್ರಮದಿಂ ತಾನೆ ಮಾಡಿ ಸಹಪಾಂಸುಕ್ರೀಡಾನೇಕ ವಿಭ್ರಮಕ್ರೀಡಾರಸೋದಾರರಾಜದಾರಕಪರಿವೃತನಾಗಿ, ಮೃಗಮದಕರ್ದಮಸಂಪಾದಿತ ಮದಲೇಖಾ ಮಂಡಿತ ಗಂಡಸ್ಥಳನುಂ, ಕುಂಕುಮಪಾಂಸುಪಟಲಸಾಂದ್ರಸಿಂದೂರಿತಮಸ್ತಕಪಿಂಡನುಂ, ದಕ್ಷಿಣಕರಾಳಂಬಿತ ನಿಬಿಡನಿವೇಷ್ಟಿತಾಂಶುಕವಿಶಾಲಸ್ಥೂಲವೃತ್ತಹಸ್ತನುಂ, ಮದಾಂಧವಿಜಯಸಿಂದೂರೀಕೃತನುಂ, ದಶೈಕಾದಶ ವರ್ಷದೇಶೀಯನುಂ, ಅಂತಃಪುರದಾಸೇರಕನನೇಱೆ ಕಿಂಚಿದಾಕುಂಚಿತಾಗ್ರತರ್ಜನೀನಿಶಿತಾಂಕುಶನಂತಃ ಪುರಪ್ರಮದವನಪ್ರವಿಷ್ಟನಾಗಿ, ಕೃತಕಗಿರಿಶಿಖರಂಗಳಂ ಗಿರಿದುರ್ಗೋತ್ತುಂಗಶಿಖರಂಗಳೆಂದು ಪಾಯಿಸಿಯುಂ, ಅತಿನಿಬಿಡಬಾಳಕದಳೀಷಂಡಂಗಳಂ ವನದುರ್ಗಂಗಳೆಂದೆ ಪಡಲ್ವಡಿಸಿಯುಂ,

ಚೆಲ್ವನ್ನು ಪ್ರಕಾಶಗೊಳಿಸುತ್ತಿದ್ದುವು. ೪೦. ಆದಿದೇವಾತ್ಮಜನಾದ ಆ ಬಾಲಕನ ಕೊರಳಲ್ಲಿದ್ದ ಹುಲಿಯುಗುರುಗಳೂ, ಸಿಂಹದುಗುರುಗಳೂ ಆತನ ಶೌರ್ಯಾಂಕುರಗಳಂತೆ ವಿಶೇಷವಾಗಿ ಎಸೆದುವು. ೪೧. ಆ ಬಾಲಕನು ಭಾಷೆಗೆ ಹೊಂದಿಕೊಳ್ಳುವ ಒಳ್ನುಡಿಗಳನ್ನು ನುಡಿದನು. ಚಕ್ರವರ್ತಿತ್ವದ ಪದವಿಯನ್ನು ಪಡೆಯಲು ಅಡಿಗಳನ್ನಿಡುವಂತೆಯೆ ಪದ್ಮರಾಗಮಣಿಗಳಿಂದ ಖಚಿತವಾದ ಭೂಮಿಯ ಮೇಲೆ ಅಡಿಗಳನ್ನಿಟ್ಟನು. ವ|| ಹಾಗೆ ಸ್ವವಂಶದ ಕರ್ತವ್ಯಗಳನ್ನು ನಿರ್ವಹಿಸಲು ಸಮರ್ಥನಾದ ಆ ಬಾಲಕನಿಗೆ ಲೋಕಯಾತ್ರೆಯ ನಿರ್ವಹಣೆಗಾಗಿ ಆದಿಬ್ರಹ್ಮನಾದ ವೃಷಭದೇವನು ಅನ್ನಪ್ರಾಶನ, ಚೌಲ, ಉಪನಯನ ಮೊದಲಾದ ಕ್ರಿಯೆಗಳನ್ನು ಅನುಕ್ರಮವಾಗಿ ತಾನೇ ಸ್ವತಃ ಮಾಡಿದನು. ಆಗ ಪಾಂಸುಕ್ರೀಡೆಯಲ್ಲಿ ಒಡನಾಡಿಗಳಾಗಿದ್ದು ಪರಾಕ್ರಮ ಪ್ರದರ್ಶನ ಕಾರ್ಯಗಳಲ್ಲಿ ಕುತೂಹಲಿಗಳಾದ ರಾಜಪುತ್ರರೊಡನೆ ಸಂಗತನಾದನು. ಕಸ್ತೂರಿಯಿಂದ ನಿರ್ಮಿತವಾದ ಮದಲೇಖೆಯಿಂದ ಅಲಂಕೃತವಾದ ಗಂಡಸ್ಥಳವುಳ್ಳವನಾಗಿಯೂ ಕುಂಕುಮಧೂಳಿಯೆಂಬ ಸಿಂಧೂರದಿಂದ ಯುಕ್ತವಾದ ತಲೆಯುಳ್ಳವನಾಗಿಯೂ ಕುಂಕುಮಧೂಳಿಯೆಂಬ ಸಿಂಧೂರದಿಂದ ಯುಕ್ತವಾದ ತಲೆಯುಳ್ಳವನಾಗಿಯೂ ಬಲಗೈಯಿಂದ ಸಾಂದ್ರವಾಗಿ ಸುತ್ತಲ್ಪಟ್ಟ ವಸ್ತ್ರದಿಂದ ವಿಶಾಲವಾಗಿ ದಪ್ಪವಾಗಿ ಗುಂಡಾಗಿರುವ ಕೈಯೆಂಬ ಸೊಂಡಿಲುಳ್ಳವನಾಗಿಯೂ ಮತ್ತವಿಜಯಗಜದ ವೇಷವನ್ನು ಧರಿಸಿದವನಾಗಿಯೂ ಇರುವ ಹತ್ತು ಹನ್ನೊಂದು ವಯಸ್ಸಿನ ಅಂತಃಪುರದ ದಾಸಿಯ ಮಗನನ್ನೇರಿಕೊಂಡು ಸ್ವಲ್ಪ ಬಗ್ಗಿಸಿದ ತೋರುಬೆರಳಿನ ತುದಿಯೆಂಬ ಹರಿತವಾದ

**ಶತಸಹಸ್ರಮುಖಾವಹಜಾಸುದಪ್ನದೀರ್ಘಿಕಾಂಭಃಕುಲ್ಯಾಪ್ರವಾಹಂಗಳಂ ಜಲದುರ್ಗಂಗಳೆಂದೆ ನೂಂಕಿ ಕದಡಿಸಿಯುಂ, ಲೀಲಾಕಮಲಾಕರಾನೀಕ ರಕ್ತಕಮಳಂಗಳನಾಸ್ಯಾನುಶೋಣಿತಶೋಣರಿಪುನೃಪಶಿರಂಗಳೆಂದೆ ತುಳಿಯಿಸಿಯುಂ, ಉದ್ದಂಡಪುಂಡರೀಕಂಗಳಂ ಶ್ವೇತಾತಪತ್ರಂಗಳೆಂದೇ ಮಾಡಿ ಪಿಡಿಸಿಯುಂ, ಅಭಿನವೋದ್ಧೃತ್ತ ಧೌತಶಂಖಶಶಾಂಕವಿಶದಜಳಾರ್ದ್ರಜಳಕುಸುಮಂಗಳಂ ಸಾರ್ವಭೌಮೋಚಿತದ್ವಾತ್ರಿಂಶಚ್ಚಾರುಚಾಮರಂಗಳಂ ಮಾಡಿ ಪಿಡಿಸಿಯುಂ, ಸಮುಲ್ಲಸದಶೋಕಪಲ್ಲವಂಗಳನನೇಕವಿಜಯ ವೈಜಯಂತಿಗಳೆಂದೇ ಮಾಡಿಸಿ ಕೊಂಡೆತ್ತಿಯುಂ, ವಂದಿಬಾಳಕವೃಂದಜಯಜಯಾನಂದ ಕೋಳಾಹಳಮೆಸೆಯೆ ಲತಾಗೃಹಮೆಂಬ ರಾಜಗೃಹಕ್ಕೆ ವಂದು,**

ವಿವಿಧ ಕಳಿಂಗವಂಗಖಶಘೂರ್ಜರಮಾಳವಚೋಳಪಾಂಡ್ಯಪ
ಲ್ಲವನೃಪಮಂಡಲಂಗಳೊಳಿವಂಗಿವು ಜೀವಿತಮೆಂದು ಕೊಟ್ಟು ಪೊ
ಣ್ಮುವ ನಿಜವಿಕ್ರಮೈಕರಸಮಂ ಶಿಶುಭಾವದೊಳಂ ನಿರಂತರಂ
ಭುವನಜನಕ್ಕೆ ಸೂಚಿಸಿದನೀ ತೆರದಿಂ ಪುರುದೇವನಂದನಂ ೪೨

**ವ|| ಅಂತು ನಿಖಿಳಜಗದಾಶ್ಚರ್ಯಶೌರ್ಯರಸಬಹುಳಬಾಲಕ್ರೀಡಾಚಮತ್ಕಾರಿತವೀರಚಕ್ರನುಂ ನಿಜೋದಯಾನಂದಿತಜಗಚ್ಚಕ್ರನುಮಾಗಿ ಯೌವನಪ್ರಾಪ್ತನಾಗೆ,**

ಅಂಕುಶದಿಂದ ಕೂಡಿ ಉದ್ಯಾನವನವನ್ನು ಪ್ರವೇಶಿಸಿದನು. ಕೃತ್ರಿಮಗಳಾದ ಬೆಟ್ಟಗಳ ಶಿಖರಗಳನ್ನು ಗಿರಿದುರ್ಗಗಳಲ್ಲಿನ ಎತ್ತರವಾದ ಶಿಖರಗಳನ್ನಾಗಿ ಭಾವಿಸಿ (ವೇಷದ ಆನೆಯನ್ನು) ನುಗ್ಗಿಸಿದನು. ಒತ್ತಾಗಿ ಬೆಳೆದ ಬಾಳೆಗಿಡಗಳ ಗುಂಪನ್ನು ವನದುರ್ಗಗಳೆಂದು ಭಾವಿಸಿ ಕೆಡಹಿಸಿದನು. ಅನೇಕಮುಖವಾಗಿ ಹರಿಯುತ್ತಿರುವ ಮೊಳಕಾಲವರೆಗೆ ನೀರುಳ್ಳ ದೀರ್ಘಿಕೆಯ ಕಾಲುವೆಗಳ ಪ್ರವಾಹವನ್ನು ಜಲದುರ್ಗಗಳೆಂದು ಭಾವಿಸಿ ನೂಕಿ ಕಲುಷಿತ ಮಾಡಿಸಿದನು. ಕ್ರೀಡಾರ್ಥವಾದ ಕೊಳಗಳಲ್ಲಿನ ಕೆಂದಾವರೆಗಳನ್ನು ಮುಖಾನುರಕ್ತವಾದ ಶತ್ರುರಾಜರ ತಲೆಗಳೆಂದು ಭಾವಿಸಿ ತುಳಿಯಿಸಿದನು. ಉದ್ದವಾದ ನಾಳಗಳಿರುವ ಬಿಳಿಕಮಲಗಳನ್ನು ಶ್ವೇತಚ್ಛತ್ರಗಳೆಂದು ಭಾವಿಸಿ ಹಿಡಿಯಿಸಿದನು. ಹೊಸದಾದ ಶಂಖಚಂದ್ರದಂತೆ ಬಿಳುಪೂ ಸ್ವಚ್ಛವೂ ಆದ ನೀರಿನಿಂದ ತೊಯ್ದ ಜಲಕುಸುಮಗಳನ್ನು ಚಕ್ರವರ್ತಿಯೋಗ್ಯವಾದ ಮೂವತ್ತೆರಡು ಸುಂದರ ಚಾಮರಗಳನ್ನಾಗಿ ಭಾವಿಸಿ ಬೀಸಿಸಿದನು. ಪ್ರಕಾಶಿತವಾದ ಅಶೋಕದ ಚಿಗುರುಗಳನ್ನು ವಿಜಯ ಪತಾಕೆಗಳೆಂದು ಭಾವಿಸಿ ಎತ್ತಿ ಹಿಡಿಯಿಸಿದನು. ಹೀಗೆ ವಂದಿಮಾಗಧರ ಮಕ್ಕಳುಗಳ ಜಯಕಾರ ಕೋಲಾಹಲಗಳಿಂದ ಮೆರೆಯುತ್ತಿರಲು ಲತಾಗೃಹವೆಂಬ ರಾಜಗೃಹಕ್ಕೆ ಬಂದು, ೪೨. ಕಳಿಂಗ, ವಂಗ, ಖಶ, ಗೂರ್ಜರ, ಮಾಳವ, ಚೋಳ, ಪಾಂಡ್ಯ, ಪಲ್ಲವ ಮುಂತಾದ ರಾಜವರ್ಗದಲ್ಲಿನ ಪ್ರತಿಯೊಬ್ಬ ರಾಜನ ಜೀವನನಿರ್ವಹಣೆಗೆ ಇಂತಿಷ್ಟೆಂದು ಗೊತ್ತುಪಡಿಸುವುದರ ಮೂಲಕ ಆ ಪುರುದೇವನ ಪುತ್ರನು ತನ್ನ ಶಿಶುಭಾವದಲ್ಲಿಯೇ ತನ್ನ ವಿಕ್ರಮೈಕರಸತ್ವವನ್ನು ಭುವನಜನಕ್ಕೆಲ್ಲ ತೋರ್ಪಡಿಸಿಕೊಂಡನು. ವ|| ಸಮಸ್ತ ಜಗತ್ತಿಗೂ ಆಶ್ಚರ್ಯಕರವೆನಿಸಿದ ಶೌರ್ಯರಸಪ್ರಧಾನವಾದ ತನ್ನ ಬಾಲಕ್ರೀಡೆಗಳಿಂದ ಸಮಸ್ತ ವೀರರನ್ನೂ ಆಶ್ಚರ್ಯನಿಪೀಡಿತರನ್ನಾಗಿಯೂ, ತನ್ನ ಉನ್ನತಿಯಿಂದ ಸಮಸ್ತ ಜಗನ್ಮಂಡಲವನ್ನೂ

ತಂದೆಯ ರೂಪೆ ತಂದೆಯ ವಿಳಾಸಮೆ ತಂದೆಯ ಚೆಲ್ವೆ ತಂದೆಯೊಂ
ದಂದಮೆ ತಂದೆಯೊಂದು ನುಡಿಯೋಜೆಯೆ ತನ್ನೊಳಮರ್ಕೆವೆತ್ತುದಾ
ನಂದಕರಂ ಕರಂ ಸೊಗಯಿಸುತ್ತಿರೆ ಶೋಭಿಸಿದಂ ಕುಮಾರನಾ
ನಂದಿತರೂಪನಂದೆಸೆಯೆ ತಂದೆಯೊಳಚ್ಚಿನೊಳೊತ್ತಿದಂತೆವೋಲ್ ೪೩

ವಿಪುಳಯಶಃಪಿಂಡಂ ಪು
ಣ್ಯಪುಂಜಮಾ ಕ್ಷತ್ರಧಾಮಧಾಮಂ ತಾನಾ
ನೃಪಸುತನೆನ್ನದೆ ಪೆಱತೊಂ
ದು ಪಾಂಗಿನೊಳ್ ನೆಗಳ್ದ ಭರತನಂ ಬಣ್ಣಿಪರಾರ್ ೪೪

ವ॥ ಮತ್ತಮಾ ಕುಮಾರನಿಂ ನೇರ್ಗಿಱಿಯನಾಗಿ ಮುನ್ನ ಪೇೞ್ದ ಪುರೋಹಿತನಾನಂದನುಂ ದಿವಾಕರನುಂ ಅಧೋಗ್ರೈವೇಯಕಾಹಮಿಂದ್ರನುಂ ಮಹಾಪೀಠನುಮಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದ ಅಹಮಿಂದ್ರಂ ಬಂದು ವೃಷಭಸೇನನೆಂಬೊಂ ತನಯನಾದಂ; ಶ್ರೇಷ್ಠಿಧನಮಿತ್ರನುಂ ಅಧೋಗ್ರೈವೇಯಕಾಹಮಿಂದ್ರನುಂ ಮಹಾಪೀಠನುಮಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರನುಂ ಬಂದುಮನಂತವಿಜಯನೆಂಬ ತನೂಜನಾದಂ; ಶಾರ್ದೂಲಾರ್ಯನುಂ ಚಿತ್ರಾಂಗದದೇವನುಂ ವರದತ್ತನೃಪನುಮಚ್ಯುತಸಾಮಾನಿಕನುಂ ವಿಜಯನೃಪನುಮಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದನಂತವೀರ್ಯನೆಂಬಂ ತನೂಭವನಾದಂ; ವರಾಹಾರ್ಯನುಂ ಮಣಿಕುಂಡಲಾಮರನುಂ ವರಸೇನಭೂಮಿಪನುಮಚ್ಯುತಸಾಮಾನಿಕನುಂ ವೈಜಯಂತಭೂಪನುಮಾಗಿ ಸರ್ವಾರ್ಥಸಿದ್ಧಿಯೊಳಹ

ಆನಂದಿತರನ್ನಾಗಿಯೂ ಮಾಡಿ ಯೌವನವನ್ನು ಪಡೆದನು. ೪೩. ಆ ಪುರುದೇವನಂದನನಲ್ಲಿ ಅಪನ ತಂದೆಯ ರೂಪೂ, ವಿಲಾಸವೂ, ಚಲ್ವೂ, ಅಂದವೂ, ಮಾತುಗಳ ಗಾಂಭೀರ್ಯವೂ ಸೇರಿಕೊಂಡವು. ಹೀಗೆ ಕುಮಾರನು ಅತಿಯಾಗಿ ಶೋಭಿಸುತ್ತಾ ತಂದೆಯ ಅಚ್ಚಿನಂತೆ ಆನಂದಿತರೂಪನಾಗಿ ಎಸೆಯುತ್ತಾ ತಂದೆಯಂತೆ ಕಂಗೊಳಿಸಿದನು. ೪೪. ನೃಪಸುತನಾದ ಭರತನು ವಿಪುಲವಾದ ಯಶಸ್ಸಿನ ಉಂಡೆ, ಅವನು ಪುಣ್ಯದ ರಾಶಿ, ಕ್ಷತ್ರಶಕ್ತಿಗೆ ಆಶ್ರಯ. ಹೀಗಲ್ಲದೆ ಬೇರೊಂದು ರೀತಿಯಿಂದ ಭರತನನ್ನು ಯಾರು ತಾನೆ ವರ್ಣಿಸಬಲ್ಲರು? ವ॥ ಮತ್ತೆ ಆ ಕುಮಾರನಿಗಿಂತ ಕಿರಿಯನಾಗಿ, ಈ ಹಿಂದೆಯೇ ಹೇಳಲಾದ ಪುರೋಹಿತನಾದ ಆನಂದನೂ, ಅಧೋಗ್ರೈವೇಯಕದ ಅಹಮಿಂದ್ರನೂ, ಪೀಠನೂ ಆಗಿ ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿದ ಅಹಮಿಂದ್ರನು ಬಂದು ವೃಷಭಸೇನನೆಂಬ ಹೆಸರಿನಿಂದ ವೃಷಭದೇವ ಯಶಸ್ವತಿಯರಿಗೆ ಮಗನಾಗಿ ಜನಿಸಿದನು. ಶೆಟ್ಟಿಯೆನಿಸಿದ ಧನಮಿತ್ರನೂ ಅಧೋಗ್ರೈವೇಯಕದ ಅಹಮಿಂದ್ರನೂ ಮಹಾಪೀಠನೂ ಆಗಿ ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿದ ಅಹಮಿಂದ್ರನು ಬಂದು ಅನಂತವಿಜಯನೆಂಬ ಪುತ್ರನಾಗಿ ಹುಟ್ಟಿದನು. ಶಾರ್ದೂಲಾರ್ಯನೂ ಚಿತ್ರಾಂಗದೇವನೂ, ವರದತ್ತನೃಪನೂ, ಅಚ್ಯುತಸಾಮಾನಿಕನೂ ವಿಜಯನೃಪನೂ ಆಗಿ ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿದ ಅಹಮಿಂದ್ರನು ಬಂದು (ವೃಷಭದೇವನಿಗೆ) ಅನಂತವೀರ್ಯನೆಂಬ ಮಗನಾದನು. ವರಾಹಾರ್ಯನೂ ಮಣಿಕುಂಡಲಾಮರನೂ ವರಸೇನಭೂಮಿಪನೂ

ಮಿಂದ್ರನಾಗಿ ಪುಟ್ಟಿದ ದಿವಿಜೇಂದ್ರಂ ಬಂದುಚ್ಯುತನೆಂಬನಾತ್ಮಜನಾದಂ; ವಾನರಾರ್ಯನುಂ ಮನೋಹರದಿವಿಜನುಂ ಚಿತ್ರಾಂಗದಾವನಿಪನುಂ ಅಚ್ಯುತಸಾಮಾನಿಕಾಮರನುಂ ಮಹೀಪಾಳನುಮಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದು ವೀರನೆಂಬೋನಾತ್ಮಭವನಾದಂ; ನಕುಳಾರ್ಯನುಂ ಮನೋರಥದಿವ್ಯನುಂ ಶಾಂತಮದನಮಹೀನಾಥನುಮಚ್ಯುತಸಾಮಾನಿಕನುಮಪರಾಜಿತನೃಪನುಮಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದು ಸುವೀರನೆಂಬೊಂ ನಂದನನಾದಂ ; ಇಂತು ಭರತಕುಮಾರಂಬೆರಸು ಏೞ್ವರ್ ಕುಮಾರರಾದಿಯಾಗಿ ನೂರ್ವರ್ ಕುಮಾರರುಮನನಿಬರಿಂ ಕಿಱಿಯಳ್ ಬ್ರಾಹ್ಮಿಯೆಂಬ ಮಗಳಂ ಪಡೆದು,

ಫಳಲಲಿತಂ ವಿನೂತಕಳಿಕಾಕಳಿತಂ ಕಡುರಮ್ಯಮಾಯ್ತು ಕೋ
ಮಳಲತೆಯೆಂಬಿನಂ ಚರಮದೇಹಶತಾತ್ಮಜರಿಂದಮಾ ಮಹೋ
ತ್ಪಳಮುಖಿಯಿಂದಮಾ ಸತಿ ಯಶಸ್ವತಿ ವಿಶ್ವಮಹೀತಳಂ ಗುಣಂ
ಗೊಳೆ ಪಡೆದಳ್ ತದಗ್ರಮಹಿಷೀಪದದೊಳ್ ಪಿರಿದೊಂದು ಮೆಯ್ಮೆಯಂ ೪೫

ವ|| ಮುನ್ನ ಪೇೞ್ದ ವಜ್ರಜಂಘನ ಸೇನಾನಾಯಕನಕಂಪನನುಮಧೋಗ್ರೈವೇಯಕಾಹಮಿಂದ್ರನುಂ ಮಹಾಬಾಹುಮಹೀಪತಿಯುಮಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದು ಸುನಂದಾ ಮಹಾದೇವಿಯ ಗರ್ಭದೊಳ್ ಅವತರಿಸೆ,

ಅಚ್ಯುತಸಾಮಾನಿಕದೇವನೂ ವೈಜಯಂತಭೂಪನೂ ಆಗಿ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾಗಿ ಹುಟ್ಟಿದ ದಿವಿಜೇಂದ್ರನು ಬಂದು ಅಚ್ಯುತನೆಂಬ ಮಗನಾದನು. ವಾನರಾರ್ಯನೂ, ಮನೋಹರದಿವಿಜನೂ, ಚಿತ್ರಾಂಗದಾವನಿಪನೂ, ಅಚ್ಯುತ ಸಾಮಾನಿಕಾಮರನೂ, ಜಯಂತಮಹೀಪಾಲನೂ ಆಗಿ ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿದ ಅಹಮಿಂದ್ರನು ಬಂದು ವೀರನೆಂಬ ಪುತ್ರನಾದನು. ನಕುಲಾರ್ಯನೂ ಮನೋರಥ ದಿವ್ಯನೂ, ಶಾಂತಮದನ ಮಹೀನಾಥನೂ, ಅಚ್ಯುತಸಾಮಾನಿಕನೂ, ಅಪರಾಜಿತನೃಪನೂ ಆಗಿ ಸರ್ವಾರ್ಥಸಿದ್ಧಿಯಲ್ಲಿ ಜನಿಸಿದ ಅಹಮಿಂದ್ರನು ಬಂದು ಸುವೀರನೆಂಬ ಮಗನಾದನು. ಹೀಗೆ ಭರತನೂ ಕೂಡಿ ಏಳು ಜನ ಕುಮಾರಕರೇ ಆದಿಯಾಗಿ ನೂರು ಜನ ಕುಮಾರರು ಹುಟ್ಟಿದರು. ಅಲ್ಲದೆ ವೃಷಭದೇವನು ಅವರೆಲ್ಲರಿಗಿಂತ ಕಿರಿಯಳಾದ ಬ್ರಾಹ್ಮಿಯೆಂಬ ಮಗಳನ್ನು ಪಡೆದನು. ೪೫. ಫಲಗಳಿಂದಲೂ, ಹೊಸ ಮೊಗ್ಗುಗಳಿಂದಲೂ ಕೋಮಲವಾದ ಬಳ್ಳಿಯು ರಮ್ಯವಾಯಿತು ಎಂಬಂತೆ ಚರಮದೇಹದ ನೂರು ಮಕ್ಕಳಿಂದಲೂ ಕಮಲಮುಖಿಯಾದ ಬ್ರಾಹ್ಮಿಯಿಂದಲೂ ಕೂಡಿ ಸತಿಯಾದ ಯಶಸ್ವತಿಯು ಪ್ರಸಿದ್ಧಿಗೊಂಡು ಜ್ಯೇಷ್ಠರಾಣೀಪದ ಪ್ರಯುಕ್ತವಾದ ಮಹಿಮೆಯನ್ನು ಪಡೆದಳು. ಇದರಿಂದ ಸಮಸ್ತ ಭೂಮಂಡಲಕ್ಕೂ ಗುಣವುಂಟಾಯಿತು. ವ|| ಪೂರ್ವೋಕ್ತನಾದ ವಜ್ರಜಂಘನ ಸೇನಾನಾಯಕನಾದ ಅಕಂಪನನೂ ಅಧೋಗ್ರೈವೇಯಕದ ಅಹಮಿಂದ್ರನೂ ಆಗಿ ಮಹಾಬಾಹು ಮಹಾರಾಜನಾಗಿ ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿದ ಅಹಮಿಂದ್ರನು ಬಂದು (ವೃಷಭದೇವನ ಇನ್ನೊಬ್ಬ ಪತ್ನಿಯಾದ) ಸುನಂದಾದೇವಿಯ ಗರ್ಭದಲ್ಲಿ ನೆಲೆಸಿದನು.

ತನುವಳಿರೇಖೆಗಳ್ ಕಿಡಿಯುಮೆಟ್ಟ ಬೆಡಂಗಿನದೊಂದು ರೇಖೆಯಂ
ತನಗೆಡೆಮಾಡಿ ಪೊಂಗೆ ನಡು ಬಂದುದಯಂಗೆಯಲಿರ್ದ ಪೂರ್ಣಚಂ
ದ್ರನನೊಳಕೊಂಡು ಬೆಳ್ಪೆಸೆವ ವಾಸವದಿಗ್ವನಿತಾನನಂಬೊಲಾ
ನನರುಚಿ ಚೆಲ್ವನೇಂ ನೆಱೆಯೆ ತಾಳ್ದಿದುದೋ ಬಿಸಕಾಂಡಪಾಂಡುರಂ ೪೬

ಒದವಿದ ಕರ್ಪನೆಯ್ದೆ ಪರಿವೃತ್ತಪಯೋಧರಚೂಚುಕಕ್ಕೆ ಮಾ
ಡದೆ ವಳಿಭಂಗಮಂ ಕಳಿಯೆ ತೋರ್ಪುದನಂತೆ ತನೂದರಕ್ಕೆ ಮಾ
ಡದೆ ಕಡುವೆಳ್ಪುಮಂ ನಿಮಿರ್ದ ಸುಯ್ಯುಮನಾನನಪಂಕಜಕ್ಕೆ ಮಾ
ಡದೆ ಬಳೆದೊಂದು ಗರ್ಭಮ ಮನಂದರಲಾರ್ತುದು ಮಂದಯಾನೆಯಾ ೪೭

ವ॥ ಅಂತು ಗರ್ಭಂ ಬಳೆಯೆ,

ದಿಗಿಭನಿಭಂಗಳಪ್ಪ ಸಮರದ್ವಿರದಂಗಳ ಯುದ್ಧಕೇಳಿಯಂ
ಬಗೆಗೊಳೆ ನೋಡಲುಂ ನೆಗಟ್ದ ಮಲ್ಲರುಮಂ ಪಿಡಿದೊತ್ತಿ ಗೆಲ್ದ ಜೆ
ಟ್ಟಿಗರನೆ ಸಂದ ಮಲ್ಲರನೆ ಪೋರಿಸಲುಂ ಪಿರಿದೊಂದು ದೋಹಳಂ
ನೆಗಟ್ದುದು ಗರ್ಭದರ್ಭಕನ ದೋರ್ಬಲಗರ್ವಮನಂದು ಪೇೞ್ವವೋಲ್ ೪೮

ವ॥ ಅಂತು ಗರ್ಭದೋಹಳಂ ನೆಗೞೆ,

ಜನನೀಗರ್ಭಾವತಾರೋತ್ಸವಮುದಿತಸುರಾನೀಕಮುದ್ವೃತ್ತವಿಶ್ವಾ
ವನಿಭೃದ್ಬಾಹಾಬಳೋನ್ಮೂಲನಪಟುತರದೋರ್ವಿಕ್ರಮಂ ದೇವತೂರ್ಯ
ಧ್ವನಿಮಿಶ್ರಾತೋದ್ಯನೃತ್ಯಂ ಮನುನೃಪತಿಕುಲಶ್ರೀಯಶಶ್ರೀಜಯಶ್ರೀ
ವನಿತೌಘಂ ಪುಣ್ಯಪುಂಜೋದಯನುದಯಿಸಿದಂ ವಂಶಲಕ್ಷ್ಮೀಲಲಾಮಂ ೪೯

ಅ॥ ೪೬. ನಡುವಿನಲ್ಲಿ ಗರ್ಭಧಾರಣಪ್ರಯುಕ್ತವಾಗಿ ತ್ರಿವಳಿರೇಖೆಗಳು ಅಳಿಸಿಹೋದುವು. ನಡುವಿನಲ್ಲಿ ಬೆಡಗಿನ ರೇಖೆಯೊಂದು (ರೋಮಾವಳಿ) ಹುಟ್ಟಿಕೊಂಡು ಬಂದಿತು. ಉದಯಿಸಲಿರುವ ಪೂರ್ಣಚಂದ್ರನನ್ನೊಳಗೊಂಡು ಬೆಳ್ಳಗೆ ಬೆಳಗುವ ಪೂರ್ವದಿಗಂಗನೆಯ ಮುಖದಂತೆ ತಾವರೆದಂಟಿನಂತೆ ಬಿಳುಪಾದ ಸುನಂದೆಯ ಮುಖಕಾಂತಿಯು ಅದೆಷ್ಟು ಅಂದವನ್ನು ಪಡೆಯಿತೋ! ೪೭. ಮಂದಗಮನೆಯಾದ ಸುನಂದಾದೇವಿಯ ಗರ್ಭವು ಮನೋಹರವಾಗಿ ಬೆಳೆಯಿತು. ಅದು ಅವಳ ದುಂಡನೆಯ ಸ್ತನಗಳ ತೊಟ್ಟಿಗೆ ಕಪ್ಪನ್ನು ಮಾಡದಿದ್ದೀತೇ? ತ್ರಿವಳಿಗೆ ಭಂಗವನ್ನು ತರದೆ ಇದ್ದೀತೆ? ಕೃಶೋದರವು ಎದ್ದುಕಾಣುವಂತೆ ಮಾಡದೆ? ಮುಖಕಮಲಕ್ಕೆ ಬಿಳುಪನ್ನೂ ನಿಟ್ಟುಸಿರನ್ನೂ ತಾರದೆ ಇದ್ದೀತೆ? ವ॥ ಹಾಗೆ ಗರ್ಭವು ಬಳೆಯಲು, ೪೮. ದಿಗ್ಗಜಗಳಿಗೆ ಸಮನಾದ ಮದ್ದಾನೆಗಳ ಯುದ್ಧಕೇಳಿಗಳನ್ನು ನೋಡಲು ಆ ಗರ್ಭಿಣಿಗೆ ಮನಸ್ಸುಂಟಾಯಿತು. ಪ್ರಸಿದ್ಧರಾದ ಜಟ್ಟಿಗಳನ್ನೂ ಹಿಡಿದು ಹಿಸುಕಿ ಗೆದ್ದ ಜಟ್ಟಿಗಳೊಡನೆ ಜಟ್ಟಿಗಳು ಕಾಳಗ ನಡೆಸುವುದನ್ನೂ ನೋಡಲು ಬಯಕೆಯಾಯಿತು. ಈ ಬಯಕೆಗಳು ಗರ್ಭಸ್ಥಿತನಾದ ಆ ಮಗುವಿನ ತೋಳ್ಬಲದ ಗರ್ವವನ್ನು ಹೇಳುತ್ತಿರುವಂತೆ ತೋರಿತು. ವ॥ ಹೀಗೆ ಗರ್ಭದ ಬಯಕೆಗಳುಂಟಾಗಲು, ೪೯. ವಂಶಲಕ್ಷ್ಮಿಗೆ ತಿಲಕಪ್ರಾಯನೂ, ಶ್ರೀಲಕ್ಷ್ಮಿ, ಕೀರ್ತಿಲಕ್ಷ್ಮಿ ಮತ್ತು ಜಯಲಕ್ಷ್ಮಿಗಳಿಂದ ಸಮೇತನೂ ಆದ ಮನುಕುಲಶ್ರೇಷ್ಠನು (ಬಾಹುಬಲಿ) ಪುಣ್ಯರಾಶಿಯೇ ಹುಟ್ಟಿದಂತೆ

ವ|| ಆ ಬಾಳಕನ ಜನ್ಮೋತ್ಸವದೊಳ್,

ವಾರವಿಲಾಸಿನೀಲಟಹನರ್ತನಚಂಚಳಕಾಂಚಿದಾಮಮಂ
ಜೀರಕಕಿಂಕಿಣೀರಣಿತದಿಂ ವಿಕಸತ್ಕುಸುಮೋಪಹಾರವಿ
ಸ್ತಾರದಿನಂದದೇಂ ಸೊಗಯಿಸಿರ್ದುದೊ ತತ್ಪುರಮುತ್ಪತಾಕಮು
ತ್ತೋರಣಮುದ್ವಿಳಾಸರಸಮುತ್ಪಟಹಸ್ವನಮುತ್ಸವಾನಕಂ ೫೦

ವ|| ಅಂತು ಜನ್ಮೋತ್ಸವಾನಂತರಮಾ ಬಾಳಕಂಗೆ ಬಾಹುಬಲಿಯೆಂಬನ್ವರ್ಥಾಭಿಧಾನ ಮನಿಟ್ಟಾತನ ಲಲಿತೋತ್ತಾನಶಯಿತದರಹಸಿತತರಂಗಿತಗತಿಸ್ಖಲಿತಮುಗ್ಧಜಲ್ಪಿತಾದಿ ಬಾಲ್ಯವಿಳಾಸಂಗಳಿಂದಂ ಕರಿಕರೋದ್ಧೂತಧೂಳೀವಿಳಾಸಪಾಂಸುಕೇಳಿಯಿಂದಂ ಮಲ್ಲಮೇಷೋದ್ಧತರಾಜದಾರಕನಿಯುದ್ಧದಿಂದ ಮಾನಂದಿತಹೃದಯನಾಗಿ ನಾಭಿರಾಜಾನಂದನನಂದನನಿರ್ಪಣ್ಣೆಗಂ ಯೌವನಪ್ರವೇಶಸಮಯದೊಳ್,

ದಳಿತಾಂಭೋಜಾಸ್ಯನಿಂದೀವರದಳನಯನಂ ಪಕ್ವಬಿಂಬಾಧರಂ ಕೋ
ಮಳವಂಶಶ್ಯಾಮನಂಭೋಧರರವನಳಿನೀಕುಂತಳಂ ವ್ಯೂಢವಕ್ಷ
ಸ್ಸ್ಥಳನಾಜಾನುಪ್ರಲಂಬಪ್ರಬಲಭುಜಯುಗಂ ಚಾರುವೃತ್ತೋರುಯುಗ್ಮಂ
ಕುಳಶೈಲೇಂದ್ರೋನ್ನತಂ ಬಾಹುಬಲಿ ಸಕಲಸೌಂದರ್ಯಸಂಪನ್ನನಾದಂ ೫೧

ಹುಟ್ಟಿದನು. ಅವನ ಜನನೀಗರ್ಭಾವತಾರದ ಉತ್ಸವದಿಂದ ಸುರಸಮೂಹವು ಸಂತೋಷಗೊಂಡಿತ್ತು. ಕೊಬ್ಬಿದ ಸಮಸ್ತ ರಾಜರ ತೋಳ್ಬಲಗಳನ್ನು ನಿರ್ಮೂಲನಗೊಳಿಸಲು ಅವನ ಪರಾಕ್ರಮ ಅತ್ಯಂತ ಸಮರ್ಥವಾಗಿತ್ತು. ದೇವನಗಾರಿಗಳ ಧ್ವನಿಗಳಿಂದ ಮಿಶ್ರಿತವಾದ ಆತೋದ್ಯನೃತ್ಯವು ಜನ್ಮಕಾಲದಲ್ಲುಂಟಾಯಿತು. ವ|| ಆ ಬಾಲಕನ ಜನ್ಮೋತ್ಸವದಲ್ಲಿ ೫೦. ಎತ್ತಿಕಟ್ಟಿದ ತೋರಣಗಳಿಂದಲೂ, ಪತಾಕೆಗಳಿಂದಲೂ, ವಿಜೃಂಭಿತವಾದ ವಿಲಾಸರಸಗಳಿಂದಲೂ, ಮೃದಂಗಗಳ ಶಬ್ದಗಳಿಂದಲೂ ಯುಕ್ತವಾದ ಆ ಪಟ್ಟಣವು ಗಣಿಕೆಯರ ಸುಂದರ ನೃತ್ಯಗಳಿಂದಲೂ, ಅಲ್ಲಾಡುವ ಒಡ್ಯಾಣ ಕಾಲಂದುಗೆಗಳಲ್ಲಿನ ಗೆಜ್ಜೆಗಳ ಧ್ವನಿಗಳಿಂದಲೂ ಬಲಿಕುಸುಮಗಳ ವಿಸ್ತಾರದಿಂದಲೂ ಸೊಗಯಿಸಿತು. ವ|| ಜನ್ಮೋತ್ಸವವು ಜರುಗಿದ ಮೇಲೆ ಆ ಬಾಲಕನಿಗೆ ಬಾಹುಬಲಿಯೆಂಬ ಅನ್ವರ್ಥವಾದ ಹೆಸರನ್ನಿಟ್ಟರು. ಅವನು ಉತ್ತಾನಶಯಿತ (ಅಂಗತ್ತನಾಗಿ ಮಲಗುವುದು), ದರಹಸಿತ (ಸ್ವಲ್ಪ ನಗುವುದು), ಸಮನ್ವಿತವಾದ ಗತಿಸ್ಖಲಿತ (ಮುಗ್ಗರಿಸಿ ಬೀಳುವುದು), ಮುಗ್ಧಜಲ್ಪಿತ (ಮುದ್ದು ಮುದ್ದಾಗಿ ಮಾತನಾಡುವುದು) ಮೊದಲಾದ ಬಾಲಚೇಷ್ಟೆಗಳಿಂದಲೂ, ಜಟ್ಟಿಗಳ ಕಾಳಗದಿಂದಲೂ, ಟಗರುಕಾಳಗದಿಂದಲೂ, ಉದ್ಧತ ರಾಜಕುಮಾರರ ಬಾಹುಯುದ್ಧದಿಂದಲೂ, ಆನೆಯ ಸೊಂಡಿಲಿನಿಂದ ಎಬ್ಬಿಸಲ್ಪಟ್ಟ ಧೂಳೋ ಎಂಬಂತಿರುವ ಪಾಂಸುಕೇಳಿಯಿಂದಲೂ ಸಂತುಷ್ಟಮನಸ್ಕನಾಗಿ ನಾಭಿರಾಜನ ಹೃದಯಕ್ಕೆ ಸಂತೋಷವನ್ನುಂಟುಮಾಡುತ್ತಿರಲು ಯೌವನಪ್ರವೇಶಸಮಯ ಬಂದಿತು. ೫೧. ಆ ಕಾಲದಲ್ಲಿ ಬಾಹುಬಲಿಯು ಸಕಲ ಸೌಂದರ್ಯಗಳಿಂದ ಸಂಪನ್ನನಾದನು. ಅವನ ಮುಖವು ಕಮಲದಂತೆ ಅರಳಿತು. ಕಣ್ಣುಗಳು ಕನ್ನೈದಿಲೆಗಳಂತಿದ್ದುವು. ಅಧರಗಳು ಕಳಿತ ತೊಂಡೆಹಣ್ಣುಗಳಂತಿದ್ದುವು. ಕೋಮಲವಾದ ಬಿದುರಿನಂತೆ ಶ್ಯಾಮಲನಾಗಿದ್ದನು. ಮೇಘದಂತೆ ಗಂಭೀರವಾದ ಧ್ವನಿಯುಳ್ಳವನಾಗಿದ್ದನು.

ಆ ಕಮನೀಯವಿಲೋಕನ
ನಾ ಕಾಲದ ಕಾಮದೇವನೆಂದೊಡೆ ಕಾಂತಾ
ನೀಕದ ಮರುಳ್ಳುದಂ ಮದ
ನಾಕುಳತೆಯನುಂತೆ ಪೇಟ್ವುದೊಂದೆಗ್ಗಲ್ತೇ ೫೨

ಕನಸಿನೊಳಮಾ ಕುಮಾರನೆ
ಮನಮಂ ತಣ್ಮಲೆಯೆ ಚಿತ್ತಜಂ ಚಿತ್ತಭವಂ
ಮನಸಿಜನನಂಗನಂಗಜ
ನೆನೆ ನೆಗಟ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್ ೫೩

ವ|| ಮುನ್ನಂ ವೃಷಭೇಶ್ವರಂ ವಜ್ರಜಂಘನಾದಂ ಭವದೊಳಾ ಮಹಾತ್ಮಂಗೆ ತಂಗೆಯಾದ ಸುಂದರಿಯೆ ಕತಿಪಯಭವಪರಿಭ್ರಮಣದಿಂ ಬಂದು ಬಾಹುಬಲಿಕುಮಾರನಿಂ ನೇರ್ಗಿಱೆಯಳಾಗಿ,

ಸೌಂದರತನುರುಚಿಯೊಳ್ ಸುರ
ಸೌಂದರಿಯೆನೆ ಸೌಂದರಾಂಗಿ ಸೌಂದರಿಯೆಂಬಳ್
ಸೌಂದರವೃಷಭಮಹೀಭುಜ
ಸೌಂದರಿಗೆ ಸುನಂದೆಗಂದು ನಂದನೆಯಾದಳ್ ೫೪

ವ|| ಅಂತು ಭರತೇಶ್ವರಂ ಬಾಹುಬಲಿಕುಮಾರಂ ಮೊದಲಾಗೆ ನೂರ್ವರ್ ಕುಮಾರರುಮ ನಿರ್ವರ್ ಕನ್ನೆಯರುಮನಾದಿಪುರುಷಂ ನೋಡಿ ಮನದೊಳಾದಲ್ಕಱೆಂ ನಿಜಾನ್ವಯಭೂಷಣತನಯವರ್ಗಕ್ಕೆ

ಅವನ ಕೂದಲುಗಳು ಕಪ್ಪಾಗಿದ್ದುವು, ಎದೆಯು ವಿಶಾಲವಾಗಿತ್ತು. ತೋಳುಗಳು ಮಂಡಿಯವರೆಗೆ ನೀಳವಾಗಿದ್ದುವು. ತೊಡೆಗಳು ದುಂಡಾಗಿಯೂ ಸುಂದರವಾಗಿಯೂ ಇದ್ದುವು. ಬಾಹುಬಲಿಯು ಕುಲಶೈಲೇಂದ್ರನಂತೆ ಉನ್ನತನಾಗಿದ್ದನು. ೫೨. ದರ್ಶನೀಯ ವಾದ ದೃಷ್ಟಿಯುಳ್ಳ ಬಾಹುಬಲಿಯು ಆ ಕಾಲದ ಕಾಮದೇವನಾಗಿದ್ದನು. ಹಾಗೆ ಹೇಳಿದ ಮೇಲೆ ಅವನನ್ನು ಕಂಡ ಕಾಂತಾಜನರೆಲ್ಲರೂ ಮರುಳಾಗುತ್ತಿದ್ದರೆಂದೂ ಕಾಮಬಾಧೆಯಿಂದ ಪೀಡಿತರಾಗುತ್ತಿದ್ದರೆಂದೂ ವ್ಯರ್ಥವಾಗಿ ಹೇಳುವುದು ದಡ್ಡತನವಲ್ಲದೆ ೫೩. ಕನಸಿನಲ್ಲಿಯೂ ಎಲ್ಲರ ಮನಸ್ಸಿನಲ್ಲಿ ಆ ಕುಮಾರನೆ ಆವರಿಸಿಕೊಂಡಿದ್ದನು. ಆದಕಾರಣ ಅವನು (ಬಾಹುಬಲಿ) ಚಿತ್ತಜ, ಚಿತ್ತಭವ, ಮನಸಿಜ, ಅನಂಗ, ಅಂಗಜ ಎಂಬ ಹಲವು ಹೆಸರುಗಳಿಂದ ಪ್ರಖ್ಯಾತನಾದನು. ವ|| ವೃಷಭೇಶ್ವರನು ವಜ್ರಜಂಘನಾಗಿದ್ದ ಭವದಲ್ಲಿ ಆ ಮಹಾತ್ಮನಿಗೆ ಸೌಂದರಿಯು ತಂಗಿಯಾಗಿದ್ದಳು. ಅವಳು ಹಲವಾರು ಭವಗಳಲ್ಲಿ ಸುತ್ತಾಡಿಕೊಂಡು ಬಂದು ಬಾಹುಬಲಿಕುಮಾರನಿಗೆ ತಂಗಿಯಾಗಿ ಹುಟ್ಟಿದಳು. ೫೪. ಸುಂದರವಾದ ದೇಹಕಾಂತಿಯಿಂದಾಗಿ ಸುರಸುಂದರಿಯೆನಿಸಿಕೊಂಡು ಸುಂದರಾಂಗಳಾದ ಆ ಸೌಂದರಿಯೆಂಬವಳು ಸುಂದರನಾದ ವೃಷಭರಾಜನ ಮಡದಿಯೂ ಸುಂದರಿಯೂ ಆದ ಸುನಂದೆಗೆ ಮಗಳಾಗಿ ಹುಟ್ಟಿದಳು. ವ|| ಅಂತು ಭರತೇಶ್ವರ ಬಾಹುಬಲಿಗಳೇ ಮೊದಲಾದ ನೂರುಕುಮಾರರನ್ನೂ ಇಬ್ಬರು ಕನ್ಯೆಯರನ್ನೂ ಆದಿಪುರುಷನು

**ಭೂಷಣವಿಶೇಷಂಗಳಂ ತನಗಮಿಂದ್ರಂಗಂ ಸಕಳಚಕ್ರವರ್ತಿಗಂ ತುಡಲ್ಕೆ ಯೋಗ್ಯಮಪ್ಪ ಸಾಸಿರದೆಂಟು ತೋರಮುತ್ತಿನ ಸರದ ಇಂದ್ರಚ್ಛಂದಂ ಮೊದಲಾಗೆ ವಿಜಯಚ್ಛಂದಹಾರ ದೇವಚ್ಛಂದಾರ್ಧಾಹಾರ ರಶ್ಮಿಕಳಾಪಗುಚ್ಛನಕ್ಷತ್ರಮಾಳಾರ್ಧಗುಚ್ಛಮಾಣ ವಾರ್ಧಮಾಣವಂಗಳೆಂಬ ಪನ್ನೊಂದು ನಾನಾರತ್ನ ಸುವರ್ಣಫಲಕವಿರಚನಾದಿಭೇದದಿಂ ಪ್ರತ್ಯೇಕಶೀರ್ಷಕೋಪಶೀರ್ಷಕಾವಘಾಟಕಪ್ರಕಾಂಡಕತರಳ ಪ್ರತಿಬಂದೋಪಪದಪಂಚಕಸಮೇತಂಗಳಾಗಿ ಪಂಚಪಂಚಾಶತ್ಪ್ರಮಾಣಂಗಳೊಳಾದ ಹಾರಂಗಳುಮಂ ಪೆಱವುಂ [ಪ್ರತ್ಯಂಗೋಚಿತಮಣಿ ಭೂಷಣಂಗಳುಮಂ] ಸ್ವಮತಿಪರಿಕಲ್ಪನದಿಂ ಯುಗಾರಂಭದೊಳ್ ಪಡೆದು,**

> ಇವರ್ಗಿವು ತಕ್ಕುವೆಂದವರ್ಗವಂ ದಯೆಯಿಂ ದಯೆಗೆಯ್ಕೆ ರಾಗದಿಂ
> ದವರವನೆಲ್ಲಮಂ ನೆಱಿಯೆ ತೊಟ್ಟು ತದುಜ್ಜ್ವಳರತ್ನದೀಪ್ತಿ ದಿ
> ಗ್ವಿವರನಭೋವಿಭಾಗಪರಿಪೂರಿತಮಾಗಿರೆ ತಮ್ಮನೊಲ್ದು ನೋ
> ಟ್ಟವರ್ಗಳ ಕಣ್ಗೆ ದೀಪ್ತಿಪರಮಾಣುಗಳಿಂ ಸಮೆದಂತೆ ತೋಱಿದರ್ ೫೫

(ವೃಷಭದೇವನು) ಕಂಡನು. ವಂಶೋದ್ಧಾರಕರಾದ ಆ ಮಕ್ಕಳಿಗೆ ಮನಃಪ್ರೀತಿಯಿಂದ ಆಭರಣವಿಶೇಷಗಳನ್ನು ಕೊಟ್ಟನು. ತನಗೂ ಇಂದ್ರನಿಗೂ ಉಳಿದ ಸಮಸ್ತ ಚಕ್ರವರ್ತಿಗಳಿಗೂ ಧರಿಸಲರ್ಹವಾದ ಸಾವಿರದೆಂಟು ತೋರಮುತ್ತಿನ ಎಳೆಗಳಿರುವ ಇಂದ್ರಚ್ಛಂದ ದಿಂದಾರಂಭಿಸಿ ವಿಜಯಚ್ಛಂದ ಹಾರ, ದೇವಚ್ಛಂದ, ಅರ್ಧಹಾರ, ರಶ್ಮಿಕಲಾಪ, ಗುಚ್ಛ, ನಕ್ಷತ್ರಮಾಲೆ, ಅರ್ಧಗುಚ್ಛ, ಮಾಣವ ಮತ್ತು ಅರ್ಧಮಾಣವಗಳೆಂಬ ಹನ್ನೊಂದು ಬಗೆಯ ಹಾರಗಳನ್ನೂ ಅವುಗಳಿಗೆ ನಾನಾರತ್ನಗಳನ್ನೂ ಸುವರ್ಣಫಲಕಗಳನ್ನೂ ಸೇರಿಸಿ ರಚನಾಭೇದಗಳಿಂದ ಪ್ರತ್ಯೇಕಗೊಂಡ ಶೀರ್ಷಕ, ಉಪಶೀರ್ಷಕ, ಅವಘಾಟಕ, ಪ್ರಕಾಂಡಕ, ತರಲಪ್ರತಿಬಂಧ ಎಂಬ ಉಪಪದ ಪಂಚಕಗಳಿಂದ ಒಟ್ಟು ಐವತ್ತೈದು[1] ಪ್ರಕಾರಗಳುಳ್ಳ ಹಾರಗಳನ್ನೂ ವಿವಿಧಾಂಗಗಳಿಗೆ ತಕ್ಕಂತೆ ಇಡಬಹುದಾದ ಸ್ವಬುದ್ಧಿಕಲ್ಪಿತವಾದ ಇತರ ಮಣಿಭೂಷಣಗಳನ್ನೂ ಯುಗಾರಂಭದಲ್ಲಿ ಸೃಜಿಸಿ ಪಡೆದನು. ೫೫. ಇವರಿಗೆ ತಕ್ಕುವೆಂದು ನಿಶ್ಚಯಿಸಿ ಅವನ್ನು ಅವರಿಗೆ ಪ್ರೀತಿಯಿಂದ ಕೊಟ್ಟನು. ಅವೆಲ್ಲವನ್ನೂ ಅವರು ಧರಿಸಿಕೊಳ್ಳಲಾಗಿ ಅವುಗಳ ಉಜ್ವಲವಾದ ರತ್ನಕಾಂತಿಗಳು ದಿಗ್ರಂಧ್ರಗಳಿಂದ ಹಿಡಿದು ನಭೋಭಾಗಗಳೆಲ್ಲವನ್ನೂ ವ್ಯಾಪಿಸಿಕೊಂಡವು. ತಮ್ಮನ್ನು ಒಲಿದು ನೋಡುವವರ ಕಣ್ಣುಗಳಿಗೆ

---

1 ಯಷ್ಟಿಗಳ (ಎಳೆಗಳ) ಸಂಖ್ಯೆಯನ್ನನುಸರಿಸಿ ಮುತ್ತಿನ ಸರಗಳು ಬೇರೆ ಬೇರೆ ಹೆಸರನ್ನು ಪಡೆಯುತ್ತವೆ. ಹೇಗೆಂದರೆ, ಇಂದ್ರಚ್ಛಂದ = ೧೦೦೮ ಎಳೆ, ವಿಜಯಚ್ಛಂದ = ೫೦೪ ಎಳೆ, ಹಾರ = ೧೦೮ ಎಳೆ, ದೇವಚ್ಛಂದ = ೮೧ ಎಳೆ, ಅರ್ಧಹಾರ = ೬೪ ಎಳೆ, ರಶ್ಮಿಕಲಾಪ = ೫೪ ಎಳೆ, ಗುಚ್ಛ = ೩೨ ಎಳೆ, ನಕ್ಷತ್ರಮಾಲಾ = ೨೭ ಎಳೆ, ಅರ್ಧಗುಚ್ಛ = ೨೪ ಎಳೆ, ಮಾಣವ = ೨೦ ಎಳೆ, ಅರ್ಧಮಾಣವ = ೧೦ ಎಳೆ. ಮಧ್ಯದಲ್ಲಿ ದೊಡ್ಡಮುತ್ತುಳ್ಳ ಯಷ್ಟಿಗೆ ಶೀರ್ಷಕವೆಂದು ಹೆಸರು. ಹೀಗೆಯೇ ಅಂತರ್ಭೇದಗಳಿಂದ ಶೀರ್ಷಕ, ಉಪಶೀರ್ಷಕ ಮೊದಲಾದ ೫ ವಿಭಾಗಗಳಿವೆ, ಇಂದ್ರಚ್ಛಂದಾದಿ ಹಾರಗಳಲ್ಲಿ ಒಂದೊಂದರಲ್ಲಿಯೂ ಶೀರ್ಷಕಾದಿ ಪಂಚವಿಭಾಗಗಳು ಸೇರಿದರೆ ಒಟ್ಟು ೫೫ ಬಗೆಯ ಹಾರಗಳಾಗುತ್ತವೆ.

ವ॥ ಮತ್ತೊಂದುದಿವಸಮಮರಕುಮಾರಕರಪಲ್ಲವವಿಧೂಯಮಾನ ಚಾರುಚಾಮರಜನಿತ ಮಂದಮಾರುತಾಂದೋಳಿತಸೂಕ್ಷ್ಮ ಕ್ಷೌಮಾಂಬರಪಲ್ಲವಂ ಅನೇಕದಿವಿಜವಂದಿತವೃಂದಸಂಸ್ತೂಯಮಾನತ್ರಿದಿವಾವತರಣಜನ್ಮಾಭಿಷೇಕ ನಾನಾಪ್ರತಿಬುದ್ಧ ನಿಸರ್ಗಮಹಿಮಾರ್ಕರ್ಣನೋದೀರ್ಣದರಹಸಿತವವನಸರಸೀರುಹಂ, ಅವಗತದಿವಿಜದನುಜಮನುಜಮಕುಟಮಣಿಮರೀಚಿಪುಂಜಪಿಂಜರಿತೋತ್ತುಂಗಸಿಂಹಾಸನಾಸೀನವೃಷಭೇಶ್ವರಂ, ಸಕಳಕಳಾಪವಿದ್ಯೋಪದೇಶೋತ್ಸುಕಾಶಯಕುಶೇಶಯನಾಗಿರ್ಪನ್ನೆಗಂ,

ಸ್ಫುರದೀಪತ್ಪ್ರೋದ್ಗತೋರೋರುಹಮುಕುಳೆಯರುನ್ಮತ್ತಹಂಸೀಕ್ವಣನ್ನೂ
ಪುರೆಯರ್ ಮಾಣಿಕ್ಯಕಾಂಚೀರುಚಿರುಚಿರವರಾರೋಹೆಯರ್ ತಾರತಾರಾ
ತರಳೋದ್ಯದ್ದೀಪ್ತಿಮುಕ್ತಾಫಲವಿಳಸದಳಂಕಾರೆಯರ್ ಬ್ರಾಹ್ಮಿಯುಂ ಸೌಂ
ದರಿಯುಂ ಮೆಯ್ಯಿಕ್ಕಿ ದೂರಾಂತರದೊಳೆ ಪೊಡೆವಟ್ಟೆಯ್ದೆ ವಂದಿರ್ದರಾಗಳ್ ೫೬

ತೆಗೆದುತ್ಸಂಗದೊಳಿಟ್ಟೊ
ಯ್ಯಗೆ ಮೊಗಮಂ ನೋಡಿ ಕರ್ಚಿ ಕದಪಂ ನುಡಿದಂ
ಜಗದಧಿಪತಿ ನಿಮ್ಮಿರ್ಬರ
ನೆಗಳ್ತೆ ಮಕ್ಕಳಿರ ವಿನಯವಿಳಸನನಿಳಯಂ ೫೭

ವ॥ ಅದು ಕಾರಣಂ,

ಆ ಬಾಲಕರು ದೀಪ್ತಿಪರಮಾಣುಗಳಿಂದ ಸ್ಪಷ್ಟರಾದಂತೆ ತೋರಿದರು. ವ॥ ಮತ್ತೊಂದುದಿನ ಅಮರಕುಮಾರರ ಚಿಗುರಿನಂತಿರುವ ಕೈಗಳಿಂದ ಬೀಸಲ್ಪಡುತ್ತಿರುವ ಸುಂದರವಾದ ಚಾಮರಗಳ ಗಾಳಿಯಿಂದ ವೃಷಭೇಶ್ವರನ ಸೂಕ್ಷ್ಮವಾದ ರೇಷ್ಮೆಬಟ್ಟೆಗಳ ಸೆರಗುಗಳು ಅಲುಗಾಡುತ್ತಿದ್ದುವು. ಅವನ ತ್ರಿದಿವಾವತರಣ, ಜನ್ಮಾಭಿಷೇಕಾದಿಗಳು ದೇವವಂದಿ ಮಾಗಧರಿಂದ ಹೊಗಳಲ್ಪಡುತ್ತಿದ್ದುವು. ತನ್ನ ಸಹಜವಾದ ಮಹಿಮೆಯನ್ನು ಕೇಳಿ ಅವನ ಕಮಲಸದೃಶವಾದ ಮುಖವು ನಸುನಗೆಯಿಂದ ಕೂಡಿತು. ದಿವಿಜ, ದನುಜ, ಮತ್ತು ಮನುಜರ ಕಿರೀಟಗಳ ಮಣಿಕಾಂತಿಗಳಿಂದ ಪಿಂಜರವರ್ಣವನ್ನು ತಳೆದ ಉನ್ನತ ಸಿಂಹಾಸನದಲ್ಲಿ ಮಂಡಿತನಾಗಿದ್ದನು. ಅವನು ಸಕಲ ವಿದ್ಯೆಗಳನ್ನು ಉಪದೇಶಿಸುವುದರಲ್ಲಿ ಉತ್ಸುಕವಾದ ಹೃದಯಕಮಲವುಳ್ಳವನಾಗಿ ಕುಳಿತಿದ್ದನು. (ಆಶಯ = ಹೃದಯ) ೫೬. ಬ್ರಾಹ್ಮೀ ಸೌಂದರಿಯರು ದೂರದಿಂದಲೇ ಭಕ್ತಿಯಿಂದ ನಮಸ್ಕರಿಸಿ ವೃಷಭೇಶ್ವರನನ್ನು ಸಮೀಪಿಸಿದರು. ಅವರ ಸ್ತನಗಳು ಸ್ವಲ್ಪ ಮೇಲಕ್ಕೆದ್ದ ಮೊಗ್ಗುಗಳಂತಿದ್ದುವು. ಅವರ ನೂಪುರಗಳು ಉನ್ಮದಹಂಸಿಯರಂತೆ ದನಿಗೂಡುತ್ತಿದ್ದುವು. ಆ ಉತ್ತಮಸ್ತ್ರೀಯರು ಮಾಣಿಕ್ಯಮಯವಾದ ಒಡ್ಯಾಣದ ಕಾಂತಿಗಳಿಂದ ಸುಂದರರಾಗಿದ್ದರು. ದಪ್ಪವಾದ ನಕ್ಷತ್ರಗಳಂತೆ ಮಿರುಗುತ್ತಿರುವ ಮುಕ್ತಾಹಾರಗಳಿಂದ ಅವರು ಶೋಭಿತರಾಗಿದ್ದರು. ೫೭. ವೃಷಭೇಶ್ವರನು ತನ್ನ ತೊಡೆಯ ಮೇಲೆ ಅವರಿಬ್ಬರನ್ನೂ ಕುಳ್ಳಿರಿಸಿಕೊಂಡನು. ಮುಖವನ್ನು ನೋಡಿ ಅವರ ಕೆನ್ನೆಗಳನ್ನು ಪ್ರೀತಿಯಿಂದ ಮುದ್ದಿಸಿದನು. "ಮಕ್ಕಳಿರ! ನಿಮ್ಮಿಬ್ಬರ ನಡತೆಯು ವಿನಯಶೀಲಗಳಿಗೆ ಆಗರ. ವ॥ ಅದು ಕಾರಣವಾಗಿ

ಈ ವಯಸಮನೀ ಶೀಲಮ
ನೀ ವಿನಯಮನೆಯ್ದೆ ವಿದ್ಯೆಯಿಂ ಪುದಿದೊಡೆ ಮ
ತ್ತೇವೇೞ್ವುದೊ ನೀವೆ ಜಗ
ತ್ಪಾವನೆಯರಿರಕ್ಕ ನಿಮಗಮಗ್ಗಳರೊಳರೇ ೫೮

ವ।। ಅದಱಿಂ ನಿಮಗೀ ವಯಸಮೆಂಬುದು ವಿದ್ಯಾಭ್ಯಾಸಯೋಗ್ಯಮೆಂದು ವಿಶಾಲಹೇಮ ಪಟ್ಟಕದೊಳ್ ಆತ್ಮಹೃತ್ಪದ್ಮಪದ್ಮೆಯುಂ ಸರಸ್ವತಿಯಂ ಪೂಜಾಪೂರ್ವಕಮಧಿವಾಸಿಸಿ ನಿಜತನೂಜೆಯರಿರ್ವರುಮನೆರಡುಂ ಕೆಲದೊಳಿರಿಸಿ,

ಮುನ್ನಂ ತ್ರಿಲೋಕಗುರು ಸಿ
ದ್ಧನ್ನಮಯೆಂದಱಿಪಿ ಮುಖ್ಯಮಂಗಳಪದಮಂ
ಕನ್ನೆಗೆ ಪಿರಿಯಾಕೆಗೆ ಬೞಿ
ಯನ್ನಯದಿಂ ಬರೆದು ತೋಱಿದಂ ಲಿಪಿಗಳುಮಂ ೫೯

ವ।। ಅಂತಕಾರಾದಿ ಹಕಾರಾಂತಸ್ವರವ್ಯಂಜನಭೇದಭಿನ್ನಶುದ್ಧಾಕ್ಷರಂಗಳುಮಂ ಆಯೋಗವಾಹ ಚತುಷ್ಕಮುಮಂ ಸಂಯೋಗಾಕ್ಷರಂಗಳುಮಂ ಬ್ರಾಹ್ಮಿಗೆ ದಕ್ಷಿಣಹಸ್ತದೊಳುಪದೇಶಂಗೆಯ್ದು,

ಸುಂದರಿಗೆ ಗಣಿತಮಂ ದಳಿ
ತೇಂದೀವರನಯನೆಗೆಡದ ಕಯ್ಯೊಳ್ ಭವ್ಯಾ
ನಂದಕರಂ ಸ್ಥಾನಕ್ರಮ
ದಿಂದಂ ಪುರುದೇವನಱಿಯೆ ತೋಱಿದನಾಗಳ್ ೬೦

ವ।। ಮತ್ತಂ ಸ್ವಯಂಭುವಾಭಿಧಾನಪದವಿದ್ಯಾಛ್ಛಂದೋವಿಚಿತ್ಯಲಂಕಾರಂಗಳೆಂಬ ಮೂಱಱಿಂ

೫೮. ನಿಮ್ಮ ಈ ವಯಸ್ಸು, ಶೀಲ, ವಿನಯಗಳು ವಿದ್ಯೆಯಿಂದ ವಿಭೂಷಿತವಾದಲ್ಲಿ ನೀವು ಜಗತ್ಪವಿತ್ರರಾಗಿ ಬಾಳುವಿರಿ. ಆಗ ನಿಮಗಿಂತ ಅಗ್ಗಳರು (ಶ್ರೇಷ್ಠರು) ಯಾರು ಇರಲು ಸಾಧ್ಯ? ವ।। ಆದಕಾರಣ ನಿಮಗೆ ಈ ವಯಸ್ಸು ವಿದ್ಯಾಭ್ಯಾಸಕ್ಕೆ ಯೋಗ್ಯವಾದ ಕಾಲ" ಎಂದನು. ವಿಶಾಲವಾದ ಚಿನ್ನದ ಗದ್ದುಗೆಯ ಮೇಲೆ ತನ್ನ ಹೃತ್ಕಮಲವಾಸಿನಿಯಾದ ಸರಸ್ವತಿಯನ್ನು ಸ್ಥಾಪಿಸಿ ಪೂಜಿಸಿ, ತನ್ನಿಬ್ಬರು ಹೆಣ್ಣುಮಕ್ಕಳನ್ನು ಎರಡೂ ಪಕ್ಕದಲ್ಲಿ ಕುಳ್ಳಿರಿಸಿಕೊಂಡು, ೫೯. 'ಸಿದ್ಧಂ ನಮಃ' ಎಂದು ಮೊದಲು ಹಿರಿಯಾಕೆಗೆ ಬೋಧಿಸಿ, ಬಳಿಕ ಅದನ್ನೇ ಲಿಪಿಗಳಿಂದ ಬರೆದು ತೋರಿಸಿದನು. ವ।। ಹೀಗೆ ಅಕಾರಾದಿ ಹಕಾರಾಂತವಾದ ಸ್ವರವ್ಯಂಜನ ಭೇದಗಳುಳ್ಳ ಶುದ್ಧಾಕ್ಷರಗಳನ್ನು (ವಿಸರ್ಗ, ಅನುಸ್ವಾರ, ಜಿಹ್ವಾಮೂಲೀಯ, ಉಪಧ್ಮಾನೀಯ)ಗಳೆಂಬ ನಾಲ್ಕು ಆಯೋಗವಾಹಗಳನ್ನೂ ಸಂಯುಕ್ತಾಕ್ಷರಗಳನ್ನೂ ಬಲಗೈಯಿಂದ ಬ್ರಾಹ್ಮಿಗೆ ಉಪದೇಶಿಸಿದನು. ೬೦. ಕನ್ನೈದಿಲೆಯಂತೆ ಕಣ್ಣುಳ್ಳ ಸುಂದರಿಗೆ ಎಡಗೈಯಿಂದ ಒಂದು, ಎರಡು ಮುಂತಾದ ಸ್ಥಾನಕ್ರಮಪೂರ್ವಕವಾಗಿ ಗಣಿತವನ್ನು ಭವ್ಯಾನಂದಕರನಾದ ಆದಿದೇವನು ತಿಳಿಸಿದನು. ವ।। ಮತ್ತು ಸ್ವಾಯಂಭುವನೆಂಬ ವ್ಯಾಕರಣ ಶಾಸ್ತ್ರ, ಛಂದೋವಿಚಿತಿ ಮತ್ತು ಅಲಂಕಾರಗಳೆಂಬ ಮೂರರಿಂದ

ಪೆಸರ್ವಡೆದ ವಾಙ್ಮಯಮುಮಂ, ಸಮಸ್ತಕಳಾಕಲಾಪಮುಮಂ ಆದಿಬ್ರಹ್ಮನುಪದೇಶಂಗೆಯ್ದು ನಿಜಾತ್ಮಜೆಯರಿರ್ವರುಮಂ ವಿದ್ಯಾಪರಿಪೂರ್ಣೆಯರುಮಪ್ಪಂತು ಮಾಡಿ ಭರತಂಗೆ ಭರತಮುಮನರ್ಥ ಶಾಸ್ತ್ರಮುಮಂ, ವೃಷಭಸೇನಂಗೆ ಗೀತವಾದ್ಯಾರ್ಥಸಂಗ್ರಹಮಪ್ಪ ಗಾಂಧರ್ವಶಾಸ್ತ್ರಮುಮಂ, ಅನಂತವಿಜಯಂಗೆ ವಿಚಿತ್ರಚಿತ್ರಕಳೆಯುಮಂ, ವಾಸ್ತುವಿದ್ಯೆಯುಮಂ ಉಪದೇಶಂಗೆಯ್ದು, ಬಾಹುಬಲಿಗೆ ಕಾಮತಂತ್ರ, ಸಾಮುದ್ರಿಕಾಯುರ್ವೇದಧನುರ್ವೇದಹಸ್ತ್ಯಶ್ವತಂತ್ರ ರತ್ನಪರೀಕ್ಷೆಗಳುಮಂ ಮತ್ತಮಿವು ಮೊದಲಾಗೆ ಪೆಱವುಂ ಲೋಕೋಪಕಾರಿಗಳಪ್ಪ ಶಾಸ್ತ್ರಂಗಳೆನಿತೊಳವನಿತುಮಂ ಮತ್ತಿನ ತನೂಜವರ್ಗಕ್ಕೆಲ್ಲಮುಪದೇಶಂಗೆಯ್ದಂ ಇಂತು,

ಉತ್ತಮವಿದ್ಯೆಗಳ್ಗೆ ಗುಱಿಯಾದಂ ತನೂಭವರೆಯ್ದೆ ಚಿತ್ತಮಂ
ಪತ್ತಿಸೆ ಪತ್ತಿದಂಗನೆಯರಾಳ್ದಿಸಕೆಯ್ವಮರೇಂದ್ರರಾಗಸಂ
ಪತ್ತು ಮನಂಗೊಳುತ್ತುಮಿರೆ ಲಕ್ಕೆಯ ಲೆಕ್ಕದೊಳೊಂದಿ ಪೂರ್ವಮಿ
ರ್ಪತ್ತು ನಿರಂತರಂ ನಡೆದುದಾ ವೃಷಭಂಗೆ ಕುಮಾರಕಾಲದೊಳ್ ೬೧

ವ|| ಆ ಪ್ರಸ್ತಾವದೊಳ್ ಫಳಪಾಕವಿರಾಮಂಗಳಪ್ಪ ಗರ್ಭಷಷ್ಟಿವ್ರೀಹಿಯವಗೋಧೂಮಾದಿ ಮಹೌಷಧಂಗಳುಂ ತಿಳಾತಸೀಕುಸುಂಭಾದಿ ದೀಪೌಷಧಿಗಳುಂ ಯಾವನಾಳಕಂಗುಕೋದ್ರವಾದಿ ಸರ್ವೌಷಧಿಗಳುಂ ಮುನ್ನಮಕೃಷ್ಟಪಚ್ಯಂಗಳಪ್ಪುವಂದು ವಿರಳಂಗಳಾಗಿಯುಂ ಅನಲ್ಪಕಲ್ಪಾವನಿಜಂಗಳ್ ಪೇತರಸವೀರ್ಯಪಾಕಂಗಳಾಗಿಯುಂ ಆಧಿವ್ಯಾಧಿಬಾಧಿತಶರೀರರ್ ಮಾನವರಭಿಮಾನವಂ ಬಿಸುಟು ನಾಭಿರಾಜನನುಮತದಿಂದಮಾದಿಬ್ರಹ್ಮನಲ್ಲಿಗೆವಂದು ಮೆಯ್ಯಿಕ್ಕಿ ಪೊಡೆವಟ್ಟು,

ಹೆಸರಾದ ಮೂರು ಬಗೆಯ ವಾಙ್ಮಯವನ್ನೂ, ಸಮಸ್ತಕಲಾಸಮೂಹವನ್ನೂ ಆದಿಬ್ರಹ್ಮನು ಉಪದೇಶಿಸಿದನು. ಸ್ವಪುತ್ರಿಯರಿಬ್ಬರನ್ನೂ ವಿದ್ಯಾಪೂರ್ಣರನ್ನಾಗಿ ಮಾಡಿ ಭರತನಿಗೆ ನಾಟ್ಯಶಾಸ್ತ್ರ ಅರ್ಥಶಾಸ್ತ್ರಗಳನ್ನೂ ವೃಷಭಸೇನನಿಗೆ ಗೀತವಾದ್ಯಗಳ ಅರ್ಥಸಂಗ್ರಾಹಕವಾದ ಗಾಂಧರ್ವವಿದ್ಯೆಯನ್ನೂ ಅನಂತವಿಜಯನಿಗೆ ವಾಸ್ತುವಿದ್ಯೆಯನ್ನೂ, ವಿಚಿತ್ರವಾದ ಚಿತ್ರವಿದ್ಯೆಯನ್ನೂ ಕಲಿಸಿಕೊಟ್ಟನು. ಬಾಹುಬಲಿಗೆ ಕಾಮತಂತ್ರ, ಸಾಮುದ್ರಿಕ, ಆಯುರ್ವೇದ, ಧನುರ್ವೇದ, ಗಜಾಶ್ವವಿದ್ಯೆಗಳನ್ನೂ ರತ್ನಪರೀಕ್ಷಾಕ್ರಮವನ್ನೂ ಮತ್ತಿತರ ಮಕ್ಕಳಿಗೆ ಲೋಕೋಪಕಾರಿಗಳೆನಿಸಿದ ಉಳಿದ ವಿದ್ಯೆಗಳನ್ನೂ ಉಪದೇಶಿಸಿದನು. ೬೧. ಉತ್ತಮ ವಿದ್ಯೆಗಳನ್ನು ಕಲಿತ ಮಕ್ಕಳು ಮನಸ್ಸನ್ನು ರಂಜಿಸುತ್ತಿದ್ದರು. ಕೈಹಿಡಿದ ಮಡದಿಯರೂ ಆಜ್ಞೆಗೆ ಅಧೀನರಾದ ದೇವೇಂದ್ರರೂ ಸಂಪತ್ತು ಆಗ ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತಿರಲು ವೃಷಭಸ್ವಾಮಿಗೆ ಇಪ್ಪತ್ತುಲಕ್ಷಪೂರ್ವಗಳಷ್ಟು ವರ್ಷಗಳು ಕುಮಾರಕಾಲದಲ್ಲಿ ಕಳೆಯಿತು. ವ|| ಆ ಪ್ರಸ್ತಾವದಲ್ಲಿ ಕಾಳಾಗಿ ಮಾಗಿ ಒಣಗಲಿರುವ ಅರವತ್ತು ದಿನದ ಭತ್ತ, ಜವೆಗೋಧಿ, ಗೋಧೂಮ ಮೊದಲಾದ ಮಹೌಷಧಿಗಳೂ, ಎಳ್ಳು, ಅಗಸೆ, ಕುಸುಬೆ ಮುಂತಾದ ಎಣ್ಣೆಬೀಜಗಳೂ, ಜೋಳ, ಅಡಕೆ, ನವಣೆ, ಬರಗು ಮೊದಲಾದ ಸರ್ವೌಷಧಿಗಳೂ ಮೊಟ್ಟಮೊದಲು ಬೇಸಾಯವಿಲ್ಲದೆ ಬೆಳೆಯುತ್ತಿದ್ದುವು. ಬಳಿಕ ವಿರಳ ವಿರಳವಾಗಿ ಬೆಳೆಯತೊಡಗಿದುವು. ಬಹುಸಂಖ್ಯೆಯ ಕಲ್ಪವೃಕ್ಷಗಳು ರಸವೀರ್ಯ ವಿಪಾಕಗಳಿಂದ ವಿರಹಿತವಾದುವು. ಜನರೆಲ್ಲರೂ ಆಧಿ, ವ್ಯಾಧಿ, ಬಾಧೆಗಳಿಂದ ಪೀಡಿತರಾದರು. ಆಗ ಜನರು ಅಭಿಮಾನವನ್ನು ದೂರಸರಿಸಿ ನಾಭಿರಾಜನ

ವಿರಳಫಳಂಗಳಾದುವಖಿಳೌಷಧಿಗಳ್ ರಸವೀರ್ಯಪಾಕಮುಂ
ತೊರೆದುವು ವೃಕ್ಷಜಾತಿಗಳೊಡಲ್ ಪಸಿವಾದಮಳುರ್ವೆ ನಿಪ್ಪುಟಂ
ಕರಗಿದುದೆಮ್ಮ ಬಾಳ್ಕೆ ತೆಱನಾವುದು ದೇವ ಶರಣ್ಗೆವಂದೆವಾ
ದರದೆಮಗಪ್ಪುದಂ ಬೆಸಸಿ ಕಾವುದು ಲೋಕಮನಾದಿಪೂರುಷಾ ೬೨

ವ॥ ಎಂಬುದುಂ ತದೀಯಕರುಣಾರಸಪ್ರೇರಿತಾರ್ದ್ರಾಶಯಂ ತತ್ಪ್ರಜಾಜೀವನೋಪಾಯಮಂ ಪೂರ್ವಾಪರವಿದೇಹಸ್ಥಿತಿಸಮಾನಮಾಗೆ ಷಟ್ಕರ್ಮಂಗಳುಮಂ ವರ್ಣಾಶ್ರಮವಿಭಾಗಂಗಳುಮಂ ಗ್ರಾಮಗೃಹಾದಿಭೇದಂಗಳುಮಂ ಭೋಗಭೂಮಿವಿರಾಮದೊಳ್ ಈ ಕರ್ಮಭೂಮಿಪ್ರಾರಂಭದೊಳಿಮಗೆ ನಿಱಿಸಲ್ವೇೞ್ಕುಮೆಂದು ಮನದೊಳ್ ಬಗೆದು, ಅವರಂ ಅಂಜದಿರಿಮೆಂದು ತದಭಿಮುಖಪ್ರಕಂಪಿತಕರ ಪಲ್ಲವದಿಂ ಸಂತಯಿಸಿ ತದನಂತರಂ ಭಗವದನುಸ್ಮರಣಮಾತ್ರದಿಂದಮರಸಮಿತಿವೆರಸಮರೇಂದ್ರಂ ಬಂದು,

ನಿಜಮಕುಟಮಣಿಮರೀಚಿಯಿ
ನಜನ ಪದಾಂಬುಜದ ಕೆಂಪನಿರ್ಮಡಿಸಿ ಕುಲ
ಧ್ವಜ ಬೆಸಸು ನಿನ್ನವೋಲೀ
ಪ್ರಜಾಪತಿತ್ವಕ್ಕೆ ಮುನ್ನ ನೋಂತರುಮೊಳರೇ ೬೩

ಅನುಮತದಿಂದಲೇ ಆದಿಬ್ರಹ್ಮನ ಬಳಿಗೆ ಬಂದು ಭಕ್ತಿಭರದಿಂದ ನಮಸ್ಕರಿಸಿದರು. ೬೨. "ಎಲ್ಲ ಔಷಧಿಗಳೂ ಫಲರಹಿತವಾದುವು. ರಸ, ವೀರ್ಯ, ಪಾಕಗಳನ್ನು ವೃಕ್ಷಗಳು ತೊರೆದುವು, ವೃಕ್ಷಗಳೂ ವಿರಳವಾದುವು. ಹಸಿವು ಹೆಚ್ಚಾಗಿ ವ್ಯಾಪಿಸಿ ದೇಹವು ಕರಗಿಹೋಯಿತು. ದೇವ! ನಾವು ಬದುಕುವುದು ಹೇಗೆ? ನಾವು ನಿನಗೆ ಶರಣಾಗಿರುವೆವು. ಎಲೆ ಆದಿಪುರುಷ! ಈ ಲೋಕವನ್ನು ಆದರದಿಂದ ಕಾಪಾಡು" ಎಂದು ವಿಜ್ಞಾಪಿಸಿಕೊಂಡರು. ಆಗ ವ॥ ವೃಷಭಸ್ವಾಮಿಯು ಅವರ ಮೇಲೆ ಕರುಣೆಯಿಂದ ತೊಯ್ದ ಹೃದಯವುಳ್ಳವನಾಗಿ ಅವನ ಪ್ರಜೆಗಳ ಜೀವನೋಪಾಯವನ್ನು ಪೂರ್ವಾಪರ ವಿದೇಹಕ್ಷೇತ್ರಗಳ ಸ್ಥಿತಿಗೆ ಸಮಾನವಾಗಿ ಮಾಡಲುದ್ದೇಶಿಸಿ ಷಟ್ಕರ್ಮ[1]ಗಳನ್ನೂ ವರ್ಣಾಶ್ರಮ ವಿಭಾಗಗಳನ್ನೂ ಗ್ರಾಮಗೃಹಾದಿಭೇದಗಳನ್ನೂ ಭೋಗಭೂಮಿಯ ವಿರಾಮಕಾಲದಲ್ಲಿ - ಈ ಕರ್ಮಭೂಮಿಯ ಪ್ರಾರಂಭಕಾಲದಲ್ಲಿ - ಸ್ಥಾಪಿಸಬೇಕೆಂದು ನಿಶ್ಚಯಿಸಿದನು. ಬಳಿಕ ಅವರನ್ನು "ಅಂಜದಿರಿ" ಎಂದು ಎದುರಾಗಿ ಅಭಯಹಸ್ತದಿಂದ ಸಂತೈಸಿದನು. ಅಷ್ಟರಲ್ಲಿ ಭಗವದನುಧ್ಯಾನಮಾತ್ರದಿಂದ ಅಮರಸಮೂಹದೊಡನೆ ದೇವೇಂದ್ರನು ೬೩. ತನ್ನ ಕಿರೀಟದ ಮಣಿಗಳ ಕಾಂತಿಯಿಂದ ಇಂದ್ರನು ಅಜನ (ವೃಷಭಸ್ವಾಮಿಯ) ಪಾದಕಮಲಗಳ ಕೆಂಪನ್ನು ಇಮ್ಮಡಿಸಿದನು. "ಕುಲಧ್ವಜ, ಅಜ! ನಿನ್ನಂತೆ ಈ ಪ್ರಜಾಪತಿತ್ವಕ್ಕೆ ನೋಂತವರು ಮತ್ತಾರು ಇದ್ದಾರೆ? ಹೇಳು". ಎಂದು ನುಡಿದನು.

---

1 ಅಸಿ, ಮಷಿ, ಕೃಷಿ, ವಾಣಿಜ್ಯ, ವಿದ್ಯೆ, ಶಿಲ್ಪ - ಇವು ಷಟ್‌ಕರ್ಮಗಳು.

ವ।। ಎಂದು ನುಡಿದು ತದನುಮತದಿಂ ಶುಭದಿನನಕ್ಷತ್ರಮುಹೂರ್ತದೊಳ್ ಜಗದ್ಗುರುವಿನನು ಮತದೊಳಯೋಧ್ಯಾಮಧ್ಯಮಪ್ಪ ತನ್ಮಹಾದಿಗ್ವಿಭಾಗಂಗಳೊಳ್ ಜಿನೇಂದ್ರಮಂದಿರಂಗಳಂ ನಿರ್ಮಿಸಿ ಬಳಿಕಂ ದೇವಮಾತೃಕಸಾಧಾರಣಾನೂಪಜಾಂಗಳಭೇದಂಗಳುಮಂ, ಅನಂತಪಾಳಪಾಲಿತದುರ್ಗಪರಿವೃತಾಂತಂಗಳುಂ ಲುಬ್ಧಕಾರಣ್ಯಚರಪುಳಿಂದಶಬರಾದಿಪರಿರಕ್ಷಿತಾಂತರಾಳದೇಶಂಗಳುಮಪ್ಪ ಕಾಶಿಕೌಸಲ ಕಳಿಂಗವಂಗಕಾಶ್ಮೀರಕರಹಾಟಕರ್ನಾಟಚೋಳಕೇರಳಪಾಂಚಾಲಮಾಳನಮಹಾರಾಷ್ಟ್ರಸೌರಾಷ್ಟ್ರವನವಾಸ್ಯಾಂಧ್ರ ಕಾಂಭೋಜಬಾಹ್ಲಿಕತುರುಷ್ಕಕೇಕಯಸೌವೀರಾಭೀರಚೇರ ಶೂರಸೇನಪರಾಂತಿಕವಿದೇಹಸಿಂಧು ಗಾಂಧಾರಕುರುಜಾಂಗಣ ವಿದರ್ಭವತ್ಸಯವನಚೇದಿಪಲ್ಲವದಶಾರ್ಣಾವಂತಿಕಚ್ಛಮಹಾಕಚ್ಛ ಮಗಧಾವನಿ ರಮ್ಯಕಾತ್ಮಕಕುರುಸಮುದ್ರಕಾದಿ ವಿವಿಧವಿಷಯಂಗಳುಮಂ, ತಜ್ಜನಪದಮಧ್ಯಂಗಳೊಳ್ ಪರಿಖಾವಪ್ರಪ್ರಾಕಾರಗೋಪುರಾಟ್ಟಾಳಕಾಳಂಕೃತಂಗಳಪ್ಪ ರಾಜಧಾನಿಗಳುಮಂ, ಅವಱ ಬಳಸಿಯುಂ ಯಥೋಚಿತ ಪ್ರದೇಶಂಗಳೊಳ್ ಏಕವೃತ್ತಿಪರಿವೃತಂಗಳುಂ ಅತಿಸಮೃದ್ಧಕೃಷೀವಲಕುಳಾಧಿಷ್ಠಿತಂಗಳು ಮಪ್ಪ ಅಭಿರಾಮಜಲಾಶಯಂಗಳುಮಂ, ಪ್ರಭೂತಯವಸೋದಕಂಗಳುಮಂ ಸಮಸ್ತಸಸ್ಯಸಂಪತ್ಸಂಪನ್ನ ಸುಕ್ಷೇತ್ರಂಗಳುಮಂ, ಕ್ರೋಶದ್ವಿಕ್ರೋಶಸೀಮಾಭಾಗಯೋಜನಪಂಚಶತಕುಟುಂಬಿ ಕುಲಾವಿರ್ಭಾವಿತಾಧ ಮೋತ್ತಮಭೇದಂಗಳುಂ ಸರಿದ್ಗಿರಿದರೀಭೂರುಹಸೇತುವನಸೀಮೋಪಲಕ್ಷಿತಂಗಳುಮಪ್ಪ ಮಹಾಗ್ರಾಮಂಗಳುಮಂ ಪೂರ್ವೋತ್ತರಾಂಭಃಪ್ಲವಂಗಳುಂ ಪರಿಖಾವಪ್ರಪ್ರಾಕಾರ

ವ।। ಸ್ವಾಮಿಯ ಒಪ್ಪಿಗೆಯನ್ನು ಪಡೆದು ಇಂದ್ರನು ಶುಭದಿನ ಶುಭನಕ್ಷತ್ರ ಶುಭಮುಹೂರ್ತಗಳಲ್ಲಿ ಜಗದ್ಗುರುವಿನ ಇಷ್ಟಾನುಸಾರ ಅಯೋಧ್ಯೆಯ ನಡುವೆ ಆ ಮಹಾದಿಗ್ವಿಭಾಗಗಳಲ್ಲಿ ಜಿನೇಂದ್ರಮಂದಿರಗಳನ್ನು ನಿರ್ಮಾಣಗೊಳಿಸಿದನು. ಬಳಿಕ ದೇವಮಾತೃಕ (ಮಳೆಯನ್ನವಲಂಬಿಸಿಕೊಂಡು ಕೃಷಿಗೈಯುವ ಭೂಮಿ) ಸಾಧಾರಣ, ಜಲವಸತಿ ಪ್ರದೇಶ, ವನ್ಯಪ್ರದೇಶಗಳನ್ನೂ, ಗಡಿಕಾವಲುಗಾರರಿಂದ ರಕ್ಷಿತ ದುರ್ಗ ಪರಿವೃತಾಂತ ಪ್ರದೇಶಗಳನ್ನೂ, ಬೇಟೆಗಾರ, ಅರಣ್ಯಚರ, ಪುಳಿಂದ, ಶಬರರೇ ಮೊದಲಾದವರಿಂದ ಪರಿರಕ್ಷಿತ ಮಧ್ಯಪ್ರದೇಶಗಳಾದ ಕಾಶಿ, ಕೋಸಲ, ವಂಗ, ಕಾಶ್ಮೀರ, ಕರಹಾಟ, ಕರ್ಣಾಟಕ, ಚೋಲ, ಕೇರಲ, ಪಾಂಚಾಲ, ಮಾಲವ, ಮಹಾರಾಷ್ಟ್ರ, ವನವಾಸೀ, ಆಂಧ್ರ, ಕಾಂಭೋಜ, ಬಾಹ್ಲಿಕ, ತುರುಷ್ಕ, ಕೇಕಯ, ಸೌವೀರ, ಆಭೀರ, ಚೇರ, ಶೂರಸೇನ, ಅಪರಾಂತಿಕ, ವಿದೇಹ, ಸಿಂಧು, ಗಾಂಧಾರ, ಕುರುಜಾಂಗಣ, ವಿದರ್ಭ, ವತ್ಸ, ಯವನ, ಚೇದಿ, ಪಲ್ಲವ, ದಶಾರ್ಣ, ಅವಂತಿ, ವನಭೇದಿ, ಕಚ್ಛ, ಮಹಾಕಚ್ಛ, ಮಗಧಾವನಿ, ರಮ್ಯಕ, ಆತ್ಮಕ, ಕುರು, ಸಮುದ್ರಕಾದಿ ವಿವಿಧ ದೇಶಗಳನ್ನೂ, ಆ ದೇಶಗಳ ಮಧ್ಯದಲ್ಲಿನ ಅಗಳ್ತೆ, ಕೋಟೆಯ ಬುರುಜು, ಕೋಟೆ, ಗೋಪುರ, ಕೊತ್ತಲಗಳಿಂದ ಅಲಂಕೃತವಾದ ರಾಜಧಾನಿಗಳನ್ನೂ, ಯಥೋಚಿತ ಪ್ರದೇಶಗಳಲ್ಲಿ ಏಕಪ್ರಾಕಾರಗಳಿಂದ ಕೂಡಿರುವುದೂ, ಅತಿಪುಷ್ಟರಾದ ರೈತಕುಟುಂಬಗಳಿಂದ ಆಶ್ರಿತವಾದ ಸುಂದರ ಜಲಾಶಯಗಳನ್ನೂ ಹುಲ್ಲುನೀರುಗಳಿಂದ ಸಮೃದ್ಧ ಪ್ರದೇಶಗಳನ್ನೂ ಎಲ್ಲ ಬಗೆಯ ಸಸ್ಯಸಂಪತ್ತುಗಳಿಂದ ಕೂಡಿದ ಕ್ಷೇತ್ರಗಳನ್ನೂ ಒಂದೆರಡು ಕ್ರೋಶದಷ್ಟಿರುವ ಎಲ್ಲೆಕಟ್ಟಿನ ಪ್ರದೇಶದಲ್ಲಿ ವಾಸಿಸುತ್ತಿರುವ ನೂರು ಮತ್ತು ಐನೂರು ಅಧಮೋತ್ತಮ ಕುಟುಂಬಗಳುಳ್ಳ ಚಿಕ್ಕದೊಡ್ಡ ಭೇದಗಳಿರುವ ಮತ್ತು ನದಿ, ಬೆಟ್ಟ, ತಗ್ಗುಭೂಮಿ, ಮರ, ಸೇತು, ಕಾಡು

ಗೋಪುರಾಟ್ಟಾಲಪರಿವೃತಂಗಳುಂ ನಾನಾಭವನ ವಿನ್ಯಾಸೋದ್ಯಾನಲೀಲಾಜಲಾಶಯಂಗಳುಂ ಪ್ರಧಾನಪುರುಷಾಧ್ಯಾಸಿತಂಗಳುಮಪ್ಪ ಪುರಂಗಳುಮಂ, ಗಿರಿಸರಿತ್ಸಂರುದ್ಧಂಗಳಪ್ಪ ಖೇಟಂಗಳುಮಂ, ಉರ್ವೀಧರನಿರುದ್ಧಂಗಳಪ್ಪ ಖರ್ವಡಂಗಳುಮಂ; ಪಂಚಶತಗ್ರಾಮಪರೀತಂಗಳಪ್ಪ ಮಡಂಬಗಳುಮುಂ, ಸಮುದ್ರೋತ್ಕೀರ್ಣನಿವಾಸಂಗಳಪ್ಪ ಪಟ್ಟಣಂಗಳುಮಂ ನಿಮ್ನಗಾತಟನಿಕಟವರ್ತಿಗಳಪ್ಪ ಮಹಾದ್ರೋಣಾಮುಖಂಗಳು[೧]ಮಂ - ಶಿ(ರೋ)ವ್ಯೂಢ ಧಾನ್ಯಸಂಚಯೋಪಭೋಗಿಜನನಿವಾಸಿಗಳಪ್ಪ ಸಂವಾಹಂಗಳುಮಂ, ಘೋಷಾಕರಸಂಗ್ರಹಾಕರಗೋವ್ರಜಂಗಳುಮಂ ಅವನಾಳ್ವ ತೆಱಗೊಳ್ವ ಬಿಟ್ಟಬೆಸಕೆಯಿಸಿಕೊಳ್ವ ಭೋಗಿಪನಿಯೋಗಂಗಳುಮಂ ಮಾಡಿದಂ, ಇಂತು,

ಗುರು ಬೆಸಪೆ ಸಮೆದು ಪಲವುಂ
ಪುರಂಗಳಂ ದೇವನಿಡೆ ಪುರಂದರವೆಸರಂ
ಧರಿಯಿಸಿ ಭಕ್ತಿಭರಾನತ
ಕಿರೀಟನಮರೇಂದ್ರನಮರಲೋಕಕ್ಕೊಗೆದಂ ೬೪

ವ॥ ತದನಂತರಂ ಪ್ರಜಾಪತಿಯುಂ ಪ್ರಜೋಪಜೀವನನಿಮಿತ್ತಮಾಗೆ ಸೇವಾಧರ್ಮೋಚಿತಮೆನಿಸುವ ಅಸಿಕರ್ಮಮುಮಂ, ಅನೇಕಗಲಿಪಿವಿಧಾನಂಗಳಪ್ಪ ಮಷಿಯುಮಂ, ಕೃಷೀವಲಕುಲೋಚಿತಮಪ್ಪ ಕೃಷಿಯುಮಂ, ಶಾಸ್ತ್ರಾನುಗತಮಪ್ಪ ವಿದ್ಯೆಯುಮಂ, ವಣಿಗ್ವ್ಯವಹಾರಾನುಕಾರಿಯಪ್ಪ ವಾಣಿಜ್ಯಮುಮಂ, ಹಸ್ತಕೌಶಲಕಳಿತಮಪ್ಪ ಚಿತ್ರಕಳಾಪಪತ್ರಚ್ಛೇದ್ಯಾದಿಸಮನ್ವಿತಮಪ್ಪ ಶಿಲ್ಪಮುಮಂ

ಮುಂತಾದ ಪ್ರದೇಶಗಳಿಂದ ಕೂಡಿದ ಮಹಾಗ್ರಾಮಗಳನ್ನೂ, ಪೂರ್ವೋತ್ತರಗಳಾಗಿ ಹರಿಯುವ ನೀರಿನ ಪ್ರವಾಹಗಳನ್ನೂ, ಅಗಳ್ತೆ, ಕೋಟೆಯ ಬುರುಜುಕೋಟೆ, ಗೋಪುರಗಳಿಂದ ಯುಕ್ತವಾದ ವಿವಿಧಾಕೃತಿಗಳಲ್ಲಿ ಕಟ್ಟಲ್ಪಟ್ಟ ಮನೆ, ಉದ್ಯಾನ ಮತ್ತು ಜಲಾಶಯಗಳಿರುವ, ಪ್ರಧಾನಪುರುಷರಿಂದ ವಾಸಿಸಲ್ಪಡುವ ಪಟ್ಟಣಗಳನ್ನೂ, ಬೆಟ್ಟ ನದಿಗಳಿಂದ ಸುತ್ತುವರೆಯಲ್ಪಟ್ಟ ಖೇಟವೆಂಬ ಹಳ್ಳಿಗಳನ್ನೂ, ಬೆಟ್ಟಗಳಿಂದ ಸುತ್ತುವರೆಯಲ್ಪಟ್ಟ ಖರ್ವಡವೆಂಬ ಗ್ರಾಮಗಳನ್ನೂ, ಐದುನೂರು ಹಳ್ಳಿಗಳಿಂದ ಸುತ್ತಲ್ಪಟ್ಟ ಮಡಂಬಗ್ರಾಮಗಳನ್ನೂ, ಸಮುದ್ರತೀರದಲ್ಲಿರುವ ಪಟ್ಟಣಗಳನ್ನೂ, ನದಿಯ ದಡಗಳಲ್ಲಿರುವ ದ್ರೋಣಾಮುಖಗಳನ್ನೂ, ಮಸ್ತಕದವರೆಗೆ ಪೇರಿಸಿದ ಧಾನ್ಯಗಳನ್ನೂ ಭವಿಸುವ ಜನನಿವಾಸಿಗಳಾದ ಸಂವಾಹಗಳನ್ನೂ, ಘೋಷ, ಸಂಗ್ರಹ, ಗೋವ್ರಜ ಎಂಬ ಗ್ರಾಮಗಳನ್ನೂ, ಅವನ್ನು ಆಳುವ ಕಂದಾಯ ವಸೂಲು ಮಾಡುವ, ಬಿಟ್ಟಿ ಕೆಲಸ ಮಾಡಿಸಿಕೊಳ್ಳುವ ಭೋಗಿಗಳಾದ ರಾಜರ ವರ್ಗವನ್ನೂ ನಿರ್ಮಿಸಿದನು. ೬೪. ಗುರುವಿನ ಅಪ್ಪಣೆಗನುಸಾರವಾಗಿ ಹಲವು ಪುರಗಳನ್ನು ಇಂದ್ರನು ನಿರ್ಮಿಸಿದನು. ಆದ್ದರಿಂದ 'ಪುರಂದರ[1]'ನೆಂಬ ಹೆಸರುಪಡೆದು ಭಕ್ತಿಭರದಿಂದ ತಲೆಯ ಕಿರೀಟವನ್ನು ಬಾಗಿಸಿ

---

೧ 'ಶಿಲಾವ್ಯೂಢ' ಎಂಬ ಪಾಠವನ್ನು ಪೂ. ಪು. (೧೬-೧೭೩) ಕ್ಕನುಸಾರವಾಗಿ ಶಿರೋವ್ಯೂಢ ಎಂದು ತಿದ್ದಲಾಗಿದೆ.

1 ಪುರಾಣಿದಾರಯತಿ ವಿಭಜತೀತಿ ಪುರಂದರ :

ಪಡೆದು, ತನ್ನ ಪಡೆದ ಸಕಳಕ್ಷತ್ರಿಯವಣಿಕ್ಛೂದ್ರರೆಂಬ ಮೂಱುವರ್ಣಂಗಳೊಳಗೆ ಕ್ಷತತ್ರಾಣಾದಿ ಗುಣೋಪೇತಮಪ್ಪ ಅಖಿಳಕ್ಷತ್ರಿಯಸಮೂಹಕ್ಕೆ ಶಸ್ತ್ರಕರ್ಮಮುಮಂ, ವಣಿಗ್ವಂಶಕ್ಕೆ ಪಾಶುಪಾಲ್ಯಕೃಷಿ ಪಣ್ಯಕರ್ಮಂಗಳುಮಮಂ, ಮತ್ತಂ ಸ್ಪೃಶ್ಯಾಸ್ಪೃಶ್ಯ ಕಾರುಗಳುಮೆಂದಿರ್ತೆಱದ ಶೂದ್ರಸಂತತಿಗೆ ಶುಶ್ರೂಷಾನಿಯೋಗಂಗಳುಮಂ, ಯಥಾಯೋಗ್ಯಮುಪದೇಶಂಗೆಯ್ದು ವರ್ಣಸಂಕರಮಾಗಲೀಯದೆ ತಮ್ಮ ತಮ್ಮ ಜಾತಿಗಳೊಳ್ ನಣ್ಪುಮಂ ಕೊಳ್ಕೊಡೆಯುಮಮಂ ನಿಯೋಜಿಸಿ,

॥ತರಳ॥

ಜನಪದಂಗಳನೆಯ್ದೆ ಮಾಡಿ ಪುರಂಗಳಂ ಸಮಕಟ್ಟಿ ಮೂ
ಱನಿಸಿ ವರ್ಣಮನಿಂತು ಮುಂ ಸಮಕಟ್ಟಿಯುಂ ಬೞಿಕಂ ಜಗ
ಜ್ಜನಕನೊಟ್ಟಿದ ಪೊನ್ನ ರಾಶಿಗಳಂ ಜಗಜ್ಜನಕಿತ್ತು ತ
ತ್ಕನಕವರ್ಣದಿನೇಕವರ್ಣಮೆ ಮಾಡಿದಂ ಜಗಮೆಲ್ಲಮಂ ೬೫

ವಿತತಾಷಾಢದ ಬಹುಳ
ಪ್ರತಿಪದ್ದಿನದಂದು ಕೀರ್ತಿ ನೆಗೞ್ದಿರೆ ಭಗವ
ತ್ಕೃತಯುಗಮಾದುದಱಿಂದಂ
ಕೃತಯುಗಮೆಂಬರ್ ಪುರಾಣವಿದರಿದನೀಗಳ್ ೬೬

ನಮಸ್ಕರಿಸಿ ಅಮರೇಂದ್ರನು ಅಮರಲೋಕಕ್ಕೆ ಹಿಂದಿರುಗಿದನು. ವ॥ ಬಳಿಕ ಪ್ರಜಾಜೀವನನಿರ್ವಾಹಕ್ಕಾಗಿ ಸೇವಾಧರ್ಮಸಾಧಕವಾದ ಖಡ್ಗಕಾರ್ಯವನ್ನೂ, ಅನೇಕ ಲಿಪಿಗಳನ್ನು ಬರೆಯಲಿಕ್ಕೆ ಯೋಗ್ಯವಾದ ಮಷಿಕರ್ಮವನ್ನೂ, ರೈತಕುಟುಂಬೋಚಿತವಾದ ಕೃಷಿಕರ್ಮವನ್ನೂ, ಶಾಸ್ತ್ರದಿಂದುಪಜೀವಿಸಲು ಸಹಾಯಕವಾದ ಶಾಸ್ತ್ರವಿದ್ಯೆಯನ್ನೂ, ವ್ಯಾಪಾರಿಜನಕ್ಕುಚಿತವಾದ ವಾಣಿಜ್ಯವನ್ನೂ, ಕೈಗಳ ನಿಪುಣತೆಯಿಂದ ಮಾಡಲರ್ಹವಾದ ಚಿತ್ರಕಲಾಪ ಪತ್ರಚ್ಛೇದಾದಿ ರೂಪವಾದ ಶಿಲ್ಪವನ್ನೂ ಜನರಿಗೆ ಉಪದೇಶಿಸಿದನು. ಕ್ಷತ್ರಿಯ-ವಣಿಕ್-ಶೂದ್ರರೆಂಬ ಮೂರು ವರ್ಣದ ಜನಗಳ ಮಧ್ಯದಲ್ಲಿ ಪೆಟ್ಟಿನಿಂದ ರಕ್ಷಿಸಲರ್ಹವಾದ ಗುಣಗಳಿಂದ ಕೂಡಿದ ಕ್ಷತ್ರಿಯಸಮೂಹಕ್ಕೆ ಶಸ್ತ್ರಕರ್ಮವನ್ನೂ, ವರ್ತಕವಂಶಕ್ಕೆ ಪಶುಪಾಲನೆ, ವ್ಯವಸಾಯ ಮತ್ತು ಕ್ರಯವಿಕ್ರಯಗಳನ್ನು ನಡಸುವ ಕಾರ್ಯಗಳನ್ನೂ ಸ್ಪೃಶ್ಯಾಸ್ಪೃಶ್ಯರೆಂದು ಇಬ್ಬಗೆಯಾದ ಕರ್ಮಕರ ಶೂದ್ರರಿಗೆ ಶುಶ್ರೂಷಾಕಾರ್ಯವನ್ನೂ ಯಥಾಯೋಗ್ಯವಾಗಿ ನಡೆಸುವಂತೆ ಉಪದೇಶಿಸಿದನು. ವರ್ಣಸಂಕರಗೊಳ್ಳದಂತೆ ತಮ್ಮ ತಮ್ಮ ಜಾತಿಜನರಲ್ಲಿ ಸಂಬಂಧವನ್ನೂ ಕೊಳ್‌ಕೊಡುಗೆಯನ್ನೂ ಮಾಡಿಕೊಳ್ಳುವಂತೆ ಆಜ್ಞಾಪಿಸಿದನು.[1] ೬೫. ಆದಿದೇವನು ದೇಶಗಳನ್ನು ಸೃಷ್ಟಿಸಿ ಪಟ್ಟಣಗಳನ್ನು ಕಟ್ಟಿಸಿದನು. ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಮೂರು ವರ್ಣಗಳನ್ನು ನಿರ್ಮಿಸಿದನು. ಬಳಿಕ ಆ ಜಗಜ್ಜನಕನು ಚಿನ್ನದ ರಾಶಿಯೆಲ್ಲವನ್ನೂ ಜಗತ್ತಿನ ಜನಕ್ಕೆ ಕೊಟ್ಟು ಆ ಕನಕವರ್ಣದಿಂದ ಜಗತ್ತೆಲ್ಲವನ್ನೂ ಏಕವರ್ಣವಾಗುವಂತೆಸಗಿದನು! ೬೬. ಆಷಾಢಬಹುಳದ ಪಾಡ್ಯದ ದಿನದಂದು ಭಗವಂತನಿಂದ ಯುಗವು

---

1 ವೈದಿಕಮತದಲ್ಲಿರುವಂತೆ ಜೈನಮತದಲ್ಲಿಯೂ ಜಾತಿವ್ಯವಸ್ಥೆ, ಸ್ಪೃಶ್ಯಾಸ್ಪೃಶ್ಯ ವಿಭಾಗಗಳಿವೆಯೆಂಬುದನ್ನು ಗಮನಿಸಬೇಕು.

**ವ॥ ಅಂತು ಕೃತಯುಗಾರಂಭಸೂತ್ರಧಾರನೆನಿಸಿದಾದ್ಯಬ್ರಹ್ಮಂಗೆ ರಾಜ್ಯಾಭಿಷೇಕಂಗೆಯ್ಯ ಬಗೆಯಂ ಬಗೆದು,**

**ಸುರಕಾಂತಾನೃತ್ಯಮೆತ್ತಂ ಪಸರಿಸಿರೆ ನಭೋಭಾಗದೊಳ್ ದೇವತೂರ್ಯ**
**ಸ್ವರಮಾಶಾಚಕ್ರದೊಳ್ ಬಳ್ವಳಬಳೆದಿರೆ ನಾನಾವಿಮಾನಂಗಳೊಳ್ ಭಾ**
**ಸುರರತ್ನಜ್ಯೋತಿಗಳ್ ತಳ್ತಳಿಸಿರೆ ಸುರವೃಂದಾನ್ವಿತಂ ಬಂದನಾಗಳ್**
**ಸುರರಾಜಂ ರಾಜದೈರಾವತವಿಮಳತಳಸ್ಕಂಧದೇಶಾಭಿರಾಮಂ ೬೭**

**ವ॥ ಅಂತು ಭುವನತ್ರಯಚೂಡಾಮಣಿಯ ರಾಜ್ಯಾಭಿಷೇಕದೊಸಗೆಯಂ ನಾಭಿರಾಜಾಧಿರಾಜ ಸಭೆಗಱಿಪಿ ಮಹಾನದ್ಯುಭಯತಟಮೃದುಮೃತ್ಸ್ನಾವಿಲಸಿತವೇದಿಕಾವಿರಾಜಮಾನದೊಳ್ ಚಂಚತ್ಪಂಚರತ್ನಚೂರ್ಣವಿರಚಿತರಂಗವಲ್ಲೀವಿಳಾಸವಿರಾಜಿತಸುನಾಸೀರಶರಾಸನದೊಳ್ ಪರಸ್ಪರಸ್ಪರ್ಧಮಾನ ಪರಿಕ್ಷಿಪ್ತ ಮಲ್ಲಿಕಾಮುಕುಳಮುಕ್ತಾಫಳೋಪಶೋಭಿತದೊಳಿಂದ್ರನೀಲಮಣಿಕುಟ್ಟಿಮಸಂಕ್ರಾಂತ ಮೌಕ್ತಿಕದಾಮಾಭಿರಾಮದೊಳ್ ಪರಿವಿರಚಿತ ಚಿತ್ರಾಂಬರವಿತಾನಚ್ಛಾಯಾಚ್ಛುರಿತರಂಗಭೂಮಿಯೊಳ್ ಮಂಗಳೋಪಕರಣಸಮುದ್ಧರಣನಿಯಮಿತಾನೇಕನಾಕಕಾಮಿನೀನಿರುದ್ಧಸಂಚಾರಮಾರ್ಗದೊಳ್ ಅಮರವಾರವನಿತಾಕರಪಲ್ಲವವಿಧೂಯಮಾನ ಚಾರುಚಾಮರಮರುದಾಂದೋಳಿತಪ್ರಾಕಾರಪ್ರಲಂಬಮಾನ ಮಂದಾರಮಾಳಾವಿಳಾಸದೊಳ್ ಅನ್ಯೋನ್ಯಹಸ್ತಪರಂಪರೋಪನೀಯಮಾನ ನಾನಾಸ್ನಾನೋಪಕರಣದೊಳ್ ಗಂಧರ್ವಸಮಾರಬ್ಧ ಸಂಗೀತಮೃದುಮೃದಂಗನಾದಪ್ರಮೋದಿತಾಶೇಷರಾಜದ್ರಾಜಕದೊಳ್ ಸಂಚರತ್ಸುರವಿಳಾಸಿನೀಲಲಿತಮೃದುಪದವಿನ್ಯಾಸಮಂಜುಗುಂಜನ್ಮಂಜೀರಕ ಮನೋಹರ**

ಕೃತವಾಯಿತು, ಆದಕಾರಣ ಆ ಯುಗವನ್ನು ಕೃತಯುಗವೆಂದು ಪುರಾಣವಿದರು ಕರೆಯತೊಡಗಿದರು. ವ॥ ಹೀಗೆ ಕೃತಯುಗಾರಂಭದ ಸೂತ್ರಧಾರನಾದ ಆದಿಬ್ರಹ್ಮನಿಗೆ ಪಟ್ಟಾಭಿಷೇಕ ಮಾಡಲು ದೇವೇಂದ್ರನು ಬಗೆದನು. ೬೭. ಸುರಕಾಂತೆಯರ ನೃತ್ಯವು ಆಕಾಶಭಾಗದ ಎಲ್ಲೆಡೆಗಳಲ್ಲಿಯೂ ಹರಡಿತ್ತು. ದೇವತೂರ್ಯಗಳ ಧ್ವನಿಗಳು ದಿಕ್ಚಕ್ರದಲ್ಲೆಲ್ಲಾ ವಿಜೃಂಭಿಸುತ್ತಿದ್ದುವು. ನಾನಾವಿಮಾನಗಳಲ್ಲಿ ಭಾಸುರವಾದ ರತ್ನದ ಕಾಂತಿಗಳು ತಳತಳಿಸುತ್ತಿದ್ದುವು. ದೇವಸಮೂಹದಿಂದ ಸಮೇತನಾಗಿ ದೇವರಾಜನು ಐರಾವತದ ವಿಸ್ತಾರವಾದ ಹೆಗಲಿನ ಮೇಲೆ ಕುಳಿತು ಬಂದನು. ವ॥ ಹೀಗೆ ಲೋಕತ್ರಯಕ್ಕೂ ಚೂಡಾಮಣಿಯಾದ ಆದಿಬ್ರಹ್ಮನ ರಾಜ್ಯಾಭಿಷೇಕೋತ್ಸವ ಪ್ರಯುಕ್ತವಾದ ಸಂತೋಷವನ್ನು ನಾಭಿರಾಜನೇ ಮೊದಲಾದ ರಾಜರ ಸಭೆಗೆ ಇಂದ್ರನು ತಿಳಿಯಪಡಿಸಿದನು. ಮಹಾನದಿಯ ಎರಡೂ ದಂಡೆಗಳಲ್ಲಿನ ಮಣ್ಣುಗಳಿಂದ ವಿನಿರ್ಮಿತವಾದ ವೇದಿಕೆಯೊಂದಿತ್ತು. ಅದರ ಮೇಲೆ ಬರೆದ ಪಂಚರತ್ನಗಳ ಚೂರ್ಣದ ರಂಗೋಲಿಯ ವಿಲಾಸವು ಕಾಮನಬಿಲ್ಲಿನ ವಿಲಾಸವನ್ನು ತಳೆದಿತ್ತು. ಅದು ಪರಸ್ಪರವಾಗಿ ಸ್ಪರ್ಧಿಸುತ್ತಿರುವುವೋ ಎಂಬಂತೆ ಎರಚಲಾದ ಮಲ್ಲಿಗೆಮೊಗ್ಗುಗಳಿಂದಲೂ ಶೋಭಿಸಿತು. ಇಂದ್ರನೀಲಮಣಿಗಳ ನೆಲಗಟ್ಟಿನಲ್ಲಿ ಸಂಕ್ರಾಂತವಾದ ಮುತ್ತಿನ ಹಾರಗಳಿಂದ ಸುಂದರವಾಯಿತು. ಚಿತ್ರ ವಿಚಿತ್ರಗಳಾದ ಬಟ್ಟೆಗಳ ನೆರಳಿನಿಂದ ರಂಗಭೂಮಿಯು ವ್ಯಾಪ್ತವಾಗಿದ್ದಿತು. ಮಂಗಳವಸ್ತುಗಳನ್ನು ತರಲು ನಿಯುಕ್ತರಾದ ಅನೇಕ ದೇವಸ್ತ್ರೀಯರಿಂದ ಸಂಚಾರಮಾರ್ಗವು ನಿರುದ್ಧವಾಗಿತ್ತು. ಅಪ್ಸರೆಯರು ಕರಪಲ್ಲವಗಳಿಂದ ಬೀಸುವ ಚಾಮರದ ಗಾಳಿಯಿಂದ ಪ್ರಾಕಾರದ ಗೋಡೆಗಳಲ್ಲಿ ತೂಗುಹಾಕಿದ್ದ

ಝುಂಕಾರಪ್ರವರ್ಧಮಾನಮದಾಳಿಕುಳಕೋಳಾಹಳದೊಳ್ ರಾಜಭವನಾಂಗಣಮಧ್ಯಸ್ಥಿತ ರಾಜ್ಯಾಭಿಷೇಕ ಮಂಟಪದೊಳ್,

ಮುನ್ನಮೆ ನಿಱಿಸಿದ ಮಣಿಖಚಿ
ತೋನ್ನತಹರಿಪೀಠದೊಳ್ ಜಗತ್ಪತಿಯಂ ಮಾ
ನೋನ್ನತನಂ ಪ್ರಾಙ್ಮುಖದಿಂ
ದುನ್ನತಸುರಮೌಳಿಲಾಲಿತಾಂಘ್ರಿದ್ವಯನಂ ೭೮

ವ॥ ಇರಿಸಿ ಮಹಾಸರಿತ್ಸರಸೀಸಮುದ್ರನಂದೀಶ್ವರದ್ವೀಪವಾಸಿಗಳಿಂದಂ ಬಂದ ತೀರ್ಥೋದಕಂಗಳಿಂದಂ ತೀವಿದ ಕಳಧೌತಕಳಶಂಗಳನಮರತರುಪಲ್ಲವಪ್ರಸೂನಪರಿಪೂರ್ಣ ಮುಖಂಗಳನಮರರಾಜಸಮಾಜಮುಂ ನಾಭಿರಾಜಂ ಬೆರಸೆತ್ತಿಕೊಂಡು,

ದೆಸೆಗಳ್ ದೇವಾಂಗನಾಮಂಗಳಕಳಕಳದಿಂದಂ ದಿಗಂತಂಬರಂ ಘೂ
ರ್ಣಿಸೆ ಕೈಮಿಕ್ಕಿರ್ದ ರಾಗಂ ಬೆರಸು ಸುರಿಯೆ ತದ್ವಾರಿಧಾರಾಸಹಸ್ರ
ಪ್ರಸರಂಬೆತ್ತತ್ತಮಿತ್ತಂ ಪುದಿದೊದವಿರೆ ಮುಂ ಪೋದ ಜನ್ಮಾಭಿಷೇಕ
ಕ್ಕೆ ಸಮಂ ಮೇಲೆಂಬಿನಂ ಕಣ್ಗೆಸೆದುದು ಜಗತೀರಾಜರಾಜ್ಯಾಭಿಷೇಕಂ ೭೯

ಮಂದಾರಮಾಲೆಗಳು ಅಲುಗಾಡುತ್ತ ವಿಲಾಸವನ್ನುಂಟುಮಾಡುತ್ತಿದ್ದುವು. ಸ್ನಾನೋಪಕರಣಗಳು ಒಬ್ಬರ ಕೈಯಿಂದ ಮತ್ತೊಬ್ಬರ ಕೈಗಳಿಗೆ ತಲುಪುತ್ತಿದ್ದುವು. ಮಂಚಗಳ ಮೇಲೆ ಪೇರಿಸಲಾಗಿದ್ದ ನಾನಾತರದ ಬಂಗಾರದ ಗಿಂಡಿಗಳಿಂದಲೂ ಮಂಗಳಜಲಗಳಿಂದ ತುಂಬಿದ ಚಿನ್ನದ ಬಿಂದಿಗೆಗಳಿಂದಲೂ ಮಣಿದರ್ಪಣಗಳಿಂದಲೂ ದಿಗಂಗನೆಯ ಮುಖವು ಅಲಂಕೃತವಾಗಿದ್ದಿತು. ಗಂಧರ್ವದಿಂದ ಪ್ರಾರಂಭಿಸಲ್ಪಟ್ಟ ಸಂಗೀತದಲ್ಲಿ ಬಾರಿಸಲಾಗುತ್ತಿದ್ದ ಮದ್ದಳೆಗಳ ನಾದವನ್ನು ಕೇಳಿ ನೆರೆದಿದ್ದ ರಾಜಕುಲವೆಲ್ಲ ಸಂತೋಷಗೊಂಡಿತು. ಓಡಾಡುತ್ತಿರುವ ಸುರಸ್ತ್ರೀಯರ ಮೃದುಪದನ್ಯಾಸದಿಂದುಂಟಾದ ಕಾಲಂದುಗೆಗಳ ಮನೋಹರವಾದ ಶಬ್ದಗಳಿಂದಲೂ ದುಂಬಿಗಳ ಝೇಂಕಾರಗಳ ಕೋಲಾಹಲಗಳಿಂದಲೂ ವ್ಯಾಪಿಸಿದ್ದಿತು. ರಾಜಭವನಾಂಗಣದ ಮಧ್ಯದಲ್ಲಿದ್ದ ಆ ರಾಜ್ಯಾಭಿಷೇಕ ಮಂಟಪದಲ್ಲಿ ೭೮. ಈ ಮೊದಲೇ ಅಣಿಗೊಳಿಸಲಾದ ಮಣಿಖಚಿತವೂ ಉನ್ನತವೂ ಆದ ಸಿಂಹಾಸನದ ಮೇಲೆ ಶ್ರೇಷ್ಠರಾದ ದೇವತೆಗಳ ಕಿರೀಟಗಳಿಂದ ಸೇವಿತವಾದ ಪಾದದ್ವಯವುಳ್ಳ ಮಾನೋನ್ನತನಾದ ಜಗತ್ಪತಿ ಪುರುದೇವನನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿದರು. ವ॥ ಮಹಾನದಿಗಳಿಂದಲೂ ಸರೋವರಗಳಿಂದಲೂ ಸಮುದ್ರಗಳಿಂದಲೂ ನಂದೀಶ್ವರದ್ವೀಪದ ವಾಸಿಗಳಿಂದಲೂ ಕೈಸೇರಿದ ತೀರ್ಥೋದಕಗಳಿಂದಲೂ ಪೂರ್ಣವಾದ ಕಲ್ಪವೃಕ್ಷಗಳ ಎಲೆ ಹೂವುಗಳಿಂದ ಅಲಂಕೃತವಾದ ಕಲಶಗಳನ್ನು ದೇವೇಂದ್ರ ಸಮಾಜವು ನಾಭಿರಾಜನೊಡನೆ ಎತ್ತಿಕೊಂಡು ಅಭಿಷೇಕಮಾಡಿತು. ೭೯. ದೇವಾಂಗನೆಯರ ಮಂಗಲಸೂಚಕವಾದ ಕೋಲಾಹಲಗಳಿಂದ ದಿಕ್ಕುಗಳೆಲ್ಲ ದಿಗಂತದವರೆಗೆ ಪ್ರತಿಧ್ವನಿಸಿದ್ದವು. ಅತಿಶಯುವಾದ ಪ್ರೀತಿಯಿಂದ ಸುರಿಸಲಾದ ನೀರಿನ ಧಾರಾಸಹಸ್ರಗಳು ಎತ್ತೆತ್ತಲೂ ಹರಡಿದ್ದುವು. ಈ ಜಗತೀರಾಜನ ರಾಜ್ಯಾಭಿಷೇಕವು ಹಿಂದಾದ ಜನ್ಮಾಭಿಷೇಕಕ್ಕೆ ಸರಿಮೇಲೆಂಬಂತೆ ಕಣ್ಗೆಸೆಯಿತು.

ವ॥ ತದನಂತರಮೆ ಮಾಗಧಾದಿವ್ಯಂತರಾಮರರ್ ಮಾಡಿದ ಧಾರಾಭಿಷೇಕದೊಳಂ ಪೌರರ್ ಮಾಡಿದ ನಳಿನೀಪತ್ರಪುಟಪ್ರಸಾದಿತ [ಸಾರವ][೧] ಜಳಪಾದಾಭಿಷೇಚನದೊಳಂ ಅಭಿಷೇಕವಿಧಿಯಂ ನಿರ್ವರ್ತಿಸಿ ವಿಶದಯಶಸ್ಸಿದ್ಧಾಧಿಷ್ಠಾನಪೀಠಮೆನಿಪ ಮಜ್ಜನಪೀಠಮನಧಿಷ್ಠಿಸಿದಾಗಳ್, ಕೆಲಂಬರರುಣ ಮಣಿಕುಳಪ್ರಭಾಜಾಳಜಟಲಿತಪಿಂಜರಂಗಳಾಗಿ ನಿಜರಾಗಪ್ರವಾಹಶಂಕೆಯಂ ಮಾಡುವ ಜಳಂಗಳಿಂದಂ, ಕೆಲಂಬರಿಂದುಕಾಂತಕಳಶಕಿರಣದ್ವಿಗುಣಧವಳನಿಜದಂತಕಾಂತಿಬಹಳಪರಿಹಾಸಚ್ಛಾಯಾವಿಭ್ರಮಮಂ ಪುಟ್ಟಿಸುವ ತೋಯಂಗಳಿಂದಂ, ಕೆಲಂಬರಿಂದ್ರನೀಲಕಳಶರುಚಿನಿಚಯನಿಚಿತಂಗಳಾಗಿ ನಿಕ್ಷಿಪ್ತಾಧಿವಾಸನೀಳ ನಳಿನದ್ಯುತಿಪಟಳವಿಭ್ರಾಂತಿಯಂ ಪಡೆವ ಸಲಿಲಂಗಳಿಂದಂ,

ನಿಮಿರ್ದಲ್ಲಾಡುವ ಕಾಂತಕುಂತಳಕುಳಂ ತುಂಗಸ್ತನಕ್ಷೋಭವಿ
ಭ್ರಮಮುತ್ಕಂಪದರಿದ್ರಮಧ್ಯಮುಚಿತಸ್ವೇದೋದ್ಗಮಂ ಮಜ್ಜನ
ಶ್ರಮದೊಳ್ ಗಾಡಿಯನೀಯೆ ಸೌಂದರಿಯರೇಕಚ್ಛತ್ರರಾಜ್ಯಾಭಿಷೇ
ಕಮಿದೆಂಬಂತಿರೆ ಮಜ್ಜನಂಬುಗಿಸಿದರ್ ಮನ್ವನ್ವಯೋತ್ತಂಸನಂ ೭೦

ವ॥ ಆಗಳ್ ಮಜ್ಜನಾವಸರಮಂಗಳಪಾಠಕಮಧುರನಿನದಮನಾಲಿಸುತ್ತುಂ,

ವ॥ ಬಳಿಕ ಮಾಗಧಾದಿ ವ್ಯಂತರದೇವತೆಗಳು ಮಾಡಿದ ಪಾದಾಭಿಷೇಕದಿಂದಲೂ ತಾವರೆಯೆಲೆಗಳ ದೊನ್ನೆಗಳಲ್ಲಿ ಸರಯೂನದಿಯ ನೀರನ್ನು ತಂದು ಪೌರರು ಮಾಡಿದ ಪಾದಾಭಿಷೇಚನದಿಂದಲೂ ಅಭಿಷೇಕವಿಧಿಯನ್ನು ನೆರವೇರಿಸಿ ಸ್ವಚ್ಛವೂ ಯಶಸ್ಸಿಗೆ ಪಾತ್ರವೂ ಸಿದ್ಧರಿಂದ ಮಾತ್ರ ಹತ್ತಲು ಯೋಗ್ಯವೂ ಆದ ಮಜ್ಜನಪೀಠವನ್ನು ವೃಷಭಸ್ವಾಮಿಯು ಏರಿದನು. ಆಗ ಕೆಂಪುರತ್ನಗಳ ಕಾಂತಿಗಳಿಂದ ಹೊಂಬಣ್ಣಕ್ಕೆ ತಿರುಗಿ ಆ ಸ್ತ್ರೀಯರ ರಾಗಪ್ರವಾಹವೋ ಎಂಬ ಸಂದೇಹವನ್ನುಂಟುಮಾಡುವ ನೀರುಗಳಿಂದಲೂ, ಮತ್ತೆ ಕೆಲವರು ಚಂದ್ರಕಾಂತಶಿಲೆಗಳಿಂದ ನಿರ್ಮಿತವಾದ ಕಲಶಗಳ ಕಿರಣಗಳಿಂದ ಎರಡರಷ್ಟು ಬಿಳುಪಾಗಿ, ತಮ್ಮ ಹಲ್ಲುಗಳ ಕಾಂತಿಗಳಿಂದ ತುಂಬಿದ ನಗುವಿನ ಕಾಂತಿಯ ಸಂದೇಹವನ್ನು ಹುಟ್ಟಿಸುವ ನೀರುಗಳಿಂದಲೂ, ಕೆಲವರು ಇಂದ್ರನೀಲಮಣಿಮಯವಾದ ಕಲಶಗಳ ಕಾಂತಿಸಮೂಹದಿಂದ ವ್ಯಾಪ್ತವಾಗಿ ನಿಕ್ಷಿಪ್ತಾಧಿವಾಸವುಳ್ಳ (ನೀರಿನಲ್ಲಿಟ್ಟ) ನೀಲಕಮಲದಳಗಳ ಕಾಂತಿಸಮೂಹದ ಭ್ರಾಂತಿಯನ್ನುಂಟುಮಾಡುವ ನೀರುಗಳಿಂದಲೂ ಕೆಲವು ಸುಂದರಿಯರು ಅಭಿಷೇಕವನ್ನು ಮಾಡಿಸಿದರು. ೭೦. ಕೆಲವು ಜನ ಚೆಲುವೆಯರು ಮನುಕುಲೋತ್ತಂಸನಾದ ವೃಷಭದೇವನಿಗೆ ಏಕಚ್ಛತ್ರಾಧಿಪತ್ಯಸೂಚಕವಾದ ರಾಜ್ಯಾಭಿಷೇಕವೋ ಎಂಬಂತೆ ಮಜ್ಜನವನ್ನು ಮಾಡಿಸಿದರು. ಆಗ ಆ ಸುಂದರಿಯರ ಚೆಲ್ವಾದ ಕೇಶಪಾಶವು ನಿಮಿರಿ ಅಲ್ಲಾಡುತ್ತಿತ್ತು. ಅವರ ತುಂಗಸ್ತನಗಳು ಕ್ಷೋಭೆಗೊಂಡು ವಿಭ್ರಮಗೊಂಡಿದ್ದುವು. ಅವರ ನಡುವು ಕೃಶವಾಗಿ ಬಳುಕುತ್ತಿತ್ತು. ದೇಹದ ಮೇಲೆ ಬೆವರುಹನಿಗಳು ಎದ್ದು ತೋರುತ್ತಿದ್ದುವು. ಹೀಗೆ ಮಜ್ಜನಕಾರ್ಯದಲ್ಲಿ ಉಂಟಾದ ಶ್ರಮವು ಅವರಿಗೆ ಒಂದು ಅಂದವನ್ನುಂಟುಮಾಡಿತು. ವ॥ ಮಜ್ಜನದ ಕಾಲದಲ್ಲಿ ಮಂಗಳಪಾಠಕರ ಮಧುರವೂ, ಗಂಭೀರವೂ ಆದ ಶಬ್ದವನ್ನು

---

೧ ಸಾರ (ಅನ್ಯತ್ರ), ಸಾರವ-ಸರಯೂ ನದಿಗೆ ಸಂಬಂಧಿಸಿದ್ದು (ಪೂ. ಪು. ೧೬-೨೨೫)

ಅಂಭೋಭಾರವಿಜೃಂಭಿತ
ಕುಂಭಾಂಭೋದಂಗಳಂದದಿಂ ಸುರಿಯೆ ಚತುಃ
ಕುಂಭಂಗಳ್ ಭೂಭುವನ
ಸ್ತಂಭಂ ಮಜ್ಜನಮನೆಯ್ದೆ ನಿರ್ವರ್ತಿಸಿದಂ ೭೧

ವ|| ಅಂತು ನಿಷ್ಪನ್ನಮಜ್ಜನನುಂ ವಿನಿಹಿತನೀರಾಜನನುಮಾಗಿ ಸುರರಾಜಸಮರ್ಪಿತಸಂತಾನ ಕುಸುಮದಾಮಾಂಬರಭೂಷಣಪ್ರಸಾಧಿತಂ ಪುರುದೇವಂ ಮೃಗೇಂದ್ರವಿಷ್ಟರದೊಳಿರೆ ನಾಭಿರಾಜಂಬೆರಸು ಬಂದು,

||ಮಾಲಿನೀ||

ಸಕಲಮಕುಟಬದ್ಧಾಧೀಶನ್ಯೆ ದೇವ ನೀನುಂ
ಮಕುಟಧರನುಮಾಗಲ್ವೇಟ್ಕುಮೆಂದಾಗಳಿಂದ್ರಂ
ಮಕುಟದೊಡನಲಂಪಿಂ ಪಟ್ಟಮಂ ಕಟ್ಟೆ ಲೋಕ
ಪ್ರಕಟಮೆನೆ ಪೊದಲ್ದತ್ತಾದಿದೇವಪ್ರಭಾವಂ ೭೨

ವ|| ಅಂತನೇಕಮಕುಟಬದ್ಧ ಮಣಿಮಕುಟಮಣಿಕರ್ಷಣಮಸೃಣಿತಚರಣಂ ಆಪ್ತಾಧಿರಾಜ್ಯಂ ನಾಭಿರಾಜ ಸನ್ನಿಧಾನದೊಳಖಿಳಪ್ರಜಾಪಾಲನದೊಳತಿಪ್ರಯತ್ನಪರನಾಗಿ ತನ್ನ ಮುನ್ನ ಪಡೆದ ವರ್ಣತ್ರಯಕ್ಕಂ ಭರತನಿಂದಮಿನ್ನಪ್ಪ ವಿಪ್ರವರ್ಣಕ್ಕಂ ಯಥೋಚಿತವೃತ್ತಿಗಳನಱಿಪಲೆಂದು,

ವದನಂ ತೋಳ್ ತೊಡೆ ಪಾದಮೆಂಬಿವನಿವಂ ಶುಶ್ರೂಷೆಗೆಯ್ವಲ್ಕೆ ಲಾ
ಭದಲಂಪಿಂ ನಡೆಯಲ್ಕೆ ಕೈದುವಿಡಿಯಲ್ಕೆಂದಂದಜಂ ಬೇಱೆ ತೋ
ಱೆದೊಡಾ ವರ್ಣಚತುಷ್ಕಮಂ ಕುಮತಿಗಳ್ ತತ್ಸ್ಥಾನದೊಳ್ ಮುನ್ನ ಪು
ಟ್ಟಿದುವೆಂಬರ್ ಪುಸಿ ನನ್ನಿಯೆಂದಱಿಯದೇಂ ಲೋಕಂ ಮರುಳ್ಗೊಂಡುದೋ ೭೩

ಆಲಿಸುತ್ತಾ, ೭೧. ನೀರಿನಿಂದ ಭಾರವಾದ ಮೋಡಗಳಂತಿರುವ ನೀರುದುಂಬಿದ ನಾಲ್ಕು ಕುಂಭಗಳು ನೀರನ್ನು ಸುರಿಯಿಸಲು ಭೂಮಿಯೆಂಬ ಭವನಕ್ಕೆ ಸ್ತಂಭಪ್ರಾಯನಾದ ಆದಿಪುರುಷನು ಮಜ್ಜನವನ್ನು ಮುಗಿಸಿದನು. ವ|| ಹೀಗೆ ಪುರುದೇವನು ಸ್ನಾನವನ್ನು ಮಾಡಿ, ನೀರಾಜನವನ್ನು ಹೊಂದಿ ಸುರರಾಜನಿಂದ ಸಮರ್ಪಿತವಾದ ಸಂತಾನಪುಷ್ಪಗಳ ಮಾಲೆಗಳಿಂದಲೂ, ಬಟ್ಟೆಗಳಿಂದಲೂ ಆಭರಣಗಳಿಂದಲೂ ಅಲಂಕೃತನಾಗಿ ಸಿಂಹಾಸನದಲ್ಲಿರಲು ಇಂದ್ರನು ನಾಭಿರಾಜನೊಡನೆ ಬಂದು, ೭೨. "ದೇವ! ಮುಕುಟ ಧಾರಿಗಳೆಲ್ಲರ ಒಡೆಯನು ನೀನು. ಆದಕಾರಣ ನೀನೂ ಮುಕುಟಧಾರಿಯಾಗಲೇಬೇಕು" ಎಂದು ಹೇಳುತ್ತಾ ಅವನಿಗೆ ಮುಕುಟದೊಡನೆ ಸಂತೋಷದಿಂದ ಪಟ್ಟಕಟ್ಟಿದನು. ತತ್ಫಲವಾಗಿ ಆದಿದೇವನ ಪ್ರಭಾವವು ಪ್ರಕಟವಾಗಿ ಪ್ರಕಾಶಿಸಿತು. ವ|| ಅಂತು ಅನೇಕ ಸಾರ್ವಭೌಮರ ಕಿರೀಟಗಳಲ್ಲಿನ ಮಣಿಗಳ ಉಜ್ಜಾಟದಿಂದ ಮೆದುವಾದ ಪಾದಗಳುಳ್ಳ ಪುರುದೇವನು ಚಕ್ರವರ್ತಿತ್ವವನ್ನು ಪಡೆದವನಾಗಿ ನಾಭಿರಾಜನ ಸನ್ನಿಧಾನದಲ್ಲಿ ಅಖಿಲ ಪ್ರಜೆಗಳ ಪಾಲನೆಯ ಕಾರ್ಯದಲ್ಲಿ ಉದ್ಯುಕ್ತನಾದನು. ಈ ಹಿಂದೆಯೇ ತಾನು ಸ್ಥಾಪಿಸಿದ ವರ್ಣತ್ರಯಕ್ಕೂ ಭರತನಿಂದೊದಗಲಿರುವ ವಿಪ್ರವರ್ಣಕ್ಕೂ ಯಥೋಚಿತವಾದ ವೃತ್ತಿಗಳನ್ನು (ಜೀವಿಕೆ) ತೋರಿಸಲು ೭೩. ಆದಿಬ್ರಹ್ಮನು ಮುಖ, ತೋಳು, ತೊಡೆ ಮತ್ತು ಪಾದಗಳನ್ನು ಕ್ರಮವಾಗಿ ಓದುವುದಕ್ಕಾಗಿಯೂ, ಆಯುಧಗಳನ್ನು ಹಿಡಿಯುವುದಕ್ಕಾಗಿಯೂ, ವೃದ್ಧ್ಯಂಶವನ್ನು

**ವ|| ಅಂತು ಭವಿಷ್ಯದ್ದ್ವಿಜನ್ಮವರ್ಣಕಧ್ಯಯನಾಧ್ಯಾಪನದಾನಪ್ರತಿಗ್ರಹ ಯಜನಯಾಜನವಿಶಿಷ್ಟ ವೃತ್ತಿಯುಮಂ, ಕ್ಷತ್ರಿಯಜಾತಿಗೆ ಸತ್ಯತ್ಯಾಗಪ್ರಜಾಪಾಲನಶರಣಾಗತರಕ್ಷಣಪ್ರಹರಣಕ್ಷಮಾದಿಗುಣಾ ಚರಣಮುಮಂ, ವಣಿಗ್ವಂಶಕ್ಕೆ ಜಳಸ್ಥಳಯಾತ್ರಾಸಂವೃತಮರ್ಥಪ್ರವರ್ತನಮುಂ, ಶೂದ್ರಾನ್ವಯಕ್ಕೆ ಬ್ರಾಹ್ಮಣಾದಿವರ್ಣತ್ರಯಕ್ಕಂ ಶುಶ್ರೂಷಾನ್ಯಕರ್ಮಕರಣೋಪಜೀವನಮುಮಂ ನಿಜೆಸಿ,**

**ಈ ಮಾಟ್ಕೆಯೊಳೆಸಗದರಂ**
**ಹಾಮಾಧಿಕ್ಕಾರದಂಡದಿಂ ದಂಡಿಪುದೆಂ**
**ದಾ ಮನುಕುಳತಿಳಕಂ ಪೇ**
**ಳ್ದೀ ಮಹಿಗಾತ್ಮೀಯಮಹಿಮೆಯಂ ಪ್ರಕಟಿಸಿದಂ** ೭೪

**ವ|| ಮತ್ತಂ ದಂಡಧರರಿಲ್ಲದಂದು ತಂತಮ್ಮ ವೃತ್ತಿಗಳಂ ಪ್ರಜೆಗಳತಿಕ್ರಮಿಸಿ ನಡೆಗುಮೆಂದುಂ, ಅತ್ಯಂತದುಷ್ಟಬಳವಜ್ಜನಗ್ರಹಸನದಿಂ ದುರ್ಬಳಜನಂಗಳೊಳ್ ಮತ್ಸ್ಯನ್ಯಾಯಂ ಪ್ರವರ್ತಿಸುಗುಮೆಂದುಂ, ಯಥೋಚಿತದಂಡಧರರಪ್ಪ ಭೂಪಾಳಕರನವರವರ ಪದವಿಯೊಳ್ ನಿಜೆಸಲ್ ಬಗೆದು ಮೂರ್ಧಾಭಿಷಿಕ್ತಮಂಡಳಿಕರಂ ಚತುಸ್ಸಹಸ್ರಮಕುಟಬದ್ಧಪರಿವೃತರಂ ಸೋಮಪ್ರಭಹರ್ಯಕಂಪನಕಾಶ್ಯಪರಂ ಬರಿಸಿ ತದುಚಿತಪ್ರತಿಪತ್ತಿಗಳೊಳಿರಿಸಿ, ತನಗಾಪ್ತನಪ್ಪ ಸೋಮಪ್ರಭಂಗೆ ಕುರರಾಜಾಭಿಧಾನಮನಿಟ್ಟು ಕುರುಕುಲಾಗ್ರಗಣ್ಯನಂ, ಹರಿಗೆ ಹರಿಕಾಂತನಾಮಮನಿಟ್ಟು ಹರಿವಂಶಧ್ವಜನಂ, ಅಕಂಪನಂಗೆ**

ಪಡೆಯುವುದಕ್ಕಾಗಿಯೂ, ಶುಶ್ರೂಷೆಯನ್ನು ಮಾಡುವುದಕ್ಕಾಗಿಯೂ ಇವೆಯೆಂದು ತೋರಿಸಿಕೊಟ್ಟು ನಾಲ್ಕು ವರ್ಣಗಳನ್ನು ಸೃಜಿಸಿದನು. ಇದಕ್ಕೆ ವಿರುದ್ಧವಾಗಿ ಕುಮತಿಗಳು ಬ್ರಾಹ್ಮಣಾದಿ ನಾಲ್ಕು ವರ್ಣಗಳು ಮುಖ ಮೊದಲಾದವುಗಳಿಂದ ಹುಟ್ಟಿದುವೆಂದು ಸಾರುವರು. ಈ ಹುಸಿಮಾತನ್ನು ಸತ್ಯವೆಂದು ಲೋಕವು ಹೇಗೆ ಭ್ರಾಂತಿಗೊಂಡಿತೋ ತಿಳಿಯದು! ವ|| ಅಂತು ಮುಂದಾಗಲಿರುವ ಬ್ರಾಹ್ಮಣವರ್ಣಕ್ಕೆ ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ, ಯಜನ, ಯಾಜನಾದಿಗಳನ್ನೂ ಕ್ಷತ್ರಿಯಜಾತಿಗೆ ಸತ್ಯ, ದಾನ, ಪ್ರಜಾಪಾಲನೆ, ಶರಣಾಗತರನ್ನು ಕಾಪಾಡುವುದು, ಯುದ್ಧ, ಕ್ಷಮಾದಿಗುಣಗಳನ್ನು ಅಭ್ಯಸಿಸುವುದೇ ಮುಂತಾದುವನ್ನೂ, ವಣಿಗ್ಜಾತಿಗೆ ಸ್ಥಲಜಲಯಾನಗಳನ್ನೂ ಕೃಷಿ ವ್ಯಾಪಾರಗಳಲ್ಲಿ ತೊಡಗುವುದನ್ನೂ, ಶೂದ್ರಜಾತಿಗೆ ಬ್ರಾಹ್ಮಣಾದಿ ಮೂರು ವರ್ಣಗಳ ಸೇವಾಕಾರ್ಯಗಳಲ್ಲಿಯೂ ಮತ್ತಿತರ ಕಾರ್ಯಗಳಲ್ಲಿಯೂ ತೊಡಗಿ ಜೀವನೋಪಾಯ ವನ್ನು ನಿರ್ವಹಿಸುವಂತೆ ಮಾಡುವುದನ್ನೂ ಏರ್ಪಡಿಸಿದನು. ೭೪. ಈ ರೀತಿಯಿಂದ ತಮ್ಮ ತಮ್ಮ ವರ್ಣೋಚಿತ ಕಾರ್ಯಗಳನ್ನು ನಿರ್ವಹಿಸದಿರುವವರನ್ನು "ಹಾ, ಮಾ' ಎಂದು ಧಿಕ್ಕರಿಸಿ ದಂಡಿಸಬೇಕು' ಎಂದು ಆಜ್ಞಾಪಿಸಿ ಮನುಕುಲತಿಲಕನು, ಆತ್ಮಮಹಿಮೆ ಯನ್ನು ಭೂಮಿಯಲ್ಲಿ ಪ್ರಕಟಿಸಿಕೊಂಡನು. ವ|| ಮತ್ತೆ "ದಂಡಧರರಿಲ್ಲದಿದ್ದರೆ ಪ್ರಜೆಗಳು ತಮ್ಮ ತಮ್ಮ ವೃತ್ತಿಗಳಿಂದ ಪರಿಚ್ಯುತರಾಗುವರು. ಅತ್ಯಂತ ದುಷ್ಟರೂ ಬಲಿಷ್ಠರೂ ಒಬ್ಬರನ್ನೊಬ್ಬರು ನುಂಗಿ ದುರ್ಬಲರಲ್ಲಿ ಮತ್ಸ್ಯನ್ಯಾಯ[1]ವು ತಲೆಯಿಕ್ಕುವಂತೆ ಮಾಡುವರು" ಎಂದು ಆಲೋಚಿಸಿ ಉಚಿತದಂಡಧಾರಿಗಳಾದ ರಾಜರನ್ನು ಸ್ಥಾಪಿಸಬೇಕೆಂದು ಬಗೆದು

---

1 'ದೊಡ್ಡ ಮೀನು ಸಣ್ಣಮೀನನ್ನು ನುಂಗುವುದು'

ಶ್ರೀಧರಾಂಕನಾಮಮನಿಟ್ಟು ನಾಥಾನ್ವಯಪುರಸ್ಸರನಂ, ಕಾಶ್ಯಪಂಗೆ ಮಘವಾಖ್ಯಮನಿಟ್ಟು ಉಗ್ರವಂಶಲಲಾಮನಂ ಮಾಡಿ, ಕಚ್ಛಮಹಾಕಚ್ಛಪ್ರಮುಖಧರಾಧಿನಾಥರುಮನಧಿರಾಜಪದವಿಯೊಳ್ ನಿಱಿಸಿ,

ಸುತರುಮನಂತವರ್ಗಂಭಿ
ಮತಮೆಂತದನಿತ್ತು ನಿಱಿಸಿದಂ ಪ್ರಭು ನಿಜಸಂ
ತತಿಯಂ ತಣಿಪಿ ಸುಹೃತ್ಸಂ
ತತಿಯಂ ಪೆರ್ಚಿಪುದು ರಾಜ್ಯಫಲಮಿನಿತೆ ವಲಂ ೭೫

ವ|| ಅಂತಾದಿದೇವನಿಕ್ಷುರಸಸಂಗ್ರಹಣಸಮಯಾಹೂತಭೂತಳನಪ್ಪುದಱಿಂದಂ ಇಕ್ಷ್ವಾಕುಕುಳತಿಳಕನುಂ, ಪ್ರಜಾಜೀವನೋಪಾಯನಮನದಿಂದೆ ಮನುವುಂ, ಪ್ರಜಾಜೀವನೋಪಾಯಮನನಾದುದಱಿಂ ಪ್ರಜಾಪತಿಯುಂ, ನಿಜಕುಲೋದ್ಧರಣದಿಂ ಕುಲಧರನುಂ, ತೇಜೋವಾಚಕಮಪ್ಪ ಕಾಶ್ಯಪನಂ ಪಾಲಿಸುವುದಱಿಂ ಕಾಶ್ಯಪನುಂ, ಕೃತಯುಗಾರಂಭಕ್ಕಾದಿಯಾದುದಱಿಂದಂ ಆದಿಬ್ರಹ್ಮನುಂ ಎಂಬ ಅಪೂರ್ವಾಭಿಧಾನಮಂ ಪ್ರಯೋಗಿಪ್ಪನ್ವರ್ಥನಾಮಂಗಳುಂ ಲೋಕಪ್ರಸಿದ್ಧಮಾಗಿರಲ್, ಅಱುವತ್ತ ಮೂಱುಲಕ್ಕೆ ಪುಬ್ಬಂ ರಾಜ್ಯಕಾಲಂ ಸಲೆ,

ಮೂರ್ಧಾಭಿಷಿಕ್ತರಾದ ಮಾಂಡಲಿಕರೂ ಕಿರೀಟಧಾರಿಗಳಾದ ನಾಲ್ಕು ಸಾವಿರ ರಾಜರಿಂದ ಪರಿವೃತರೂ ಆದ ಸೋಮಪ್ರಭ, ಹರಿ, ಅಕಂಪನ, ಕಾಶ್ಯಪರನ್ನು ಬರಮಾಡಿಕೊಂಡು ಅವರವರಿಗುಚಿತವಾದ ಗೌರವಗಳನ್ನು ಸಲ್ಲಿಸಿದನು, ಬಳಿಕ ತನಗಾಪ್ತನಾದ ಸೋಮಪ್ರಭನಿಗೆ ಕುರುರಾಜನೆಂಬ ಹೆಸರಿಟ್ಟು, ಕುರುಕುಲ ಮುಖಂಡನನ್ನಾಗಿಯೂ, ಹರಿಗೆ ಹರಿಕಾಂತನೆಂಬ ಹೆಸರಿಟ್ಟು ಹರಿವಂಶಧ್ವಜನನ್ನಾಗಿಯೂ, ಅಕಂಪನನೆಂಬುವನಿಗೆ ಶ್ರೀಧರನೆಂಬ ಹೆಸರನ್ನಿಟ್ಟು ನಾಥಾನ್ವಯಧುರೀಣನನ್ನಾಗಿಯೂ, ಕಾಶ್ಯಪನೆಂಬುವನಿಗೆ ಮಘವನೆಂಬ ಹೆಸರನ್ನಿಟ್ಟು ಉಗ್ರವಂಶತಿಲಕನನ್ನಾಗಿಯೂ ಮಾಡಿದನು. ಕಚ್ಛಮಹಾಕಚ್ಛರೇ ಮೊದಲಾದ ಪ್ರಮುಖರಾಜರನ್ನು ಅಧಿರಾಜಪದವಿಯಲ್ಲಿ ಕುಳ್ಳಿರಿಸಿದನು. ೭೫. ಪುರುದೇವನು ತನ್ನ ಮಕ್ಕಳಿಗೆ ಹೇಗೋ ಹಾಗೆ ಆ ರಾಜರಿಗೂ ಇಷ್ಟಾರ್ಥಗಳನ್ನು ಸಲ್ಲಿಸಿ ಅವರನ್ನು ತಣಿಸಿದನು. ತನ್ನ ಮಕ್ಕಳನ್ನಲ್ಲದೆ ಸುಹೃತ್ಸಂತತಿಯನ್ನೂ ಸಂತೈಸಿ ಹೆಚ್ಚಿಸುವುದು ರಾಜ್ಯಫಲವಷ್ಟೆ? ವ|| ಅಂತು ಆದಿದೇವನು ಇಕ್ಷುರಸವನ್ನು ತೆಗೆಯುವ ವಿಧಾನವನ್ನು ಜಗತ್ತಿಗೆ ತಿಳಿಸಿದ್ದರಿಂದ ಇಕ್ಷ್ವಾಕುಕುಲತಿಲಕನೆಂದೂ, ಪ್ರಜಾಜೀವನಕ್ಕೆ ಸಹಾಯಕವಾದ ಮನಸ್ಸುಳ್ಳವನಾದ್ದರಿಂದ ಮನುವೆಂದೂ, ನಿಜಕುಲೋದ್ಧಾರಕನಾದ್ದರಿಂದ ಕುಲಧರನೆಂದೂ, ತೇಜೋವಾಚಕವಾದ "ಕಾಶ್ಯ"ವನ್ನು ಪಾಲಿಸುವುದರಿಂದ ಕಾಶ್ಯಪನೆಂದೂ, ಕೃತಯುಗಾರಂಭಕ್ಕೆ ಆದಿಯಾದ ಕಾರಣ ಆದಿಬ್ರಹ್ಮನೆಂದೂ ಆತನಿಗೆ ಅಪೂರ್ವ ನಾಮಗಳು ಲೋಕದಲ್ಲಿ ಅನ್ವರ್ಥನಾಮಗಳಾಗಿ ಪ್ರಸಿದ್ಧವಾದುವು. ಹೀಗೆ ಅರುವತ್ಮೂರು ಲಕ್ಷಪೂರ್ವಗಳಷ್ಟು ಕಾಲ

ಪೆಸರ್ಗಳ್ ಕರ್ಣಾಮೃತಸ್ಯಂದಿಗಳೊದವಿದ ಪೂರ್ವಾಭಿಧಾನಂಗಳೋರಂ
ತೆಸಗುತ್ತಿರ್ಪನ್ನೆಗಂ ಮಾಡಿದ ಕುರುಹರಿನಾಥೋಗ್ರರಂಶಂಗಳಿಂತೀ
ವಸುಧಾಚಕ್ರಕ್ಕೆ ಸಲ್ವನ್ನೆಗಮೆಸೆದಿರೆ ವರ್ಣಕ್ರಮಂ ಕರ್ಮಭೂಮಿ
ಪ್ರಸರಕ್ಕಿಂತಾದಿಯಾದಂ ಸುಕವಿಜನಮನೋಮಾನಸೋತ್ತಂಸಹಂಸಂ ೭೬

ನಾನಾ ಮಾನ್ಯಜನಾಂತರಂಗನಿಹಿತಾನಂದೋದಯಂ ದಿವ್ಯಸಂ
ತಾನಸ್ರಙ್ಮಣಿಭೂಷಣಾಂಬರಧರಂ ಸ್ವಾಧೀನಸಂಗತ್ವಸಂ
ತಾನಂ ಪುತ್ರಕಳತ್ರಮಿತ್ರಸಹಿತಂ ಸಾಕೇತಸಿಂಹಾಸನಾ
ಸೀನಂ ಪಾಲಿಸಿದಂ ಮಹೀವಳಯಮಂ ಸಂಸಾರಸಾರೋದಯಂ ೭೭

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾ
ಪ್ರಸರ ಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಕರ್ಮಭೂಮಿ ನಿಯೋಗ ನಿರೂಪಣಂ

**ಅಷ್ಟಮಾಶ್ವಾಸಂ**

ರಾಜ್ಯಭಾರ ಮಾಡಲಾಗಿ, ೭೬. ಕರ್ಣಾಮೃತಸ್ಯಂದಿಗಳಾದ ಇಕ್ಷ್ವಾಕು ಮೊದಲಾದ ಹೆಸರುಗಳೂ ಕುರುವಂಶ, ಹರಿವಂಶ, ನಾಥವಂಶ ಮತ್ತು ಉಗ್ರವಂಶಗಳೆಂಬ ರಾಜವಂಶಗಳೂ ವಸುಧಾಚಕ್ರದಲ್ಲಿ ನೆಲಸಿರುವ ತನಕ ವರ್ಣಾಶ್ರಮಧರ್ಮವು ಎಸೆದಿರುತ್ತವೆ. ಹೀಗೆ ಸುಕವಿಜನಮಾನಸೋತ್ತಂಸಹಂಸನಾದ ಆದಿಪುರುಷನು ಕರ್ಮಭೂಮಿಪ್ರಸರಕ್ಕೆ ಆದಿಯಾದನು. ೭೭. ಅಯೋಧ್ಯಾಸಿಂಹಾಸನಾಸೀನನಾಗಿ ಭೂವಲಯವನ್ನು ಸಂಸಾರಸಾರೋದಯನಾದ ವೃಷಭದೇವನು ಪಾಲಿಸಿದನು. ಅವನು ಮಾನ್ಯಜನರ ಹೃದಯದಲ್ಲಿ ಆನಂದವನ್ನುಂಟುಮಾಡಿದನು. ಅವನು ಸಂತಾನಪುಷ್ಪದ ಮಾಲಿಕೆಯನ್ನೂ, ಮಣಿಮಯವಾದ ಆಭರಣಗಳನ್ನೂ, ಶ್ರೇಷ್ಠ ವಸ್ತ್ರಗಳನ್ನೂ ಧರಿಸಿದ್ದನು. ರಾಜನ್ಯ ಸಮೂಹವೆಲ್ಲವೂ ಅವನ ಹಸ್ತಗತವಾಗಿತ್ತು. ಅವನು ಯಾವಾಗಲೂ ಪುತ್ರ, ಕಳತ್ರ, ಮಿತ್ರರೊಡನೆ ನಲಿಯುತ್ತಿದ್ದನು.

ಇಂತು ಕರ್ಮಭೂಮಿನಿಯೋಗ ನಿರೂಪಣವೆಂಬ

ಎಂಟನೆಯ ಆಶ್ವಾಸ ಮುಗಿಯಿತು.

# ನವಮಾಶ್ವಾಸಂ

ಶ್ರೀಪತಿ ಪುರುಪರಮೇಶ್ವರ
ನಾ ಪೂರ್ಣಮನೋರಥಂ ನಮನ್ನೃಪಮಕುಟಾ
ಟೋಪಂ ತ್ರೈಲೋಕ್ಯಾಂತ
ವ್ಯಾಪಿತಮಹಿಮಂ ಸರಸ್ವತೀಮಣಿಹಾರಂ ೧

ಸ್ಫುರಿತಮಣಿಖಚಿತಪರಿವಿ
ಷ್ಟರದೊಳಳಂಕರಿಸಿ ನೆಱೆದ ರಾಜನ್ಯಕಮಂ
ದರಹಸಿತಮೃದುವಿಲೋಕನ
ಪರಿಭಾಷಣದಿಂದಮಾದಮಾದರಿಸುತ್ತುಂ ೨

ವ|| ಇರೆ

ಎರಡೋಳಿಯೊಳಂ ಮೊದಲೊಳ್
ಭರತೇಶ್ವರಬಾಹುಬಲಿಗಳಿರೆ ಮತ್ತಿನ ಪು
ತ್ರರುಮವರ ಕೆಲದೊಳಿರೆ ಸುರ
ಶರಾಸನಂ ನೆಗಟ್ಟುದವರ ಮಕುಟಪ್ರಭೆಯೊಳ್ ೩

ಮಗಮಗಿಸುವ ನವಮೃಗಮದ
ದಗರುವ ಮಳಯಜದ ಕಂಪುಮಂ ಸೂಡಿದ ಬಾ
ಸಿಗದ ಪೊಸಗಂಪುಮಂ ನೆಱೆ
ದುಗಿಬಗಿಮಾಡಿದುವು ಚಮರರುಹಪವನಂಗಳ್ ೪

೧. ಲಕ್ಷ್ಮಿಗೊಡೆಯನಾದ ಪುರುಪರಮೇಶ್ವರನು ಎಲ್ಲ ಇಷ್ಟಾರ್ಥಗಳನ್ನೂ ಈಡೇರಿಸಿಕೊಂಡವನು, ನಮಸ್ಕರಿಸುತ್ತಿರುವ ರಾಜರ ಕಿರೀಟಗಳ ಆಡಂಬರವುಳ್ಳವನು, ಮೂರು ಲೋಕಗಳ ತುದಿಯವರೆಗೂ ವ್ಯಾಪ್ತನಾದ ಮಹಿಮೆಯುಳ್ಳವನು. ಅವನು ಸರಸ್ವತಿಯ ಮಣಿಹಾರ. ೨. ಅವನು ಪ್ರಕಾಶಮಾನವಾದ ಮಣಿಗಳನ್ನು ಮೆಟ್ಟಿದ ಸಿಂಹಾಸನದಲ್ಲಿ ಮಂಡಿತನಾದವನು. ಅವನು ನೆರೆದ ರಾಜಸಮೂಹವನ್ನು ತನ್ನೊಂದು ನಸುನಗೆಯಿಂದಲೂ ಮೃದುವಾದ ನೋಟದಿಂದಲೂ ಸಂಭಾಷಣದಿಂದಲೂ ವಿಶೇಷವಾಗಿ ಸನ್ಮಾನಿಸುತ್ತಿದ್ದನು. ವ|| ಹೀಗಿರಲು, ೩. ಅವನ ಎರಡೂ ಪಕ್ಕಗಳಲ್ಲಿನ ಮೊದಲನೆಯ ಪೀಠಗಳಲ್ಲಿ ಭರತೇಶ್ವರ ಬಾಹುಬಲಿಗಳು ಕುಳಿತಿದ್ದರು. ಅವರ ಮಗ್ಗುಲಲ್ಲಿ ಮತ್ತಿತರ ಪುತ್ರರು ಆಸನಗಳನ್ನಲಂಕರಿಸಿದ್ದರು. ಆಗ ಅವರ ಕಿರೀಟಗಳ ಕಾಂತಿಗಳಿಂದ ಕಾಮನಬಿಲ್ಲು ಮೂಡಿತು. ೪. ಮಗಮಗಿಸುವ ಕಸ್ತೂರಿ, ಅಗರು ಶ್ರೀಗಂಧಗಳ ಪರಿಮಳವನ್ನೂ ಮತ್ತು ಬಾಸಿಂಗದ ಹೂವಿನ ಹೊಸ ಸುವಾಸನೆಯನ್ನೂ ಚಾಮರಗಳಿಂದೆದ್ದ ಗಾಳಿಯು ಸುತ್ತ

ಪಸರಿಸಿದ ತಾರಹಾರದ
ಪೊಸವೆಳ್ದಿಂಗಳುಮನಮರ್ದ ಪೆರ್ದುಡುಗೆಗಳೊಳ್
ಮಿಸುಗುವ ಪೊಸಮಾಣಿಕದೆಳ
ವಿಸಿಲುಮನೊಡಗಾಣಲಾದುದಾಸ್ಥಾಯಿಕೆಯೊಳ್ ೫

ಎಡೆಗೋದಿರದಿರಿಮುಚ್ಚಂ
ನುಡಿಯದಿರಿಂ ನೃಪತಿ ನುಡಿಯೆ ನುಡಿಯಿಂ ನೀಮಿ
ರ್ಪೆಡೆಯೊಳಿರಿಂ ನೀಮಱಿವಿರ್
ಮಿಡುಕಿದೊಡೆನೆ ಚಿತ್ರವೇತ್ರದಂಡಧರರ್ಕಳ್ ೬

ಆ ಸಭೆಯುಮನೇಱಿದ ಸಿಂ
ಹಾಸನಮುಮನೊಡನೆ ಬೆಳಗೆ ಬೆಳಗಿಂದೆ ಜಗಂ
ಬಾಸಣಿಸಿದುದೆನೆ ಸಕಳಸು
ರಾಸುರಪತಿಯುರದೊಳೆಸೆದುದಿಂದ್ರಚ್ಛಂದಂ ೭

ಕನಕಗಿರಿಯೆನಿಪ ಸಿಂಹಾ
ಸನಮುಮನಾ ಪರಮಚರಮತನುರುಚಿಯುಮನೇ
ನನವರತಂ ಪುದಿದುವೊ ನಿಮಿ
ರ್ದನೇಕಚಮರೀಜದುಗ್ಧಜಳಲಹರಿಕೆಗಳ್ ೮

ವ|| ಮತ್ತಂ ಸಿಂಹಾಸನಾಸನ್ನಸ್ಥಿತಮಣಿಮಯಪೀಠದೊಳ್ ನಾಭಿರಾಜನುಂ ಕನಕಪೀಠದೊಳ್ ಕಚ್ಛಮಹಾಕಚ್ಛರುಂ, ಸೋಮವಂಶಲಲಾಮಂ ಸೋಮಪ್ರಭನುಂ, ಹರಿವಂಶಾಗ್ರಗಣ್ಯಂ ಹರಿಕಾಂತನುಂ,

ಹರಡಿತು. ೫. ದೊಡ್ಡ ಹಾರಗಳಿಂದ ಹೊರಬಿದ್ದು ಹರಡಿರುವ ಹೊಸ ಬೆಳ್ದಿಂಗಳನ್ನೂ ಶ್ರೇಷ್ಠವಾದ ಉಡುಗೆಗಳಲ್ಲಿನ ಮಾಣಿಕ್ಯಗಳ ಕಾಂತಿಯೆಂಬ ಎಳಬಿಸಿಲನ್ನೂ ಆಸ್ಥಾನದಲ್ಲಿ ಒಟ್ಟಿಗೆ ಕಾಣಲಾಯಿತು! ೬. "ಸ್ಥಳದಲ್ಲಿ ವಕ್ರವಾಗಿ ಕುಳಿತಿರಬೇಡಿ. ಗಟ್ಟಿಯಾಗಿ ನುಡಿಯದಿರಿ. ರಾಜನು ಮಾತನಾಡಿಸಿದರೆ ನುಡಿಯಿರಿ. ನೀವು ಕುಳಿತಲ್ಲಿಯೇ ಕುಳಿತಿರಿ. ನಮ್ಮೀ ಎಚ್ಚರಿಕೆಗಳನ್ನು ಮೀರಿ ನಡೆದರೆ ಏನಾಗುವುದೆಂದು ನಿಮಗೆ ಗೊತ್ತಾಗುವುದು!" ಎಂದು ಬಣ್ಣಬಣ್ಣದ ಕೋಲುಗಳನ್ನು ಹಿಡಿದ ಅಧಿಕಾರಿಗಳು ಹೇಳುತ್ತಿದ್ದರು. ೭. ಸುರಾಸುರರೆಲ್ಲರಿಗೂ ಪತಿಯೆನಿಸಿದ ಪುರುಪರಮೇಶ್ವರನ ಎದೆಯಲ್ಲಿನ ಇಂದ್ರಚ್ಛಂದವೆಂಬ ಹಾರದ ಬೆಳಗು ಆ ಸಭೆಯನ್ನೂ, ಅವನೇರಿದ ಸಿಂಹಾಸನವನ್ನೂ ಬೆಳಗಿಸಿ ಜಗತ್ತೆಲ್ಲವನ್ನೂ ಆವರಿಸಿತು. ೮. ಕನಕಗಿರಿಯೇ ಎಂಬಂತಿರುವ ಸಿಂಹಾಸನವನ್ನೂ ಆದಿಪುರುಷನ ಚರಮತನುವಿನ ಕಾಂತಿಯನ್ನೂ ಚಾಮರಗಳೆಂಬ ಹಾಲಿನ ಅಲೆಗಳು ಹರಡಿ ವ್ಯಾಪಿಸಿದವು. (ಚಾಮರವನ್ನು ಬೀಸುತ್ತಿದ್ದರು). ವ|| ಸಿಂಹಾಸನದ ಬಳಿಯಿರುವ ಮಣಿಮಯಪೀಠದಲ್ಲಿ ನಾಭಿರಾಜನೂ ಸುವರ್ಣಪೀಠದಲ್ಲಿ ಕಚ್ಛ ಮಹಾಕಚ್ಛರೂ ಸೋಮವಂಶತಿಲಕನಾದ ಸೋಮಪ್ರಭನೂ ನಾಥವಂಶನಾಯಕನಾದ ಅಕಂಪನನೂ, ಉಗ್ರವಂಶಶ್ರೇಷ್ಠನಾದ

ನಾಥವಂಶನಾಯಕನಕಂಪನನುಂ ಉಗ್ರವಂಶಾಗ್ರಗಣ್ಯಂ ಕಾಶ್ಯಪನುಂ ಇರೆ, ಮತ್ತಂ ಪೆಱರುಮಱಿಕೆಯ ನಾಯಕರುಂ ಮಣಿಮಕುಟಬದ್ಧರಾತ್ಮೋಚಿತಪ್ರದೇಶಾಸನಂಗಳೊಳಿರ್ದೋಲಗಿಸುತ್ತಿರ್ಪನ್ನೆಗಮಾದಿದೇವನ ಪರಿನಿಷ್ಕ್ರಮಣಕಲ್ಯಾಣಮತ್ಯಾಸನ್ನಮೆಂಬುದಂ ನಿಜಾವಧಿಬೋಧದಿಂದಮಱಿದು ಸಂಗೀತ ಪ್ರಸಂಗದಿಂದಮೋಲಗಿಸಲೆಂದು,

ಸುರರಾಜರ್ ತನ್ನ ಗಂಧೇಭದ ಕೆಲಗೆಲದೊಳ್ ಸಿಂಧುರಾರೂಢರೆತ್ತಂ
ಬರೆ ಗಂಧರ್ವಾಮರರ್ ಮೆಚ್ಚಱಿದು ಮಧುರಗೀತಂಗಳಿಂ ಮೆಚ್ಚಿಸುತ್ತುಂ
ಬರೆ ನಾನಾತೋದ್ಯವಿಂ ವಾದಕದಿವಿಜಗಣಂ ತನ್ನನಾರಾಧಿಸುತ್ತುಂ
ಬರೆ ಮುಂದಿರ್ದಪ್ಸರೋವೃಂದಮುಮಧಿಕಮುದಂ ಬಂದನಾಗಳ್ ಸುರೇಂದ್ರಂ ೯

ವ॥ ಬಂದು ಭಗವದಾಸ್ಥಾನಮಂಟಪಮನವನತಮಣಿಕಿರೀಟರತ್ನಪ್ರದೀಪಂಗಳಿಂದಮರ್ಚಿಸಿ ಸಿಂಹಾಸನೋಪಾಂತಸ್ಥಿತಕನಕಪೀಠದೊಳ್ ಕುಳ್ಳಿರ್ದು,

ಪರಮನನೋಲಗಿಸಿ ಕೃತಾ
ರ್ಥರೆಮಪ್ಪೆವಮೋಘವವಸರಂಗುಡಿಸುವುದೆಂ
ದಿರದೆನ್ನನಧಿಕಭಕ್ತಿಯೆ
ತರೆ ಬಂದುದು ದೇವ ದಿವಿಜಪೇಟಕಮನಿತುಂ ೧೦

ಸಮನಿಸಲಿವರ ಮನೋರಥ
ಮಮರೀನೃತ್ಯಪ್ರಸಂಗಮಕ್ಕಭವ ಭವ
ತ್ಕ್ರಮಕಮಳಸೇವೆಯಿಂದಿಂ
ತುಮನಂತಂ ಗೀತವಾದಿತಂ ಫಲಮಲ್ತೇ ೧೧

ಕಾಶ್ಯಪನೂ ಇದ್ದರು. ಮತ್ತೆ ಕೆಲವು ಪ್ರಸಿದ್ಧರಾದ ಕಿರೀಟಧಾರಿಗಳಾದ ಅರಸರು ಸ್ವೋಚಿತಪ್ರದೇಶಗಳಲ್ಲಿದ್ದ ಆಸನಗಳಲ್ಲಿ ಕುಳಿತು ಓಲಗಿಸುತ್ತಿದ್ದರು. ಅಷ್ಟರಲ್ಲಿ ಆದಿದೇವನ ಪರಿನಿಷ್ಕ್ರಮಣ ಕಲ್ಯಾಣಕಾಲವು ಸಮೀಪಿಸಿತೆಂದು ಇಂದ್ರನು ತನ್ನ ಅವಧಿಜ್ಞಾನದಿಂದ ತಿಳಿದು ಸಂಗೀತಪ್ರಸಂಗದಿಂದ ಸೇವಿಸಲೆಂದು (ಬಂದನು). ೯. ಆತನ ಮದ್ದಾನೆಯ ಪಕ್ಕದಲ್ಲಿ ಗಜಾರೂಢರಾಗಿ ಸುರರಾಜರು ಬಂದರು. ಗಂಧರ್ವಾಮರರು ಅಭಿರುಚಿಯನ್ನರಿತು ಮಧುರಗೀತಗಳಿಂದ ಮೆಚ್ಚಿಸುತ್ತ ಬಂದರು. ನಾನಾ ವಾದ್ಯಗಳಿಂದ ದಿವಿಜಸಮೂಹವು ದೇವೇಂದ್ರನನ್ನು ಆರಾಧಿಸುತ್ತ ಬಂದಿತು. ಇವರೆಲ್ಲರೊಡನೆ ಅಪ್ಸರಸ್ತ್ರೀಯರನ್ನು ಮುಂದಿಟ್ಟುಕೊಂಡು ಅತ್ಯಾನಂದದಿಂದ ದೇವೇಂದ್ರನು ಬಂದನು. ವ॥ ಭಗವದಾಸ್ಥಾನ ಮಂಟಪವನ್ನು ತನ್ನ ಕಿರೀಟರತ್ನಗಳ ಪ್ರದೀಪಗಳಿಂದರ್ಚಿಸಿ ಸಿಂಹಾಸನದ ಮಗ್ಗುಲಲ್ಲಿದ್ದ ಚಿನ್ನದ ಪೀಠದಲ್ಲಿ ಕುಳಿತು ಇಂದ್ರನು ಹೀಗೆಂದನು. ೧೦. "ದೇವ! ಪರಮನನ್ನು ಸೇವಿಸಿ ಕೃತಾರ್ಥರಾಗೋಣ. ನಮಗೆ ಅಮೋಘವಾದ ಅವಕಾಶವನ್ನು ದೊರಕಿಸಿಕೊಡು ಎಂದು ಪ್ರಾರ್ಥಿಸಿಕೊಂಡು ದೇವತೆಗಳೆಲ್ಲರೂ ನನ್ನೊಡನೆ ಬಂದಿದ್ದಾರೆ. ನಿನ್ನಲ್ಲಿರುವ ಅತಿಶಯವಾದ ಭಕ್ತಿಯೇ ನನ್ನನ್ನಿಲ್ಲಿಗೆ ಕರೆತಂದಿದೆ. ೧೧. "ಅಭವ! ಇವರ ಮನೋರಥವು ಈಡೇರಲಿ. ಅಮರಸ್ತ್ರೀಯರ ನೃತ್ಯವು ಜರುಗಲಿ.

ವ|| ಅಂತುಮಲ್ಲದೆ,

ಅಸಮಪ್ರೇಕ್ಷಣವೀಕ್ಷಣೈಕರಸಮಂ ಪಾರ್ದಿರ್ದುದೀ ರಾಜಪು
ತ್ರಸಮೂಹಂ ಪರಿಪೂರ್ಣಭಾವರಸಮಂ ಸಂಗೀತಮಂ ತೋಱೆ ಮೆ
ಚ್ಚಿಸಲೋರಂತೆ ಸಮಸ್ತದೇವಕುತಪವ್ಯೂಹಂ ತೆರಳ್ದಿರ್ದುದಿಂ
ಬೆಸಸಿಂ ಭಾರತಿಕಂಗೆ ನಾಟ್ಯಘಟನಪ್ರಸ್ತಾವನಾಟೋಪಮಂ ೧೨

ಎಂದಿಂದ್ರಂ ಬಿನ್ನವಿಸಲೊ
ಡಂ ದರಹಸಿತಾನನಾಬ್ಜನಾವುದು ನಿಮಗಾ
ನಂದಮದಕ್ಕೆನೆ ಸುತಸುರ
ವೃಂದಂ ಸಂಗೀತಕಕ್ಕೊಡರ್ಚಲೆವೇೞ್ದಂ ೧೩

ಪೇೞ್ವುದುಮನಂಗನಿರ್ದೆಡೆ
ವೇೞ್ವವೊಲೊರ್ಮೊದಲೆ ಗೀತವಾದಿತರವಮೇ
ವೇೞ್ವುದೊ ಸಭೆಯಂ ರಸದೊಳ್
ಪೂೞ್ವವೊಲೆಸೆದತ್ತು ದಿವಿಜಪೇಟಕಜನಿತಂ ೧೪

ಮದನನ ಬಿಲ್ಲೊಳಮಾತನ
ಸುದತಿಯ ಬೀಣೆಯೊಳಮೆಸೆವ ದನಿಯುಮನಿಟಿಸಿ
ತ್ತಿದು ದಲೆನಿಸಿದುದು ಸುರತೂ
ರ್ಯದ ರವದೊಳ್ ಪುದಿದ ಸುರವಧೂಗೀತರವಂ ೧೫

ನಿನ್ನ ಪಾದಕಮಲಗಳ ಸೇವೆಯಿಂದ ಈ ಗೀತವಾದಿತ್ರಗಳು ಅನಂತಫಲವಾಗಿ (ಜನರಿಗೆ) ಲಭಿಸುತ್ತವೆ, ಅಲ್ಲವೆ? ವ|| ಅಂತಲ್ಲದೆ, ೧೨. "ಅಸದೃಶ ಕೃಪಾದೃಷ್ಟಿಯುಳ್ಳವನೆ, ಈ ರಾಜಪುತ್ರಸಮೂಹವು ವೀಕ್ಷಣೈಕರಸವಾದ ನೃತ್ಯವನ್ನು ನೋಡಲು ಹಾತೊರೆಯುತ್ತಿದೆ. ಭಾವರಸಪೂರ್ಣವಾದ ಸಂಗೀತವನ್ನು ಪ್ರಕಾಶನಗೊಳಿಸಿ ಮೆಚ್ಚಿಸಲು ದೇವವಾದ್ಯಕಾರರ ಸಮೂಹವೆಲ್ಲವೂ ಆಗಮಿಸಿದೆ. ಇನ್ನು ಸೂತ್ರಧಾರನಿಗೆ ನಾಟ್ಯಘಟನಾಪ್ರಸ್ತಾವನೆಯನ್ನು ಕೈಗೊಳ್ಳುವಂತೆ ತಿಳಿಸು" ೧೩. ಎಂದು ಇಂದ್ರನು ಬಿನ್ನಯಿಸಿದನು. ಆಗ ಆದಿನಾಥನ ಮುಖಕಮಲವು ನಗೆಯಿಂದ ಅರಳಿತು. "ನಿಮಗೆಲ್ಲ ಯಾವುದರಿಂದ ಸಂತೋಷವುಂಟಾಗುವುದೋ ಅದನ್ನು ಕೈಗೊಳ್ಳಿ" ಎಂದನು. ಆಗ "ಸಂಗೀತವನ್ನು ಪ್ರಾರಂಭಿಸಿ" ಎಂದು ಇಂದ್ರನು ಹೇಳಿದನು. ೧೪. ಇಂದ್ರನು ಹೀಗೆ ಹೇಳಿದೊಡನೆ ಕಾಮನಿದ್ದ ಸ್ಥಳವನ್ನು ಹೇಳುವಂತೆ ದೇವಸಮೂಹದಿಂದುಂಟಾದ ಗೀತವಾದ್ಯಗಳ ಧ್ವನಿಯು ಸಭೆಯನ್ನು ರಸದಲ್ಲಿ ಮುಳುಗಿಸುವಂತೆ ಪ್ರಕಾಶಿಸಿತು. ಅದನ್ನು ಏನೆಂದು ಹೇಳೋಣ? ೧೫. ತೂರ್ಯಧ್ವನಿಯುಕ್ತವಾದ ಸುರಸ್ತ್ರೀಯರ ಗೀತಧ್ವನಿಯು ಮನ್ಮಥನ ಬಿಲ್ಲಿನಲ್ಲಿಯೂ ರತಿಯ ವೀಣೆಯಲ್ಲಿಯೂ ಹೊರಹೊಮ್ಮಲಾದ ಧ್ವನಿಯನ್ನು ಅಲ್ಲಗಳೆಯಿತು.

ಅಮರ್ದಿನ ಮೞೆಯೊಳಗೆಸೆದಪು
ದಮೃತಾಂಬುದನಿನದಮೆನಿಸೆ ಸಭೆಯಿನಹೋ ಗೀ
ತಮಹೋವಾದಿತಮೆನಿಸಿದು
ದಮರೀಜನಗೀತಮಮರವಾದಿತಮಾಗಳ್ ೧೬

ಅಂಬರಭೂಷಣಮಾಲಾ
ಡಂಬರದ ಬೆಡಂಗನಮರನರ್ತಕಿ ಗಡಮೇ
ನೆಂಬುದೊ ಧರಣೇಂದ್ರಂಗಮ
ಳುಂಬಂ ಪೊಗೞಲ್ಕೆ ರೂಪು ನೀಳಾಂಜನೆಯಾ ೧೭

ಕಲಗೀತಂ ವಾದ್ಯಂ ನೃತ್ಯ
ಲೀಲೆ ಪೆಱರ್ಗೊಪ್ಪದೀಕೆಗಲ್ಲದೆ ಗಣಿಕಾ
ತಿಲಕಮಿವಳ್ ನರ್ತನರಸ
ದೊಳೆ ನಿಚ್ಚಂ ಮೆಚ್ಚುಗೊಳ್ವಳಿಂದ್ರನ ಕೈಯೊಳ್ ೧೮

ಎನಿಸಿದ ನೀಳಾಂಜನೆ ಕ
ರ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಕಿ
ತ್ತೆನಿಸುತ್ತೊಳಪೊಕ್ಕಳ್ ಭೋಂ
ಕೆನೆ ನಿಖಿಳ ಜನಾಂತರಂಗಮಂ ರಂಗಮುಮಂ ೧೯

ನಿಲ್ತುವು ರಸಂಗಳಿಲ್ಲಿ ಮ
ಡಲ್ತೆನೆ ಭಂಗಿಯೊಳನಂಗಜಂಗಮಲತೆವೊಲ್
ನಿಲ್ತು ಜವನಿಕೆಯ ಮಱೆಯೊಳ್
ಪೊಲ್ತಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ ೨೦

೧೬. ಅಮರಿಯರ ಗೀತಗಳೂ, ಅಮರರ ವಾದ್ಯಸಮೂಹವೂ, ಅಮೃತದ ಮಳೆಯೊಡನೆ ಕೂಡಿದ ಅಮೃತದ ಮೋಡದ ಧ್ವನಿಯಂತೆಸೆದವು. ಆಗ ಸಭೆಯಿಂದ "ಅಹೋ! ಗೀತವೇ, ಅಹೋ! ವಾದ್ಯವೇ" ಎಂಬ ಹೊಗಳಿಕೆ ಧ್ವನಿಗಳು ಕೇಳಿಸಿದುವು. ೧೭. ಅಮರ ನರ್ತಕಿಯಾದ ನೀಲಾಂಜನೆಯ ವಸ್ತ್ರ, ಆಭರಣ ಮತ್ತು ಮಾಲೆಗಳ ಆಡಂಬರದ ಬೆಡಗನ್ನು ಏನೆಂದು ವರ್ಣಿಸೋಣ? ಆ ನೀಲಾಂಜನೆಯ ರೂಪವನ್ನು ಹೊಗಳಲು ಧರಣೇಂದ್ರ[1]ನಿಗೂ ಅಸದಳ. ೧೮. ಮಧುರಗೀತವೂ, ವಾದ್ಯವೂ, ನೃತ್ಯಲೀಲೆಯೂ ನೀಲಾಂಜನೆಗಲ್ಲದೆ ಮತ್ತಾರಿಗೂ ಒಪ್ಪವು. ಇವಳು ಗಣಿಕೆಯರಲ್ಲಿ ಶ್ರೇಷ್ಠಳು. ನರ್ತನವಿದ್ಯೆಯಲ್ಲಿವಳು ಇಂದ್ರನ ಕೈಯಿಂದ ನಿತ್ಯವೂ ಮೆಚ್ಚುಗೆಗೊಳ್ಳುವಳು. ೧೯. ಹೀಗೆ ವಿಖ್ಯಾತಳಾದ ನೀಲಾಂಜನೆಯು ಕಾಮನಬಿಲ್ಲಿಗಿಂತ ಹರಿತವಾದ ಮನ್ಮಥನ ಹೂವಿನ ಬಾಣವು ಬದುಕಿ ಬಂದಿತು ಎನ್ನುವಂತೆ, ಸಕಲಜನಗಳ ಅಂತರಂಗವನ್ನೂ ರಂಗವನ್ನೂ ಭೋಂಕನೆ ಹೊಕ್ಕಳು. ೨೦. ರಸಗಳು ಇಲ್ಲಿ ವ್ಯಾಪಿಸಿ ನಿಂತುವೋ ಎನ್ನುವ ಭಂಗಿಯಲ್ಲಿ ಅನಂಗಜಂಗಮ (ಸಂಚರಿಸುವ) ಲತೆಯಂತೆ ತೆರೆಯ ಮರೆಯಲ್ಲಿ ನಿಂತ

1. ಧರಣೇಂದ್ರ = ನಾಗರಾಜ (ಆದಿಶೇಷನಿದ್ದಂತೆ)

ಓಸರಿಸಿದ ಜವನಿಕೆಯೊಡ
ನೋಸರಿಸಿದನಿಸಲೆ ಕಂತು ಪುಷ್ಪಾಂಜಳಿಯಂ
ಸೂಸಿದ ಪದದೊಳೆ ಸಭೆಗಂ
ಸೂಸಿದನೊಡನೊಡನೆ ನನೆಯ ಮೊನೆಯಂಬುಗಳಂ ೨೧

ನೆಗಟ್ತೆ ನಿಜಪ್ರತಿಬಿಂಬಂ
ನೆಗಟ್ದರಸುಗಳುರದೊಳೆಸೆವ ಹಾರಮಣಿಜ್ಯೋ
ತಿಗಳೊಳವರೆರ್ದೆಯನಲ್ಲಿಂ
ಪುಗುವುದನನುಕರಿಸಿ ರಂಗದೊಳ್ ಸೊಗಯಿಸಿದಳ್ ೨೨

ಆತನುರಸೋಪೇತವಿಳಂ
ಬಿತಮಧ್ಯದ್ರುತಲಯಂಗಳೊಳ್ ಲಕ್ಷಣಸಂ
ಯುತತತ್ವಾನುಗತೌಘ
ಪ್ರತೀತವಾದ್ಯಂಗಳೆಸೆದುವತಿಶುಭದಂಗಳ್ ೨೩

ತಾಳದ ಲಯಮಂ ನಿಱಿ ನೀ
ಳಾಳಕಮಾರ[೧]ದ ಪೊದ್ದಟಿ ಮುತ್ತೆಂಬಿವು ಮುಂ
ಮೇಳಿಸಿ ಕೈಕೊಂಡುವು ಲುಳಿ
ತಾಳಕಿ ಕೈಕೊಂಡಳೆಂಬುದೊಂದಚ್ಚರಿಯೇ ೨೪

ರಸಭಾವಾಭಿನಯಂಗಳ್
ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ
ಪೊಸವೆ ಕರಣಂಗಳುಂ ನಿ
ಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ ೨೫

ನೀಲಾಂಜನೆಯು ಮೋಡದ ಮರೆಯಲ್ಲಿರುವ ವಿದ್ಯುಲ್ಲತೆಗೆಣೆಯಾದಳು. ೨೧. ತೆರೆಯನ್ನೆಳೆದ ಕೂಡಲೇ ಕಾಮನೂ ಬಾಣಗಳನ್ನು ಬಿಡಲು ಸಿದ್ಧನಾದನು. ಅವಳು (ನೀಲಾಂಜನೆ) ಪುಷ್ಪಾಂಜಲಿಯನ್ನೆರಚಿದ ಸಮಯದಲ್ಲಿಯೇ ಕಾಮನು ಚೂಪಾದ ಮೊಗ್ಗಿನ ಬಾಣಗಳನ್ನು ಸಭೆಗೆ ಪ್ರಯೋಗಿಸಿದನು! ೨೨. ಕೀರ್ತಿಶಾಲಿಗಳಾದ ಅರಸರ ಎದೆಯ ಮೇಲೆಸೆದ ಹಾರಮಣಿಗಳ ಕಾಂತಿಗಳಲ್ಲಿ ನೀಲಾಂಜನೆಯ ಬಿಂಬವು ಪ್ರತಿಫಲಿಸಿತು. ಅದರಿಂದವಳು ಅವರೆದೆಯನ್ನು ಹೊಗುವಂತೆ ಕಾಣುತ್ತ ರಂಗಮಂಟಪದ ಮೇಲೆ ಸೊಗಯಿಸಿದಳು. ೨೩. ಕಾಮರಸೋಪೇತವಾದ ವಿಲಂಬಿತ, ಮಧ್ಯ ಮತ್ತು ದ್ರುತ ಲಯಗಳಿಂದ ಯುಕ್ತವಾಗಿ ಲಕ್ಷಣಯುಕ್ತವೂ ತತ್ವಾನುಸಾರಿಯೂ ಮಂಗಳಕರವೂ ಆದ ಓಘಪ್ರತೀತವಾದ್ಯಗಳು (ಪ್ರಸಿದ್ಧ ವಾದ್ಯಗಳು) ಹರಡಿದವು. ೨೪. ನಿರಿಗೆ (ಮಡಿಕೆ), ನೀಲಾಲಕ ಮತ್ತು ಹಾರದ ಹೊಮ್ಮುವ ಮುತ್ತುಗಳು ತಾಳದ ಲಯವನ್ನು ಕೈಕೊಂಡುವು! ಅಂದ ಮೇಲೆ ಲೋಲಾಲಕೆಯಾದ ನೀಲಾಂಜನೆಯು ತಾಳದ ಲಯವನ್ನು ಕೈಕೊಂಡ ಳೆಂಬುದರಲ್ಲಿ ಏನು ಅಚ್ಚರಿ? ೨೫. ರಸಭಾವಗಳ ಅಭಿನಯಗಳೂ ಹೊಸವು.

---

೧ ಆರ-ಹಾರ

ಭಾರತಿ ಸಾತ್ವತಿ ಕೈಶಿಕಿ
ಯಾರಭಟಿಯುಮೆಂಬ ವೃತ್ತಿಯೊಳ್ ರಸಮಂ ಸಂ
ಚಾರಿಸುವ ಭಾವಮಂ ವಿ
ಸ್ತಾರಿಸುವ ಬೆಡಂಗು ಬೇಱೆ ನೀಲಾಂಜನೆಯಾ ೨೬

ಭಾವದನುಭಾವದೆಸೆವ ವಿ
ಭಾವದ ಪಸುಗೆಗಳೊಳೊಸರ್ವ ರಸದಭಿನಯಮಂ
ಭಾವಿಸುವೊಡಾದಿದೇವನ
ದೇವೇಂದ್ರನ ಬಗೆಗಮುಸದಳಂ ನರ್ತಕಿಯಾ ೨೭

ಅಂಗೋಪಾಂಗಂಗಳೊಳಿಸೆ
ವಾಂಗಿಕಮಂ ಗಾನಪಾಠ್ಯದೊಳ್ ವಾಚಕಮಂ
ತುಂಗಕುಚೆ ಮೆಱೆದಳಾ ದಿವಿ
ಜಾಂಗನೆಗಾಹಾರ್ಯಸಾತ್ವಿಕಂ ನಿಜಮೆ ವಲಂ ೨೮

ಭರತಾಗಮದೊಳ್ ಮೂವ
ತ್ತೆರಡೆನೆ ನೆಗೞ್ದಂಗಹಾರಮುಂ ನೂಱೆಂಟುಂ
ಕರಣಮುಮನವಳ ಡವಕೆಯ
ಪರಿಚಾರಿಕೆಯಱಿಗುಮಾಕೆಗವು ತೊಡರ್ವೆಡೆಯೆ ೨೯

ಪುಗುವ ಪೊಱಮಡುವ ತೆರನಿರ್ದೆ
ಪುಗುವಳ್ ಪೊಱಮಡುವಳೆನಿಸೆ ಪೊಸತಮರ್ದಂ ಮೇ
ಗುಗುಟ್ಟಿಪಳೆನಿಸೆ ಮುಗುಳ್ನಗೆ
ನಗೆಮೊಗದ ಬೆಡಂಗವಳ್ಗದೇನೊಪ್ಪಿದುದೋ ೩೦

ರಂಗಪ್ರವೇಶವೂ ಹೊಸತು. ಚಲನವಲನಗಳೂ ಹೊಸವು. ನಯವೂ ಕರಣಗಳೂ ಹೊಸವು. ಹೀಗೆ ಆ ನರ್ತಕಿಯು ನಾಟ್ಯವೇದವನ್ನೇ ಹೊಸತುಗೊಳಿಸಿದಳು! ೨೬. ಭಾರತೀ, ಸಾತ್ವತಿ, ಕೈಶಿಕೀ ಮತ್ತು ಆರಭಟಿ ವೃತ್ತಿಗಳಲ್ಲಿ ರಸವನ್ನು ಸಂಚಾರಿಸುವ ವ್ಯಭಿಚಾರಿ ಭಾವಗಳನ್ನು ವಿಸ್ತರಿಸುವ ನೀಲಾಂಜನೆಯ ಬೆಡಗು ಅಸ್ವಾದ್ಯಶವಾಯಿತು. ೨೭. ಭಾವ, ಅನುಭಾವ ಮತ್ತು ವಿಭಾವಗಳ ವಿಭಾಗದಲ್ಲಿ ಒಸರುವ ರಸದ ಅಭಿನಯವನ್ನು ಆಲೋಚಿಸಿದರೆ, ಆದಿದೇವ ದೇವೇಂದ್ರರ ಮನಸ್ಸಿಗೂ ತಿಳಿಯಲು ಅಸಾಧ್ಯವಾಯಿತು. ೨೮. ಅಂಗೋಪಾಂಗಗಳಲ್ಲೆಸೆಯುವ ಆಂಗಿಕಾಭಿನಯವನ್ನೂ ಗಾನಪಾಠ್ಯಗಳಲ್ಲಾಗುವ ವಾಚಿಕಾಭಿನಯವನ್ನೂ ತುಂಗಸ್ತನಿಯಾದ ನೀಲಾಂಜನೆಯು ಮೆರೆಯಿಸಿದಳು. ಆ ದೇವಾಂಗನೆಗೆ ಆಹಾರ್ಯ ಸಾತ್ವಿಕಗಳು ನೈಜವಾದುವೇ ಸರಿ! ೨೯. ನಾಟ್ಯಶಾಸ್ತ್ರೋಕ್ತವಾದ ಮೂವತ್ತೆರಡು ಅಂಗಹಾರಗಳೂ, ಒಂದುನೂರಾ ಎಂಟು ಕರಣಗಳೂ ನೀಲಾಂಜನೆಯ ಪೀಕದಾನಿಯನ್ನು ಎತ್ತಿಹಿಡಿಯುವ ಪರಿಚಾರಿಕೆಗೂ ಗೊತ್ತೆಂದ ಮೇಲೆ ಆಕೆಗವು ತಿಳಿಯದವೆ! ೩೦. ನೀಲಾಂಜನೆಯು ರಂಗವನ್ನು ಹೊಗುವ ಮತ್ತು ನಿರ್ಗಮಿಸುವ ಸೊಗಸು ಅವಳು ಸಾಮಾಜಿಕರ ಎದೆಯನ್ನು ಹೊಗುವಳು ಮತ್ತು ಅಲ್ಲಿಂದ ಹೊರಬೀಳುವಳು ಎಂಬಂತೆ ಕಾಣಿಸಿತು! ಅವಳ ಮುಗುಳುನಗೆಯು ಹೊಸತಾದ

ಪೆಸರಱಿಯದಮರತೂರ್ಯ
ಪ್ರಸರಂಗಳ ಜತಿಗೆ ತೊಡರದಿನಿಸೆಳಲದೆ ಬ
ಣ್ಣಸರಂ[೧]ಗೊಂಡಂತಿರೆ ಬ
ಣ್ಣಸರಂ ಸೊಗಯಿಸಿದುದೇನವಳ್ ಪರಿಣತೆಯೋ ೩೧

ಕುಡುಪುಂ ಕಯ್ಯುಂ ಜತಿಯೊಳ್
ತಡತಡವರೆ ವಾದಕಂಗೆ ಪುರ್ವಿಂ ಜತಿಯಂ
ತೊಡರದೆ ನಡೆಯಿಸಿ ಪುರ್ವದೆ
ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್ ೩೨

ಒಂದೊತ್ತಂ ನಡೆಯಿಸುವುದ
ದೊಂದೊತ್ತಿನ ಲಯಕ್ಕೆ ಲಕ್ಕೆತೆಱನಾಡುವುದೇ
ನೆಂದಾಂ ಬಣ್ಣಿಸುವೆನೊ ಸುರ
ಸೌಂದರಿಯ ವಿಳಾಸವಿಭ್ರಮಭ್ರೂಲತೆಯಂ ೩೩

ಪೊಸವೆಳ್ದಿಂಗಳ್ ದೆಸೆದೆಸೆ
ಗೆಸೆದುದು ಕುಮುದವನಮಲರ್ದುದೆಂಬಂತಿರದೇ
ನೆಸೆದುದೊ ಕಟಾಕ್ಷಮಾಲಾ
ಪ್ರಸರಂ ಭ್ರೂಲಾಸ್ಯಸೌಂದರಂ ನರ್ತಕಿಯಾ ೩೪

ಅಮೃತವನ್ನು ಹೊರಚೆಲ್ಲುವಂತಿತ್ತು. ನಗೆಮೊಗದಿಂದ ಅವಳಲ್ಲಿ ಒಂದು ವಿಶೇಷವಾದ ಬೆಡಗು ತೋರಿಬಂದಿತು. ೩೧. ಹೆಸರು ತಿಳಿಯದಷ್ಟು ವೈವಿಧ್ಯವುಳ್ಳ ಅಮರರ ತೂರ್ಯಧ್ವನಿಗಳ ಜತಿಸ್ವರಕ್ಕೆ ತೊಡರದೆ ಸ್ವಲ್ಪವೂ ಆಯಾಸಪಡದೆ ಬಣ್ಣದ ಮಣಿಸರವನ್ನು[೧] ತೆಗೆದಂತೆ (?) ಅವಳ ವರ್ಣಗಳೂ ಸ್ವರಗಳೂ ಸೊಗಯಿಸಿದುವು. ನೀಲಾಂಜನೆಯು ಆ ವಿದ್ಯೆಯಲ್ಲಿ ಅದೆಷ್ಟು ಪರಿಣತಳೋ! ೩೨. ವಾದಕನಿಗೆ ವಾದನದಂಡವೂ ಕೈಯೂ ಜತಿಯಲ್ಲಿ ತಡೆತಡೆದು ಸಾಗಿತು. ಆದರೆ ನರ್ತಕಿಯು ತನ್ನ ಹುಬ್ಬುಗಳಿಂದಲೇ ಜತಿಸ್ವರವನ್ನು ತೊಡರದೆ ನಡೆಯಿಸಿದಳು. ಅವಳಿಗೆ ಈ ಹುಬ್ಬೇ ವಾದನದಂಡದಂತಿರಲು, ಅವಳೇ ಸಭೆಗೆ ವಾದಕಿಯಾದಳು! ೩೩. ನರ್ತಕಿಯ ಭ್ರೂಲತೆಯು ಒಂದು ಒತ್ತನ್ನು (ಸಂಗೀತದ ಕಾಲ) ನಡೆಯಿಸುವುದು, ಒಂದೊಂದು ಒತ್ತಿನ ಲಯಕ್ಕೆ ಲಕ್ಷ ರೀತಿಯಿಂದ ಆಡಿಸುವುದು! ಆ ಸುರಸುಂದರಿಯ ವಿಲಾಸ ವಿಭ್ರಮಗಳಿಂದ ಕೂಡಿದ ಭ್ರೂಲತೆಯನ್ನು ಅದೇನೆಂದು ನಾನು ವರ್ಣಿಸಲಿ! ೩೪. ನರ್ತಕಿಯ ಹುಬ್ಬುಗಳ ಕುಣಿತದಿಂದ ಸುಂದರವಾದ ಕಟಾಕ್ಷಮಾಲೆಯ ಪ್ರಸರವು ಹೊಸ ಬೆಳದಿಂಗಳು ದಿಕ್ಕು ದಿಕ್ಕುಗಳನ್ನೆಲ್ಲಾ ಹರಡಿದಂತೆಯೂ ಕುಮುದವನವನ್ನು ಅರಳಿಸಿದಂತೆಯೂ ಪ್ರಕಾಶಿಸಿತು.

---

೧. ವರ್ಣಸ್ವರಗಳು ತಾವೇ ವರ್ಣಸ್ವರಗಳನ್ನು ಸ್ವೀಕರಿಸಿದಂತೆ (?)

ಎವೆಯಿಕ್ಕದೆ ನೋಡುವ ನರ
ರಮರರ ಕಣ್ಗಳೊಳನಂಗರಾಜನ ಬಯ್ತಿ
ಟ್ಟಮರ್ದಂ ಕೊಳೆ ತಳಿದುದು ನಾ
ಭಿಮೂಳಮುಂ ಬಾಹುಮೂಳಮುಂ ಸುರವಧುವಾ ೩೫

ಅವಯವದಿಂದಮೆ ದೇವಾಂ
ಗವಸ್ತ್ರಮುಳ್ಳುಡೆಯನಾಕೆಯೋಸರಿಸುವ ಸೂ
ಸುವ ಹಾರಲತೆಯನಳವಡಿ
ಸುವ ಭಂಗಿಯೆ ಮದನರಾಜರಾಜ್ಯವಿಳಾಸಂ ೩೬

ಆಡುವ ವಿಳಾಸಮಂನಡೆ
ನೋಡುವ ನೋಟಕರನತನುಮತ್ತದ್ವಿರದಂ
ಕೋಡಂ ಕಾಣಿಸಿ ಪಿಡಿದೀ
ಡಾಡುವುದೆಂಬಿನೆಗಮಾಡಿ ರಂಜಿಸಿದಳವಳ್ ೩೭

ಪಾಟಿಸಿ ಮಾಡಿದ ಸೊರ್ಕಿವ
ಳಾಟಮೆ ವಲಮೆನಿಸಿ ನೆಗಟ್ದ ನೀಲಾಂಜನೆ ತ
ನ್ನಾಟಮನೊಲ್ದು ನೋಡುವ
ನೋಟಕರಂ ತವದ ಮಾಟ್ಕೆಯಿಂ ಮೋಹಿಸಿದಳ್ ೩೮

೩೫. ಮಾನವರೂ ದೇವತೆಗಳೂ ಆ ಸುರಾಂಗನೆಯನ್ನು ಎವೆಯಿಕ್ಕದೆ ನೋಡುತ್ತಿದ್ದರು. ಆಗ ಸುರಾಂಗನೆಯ ನಾಭಿಮೂಲವೂ ಬಾಹುಮೂಲವೂ ತಮ್ಮಲ್ಲಿ ಮನ್ಮಥನು ಅಡಗಿಸಿಟ್ಟ ಅಮೃತವನ್ನು ಸ್ವೀಕರಿಸಲೆಂದು ಅವರ ಕಣ್ಣುಗಳಲ್ಲಿ ಅಮೃತವನ್ನು ಎರಚಿದವು! (ಮಾನವರೂ ದೇವತೆಗಳೂ ಎವೆಯಿಕ್ಕದೆ ಅವಳ ನಾಭಿಮೂಲ, ಬಾಹುಮೂಲಗಳನ್ನು ನೋಡುತ್ತ ಅಮೃತಾಸ್ವಾದನೆಯ ಸುಖವನ್ನನುಭವಿಸಿದರು) ೩೬. ಬಹು ಸುಲಭವಾಗಿಯೇ ಕೌಶಲದಿಂದ ದೇವಾಂಗವಸ್ತ್ರದ "ಉಳ್ಳುಡೆ" (ಚಂಡಾತಕೆ)ಯನ್ನು ಪಕ್ಕಕ್ಕೆ ಸರಿಸುವ, ಮತ್ತು ಸೂಸುವ ಲತೆಯಂತಿರುವ ಹಾರವನ್ನು ಅಳವಡಿಸಿಕೊಳ್ಳುವ ಅವಳ ಭಂಗಿಯು ಮದನರಾಜನ ರಾಜ್ಯವಿಲಾಸವಾಗಿತ್ತು. ೩೭. ಅವಳಾಡುವ ವಿಲಾಸವನ್ನು ನೋಡುವ ನೋಟಕರನ್ನು ಕಾಮನೆಂಬ ಮದ್ದಾನೆಯು ತನ್ನ ಕೋಡನ್ನು ಕಾಣಿಸಿ ಹಿಡಿದೆಳೆದಾಡಿತೋ ಎನ್ನುವಂತೆ ಮಾಡಿ ನೀಲಾಂಜನೆಯು ನರ್ತಿಸಿ ರಂಜಿಸಿದಳು. ೩೮. ಅಮಲೇರಿಸುವ ಔಷಧವನ್ನು ಹಿಗ್ಗಿಸಿ ರೂಪುಗೊಳಿಸಿರುವುದೇ ಇವಳ ನೃತ್ಯ ಎಂಬಂತೆ ಮೆರೆದ ಆ ನೀಲಾಂಜನೆಯು ಅಕ್ಕರೆಯಿಂದ ನೋಡುವ ನೋಟಕರನ್ನು ಕುಂದದ ರೀತಿಯಲ್ಲಿ ಮೋಹಿಸಿದಳು.

ಕರಣದ ಚಾರಿಯ ಚಲ್ಲಿಯ
ಪರಿಕ್ರಮಕ್ರಮದ ಭಂಗಿಗಳ್ ನೆಗೞ್ದಿಡೆಯೊ
ಸುರವಂದಿಗಳಿಂ ಹೋಹೋ
ಯಿರೆಯೆನಿಸಿದುದಾಟಮಿಂತು ನೀಲಾಂಜನೆಯಾ ೩೯

ಸುರಗಣಿಕಾನಾಟ್ಯರಸಂ
ಪರಮನ ಚಿತ್ತಮುಮನೆಯ್ದೆ ರಂಜಿಸಿದುದು ವಿ
ಸ್ಫುರಿತಸ್ಫಟಿಕಂ ಶುದ್ಧಾಂ
ತರಂಗಮೇನನ್ಯರಾಗದಿಂ ರಂಜಿಸದೇ ೪೦

ಆ ಮಧುರಾಕಾರಲತಾ
ಕೋಮಳೆ ತನಗಾಗಳಾಯುರಂತಂ ಬರೆ ಸೌ
ದಾಮಿನಿವೊಲ್ ಭೋಂಕನೆ ಸುರ
ಕಾಮಿನಿ ರಂಗದೊಳದೃಶ್ಯೆಯಪ್ಪುದುಮಾಗಳ್ ೪೧

ರಸಭಂಗಭಯದಿನಿಂದ್ರಂ
ಪೊಸತೊಂದಾದೊರೆಯ ಪಾತ್ರಮಂ ತಂದನುಸಂ
ಧಿಸುವುದುಮದನಣಮಱಿಯ
ಲ್ಕೆ ಸುರಾಸುರಸಮಿತಿಗಾದುದಿಲ್ಲಾ ಕ್ಷಣದೊಳ್ ೪೨

೩೯. ನೀಲಾಂಜನೆಯು ಪ್ರದರ್ಶಿಸುತ್ತಿದ್ದ ಕರಣಗಳನ್ನೂ, ಹೆಜ್ಜೆಗಳನ್ನಿಡುವುದರಲ್ಲಿನ ವೈಚಿತ್ರ್ಯಗಳನ್ನೂ, ಚಲನೆಯ ವೈವಿಧ್ಯಗಳನ್ನೂ, ತಿರುಗುವಿಕೆಯನ್ನೂ ಮೆಚ್ಚಿಕೊಂಡು ಸುರವಂದಿಗಳು 'ಹೋ! ಹೋ!' ಎನ್ನಲಾರಂಭಿಸಿದರು. ಹೀಗೆ ನೀಲಾಂಜನೆಯ ಆಟವು ಮೆಚ್ಚುಗೆಗೆ ಪಾತ್ರವಾಯಿತು. ೪೦. ದೇವಗಣಿಕೆಯಾದ ಈ ನೀಲಾಂಜನೆಯ ನಾಟ್ಯರಸವು ಪರಮನ ಚಿತ್ತವನ್ನು ಅತಿಯಾಗಿ ಸಂತೋಷಗೊಳಿಸಿತು. ಶುದ್ಧವಾದ ಸ್ಫಟಿಕವೂ ಶುದ್ಧಾಂತರಂಗವೂ, ಅನ್ಯವಸ್ತುವಿನ ಬಣ್ಣದಿಂದಲೂ ಪ್ರೀತಿಯಿಂದಲೂ ರಂಜಿಸವೆ? (ಪ್ರಕಾಶಮಾನವಾದ ಸ್ಫಟಿಕದಂತಿರುವ ಶುದ್ಧಾಂತರಂಗವು ಅನ್ಯವಸ್ತುವಿನ ರಾಗದಿಂದ ರಂಜಿಸದಿರುತ್ತದೆಯೇ?) ೪೧. ಮಧುರಾಕಾರಳೂ ಲತೆಯಂತೆ ಕೋಮಲೆಯೂ ಆದ ನೀಲಾಂಜನೆಯ ಆಯುಸ್ಸು ಅಲ್ಲಿಗೆ ಮುಗಿಯಿತು. ಆದಕಾರಣ ಮಿಂಚಿನಂತೆ ತಟಕ್ಕನೆ ಆ ದೇವಕಾಮಿನಿಯು ರಂಗಮಂಟಪದಲ್ಲಿ ಅದೃಶ್ಯೆಯಾದಳು. ೪೨. ರಸಾಸ್ವಾದನೆಗೆಲ್ಲಿ ಭಂಗಬರುವುದೋ ಎಂದು ಹೆದರಿ ಇಂದ್ರನು ತತ್ಸದೃಶವಾದ ಮತ್ತೊಂದು ಪಾತ್ರವನ್ನು ಸೃಷ್ಟಿಸಿದನು. ಆಗ ಸುರಾಸುರ[1] ಸಮಿತಿಯೂ ಅದನ್ನು ಸ್ವಲ್ಪವೂ ಆ ಕ್ಷಣದಲ್ಲಿ

1 ಅಸುರ = ಅಸುರಕುಮಾರರೆಂಬ ದೇವತೆಗಳು.

ಆ ನೀಲಾಂಜನೆಯೆಂದೆ ಮ
ನೋನಯನೋದಿತವಿಮೋಹದಿಂದಿರೆ ಸಭೆ ವಿ
ದ್ಯಾನಿಳಯನಱಿದದಂ ದೇ
ಹಾನಿತ್ಯತೆಗಿಂತು ನಾಡೆ ಚೋದ್ಯಂಬಟ್ಟಂ ೪೩

ನಾರೀರೂಪದ ಯಂತ್ರಂ
ಚಾರುತರಂ ನೋಡೆ ನೋಡೆ ಕರಗಿದುದೀ ಸಂ
ಸಾರದನಿತ್ಯತೆ ಮನದೊಳ್
ಬೇರೂಱಿದುದೀಗಳೆಂತಿದಂ ಕಡೆಗಣಿಪೆಂ ೪೪

ಕೋಟತೆಱದಿಂದಮೆಸೆವೀ
ನಾಟಕಮಂ ತೋಱಿ ಮಾಣ್ದಳಿಲ್ಲಳ್ ಬಗೆಯೊಳ್
ನಾಟುವಿನಮಮರಿ ಸಂಸೃತಿ
ನಾಟಕಮುಮನೆನಗೆ ನೆಱೆಯೆ ತೋಱಿದಳೀಗಳ್ ೪೫

ತನುರೂಪವಿಭವಯೌವನ
ಧನಸೌಭಾಗ್ಯಾಯುರಾದಿಗಳ್ಗೆಣೆ ಕುಡುಮಿಂ
ಚಿನ ಪೊಳೆಪು ಮುಗಿಲ ನೆೞಲಿಂ
ದ್ರನ ಬಿಲ್ ಬೊಬ್ಬುಳಿಕೆಯುರ್ಬು ಪರ್ಬಿದ ಭೋಗಂ ೪೬

ನರಕದೊಳಿಯ್ದುದ ದುಃಖಮಂ
ತರತನಮದು ಬಗೆವೊಡಾರ್ಗಗುರ್ವಲ್ತೆ ಭಯಂ
ಕರಮಲ್ತೇ ತಿರ್ಯಗ್ಗತಿ
ದುರಂತದುಃಖಪ್ರತಾನಮಂ ಬಗೆವಾಗಳ್ ೪೭

ಅರಿಯದಾಯಿತು. ೪೩. ನೀಲಾಂಜನೆಯೇ ಅಭಿನಯಿಸುತ್ತಿರುವಳೆಂದು ಸಭೆಯು ಕಣ್ಮನಗಳಿಂದ ಮೋಹಗೊಂಡು ತನ್ಮಯತೆಯಿಂದ ನೋಡುತ್ತಿತ್ತು. ವಿದ್ಯಾನಿಲಯನಾದ ಆದಿದೇವನು ಮಾತ್ರ ನೀಲಾಂಜನೆಯು ವಿಗತಪ್ರಾಣಳಾದುದನ್ನು ತಿಳಿದು ದೇಹದ ಅನಿತ್ಯತೆಗಾಗಿ ಮರುಗಿ ವಿಸ್ಮಯಪಟ್ಟನು. ೪೪. ಸುಂದರವಾದ ಈ ನಾರೀರೂಪದ ಯಂತ್ರವು ಕಾಣುತ್ತಿರುವಂತೆಯೇ ಕರಗಿಹೋಯಿತು. ಈ ಸಂಸಾರದ ಅನಿತ್ಯತೆಯು ಈಗಲೀಗ ನನ್ನ ಮನಸ್ಸಿಗೆ ನಾಟಿತು. ಆದ್ದರಿಂದ ಇದನ್ನು ಹೇಗೆ ಕಡೆಗಣಿಸಲಿ? ೪೫. ಕೋಟಿತೆರದಿಂದ ವ್ಯಕ್ತವಾಗುವ ಈ ನಾಟಕವನ್ನು ತೋರಿಸಿ ಮಾತ್ರವೇ ಅವಳು ಕಣ್ಮರೆಯಾಗಲಿಲ್ಲ. ನನ್ನ ಮನದಲ್ಲಿ ನಾಟುವಂತೆ ಈ ದೇವಾಂಗನೆಯು ಸಂಸಾರನಾಟಕವನ್ನೂ ಚೆನ್ನಾಗಿ ಅಭಿನಯಿಸಿ ತೋರಿಸಿದಳು! ೪೬. ದೇಹ, ರೂಪ, ವಿಭವ, ಯೌವನ, ಹಣ, ಸೌಭಾಗ್ಯ, ಆಯುಸ್ಸು ಮುಂತಾದುವು ಕುಡಿಮಿಂಚಿನ ಹೊಳಪು, ಮೋಡದ ನೆಳಲು, ಕಾಮನಬಿಲ್ಲು ಇವುಗಳಿಗೆ ಸಮವಾದುವು. ಹಬ್ಬಿದ ಭೋಗವು ನೀರುಗುಳ್ಳೆಯ ಉಬ್ಬಿನಂತೆ ಒಡೆದುಹೋಗತಕ್ಕುದು. ೪೭. ನರಕದಲ್ಲಿ ಅನುಭವಿಸಲಾದ ದುಃಖವನ್ನು ನೆನೆದರೆ ಯಾರಿಗೆ

ನಾನಾ ಯೋನಿಗಳೊಳ್ ಸುಟೆ
ದೇನಾನುಂ ದುಷ್ಕೃತಂ ಸಡಿಲ್ದೊಡೆ ಪಡೆಗುಂ
ಮಾನುಷ್ಯಮನತಿದಾರುಣ
ಮಾನಸಶಾರೀರದುಃಖಪೀಡಿತನಕ್ಕುಂ ೪೮

ಚಿಂತಾಶೋಕವಿಷಾದ
ಭ್ರಾಂತಿಸಮುದ್ಭೂತದುಃಖದಿಂ ನರಕದೊಳೋ
ರಂತೆ ವಲಂ ಮಾನವಗತಿ
ಸಂತೋಷಮದೆಂಬುದುಂಟೆ ಸಗ್ಗಂಗಳೊಳಂ ೪೯

ಅಱುದಿಂಗಳಾಯುವುಂಟೆನೆ
ಮಱುಗುವುದುಂ ನಲ್ಲರಲ್ಲಿ ತಮ್ಮಿಂ ಮುನ್ನಂ
ಪಱೆಪಟ್ಟು ಬರೆ ಕನಲ್ವುದು
ಮಱೆಪದೆ ಕಲ್ಪಜರ್ಗೆ ನರಕದುಃಖಕ್ರಮಮಂ ೫೦

ಕಷ್ಟಂ ದುಃಖಾನಳಪರಿ
ಪುಷ್ಟಂ ಚಃ ಗತಿಚತುಷ್ಟಯಂ ಪ್ರಾಣಿಗೆ ಸಂ
ತುಷ್ಟತೆಯನೆಯ್ದೆ ಪಡೆದುಮ
ಭೀಷ್ಟಸುಖಪ್ರದಮದೊಂದೆ ಮುಕ್ತಿಸ್ಥಾನಂ ೫೧

ಎಯ್ದಿದುದಱೊಳಳವಡದುದು
ಮೆಯ್ದದುದನೆ ಬಯಸುತಿರ್ಪುದುಂ ಜೀವಕ್ಕೀ
ಗೆಯ್ದುಮಿದು ಸಹಜಮನ್ನೆಗೆ
ಮೆಯ್ದುಗುಮೆನ್ನೆಗಮುದಾತ್ತಮುಕ್ತಿಶ್ರೀಯಂ ೫೨

ತಾನೆ ಭಯ ಹುಟ್ಟದು? ತಿರ್ಯಗ್ಜಂತುಗಳ ದುರಂತವಾದ ದುಃಖಪರಂಪರೆಯನ್ನು ನೆನೆಸಿದರೆ ಅದು ಅಷ್ಟೇ ಭಯಂಕರ. ೪೮. ಜೀವನು ನಾನಾ ಯೋನಿಗಳಲ್ಲಿ ಕರ್ಮವಶದಿಂದ ಸುಳಿದಾಡುವನು. ಆಗ ಅದೃಷ್ಟವಶದಿಂದ ದುಷ್ಕೃತವು ಸಡಿಲಿ, ಅವನು ಮಾನವಜನ್ಮವನ್ನು ತಳೆದರೂ ಮಾನಸಿಕವೂ, ಶಾರೀರಿಕವೂ ಆದ ದುಃಖಗಳಿಂದ ತೊಳಲುವನು. ೪೯. "ಚಿಂತೆ, ಶೋಕ, ವಿಷಾದ ಮತ್ತು ಭ್ರಾಂತಿ ಗಳಿಂದುಂಟಾದ ದುಃಖದಿಂದ ನಿರಂತರವಾಗಿ ನರಕದಲ್ಲಿ ತೊಳಲುವಂತೆ ಮಾನವಗತಿಯೂ ಆಗಿದೆ. ಸ್ವರ್ಗದಲ್ಲಾದರೂ ಸಂತೋಷವೆಂಬುದುಂಟೆ? ೫೦. ಆರು ತಿಂಗಳು ಆಯುಸ್ಸುಂಟೆಂದು ತಿಳಿದಾಗ ಮರುಗುವುದೂ, ನಲ್ಲರು ತಮಗಿಂತ ಮೊದಲೇ ಅಗಲಿಹೋದರೆ ಪರಿತಪಿಸುವುದೂ ಸ್ವರ್ಗದಲ್ಲಿರತಕ್ಕವರಿಗೆ ನರಕದ ದುಃಖದ ಪರಿಯನ್ನು ತಿಳಿಸವೆ? ೫೧. ದುಃಖಾನಲದಗ್ಧವಾದ ನರಕ, ತಿರ್ಯಂಚ, ಮನುಷ್ಯ, ದೇವ ಎಂಬ ನಾಲ್ಕುಗತಿಗಳು ಪ್ರಾಣಿಗೆ ಕಡುಕಷ್ಟಕರವಾದುವು. ಸಂತುಷ್ಟಿಯನ್ನುಂಟುಮಾಡಿ ಇಷ್ಟವೆನಿಸಿದ ಸುಖವನ್ನೀಯ ಬಲ್ಲುದು ಮುಕ್ತಿಸ್ಥಾನವೊಂದೇ. ೫೨. ಕೈಗೆಟಕಿದುದರಲ್ಲಿ ತೃಪ್ತಿಪಟ್ಟುಕೊಳ್ಳದಿರುವುದು, ಹೊಂದಲಾಗದುದನ್ನು ಹೊಂದಲು ಬಯಸುವುದು, ಇವು ಜೀವಕ್ಕೆ ಸಹಜವಾದ ಧರ್ಮ,

ಎನಿತೊಡಲಂ ತಾಳ್ದಿದುದಿ
ಲ್ಲೆನಿತೊಡಲಂ ಬಿಸುಟುದಿಲ್ಲ ವಿಷಯಾನಳನಿಂ
ದೆನಿತೆನಿತಂ ಮಱುಗಿದುದಿ
ಲ್ಲನಂತಸಂಸಾರಗಹನದೊಳ್ ಜೀವಂಗಳ್ ೫೩

ಜನನೀಜನಕಸಹೋದರ
ವನಿತಾಸುತಪುತ್ರಮಿತ್ರಸಂಬಂಧಮದೆಂ
ತೆನಿತೆನಿತು ಭವದೊಳಾಯ್ತು
ಲ್ಲೆನಿತನಿತಂ ನೆನೆವುದೆನಿತನವಧರಿಸುವುದೋ ೫೪

ತನುಗೆ ಪೊಱೆ ತುಡುಗೆ ನವಲೇ
ಪನಮ ಮಳಂ ಗೀತಮುಳ್ಕೆ ನೃತ್ಯಂ ಬಗೆಯ
ಲ್ಕೆ ನಗೆ ದಲುನ್ಮತ್ತವಿಳಾ
ಸನಮಿಂತಿನಿತಱೊಳಮೊಂದಱೊಳ್ ಪುರುಳುಂಟೇ ೫೫

ತ್ರಿದಶಸ್ತ್ರೀಜನದೊಳಮಮೃ
ತದೊಳಮಣಂ ಮುಟ್ಟದುರಿವ ಮದನಾಗ್ನಿಯ ಕೊ
ಬ್ಬುದರಾಗ್ನಿಯ ಪೆರ್ಚೀಂ ಮ
ಟ್ಟೆದಪುದೆ ಲಲನೆಯರೊಳಶನದೊಳ್ ಮಾನವರಾ ೫೬

ಎನಿತಾನುಮಂಬುನಿಧಿಗಳ
ನನೇಕನಾಕಂಗಳಲ್ಲಿ ಕುಡಿದುಂ ಪೋಯ್ತು
ಲ್ಲೆನಗೆ ನರಭೋಗಮೆಂಬೀ
ಪನಿಪುಲ್ಲಂ ನಕ್ಕೆ ತೃಷ್ಣೆ ಪೇೞ್ ಪೋದಪುದೇ ೫೭

ಆದ್ದರಿಂದ ಯಾವ ಕಾಲಕ್ಕೂ ಉದಾತ್ತವಾದ ಮುಕ್ತಿಶ್ರೀಯನ್ನು ಬಯಸಬೇಕು. ೫೩. ಈ ಕೊನೆಯಿಲ್ಲದ ಸಂಸಾರವೆಂಬ ಕಾಡಿನಲ್ಲಿ ಎಷ್ಟು ಜೀವಗಳು ಎಷ್ಟು ದೇಹಗಳನ್ನು ತಳೆದಿಲ್ಲ? ಎಷ್ಟು ದೇಹಗಳನ್ನು ಬಿಡಲಿಲ್ಲ? ಸ್ರಕ್, ಚಂದನ, ವನಿತಾದಿ ವಿಷಯಗಳೆಂಬ ಬೆಂಕಿಯಲ್ಲಿ ಎಷ್ಟು ಜೀವಗಳು ವ್ಯಥೆಗೊಳ್ಳಲಿಲ್ಲ? ೫೪. ತಾಯಿ, ತಂದೆ, ತಮ್ಮ ಸಹೋದರ, ಹೆಂಡತಿ, ಪುತ್ರ, ಮಿತ್ರ ಮುಂತಾದ ಸಂಬಂಧವು ಎಷ್ಟು ಭವದಲ್ಲುಂಟಾಗಲಿಲ್ಲ? ಎಷ್ಟೆಷ್ಟು ಸಂಬಂಧಗಳನ್ನು ನೆನಪಿಗೆ ತಂದುಕೊಳ್ಳೋಣ. ಮತ್ತೆಷ್ಟನ್ನು ಗಮನಿಸೋಣ? ೫೫. ದೇಹಕ್ಕೆ ವಸ್ತ್ರಾಭರಣಗಳೇ ಹೊರೆ, ಸುಗಂಧಾದಿ ದ್ರವ್ಯಗಳನ್ನು ಹಚ್ಚಿಕೊಳ್ಳುವುದೇ ಮಲ, ಗೀತವು ಗೋಳಾಟ, ನೃತ್ಯವೂ ನಗೆಯೂ ನಿಶ್ಚಯವಾಗಿ ಹುಚ್ಚರಾಟ. ಹೀಗೆ ಇವುಗಳಲ್ಲೊಂದರಲ್ಲಿಯೂ ಹುರುಳಿಲ್ಲ. ೫೬. ತ್ರಿದಶಸ್ತ್ರೀಯ ರಿಂದಲೂ, ಅಮೃತಪಾನದಿಂದಲೂ ಸ್ವಲ್ಪವೂ ತಗ್ಗದೆಯೆ ಉರಿಯುವ ಮನ್ಮಥಾಗ್ನಿಯ ಕೊಬ್ಬು, ಉದರಾಗ್ನಿಯ ಆಧಿಕ್ಯವೂ ಮನುಷ್ಯಸ್ತ್ರೀಯರಿಂದಲೂ, ಅನ್ನದಿಂದಲೂ ತಗ್ಗುತ್ತವೆಯೆ? ೫೭. ಅನೇಕ ಜಲರಾಶಿಯನ್ನೇ ನಾನಾ ಸ್ವರ್ಗಗಳಲ್ಲಿ ಕುಡಿದರೂ ನನ್ನ ತೃಷ್ಣೆಯಿಡುಗಲಿಲ್ಲ. ನರೋಪಭೋಗವೆಂಬ ಇಬ್ಬನಿ ಬಿದ್ದ ಹುಲ್ಲನ್ನು ನೆಕ್ಕಿದರೆ ತೃಷ್ಣೆಯಿಡುಗುವುದೆ, ಹೇಳು.

ವಿದಿತಂ ಮೂರ್ಧಾಭಿಷಿಕ್ತರ್ ಪಲಬರರಸುಗಳ್ ಪ್ರಾಜ್ಯಸಾಮ್ರಾಜ್ಯಲಕ್ಷ್ಮೀ
ಪದಮಂ ಕೈಕೊಂಡು ತಮ್ಮಂ ಮಱೆದು ವಿಷಯಭೋಗಾಸವಾತ್ಯಂತಸೇವಾ
ಮದದಿಂದಂ ಧರ್ಮಪೋತಚ್ಯುತರನವಧಿಸಂಸಾರವಾರಾಸಿಮಧ್ಯಾ
ಸ್ಪದಸರ್ವಗ್ರಾಸಿಭೀಮಾಂತಕವದನ ಮಹಾಗರ್ತದೊಳ್ ಮಗ್ನರಾದರ್ ೫೮

*ವನದಹನಂ ವನಾಂತರಮನೊರ್ಬುಳಸಾಗಿರೆ ಮುತ್ತಿ ಸುತ್ತಿ ಸು
ತ್ತಿನ ನಡುವಿರ್ದ ಮಾಮರನನಟ್ಟಿದುದೀ ಮರನಂ ತಗುಳ್ದುದೆಂ
ಬನೊಳಿಕೆಯಾಗೆ ಸತ್ತರನೆ ಸಾಯದರಂತೆಣಿಸುತ್ತುಮಿರ್ಪ ಬೆ
ಳ್ಪನದನಿತಲ್ಲದಾಮರನನಾದವದಗ್ನಿ ಬದುರ್ಕಲೀಗುಮೇ ೫೯

ಬಗೆದೀಡಾಡೆ ದುರಂತದುಃಖತತಿಗಳ್ ಬೆನ್ನಟ್ಟೆ ದುರ್ಮೋಹಮ
ತ್ಸ್ಯಗಣಂಗಳ್ ಕಡಿದಿಕ್ಕೆ ಲೋಭಮಕರಾನೀಕಂಗಳಾಟಂದು ನು
ಣ್ಣಗೆ ನುಂಗುತ್ತಿರೆ ಮಾರರಾಗಶಿಶುಮಾರಂಗಳ್ ಮಹೋಗ್ರಂಗಳಿ
ನ್ನೆಗಮೋರಂತೆ ತೊಟಲ್ದೆನಿಂ ತಿರಿಯಲಾಱೆಂ ಭವಾಂಭೋಧಿಯೊಳ್ ೬೦

ವ॥ ಎಂದು ಸಂಸಾರಶರೀರಭೋಗವಿರಕ್ತಾಂತರಂಗನುಂ ಮುಕ್ತಿಕಾಂತಾನುರಕ್ತಚಿತ್ತನು ಮಾಗಿರ್ಪನ್ನೆಗಂ, ಪೂರ್ವಭವಾಭ್ಯಸ್ತಸಮಸ್ತಾಗಮಾರ್ಥರುಂ ಉಚಿತಶುಭಭಾವನಾಧ್ಯಾಸಿತಾಂತಃಕರಣರುಂ

೫೮. ಮೂರ್ಧಾಭಿಷಿಕ್ತರಾದ ಅನೇಕ ರಾಜರು ಶ್ರೇಷ್ಠವಾದ ಸಾಮ್ರಾಜ್ಯಶ್ರೀಯನ್ನು ಕೈಗೊಂಡರು. ತಮ್ಮನ್ನು ಮರೆತರು. ವಿಷಯಭೋಗವೆಂಬ ಮದ್ಯದಿಂದ ಮತ್ತರಾಗಿ ಧರ್ಮವೆಂಬ ಹಡಗಿನಿಂದ ಚ್ಯುತರಾದರು. ತುದಿಮೊದಲಿಲ್ಲದ ಸಂಸಾರಸಮುದ್ರದಲ್ಲಿನ ಎಲ್ಲ ವಸ್ತುಗಳನ್ನೂ ನುಂಗಬಲ್ಲ ಕ್ರೂರನಾದ ಯಮನ ಬಾಯಿಯೆಂಬ ಮಹಾಗರ್ತದಲ್ಲಿ ಬಿದ್ದುಹೋದರು. ೫೯. ಕಾಳ್ಗಿಚ್ಚು ವನಾಂತರವನ್ನೆಲ್ಲ ವ್ಯಾಪಿಸಿಕೊಂಡು ಸುತ್ತುಮುತ್ತಿನ, ನಡುವಣ ಮಾವಿನಮರಗಳನ್ನೆಲ್ಲ ಸುಟ್ಟುಹಾಕುವುದು. ಅದು ಈಗ ಈ ಮರವನ್ನೂ ಸುಡುವುದೆಂಬಂತಿದೆ ಸಂಸಾರಸ್ಥಿತಿ. ಹೀಗಿರುವಾಗ ಸತ್ತವರನ್ನೇ ಸಾಯದವರೆಂದೆಣಿಸು ತ್ತಿರುವುದು ಬೆಪ್ಪುತನ, ಹಾಗಲ್ಲದೆ, ಆ ಮರವನ್ನು ಆ ದಾವಾಗ್ನಿಯು ಬದುಕಿಕೊಳ್ಳಲು ಅವಕಾಶ ಕೊಡುತ್ತದೆಯೆ? ೬೦. ದುರಂತವಾದ ದುಃಖಪರಂಪರೆಗಳು ಬಗೆದೀಡಾಡಿದುವು! ದುರ್ಮೋಹವೆಂಬ ಮೀನುಗಳ ಗುಂಪು ಬೆನ್ನಟ್ಟಿದುವು. ಲೋಭವೆಂಬ ತಿಮಿಂಗಿಲಗಳು ಮೇಲೆ ಬಿದ್ದು ಕಡಿದಿಕ್ಕಿದುವು. ಅತ್ಯುಗ್ರವಾದ ಕಾಮರಾಗವೆಂಬ ಮೊಸಳೆಗಳು ನುಣ್ಣಗೆ ನುಂಗಿದುವು. ಇಲ್ಲಿ ತನಕ ಭವಸಾಗರದಲ್ಲಿ ಒಂದೇಸಮನೆ ಮೇಲಿನಂತೆ ತೊಳಲಿದೆನು. ಇನ್ನು ಅದರಲ್ಲಿ ತಿರಿದಾಡಲಾರೆನು". ವ॥ ಎಂದು ಆ ಸ್ವಾಮಿಯು ಸಂಸಾರದಲ್ಲಿನ ಶರೀರೋಪಭೋಗವನ್ನನುಭವಿಸುವುದರಲ್ಲಿ ವಿರಕ್ತವಾದ ಮನಸ್ಸುಳ್ಳವನೂ, ಮುಕ್ತಿಕಾಂತೆಯಲ್ಲಿ ಅನುರಕ್ತವಾದ ಚಿತ್ತವುಳ್ಳವನೂ ಆದನು. ಅಷ್ಟರಲ್ಲಿ ಹಿಂದಿನ ಜನ್ಮದಲ್ಲಿ

* ೫೯, ೬೦ನೆಯ ಪದ್ಯಗಳು 'ಖ, ಗ' ಪ್ರತಿಗಳಲ್ಲಿಲ್ಲ. ಇವು ಪ್ರಕ್ಷಿಪ್ತವಾಗಿರಬಹುದು.

ತ್ರಿಭುವನಗುರುಪರಿನಿಷ್ಕ್ರಮಣಕಲ್ಯಾಣಶರದಾಗಮನಪ್ರತೀಕ್ಷಣದಿವ್ಯಹಂಸರುಂ ಬ್ರಹ್ಮಕಲ್ಪಾಂತ ನಿವಾಸಿಗಳುಮಪ್ಪ ಸಾರಸ್ವತಾದಿತ್ಯವಹ್ನ್ಯರುಣಗರ್ದತೋಯತುಷಿತಾವ್ಯಾಬಾಧಾರಿಷ್ಟರೆಂಬೆಣ್ಬರುಂ ಲೋಕಾಂತಿಕದೇವರ್ ಬಂದು.

ಸುರಭೂಜಪ್ರಸವಂಗಳಂ ಸುರಿದು ಪಾದಾಂಭೋಜದೊಳ್ ದೇವ ಭೀ
ಕರಕರ್ಮದ್ವಿಷರಂ ಪಡಲ್ವಡಿಸಲುಂ ಭವ್ಯರ್ಕಳಂ ಘೋರಸಂ
ಸರಣಾಂಭೋನಿಧಿಪಾರಮಂ ಸಲಿಸಲುಂ ಸಾಲ್ಗುಂ ತದುದ್ಯೋಗಮಿ
ನ್ನಿರವೇಂ ತ್ರೈಭುವನೋಪಕಾರಕರಣವ್ಯಾಪಾರಪಾರಾಯಣಾ ೬೧

ಪರಮಾರ್ಹಂತ್ಯಮನೆಯ್ದಲಿರ್ದುದದಱಿಂ ಮೇಲುಂಟೆ ಸತ್ವಂ ಚರಾ
ಚರಮಂ ನೆಟ್ಟನೆ ಪರ್ವಲಿರ್ದುದದಱಿಂ ಮೇಲುಂಟೆ ವಿಜ್ಞಾನಮಿಂ
ತೆರಡರ್ಕಂ ನೆಲೆಯಾಗಿಯುಂ ವಸುಮತೀಸಾಮ್ರಾಜ್ಯದೊಳ್ ನೀಂ ನಿರಾ
ದರನಾಗಿರ್ದುದೆ ತತ್ಸುಖಾನುಗುಣಮಂ ಪೇೞ್ಗುಂ ಗುಣಾಂಭೋನಿಧೀ ೬೨

ವ|| ಆದುಕಾರಣದಿಂದೀ ವಸುಂಧರಾರಾಜ್ಯಮೋಹಮೆಂಬ ವಜ್ರಲೋಹನಿಗಳಮಂ ಪಱಿಯೆ ಪೊಯ್ದು ರಾಜಕುಂಜರಂಗೆ ನಿನಗಪವರ್ಗಮಾರ್ಗಂ ನಿರರ್ಗಳಮೆ ವಲಮಾದೊಡಮೇಂ.

ಅವನಿಂದ ವಿದ್ಯೆ ಕಲಿತವರೂ, ಶುಭಭಾವನೆಗಳಿಂದ ಕೂಡಿದ ಮನಸ್ಸುಳ್ಳವರೂ ತ್ರಿಲೋಕಗುರುವೆನಿಸಿದ ಆದಿದೇವನ "ಪರಿನಿಷ್ಕ್ರಮಣ ಕಲ್ಯಾಣ" ವೆಂಬ ಶರತ್ಕಾಲದ ಬರವಿನ ನಿರೀಕ್ಷಣೆಯಲ್ಲಿರುವ ಶ್ರೇಷ್ಠಹಂಸರೂ ಬ್ರಹ್ಮಕಲ್ಪದ ಅಂತದಲ್ಲಿ ವಾಸಿಸುವ ಸಾರಸ್ವತ, ಆದಿತ್ಯ, ವಹ್ನಿ, ಅರುಣ, ಗರ್ದತೋಯ, ತುಷಿತ, ಅವ್ಯಾಬಾಧ ಮತ್ತು ಅರಿಷ್ಟರೆಂಬ ಎಂಟು ಜನ ಲೋಕಾಂತಿಕದೇವರೂ ಬಂದರು. ೬೧. ಆ ಲೋಕಾಂತಿಕ ದೇವರು ವೃಷಭಸ್ವಾಮಿಯ ಪಾದಕಮಲಗಳಲ್ಲಿ ಕಲ್ಪವೃಕ್ಷದ ಹೂಗಳನ್ನು ಸುರಿದು "ಹೇ ದೇವ, ಮೂರು ಲೋಕಗಳ ಉಪಕಾರವ್ಯಾಪಾರದಲ್ಲಿ ಸದಾ ತೊಡಗಿದ ವಿಭುವೆ, ಭೀಕರವಾದ ಕರ್ಮಗಳೆಂಬ ಶತ್ರುಗಳನ್ನು ವಿಧ್ವಂಸಗೊಳಿಸಲೂ ಭವ್ಯರನ್ನು ಘೋರ ಸಂಸಾರಸಾಗರದಿಂದ ಪಾರುಮಾಡಲೂ ನಿನ್ನ ಉದ್ಯಮವು ಸಮರ್ಥವಾಗಿದೆ. ಇನ್ನು ಇಲ್ಲಿ ಇರುವುದೇಕೆ? ೬೨. "ಹೇ ಗುಣಸಾಗರ! ಪರಮಾರ್ಹಂತ್ಯವನ್ನು ಪಡೆಯಲಿಕ್ಕೆ ಈ ಸತ್ತ್ವಗುಣವು ಅರ್ಹವಾಗಿದೆ. ಅದಕ್ಕಿಂತ ಮೇಲಾದ ಸತ್ವವೇನುಂಟು? ಚರಾಚರ ವಸ್ತುಗಳನ್ನು ನೆಟ್ಟನೆ ವ್ಯಾಪಿಸುವುದಕ್ಕೆ ಸಮರ್ಥವಾಗಿದೆ, ವಿಜ್ಞಾನ. ಅದಕ್ಕಿಂತ ಮೇಲಾದ ವಿಜ್ಞಾನವೇನುಂಟು? ಈ ಸತ್ವ ವಿಜ್ಞಾನಗಳೆರಡಕ್ಕೂ ನೀನು ನೆಲೆಯಾಗಿದ್ದರೂ, ದೇವ! ಈ ವಸುಮತೀರಾಜ್ಯದಲ್ಲಿ ಉಪೇಕ್ಷೆಯುಳ್ಳವನಾಗಿರುವೆ. ಅದೇ ಅನುಗುಣವಾದ ಅರ್ಹಂತ್ಯ ಸುಖವನ್ನು (ಅಥವಾ ರಾಜ್ಯದ ಅಲ್ಪಸುಖವನ್ನು) ತಿಳಿಸುತ್ತದೆ. ವ|| "ಆ ಕಾರಣದಿಂದ ಈ ಭೂರಾಜ್ಯಮೋಹವೆಂಬ ವಜ್ರಲೋಹದ ಬೇಡಿಯನ್ನು ಕಿತ್ತೊಗೆಯಲು ಮುನ್ನುಗ್ಗುವ ರಾಜಗಜನಾದ ನಿನಗೆ ಮೋಕ್ಷಮಾರ್ಗವನ್ನು ಪಡೆಯಲು ನಿಶ್ಚಯವಾಗಿ ಯಾವ

ವಿಶದಯಶ ಧರ್ಮಮಷ್ಟಾ
ದಶಕೋಟ್ಯನುಕೋಟಸಾಗರೋಪಮಕಾಲಂ
ಪ್ರಶಮಿಸಿ ನಿಂದುದದಂ ನೀಂ
ವಿಶದಂ ಮಾೞ್ಪುದು ಜಗದ್ವಿಶೇಷಕಚರಿತಾ ೬೩

ವ|| ಎಂದವರ್ ಪ್ರತಿಬೋಧಿಸಿ ಪೋಗಲೊಡಂ ಪರಿನಿಷ್ಕ್ರಮಣಕಲ್ಯಾಣೋತ್ಸವೋತ್ಸುಕನಾಗಿರಲಾ ಸಕಳಸುರಸಮಾಜಂಬೆರಸಮರರಾಜಂ ಮುಂಮಾಡಿದ ಜನ್ಮಾಭಿಷೇಕಕ್ಕಂ ಬೞಿಕ್ಕೆ ಮಾಡಿದ ರಾಜ್ಯಾಭಿಷೇಕಕ್ಕಮಿದುವೆ ಮಿಗಿಲೆಂಬಂತಾಗಿ ಪಂಚಮಹಾಂಬುಧಿ[೧] ಪವಿತ್ರಜಳಪರಿಪೂರ್ಣಸುವರ್ಣಕಲಶಂಗಳಿಂದಮಭಿಷೇಕಂಗೆಯ್ದು, ತದನಂತರದೊಳ್ ಭರತರಾಜನಂ ಬರಿಸಿ ರಾಜ್ಯಾಭಿಷೇಕಂಗೆಯ್ದು,

ಕರವಾಳಾಂಶುಚಯಾಂಜನಂಗಳೊಳರಿಕ್ಷ್ಮಾಭೃಜ್ಜಯಶ್ರೀವಶೀ
ಕರಣಂ ಮಾಡಿ ಹಿಮಾದ್ರಿವಾರಿಧಿನಿರುದ್ಧೈಕಾತಪತ್ರಕ್ಷಮಾ
ಭರಮಂ ಭೂರಿಭುಜಾಗ್ರದೊಳ್ ನಿಱಿಸಿ ಬೋಧಾವಾಪ್ತಿಯಿಂದಂ ಸುಖಾ
ಕರನಾಗೆಂದು ಫಲಪ್ರದೋಕ್ತಿ ತಳಿದಂ ಶೇಷಾಕ್ಷತೌಘಂಗಳಂ ೬೪

ವ|| ಅಂತು ತಳಿದು,

ಭರತಂಗಭಿಷೇಕಪುರ
ಸ್ಸರಮೂರ್ಜಿತರಾಜ್ಯಪದವಿಯಂ ಕೊಟ್ಟು ನಿಜಾ
ದರದಿಂದೆ ಬಾಹುಬಲಿಗಂ
ಪರಮಂ ಯುವರಾಜಪದವಿಯಂ ದಯೆಗೆಯ್ದಂ ೬೫

ತೋಂದರೆಯೂ ಇಲ್ಲ. ಆದರೂ, ೬೩. ಶುಭ್ರಕೀರ್ತಿ, ಶ್ರೇಷ್ಠಚರಿತ ಹದಿನೆಂಟು ಕೋಟ್ಯನುಕೋಟಿ ಸಾಗರೋಪಮ ಕಾಲದವರೆಗೆ (ಜಿನ)ಧರ್ಮವು ದುರ್ಮಾರ್ಗವನ್ನು ಹೋಗಲಾಡಿಸಿ ನಿಂತಿದೆ. ಅದನ್ನು ನೀನು ವಿಶದಗೊಳಿಸುವುದು ಆವಶ್ಯಕ." ವ|| ಎಂದು ಲೋಕಾಂತಿಕದೇವರು ತಿಳಿಸಿ ಹೋದರು. ಸ್ವಾಮಿಯು ಆಗ ಪರಿನಿಷ್ಕ್ರಮಣ ಕಲ್ಯಾಣೋತ್ಸವವನ್ನು ಮಾಡಲು ಉತ್ಸುಕನಾದನು. ಸುರರ ಗುಂಪಿನೊಡನೆ ಕೂಡಿ ದೇವೇಂದ್ರನು ಮೊದಲು ಮಾಡಿದ ಜನ್ಮಾಭಿಷೇಕಕ್ಕೂ ಬಳಿಕ ಮಾಡಿದ ರಾಜ್ಯಾಭಿಷೇಕಕ್ಕೂ ಪರಿನಿಷ್ಕ್ರಮಣ ಕಲ್ಯಾಣೋತ್ಸವವೇ ಶ್ರೇಷ್ಠವೆನ್ನುವಂತೆ ಐದು ಸಮುದ್ರಗಳಲ್ಲಿ ತುಂಬಿ ತಂದ ಚಿನ್ನದ ಕಲಶಗಳ ನೀರಿನಿಂದ ಅಭಿಷೇಕ ಮಾಡಿದನು. ಬಳಿಕ ವೃಷಭದೇವನು ಭರತರಾಜನನ್ನು ಕರೆಸಿ ರಾಜ್ಯಾಭಿಷೇಕ ಮಾಡಿ, ೬೪. "ಖಡ್ಗಕಾಂತಿಗಳೆಂಬ ಅಂಜನಗಳಿಂದ ಶತ್ರುರಾಜರ ಜಯಲಕ್ಷ್ಮಿಯನ್ನು ವಶೀಕರಿಸಿಕೊಂಡು ಹಿಮವತ್ಪರ್ವತದಿಂದ ಸಮುದ್ರಪರ್ಯಂತವಾಗಿ ಏಕಚ್ಛತ್ರದ ಅಡಿಯ ಭೂಭಾರವನ್ನು ಬಲಿಷ್ಠವಾದ ನಿನ್ನ ತೋಳ್ತುದಿಯಲ್ಲಿ ಧರಿಸಿ ಜ್ಞಾನಾವಾಪ್ತಿಯಿಂದ ಸುಖಕರನಾಗಿ ಬಾಳೆಂ"ದು ಶೇಷಾಕ್ಷತೆಗಳಿಂದ ಭರತನನ್ನು ಹರಸಿದನು, ವ|| ಹಾಗೆ ಅಕ್ಷತೆಗಳಿಂದ ಹರಸಿ, ೬೫. ಭರತನಿಗೆ ರಾಜ್ಯಾಭಿಷೇಕವನ್ನು ಗೈದು ರಾಜ್ಯಪದವಿಯನ್ನು ಕೊಟ್ಟನು. ಪರಮನು ಆದರದಿಂದ

೧. 'ಪಂಚಮಾಂಬುಧಿ' ಎಂಬ ಪಾಠದಲ್ಲಿ ಐದನೆಯ ಕ್ಷೀರಸಮುದ್ರ ಎಂದರ್ಥ

ವ|| ಅಂತು ದಯೆಗೆಯ್ದಯೋಧ್ಯಾಪೌದನಪುರಾಧಿಪತ್ಯದೊಳಿರ್ವರುಮಂ ನಿಜೆಸಿ ನಿರ್ಭರ ಪ್ರಮೋದಪರಂಪರಾಪರೀತದಿವಿಜಮನುಜಸಮಾಜದೊಳ್,

ಭಗವತ್ಪರಿನಿಷ್ಕ್ರಮಣ
ಪ್ರಗುಣೀಕೃತಸುರಮೃದಂಗರವಮೊಂದೆಡೆಯೊಳ್
ನೆಗಟ್ದುದು ರಾಜ್ಯಸಮರ್ಪಣ
ಯುಗಪತ್ಪ್ರತಿಹತಮುಕುಂದರವಮೊಂದೆಡೆಯೊಳ್ ೬೬

ನೆಗಟ್ದ ತಪೋರಾಜ್ಯದ ಬಗೆ
ಮಿಗೆ ನಿಂದಂ ವೃಷಭನಾಥನತ್ತೊಂದೆಡೆಯೊಳ್
ಜಗತೀರಾಜ್ಯದ ಬಗೆ ಕೈ
ಮಿಗೆ ನಿಂದಂ ಭರತರಾಜನಿತ್ತೊಂದೆಡೆಯೊಳ್ ೬೭

ಸುರಶಿಲ್ಪಿಗಳಿಂ ಶಿಬಿಕಾ
ವಿರಚನೆ ದೆಸೆಗೆಸೆಯುತಿರ್ದುದತ್ತೊಂದೆಡೆಯೊಳ್
ನರಶಿಲ್ಪಿಗಳಿಂ ಮಂಡಪ
ವಿರಚನೆ ನೆಗಟುತ್ತುಮಿರ್ದುದಿತ್ತೊಂದೆಡೆಯೊಳ್ ೬೮

ಮುಂದಾಡಿದಳಿಂದ್ರಸ ಸತಿ
ಬಂದಮರೀಸಹಿತಮೀಶನಿದೊಂದೆಡೆಯೊಳ್
ಬಂದಾಡಿದಳ್ ಸುನಂದೆಯೊ
ಳೊಂದಿ ಯಶಸ್ವತಿ ಮಹೀಶನಿರ್ದೊಂದೆಡೆಯೊಳ್ ೬೯

ಬಾಹುಬಲಿಗೆ ಯುವರಾಜಪದವಿಯನ್ನು ದಯೆಗೆಯ್ದನು. ವ|| ಹಾಗೆ ಅವರಿಬ್ಬರನ್ನೂ ಅನುಕ್ರಮವಾಗಿ ಅಯೋಧ್ಯಾ ಪೌದನಪುರಗಳಿಗೆ ರಾಜರನ್ನಾಗಿ ಮಾಡಿದನು. ಸಂತೋಷ ಪರಂಪರೆಯಿಂದ ವಿಜೃಂಭಿಸುತ್ತಿರುವ ಸುರ ನರರ ಸಮಾಜದಲ್ಲಿ ೬೬. ಭಗವಾನ್ ವೃಷಭನಾಥನ ಪರಿನಿಷ್ಕ್ರಮಣಕಾಲದಲ್ಲಿ ಸುರಮೃದಂಗಧ್ವನಿಯು ಒಂದೆಡೆ ಇಮ್ಮಡಿಗೊಂಡವು. ಹಾಗೆಯೇ ಭರತನಿಗೆ ರಾಜ್ಯಾರ್ಪಣಕಾಲದಲ್ಲಿ ಇನ್ನೊಂದೆಡೆ ಮುಕುಂದವಾದ್ಯರವಗಳು ಧ್ವನಿಗೆಯ್ದುವು. ೬೭. ವೃಷಭನಾಥನು ತಪೋರಾಜ್ಯದಲ್ಲಿ ಸ್ಥಿರವಾಗಿ ನಿಂತನು. ಅತ್ತ ಜಗತೀರಾಜ್ಯದಲ್ಲಿ ಭರತರಾಜನು ಸ್ಥಿರವಾಗಿ ನಿಂತನು. ೬೮. ಇತ್ತ ಸುರಶಿಲ್ಪಿಗಳಿಂದ ವಿರಚಿತವಾದ ಶಿಬಿಕೆಗಳು (ವಿಮಾನ) ದಿಕ್ಕುದಿಕ್ಕುಗಳಲ್ಲಿ ಪ್ರಕಾಶಿಸುತ್ತಿದ್ದುವು. ಅತ್ತ ನರಶಿಲ್ಪಿಗಳಿಂದ ವಿರಚಿತವಾದ ಮಂಡಪಗಳು ರಾರಾಜಿಸುತ್ತಿದ್ದುವು. ೬೯. ವೃಷಭೇಶನಿದ್ದೆಡೆಯಲ್ಲಿ ಇಂದ್ರಾಣಿಯು ಅಮರಿಯರೊಡಗೂಡಿ ಅವನ ಮುಂದೆ ಸುಳಿದಳು. ಭರತಮಹೀಶನಿದ್ದೆಡೆಯಲ್ಲಿ ಸುನಂದೆಯೊಂದಿಗೆ ಯಶಸ್ವತಿಯು

ಸುರವೃಂದಾರಕರಿಂದಂ
ಪರಿವೃತನಾದಂ ಚಿದಾತ್ಮನತ್ತೊಂದೆಡೆಯೊಳ್
ನರವೃಂದಾರಕರಿಂದಂ
ಪರಿವೃತನಾದಂ ಮಹಾತ್ಮನಿತ್ತೊಂದೆಡೆಯೊಳ್ ೭೦

ಧರೆಯಂ ಮೆಟ್ಟದೆ ಮೆಟ್ಟುವ
ಸುರಲಲನಾನೃತ್ತಮತ್ತಲಭವನ ಸಭೆಯೊಳ್
ಕರವೆ[illegible]ದುಗ[illegible] ವಾರಸ್ತ್ರೀ
ಪರಿನರ್ತನಮಿತ್ತಲಧಿಕವಿಭವನ ಸಭೆಯೊಳ್ ೭೧

ಜನಿತೋತ್ಸವಯುಗಳವ್ಯ
ಗ್ರನಾಕನರಲೋಕಸಕಳಜನಕಳಕಳದಿಂ
ದೆನಿತಾನುಂ ವಿಭವದಿನಿಂ
ತು ನಾಡೆಯುಂ ರಮ್ಯಮಾದುದಾ ನೃಪಭವನಂ ೭೨

**ವ॥ ಮತ್ತಮಾ ವೃಷಭನಾಥನುಳಿದಪತ್ಯವರ್ಗಕ್ಕೆಲ್ಲಮಿಳಾತಳವಿಭಾಗಮಂ ಪಚ್ಚುಕೊಟ್ಟು ಸಮುತ್ತೀರ್ಣರಾಜ್ಯಭಾರನುಂ ಪರಿನಿಷ್ಕ್ರಮಣೋದ್ಯುಕ್ತಚಿತ್ತನುಮಾಗಿ, ನಾಭಿರಾಜಾದಿಸನಾಭಿಗಳಂ ಬೀಳ್ಕೊಂಡು ಮಂಗಳಾಳಂಕರಣಾಲಂಕೃತಂ ಸೌಧರ್ಮೇಂದ್ರದತ್ತಹಸ್ತಾವಲಂಬಂ ಆರೂಢ ಶುಭಪರಿಣಾಮಂ ಗುಣಶ್ರೇಣಿಯನೇಱುವುದನಭ್ಯಾಸಂಗೆಯ್ವಂತೆ ಸುದರ್ಶನವೆಂಬ ಶಿಬಿಕೆಯನೇಱಿದಾಗಳ್,**

ಸಂತೋಷದಿಂದ ಸುಳಿದಾಡಿದಳು. ೭೦. ಜಿತಾತ್ಮನಾದ ಪರಮನು ಒಂದೆಡೆಯಲ್ಲಿ ಸುರಶ್ರೇಷ್ಠರೊಡನೆ ಸುತ್ತುವರೆಯಲ್ಪಟ್ಟನು. ಭರತರಾಜನು ನರಶ್ರೇಷ್ಠರಿಂದ ಮತ್ತೊಂದೆಡೆಯಲ್ಲಿ ಸುತ್ತುವರೆಯಲ್ಪಟ್ಟನು. ೭೧. ಭೂಮಿಯನ್ನು ಮೆಟ್ಟದೆಯೆ ನರ್ತಿಸುವ ಸುರಲಲನೆಯರ ನೃತ್ಯವು ಅಭವನ ಸಭೆಯಲ್ಲಿ ಜರುಗಿತು. ಇತ್ತ ಅಧಿಕವಿಭವನ (ಭರತನ) ಸಭೆಯಲ್ಲಿ ಗಣಿಕೆಯರ ನರ್ತನವು ಮೆರೆಯಿತು. ೭೨. ಈ ಎರಡು ಉತ್ಸವಗಳಲ್ಲಿಯೂ ವ್ಯಗ್ರರಾದ ನಾಕನರಲೋಕಗಳ ಜನರ ಕೋಲಾಹಲಧ್ವನಿಯಿಂದಲೂ ವೈಭವದಿಂದಲೂ ನೃಪಭವನವೆಲ್ಲ ತುಂಬ ರಮ್ಯವಾಗಿತ್ತು. ವ॥ ಮತ್ತೆ ವೃಷಭನಾಥನು ಉಳಿದ ಮಕ್ಕಳ ಸಮೂಹಕ್ಕೆ ಭೂಮಿಯ ಐಶ್ವರ್ಯವನ್ನೆಲ್ಲ ಹಂಚಿಕೊಟ್ಟು ರಾಜ್ಯಭಾರವನ್ನು ತೊರೆದು ಪರಿನಿಷ್ಕ್ರಮಣ ಕಾರ್ಯದಲ್ಲಿ ಮನವಿತ್ತನು. ಆಗ ನಾಭಿರಾಜಾದಿ ಬಾಂಧವರಿಂದ ಬೀಳ್ಕೊಂಡು ಮಂಗಲಭೂಷಣಗಳಿಂದ ಭೂಷಿತನಾಗಿ ಸೌಧರ್ಮೇಂದ್ರನ ಕೈಹಿಡಿದು ಶುಭಪರಿಣಾಮವನ್ನು ಮುಟ್ಟಿದವನಾಗಿ ಗುಣಶ್ರೇಣಿಯ ಆರೋಹಣವನ್ನು ಅಭ್ಯಾಸಗೈಯುವಂತೆ ಸುದರ್ಶನವೆಂಬ ಶಿಬಿಕೆಯನ್ನು ಹತ್ತಿದನು. ಆಗ,

ಪರಮೋತ್ಸಾಹದಿನಾಗಳೇೞಡಿವರಂ ಭೂಪಾಲರುಯ್ದರ್ ವಿಯ
ಚ್ಚರರತ್ತೇೞಡಿಯಂ ವಿಯದ್ಗಮನದಿಂದಾಂತುಯ್ದರಲ್ಲಿಂ ಸುರಾ
ಸುರರಂಭೋದಪಥಕ್ಕಳಂಕರಣಮಾಗುಯ್ದರ್ ಬೞಕ್ಕಿಂದ್ರರಾ
ದರದುಯ್ದರ್ ಕಮನೀಯರತ್ನಶಿಬಿಕಾಸ್ಕಂಧರ್ ಜಗನ್ನಾಥನಂ ೭೩

ವ॥ ಅಂತು ವೃಷಭೇಶ್ವರನನಮರೇಶ್ವರರುಯ್ವುದಂ ಕಂಡು ಪುರಜನಂಗಳ್ ಗುಜುಗುಜುಗೊಂಡು ತಂತಮ್ಮೊಳಿಂತೆಂದರ್,

ಅರಸನ ಪುಟ್ಟಿದಿಂಬೞಯಮೀ ದಿವಿಜಾಳಿಗೆ ಮಾಣ್ದುದಿಲ್ಲ ಪೋ
ಬರವಿವರುಯ್ವರುಂ ಮಗುೞ್ ತರ್ಪರುಮಪ್ಪುದಱಂದಮಿಲ್ಲಿ ಕೊ
ಕ್ಕರಿಕೆಗೆ ಪೇೞಮಾವುದೆಡೆ ದೇವನನಿಲ್ಲಿಗೆ ತರ್ಪರೇಕೆ ಮಂ
ದರಶಿಖರಾಗ್ರದೊಳ್ ಮಿಸಿಸಿ ಮುನ್ನಿವರಿಲ್ಲಿಗೆ ತಂದರಲ್ಲರೇ ೭೪

ವ॥ ಎಂಬುದುಮಲ್ಲಿಯುಂ ಕೆಲರ್ ವಿವೇಕಿಗಳ್,

ಅರಸನ ಪಂಬಲಂ ಬಿಸುಡಿಮೇಕೆನೆ ಬರ್ಪನೆಯಡಿಪ್ಪೊಡೀ ಧರಾ
ಭರಮನಶೇಷಮಂ ನಿಜತನೂಭವರ್ಗೇವದೆ ಪಚ್ಚುಕೊಟ್ಟು ಘೋಂ
ಕರಿಸುವ ದೇವಕೋಟಿಗಳ ಬಿಚ್ಚಗಳೊಳ್ ತೊಡರ್ದೇಕೆ ಪೋಪನೀ
ದೊರೆಯನನಾಳ್ದನಂ ಪಡೆವುಪಾಯಮದಾವುದೊ ಜನ್ಮಜನ್ಮದೊಳ್ ೭೫

ವ॥ ಎಂದು ತಮ್ಮ ತಮ್ಮ ಬಗೆಗಳನೆ ಬಗೆದು ನುಡಿಯೆ,

೭೩. ಅತ್ಯುತ್ಸಾಹದಿಂದ ಭೂಪಾಲರು ವೃಷಭನಾಥನನ್ನು ಏಳಡಿಗಳವರೆಗೆ ಒಯ್ದರು. ಬಳಿಕ ವಿದ್ಯಾಧರರು ಮತ್ತೆ ಏಳಡಿಗಳವರೆಗೆ ಆಕಾಶಮಾರ್ಗದಲ್ಲೊಯ್ದರು, ಅಲ್ಲಿಂದ ಮೇಲಕ್ಕೆ ಸುರರೂ ಅಸುರಕುಮಾರರೆಂಬ ದೇವತೆಗಳೂ ಆಕಾಶಮಾರ್ಗದಿಂದ ಅದಕ್ಕೆ ಅಲಂಕಾರವಾಗುವಂತೆ ಒಯ್ದರು. ಬಳಿಕ ಇಂದ್ರರು ರತ್ನಶಿಬಿಕೆಯನ್ನು ಹೆಗಲ ಮೇಲಿಟ್ಟುಕೊಂಡು ಜಗನ್ನಾಥನನ್ನು ಆದರದಿಂದ ಕರೆದೊಯ್ದರು. ವ॥ ಹಾಗೆ ವೃಷಭೇಶ್ವರನನ್ನು ಅಮರೇಶ್ವರರು ಒಯ್ಯುವುದನ್ನು ಕಂಡು ಪುರಜನಗಳು ಗುಜುಗುಜುಗೊಂಡು ಹೀಗೆಂದುಕೊಂಡರು. ೭೪. "ಅರಸನು ಹುಟ್ಟಿದಂದಿನಿಂದ ಈ ದೇವತೆಗಳಿಗೆ ಇಲ್ಲಿಗೆ ಬಂದು ಹೋಗುವುದು ತಪ್ಪಲೇ ಇಲ್ಲ! ಇವರೇ ಒಯ್ಯುವವರೂ, ತರುವವರೂ ಆಗಿದ್ದಾರಾದ್ದರಿಂದ ಇದರಲ್ಲಿ ಬೇಸರಕ್ಕೆ ಏನು ಅವಕಾಶ? ಆದಿದೇವನನ್ನು ಇಲ್ಲಿಗೇಕೆ ತರುತ್ತಾರೆ? ಇವರೇ ಅಲ್ಲವೆ ಮಂದರಪರ್ವತದಲ್ಲಿ ದೇವನಿಗೆ ಅಭಿಷೇಕ ಮಾಡಿ ಈ ಹಿಂದೆ ಇಲ್ಲಿಗೆ ತಂದವರು?" ವ॥ ಎಂದರು. ಆಗ ಅಲ್ಲಿಯೂ ಕೆಲವರು ವಿವೇಕಿಗಳು, ೭೫. "ಆದಿದೇವನ ಮೇಲೆ ಹಂಬಲವನ್ನು ತ್ಯಜಿಸಿರಿ. ಅವನು ಹಿಂದಿರುಗಿ ಬರುವವನೇ ಆಗಿದ್ದರೆ ಈ ಸಮಸ್ತವಾದ ಭೂಭಾರವನ್ನೇಕೆ ಮಕ್ಕಳಿಗೆಲ್ಲ ಹಂಚಿಕೊಡುತ್ತಿದ್ದನು? ಘೋಂಕರಿಸುವ ದೇವಕೋಟಿಗಳ ಪ್ರೋತ್ಸಾಹದಲ್ಲಿ ತೊಡರ್ದೇಕೆ ಹೋಗುತ್ತಿದ್ದನು? ಇಂಥ ರಾಜನನ್ನು ಜನ್ಮಜನ್ಮಗಳಲ್ಲಿ ಪಡೆವ ಉಪಾಯವೆಂತು?" ವ॥ ಎಂದು ತಮ್ಮ ತಮ್ಮ ಆಲೋಚನೆಗಳನ್ನು ಬಗದು ನುಡಿದರು.

ತನಯರನಿಟ್ಟು ಸಂತತಿಯೊಳಿಂತೆಮಗಂ ಬಗೆವೇಳದೇಕೆ ಪೋ
ದನೊ ನೃಪನೆಂತು ಸೈರಿಸುವೆವಯ್ಯ ವಿಯೋಗಮನೆಂದು ಸೋರ್ವ ಕ
ಣ್ಬನಿಯ ತೆರಳ್ಕೆ ಗದ್ಗದಿಕೆಗೊಳ್ಳ ಸರಂ ಮಿಗೆ ಪೋದರಾತ್ಮನಾ
ಥನ ಬೞಯಂ ಮನಂ ಮಱುಕಮೊಯ್ಕೆ ಯಶಸ್ವತಿಯುಂ ಸುನಂದೆಯುಂ ೭೬

ವ॥ ಆಗಳಂತಃಪುರವೃದ್ಧರವರನರಸರೀಗಳೆ ಬಂದಪ್ಪರಂಜದಿರಿಮೆಂದಾಸೆವಾತುಗಳೊಳಾಱಿಸಿ ನುಡಿದೊಡಗೊಂಡು ಮಂದಿರಕ್ಕೆ ಮಗುೞ್ದರ್, ಇತ್ತ ನಾಭಿರಾಜಂ ಭರತೇಶ್ವರಕಚ್ಛಮಹಾಕಚ್ಛಪ್ರಮುಖ ಪ್ರಧಾನಪಾರ್ಥಿವರುಂ ಮರುದೇವಿಮಹಾದೇವಿಯುಂ ಪರಿನಿಷ್ಕ್ರಮಣಕಲ್ಯಾಣಾವಲೋಕನಕುತೂಹಲದಿಂ ವೃಷಭೇಶ್ವರನೊಡನೆ ಸುರಪರಿವೃಢನೊಡನಯೋಧ್ಯಾಪುರಕ್ಕತಿದೂರಮುಮತ್ಯಾಸನ್ನಮುಮಲ್ಲದ ಸಿದ್ಧಾರ್ಥವನದ ನಡುವಣ ನಿರಂತರನಿಚಿತತರುನಿಕರವಿಗಳಿತಪುಷ್ಪೋಪಹಾರಶೋಭಿತದೊಳ್ ಇಂದ್ರಾಣೀಹಸ್ತವಿನ್ಯಸ್ತಮರಕತಚೂರ್ಣರಂಗವಲ್ಲೀವಿರಾಜಿತದೊಳ್ ಅಮರವಾರಾಂಗನಾರಬ್ಧ ಮಂಗಳಗೀತಂಗಳೊಳ್ ದೇವಾಂಗವಸ್ತ್ರವಿರಚಿತವಿಚಿತ್ರಮಂಟಪದೊಳ್ ಪರ್ಯಂತನಿವೇಶಿತ ವಿವಿಧಮಂಗಳ ದ್ರವ್ಯಪರಿಕರಪರಿಪೂರ್ಣದೊಳ್ ಪಾಂಡುಕಶಿಲಾತಲವಿಳಾಸೋಪಹಾಸಿಚಂದ್ರಕಾಂತಶಿಳಾತಳದೊಳ್ ಶಿಬಿಕೆಯನಿರಿಸಿ ಸುರಾಸುರಸಭೆಯಂ ದೂರೋತ್ಸಾರಿತಂ ಮಾಡಿ ಜನದ ಕಳಕಳಮಂ ವಾರಿಸಿ ತನ್ಮಧ್ಯದೊಳ್ ಜಗನ್ನಾಥನನಿರಿಸಿ ಪರಿಚಾರಕಭೃತ್ಯಮಂ ದೇವೇಂದ್ರಂ ಮಾಡಲ್ ಶುಭಭಾವನೆವೆರಸು

೭೬. "ತನಯರನ್ನು ಮುಂದಿನ ವಂಶಪರಂಪರೆಯಲ್ಲಿ ತೊಡಗಿಸಿ ನಮಗೂ ತನ್ನ ಮನೋಗತಿಯನ್ನು ತಿಳಿಸದೆಯೆ ಈ ನೃಪನೇಕೆ ಹೋದನು? ಇವನಗಲಿಕೆಯನ್ನು ಸೈರಿಸುವುದು ಹೇಗೆ?" ಎಂದು ಗದ್ಗದಸ್ವರದಿಂದ ಬಿಕ್ಕಿ ಬಿಕ್ಕಿ ಕಣ್ಣೀರು ಸುರಿಸುತ್ತ ಯಶಸ್ವತೀ ಸುನಂದೆಯರು ತಮ್ಮ ಪತಿಯ ಹಿಂದೆ ವ್ಯಥೆಯಿಂದ ಹಿಂಬಾಲಿಸಿ ಹೋದರು. ವ॥ ಆಗ ಅಂತಃಪುರದ ವೃದ್ಧರು, ಯಶಸ್ವತೀ ಸುನಂದೆಯರನ್ನು ಕುರಿತು- "ಅರಸರೀಗಲೇ ಬರುವರು; ಹೆದರಬೇಕಿಲ್ಲ" ಎಂದು ಸಮಾಧಾನಗೊಳಿಸಿ ಅವರೊಡನೆ ರಾಜಮಂದಿರಕ್ಕೆ ಹೋದರು. ಇತ್ತ ನಾಭಿರಾಜ, ಭರತ, ಕಚ್ಛ, ಮಹಾಕಚ್ಛರೇ ಮೊದಲಾದ ಮುಖ್ಯ ರಾಜರೂ, ಮರುದೇವಿಮಹಾದೇವಿಯೂ 'ಪರಿನಿಷ್ಕ್ರಮಣಕಲ್ಯಾಣ'ವನ್ನು ಕಾಣಬೇಕೆಂಬ ಕುತೂಹಲದಿಂದ ವೃಷಭಸೇನನೊಡನೆ ಬಂದರು. ಇತ್ತ ಸುರೇಂದ್ರನು ಅಯೋಧ್ಯಾಪುರಕ್ಕೆ ಸ್ವಲ್ಪ ದೂರದಲ್ಲಿದ್ದ ಸಿದ್ಧಾರ್ಥವನದ ಮಧ್ಯದಲ್ಲಿ ವೃಕ್ಷಗಳಿಂದ ತುಂಬಿದ ಪುಷ್ಪೋಪಶೋಭಿತದಲ್ಲಿ, ಇಂದ್ರಾಣಿಯಿಕ್ಕಿದ ರಂಗವಲ್ಲಿಯೆಡೆಗಳಲ್ಲಿ, ಸುರಗಣಿಕೆಯರ ಮಂಗಲಗೀತಗಳ ಮಧ್ಯದಲ್ಲಿ, ದೇವಾಂಗವಸ್ತ್ರಗಳಿಂದ ನಿರ್ಮಿತವಾದ ಪಟಮಂಟಪದಲ್ಲಿ, ಮಂಚಗಳ ಮೇಲಿಟ್ಟ ಮಂಗಳದ್ರವ್ಯಗಳ ಮಧ್ಯದಲ್ಲಿ, ಪಾಂಡುಶಿಲಾತಲವನ್ನು ನಗೆಪಾಟಲು ಮಾಡಿದ ಚಂದ್ರಶಿಲಾತಲದಲ್ಲಿ ಶಿಬಿಕೆಯನ್ನಿಳಿಸಿ ಸುರಾಸುರ ಸಮೂಹವನ್ನು ದೂರಗೊಳಿಸಿದನು. ಜನಕೋಲಾಹಲವನ್ನು ನಿವಾರಿಸಿ ಅದರ ನಡುವೆ ಜಗನ್ನಾಥನನ್ನು ಕುಳ್ಳಿರಿಸಿದನು. ಹೀಗೆ ಪರಿಚಾರಕ ಭೃತ್ಯತ್ವವನ್ನು ದೇವೇಂದ್ರನು ಕೈಗೊಂಡನು. ಆಗ ವೃಷಭಸ್ವಾಮಿಯು ಶುಭಭಾವನೆಯಿಂದ ಯುಕ್ತನಾಗಿ ಸಮಸ್ತ ವಸ್ತುಗಳಲ್ಲಿ ಸಮತೆಯನ್ನು ತಳೆದನು. ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗದಲ್ಲಿ ಮನತೊಟ್ಟು ತ್ರಿಸಾಕ್ಷಿಕನಾಗಿ ವಸ್ತ್ರಾಭರಣ ಮೌಲ್ಯಾದಿಗಳಿಂದ ವಿರಹಿತನಾಗಿ ಪೂರ್ವಾಭಿಮುಖನಾಗಿ ಪಲ್ಯಂಕಾಸನದಲ್ಲಿ

ಸಮಸ್ತವಸ್ತುಗಳೊಳ್ ಸಮತೆಯಂ ಭಾವಿಸಿ ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗೋನ್ಮುಖಮಾನಸಂ ತ್ರಿಸಾಕ್ಷಿಕನಾಗಿ ವಸ್ತ್ರಾಭರಣಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ ಪೂರ್ವಾಭಿಮುಖನುಂ ನಿಬಿಡನಿಬದ್ಧಪಲ್ಯಂಕಾಸನನುಮಾಗಿ,

ಮನದ ಪರಿಚ್ಛೇದದಿನಂ
ದು ನಮಸ್ಸಿದ್ಧೇಭ್ಯ ಎಂದು ಕರ್ಮಂಗಳ ಬೇ
ರನೆ ಪಱಿವ ತೆಱದೆ ಪಱಿದಂ
ಮನಸ್ವಿ ಚಳದಳಿವಿನೀಳಕೇಶಾವಳಿಯಂ ೭೭

ನಾನಾ ಭೂಷಣವಸ್ತ್ರಾ
ನೂನಸ್ರಗ್ರುಚಿಸನಾಥನಿಂ ಕಳೆಯಲೊಡಂ
ತಾನೆಸೆದುದಿಲ್ಲದೆಂತುಂ
ಸ್ಥಾನಭ್ರಷ್ಟಂಗೆ ತೇಜಮೆಂಬುದುಮುಂಟೇ ೭೮

ಬರೆ ಚೈತ್ರ ಕೃಷ್ಣಪಕ್ಷಂ
ದೊರೆಕೊಳೆ ನವಮಿಯೊಳಮುತ್ತರಾಷಾಢಂ ದು
ರ್ಧರಜಿನದೀಕ್ಷೆಯನಘಕುಳ
ಕರಚಂಡಂ ಮೂಱುಜಾವ[1]ದಾಗಳ್ ಕೊಂಡಂ ೭೯

ವ॥ ಆಗಳ್ ತದುತ್ಪಾಟಿತವಿನೀಳಕುಟಿಲಕುಂತಳಂಗಳನಮರತರುಕುಸುಮದಾಮೋದ್ದಾಮ ರಜೋರಂಜಿತಂಗಳನನರ್ಘ್ಯರತ್ನಮಯಪಟಳಿಕೆಯೊಳಾಂತುಕೊಂಡು ಪೋಗಿ,

ಸುರದುಂದುಭಿರವಮೆಸೆದಿರೆ
ಸುರಪತಿ ತಳೆದಮರೆ ಕೆದಱಿ ಹರಿನೀಲಮಣಿ
ಸ್ಫುರಿತದೆ ತೆರೆಗಳ ಕೆಲದೊಳ್
ಪರಭಾಗಂಬಡೆದುವವು ಪಯೋಂಭೋನಿಧಿಯೊಳ್ ೮೦

ಕುಳಿತು, ೭೭. ಮನೋನಿರ್ಣಯದಿಂದ "ನಮಸ್ಸಿದ್ಧೇಭ್ಯಃ" ಎಂದು ನುಡಿದನು. ಕರ್ಮಗಳ ಬೇರನ್ನು ಕಿತ್ತುಹಾಕುವಂತೆ, ದುಂಬಿಯಂತೆ ಕಪ್ಪಗಿರುವ ಕೂದಲಿನ ಗಂಟನ್ನು ಹರಿದೆಸೆದನು. ೭೮. ಅವನಿಂದ ಕಳಚಲಾದ ಆಭರಣ, ವಸ್ತ್ರ, ಮಾಲ್ಯಾದಿಗಳು ಆಗ ಪ್ರಕಾಶಿಸದೆ ಹೋದುವು. ಸ್ಥಾನಭ್ರಷ್ಟನಾದವನಿಗೆ ತೇಜಸ್ಸೆಂಬುದುಂಟೆ? ೭೯. ಚೈತ್ರಕೃಷ್ಣಪಕ್ಷವೂ ನವಮಿಯೂ ಉತ್ತರಾಷಾಢಾ ನಕ್ಷತ್ರವೂ ಒದಗಿಬಂದುವು. ಪಾಪೌಘ ವಿಧ್ವಂಸಕನಾದ ವೃಷಭಸ್ವಾಮಿಯು ದುರ್ಧರವಾದ ಜಿನದೀಕ್ಷೆಯನ್ನು ಮೂರನೆಯ ಜಾವ[1]ದಲ್ಲಿ (ಸಾಯಂಕಾಲ) ಕೈಗೊಂಡನು. ವ॥ ಆಗ ಸ್ವಾಮಿಯು ಕಿತ್ತುಹಾಕಿದ ನೀಲಕುಟಿಲ ಕೇಶಗಳನ್ನು ದೇವೇಂದ್ರನು ಕಲ್ಪವೃಕ್ಷದ ಹೂಮಾಲೆಗಳಿಂದ ಅಲಂಕರಿಸಿ ಬಹುಮೂಲ್ಯದ ರತ್ನಕರಂಡದಲ್ಲಿ ಇಟ್ಟುಕೊಂಡು ಹೋಗಿ ೮೦. ದೇವದುಂದುಭಿಗಳು ಮೊಳಗುತ್ತಿರಲು ಆ ಸುರೇಶ್ವರನು

1 ಸಾಯಂಕಾಲಕ್ಕೆ ಮೂರು ಸಂಜೆ, ಮುಚ್ಚಂಜೆ ಎಂಬ ಹೆಸರಿರುವುದನ್ನು ಸ್ಮರಿಸಿಕೊಳ್ಳಬಹುದು. ಮೂರನೆಯ ಸಂಜೆ, ಮೂರು ಸಂಜೆ (?), ಮೂರನೆಯ ಜಾವ (?) ಇದರ ವ್ಯುತ್ಪತ್ತಿ ಪರಿಶೀಲನಾರ್ಹ. ನೋಡಿ; ಸಾಯಾಹ್ನೇ ಪ್ರಾವ್ರಜತ್‌ಪ್ರಭು; (ಪೂ. ಪು. ೧೭-೨೦೩)

ವ॥ ಅಂತು ದೇವೇಂದ್ರಂ ಪರಿನಿಷ್ಕ್ರಮಣಕಲ್ಯಾಣಮಂ ಮನ್ನಿಸಿ ತನ್ಮುನೀಂದ್ರಪದ ಪಯೋಜಂಗಳ್ಗೆಱಗಿ ಪೊಡೆವಟ್ಟು ಪೋಗೆ ತದನಂತರದೊಳ್ ಭರತನವನತಭಕ್ತಿಭರನಿರತಂ ತ್ರಿಲೋಕಗುರುಚರಣಸರಸಿಜಂಗಳನರ್ಚಿಸಿ ನಿಜಪರಿಜನಂಬೆರಸು ರಾಜಧಾನಿಗೆ ಪೋದಂ. ಅನ್ನೆಗಮಿತ್ತ ಕಚ್ಛಮಹಾಕಚ್ಛರುಂ ಭರತನ ಮಗಂ ಮರೀಚಿಯುಂ ಬೆರಸು ನಾಲ್ಸಾಸಿರ್ವರ್ ಮಕುಟ ಬದ್ಧರಪ್ಪರಸುಮಕ್ಕಳ್ ಪೋಗಲೊಲ್ಲದೆ

ಅರಸನ ನೆಗಟ್ದಂದದೊಳನು
ಚರಂಗೆ ನೆಗಟಲ್ಕೆವೇಟ್ಕುಮೆಂದಱಿಯದೆ ತ
ದ್ಗುರುವಿನ ಮತಮಂ ಭಕ್ತಿಯ
ಭರದಿಂದಂ ಜಾತರೂಪಮಂ ಕೈಕೊಂಡರ್ ೮೧

ವ॥ ಅಂತು ಕೈಕೊಂಡು,

ಒಲವಿಂದೆ ಕೇವಲಂ ದ್ರ
ವ್ಯಲಿಂಗಿಗಳ್ ತನ್ನನಂದು ಬಳಸಿಯುಮಿರೆ ನಿ
ಶ್ಚಲತನು ಬಾಳಕುಜಂಗಳ
ಪಲವಱ ನಡುವಿರ್ದ ಕಲ್ಪಕುಜಮನೆ ಪೋಲ್ತಂ ೮೨

ವ॥ ಆಗಳಾ ತ್ರಿಲೋಕೈಕವಲ್ಲಭಂ,

ಇಂದಿಂಗಱುದಿಂಗಳ್ ನೆಱೆ
ದಂದಲ್ಲದೆ ಕಯ್ಯನೆತ್ತೆನೆಂದನಶನದಿಂ
ನಿಂದಂ ಯೋಗದೊಳತಿನಿ
ಸ್ಪಂದಂ ಮಂದರನಗಂಬೊಲಚಳಿತಧೈರ್ಯಂ ೮೩

ಆ ಕೂದಲನ್ನು ತೆಗೆದುಕೊಂಡು ಉಚಿತರೀತಿಯಲ್ಲಿ ಕ್ಷೀರಸಮುದ್ರಕ್ಕೆ ಹಾಕಿದನು. ತೆರೆಗಳ ಬಳಿ ಆ ಕೇಶರಾಶಿಗಳು ಇಂದ್ರನೀಲಮಣಿಗಳಂತೆ ಹೊಳೆದುವು. ವ॥ ದೇವೇಂದ್ರನು 'ಪರಿನಿಷ್ಕ್ರಮಣ ಕಲ್ಯಾಣ'ವನ್ನು ಗೌರವಿಸಿ ಆ ಮುನೀಂದ್ರನ ಪಾದಕಮಲಗಳಿಗೆರಗಿ ಹೊರಟನು. ಬಳಿಕ ನಿತ್ಯಭಕ್ತಿಭರಿತನಾದ ಭರತನು ಆ ತ್ರಿಲೋಕಗುರುವಿನ ಚರಣಪದ್ಮಗಳನ್ನು ಪೂಜಿಸಿ ತನ್ನ ಪರಿಜನರೊಡಗೂಡಿ ರಾಜಧಾನಿಗೆ ಹಿಂದಿರುಗಿದನು. ಅಷ್ಟರಲ್ಲಿ ಕಚ್ಛ ಮಹಾಕಚ್ಛರೂ ಭರತನ ಮಗನಾದ ಮರೀಚಿಯೇ ಮೊದಲಾದ ನಾಲ್ಕು ಸಾವಿರ ಕಿರೀಟಧಾರಿಗಳಾದ ಅರಸುಮಕ್ಕಳೂ ಹಿಂದಿರುಗಲೊಲ್ಲದೆ, ೮೧. "ಅರಸನು ಮಾಡಿದಂತೆಯೇ ಅವನ ಅನುಚರರೂ ಮಾಡಬೇಕು" ಎಂಬ ಒಂದೇ ಅಭಿಪ್ರಾಯದಿಂದ ಗುರುವಿನ ಅಭಿಪ್ರಾಯವನ್ನರಿಯದೆಯೇ ಭಕ್ತಿಯ ಪಾರವಶ್ಯದಿಂದ ಅವರು ದಿಗಂಬರತೆಯನ್ನು ಅಪ್ಪಿದರು. ವ॥ ಅಂತು ಕೈಕೊಂಡು, ೮೨. ಕೇವಲ ದ್ರವ್ಯಲಿಂಗಿ[1]ಗಳಾದ ಅವರು ಪ್ರೀತಿಯಿಂದ ಅವನನ್ನು (ಪರಮನನ್ನು) ಬಳಸಿದರು. ನಿಶ್ಚಲತನುವಾದ ಆತನು ಬಾಲವೃಕ್ಷಗಳ ನಡುವೆ ಇದ್ದ ಕಲ್ಪವೃಕ್ಷಕ್ಕೆಣೆಯಾದನು. ವ॥ ಅಂದು ತ್ರಿಲೋಕಕ್ಕೆಲ್ಲಾ ಈಶ್ವರನಾದ ಆತನು ೮೩. "ಇಂದಿಗೆ ಆರು ತಿಂಗಳು

1 ಚಿತ್ತಶುದ್ಧಿಯಿಲ್ಲದೆ ಬಾಹ್ಯಚಿಹ್ನೆಯನ್ನು ಧರಿಸಿದವನು ದ್ರವ್ಯಲಿಂಗಿ.

ಮಡವೆಡೆ ನಾಲ್ವೆರಲುಂಗುಟ
ದೆಡೆಯೊಗ್ಗೇಣಾಗೆ ನಿಲ್ವುದಿಚ್ಛಾಗತಮಂ
ದೆಡೆಗೊಳೆ ವಾಚಂಯಮತೆಯೊ
ಳೊಡಂಬಡಂ ಪಡೆದು ನಿಂದನಾದಿಬ್ರಹ್ಮಂ ೮೪

ನಿಂದ ಶಿಲೆ ತಪನತಪ್ತಮಿ
ದೆಂದಂಬುಜನಿಳಯೆ ಪದ್ಮವಿಷ್ಟರಮಂ ಕುಂ
ದೇಂದುಧವಳಾತಪತ್ರಮ
ನಂದು ಕೃತೇಚ್ಛಂಗೆ ಪಡೆದು ಪದೆಪಂ ಮೆಱೆದಳ್ ೮೫

ಪರಮನೊಳಗೊಳಗದೊಂದಂ
ಪರಿಜಪನಂಗೆಯ್ಯೆಯುಂ ನೆಗೞ್ದವ್ಯಕ್ತಾ
ಕ್ಷರದಿಂ ನಿಗೂಢತರನಿ
ರ್ಝರರವಗುಂಜದ್ಗುಹಾತಳಕ್ಕೆಣೆಯಾದಂ ೮೬

ಸ್ತಿಮಿತೇಕ್ಷಣವಭ್ರೂಭಂ
ಗಮನಾಪಾಂಗಾವಲೋಕನಂ ಸುಶ್ಲಿಷ್ಟೋ
ತ್ತಮದಶನಚ್ಛದಮಾನನ
ಮಮರ್ದುದು ಯೋಗಪ್ರಯೋಗದೊಳ್ ಮುನಿಪತಿಯಾ ೮೭

ನೆಗೞ್ದುದು ದೀಕ್ಷಾನಂತರ
ಮಗಣಿತಪುಣ್ಯೋದಯಂ ಮನಃಪರ್ಯಯಮಂ
ತೊಗೆದ ಚತುರ್ಜ್ಞಾನದೊಳಾ
ವಗಮೆಸೆದಂ ಜ್ಞಾನರೂಪನಾದಿಬ್ರಹ್ಮಂ ೮೮

ಕಳೆಯುವ ತನಕ ನಾನು ನನ್ನ ಕೈಯನ್ನೆತ್ತೆನು" ಎಂದು ನುಡಿದು ಊಟವನ್ನು ಮಾಡದೆಯೆ ಮಂದರಪರ್ವತದಂತೆ ಅಚಲನಾಗಿ ಧೈರ್ಯಗುಂದದೆಯೆ ಯೋಗಾಭ್ಯಾಸದಲ್ಲಿ ನಿಂತನು. ೮೪. ಆದಿಮುನೀಂದ್ರನು ಹಿಮ್ಮಡಿಯ ಬದಿ ನಾಲ್ಕು ಬೆರಳಷ್ಟೂ, ಅಂಗುಷ್ಠದ ಬದಿ ಒಗ್ಗೇಣೆನಷ್ಟೂ ಎರಡು ಕಾಲುಗಳ ನಡುವೆ ಅವಕಾಶವಿರುವ ಹಾಗೆ ಮೌನವಾಗಿ ನಿಂತನು. ೮೫. ಅವನು ನಿಂತ ಶಿಲೆಯು ಸೂರ್ಯನ ಬಿಸಿಲಿನಿಂದ ಕಾಯ್ದಿದೆಯೆಂದು ಲಕ್ಷ್ಮಿಯು ಕಮಲಪೀಠವನ್ನೂ, ಕುಂದಪುಷ್ಪದಂತೆಯೂ ಚಂದ್ರನಂತೆಯೂ ಇರುವ ಬೆಳ್ಗೊಡೆಯನ್ನೂ ಪೂರ್ಣಕಾಮನಾದ ಪರಮನಿಗೆ ಒದಗಿಸಿ ಪ್ರೀತಿಯನ್ನು ತೋರಿಸಿದಳು. ೮೬. ಆ ಪರಮನು ಒಳಗೊಳಗೆ ಜಪಿಸುತ್ತಿದ್ದ ಅವ್ಯಕ್ತಾಕ್ಷರದಿಂದ, ನಿಗೂಢವಾಗಿ ಹರಿಯುತ್ತಿರುವ ಝರಿಯ ಧ್ವನಿಯಿಂದ ಪ್ರತಿಧ್ವನಿತವಾದ ಗುಹಾತಲಕ್ಕೆಣೆಯಾದನು. ೮೭. ಯೋಗಪ್ರಯೋಗದ ದೆಸೆಯಲ್ಲಿ ಪರಮನ ಕಣ್ಣುಗಳು ಸ್ತಿಮಿತವಾಗಿದ್ದುವು. ಹುಬ್ಬುಗಳಾಡುತ್ತಿರಲಿಲ್ಲ. ಕಡೆಗಣ್ನೋಟವಿರಲಿಲ್ಲ, ತುಟಿಗಳು ಮುಚ್ಚಿಕೊಂಡಿದ್ದುವು. ಯೋಗಕ್ಕೆ ತಕ್ಕಂತೆ ಮುಖವು ಹೊಂದಿಕೊಂಡಿತು. ೮೮. ದೀಕ್ಷೆಯನ್ನು ಕೈಗೊಂಡ ಬಳಿಕ ಮಹಿಮೋದಯಸೂಚಕವಾದ ಮನಃ

ವ|| ಅಂತಾ ಪರಮೇಶ್ವರಂ ಸಪ್ತರ್ಧಿಸಂಪನ್ನನಾಗಿ ನಿಶ್ಚಳಯೋಗನಿಯೋಗದಿಂದಮೊಂದೆರಡು ತಿಂಗಳ್ ನಿಲೆ, ಕಚ್ಛಮಹಾಕಚ್ಛಮರೀಚ್ಯಾದಿಗಳಾದಿ ಮುನಿಪತಿ ಮೊಗಮಂ ನೋಡಿ ಕಯ್ಯನೆತ್ತಿಕೊಳ್ವುದಂ ಕಾಣದೆ, ಕ್ಷುತ್ಪಿಪಾಸಾಶೀತಾತಪಪ್ರಮುಖಪರೀಷಹಂಗಳಂ ಸೈರಿಸಲಾಱದೆ ಭಗ್ನೋತ್ಸಾಹರುಂ ದೂರೋತ್ಸಾರಿತಾಭಿಮಾನರುಮಾಗಿ,

ದಿವಸಮನೊಂದು ಮೇಣೆರಡುಮೂಱನೆ ನಿಲ್ವುದು ಮೂಱುತಿಂಗಳಾ
ಯ್ತವಚಱನಿಂತು ನಿಂದನೊಳನೇ ಶನಿ ನಿಲ್ವವೊಲಿಲ್ಲಿ ಪಾಟಿಗಿ
ನ್ನೆವರೆಗಮಿರ್ದೆವಿನ್ನೆಮಗೆ ನಿತ್ತರಿಸಲ್ ನೆಱವಿಲ್ಲ ತಾಳಲಾ
ದುವು ತನು ಕೂೞ ನೀರ ದೆಸೆಯಿಲ್ಲದೊಡಲ್ಗಳನೆಂತು ತಾಳ್ವವಂ ೪೯

ಮಿಂದುಂಡು ಕುಡಿದು ಮಗುೞ್ದುಂ
ಬಂದಿರ್ಪೊಡಮಿರ್ಪಮಿನಿತುಮಿಲ್ಲದೆ ಗುಱುಗು
ಮ್ಮೆಂದು ಪಸಿದಿರ್ದು ಬೆದಬೆದ
ಬೆಂದಿನಿಬರ್ ಕಟ್ಟಿಕೊಳ್ವ ಕಣೆಯೇಂ ಪೇೞಿಂ ೫೦

ಇದು ರಾಜವಿದ್ಯೆಯೊಳಗಾ
ವುದು ವಿದ್ಯೆಯೊ ಷಡ್ಗುಣಂಗಳೊಳಗಾವ ಗುಣಂ
ವುದಿದೊದವಿದ ಮೆಯ್ಗಾಪಿ
ಲ್ಲದರಣ್ಯದೊಳಿರ್ಪುದಾವ ನೀತಿಗಳೊಳಗೋ ೫೧

ಪರ್ಯಾಯಜ್ಞಾನವು ಮೂಡಿತು. ತತ್ಫಲವಾಗಿ ಕಾಣಿಸಿಕೊಂಡ ಚತುರ್ಜ್ಞಾನ[1]ದಲ್ಲಿ ಜ್ಞಾನರೂಪದಿಂದ ಆದಿಬ್ರಹ್ಮನು ಸದಾ ಶೋಭಿಸಿದನು. ವ|| ಅಂತು ಆ ಪರಮೇಶ್ವರನು (ಬುದ್ಧಿ, ಕ್ರಿಯಾ, ವಿಕ್ರಿಯಾ, ತಪ, ಬಲ, ಔಷಧ ಮತ್ತು ರಸಗಳೆಂಬ) ಸಪ್ತರ್ಧಿಗಳಿಂದ ಸಂಪನ್ನನಾದನು. ನಿಶ್ಚಲವಾದ ಯೋಗನಿಯೋಗದಿಂದ ಒಂದೆರಡು ತಿಂಗಳು ನಿಂತಿರಲಾಗಿ, ಕಚ್ಛ, ಮಹಾಕಚ್ಛ, ಮರೀಚ್ಯಾದಿಗಳು ಆದಿಮುನಿಪತಿಯ ಮುಖವನ್ನು ನೋಡಿದರು. ಅವನು ಕೈಯೆತ್ತದಿರುವುದನ್ನು ಗಮನಿಸಿದರು. ಹಸಿವು, ಬಾಯಾರಿಕೆ, ಶೀತ, ಬಿಸಿಲು ಮುಂತಾದ ಪರೀಷಹಗಳನ್ನು ತಾಳಲಾರದೆ ನಿರುತ್ಸಾಹರಾಗಿ ಅಭಿಮಾನಶೂನ್ಯರಾದರು. ೪೯. "ಒಂದು, ಎರಡು ಇಲ್ಲವೆ ಮೂರು ದಿನಗಳ ಕಾಲ ನಿಲ್ಲಬಹುದು! ಈ ಬೇಸರದವನು ನಿಂತು ಮೂರು ತಿಂಗಳಾದುವಲ್ಲ, ಶನಿ ನಿಂತಂತೆ ನಿಂತೇ ಇರುವನಲ್ಲ! ಇದುವರೆಗೆ ಏನೋ ಹಂಗಿನಿಂದ ನಿಂತೆವು. ಇನ್ನು ನಮಗೆ ಸಹಿಸಲು ಸಾಧ್ಯವಿಲ್ಲ. ದೇಹವು ತಾರಲಾಯಿತು. ಅನ್ನ ನೀರುಗಳಿಲ್ಲದೆ ದೇಹವನ್ನು ಧರಿಸುವುದೆಂತು? ೫೦. ಮಿಂದು, ಉಂಡು, ಕುಡಿದು ಮತ್ತೆ ಬಂದಿರುವುದಾದರೆ ಇರೋಣ! ಅವೊಂದೂ ಇಲ್ಲದೆ ಹೊಟ್ಟೆ ಹಸಿದುಕೊಂಡು ಬೆದಬೆದಬೆಂದು ಗುರುಗುಮ್ಮನೆ ಹೇಗಿರಲು ಸಾಧ್ಯ! ಇಷ್ಟಾಗಿ ಇಂಥವರು ಕಟ್ಟಿಕೊಳ್ಳುವ ತೊಡಕಿನಿಂದ ಫಲವಾದರೂ ಏನು! ಹೇಳಿರಿ! ೫೧. ರಾಜವಿದ್ಯೆಯಲ್ಲಿ ಇದು ಯಾವ ವಿದ್ಯೆಯೋ! ಷಡ್ಗುಣಗಳಲ್ಲಿ ಯಾವ ಗುಣವೋ! ಮೆಯ್ಗಾಪಿಲ್ಲದೆ

---

1. ಮತಿ, ಶ್ರುತ, ಅವಧಿ, ಮನಃ ಪರ್ಯಾಯಗಳು ನಾಲ್ಕು ಬಗೆಯ ಜ್ಞಾನಗಳು.

ಬರೆ ಬಂದು ನಡೆಯೆ ನಡೆದಿ
ರ್ದಿರೆ ಕುಳ್ಳಿರ್ದೆಟೞ್ದೊಡೆಟ್ದು ನಿಂದೊಡೆ ನಿಂದಾ
ಳರಸೆನಿಸಿ ನೆಗೞ್ದು ಬನದೊಳ
ಗರಸಂ ನಿಲೆ ನಿಂದೆವಿನಿತು ದಿವಸಂಬರೆಗಂ ೯೨

ವII ಇನ್ನೆಮಗೆ ನಿಲಲುಂ ನಿತ್ತರಿಸಲುಂ ಬಾರದು. ಬಿಸುಟು ಪೋಪೊಡಂ ಭರತನ ದೆಸೆಯೊಳಪಮಾನಸ್ಥಾನರಪ್ಪೆವದಱಿಂದಂ ನಮ್ಮರಸನಿಂದು ನಾಳೆ ಕಯ್ಯನೆತ್ತಿಕೊಂಡು ಪೋಗಿ ಮಗುೞ್ದು ರಾಜ್ಯದೊಳ್ ನಿಲ್ವನ್ನೆಗಮೀ ಬನದ ಕಂದಮೂಲಫಲಂಗಳಂ ತಿಂದುಮರವಿಂದಮಕರಂದಗರ್ಭಸಂದರ್ಭ ಸರೋವರಜಲಂಗಳಂ ಕುಡಿದುಂ ನಿತ್ತರಿಸುವಮೆಂದವರೊಳಗೆ ಬಗೆದು, ಕೆಲರ್ ಕಾಣ್ಗುಮೆಂದು ಕುಡಿಯಲುಂ ಪೆಱಗಣಿಂ ಪೆಱಗುಗೆಯ್ದು ಜಗುೞ್ದುಂ, ಕೆಲಬರ್ ಕಂಡೊಡೆ ಕರೆಗುಮೆಂದು ಕೆಲದ ಮರಂಗಳನೊತ್ತುಗೊಂಡುಂ, ಕೆಲಬರೆಮ್ಮನೆೞ್ಚಟ್ಟಿ ಪಿಡಿದುಕೊಳ್ಗುಮೆಂದು ಮಗುೞ್ದು ನೋಡುತ್ತುಂ ಬೀೞುತ್ತುಮೇೞುತ್ತುಮೋಡಿಯುಂ ಪೋಗಿ ಪಣ್ಫಲಂಗಳಂ ಪಱಿಯಲುಂ ಕೊಳದ ತಿಳಿನೀರಂ ಕುಡಿಯಲುಂ ಕಯ್ಯಂ ನೀಡುವುದುಂ, ಕಂಡು,

ಈ ರೂಪೆಂಬುದು ಭುವನಜ
ನಾರಾಧ್ಯಂ ಚಕ್ರಿಜನನಿಷೇವಿತಮಿದಱೊಳ್
ಸಾರದಟಿಪೆಂದು ಪೆಳ್ವನೆ
ಬಾರಿಸಿದುವು ಬಿಡದೆ ಜಡಿದು ವನದೇವತೆಗಳ್ ೯೩

ವII ಆಗಳವರ್ಗಳಾ ರೂಪಿನೊಳದಂ ನೆಗೞಲಂಜಿ ವಲ್ಕಲವಸನರುಂ ಕೌಪೀನಧಾರಿಗಳುಂ ಭಸ್ಮೋದ್ಧೂಳಿತಾಂಗರುಂ ಜಟಾಧರರುಂ ಏಕದಂಡಿ ತ್ರಿದಂಡಿಗಳಪ್ಪ ಪರಿವ್ರಾಜಕರುಮಾಗಿ ತಮಗೆ

ಕಾಡಿನಲ್ಲಿರುವುದು ಯಾವ ನೀತಿಗೊಳಪಟ್ಟುದು? ೯೨. ರಾಜನು ಬಂದುದರಿಂದ ನಾವು ಬಂದೆವು. ಅವನು ಕುಳಿತರೆ ಕುಳಿತೆವು. ಅವನು ಉಂಡರೆ ಉಂಡೆವು. ನಿಂದರೆ ನಿಂದೆವು. ಹೀಗೆ ಆಳರಸೆನಿಸಿಕೊಂಡು ಸೇವೆಗೈಯುತ್ತಾ ಇದ್ದ ನಾವು ವನದಲ್ಲಿ ಅರಸನು ನಿಲ್ಲಲು ಇಷ್ಟುದಿನಗಳವರೆಗೂ ನಿಂತೆವು. ವII ಇನ್ನು ನಮಗೆ ನಿಲ್ಲಲೂ ತಡೆಯಲೂ ಆಗದು! ಬಿಟ್ಟುಹೋದರೆ ಭರತನಿಂದ ಅವಮಾನಿತರಾಗುವೆವು. ಆದ್ದರಿಂದ ನಮ್ಮರಸನು ಇಂದೋ ನಾಳೆಯೋ ಕೈಯನ್ನೆತ್ತಿಕೊಂಡು ಹೋಗಿ ಪುನಃ ರಾಜ್ಯದಲ್ಲಿ ನಿಲ್ಲುವವರೆಗೆ ಈ ವನದ ಕಂದಮೂಲಫಲಗಳನ್ನು ತಿಂದು, ಕಮಲಗಳ ಬಂಡಿನಿಂದ ಕೂಡಿದ ಸರೋವರದ ನೀರನ್ನು ಕುಡಿದು ಕಡೆಹಾಯುವೆವು" ಎಂದುಕೊಂಡರು. ಕೆಲವರು ಕಣ್ಣಿಗೆ ಬೀಳುವೆವೆಂದು ಹೊರಗಿನಿಂದಲೇ ನುಸುಳಿಕೊಂಡರು. ಮತ್ತೆ ಕೆಲವರು ಕಂಡರೆ ಕರೆಯುವರೆಂದು ಪಕ್ಕದ ಮರಗಳ ಮರೆಯಲ್ಲಿ ಅಡಗಿ ನಿಂತರು. ಮತ್ತೆ ಹಲವರು ನಮ್ಮನ್ನು ಬೆನ್ನಟ್ಟಿ ಹಿಡಿದುಕೊಳ್ಳುವರು ಎಂದು ನೋಡುತ್ತಾ ಏಳುತ್ತಾ ಓಡಿಹೋಗಿ ಹಣ್ಣುಕಾಯಿಗಳನ್ನು ಕೀಳಲು, ಕೊಳದ ತಿಳಿನೀರನ್ನು ಕುಡಿಯಲು ಕೈನೀಡಿದರು. ಅದನ್ನು ಕಂಡು ೯೩. ಈ (ಮುನಿ) ರೂಪವೆಂಬುದು ಭುವನದ ಜನದಿಂದ ಆರಾಧ್ಯವಾದುದು. ಚಕ್ರಿಜನರಿಂದ ನಿಷೇವಿತವಾದುದು. ಈ ರೂಪದಲ್ಲಿ ಅಳಿವು ಸಂಭವಿಸದು" ಎಂದು ವನದೇವತೆಗಳು ಬಿಡದೆ ಜಡಿದು ಅವರಿಗೆ ಅಡ್ಡಿಯನ್ನುಂಟುಮಾಡಿದರು. ವII ಆಗ ಅವರು ಆ ರೂಪಿನಿಂದಿರಲು ಅಂಜಿದರು. ಕೆಲವರು ನಾರುಬಟ್ಟೆಯನ್ನುಟ್ಟರು. ಕೆಲವರು

ತಾವೇ ವನಪ್ರವೇಶಮಂ ಮಾಡಿ ಬಹುಪ್ರಕಾರವಿಟಪಿರಾಜಿಗಳೊಳಿರ್ದ ವಿವಿಧಮೂಲಫಲಾಶಿಗಳುಂ ಸರೋವರನದೀನಿರ್ಝರಾಂಬುಪಾಯಿಗಳುಮಾಗಿ ಪರಿತ್ಯಕ್ತಾನ್ಯದೇವತಾಬುದ್ಧಿಗಳನೇಕವನಕುಸುಮಂಗಳಿಂ ವೃಷಭೇಶ್ವರನ ಪದಪಯೋಜಂಗಳನರ್ಚಿಸುತ್ತುಮಿರೆ, ಭರತಸುತಂ ಮರೀಚಿ ಪರಿಗೃಹೀತ ಪರಿವ್ರಾಜಕನಪಸಿದ್ಧಾಂತಭಾಷಿತಂಗಳಿಂ ಮಿಥ್ಯಾತ್ವವೃದ್ಧಿಯಂ ಮಾಡಿ ನಿಜೋಪನ್ಯಸ್ತಮಪ್ಪ ಕಾಪಿಳ ಸಿದ್ಧಾಂತಮುಮಂ ಯೋಗಶಾಸ್ತ್ರಮುಮಂ ತೋಱಿ ಲೋಕಮಂ ಸಮ್ಯಕ್ಜ್ಞಾನಪರಾಙ್ಮುಖಂ ಮಾಡಿರೆ, ಇತ್ತಲಾದಿತೀರ್ಥಕರ್ತಾರನಮರಗಿರಿಯಂತಚಳಿತನುಂ, ಪಾರಾವಾರದಂತಕಲುಷಿತನುಂ, ಅನಿಲನಂತೆ ನಿಸ್ಸಂಗನುಂ, ಅಂಬರದಂತೆ ನಿರ್ಲೇಪನುಮಾಗಿ ನಿಲೆ,

ಅತಿಭಾಸುರಮಪ್ಪ ತನು
ದ್ಯುತಿದೀಪ್ತಿ ತಪೋಗ್ನಿಯೊಳ್ ಪೊದಳ್ದೆಸೆದುದು ಪಿ
ಶ್ರುತಕನಕಮೆನಿತು ಕಾಯ್ದೊಡ
ಮತರ್ಕ್ಯದೀಪ್ತಿಪ್ರಕಾಶನಕ್ಕೆಡೆಯಲ್ತೇ ೯೪

ಪವನಹತಂಗಳ್ ಮುನಿಪುಂ
ಗವನ ಜಟಾಜಾಳಲತಿಕೆಗಳ್ ನಿಮಿರ್ದುವನು
ಪ್ರವಿಶದ್ಧ್ಯಾನಾನಲದ
ಗ್ಧವಿಸ್ಫುರಜ್ಜೀವಕನಕಕಾಳಿಕೆಗಳವೋಲ್ ೯೫

ಕೌಪೀನಧಾರಿಗಳಾದರು. ದೇಹಕ್ಕೆ ಬೂದಿ ಬಳಿದುಕೊಂಡು ಜಟಾಧಾರಿಗಳಾದರು. ಒಂದು ಇಲ್ಲವೇ ಮೂರು ದಂಡಗಳನ್ನು ಧರಿಸಿದ ಸನ್ಯಾಸಿಗಳಾಗಿ ತಮ್ಮಷ್ಟಕ್ಕೆ ತಾವೇ ವನಚಾರಿಗಳಾದರು. ನಾನಾ ವೃಕ್ಷಗಳಿಂದ ಕಂಗೊಳಿಸುತ್ತಿರುವ ಕಾಡುಗಳಲ್ಲಿ ನೆಲಸಲಾರಂಭಿಸಿದರು. ಹಲವು ಬಗೆಯ ಹಣ್ಣುಹಂಪಲಗಳನ್ನೂ ಗೆಡ್ಡೆಗೆಣಸುಗಳನ್ನೂ ತಿಂದುಕೊಂಡು ಹೊಳೆ ಕೊಳ ಹಳ್ಳಗಳಲ್ಲಿ ನೀರನ್ನು ಕುಡಿಯುತ್ತ ದೇವತಾಂತರ ಬುದ್ಧಿಯನ್ನು ತೊರೆದು ವನಕುಸುಮಗಳಿಂದ ವೃಷಭೇಶ್ವರನ ಕಾಲ್ದಾವರೆಗಳನ್ನು ಪೂಜಿಸತೊಡಗಿದರು. ಇತ್ತ ಭರತನ ಮಗನಾದ ಮರೀಚಿಯು ಸನ್ಯಾಸಿವೇಷವನ್ನು ಧರಿಸಿ ಅಪಸಿದ್ಧಾಂತೋಕ್ತಿಗಳಿಂದ ಮಿಥ್ಯಾತ್ವವನ್ನು ಬೆಳೆಸತೊಡಗಿದನು. ಕಾಪಿಲಸಿದ್ಧಾಂತವನ್ನೂ ಯೋಗಶಾಸ್ತ್ರವನ್ನೂ ಉಪದೇಶಿಸಿ ಲೋಕವನ್ನು ಸಮ್ಯಗ್ಜ್ಞಾನವಿಮುಖರನ್ನಾಗಿ ಮಾಡಿದನು. ಆದರೆ ಆದಿ ತೀರ್ಥಂಕರನು ಮೇರುಗಿರಿಯಂತೆ ಅಚಲಿತನಾಗಿ ಸಮುದ್ರದಂತೆ ಅಕಲುಷಿತನಾಗಿ, ಗಾಳಿಯಂತೆ ನಿಸ್ಸಂಗನಾಗಿ ಆಕಾಶದಂತೆ ನಿರ್ಲೇಪನಾಗಿ ನಿಂತನು, ೯೪. ಅತಿಪ್ರಕಾಶ ಮಾನವಾದ ದೇಹದ್ಯುತಿಗಳು ತಪೋಗ್ನಿಯಲ್ಲಿ ಕೂಡಿಕೊಂಡು ಪ್ರಕಾಶಿಸಿದುವು. ನೆಗಳ್ದ ಚಿನ್ನವು ಎಷ್ಟೇ ಕಾಯ್ದರೂ ಅತರ್ಕ್ಯದೀಪ್ತಿಪ್ರಕಾಶಕ್ಕೆ ಎಡೆಗೊಳ್ಳುತ್ತದೆಯಷ್ಟೆ? ೯೫. ಗಾಳಿಯ ಹೊಡೆತಕ್ಕೆ ಸಿಕ್ಕಿದ ಮುನಿಶ್ರೇಷ್ಠನ ಜಟಾಸಮೂಹವೆಂಬ ಬಳ್ಳಿಗಳು ಧ್ಯಾನವೆಂಬ ಬೆಂಕಿಯಿಂದ ಸುಟ್ಟು ಪ್ರಕಾಶಮಾನನಾದ ಜೀವನೆಂಬ ಚಿನ್ನದ ಕಾಳಿಕೆಯಂತೆ (ದೋಷ) ಅತ್ತಿತ್ತ ಹಾರಾಡಿದುವು. (ಚಿನ್ನವನ್ನು ಕಾಯಿಸಿದಾಗ ಅದರಲ್ಲಿರುವ ದೋಷವು ಹೋಗುವಂತೆ)

ಪೊಸತಲರ್ದಲರ್ಗಳಿನೊಸೆದ
ರ್ಚಿಸುವಂತಿರೆ ಮುನಿಯ ಪಾದಪದ್ಮದ್ವಿನೇಂ ಕ
ಣ್ಗೆಸೆದುವೊ ವನಲತೆಗಳ್ ಕುಸು
ಮಸಂಕುಳಂ ಸುರಿಯೆ ಸೆಳೆವ ಸೆಳೆಗೊಂಬುಗಳಿಂ ೯೬

ವ॥ ಮತ್ತಮಾ ಮುನೀಂದ್ರನ ತಪಃಪ್ರಭಾವದೊಳ್ ಅನ್ಯೋನ್ಯವೈರಂಗಳಂ ಮಱೆದು,

ಕರಿಗಳ್ ಕೇಸರಿಗಳ್ಗೆ ಪುಷ್ಕರಧೃತಸ್ವಚ್ಛಾಂಬುವಂ ನೀಡೆ ಭೀ
ಕರಶಾರ್ದೂಲಕುಳಂ ಕುರಂಗಕುಲದೊಳ್ ತಳ್ವೊಯ್ದು ಬಂದಾಡೆ ಕೇ
ಸರಿಣೀಸ್ತನ್ಯಮನನ್ಯವನ್ಯಗಜಪೋತಾನೀಕಮುಂಡಾಡೆ ಶಾಂ
ತರಸಂ ಪೊಂಪುಳಿವೋದುದಾ ಮುನಿಪನಿಂ ತತ್ಕಾಂತಕಾಂತಾರದೊಳ್ ೯೭

ವ॥ ಆ ಪ್ರಸ್ತಾವದೊಳ್ ತತ್ತಪೋನಿಧಿಯ ಸನ್ನಿಧಿಗೆ ಕಚ್ಛಮಹಾಕಚ್ಛರ ತನಯರಪ್ಪ ನಮಿವಿನಮಿಗಳಭಿನವಯೌವನಾರಂಭಪ್ರೇರಿತೇಂದ್ರಿಯವಿಷಯಸುಖಾನುಭವೋತ್ಸುಕಮಾನಸರ್ ಕೃಪಾಣ ಖೇಟಕವ್ಯಗ್ರಪಾಣಿಗಳ್ ಬಂದು ಮಹೀತಳಾಲಿಂಗಿತಲಲಾಟಪಟ್ಟರತಿಸುರಭಿಕುಸುಮಫಲಪವಿತ್ರ ಜಲಂಗಳಿಂದಮಾದಿಪುರುಷನ ಪದಪಯೋಜಂಗಳನರ್ಚಿಸಿ ಯುಕ್ತಾಯುಕ್ತವಿಚಾರದೂರಮತಿಗಳಾಗಿ,

ಕಡಲ ತಡಿಯೆಯ್ದೆ ನೆಲನಂ
ಪಡೆದರ್ ಭವದೀಯಪುತ್ರರುಳ್ಳವಿಗಳೊಳ್
ಪಡೆದುದು ಬಂಧುಜನಂ ನಿ
ಮ್ಮಿಂದಿಗಾವೇಂ ಪೋಷ್ಯವರ್ಗದಿಂದಂ ಪೊಱಗೇ ೯೮

೯೬. ಮುನಿಯ ತಾವರೆಗಾಲುಗಳನ್ನು ಅರಳಿದ ಹೊಸ ಹೂಗಳಿಂದ ಅರ್ಚಿಸುತ್ತಿರುವುವೋ ಎನ್ನುವಂತೆ ವನಲತೆಗಳು ತಮ್ಮ ನೇರವಾದ ಕೊಂಬೆಗಳಿಂದ ಹೂವುಗಳ ಸಮೂಹವನ್ನು ಸುರಿಸಿದುವು. ವ॥ ಮೇಲಾಗಿ ಆ ಮುನೀಂದ್ರನ ತಪಃಪ್ರಭಾವದಿಂದ ಪರಸ್ಪರ ವೈರಗಳನ್ನು ಮರೆತು ೯೭. ಆ ಮುನಿಪನಿಂದ ಸುಂದರವಾದ ಕಾಡಿನಲ್ಲಿ ಶಾಂತರಸವು ವಿಸ್ತರಿಸಲಾಗಿ, ಆನೆಗಳು ಸಿಂಹಗಳಿಗೆ ತಮ್ಮ ಸೊಂಡಿಲಿನಿಂದೆತ್ತಿದ ಸ್ವಚ್ಛಾಂಬುವನ್ನಿತ್ತುವು. ಹುಲಿಗಳು ಜಿಂಕೆಗಳ ಗುಂಪಿನೊಡನೆ ಸೇರಿ ನಲಿದುವು. ಸಿಂಹಗಳ ಸ್ತನ್ಯವನ್ನು ಕಾಡಿನಲ್ಲಿದ್ದ ಆನೆಮರಿಗಳು ಕುಡಿದು ಆಡಿದುವು. ವ॥ ಆಗ ಆ ತಪೋನಿಧಿಯ ಬಳಿಗೆ ಕಚ್ಛ ಮಹಾಕಚ್ಛರ ಮಕ್ಕಳಾದ ನಮಿವಿನಮಿಗಳು ಯೌವನಮದದ ಉದ್ರೇಕದಿಂದ ವಿಷಯಸುಖಾನುಭವದಲ್ಲಿ ಆಸಕ್ತಚಿತ್ತರಾಗಿ ಕತ್ತಿಗುರಾಣಿಗಳನ್ನು ಕೈಗಳಲ್ಲಿ ಹಿಡಿದು ಬಂದು ಹಣೆಯನ್ನು ನೆಲದ ಮೇಲಿಟ್ಟು ನಮಸ್ಕರಿಸಿ ಪರಿಮಳಯುಕ್ತವಾದ ಹೂಗಳಿಂದಲೂ ಹಣ್ಣುಗಳಿಂದಲೂ ಪವಿತ್ರಜಲಗಳಿಂದಲೂ ಆದಿಪುರುಷನ ಕಾಲ್ದಾವರೆಗಳನ್ನರ್ಚಿಸಿ ಯುಕ್ತಾಯುಕ್ತವಿಚಾರರಹಿತರಾಗಿ ಹೀಗೆಂದರು : ೯೮. "ನಿಮ್ಮ ಮಕ್ಕಳು ಸಮುದ್ರತಟದವರೆಗಿನ ನೆಲವನ್ನು ಪಡೆದರು. ಬಂಧುಜನವು ತಮ್ಮ ವಿಶ್ವಾಸದಿಂದ ಐಶ್ವರ್ಯವನ್ನು ಪಡೆಯಿತು. ಪೋಷ್ಯವರ್ಗದಿಂದ ನಿಮಗೆ ನಾವು ಹೊರತಾದವರೆ?

ಎಮಗಮೆಮಗಪ್ಪ ಭಾಗದ
ಸಮಕಟ್ಟಂ ದೇವ ಕುಡಲೆವೇಳ್ಕುದು ನಂಟರ್
ನಿಮಗೆಮ್ಮಿಂದಗ್ಗಳಮಾರ್
ಸಮಸ್ತ ಸುರಮಕುಟಮಣಿಕಿಣೀಕೃತಚರಣಾ ೯೯

ವ॥ ಎಂದು ತಮ್ಮ ಭೋಗಕಾಂಕ್ಷೆಯನೆ ಬಗೆದು ಪರಮಯೋಗಿಗೆ ಯೋಗವ್ಯಾಘಾತಮಂ ಮಾಡುವುದುಂ ಪ್ರಕಂಪಿತಾಸನನುತ್ಪನ್ನಾವಧಿಬೋಧಂ,

ಧರಣೇಂದ್ರನಱಿದು ಭೋಂಕನೆ
ಧರಾತಳಂ ಬಿಱಿಯೆ ನೆಗೆದು ಬರ್ಪಂ ದೂರಾಂ
ತರದೊಳೆ ಕಂಡಂ ಕಾರ್ತ
ಸ್ವರಗಿರಿಯಂ ಪೋಲ್ತು ನಿಂದ ನಿಶ್ಚಳತನುವಂ ೧೦೦

ವ॥ ಕಂಡಾದಿದೇವನ ತಪೋಲಕ್ಷ್ಮಿಗೆ ವಿಸ್ಮಯಾಕ್ಷಿಪ್ತಚಿತ್ತನಾಗಿ ನಿಜಾಕೃತಿಸಂವೃತಿಯಿಂ ತ್ರಿಃಪ್ರದಕ್ಷಿಣಂಗೆಯ್ದು ತ್ರಿಭುವನಗುರುಗೆಱಗಿ ಪೊಡೆವಟ್ಟು ನಮಿ ವಿನಮಿಗಳ ಮೊಗಮಂ ನೋಡಿ,

ಒಳಕೊಂಡ ಶಾಂತರಸದಿಂ
ಬೆಳಪ ತಪೋಧನರ ಭೀಷಣಾಕಾರದಿನಿಂ
ತಳವಟ್ಟ ನಿಮ್ಮ ಕೂಟಂ
ಬೆಳಗಿನ ಕೞ್ತಲೆಯ ಕೂಟದಂತಾಗಿರ್ಕುಂ ೧೦೧

೯೯. ಅಖಿಲ ಸುರರ ಕಿರೀಟಮಣಿಗಳಿಂದ ತೀಡಲ್ಪಟ್ಟ ಕಾಲುಳ್ಳವನೇ! ನಮನಮಗೆ ಸಂಬಂಧಿಸಿದ ಭಾಗದ ಸಮಕಟ್ಟನ್ನು ನಮಗೂ ಕೊಡಲೇ ಬೇಕು. ನಮಗಿಂತ ನಿಮಗೆ ಶ್ರೇಷ್ಠರಾದ ನಂಟರು ಯಾರಿದ್ದಾರೆ?" ವ॥ ಎಂದು ತಮ್ಮ ಭೋಗೇಚ್ಛೆಯೊಂದನ್ನೆ ಮನದಲ್ಲಿಟ್ಟುಕೊಂಡು ನಮಿ ವಿನಮಿಗಳು ಆ ಪರಮಯೋಗೀಶ್ವರನ ಯೋಗಕ್ಕೆ ಅಡ್ಡಿಯನ್ನುಂಟುಮಾಡಿದರು. ಆಗ ಧರಣೇಂದ್ರನ (ನಾಗರಾಜನ) ಪೀಠವು ಅಲ್ಲಾಡಿತು. ಅವನಿಗೆ ಅವಧಿಜ್ಞಾನ ಹುಟ್ಟಿತು. ೧೦೦. ಧರಣೇಂದ್ರನು ಇದನ್ನರಿತು ಧರಾತಲವನ್ನು ಭೇದಿಸಿಕೊಂಡು ಬಂದನು. ಸ್ವರ್ಣಗಿರಿಗೆಣೆಯಾಗಿ ನಿಂತ ನಿಶ್ಚಲತನುವಾದ ವ॥ ಆದಿದೇವನನ್ನು ಕಂಡನು. ಅವನ ತಪೋಲಕ್ಷ್ಮಿಗೆ ಆಶ್ಚರ್ಯಚಕಿತನಾದನು. ಒಡನೆ ಧರಣೇಂದ್ರನು ತನ್ನ ಆಕೃತಿಯನ್ನು ಮರೆಮಾಚಿಕೊಂಡು ಮೂರುಸಲ ಪ್ರದಕ್ಷಿಣೆಮಾಡಿ ಲೋಕತ್ರಯಗುರುವೆನಿಸಿದ ಆದಿದೇವನಿಗೆ ನಮಸ್ಕರಿಸಿದನು. ನಮಿ ವಿನಮಿಗಳ ಮುಖವನ್ನು ನೋಡಿ ಹೀಗೆಂದನು: ೧೦೧. "ಶಾಂತರಸದಿಂದ ತುಂಬಿ ಬೆಳಗುವ ತಪೋಧನನೆದುರಿಗೆ ಭಯಂಕರಾಕೃತಿಯೊಡನೆ ಕೂಡಿದ ನಿಮ್ಮ ಮೇಳವು ಬೆಳಕು-ಕತ್ತಲೆಗಳ ಮೇಳದಂತಿದೆ!

ಕಾರಣಮಿಲ್ಲ ಜಗದ್ವ್ಯಾ
ಪಾರಂ ಪರಮಂಗೆ ನಿಮ್ಮ ಕಿತ್ತಮ್ಮಮಿದೇಂ[1]
ದೂರಂ ಯುಕ್ತಾಯುಕ್ತವಿ
ಚಾರಂ ವಿಷಯಾರ್ಥಿಗೆಂಬುದಂ ಮಾಡುವಿರೇ ೧೦೨

ಪರಿವರ್ಜಿತಭೋಗನೊಳಿ
ರ್ಬರುಮಿಾಗಳ್ ಭೋಗಕಾಂಕ್ಷೆಯಿಂ ಭೋಗಪರಂ
ಪರೆಯನಱಿಸುವುದೆ ವಿಕಸಿತ
ಸರಸಿಜಮಂ ಸಱಿಯೊಳಱಿಸುವಂತಾಗಿರ್ಕುಂ ೧೦೩

ನಿರಪೇಕ್ಷನನೇಕಿರೆವಿರ್
ಪುರುದೇವನನಿನಿತು ಬಯಕೆಯುಳ್ಳೊಡೆ ನಿಮ್ಮಿ
ರ್ಬರುಮಿಂ ಮರುಳಾಗದೆಯಾ
ಭರತನನೋಲಗಿಸಿ ಪಡೆಯಿಮಭಿವಾಂಛಿತಮಂ ೧೦೪

ವ|| ಎಂಬುದುಂ ಧರಣೇಂದ್ರನಿದಿರೊಳವರಂತರ್ನಿಗೂಢಕೋಪಾವಲೇಪರುಮಿಾಷದಾರೋಪಿತಭ್ರೂಚಾಪರುಮಾಗಿ,

ಒಳಗಱಿಯದೆ ಪೊಱಗಱಿಯದೆ
ಪಳಾಳಮಂ ನುಡಿವ ನಿಮ್ಮ ನುಡಿಗೆಮಗೀಗಳ್
ಮುಳಿಯಲೆಡೆಯಿಲ್ಲ ಮುದುಗ
ಣ್ಣಾಗಿ ನಿಮ್ಮಂತು ಪಱಿಯೆ ನುಡಿವರುಮೊಳರೇ ೧೦೫

೧೦೨. "ಪರಮನಿಗೆ ಜಗದ್ವ್ಯಾಪಾರದ ಆವಶ್ಯಕತೆಯಿಲ್ಲ. ನಿಮ್ಮ ಪೀಡೆ (?) ಏನಿದು? 'ಯುಕ್ತಾಯುಕ್ತ ವಿಚಾರವು ವಿಷಯಾರ್ಥಿಗೆ ಇಲ್ಲ', ಎಂಬುದನ್ನು ನಿಜಮಾಡುವಿರೇನು? ೧೦೩. "ನೀವಿಬ್ಬರೂ ಭೋಗಾಪೇಕ್ಷೆಯಿಂದ, ಭೋಗನಿರಪೇಕ್ಷನಲ್ಲಿ ಭೋಗವನ್ನರಸುವುದು ಅರಳಿದ ಕಮಲವನ್ನು ಕಲ್ಲುಬಂಡೆಯಲ್ಲರಸುವಂತಾಯಿತು! ೧೦೪. ನಿರಪೇಕ್ಷನಾದ ಪುರುದೇವನನ್ನು ನೀವೇಕೆ ಬೇಡುವಿರಿ? ಅಷ್ಟಾಶೆಯಿದ್ದರೆ ನೀವಿಬ್ಬರೂ ಮರುಳಾಗದೆ ಭರತನನ್ನೋಲಗಿಸಿ ನಿಮ್ಮ ಇಷ್ಟಾರ್ಥಗಳನ್ನು ಪಡೆಯಿರಿ ವ|| ಎಂದು ಹೇಳಲು ಆ ಧರಣೇಂದ್ರನ ಎದುರಿನಲ್ಲಿ ಕ್ರೋಧ ಗರ್ವಗಳನ್ನು ಒಳಗೇ ತುಂಬಿಕೊಂಡು ಹುಬ್ಬುಗಂಟಿಕ್ಕಿ ನಮಿ ವಿನಮಿಗಳು ಹೀಗೆಂದರು: ೧೦೫. "ಒಳಗೂ ಹೊರಗೂ ಅರಿಯದೆ ಜಳ್ಳುಮಾತನ್ನು ನುಡಿಯುವ ನಿಮ್ಮ ಮಾತಿಗೆ ನಾವು ಕೋಪಗೊಳ್ಳಬೇಕಿಲ್ಲ. ವೃದ್ಧರಾಗಿ ನಿಮ್ಮಂತೆ ಮಾತಾಡುವವರು ಇದ್ದಾರೆಯೇ?

---

೧ ಕಿತ್ತನಿವಮಿದೇಂ (ಪಾಠಾಂತರ). 'ಕಿತ್ತನಿಕೆಯೆಂಬುದೇ' ಎಂದು ಶುದ್ಧಪಾಠವಿರಬಹುದೆ? ಕಿತ್ತ = ಕೀಳ್ಪಟ್ಟದ. ಅನಿಕೆ = ಆಲೋಚನೆ

ವಿನಯದಿನಾಮಿೞ ಭುವನೈ
ಕನಾಥನಂ ಸಲ್ಗೆವೆರಸು ಬೇಡುತ್ತಿರೆ ಬಂ
ದನುವಿಸುವ ನಿಮ್ಮ ಮುದುಗ
ಣ್ಡನದೊಳಿದೇನುಂತೆ ಬಟ್ಟೆವೋಪೊಡೆ ಪೋಗಿಂ ೧೦೬

ಕುಡುವಂ ಗುರು ಪಡೆವರ್ ಪೆಱ
ರೆಡೆಯೊಳ್ ನೀಮಾರ್ಗಿದೇಕೆ ಕಿಡೆನುಡಿದಪಿರಿ
ಟ್ಟೆಡೆವೆರ್ಗಡೆತನದೊಳಿದೇ
ವಡೆವಿರ್ ನಿಮಗೆಮ್ಮ ಕಜ್ಜದೊಳ್ ಪೊರೆಯುಂಟೇ ೧೦೭

ಸುರಭೂರುಹಮಿರೆ ಮತ್ತಿನ
ಮರಮಂ ಜಳರಾಶಿಯಿರೆ ಕುಳುಂಪೆಯ ನೀರಂ
ಎರೆವೆಮೆ ಪುರಪರಮೇಶ್ವರ
ನಿರೆ ಭರತನನೆಮ್ಮ ಮಹಿಮೆಗಂತದು ದೊರೆಯೇ ೧೦೮

ಚಾದಗೆ ನವೋದಬಿಂದುವ
ನಾದರಿಪವೊಲುಟೆದ ಕೆಱೆಯ ತೋಱೆಯುದಕಮನೇ
ನಾದರಿಕುಮೆ ದೇವನ ದಾ
ನೋದಯಮಂ ಪಾರ್ವೆವುಟೆದುದರ್ಕೆಱಗುವೆವೇ ೧೦೯

ವ॥ ಎಂಬುದಂ ಧರಣೇಂದ್ರನವರ ಮಹಾನುಭಾವಮುಮನಾದಿದೇವನೊಳಾದ ನಿರ್ಭರಭಕ್ತಿಯುಮಂ ಮೆಚ್ಚಿ ನಿಜರೂಪಂ ತೋಱಿದಾಗಳ್,

೧೦೬. ವಿನಯಾನ್ವಿತರಾಗಿ ನಾವು ಲೋಕೈಕನಾಥನಾದ ಆದಿದೇವನನ್ನು ಸಲಿಗೆಯಿಂದ ಬೇಡಿಕೊಳ್ಳುತ್ತಿರುವೆವು. ನೀವು ಮುದಿಗಣ್ತನದಿಂದ ವ್ಯರ್ಥವಾಗಿ ಏನು ಹೇಳುತ್ತಿರುವಿರಿ? ಬಂದ ದಾರಿ ಹಿಡಿದುಕೊಂಡು ತೆರಳಿ! ೧೦೭. "ಕೊಡುವವನು ಗುರು, ಪಡೆಯುವವರು ಇತರರು. ಈ ವಿಷಯದಲ್ಲಿ ನೀವು ಯಾರು? ನೀವೇಕೆ ಈ ವಿಷಯದಲ್ಲಿ ಕೆಟ್ಟ ಮಾತುಗಳನ್ನಾಡುವಿರಿ? ನಿಮ್ಮ ಹೆಗ್ಗಡೆತನದಿಂದ ನಿಮಗೇನು ಲಾಭ? ನಮ್ಮೀ ಕಾರ್ಯದಲ್ಲಿ ನಿಮಗೇನುಂಟು ಹೊಣೆ? ೧೦೮. "ಕಲ್ಪವೃಕ್ಷವಿರುವಾಗ ಮತ್ತಿತರ ಮರವನ್ನು, ಜಲರಾಶಿಯಿರುವಾಗ ಸಣ್ಣಹೊಂಡವನ್ನು ಬೇಡುವಂತೆ ನಾವು ಬೇಡುತ್ತೇವೆಯೇ? ಪುರುಪರಮೇಶ್ವರನಿರಲು ಭರತನು ಬೇಡಲು ನಮಗೆ ತಕ್ಕವನೆ? ೧೦೯. ಚಾತಕಪಕ್ಷಿಯು ಹೊಸಮಳೆಯ ನೀರಿನ ಹನಿಯನ್ನು ಆದರಿಸುವಂತೆ ಕೆರೆತೊರೆಗಳ ನೀರನ್ನು ಆದರಿಸದು. ಪುರುಪರಮೇಶ್ವರನ ದಾನೋದಯುವನ್ನು ನಾವು ನಿರೀಕ್ಷಿಸುವೆವೇ ಹೊರತು ಮತ್ತುಳಿದವರದ್ದನ್ನಲ್ಲ". ವ॥ ಎಂದು ಹೇಳಲು ಧರಣೇಂದ್ರನು ಆಗ ಅವರ ಮಹಾನುಭಾವತ್ವಕ್ಕೂ ಆದಿದೇವನಲ್ಲಿರುವ ನಿರ್ಭರಭಕ್ತಿಗೂ ಮೆಚ್ಚಿ ತನ್ನ ನಿಜರೂಪವನ್ನು

ಮಣಿಮಕುಟದ ಮೇಗೆ ಫಣಾ
ಮಣಿಯುಂ ಮಣಿಕುಂಡಲಾಂಗದಪ್ರಮುಖವಿಭೂ
ಷಣಮುಂ ನಿಜಾಂಗರುಚಿಯೊಳ್
ಪೆಣೆದಿರೆ ಫಣಿನಾಯಕಂ ಕರಂ ಸೊಗಯಿಸಿದಂ ೧೧೦

ವ|| ಅಂತು ದಿವ್ಯರೂಪಮಂ ತೋಱಿ,

ಧರಣೇಂದ್ರನೆನಭವನ ಕಿಂ
ಕರನೆಂ ನಿಮಗಪ್ಪ ಭಾಗಮಂ ಕುಡಲೆನ್ನಂ
ಗುರು ಮುನ್ನಂ ಬೆಸಸಿದನಿ
ನ್ನಿರದೆನ್ನೊಡವನ್ನಿಮೆನ್ನ ಪೇೞ್ದುದು ಗೆಯ್ಯಿಂ ೧೧೧

ಎಂಬುದುಮಧಿಪಂ ಸಂಮುಖ
ದಿಂ ಬೆಸಸಿದೊಡಲ್ಲದೊಲ್ಲೆವೆನೆ ವಿಕ್ರಿಯೆಯಿಂ
ದಂ ಬೆಸಸುವಂತೆ ಮಾಡಿ ಮ
ನಂಬಿಡೆ ಪೊಡೆವಡಿಸಿ ನಮಿಯುಮಂ ವಿನಮಿಯುಮಂ ೧೧೨

ವ|| ತಾನುಮಾದಿಭಟ್ಟಾರಕರ ಪದಪಯೋಜಂಗಳ್ಗೆಱಗಿ ನಿಜವಿಮಾನಮನಾ ಮಾನವರ ನೇಱಿಸಿಕೊಂಡು ಪೋಗಿ ರಜತಾಚಲಮನೆಯ್ದಿ,

ಇದು ವಿಜಯಾರ್ಧಪರ್ವತಮಿದಾದಿಜಿನೇಂದ್ರನ ಕೀರ್ತಿಯಂತೆ ಶಾ
ರದಜಳದಾಮೃತಾಂಬುಧಿಪಯಃಪ್ಲವಪಾಂಡುರಮುನ್ಮದಾಳಿನಾ
ದದಿನಿದು ಪಾಡಿ ಪೂತ ಸೆಳೆಗೊಂಬುಗಳಾಟದಿನಾಡಿ ನಿಮ್ಮನಿಂ
ದಿದಿರ್ಗೊಳಲಿರ್ಪವೊಲ್ ಸೊಗಯಿಸಿರ್ದುದು ರಮ್ಯಮಿದೊಂದೆ ಧಾತ್ರಿಯೊಳ್ ೧೧೩

ತೋರಿಸಿಕೊಂಡನು. ೧೧೦. ಮಣಿಕಿರೀಟದ ಮೇಲಿನ ಹೆಡೆಯ ರತ್ನವೂ ಮಣಿಕುಂಡಲ, ಬಾಹುಮುರಿಯೇ ಮೊದಲಾದ ಆಭರಣಗಳೂ ಸ್ವಾಂಗರುಚಿಗಳೊಡನೆ ಕಲೆತು ಆ ಫಣಿನಾಯಕನು ಸೊಗಯಿಸಿದನು. ವ|| ತನ್ನ ದಿವ್ಯರೂಪವನ್ನು ತೋರಿಸಿ, ೧೧೧. "ನಾನು ಧರಣೇಂದ್ರ, ನಾನು ಅಭವನ ಕಿಂಕರ. ನಿಮಗೆ ಕೊಡಬೇಕಾದ ಭಾಗವನ್ನು ಕೊಡಲು ಗುರುವು ಈ ಮೊದಲೇ ಹೇಳಿದ್ದಾನೆ. ಇನ್ನಿರದೆ ನನ್ನೊಡನೆ ಬನ್ನಿ, ನಾನು ಹೇಳಿದುದನ್ನು ಮಾಡಿ" ಎಂದನು. ೧೧೨. ಧರಣೇಂದ್ರನು ಮುಖತಃ ಹೀಗೆ ಹೇಳಿದರೂ ನಮಿ ವಿನಮಿಗಳು ಒಲ್ಲೆವೆಂದರು. ಆಗ ವಿಕ್ರಿಯಾಶಕ್ತಿಯಿಂದ ಪರಮನೇ ಹೇಳಿದಂತೆ ತಾನು ಹೇಳಿ ನಮಿವಿನಮಿಗಳನ್ನು ನಂಬಿಸಿ ನಮಸ್ಕರಿಸುವಂತೆಸಗಿದನು. ವ|| ಅವನು (ಧರಣೇಂದ್ರನು) ಆದಿದೇವನ ಪದಕಮಲಗಳಿಗೆ ಅಡ್ಡಬಿದ್ದು ತನ್ನ ವಿಮಾನದಲ್ಲಿ ಆ ನಮಿ ವಿನಮಿಗಳನ್ನೇರಿಸಿಕೊಂಡು ರಜತಾಚಲಕ್ಕೆ ತೆರಳಿ ಹೀಗೆಂದನು. ೧೧೩. "ಇದು ವಿಜಯಾರ್ಧಪರ್ವತ, ಇದು ಆದಿಜಿನೇಂದ್ರನ ಕೀರ್ತಿಯ ಹಾಗೆ, ಶರತ್ಕಾಲದ ಮೋಡದಂತೆ ಅಮೃತಸಮುದ್ರದ ಪಯಃಪ್ರವಾಹದಂತೆ ಬಿಳುಪಾಗಿದೆ. ಸೊಕ್ಕೇರಿದ ದುಂಬಿಗಳ ನಾದದ ಮೂಲಕ ಹಾಡಿ, ಹೂಬಿಟ್ಟ ಉದ್ದವಾದ ಕೊಂಬೆಗಳಾಟದಿಂದ

ಎನಗುಳ್ಳಾಯತಿ ಮೇರುಗುಂಟೆ ಪೆಱತೇನುತ್ಸೇಧಮೊಂದುಂಟೆ ಗೋ
ತ್ರನಗಂಗಳ್ ಶಿಖರಂಗಳೊಳ್ ನಿಱಿಸಿ ಸಿಂಧುವ್ರಾತಮಂ ಪೆಂಪಿನು
ರ್ಬಿನೊಳಂ ಬೀಗುವುದಾನವಂ ಚರಣದೊಳ್ ತಾಳ್ದಿರ್ದೆನೆಂದಂದು ನೋ
ಡಿ ನಗುತ್ತಿರ್ಪವೊಲಾಯ್ತು ನಿರ್ಝರರವಶ್ರೀಯಿಂದಮಿ ಪರ್ವತಂ ೧೧೪

ದೊರೆಗಂ ಪೆಂಪಿಂಗಮಾಟಪ್ಪವರ ಮಹಿಮೆಯಂ ತಾಳ್ದಿದಿರ್ ನೀಮೆ ಗಂಭೀ
ರರಿರಂತಸ್ಸಾರರಿಂ ನೀಮಿರೆ ಪೆಱರೊಳರೇ ಸಕ್ಕಿಮಾಡಲ್ಕೆ ವಿಶ್ವಂ
ಭರೆಯೊಳ್ ಸಂದೀ ಮದೀಯಾಯತಿಯ ದೊರೆಗೆ ನೀಂ ಸಕ್ಕಿಯೆಂಬಂ
ತಿರೆ ನೀಳ್ದಿಂ ಪರ್ವಿ ಪೂರ್ವಾಪರಜಳಧಿಗಳಂ ಮುಟ್ಟಿ ನಿಂದತ್ತಗೇಂದ್ರಂ ೧೧೫

ಇದಱೊಳ್ ಖೇಚರಕಿನ್ನರಾಮರಯುಗಂ ನಾನಾವಿನೋದಂಗಳಿಂ
ಮದನಾವೇಶಕರಂಗಳಂ ಸಲಿಸುತುಂ ಪ್ರೋತ್ಫುಲ್ಲಚಂಚಲ್ಲತಾ
ಸ್ಪದದೊಳ್ ಚೂತಲತಾಲತಾಂತಮಕರಂದಾಮೋದಸಂಸಕ್ತ ಷ
ಟ್ಪದದೊಳ್ ತಳ್ತಿರೆ ಕಾಮರಾಗಮಯಮಾಯ್ತೇನೀ ನಗಂ ರಮ್ಯಮೋ ೧೧೬

ಮಿಡಿವಂ ಬೀಣೆಯನಿವನಿವ
ಳೊಡನೆಸೆವಳ್ ಬೆರಲ ಕೊರಲ ಕೂಟಂ ಬೆರಲಂ
ಮಿಡಿಯಿಸಿದುದೆನಿಸಿ ರಾಗವ
ತೊಡರೊಳ್ ತೊಡರ್ದಿರ್ಪುವಲ್ಲಿ ಕಿನ್ನರಯುಗಳಂ ೧೧೭

ನರ್ತಿಸಿ, ನಿಮ್ಮನ್ನು ಇದಿರ್ಗೊಳ್ಳುವಂತೆ ಸೊಗಯಿಸುತ್ತಿದೆ. ಇದೊಂದೇ ಭೂಮಿಯಲ್ಲಿ ರಮ್ಯವಾಗಿದೆ. ೧೧೪. ನನಗಿರುವ ವಿಸ್ತಾರವು ಮೇರುಪರ್ವತಕ್ಕಿದೆಯೇ? ಅದಕ್ಕೆ ಔನ್ನತ್ಯಮಾತ್ರವುಂಟು. ಕುಲಪರ್ವತಗಳು ತಮ್ಮ ಶಿಖರಗಳಲ್ಲಿ ನದೀಸಮೂಹವನ್ನಿಟ್ಟುಕೊಂಡು ಅತಿಗರ್ವದಿಂದ ಬೀಗುತ್ತಿವೆ. ನಾನು ಆ ನದಿಗಳನ್ನು ಕಾಲುಗಳಲ್ಲೇ-ತಪ್ಪಲಿನಲ್ಲೇ ಧರಿಸಿರುವೆನೆಂದು ನಿರ್ಝರಗಳ ಧ್ವನಿಶ್ರೀಯಿಂದ ಈ ಪರ್ವತವು ಉಳಿದ ಪರ್ವತಗಳನ್ನು ಹಾಸ್ಯಮಾಡಿ ನಗುವಂತೆ ಇದೆ. ೧೧೫. ಎಲೈ ಪೂರ್ವ ಪಶ್ಚಿಮ ಸಮುದ್ರಗಳೆ, ಪ್ರಸಿದ್ಧಿಗೂ ದೊಡ್ಡತನಕ್ಕೂ ಆಶಿಸುವವರ ಮಹಿಮೆಯನ್ನು ಪಡೆದಿದ್ದೀರಿ. ಗಂಭೀರರೂ ಅಂತಸ್ಸಾರರೂ ಆದವರು ನೀವೇ. ನೀವಿರುವಾಗ ಈ ವಿಷಯದಲ್ಲಿ ಸಾಕ್ಷಿಯನ್ನಾಗಿ ಮಾಡಿಕೊಳ್ಳಲು ಜಗತ್ತಿನಲ್ಲಿ ಬೇರೆ ಯಾರಿದ್ದಾರೆ? ನನ್ನ ವಿಶಾಲತೆ ಮತ್ತು ಉನ್ನತಿಗಳಿಗೆ ನೀವೇ ಸಾಕ್ಷಿಗಳು!" ಎಂದು ಈ ಪರ್ವತವು ಪೂರ್ವಾಪರಸಮುದ್ರಗಳನ್ನು ಮುಟ್ಟಿ ನಿಂತು ಅವನ್ನು ಸಾಕ್ಷಿ ಮಾಡುತ್ತಿದೆಯೋ ಎಂಬಂತೆ ನಿಂತಿದೆ! ೧೧೬. "ಈ ವಿಜಯಾರ್ಧಪರ್ವತದಲ್ಲಿ ಖೇಚರ ಕಿನ್ನರಾಮರರ ಜೋಡಿಗಳು ನಾನಾ ವಿನೋದಗಳನ್ನೂ, ಕಾಮಾವೇಶಗಳನ್ನೂ ಅನುಭವಿಸುತ್ತಾ ಅರಳಿ ಅಲುಗುತ್ತಿರುವ ಲತಾಶ್ರಯಗಳಲ್ಲಿಯೂ ಮಾವಿನ ಹೂಗಳ ಮಕರಂದಾಮೋದದಲ್ಲಿ ಸಂಸಕ್ತವಾದ ದುಂಬಿಗಳಿರುವ ಲತಾಮಂಟಪಗಳಲ್ಲಿಯೂ ಕೂಡಿಕೊಂಡಿರಲು ಈ ಬೆಟ್ಟವು ಕಾಮರಾಗಮಯವಾಗಿ ಕಾಣುತ್ತಿದೆ. ೧೧೭. ಕಿನ್ನರನು ವೀಣೆಯನ್ನು ನುಡಿಸುವನು. ಅವನ ಇನಿಯಳು ಒಡನೆ ತನ್ನ ಬೆರಳು ಮತ್ತು ಕೊರಳುಗಳ

ಶ್ರುತಿಸೌಖ್ಯಾವಹವಲ್ಲಕೀಕ್ವಣಿತದೊಳ್ ಕರ್ಪೂರಪಾಳೀವಿಮಿ
ಶ್ರಿತತಾಂಬೂಲರಸೋತ್ಕಟಪ್ರಮದದೊಳ್ ನಾನಾರಸಾಸ್ವಾದದೊಳ್
ರತರಾಗೋತ್ಸವಮಂಗಜೋತ್ಸವಮನಾಳ್ದಿರ್ಪನ್ನೆಗಂ ಸಿದ್ಧದಂ
ಪತಿಗಳ್ ಕ್ರೀಡಿಸುತಿರ್ಪರೀ ನಗತಟಶ್ರೀಖಂಡಷಂಡಂಗಳೊಳ್ ೧೧೮

ಧ್ವನಿಯೆನಿಸಿದಳಂಕಾರ
ಧ್ವನಿಯೆಸೆವಿನಮೆಸೆವುದಲ್ಲಿ ಮಧುರವಿಪಂಚೀ
ಧ್ವನಿಯೊಡನನೇಕರಾಗ
ಧ್ವನಿಯೆನೆ ಸೊಗಯಿಪುದು ಕಿನ್ನರಧ್ವನಿ ನಗದೊಳ್ ೧೧೯

ಉತ್ತಮವನಮದಕರಿಕಟ
ಭಿತ್ತಿಗಳಿಂ ಸುರಿವ ಮದದ ಬಂಧುರಗಂಧಂ
ಕತ್ತುರಿ ಮೃಗಮದದೊಳ್ ಪುದಿ
ದೆತ್ತಂ ಮಗಮಗಿಸೆ ಕಂಪು ಪೊಂಪುಟೆ ಪುಗಿಲೊಳ್ ೧೨೦

ಪೂರ್ವಾಪರಜಳನಿಧಿಗಳ
ಪರ್ವುವರಂ ನೀಳ್ದು ಶಿಖರನಿಕರಂ ನಭವಂ
ಪರ್ವಿರೆ ಸೊಗಯಿಸಿದುದು ಸಕ
ಳೋರ್ವಿಯೊಳುರ್ವೀಧರಂಗಳಿನ್ನವುಮೊಳವೇ ೧೨೧

ಸಹಯೋಗವನ್ನು ಕೊಡುವಳು. ಕಿನ್ನರ ದಂಪತಿಗಳು ಬೆರಳಿನಿಂದ ಮಿಡಿಯಿಸುತ್ತಾ ರಾಗದ ತೊಡರಿನಲ್ಲಿ ತೊಡರಿರುವರು. ೧೧೮. ಸಿದ್ಧದಂಪತಿಗಳು ಈ ಪರ್ವತದ ತಪ್ಪಲಿನಲ್ಲಿರುವ ಶ್ರೀಗಂಧಮರಗಳ ಗುಂಪಿನ ಮಧ್ಯದಲ್ಲಿ ಕ್ರೀಡಿಸುತ್ತಾರೆ. ಕಿವಿಗಳಿಗಿಂಪನ್ನೆರೆಯುವ ವೀಣಾಧ್ವನಿಗಳಿಂದಲೂ ಕರ್ಪೂರದ ಹರಳುಗಳಿಂದ ಮಿಶ್ರಿತವಾದ ತಾಂಬೂಲರಸದ ಸೇವನೆಯಿಂದೊಗೆದ ಉತ್ಕಟ ಸಂತೋಷದಿಂದಲೂ, ನಾನಾರಸಾಸ್ವಾದಗಳಿಂದಲೂ ರತರಾಗೋತ್ಸವವನ್ನೂ ಮನ್ಮಥೋತ್ಸವವನ್ನೂ ದೊರಕಿಸಿಕೊಳ್ಳುತ್ತಿದ್ದಾರೆ. ೧೧೯. (ಕಾವ್ಯಮಾರ್ಗದಲ್ಲಿ) ಧ್ವನಿಯೆನಿಸಿದ ಅಲಂಕಾರಧ್ವನಿಯಂತೆ ಅಲ್ಲಿ ಮಧುರ ವೀಣಾಧ್ವನಿಯೊಡನೆ ವಿವಿಧ ರಾಗಧ್ವನಿ ಎಸೆಯುತ್ತಿದೆ. ಈ ಪ್ರಕಾರವಾಗಿ ವಿಜಯಾರ್ಧಪರ್ವತದಲ್ಲಿ ಕಿನ್ನರರ ಸಂಗೀತಧ್ವನಿ ಸೊಗಸಾಗಿದೆ.[1] ೧೨೦. ವನದ ಮದ್ದಾನೆಗಳ ಕೆನ್ನೆಗಳಿಂದ ಸುರಿಯುತ್ತಿರುವ ಬಂಧುರವಾದ ಮದೋದಕದ ಗಂಧವೂ ಕಸ್ತೂರೀಮೃಗಮದದೊಡನೆ ಕಲೆತು ಮಗಮಗಿಸುತ್ತದೆ. ಆ ಕಂಪು ಬೆಟ್ಟದಲ್ಲಿ ಹರಡಿ ಆನಂದಗೊಳಿಸುತ್ತಿದೆ. ೧೨೧. ಪೂರ್ವ ಪಶ್ಚಿಮಸಮುದ್ರಗಳ ಹರವಿನವರೆಗೆ ಈ ಬೆಟ್ಟವು ಚಾಚಿ ನಿಂತಿದೆ. ಶಿಖರನಿಕರವು ಆಕಾಶವನ್ನು ಮುಟ್ಟಿ ಸೊಗಯಿಸುತ್ತಿದೆ. ಈ ಸಮಸ್ತ

1 ಅಲಂಕಾರಧ್ವನಿಯಲ್ಲಿ ವಿವಿಧ ವ್ಯಂಗ್ಯಭೇದಗಳು ತೋರಬಹುದು. ಹಾಗೆ ಕಿನ್ನರರು ವೀಣೆಯನ್ನು ನುಡಿಸುತ್ತ ಹಾಡುವಾಗ ವಿವಿಧ ರಾಗಚ್ಛಾಯೆಗಳು ವ್ಯಕ್ತವಾಗುತ್ತಿವೆಯೆಂದು ತಾತ್ಪರ್ಯ.

ವ|| ಇದು ಭರತಮೆಂಬ ವಿಜಯಾರ್ಧದೊಳ್ ನಿಂದುದಱಿಂ ವಿಜಯಾರ್ಧಮೆಂಬ ಪೆಸರಂ ಪಡೆದುದಿದರ್ಕೆ ಪ್ರಥಮಮೇಖಳಾಸ್ಥಿತೋಭಯಶ್ರೇಣಿಯೊಳ್ ಕರ್ಮಭೂಮಿಯ ನಿಯೋಗಮೆ ನಿಯೋಗಂ; ಅಲ್ಲಿಯ ಖಚರರುತ್ಕೃಷ್ಟನಿಕೃಷ್ಟಕಾಲಸ್ಥಿತಿಯೊಳ್ ಅಯ್ನೂಱುಬಿಲ್ಲಿಂದಮೇೞುಮೊೞ ದೇಹಪ್ರಮಾಣದೊಳ್ ಕುಂದುವರುಂ ಪೆರ್ಚುವರುಮಂ ಅಲ್ಲದವರ್ಗೆ ಪ್ರಜ್ಞಪ್ತಿವಿದ್ಯೆ ಮೊದಲಾಗಿ ಕುಲಜಾತಿಸಾಧಿತವಿದ್ಯೆಗಳ್ ಪಲವುಂ ಬೆಸಕೆಯ್ವುವು, ಅಲ್ಲಿ ಸಾಧಿತವಿದ್ಯೆಗಳ್ ಸಾಧಿಸುವಾಗಳ್ ಸಿದ್ಧಾಯತನ ಪ್ರಭೃತಿನವಕೂಟಂಗಳುಮಂ ದ್ವೀಪಾದಿಸಮುದ್ರತೀರಶುಚಿಪ್ರದೇಶಂಗಳಲ್ಲಿರ್ದು ಸಾಧಿಸುವುದೆಂದವರನಲ್ಲಿಗೆ ವಾಸ್ತವ್ಯರ್ಮಾಡಿ ದಕ್ಷಿಣೋತ್ತರಶ್ರೇಣಿಗಳೊಳಿರ್ಪ ವಿದ್ಯಾಧರಾಧೀಶ್ವರರಂ ಬರಿಸಿ ರಥನೂಪುರಚಕ್ರವಾಳಂ ಗಗನವಲ್ಲಭ ರಾಜಧಾನಿಗಳಾಗಿ ನೆಗೞ್ದ ನೂಱಪತ್ತುಂ ಪೊೞಲ್ಗಳನೊಳಕೊಂಡ ದಕ್ಷಿಣೋತ್ತರಶ್ರೇಣಿಗಳಂ ನಮಿ ವಿನಮಿಗಳ್ಗೆ ಕೊಟ್ಟು ಗಾಂಧಾರ ಪನ್ನಗವಿದ್ಯೆಗಳನವರ್ಗೆ ವಿಧಿಪೂರ್ವಕಮಿತ್ತು,

ಇದು ಪುರುದೇವಶಾಸನಮಿವರ್ ನಿಮಗಾಳ್ವರುಮಿರ್ವರೆನ್ನ ಪೇ
ೞ್ದುದನಿದನಿಂತೆ ನಂಬಿ ಬೆಸಕೆಯ್ವುದು ನೀಮಿವರ್ಗೆಂದು ಖೇಚರಾ
ಸ್ಪದಸಕಳಾಧಿಪತ್ಯಮನನಾಕುಳಮಂತವರ್ಗಿತ್ತನಾರ್ಗಮ
ಭ್ಯುದಯಮನೀಗುಮೆಂಬುದದು ಚೋದ್ಯಮೆ ತತ್ಪುರುದೇವಸೇವನಂ ೧೨೨

ಭೂತಳದಲ್ಲಿ ಇಂಥ ಪರ್ವತಗಳಿರುವುವೇ? ವ|| ಇದು ಭರತವೆಂಬ ವಿಜಯಾರ್ಧದಲ್ಲಿ[1] ನಿಂದುದರಿಂದ ವಿಜಯಾರ್ಧವೆಂದು ಹೆಸರುಗೊಂಡಿತು. ಇದಕ್ಕೆ ಮೊದಲನೆಯ ಇರುಕಲಿನಲ್ಲಿನ ಎರಡೂ ಸಾಲುಗಳಲ್ಲಿ ಕರ್ಮಭೂಮಿಯ ನಿಯಮವೇ ಇಲ್ಲಿನ ನಿಯಮ. ಅಲ್ಲಿನ ಖಚರರು ಉತ್ಕೃಷ್ಟ ನಿಕೃಷ್ಟ ಸ್ಥಿತಿಕಾಲಗಳಲ್ಲಿ ಕ್ರಮವಾಗಿ ಐದುನೂರು ಬಿಲ್ಲುಗಳಿಂದ ಏಳು ಮೊಳಗಳವರೆಗೆ ದೇಹಪ್ರಮಾಣವನ್ನು ಪಡೆಯುವರು. ಅಲ್ಲದೆ ಅವರಿಗೆ ಪ್ರಜ್ಞಪ್ತಿವಿದ್ಯೆಯೇ ಮೊದಲಾದ ಕುಲಜಾತಿಸಾಧಿತ ವಿದ್ಯೆಗಳು ಕೆಲವು ನಡೆಯುವುವು. ಸಾಧಿತವಿದ್ಯೆಗಳನ್ನು ಸಾಧಿಸುವಾಗಲೂ ಸಿದ್ಧಾಯತನವೇ ಮೊದಲಾದ ಒಂಬತ್ತು ಕೂಟಗಳಲ್ಲಿಯೂ ದ್ವೀಪಾದಿ ಸಮುದ್ರತೀರದ ಶುಚಿಪ್ರದೇಶಗಳಲ್ಲಿಯೂ ಇದ್ದುಕೊಂಡು ಸಾಧಿಸಬೇಕಾಗಿದೆ" ಎಂದು ಧರಣೇಂದ್ರನು ನಮಿ ವಿನಮಿಗಳಿಗೆ ತಿಳಿಸಿದನು. ಅನಂತರ ಅವರಿಬ್ಬರನ್ನೂ ಅಲ್ಲಿ ನೆಲಸುವಂತೆ ವ್ಯವಸ್ಥೆ ಮಾಡಿದನು. ದಕ್ಷಿಣೋತ್ತರ ಶ್ರೇಣಿಗಳಲ್ಲಿದ್ದ ವಿದ್ಯಾಧರರಾಜರನ್ನು ಬರಮಾಡಿ, ರಥನೂಪುರಚಕ್ರವಾಳ ಗಗನವಲ್ಲಭ[2] ಎಂಬ ರಾಜಧಾನಿಗಳಲ್ಲಿರುವ ಒಟ್ಟು ನೂರಹತ್ತು ಪಟ್ಟಣಗಳನ್ನೊಳಗೊಂಡ ದಕ್ಷಿಣೋತ್ತರ ಶ್ರೇಣಿಗಳನ್ನು ಕ್ರಮವಾಗಿ ನಮಿ ವಿನಮಿಗಳಿಗೆ ವಹಿಸಿಕೊಟ್ಟನು. ಅಲ್ಲದೆ ಗಾಂಧಾರ ಪನ್ನಗವಿದ್ಯೆಗಳನ್ನು ಅವರಿಗೆ ವಿಧಿಪೂರ್ವಕವಾಗಿ ಉಪದೇಶಮಾಡಿದನು. ೧೨೨. "ಇದು ಪುರುದೇವನ ಶಾಸನ. ಇವರಿಬ್ಬರೂ ನಿಮ್ಮನ್ನು ಆಳುವರು. ನನ್ನ ಮಾತನ್ನು ನಂಬಿ ನಡೆಯಿರಿ. ನೀವು ಇವರ ಆಜ್ಞೆಯನ್ನು ಪಾಲಿಸಿರಿ" ಎಂದು ವಿದ್ಯಾಧರರಿಗೆ ತಿಳಿಸಿ ಖೇಚರಮಂಡಿತವಾದ

1 ಭರತಖಂಡದ ಮಧ್ಯಭಾಗದಲ್ಲಿ.

2 ಪೂರ್ವಪುರಾಣದ ಪ್ರಕಾರ ಗಗನವಲ್ಲಭ ಎಂಬುದು ಉತ್ತರಶ್ರೇಣಿಯಲ್ಲಿರುವ ಒಂದು ಪಟ್ಟಣ. ಅದು ರಾಜಧಾನಿಯೆಂದು ಅದರಲ್ಲಿ ಹೇಳಿಲ್ಲ (ಪೂ. ಪು. ೧೯-೮೨)

ವ|| ಅಂತು ಧರಣೇಂದ್ರನವರನಂಬರಚರೇಂದ್ರಪದವಿಯೊಳ್ ನಿಱಿಸಿ ನಿಜಾಮರಲೋಕಕ್ಕೆ ಪೋದಂ. ಅನ್ನೆಗಮಿತ್ತಲ್,

ಇದು ಬೇಱೊಂದಿಳೆಗತ್ಯುದಗ್ರಮಹಿಮಂ ಹೇಮಾಚಳೇಂದ್ರಂ ಜಗ
ಕ್ಕಿದು ಬೇಱೊಂದತಿನಿಷ್ಪ್ರಕಂಪಸಲಿಲಂ ಗಂಭೀರಕೂಪಾರಮೆಂ
ಬುದನೆಂದರ್ಚಿಸೆ ಖೇಚರಾಮರಗಣಂ ನಿಂದಂ ಕೊಳಲ್ ಶಾಶ್ವತಾ
ಸ್ಪದಮಂ ಯೋಗನಿಯೋಗನಿಶ್ಚಳಮನಂ ಸಂದಾದಿಭಟ್ಟಾರಕಂ ೧೨೩

ವ|| ಅಂತು,

ಪರಮಂ ಪೂಣ್ದಱುದಿಂಗಳಂ ನೆಱಪಿ ಚರ್ಯಾಮಾರ್ಗದೊಂದಂದಮಂ
ಧರೆಯೊಳ್ ಮಾರ್ಗವಿಬೋಧನಾರ್ಥಮಱಿಯಲ್ಕೆಂದೆತ್ತಿ ಕಯ್ಯಂ ಸುರೇ
ಶ್ವರಶೈಳಂ ತಳರ್ವಂತೆವೊಲ್ ತಳರ್ದನೀರ್ಯಾಗೋಚರಂ ಶುದ್ಧಿ ತ
ಳ್ತಿರೆ ತನ್ನೊಳ್ ಧರೆಯಂ ಪದಾಂಬುಜರಜಂಗಳ್ ನೀರಜಂ ಮಾಳ್ಪಿನಂ ೧೨೪

ವ|| ಅಂತು ತಳರ್ದನುಕ್ರಮದಿಂದಂ ಗ್ರಾಮನಗರಖೇಡಖರ್ವಡ ಮಡಂಬಗಳೊಳೊಡಂಬಡಿಲ್ಲದೆ ಚರ್ಯಾಮಾರ್ಗದೊಳ್ ನಡೆವಲ್ಲಿ ಜನಪದಪುರಸನಾಭಿಜನಂಗಳ್ ಕಂಡರ್ ಕಂಡಲ್ಲಿಯೆ ಮುಸುಱಿಕೊಂಡು,

ಸಕಲಾಧಿಪತ್ಯವನ್ನು ಧರಣೇಂದ್ರನು ನಮಿ ವಿನಮಿಗಳಿಗೆ ನಿರಾಕುಲವಾಗಿ ಇತ್ತನು. ಆ ಪುರುದೇವನ ಸೇವನೆಯು ಯಾರಿಗೆ ತಾನೆ ಅಭ್ಯುದಯವನ್ನುಂಟುಮಾಡದು? ಇದರಲ್ಲಿ ಏನು ಆಶ್ಚರ್ಯ? ವ|| ಧರಣೇಂದ್ರನು ಆ ನಮಿ ವಿನಮಿಗಳನ್ನು ಖಚರೇಂದ್ರಪದವಿಯಲ್ಲಿ ನೆಲೆಗೊಳಿಸಿ ತನ್ನ ಲೋಕಕ್ಕೆ ಹಿಂದಿರುಗಿದನು. ಅಷ್ಟರಲ್ಲಿತ್ತ, ೧೨೩. "ಇದು ಭೂಮಿಯಲ್ಲಿ ಅತಿಮಹಿಮಾಸ್ಪದವಾದ ಬೇರೊಂದು ಹೇಮಾಚಲೇಂದ್ರ. ಇದು ಪ್ರಪಂಚಕ್ಕೆ ಎಂದೂ ಚಲಿಸದ ಜಲವಿರುವ ಬೇರೊಂದು ಸಮುದ್ರ" ಎಂದು ತಿಳಿದು ಖೇಚರಾಮರಗಣವು ಪೂಜಿಸುತ್ತಿರಲು ಖ್ಯಾತಿವೆತ್ತ ಆದಿಭಟ್ಟಾರಕನು ಯೋಗಾಭ್ಯಾಸದಿಂದ ನಿಶ್ಚಲಮನಸ್ಕನಾಗಿ ಶಾಶ್ವತಪದವಿಯನ್ನು ಪಡೆಯಲು ಉದ್ದೇಶಿಸಿದನು. ವ|| ಅಂತು, ೧೨೪. ಪರಮನು ಪ್ರತಿಜ್ಞೆಮಾಡಿ ಆರು ತಿಂಗಳವರೆಗೆ ಚರ್ಯಾಮಾರ್ಗವನ್ನು ಭೂಮಿಯಲ್ಲಿ ಕೈಕೊಂಡನು. ಆ ಮಾರ್ಗವನ್ನು ತಿಳಿಸಲು ಎಲ್ಲರಿಗೂ ತಿಳಿಯುವಂತೆ ತನ್ನ ಕೈಯನ್ನೆತ್ತಿಕೊಂಡು ಸುರಶೈಲವು ಹೊರಡುವಂತೆ (ಸ್ವೇಚ್ಛಾಸಂಚಾರಿಯಾಗಿ) ಹೊರಟನು. ಈರ್ಯಾಗೋಚರನಾಗಿ ತನ್ನಲ್ಲಿ ಶುದ್ಧಿಯನ್ನು ಪಡೆದು ಪದಕಮಲಧೂಳಿಗಳಿಂದ ಭೂಮಿಯನ್ನು ಪವಿತ್ರವನ್ನಾಗಿ ಮಾಡುತ್ತ ನಡೆದನು. ವ|| ಅಂತು ಕ್ರಮವಾಗಿ ಗ್ರಾಮ, ನಗರ, ಖೇಡ, ಖರ್ವಡ, ಮಡಂಬಗಳಲ್ಲಿರದೊಪ್ಪದೆ ಮುನಿಪನು ಚರ್ಯಾಮಾರ್ಗದಿಂದ ನಡೆಯತೊಡಗಿದನು. ಜನಪದಪುರನಿವಾಸಿಗಳಾದ ಜನರು ಅದನ್ನು ಕಂಡು ಅವನನ್ನು ಮುತ್ತಿಕೊಂಡರು.

ಬೆಸನಾವುದೆಮಗೆ ಬೆಸನಂ
ಬೆಸಸುವುದೇಬಾೞ್ತೆಯೆಂದು ಮುಂದಿಟ್ಟರ್ ಸ್ರ
ಗ್ವಸನವಿಲೇಪನಭೂಷಾ
ಪ್ರಸರಂಗಳನಲ್ಲಿ ಕೆಲಬರತಿಜಡಮತಿಗಳ್ ೧೨೫

ಸುತ್ತಿದ ಕರಗದ ನೀರುಮ
ನೆತ್ತಿದ ಬೋನಮುಮನಿದಿರೊಳಿಟ್ಟರೆ ಬನ್ನಿಂ
ಇತ್ತೇಱ್ತಾಯೆಂದರ್ ಮುನಿ
ಪೋತ್ತಮನಂ ಮುಗ್ಧಮತಿಗಳೇನಂ ಮಾಡರ್ ೧೨೬

ಪಸೆಯುಂ ಪಸುರ್ವಂದರುಮಂ
ಪೊಸಯಿಸಿ ಕನ್ನೆಯರನಾನಕಧ್ವನಿ ದೆಸೆಯೊಳ್
ಪಸರಿಸೆ ತಂದರ್ ಪಿರಿದೊಂ
ದೊಸಗೆಯೊಳಿರದರಸ ಮದುವೆನಿಲ್ಲೆಂದರೆಬರ್ ೧೨೭

ಸರ್ವಸ್ವಮುಮಂ ಕುಡದಿರ
ಲುರ್ವೀಪತಿ ಬಂದೊಡಾಗದೆಂದತಿಭಕ್ತರ್
ಖರ್ವಡನಿವಾಸಿಗಳ್ ಕೆಲ
ರುರ್ವೀಶರ್ ತೆಗೆದರಾನೆಯಂ ಕುದುರೆಯುಮಂ ೧೨೮

ಬಳಗಂ ಬೆರಸರೆಬರ್ ಕಾ
ಲ್ಗಳ ಮೊದಲೊಳುದಶ್ರುಲೋಚನರ್ ಮಿಂದುಂಡೀ
ಗಳೆ ಬಿಜಯಂಗೆಯ್ಯೆಂದಿರೆ
ಕುಳಾದ್ರಿಧೈರ್ಯಂಗೆ ಚರಿಗೆ ಮಾಣ್ದತ್ತಿನಿಸುಂ ೧೨೯

೧೨೫. "ಕಾರ್ಯವಾವುದು? ನಮಗೆ ಮಾಡಬೇಕಾದುದನ್ನು ಹೇಳಿ, ಇದೆಂಥ ಬಾಳು?" ಎಂದು ನುಡಿದು ಹೂವು, ಬಟ್ಟೆ, ಗಂಧ ಮೊದಲಾದುವನ್ನು ಜಡಮತಿಗಳು ಕೆಲವರು ಅವನ ಮುಂದಿಟ್ಟರು. ೧೨೬. ಕೆಲವರು ಜಲಪಾತ್ರೆಯನ್ನೂ ಅನ್ನವನ್ನೂ ಮುಂದಿಟ್ಟು "ಸ್ವೀಕರಿಸಿ" ಎಂದರು. ಮಂದಬುದ್ಧಿಗಳಾದ ಜನರು ಏನನ್ನು ತಾನೆ ಮಾಡರು? ೧೨೭. ಕೆಲವರು ಹಸೆಯನ್ನೂ, ಹಸುರು ಚಪ್ಪರವನ್ನೂ ಸುಂದರವಾಗಿ ಸಿದ್ಧಗೊಳಿಸಿ ದುಂದುಭಿಧ್ವನಿಗಳ ಮೂಲಕ ಕನ್ನೆಯರನ್ನು ಕರೆತಂದರು. "ಅರಸ! ಇವಳನ್ನು ಸಂತೋಷದಿಂದ ಮದುವೆಯಾಗು:" ಎಂದ. ೧೨೮. ಪರಮನು ಬಂದಾಗ ಸರ್ವಸ್ವವನ್ನೂ ಸಮರ್ಪಿಸದಿರಲು ಸಾಧ್ಯವಿಲ್ಲ ಎಂದುಕೊಂಡು ಕೆಲವರು ಖರ್ವಡನಿವಾಸಿಗಳೂ ಅತಿಭಕ್ತರೂ ಆದ ರಾಜರು ಆನೆಯನ್ನೂ, ಕುದುರೆಯನ್ನೂ ಹೊರತಂದರು. ೧೨೯. ಕೆಲವರು ತಮ್ಮ ಬಾಂಧವರೊಡಗೂಡಿ ಪರಮನ ಪಾದತಳದಲ್ಲಿ ಕಣ್ಣೀರನ್ನು ಸುರಿಸುತ್ತಾ "ಮಿಂದು ಊಟ ಮಾಡಿ ತೆರಳಿರಿ" ಎಂದರು. ಆದರೆ ಕುಲಪರ್ವತಗಳಂತೆ

ವ॥ ಅಂತಾ ಮುನೀಶ್ವರಂಗೆ ನಿಖಿಳಜಗಜ್ಜನಾಶ್ಚರ್ಯಚರ್ಯಾಪರ್ಯಟನದೊಳ್ ಮತ್ತಮಱುದಿಂಗಳ್ ಪೋಗೆ ಸಂವತ್ಸರಂ ನೆಱೆದಂದು ಕುರುಜಾಂಗಣವಿಷಯವಿಶೇಷಕಮಪ್ಪ ಹಸ್ತಿನಾಪುರಮನಾಳ್ವ ಕುರುವಂಶಶಿಖಾಮಣಿ ಸೋಮಪ್ರಭಂಗೆ ತತ್ಸ್ವಯಂಪ್ರಭಾಶ್ರೀಮತ್ಯಾರ್ಯಸ್ವಯಂಪ್ರಭದೇವಕೇಶವ ಮಹೀಶಾಚ್ಯುತಪ್ರತೀಂದ್ರಂ ಧನದೇವಚರಂ ಸರ್ವಾರ್ಥಸಿದ್ಧಿಯಿಂ ಬಂದು ಪರಮಶ್ರೇಯೋನಿಧಾನಂ ಶ್ರೇಯಾಂಸನೆಂಬೊಂ ಪ್ರಿಯಾನುಜನಾಗಿರ್ದಾತಂ ಅಂದಿನ ಬೆಳಗಪ್ಪ ಜಾವದಾಗಳ್,

ಸುರಶೈಲಂ ಕಲ್ಪವೃಕ್ಷಪ್ರಕರಪರಿವೃತಂ ರಾಜಗೇಹಾಂಗಣಾಳಂ
ಕರಣಂ ಬಂದಿರ್ದುದಂ ಕಂಡಮರಗಿರಿನಿಭಂ ಪ್ರಾರ್ಥಿತಾರ್ಥಪ್ರದಂ ಮಾ
ಣ್ದಿರದಾದಿಬ್ರಹ್ಮನೆಯ್ದೆರ್ಪುದನೆ ಕನಸುವೇೞ್ದಪ್ಪುದೆಂದಗ್ರಜಂಗಾ
ದರದಿಂದಂ ಪೇೞ್ದು ಕಾಣ್ಬುತ್ಸವದೊಳೆ ಪರಮಾನಂದಮಂ ತಾಳ್ದಿ ನಿಂದಂ ೧೩೦

**ವ॥ ಅನ್ನೆಗಮಾದಿಮುನೀಶ್ವರನುಮಾ ಪುರಾಂತರಾಳದೊಳ್ ಸಂವೇಗವೈರಾಗ್ಯಾಭಿವೃದ್ಧ್ಯರ್ಥಮಾಗೆ ಜಗತ್ಕಾಯಸ್ವಭಾವಭಾವನಾಪರಂ ಸಕಳಶರೀರಗುಣಾಧಿಕದುಃಖಾರ್ದಿತಾವಿನೀತರೊಳ್ ಮೈತ್ರೀ ಪ್ರಮೋದ ಕಾರುಣ್ಯಮಾಧ್ಯಸ್ಥವೃತ್ತಿಗಳಂ ಭಾವಿಸುತ್ತುಂ ಯುಗಪ್ರಮಾಣಕ್ಷೋಣೀನಿರೀಕ್ಷಣನಿರತನುಮತಿ ದ್ರುತವಿಲಂಬಿತಗತಿವ್ಯಪೇತನುಮಾಗಿ ನಗರಾರಣ್ಯನಿರ್ವಿಶೇಷನುತ್ತಮಮಧ್ಯಮಜಘನ್ಯಾಗಾರಂಗಳೊಳ್**

ಧೈರ್ಯಶಾಲಿಯಾದ ಪರಮನಿಗೆ ಭಿಕ್ಷಾವೃತ್ತಿ ಹಿಮ್ಮೆಟ್ಟಿತು. ವ॥ ಅಂತು ಆ ಮುನೀಶ್ವರನಿಗೆ, ಸಮಸ್ತ ಜಗಜ್ಜನಕ್ಕೆ ಆಶ್ಚರ್ಯಕರವಾದ ಚರ್ಯಾಪರ್ಯಟನದಲ್ಲಿ ಮತ್ತಾರು ತಿಂಗಳು ಕಳೆದು ಸಂವತ್ಸರವು ಮುಗಿಯಿತು. ಆಗ ಕುರುಜಾಂಗಣದೇಶಕ್ಕೆ ತಿಲಕವಾದ ಹಸ್ತಿನಾಪುರವನ್ನು ಆಳುವ ಕುರುವಂಶಶ್ರೇಷ್ಠನಾದ ಸೋಮಪ್ರಭನಿಗೆ ಸ್ವಯಂಪ್ರಭೆ, ಶ್ರೀಮತಿ, ಸ್ವಯಂಪ್ರಭದೇವ, ಕೇಶವಮಹೀಶ, ಅಚ್ಯುತಪ್ರತೀಂದ್ರ, ಧನದೇವ ಮುಂತಾದ ಬೇರೆ ಬೇರೆ ಜನ್ಮಗ್ರಗಳನ್ನು ತಳೆದು ಸಂಪ್ರತಿ ಸರ್ವಾರ್ಥಸಿದ್ಧಿಯಿಂದ ಬಂದು ಪರಮ ಶ್ರೇಯಸ್ಸಿಗಾಶ್ರಯನಾದ ಶ್ರೇಯಾಂಸನೆಂಬುವನು ನಲ್ಮೆಯ ತಮ್ಮನಾಗಿ ಜನಿಸಿದನು. ಅಂದಿನ ಬೆಳಗಿನ ಜಾವದಲ್ಲಿ ೧೩೦. ಕಲ್ಪವೃಕ್ಷಗಳಿಂದ ಕೂಡಿದ, ರಾಜಗೃಹಾಂಗಣಕ್ಕೆ ಅಲಂಕಾರಪ್ರಾಯವಾದ ಸುರಶೈಲವು ಬಂದಿರುವುದನ್ನು ಕನಸಿನಲ್ಲಿ ಕಂಡನು. ತತ್ಫಲವಾಗಿ ಮೇರುಗಿರಿಸದೃಶನೂ ಬಯಸಿದಿಷ್ಟಾರ್ಥಗಳನ್ನು ಸಲ್ಲಿಸುವವನೂ ಆದ ಆದಿಬ್ರಹ್ಮನು ಸಮೀಪಿಸುವನೆಂಬುದು ಕನಸಿನ ಅರ್ಥ ಎಂದು ಅಣ್ಣನಾದ ಸೋಮಪ್ರಭನಿಗೆ ಹೇಳಿ ಶ್ರೇಯಾಂಸನು ಪರಮನನ್ನು ಕಾಣುವ ಸಂಭ್ರಮದಲ್ಲಿ ಪರಮಾನಂದವನ್ನು ತಳೆದನು. ವ॥ ಅಷ್ಟರಲ್ಲಿ ಆದಿಮುನೀಶ್ವರನು ಆ ಪುರದ ನಡುವೆ ಸಂವೇಗ-ವೈರಾಗ್ಯಗಳ ಅಭಿವೃದ್ಧಿಗಾಗಿ ಜಗತ್ತು ಮತ್ತು ಶರೀರದ ಸ್ವಭಾವವನ್ನು ಅನುಸಂಧಾನ ಮಾಡತಕ್ಕವನಾಗಿ, ಪ್ರಾಣಿಸಮೂಹ-ಗುಣಾಧಿಕ-ದುಃಖಿತ ಅವಿನೀತರಲ್ಲಿ ಕ್ರಮವಾಗಿ ಮೈತ್ರಿ, ಪ್ರಮೋದ, ಕಾರುಣ್ಯ, ತಟಸ್ಥ, ವೃತ್ತಿಗಳನ್ನು ಭಾವಿಸಿದನು. ಒಂದು ನೊಗ[1]ದ ಪ್ರಮಾಣದಷ್ಟು ಮಾತ್ರ

---

1 ಪೂರ್ವಪುರಾಣ'ವನ್ನನುಸರಿಸಿ (೨೦-೬೬) 'ಯುಗ್ಮಪ್ರಮಾಣ' ಎಂಬುದನ್ನು 'ಯುಗ ಪ್ರಮಾಣ'ವೆಂದು ತಿದ್ದಲಾಗಿದೆ.

ಚಂದ್ರಗತಿಯಿಂ ಸಲುತ್ತುಮಾಳೋಕಸಂಭ್ರಮೋಪೇತಪುರಜನಾನುಗಮ್ಯಮಾನಂ ಸೋಮಪ್ರಭ ರಾಜಮಂದಿರಾಭಿಮುಖನಾಗಿ ಬರ್ಪನ್ನೆಗಂ, ದ್ವಾರಪಾಳಕಂ ಸಿದ್ಧಾರ್ಥನೆಂಬಂ ಪರಿತಂದು ಭಗವದ್ವೃತ್ತಕ ಪ್ರಸಕ್ತವಚನರಚನಾಮುಖರಮುಖಸರಸೀರುಹನಾಗಿರ್ದ ಸೋಮಪ್ರಭಂಗಂ ಶ್ರೇಯಾಂಸಂಗಮಱಿಪಿದಾಗಳ್,

ಕರಕಳಿತಾರ್ಘ್ಯಪಾದ್ಯನನವದ್ಯಗುಣಂಗೆ ಸಮಸ್ತರಾಜಕಂ
ಬೆರಸಿದಿರೆಟ್ಟಿ ರಾಜಗೃಹದಿಂ ಪೊಱಮಟ್ಟತಿಭಕ್ತಿಯಿಂ ಪದಾಂ
ಬುರುಹಮನೆಯ್ದೆವಂದೆಱಗೆ ಶೋಭಿಸಿದಂ ಮುನಿಮುಖ್ಯನಾಗಳಿ
ರ್ವರ ನಡುವಿರ್ದು ನೀಳನಿಷಧಂಗಳ ಮಧ್ಯದ ಮಂದರಾದ್ರಿಪೋಲ್ ೧೩೧

ವ॥ ಆಗಳಾದಿತೀರ್ಥಕರ್ತಾರನ ದಿಗಂಬರರೂಪಮಂ ಕಾಣಲೊಡಂ ಶ್ರೀಮತಿಯಾದ ಭವದೊಳ್ ವಜ್ರಜಂಘನುಂ ತಾನುಮಿರ್ದು ಸರ್ಪಸರೋವರದೊಳ್ ಚಾರಣಯುಗಳಕ್ಕೆ ವಿಧಿಪೂರ್ವಕಂ ಮಹಾದಾನಮನಿತ್ತುದನಾಗಳಾಗಳ್ ಪುಟ್ಟಿದ ಭವಸಂಸ್ಕಾರದಿಂದಂ ಸವಿಸ್ತರಮಱಿದು,

ಭೂಮಿಯನ್ನು ನಿರೀಕ್ಷಿಸುವುದರಲ್ಲಿ ನಿರತನಾಗಿಯೂ, ಅತಿಶೀಘ್ರವಾಗಿಯೂ, ಅತಿವಿಲಂಬಿತವಾಗಿಯೂ ನಡೆಯದೆಯೆ, ನಗರಾರಣ್ಯಗಳೆಂಬ ತಾರತಮ್ಯವಿಲ್ಲದೆ ಉತ್ತಮ, ಮಧ್ಯಮ ಮತ್ತು ಅಧಮಗಳಾದ ಮನೆಗಳಲ್ಲಿ ಚಂದ್ರಗತಿ[1]ಯಿಂದ ಹೋಗುತ್ತಿದ್ದನು. ಕಾಣಬೇಕೆಂಬ ಸಡಗರದಿಂದ ಹಿಂಬಾಲಿಸುತ್ತಿರುವ ಜನಗಳಿಂದ ಕೂಡಿದವನಾಗಿ ಸೋಮಪ್ರಭರಾಜನ ಮನೆಗಭಿಮುಖವಾಗಿ ಬರುವಷ್ಟರಲ್ಲಿ ದ್ವಾರಪಾಲಕನಾದ ಸಿದ್ಧಾರ್ಥನೆಂಬುವನು ಓಡಿಬಂದು ಭಗವದ್ವೃತ್ತಾಂತವನ್ನು ಕೇಳಲು ಕುತೂಹಲಿಗಳೂ ಪ್ರಸನ್ನಮುಖರೂ ಆಗಿದ್ದ ಸೋಮಪ್ರಭ ಶ್ರೇಯಾಂಸರಿಗೆ ಆ ವಿಷಯವನ್ನು ವಿಜ್ಞಾಪಿಸಿದನು. ೧೩೧. ಅನಿಂದ್ಯವಾದ ಗುಣಗಳುಳ್ಳ ಪರಮನಿಗಾಗಿ ಅರ್ಘ್ಯಪಾದ್ಯಗಳನ್ನು ಕೈಯಲ್ಲಿ ಹಿಡಿದು ಸೋಮಪ್ರಭ ಶ್ರೇಯಾಂಸರು ಸಮಸ್ತರಾಜಸಮೂಹದೊಡನೆ ರಾಜಗೃಹದಿಂದ ಹೊರಟರು. ಅತಿಭಕ್ತಿಯಿಂದ ಆ ಮುನೀಂದ್ರನ ಪಾದಕಮಲಗಳಿಗೆರಗಿದರು. ಆಗ ಅವರಿಬ್ಬರ ನಡುವೆಯಿದ್ದ ಮುನೀಂದ್ರನು ನೀಲನಿಷಧಗಳ ಮಧ್ಯೆ ಇರುವ ಮಂದರಾದ್ರಿಯಂತೆ ಶೋಭಿಸಿದನು. ವ॥ ಆಗ ಆದಿತೀರ್ಥಂಕರನ ದಿಗಂಬರರೂಪವನ್ನು ನೋಡಿದೊಡನೆ ಶ್ರೇಯಾಂಸನು ಶ್ರೀಮತಿಯಾದ ಭವದಲ್ಲಿ ವಜ್ರಜಂಘನೂ ತಾನೂ ಇದ್ದುಕೊಂಡು ಸರ್ಪಸರೋವರದಲ್ಲಿ ಚಾರಣಯುಗಳಕ್ಕೆ ವಿಧಿವತ್ತಾಗಿ ಮಾಡಿದ ಆಹಾರದಾನವನ್ನು ಆಗತಾನೆ ಉಂಟಾದ ಭವಸಂಸ್ಕಾರದಿಂದ ಜಾತಿಸ್ಮರನಾಗಿ ವಿಸ್ತಾರವಾಗಿ ಅರಿತನು (ಸ್ಮರಿಸಿಕೊಂಡನು)

---

1 ಚಂದ್ರಗತಿ = ಎಲ್ಲ ನಕ್ಷತ್ರಗಳನ್ನೂ ಪ್ರವೇಶಿಸಿ ಚಂದ್ರನು ಮೆಲ್ಲಗೆ ಹೋಗುವುದು.

ಈಯಲ್ಬಂದತ್ತು ಕಲ್ಪಾಂಘ್ರಿಪಮಭಿಮತಮಂ ಪೂರ್ವಪುಣ್ಯಾರ್ಜಿತಂ ಕೊ
ಳ್ಳೀಯಲ್ಬಂದತ್ತಿದೊಂದಕ್ಷಯನಿಧಿಯೆನುತುಂ ತನ್ನನೊಲ್ದಾ ತ್ರಿಲೋಕ
ಶ್ರೀಯೆಲ್ಲಂ ಪೊರ್ದಿದಂತೇನೊಸೆದನೊ ಮನದೊಳ್ ಸೂಕ್ತಿಕರ್ಣಾವತಂಸಂ
ಶ್ರೇಯಾಂಸಂ ಪ್ರೋನ್ನತಾಂಸಂ ಸುಕವಿಜನಮನೋಮಾನಸೋತ್ತಂಸಹಂಸಂ ೧೩೨

ವ।। ಅಂತತಿಪ್ರಮೋದಪ್ರೀಣಿತಾಂತಃಕರಣನಾಗಿ,

ಇದಿರೊಳ್ ಮಂಗಳಗೀತತೂರ್ಯನಿನದಂ ಕೈಗಣ್ಮೆ ಮಾಂಗಲ್ಯವೇ
ಷದ ಕಾಂತಾತತಿ ಮಂಗಳೋಪಕರಣದ್ರವ್ಯಂಗಳಿಂದೊಪ್ಪೆ ಪೆ
ರ್ಚಿದ ತನ್ನುತ್ತಮಭಕ್ತಿಯಿಂ ನಿಱಿಪುದುಂ ಶ್ರೇಯೋಗೃಹದ್ವಾರದೊಳ್
ನಿಧಿ ನಿಲ್ವಂತಿರೆ ನಿಂದನೂರ್ಜಿತಗುಣಂ ಸಂಸಾರಸಾರೋದಯಂ. ೧೩೩

ಗದ್ಯ ।। ಇದು ದೇವೇಂದ್ರಮುನೀಂದ್ರವಂದ್ಯ ಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾ
ಪ್ರಸರ ಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಪರಿನಿಷ್ಕ್ರಮಣಕಲ್ಯಾಣ ವರ್ಣನಂ
ನವಮಾಶ್ವಾಸಂ

೧೩೨. ಕಲ್ಪವೃಕ್ಷವು ಇಷ್ಟಾರ್ಥವನ್ನು ಸಲ್ಲಿಸಲು ಬಂದಿತ್ತು. ಪೂರ್ವಪುಣ್ಯದಿಂದ ಪ್ರಾಪ್ತವಾದ ಅಕ್ಷಯನಿಧಿಯಿದು, ತೆಗೆದುಕೋ ಎಂದು ಕೊಡಲು ಬಂದಿತು. ಆದುದರಿಂದ ತ್ರೈಲೋಕ್ಯಲಕ್ಷ್ಮಿಯೆಲ್ಲವೂ ತನಗೆ ಒಲಿದುಬಂದಂತೆ ಸಂತುಷ್ಟನಾಗಿ ಸೂಕ್ತಿಕರ್ಣಾವತಂಸನೂ, ಉನ್ನತಾಂಸನೂ, ಸುಕವಿಜನಮನೋಮಾನಸೋತ್ತಂಸಹಂಸನೂ ಆದ ಶ್ರೇಯಾಂಸನು ಮನದಲ್ಲಿ ಅದೆಷ್ಟು ನಲಿದನೊ! ವ।। ಅತ್ಯಾನಂದದಿಂದ ಸಂತುಷ್ಟವಾದ ಮನಸ್ಸುಳ್ಳವನಾಗಿ
೧೩೩. ಎದುರಿನಲ್ಲಿ ಮಂಗಳಗೀತಗಳೂ ತೂರ್ಯಧ್ವನಿಗಳೂ ಉಂಟಾದುವು. ಮಂಗಳಕರವಾದ ವೇಷಗಳಿಂದ ಸಮೇತವಾದ ಕಾಂತಾಸಮೂಹವು ಮಂಗಳೋಪಕರಣ ದ್ರವ್ಯಗಳಿಂದ ಶೋಭಿಸಿತು. ಆಗ ಶ್ರೇಯಾಂಸನು ಉತ್ತಮವಾದ ಭಕ್ತಿಯಿಂದ ಸ್ವಾಮಿಯನ್ನು ಭಿಕ್ಷೆಗಾಗಿ ನಿಲ್ಲಿಸಿದನು. ಆತನ ಮನೆಯ ಬಾಗಿಲಲ್ಲಿ ನಿಧಿ ನಿಂತಂತೆ ಶ್ರೇಷ್ಠಗುಣನೂ ಸಂಸಾರಸಾರೋದಯನೂ ಆದ ಪರಮನು ಬಂದು ನಿಂತನು.

ಇಂತು ಪರಿನಿಷ್ಕ್ರಮಣಕಲ್ಯಾಣ ವರ್ಣನೆಯೆಂಬ
ಒಂಬತ್ತನೆಯ ಆಶ್ವಾಸ ಮುಗಿಯಿತು

# ದಶಮಾಶ್ವಾಸಂ

ಶ್ರೀದಾನತೀರ್ಥಮೀತನಿ
ನಾದುದು ಪೆಱರಾದಿತೀರ್ಥಕರನಂ ನಿಱಿಸ
ಲ್ಕೇವೊರೆಯರೀಗಳೀಯುಗ
ದಾದಿಯೊಳೀತನೆ ಸರಸ್ವತೀಮಣಿಹಾರಂ ೧

ವ॥ ಎಂಬಿನಮಾದಿತೀರ್ಥಕರ್ತಾರನಂ ಶ್ರದ್ಧಾದಿಸಪ್ತಗುಣಸಂಪನ್ನನುಂ ಪ್ರತಿಗ್ರಹಾದಿನವವಿಧ ಪುಣ್ಯಪುರಸ್ಸರನುಮಾಗಿ ನಿಱಿಸಿ, ಕರ್ಮಭೂಮಿಯ ಮೊದಲೊಳಾದಿದಾನತೀರ್ಥಪ್ರವರ್ತಕಂ ಶ್ರೇಯಾಂಸಂ ನಿಜಾಗ್ರಜನಪ್ಪ ಸೋಮಪ್ರಭಂಬೆರಸು ಕನಕಕಳಶದೊಳ್ ತೀವಿದಮೃತರಸಸಮಾನ ಧವಳೇಕ್ಷುರಸಧಾರೆ ಪುಣ್ಯಧಾರೆಯಂತೆ ಸೊಗಯಿಸುವಿನಂ ಸಮುತ್ತಾನೀಕೃತವಿಶಾಲಪಾಣಿಪಾತ್ರದೊಳೆಱೆವುದುಂ,

ವಸುಧಾರೆ ನಾಡೆಯುಂ ಕ
ಣ್ಗಸದಳಮಾಯ್ತಮರಕರಪರಿಚ್ಯುತಮೆತ್ತಂ
ಪೊಸಪೂವಿನ ಸಿರಿ ಪಿರಿದಾ
ಯ್ತಸದಳಮೆಸಪೆಲರದೊಂದು ಮೇಲ್ವಾಯ್ದಾಗಳ್ ೨

ಇವು ಪಾತ್ರದಾನತರುವಿನ
ವಿವಿಧಫಲಾವಳಿಗಳಿವು ತದಂಘ್ರಿಪದದಳ
ನ್ನವಕುಸುಮಾಳಿಗಳೆನಿಸಿದು
ವವಿರಳತರರತ್ನಪುಷ್ಪಧಾರಾಸಾರಂ ೩

೧. ಶ್ರೀದಾನತೀರ್ಥವು ಈತನಿಂದ (ಶ್ರೇಯಾಂಸನಿಂದ) ಆಯಿತು.[1] ಆದಿತೀರ್ಥಂಕರನನ್ನು ಭಿಕ್ಷೆಗಾಗಿ ನಿಲ್ಲಿಸಲು ಬೇರೆ ಯಾರು ಸಮರ್ಥರು? ಈ ಯುಗದ ಆದಿಯಲ್ಲಿ ಈತನೇ ಸರಸ್ವತೀಮಣಿಹಾರ. ವ॥ ಎಂಬಂತೆ ಆದಿತೀರ್ಥಂಕರನನ್ನು ಶ್ರದ್ಧಾದಿ ಏಳು ಗುಣ[2]ಗಳಿಂದ ಕೂಡಿದ, ಪ್ರತಿಗ್ರಹವೇ ಮೊದಲಾದ ಒಂಬತ್ತು ವಿಧಪುಣ್ಯ[3]ಗಳಿಂದ ಸಮೇತನಾದ ಮತ್ತು ಕರ್ಮಭೂಮಿಯ ಮೊದಲಲ್ಲಿ ಆದಿದಾನತೀರ್ಥಪ್ರವರ್ತಕನಾದ ಶ್ರೇಯಾಂಸನು ಅಣ್ಣ ಸೋಮಪ್ರಭನೊಡನೆ ಭಿಕ್ಷೆಗಾಗಿ ನಿಲ್ಲಿಸಿದನು. ಚಿನ್ನದ ಕಲಶದಲ್ಲಿ ತುಂಬಿದ ಅಮೃತರಸಕ್ಕೆ ಸಮಾನವಾದ ಪುಣ್ಯಧಾರೆಯಂತೆ ಸೊಗಯಿಸುತ್ತಿದ್ದ ಕಬ್ಬಿನ ರಸದ ಧಾರೆಯನ್ನು ಆದಿತೀರ್ಥಂಕರನ ಮೇಲ್ಮುಖವಾಗಿ ಹಿಡಿದ ವಿಶಾಲವಾದ ಪಾಣಿಯಲ್ಲಿ ಎರೆದನು. ೨. ಆಗ ಸುರಕರಚ್ಯುತವಾದ ರತ್ನವೃಷ್ಟಿಧಾರೆಯು ಕಣ್ಣುಗಳಿಗೆ ಅಸದೃಶವಾಗಿ ತೋರಿತು. ಹೊಸ ಹೂವುಗಳ ಸುರಿಮಳೆಯಾಯಿತು. ಅಸದಳವಾಗಿ ಗಾಳಿಯೊಂದು ಬೀಸಿತು. ೩. ನಿರಂತರವಾಗಿ ಸುರಿದ ರತ್ನಪುಷ್ಪಗಳ ಸುರಿಮಳೆಯು ಪಾತ್ರದಾನವೆಂಬ

---

1. ದಾನವೆಂಬ ತೀರ್ಥಕ್ಕೆ ಶ್ರೇಯಾಂಸನು ಪ್ರಥಮ ಪ್ರವರ್ತಕ.
2. ಶ್ರದ್ಧಾ, ಶಕ್ತಿ, ಭಕ್ತಿ, ವಿಜ್ಞಾನ, ಅಲುಬ್ಧತೆ, ಕ್ಷಮಾ, ತ್ಯಾಗ-ಇವು ಏಳು ದಾನಗುಣಗಳು.
3. ಪಾತ್ರಸ್ಥಾಪನ, ಉನ್ನತಸ್ಥಾನ, ನಿವೇಶನ, ಪಾದಪ್ರಕ್ಷಾಲನ, ಪೂಜೆ, ನಮಸ್ಕಾರ, ಮನಶ್ಶುದ್ಧಿ, ಕಾಯಶುದ್ಧಿ, ಆಹಾರಶುದ್ಧಿ-ಇವು ಒಂಬತ್ತು ದಾತೃವಿನ ಪುಣ್ಯಗಳು.

ಆನಂದದುಂದುಭಿಧ್ವನಿ
ತಾನೊಡನೊಡನೆಸೆಯೆ ನಭದೊಳೊಡನೆಸೆದುದಹೋ
ದಾನಿಯಹೋಪಾತ್ರಮಹೋ
ದಾನಮಹೋದೇಯಮೆಂಬ ದಿವ್ಯಧ್ವನಿಗಳ್ ೪

ವ|| ಅಂತು ಕಾಯಸ್ಥಿತಿಯಂ ನಿರ್ವರ್ತಿಸಿ ತದನಂತರಮೆ,

ಕುರುಗೋತ್ರಂ ಧರೆಯೊಳ್ ಪವಿತ್ರಮೆನಿಸಲ್ಕಿನ್ನಾರ್ತುದಿಂದೆಮ್ಮ ಮಂ
ದಿರಮೀಭೂಭುವನೈಕಪೂತಮೆನಿಸಲ್ ಸಾಲ್ದಿರ್ದುದಾಮುಂ ಕೃತಾ
ರ್ಥರೆವೆಂದಾದಮನುಗ್ರಹಂಗೆಯಲೆ ನೀಮೇಱ್ತಂದೊಡೆಂದಾಗಳಿ
ರ್ವರುಮತ್ಯುತ್ತಮಭಕ್ತಿಯಿಂದೆಱಗಿದರ್ ತತ್ಪಾದಪದ್ಮಂಗಳೊಳ್ ೫

ವ|| ಅಂತೆಱಗಿದಾಗಳ್,

ಅಕ್ಷಯದಾನಂ ನಿಮಗ
ಕ್ಕಕ್ಷುಣ್ಣಮಿದೆಂದು ಪರಮಮುನಿ ಪರಸೆ ಬೞೆ
ಕ್ಕಕ್ಷಯತೃತೀಯೆಯೆಂದಖಿ
ಳಕ್ಷಿತಿಗಂ ನೆಗೞ್ದುದಲ್ತೆ ತತ್ಪುಣ್ಯದಿನಂ ೬

ವ|| ಅಂತು ಪರಸಿ ಪೋಪಮಟ್ಟು ಪೋಪ ಯತಿಪತಿಯಂ ಕ್ಷಿತಿಪತಿಗಳಿರ್ವರುಮಗಲಲಾಱ ದೊಡನೊಡನೆ ಪೋಗಿ,

ಅಂತು ಮುನಿವೃಷಭನಂ ಕಿಱಿ
ದಂತರಮಂ ಕಳಿಪಿ ಮಗುೞ್ದುಮಗುೞ್ದುಂ ಕಾಂತಾ
ರಾಂತರಮಂ ಪುಗುವನ್ನೆಗ
ಮಂತವರೆಮೆಯಿಕ್ಕದಂತೆ ನೋಡಿದರಾಗಳ್ ೭

ವೃಕ್ಷದ ವಿವಿಧ ಫಲಾವಳಿಗಳು. ಆ ವೃಕ್ಷದ ಅರಳಿದ ನೂತನ ಕುಸುಮಾಳಿಗಳು ಎಂಬಂತೆ ಸತತವಾಗಿ ರತ್ನವೃಷ್ಟಿಯೂ ಪುಷ್ಪವೃಷ್ಟಿಯೂ ಆಗ ನಡೆಯಿತು. ೪. ಆಕಾಶದಲ್ಲಿ ಆನಂದಸೂಚಕವಾದ ದುಂದುಭಿಧ್ವನಿಗಳೊಡನೆ 'ಅಹೋ ದಾನಿ! ಅಹೋ ಪಾತ್ರ! ಅಹೋ ದಾನ! ಅಹೋ ದೇಯ!" ಎಂಬ ದಿವ್ಯಧ್ವನಿಗಳೂ ಎಸೆದುವು. ವ|| ಹೀಗೆ ದೇಹಸ್ಥಿತಿ (ಆಹಾರಸ್ವೀಕಾರ)ಯನ್ನು ಪೂರ್ಣಗೊಳಿಸಿದ ಬಳಿಕ ೫. "ಕುರುವಂಶವು ಈ ಭೂಮಿಯಲ್ಲಿ ಪರಮಪವಿತ್ರವೆಂದೆನಿಸಿಕೊಂಡಿತು. ನಾವೂ ಕೃತಾರ್ಥರಾದೆವು. ನಮ್ಮನ್ನನುಗ್ರಹಿಸಲೆಂದೇ ನೀವು ನಮ್ಮ ಮನೆಗೆ ದಯೆಗೈದಿರಿ" ಎಂದು ಹೇಳಿಕೊಳ್ಳುತ್ತಾ ಭಕ್ತಿಯಿಂದ ಸೋಮಪ್ರಭ ಶ್ರೇಯಾಂಸರು ಆದಿದೇವನ ಪಾದಗಳ ಮೇಲೆರಗಿದರು. ವ|| ಹಾಗೆ ನಮಸ್ಕರಿಸಿದಾಗ, ೬. "ಅಪೂರ್ವವಾದ ಈ ದಾನವು ಅಕ್ಷಯವಾಗಲಿ" ಎಂದು ಆ ಮುನಿಯು ಹರಸಿದನು. ತತ್ಫಲವಾಗಿ ಆ ಪುಣ್ಯದಿನವು "ಅಕ್ಷಯ ತೃತೀಯೆ" ಎಂದು ಭೂಲೋಕದಲ್ಲಿ ಪ್ರಸಿದ್ಧಿಗೊಂಡಿತು. ವ|| ಹರಸಿ ಹೊರಟ ಯತಿಪತಿಯನ್ನು ಆ ನೃಪತಿಗಳಿಬ್ಬರೂ ಅಗಲಲಾರದೆ ಒಡನೊಡನೆ ಹೋಗಿ ೭. ಆ ಮುನಿಶ್ರೇಷ್ಠನನ್ನು ಅವರಿಬ್ಬರೂ ಸ್ವಲ್ಪ ದೂರ ಹಿಂಬಾಲಿಸಿದರು. ಬಳಿಕ ಮತ್ತೆ ಮತ್ತೆ ಕಾಡನ್ನು ಹೊಗುವವರೆಗೆ ಎವೆಯಿಕ್ಕದೆ

ವ॥ ಅಂತೆಂತಾನುಮವರನನುಗಮಿಸಿ ಸೋಮಪ್ರಭನುಂ ಶ್ರೇಯಾಂಸನುಂ ಮಗುೞ್ದು ಬಂದು ದಿವಿಜಕರೋನ್ಮುಕ್ತಮುಕ್ತಾದಿರತ್ನಂಗಳಂ ಪೊೞಲ್ಗೆಲ್ಲಂ ಗೋಸನೆವಿಡಿಸಿ ನೆಗೞ್ದ ದಾನಾತಿಶಯಕ್ಕೆ ವಿಸ್ಮಯಂಬಟ್ಟು ಮಹಾಂಭೋರಾಶಿಗಂಭೀರನಪ್ಪಾದಿಭಟ್ಟಾರಕನ ಚಿತ್ತವೃತ್ತಿಯನಾ ಮಹಾತ್ಮನಾವ ಮಾೞ್ಕೆಯೊಳಱಿದನೆಂದು ಭರತೇಶ್ವರನಕಂಪನಾದಿನೃಪಸಮೂಹಂ ಬೆರಸು ಬಂದು ಪೂಜಿಸಿ,

ಸುರನರಲೋಕವಿಸ್ಮಯಕರಂ ದೊರೆವೆತ್ತುದು ನಿನ್ನ ದಾನವಾ
ಗುರುವಿನ ಚಿತ್ತವೃತ್ತಿಯನದೆಂತುಪಲಕ್ಷಿಸಲಾರ್ತೆಯೋ ಮಹಾ
ಪುರುಷನಧೀಶನಿಂದೆನಗೆ ನೀನತಿಪೂಜ್ಯನೆಯೆಂದು ಪೇೞ್ದಾ
ದರದೊಳೆ ತನ್ನನಿಂತು ಬೆಸಗೊಂಡೊಡೆ ಸಂತಸದಿಂ ಕುರುಧ್ವಜಂ ೮

ವ॥ ಇಂತೆಂದು ಪೇೞ್ದಂ:- ಈ ವೃಷನಾಥನೀ ಭವಕ್ಕೆಂಟನೆಯ ಭವದೊಳ್ ಈ ಜಂಬೂದ್ವೀಪದ ಪೂರ್ವವಿದೇಹದ ಪುಷ್ಕಳಾವತೀವಿಷಯದ ಉತ್ಪಳಖೇಟಮೆಂಬ ಪೊೞಲನಾಳ್ವ ವಜ್ರಬಾಹುಗಮಾತನರಸಿ ವಸುಂಧರೆಗಂ ವಜ್ರಜಂಘನೆಂಬೊಂ ತನೂಜನಾದಂ, ಆನುಮಾ ವಿದೇಹದ ಪುಂಡರೀಕಿಣಿಯೆಂಬ ಪೊೞಲನಾಳ್ವ ವಜ್ರದಂತಚಕ್ರವರ್ತಿಗಂ ಆತನ ಮಹಾದೇವಿ ಲಕ್ಷ್ಮೀಮತಿಗಂ ಶ್ರೀಮತಿಯೆಂಬ ತನೂಜೆಯಾಗಿ ವಜ್ರಜಂಘಂಗೆ ವಲ್ಲಭೆಯೆನ್, ಅಂದು ಸರ್ಪಸರೋವರಮೆಂಬ ಕೊಳನ ತಡಿಯೊಳ್ ಬೀಡಂ ಬಿಟ್ಟಿರ್ದು ಚಾರಣಯುಗಕ್ಕೆ ವಿಧಿಪೂರ್ವಕಂ ಮಹಾದಾನಮನಿತ್ತುದ ನೀಗಳಾದಿನಾಥನ ಮುನಿರೂಪಮಂ ಕಾಣಲೊಡಂ ಜಾತಿಸ್ಮರನಾಗಿ ಮಾರ್ಗಸ್ಥಿತಿಯನಱಿದು ನಿಱಿಸಿದೆಂ, ಆ ದಾನಮಂ ಕುಡುವ ತನಗಂ ಕೊಳ್ವ ಪರಮಪಾತ್ರಕ್ಕಮುಪಕಾರಿಯಪ್ಪಾಹಾರಾದಿ ವಿತರಣಮದುವುಂ,

ಅವನನ್ನು ನೋಡಿದರು. ವ॥ ಹೀಗೆ ಮುನಿಶ್ರೇಷ್ಠನನ್ನು ಹಿಂಬಾಲಿಸಿ ಹೋಗಿ ಸೋಮಪ್ರಭನೂ ಶ್ರೇಯಾಂಸನೂ ಮರಳಿಬಂದರು. ದೇವತೆಗಳ ಕೈಗಳಿಂದ ಪರಿಚ್ಯುತವಾದ ಮುತ್ತೇ ಮೊದಲಾದ ರತ್ನಗಳನ್ನು ಪಟ್ಟಣಗಳಲ್ಲಿ ಡಂಗುರ ಹೊಡೆಯಿಸಿ ಹಂಚಿದರು. ಆ ಪ್ರಸಿದ್ಧವಾದ ದಾನಾತಿಶಯಕ್ಕೆ ಭರತರಾಜನು ಆಶ್ಚರ್ಯಗೊಂಡನು. "ಮಹಾಸಮುದ್ರದಂತೆ ಗಂಭೀರನಾದ ಆದಿಭಟ್ಟಾರಕನ ಚಿತ್ತವೃತ್ತಿಯನ್ನು ಆ ಮಹಾತ್ಮನು (ಶ್ರೇಯಾಂಸನು) ಹೇಗೆ ತಿಳಿದನು!" ಎಂದು ಆತನು ಅಕಂಪನಾದಿ ರಾಜರೊಡನೆ ಬಂದು ಶ್ರೇಯಾಂಸನನ್ನು ಪೂಜಿಸಿ ೮. "ನಿನ್ನ ದಾನವು ಸುರನರರೆಲ್ಲರಿಗೂ ವಿಸ್ಮಯಕರವಾಯಿತು. ಗುರುವಿನ ಮನೋವೃತ್ತಿಯನ್ನು ಅದೆಂತರಿಯಲು ಸಮರ್ಥನಾದೆ? ಮಹಾಪುರುಷನಾದ ನೀನು ನನಗೆ ಅತಿಪೂಜ್ಯ" ಎಂದು ಅತ್ಯಾನಂದದಿಂದ ಭರತೇಶನು ಹೇಳಲು ಕುರುಶ್ರೇಷ್ಠನಾದ ಶ್ರೇಯಾಂಸನು ಸಂತೋಷದಿಂದ ಹೀಗೆಂದನು: ವ॥ "ಈ ವೃಷನಾಥನು ಈ ಜನ್ಮಕ್ಕೆಂಟನೆಯ ಜನ್ಮದಲ್ಲಿ ಜಂಬೂದ್ವೀಪದಲ್ಲಿನ ಪೂರ್ವವಿದೇಹದ ಪುಷ್ಕಲಾವತೀದೇಶದ ಉತ್ಪಲಖೇಟವೆಂಬ ಪಟ್ಟಣವನ್ನಾಳುವ ವಜ್ರಬಾಹುವಿಗೂ ಆತನ ಮಹಾರಾಣಿಯಾದ ವಸುಂಧರೆಗೂ ವಜ್ರಜಂಘನೆಂಬ ಮಗನಾಗಿ ಹುಟ್ಟಿದನು. ನಾನೂ (ಶ್ರೇಯಾಂಸ) ವಿದೇಹದ ಪುಂಡರೀಕಿಣಿ ಎಂಬ ಪಟ್ಟಣವನ್ನಾಳುವ ವಜ್ರದಂತಚಕ್ರವರ್ತಿಗೂ ಅವನ ಸತಿಯಾದ ಲಕ್ಷ್ಮೀಮತಿಗೂ ಶ್ರೀಮತಿಯೆಂಬ ಮಗಳಾಗಿಯೂ ವಜ್ರಜಂಘನ ವಲ್ಲಭೆಯಾಗಿಯೂ ಆದೆನು. ಅಂದು ಸರ್ಪಸರೋವರವೆಂಬ ಕೊಳದ ದಡದಲ್ಲಿ ಬೀಡನ್ನು ಬಿಟ್ಟು ಚಾರಣಯುಗಳಕ್ಕೆ ವಿಧಿವತ್ತಾಗಿ ಆಹಾರದಾನವಿತ್ತುದನ್ನು ಈಗ ಆದಿನಾಥನ

ಕುಡುವೊಂ ಕುಡುವುದು ಪಾತ್ರಂ
ಕುಡೆ ಪಡೆವತಿವಿಪುಳಫಲಮೆನಲ್ ನಾಲ್ಕುತೆಱಂ
ಗಡ ದಾನಮಲ್ಲಿ ಮೊದಲೊಳ್
ಕುಡುವಂ ಶ್ರದ್ಧಾದಿಗುಣಸಮನ್ವಿತನಕ್ಕುಂ ೯

ವ॥ ಕುಡುವುದುಮಹಾರಾಭಯಭೈಷಜ್ಯಶಾಸ್ತ್ರದಾನದಿಂ ಚತುರ್ವಿಧಮಕ್ಕುಂ, ಪಾತ್ರಮುತ್ತಮ ಮಧ್ಯಮಜಘನ್ಯಭೇದದಿಂ ತ್ರಿವಿಧಮಕ್ಕುಂ, ಅಲ್ಲಿ ದರ್ಶನವಿಶುದ್ಧನುಂ ಶೀಲಸಂಪನ್ನನುಮಪ್ಪ ಸಂಯುತನುತ್ತಮಪಾತ್ರಂ; ಶ್ರೀಸಮ್ಯಗ್ದರ್ಶನವಿಶುದ್ಧನುಮಣುವ್ರತಧಾರಿಯುಮಪ್ಪ ಶ್ರಾವಕಂ ಮಧ್ಯಮಪಾತ್ರಂ; ದರ್ಶನವಿಶುದ್ಧನಾಗಿಯುಂ ಶೀಲವ್ರತಭಾವನಾರಹಿತನಸಂಯುತಂ ಜಘನ್ಯಪಾತ್ರಂ ಮಿಥ್ಯಾದೃಷ್ಟಿಯಪ್ಪಂ ತನ್ನನೆಂತುಂ ಸಮಱೆ ನೆಗಟ್ಟಿದ್ದಡಮಾತನಪಾತ್ರಮೆ,

ಫಳಮಂ ಸುಪಾತ್ರದಾನದ
ಫಳಮೆ ದಲುತ್ಕೃಷ್ಟಭೋಗಭೂಮಿಯೊಳಮನಾ
ಕುಳಕಲ್ಪಾಮರಲೋಕಂ
ಗಳೊಳಂ ಪುಟ್ಟಿಸುಗುಮಪ್ಪ ಕಾರಣದಿಂದಂ ೧೦

ವ॥ ಉೞಿದ ಮಧ್ಯಮಜಘನ್ಯಪಾತ್ರದಾನಂಗಳ್ ಮಧ್ಯಮಜಘನ್ಯಭೋಗಭೂಮಿಭೋಗಾನುಭವಮನೀಗುಂ; ಅಪಾತ್ರದಾನಂ ಭೋಗಭೂಮಿಗಳೊಳಂ ಭೋಗಭೂಮಿಪ್ರವಿಭಾಗದ್ವೀಪಂಗಳೊಳ್ ತಿರ್ಯಗ್ಜಾತಿತ್ವಮುಮಂ ಅಂತರ್ದ್ವೀಪಂಗಳೊಳ್ ಕುಮಾನುಷತ್ವಮುಮಂ ಮಾಡುಗುಂ; ಇದಾಹಾರದಾನಫಲಂ,

ಮುನಿರೂಪವನ್ನು ಕಂಡೊಡನೆ ಜಾತಿಸ್ಮರನಾಗಿ ಮಾರ್ಗಸ್ಥಿತಿಯನ್ನರಿತು ನಿಲ್ಲಿಸಿದೆನು. ಆ ದಾನಕೊಡುವ ತನಗೂ ಅದನ್ನು ಪಡೆಯುವ ಪರಮಪಾತ್ರನಾದ ಪರಮನಿಗೂ ಆಹಾರಾದಿ ದಾನವು ಉಪಕಾರಿಯಾದುದು. ೯. "ಕೊಡತಕ್ಕವನು, ಕೊಡತಕ್ಕ ವಸ್ತು, ದಾನವನ್ನು ಪಡೆಯುವವನು, ಪಡೆಯಲಿರುವ ಅತಿವಿಪುಲ ಫಲ-ಎಂದು ದಾನವು ನಾಲ್ಕು ವಿಧ, ಮೊಟ್ಟಮೊದಲು ಕೊಡುವವನು ಶ್ರದ್ಧಾದಿಗುಣಸಮನ್ವಿತನಾಗಿರಬೇಕು. ವ॥ "ಕೊಡುವುದೆಂಬುದು ಆಹಾರ, ಅಭಯ, ಭೈಷಜ್ಯ ಮತ್ತು ಶಾಸ್ತ್ರಗಳ ದಾನ ಎಂದು ನಾಲ್ಕು ವಿಧ. ಉತ್ತಮ, ಮಧ್ಯಮ ಮತ್ತು ಜಘನ್ಯಭೇದದಿಂದ ಪಾತ್ರವು ಮೂರು ವಿಧ. ದರ್ಶನವಿಶುದ್ಧನೂ ಶೀಲಸಂಪನ್ನನೂ ಆದ ಸಂಯುತನು (ಇಂದ್ರಿಯನಿಗ್ರಹಿಯು) ಉತ್ತಮಪಾತ್ರ. ಸಮ್ಯಗ್ದರ್ಶನವಿಶುದ್ಧನೂ ಅಣುವ್ರತಧಾರಿಯೂ ಆದ ಶ್ರಾವಕನು ಮಧ್ಯಮಪಾತ್ರ. ದರ್ಶನವಿಶುದ್ಧನಾಗಿದ್ದರೂ ಶೀಲ, ವ್ರತ, ಭಾವನಾರಹಿತನಾಗಿ ಇಂದ್ರಿಯನಿಗ್ರಹವಿಲ್ಲದವನು ಅಧಮಪಾತ್ರನು. ಆಚಾರವಂತನಾಗಿ ನಡೆದರೂ ಮಿಥ್ಯಾದೃಷ್ಟಿಯುಳ್ಳವನು ಅಪಾತ್ರನೇ ಸರಿ. ೧೦. ಸತ್ಪಾತ್ರದಾನ ಫಲವೇ ಫಲ. ಅದು ಉತ್ಕೃಷ್ಟವಾದ ಭೋಗಭೂಮಿಯಲ್ಲಿಯೂ ನಿಶ್ಚಿಂತೆಯಿಂದ ಕಲ್ಪಾಮರಲೋಕಗಳಲ್ಲಿಯೂ ಜನ್ಮವೆತ್ತಿಸಲು ಸಹಾಯಕವಾಗುವುದು. ವ॥ ಉಳಿದ ಮಧ್ಯಮ ಮತ್ತು ನೀಚಪಾತ್ರಗಳಲ್ಲೆಸಗಿದ ದಾನವು ಮಧ್ಯಮ ಮತ್ತು ನೀಚಭೋಗಭೂಮಿಗಳಲ್ಲಿ ಭೋಗಾನುಭವವನ್ನು ಮಾಡಲು ನೆರವಾಗುವುದು. ಅಪಾತ್ರದಾನವು

ಅಭಯರ್ ನಿರೋಗರುಂ ಶ್ರುತ
ವಿಭವಸಮನ್ವಿತರುಮಪ್ಪರೆಂಬುದು ಪಿರಿದ
ಲ್ತು ಭವಾಂಬುಧಿಯುಮನೀಸುವ
ರಭಯೌಷಧಶಾಸ್ತ್ರದಾನಫಲವಿಳಸನದಿಂ ೧೧

ಎಂಬುದುಮಾ ಶ್ರೇಯೋವಚ
ನಂ ಬಗೆಯನಲರ್ಚೆ ಭವ್ಯನೃಪನಿಕರಮದೇ
ನೆಂಬುತ್ಸಾಹದೆ ನಲಿದುದೊ
ಸಾಂಬುಪಯೋಧರಕೆ ನಲಿವ ಶಿಖಿನಿಕರದವೊಲ್ ೧೨

ವ|| ಆಗಳವರ್ಗಳ್,

ಯತಿ ವಿಮಳಯಶಃಪ್ರಸರಂ
ಗತದೋಷಗುಣಂ ತ್ರಿವರ್ಗಫಳನಿಳಯಂ ಸ
ತ್ಕೃತಿಯುಂ ದಾನಮುಮಾದಂ
ಪತಿಗಲ್ಲದೆ ಪೇಟ್ ಪೆಱಂಗೆ ಸಮನಿಸಿದಪುದೇ ೧೩

ವ|| ಅದಱೆನೀ ಯುಗಾದಿಯೊಳಾದಿದಾನತೀರ್ಥಪ್ರವರ್ತನೈಕಪುಣ್ಯಭಾಜನನೈ ನೀನೆಯೆಂದು ಪೊಗಟ್ಟು ಪೂಜಿಸಿ ಪೋದರ್, ಅನ್ನೆಗಮಿತ್ತ ವೃಷಭಯೋಗೀಂದ್ರನುಂ ಸಕಳಸಾವದ್ಯಾತಿದೂರಮಪ್ಪ ಜಿನಕಲ್ಪಿತಮೆಂಬಾಚರಣಂ ಕೈಕೊಂಡು, ಯೋಗಯೋಗ್ಯಂಗಳೊಳ್ ಅವಹಿತಧ್ಯಾನಾಧೀನಮಾನಸನಾಗಿ ವಿಹಾರಿಸುತ್ತುಂ ಸಂವತ್ಸರಸಹಸ್ರಂಗಳಂ ಕಳಿಪಿ, ಪುರಿಮತಾಳಪುರಬಹಿರ್ಭಾಗನಿಕಟಶಕಟೋದ್ಯಾನ

ಭೋಗಭೂಮಿಯಲ್ಲಿಯೂ ಭೋಗಭೂಮಿಗಳೊಳಗಿನ ಬೇರೆ ಬೇರೆ ದ್ವೀಪಗಳಲ್ಲಿಯೂ ತಿರ್ಯಗ್ಜಾತಿಯನ್ನಪ್ಪಲಿಕ್ಕೂ ಅಂತರ್ದ್ವೀಪಗಳಲ್ಲಿ ಕುಮಾನುಷರಾಗಿ ಹುಟ್ಟಲಿಕ್ಕೂ ಕಾರಣವಾಗುವುದು. ಇದು ಆಹಾರದಾನದ ಫಲ. ೧೧. ಅಭಯ, ಔಷಧ ಮತ್ತು ಶಾಸ್ತ್ರಗಳ ದಾನದ ಫಲವಾಗಿ ಅಭಯರೂ ರೋಗವಿಹೀನರೂ ವಿದ್ಯೈಶ್ವರ್ಯಸಂಪನ್ನರೂ ಆಗುವುದು ಹಿರಿದಲ್ಲ, ಅವರು ಸಂಸಾರಸಮುದ್ರವನ್ನು ಈಸಿ ದಾಟುವರು." ೧೨. ಹೀಗೆ ಶ್ರೇಯಾಂಸನು ಹೇಳಲಾಗಿ ಆ ಮಾತು ರಾಜರ ಮನಸ್ಸನ್ನರಳಿಸಿತು. ನೀರುದುಂಬಿದ ಮೋಡದ ಧ್ವನಿಗೆ ನವಿಲುಗಳು ನಲಿಯುವಂತೆ ರಾಜಮಂಡಲವು ಉತ್ಸಾಹದಿಂದ ನಲಿಯಿತು. ವ|| ಆಗ ಅವರು, ೧೩. "ನಿರ್ಮಲವಾದ ಯಶಸ್ಸಿನ ಹರದಾಟವೂ ದೋಷವಿದೂರವೂ ಧರ್ಮಾರ್ಥಕಾಮಗಳಿಗಾಶ್ರಯವೂ ಆದ ಸತ್ಕರ್ಮವೂ ದಾನಮಾಡುವ ಹೆಬ್ಬಯಕೆಯೂ ಪುಣ್ಯಶಾಲಿಗಲ್ಲದೆ ಮತ್ತಾರಿಗೂ ಲಭಿಸವು. ವ|| ಆದ್ದರಿಂದ ಈ ಯುಗಾದಿಯಲ್ಲಿ ಆದಿದಾನತೀರ್ಥಪ್ರವರ್ತನವೆಂಬ ಪುಣ್ಯಕ್ಕೆ ಪಾತ್ರನು ನೀನು" ಎಂದು ಶ್ರೇಯಾಂಸನನ್ನು ಹೊಗಳಿ ಪೂಜಿಸಿ ಹೋದರು. ಇತ್ತ ವೃಷಭಯೋಗೀಂದ್ರನು ನಿಂದಾವಿರಹಿತವಾದ ಜಿನಕಲ್ಪಿತಾಚರಣವನ್ನು ಕೈಕೊಂಡನು. ಯೋಗಯೋಗ್ಯ ಪ್ರದೇಶಗಳಲ್ಲಿ ಸ್ಥಿರಧ್ಯಾನಾಧೀನಮನಸ್ಕನಾಗಿ ವಿಹರಿಸುತ್ತಾ ಸಹಸ್ರ ವರ್ಷಗಳನ್ನು ಕಳೆದನು. ಪುರಿಮತಾಲ ಪಟ್ಟಣದ ಹೊರಭಾಗಕ್ಕತಿ ಸಮೀಪವೆನಿಸಿದ ಶಕಟೋದ್ಯಾನದಲ್ಲಿನ ಆಲದಮರದ ಕೆಳಗೆ

ವಟವಿಟಪಿಯ ಕೆಳಗೆ ವಿಶಾಳ ನಿರಾಕುಳನಿರ್ಜಂತುಕನಿರ್ಮಲಶಿಲಾಪಟ್ಟದ ಮೇಲೆ ನಿಬಿಡ ನಿಬದ್ಧಪಲ್ಯಂಕಾಸನನಂ ಪೂರ್ವಾನುಮುಖನುಮಾಗಿರ್ದಾಗಳ್,

ಕರಣಗಣಂ ಕುನುಂಗಿರೆ ಮನಂ ನೊಸಲಲ್ಲಿರೆ ಲೋಚನಂಗಳು
ಳ್ಳರೆಮುಗುಟ್ದಿಂಬುವೆತ್ತಿರೆ ಕರದ್ವಯಪಲ್ಲವಮಂಕದೊಳ್ ಮರ
ಲ್ದಿರೆ ತನು ನಿಷ್ಪ್ರಕಂಪಮಿರೆ ದಂತಚಯಂ ಸಮನಾಗೆ ತನ್ನೊಳೊಂ
ದಿರೆ ಸಮಸಂದುದಾ ಪರಮಯೋಗಿಗೆ ಯೋಗನಿಯೋಗಭಾವನಂ ೧೪

ವ|| ಅಂತು ಯೋಗಯೋಗ್ಯಬಾಹ್ಯಸಾಮಗ್ರಿಯೊಳ್ ಮುನ್ನಮೆ ನೆಱೆದು ಪರಮಪದಮನೆ ಮನದೊಳ್ ನಿಜೆಸಿ ಸಮ್ಯಕ್ತ್ವಜ್ಞಾನದರ್ಶನಾನಂತವೀರ್ಯಸೂಕ್ಷ್ಮತ್ವಾಗುರುಲಘುತ್ವಾವಗಾಹಾವ್ಯಾಬಾಧಂಗಳೆಂಬ ಸಿದ್ಧಪರಮೇಷ್ಠಿಗಳಷ್ಟಗುಣಂಗಳಂ ನೆನೆಯುತ್ತುಂ ಅಧ್ರುವಾದಿ ದ್ವಾದಶಾನುಪ್ರೇಕ್ಷಾಭಾವನಾಭಾವಿತಾಂತಃಕರಣನಾಗಿ, ಮುನ್ನಮಾಜ್ಞಾವಿಚಯಮಪಾಯವಿಚಯಂವಿಪಾಕವಿಚಯಂಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮ್ಯಧ್ಯಾನಮಂ ಧ್ಯಾನಿಸುತ್ತುಂ, ಜ್ಞಾನಾದಿಪರಿಣಾಮಂಗಳೊಳ್ ನಿರತಿಶಯಲೇಶ್ಯಾವಿಶುದ್ಧಿಯಂ ತಾಳ್ದಿ ತದನಂತರಮಪ್ರಮತ್ತಗುಣಸ್ಥಾನಂಗಳೊಳಧಃಪ್ರವೃತ್ತ ಅಪೂರ್ವ-ಅನಿವೃತ್ತಿಕರಣಪರಿಣಾಮಂಗಳಿಂದಮನಂತಾನುಬಂಧಿಕ್ರೋಧಮಾನವಮಾಯಾಲೋಭಂಗಳಂ ವಿಸಂಯೋಜಿಸಿ ಅಂತರ್ಮುಹೂರ್ತಮಂ ವಿಶ್ರಮಿಸಿ ಮಗುಟ್ದು ತ್ರಿವಿಧಕರಣಪರಿಣಾಮಪರಿಣತನನುಕ್ರಮದಿಂ ಮಿಥ್ಯಾತ್ವಸಮ್ಯಙ್ಮಿಥ್ಯಾತ್ವಸಮ್ಯಕ್ತ್ವಪ್ರಕೃತಿಯೆಂಬ ದರ್ಶನಮೋಹನೀಯತ್ರಿಕದ ನಿರ್ಮೂಲನದಿಂ ಕ್ಷಾಯಿಕಸಮ್ಯಗ್ದೃಷ್ಟಿಯಾಗಿ, ಬಟೆಯುಮಂತರ್ಮುಹೂರ್ತಕಾಲಂ

ವಿಶಾಲವೂ ನಿರಾಕುಲವೂ ನಿರ್ಜಂತುಕವೂ ಆದ ಶಿಲಾಪಟ್ಟದಲ್ಲಿ ಪಲ್ಯಂಕಾಸನದಲ್ಲಿ ಕುಳಿತು ಪೂರ್ವಾಭಿಮುಖನಾಗಿದ್ದನು. ಆಗ ೧೪. ಇಂದ್ರಿಯಸಮೂಹವು ಕುಗ್ಗಿ ಮನಸ್ಸು ನೊಸಲಲ್ಲಡಗಿತ್ತು. ಕಣ್ಣುಗಳು ತುಸು ಮುಗುಳಾಗಿ ಇಂಬಾಗಿದ್ದುವು. ಕರಪಲ್ಲವಗಳೆರಡೂ ತೊಡೆಯ ಮೇಲೆ ಅಗಲಿಸಿ ಇಡಲ್ಪಟ್ಟಿದ್ದವು. ದೇಹವು ನಿಷ್ಕಂಪವಾಗಿತ್ತು. ದಂತಚಯವು ಸಮನಾಗಿ ಹೊಂದಿಕೊಂಡಿತ್ತು. ಹೀಗೆ ಆ ಪರಮಯೋಗಿಗೆ ಯೋಗನಿಯೋಗಭಾವನೆಯು ತಲೆದೋರಿತು. ವ|| ಹಾಗೆ ಯೋಗ ಯೋಗ್ಯವೆನಿಸಿದ ಬಾಹ್ಯಸಾಮಗ್ರಿಗಳಲ್ಲಿ ಮೊದಲೆ ಕೂಡಿ ಪರಮಪದವನ್ನೆ ಮನದಲ್ಲಿರಿಸಿದನು. ಸಮ್ಯಕ್ತ್ವ, ಸಮ್ಯಗ್ಜ್ಞಾನ, ಸಮ್ಯಗ್ದರ್ಶನ, ಅನಂತವೀರ್ಯ, ಸೂಕ್ಷ್ಮತ್ವ, ಅಗುರುಲಘುತ್ವ, ಅವಗಾಹ, ಅವ್ಯಾಬಾಧಗಳೆಂಬ ಸಿದ್ಧಪರಮೇಷ್ಠಿಗಳ ಎಂಟು ಗುಣಗಳನ್ನು ನೆನೆದನು. ಅಧ್ರುವಾದಿ ಹನ್ನೆರಡು ಅನುಪ್ರೇಕ್ಷೆಗಳ ಭಾವನೆಗಳಿಂದ ಭಾವಿತವಾದ ಅಂತಃಕರಣವುಳ್ಳವನಾಗಿ ಆಜ್ಞಾವಿಚಯ, ಅಪಾಯವಿಚಯ, ವಿಪಾಕವಿಚಯ ಮತ್ತು ಸಂಸ್ಥಾನವಿಚಯವೆಂಬ ನಾಲ್ಕು ಧರ್ಮಧ್ಯಾನಗಳನ್ನು ಧ್ಯಾನಿಸಿದನು. ಜ್ಞಾನಾದಿ ಪರಿಣಾಮಗಳಿಂದ ನಿರತಿಶಯವಾದ ಲೇಶ್ಯಾ ವಿಶುದ್ಧಿಯನ್ನು ತಳೆದನು. ಅನಂತರ ಅಪ್ರಮತ್ತಗುಣಸ್ಥಾನಗಳಲ್ಲಿ ಅಧಃಪ್ರವೃತ್ತಿಕರಣ, ಅಪೂರ್ವಕರಣ, ಅನಿವೃತ್ತಿಕರಣ ಪರಿಣಾಮಗಳಿಂದ ಅನಂತಾನುಬಂಧಿಯಾದ ಕ್ರೋಧ, ಮಾನ, ಮಾಯಾ, ಲೋಭಗಳನ್ನು ವಿಘಟಿಸಿದನು. ಬಳಿಕ ಅಂತರ್ಮುಹೂರ್ತಕಾಲ (೪೮ ನಿಮಿಷ) ವಿಶ್ರಾಂತಿವಡೆದು ತ್ರಿವಿಧಕರಣ ಪರಿಣಾಮದಲ್ಲಿ ಪರಿಣತನಾದನು. ಅನುಕ್ರಮವಾಗಿ ಮಿಥ್ಯಾತ್ವ,

**ಪ್ರಮತ್ತಾಪ್ರಮತ್ತಪರಾವರ್ತನ ಸಹಸ್ರಂಗೆಯ್ದು ಮೋಕ್ಷಪ್ರಾಸಾದಾಧಿರೋಹಣನಿಶ್ರೇಣೀಭೂತ ಕ್ಷಪಕಶ್ರೇಣಿಪ್ರಯೋಗ್ಯಾಧಃಪ್ರವೃತ್ತಕರಣಪರಿಣತನಪೂರ್ವಕರಣಕ್ಷಪಕ ಪ್ರಥಮಶುಕ್ಲಧ್ಯಾನ ಪರಿಣತನಾಗಿರ್ದಾಯುಃಕರ್ಮಮನುೞಿಪಿ ಮತ್ತಿನುೞಿದ ಕರ್ಮಂಗಳಂ ಸ್ಥಿತ್ಯನುಭಾಗಕಾಂಡಕಘಾತಪ್ರದೇಶ ಗುಣಶ್ರೇಣಿನಿರ್ಜರಾದಿವಿಧಿಯಿನನುಕ್ರಮಂ ಕಿಡಿಸುತ್ತುಂ ಪ್ರತಿಸಮಯಮನಂತಗುಣ ಶಕ್ತಿಖಚಿತೈಕ ಪರಿಣಾಮನಿವೃತ್ತಿಕರಣಕ್ಷಪಕನಾಗಿ ಪೂರ್ವೋಕ್ತ ವಿಧಾನದಿನಂತರ್ಮುಹೂರ್ತದಿಂ ನಿದ್ರಾನಿದ್ರಾ ಪ್ರಚಳಾಪ್ರಚಳಾಸ್ತ್ಯಾನಗೃದ್ಧಿನರಕಗತಿ ತತ್‌ಪ್ರಾಯೋಗ್ಯಾನುಪೂರ್ವತಿರ್ಯಗ್ಗತಿ ತತ್‌ಪ್ರಯೋಗ್ಯಾನುಪೂರ್ವ್ಯೇಕೇಂದ್ರಿಯವಿಕಳೇಂದ್ರಿಯಜಾತ್ಯಾತಪೋದ್ಯೋತ ಸ್ಥಾವರಸಾಧಾರಣ ಸೂಕ್ಷ್ಮಂಗಳೆಂಬ ಪದಿನಾಱು ಪ್ರಕೃತಿಗಳುಮಂ ನಿರವಶೇಷಂ ಕಿಡಿಸಿ, ಮತ್ತಮಂತರ್ಮುಹೂರ್ತದಿಂ ವಿಶುದ್ಧ ಪರಿಣಾಮಾತಿಶಯ ಪರವಶನಪ್ರತ್ಯಾಖ್ಯಾನಪ್ರತ್ಯಾಖ್ಯಾನಕ್ರೋಧಮಾನಮಾಯಾಲೋಭಂಗಳೆಂಬೆಂಟು ಕಷಾಯಂಗಳಂ ಕಿಡಿಸಿ, ಮತ್ತಂ ಕಿಱಿಕಿಱಿದು ಬೇಗದಿಂ ತನ್ನ ಪರಿಣಾಮವಿಶೇಷದಿಂ ಚತುಸ್ಸಂಜ್ವಲನ ನವನೋಕಷಾಯಂಗಳೆಂಬ ಪದಿಮೂಱು ಪ್ರಕೃತಿಗಳುಮನಂತರಕರಣಂ ಮಾಡಿ, ಮತ್ತಂ ಕಿಱಿಕಿಱಿದು ಬೇಗದಿಂ ಕ್ರಮಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನ ನವನೋಕಷಾಯ ಷಟ್ಕರ್ಮಮುಮಂ ಘಾತಿಸಿ, ಪುಂವೇದಾದಿ ನವಬಂಧಮುಮಂ ಸಮಯೋನದ್ವಾವಳಿಕಾಸಮಯಂಗಳಿಂ ಕಿಡಿಸಿ, ಬೞಿಯಮಪಗತ ವೇದನಾಗಿ, ಮತ್ತಂ ಪ್ರತಿಸಮಯಪ್ರವರ್ತಮಾನಸಂಜ್ವಲನಚತುಃಕಷಾಯ (?) ಘಾತಿತಾಶೇಷಾನುಭಾಗಾಷ್ಟ ಕರ್ಣಕರಣಾಪೂರ್ವಕರಣಸ್ಪರ್ಧಕಾಭಿಘಾತದಿನಂತರ್ಮುಹೂರ್ತಕಾಲದಿಂ ಕಿಡಿಸಿ, ಬೞಿಯಂ**

ಸಮ್ಯಕ್‌ಮಿಥ್ಯಾತ್ವ, ಸಮ್ಯಕ್ತ್ವಪ್ರಕೃತಿಗಳೆಂಬ ದರ್ಶನ ಮೋಹನೀಯತ್ರಿಕವನ್ನು ನಿರ್ಮೂಲಗೊಳಿಸಿಕೊಂಡು ಕ್ಷಾಯಿಕ ಸಮ್ಯಗ್ದೃಷ್ಟಿಯನ್ನು ಪಡೆದನು. ಬಳಿಕ ಅಂತರ್ಮುಹೂರ್ತಕಾಲ ಪ್ರಮತ್ತಾಪ್ರಮತ್ತ ಪರಾವರ್ತನಸಹಸ್ರಗಳನ್ನು ಕೈಗೊಂಡು ಮೋಕ್ಷಪ್ರಾಸಾದಕ್ಕೇರಲು ಮೆಟ್ಟಿಲಾದ ಕ್ಷಪಕಶ್ರೇಣಿ ಪ್ರಾಯೋಗ್ಯಾಧಃವೃತ್ತಕರಣಪರಿಣತನೂ ಅಪೂರ್ವಕರಣಕ್ಷಪಕನೂ ಪ್ರಥಮ ಶುಕ್ಲಧ್ಯಾನಪರಿಣತನೂ ಆಗಿ ಆಯುಃಕರ್ಮಗಳನ್ನುಳಿಸಿ, ಇತರ ಕರ್ಮಗಳನ್ನು ಸ್ಥಿತಿ, ಅನುಭಾಗ, ಕಾಂಡ, ಘಾತಪ್ರದೇಶ, ಗುಣಶ್ರೇಣಿ, ನಿರ್ಜರಾದಿ ವಿಧಾನಗಳಿಂದ ಕ್ರಮವಾಗಿ ನಾಶಪಡಿಸಿಕೊಂಡು ಅನಂತಗುಣಶಕ್ತಿಖಚಿತೈಕ ಪರಿಣಾಮಾದಿ ವೃತ್ತಿಕರಣಕ್ಷಪಕನಾದನು. ಪುನಃ ಪೂರ್ವೋಕ್ತವಿಧಾನದಿಂದ ಅಂತರ್ಮುಹೂರ್ತದಲ್ಲಿ ನಿದ್ರಾ, ಅನಿದ್ರಾ, ಪ್ರಚಲಾ, ಅಪ್ರಚಲಾ, ಸ್ತ್ಯಾನಗೃದ್ಧಿ ನರಕಗತಿ, ತತ್ಪ್ರಾಯೋಗ್ಯಾನುಪೂರ್ವ, ತಿರ್ಯಗ್ಗತಿ, ತತ್ಪ್ರಾಯೋಗ್ಯಾನುಪೂರ್ವ್ಯ, ಏಕೇಂದ್ರಿಯ, ವಿಕಲೇಂದ್ರಿಯ, ಜಾತಿ, ಆತಪ, ಉದ್ಯೋತ, ಸ್ಥಾವರ, ಸಾಧಾರಣ, ಸೂಕ್ಷ್ಮಗಳೆಂಬ ಹದಿನಾರು ಕರ್ಮಪ್ರಕೃತಿಗಳನ್ನು ನಿಶ್ಶೇಷವಾಗಿ ಕಳೆದುಕೊಂಡನು. ಪುನಃ ಅಂತರ್ಮುಹೂರ್ತದಿಂದ ವಿಶುದ್ಧ ಪರಿಣಾಮಾತಿಶಯಪರವಶನಾಗಿ ಅಪ್ರತ್ಯಾಖ್ಯಾನಪೂರ್ವಕವಾದ ಕ್ರೋಧ, ಮಾನ, ಮಾಯಾ, ಲೋಭ ಮತ್ತು ಪ್ರತ್ಯಾಖ್ಯಾನಪೂರ್ವಕವಾದ ಕ್ರೋಧ, ಮಾನ, ಮಾಯಾ, ಲೋಭಗಳೆಂಬ ಎಂಟು ಕಷಾಯಗಳನ್ನೂ ಹೋಗಲಾಡಿಸಿಕೊಂಡನು. ಮತ್ತೆ ಕಿರಿದು ವೇಗದಿಂದ ತನ್ನ ಪರಿಣಾಮವಿಶೇಷದಿಂದ ಚತುಸ್ಸಂಜ್ವಲನ ಮತ್ತು ಒಂಬತ್ತು ನೋಕಷಾಯಗಳೆಂಬ ಹದಿಮೂರು ಪ್ರಕೃತಿಗಳನ್ನು ನಾಶಮಾಡಿದನು. ಮತ್ತಷ್ಟು ಕಿರಿದು

**ಪ್ರೂರ್ವಸ್ಪರ್ಧಕಾನುಭೋಗಮನುಚಿತಕೃಷ್ಟವಿಧಾನದಿನನಂತಗುಣಹಾನಿರೂಪದಿಂ ದ್ವಾದಶಸಂಗ್ರಹಕೃಷ್ಟಿಗಳಂ ಮಾಡುತ್ತುಮಂತರ್ಮುಹೂರ್ತದಿಂ ಕೃಷ್ಟಿರೂಪಗತ ಚತುಷ್ಕಷಾಯ ಸಮಸ್ತಾನುಭಾಗನಾಗಿ, ಮತ್ತಂ ಕಿಚಿಕಿಚಿದುಬೇಗದಿಂ ಕ್ರಮಕ್ರಮದಿಂದಂ ಕ್ರೋಧಮಾನಮಾಯಾಲೋಭಸಂಜ್ವಲನಂಗಳಂ ಮೂಱುಂ ತೆಱದ ಕೃಷ್ಟಿಗಳಂ ಬೇಱಿಬೇಱಿ ಕಿಡಿಸಿ ಕಷಾಯತ್ರಿಕಕ್ಕೆ ನಿರ್ಮೂಳವಿಳಯಂ ಮಾಡಿ, ಮತ್ತನಿಸುಂ ಬೇಗದಿಂ ಲೋಭಸಂಜ್ವಲನದ ಮೊದಲ ಕೃಷ್ಟಿಗತಾನುಭಾಗಮಂ ಕಿಡಿಸಿ ಮತ್ತಂ, ದ್ವಿತೀಯಕೃಷ್ಟಿ ಗತಾನುಭಾಗಮಂ ಭೇದಿಸುತ್ತುಂ ಬಾದರಸಾಂಪರಾಯಕೃಷ್ಟರೂಪಾನುಭಾಗಮನನಂತಗುಣ ಹಾನಿರೂಪದಿಂ ಕುಂದಿಸಿ ಸೂಕ್ಷ್ಮ ಸಾಂಪರಾಯಸಂಯಮಸಮನ್ವಿತಸೂಕ್ಷ್ಮ ಸಾಂಪರಾಯಪಕ್ಷಪಕನಾಗಿ ಯಥೋಕ್ತ ಪರಿಣಾಮಕಾಲದಿಂ ಸೂಕ್ಷ್ಮ ಸಾಂಪರಾಯಕೃಷ್ಟಿಗಳಂ ಮಾಡುತ್ತುಮಂತರ್ಮುಹೂರ್ತಕಾಲದಿಂ ಬಾದರಲೋಭಸಂಜ್ವಲನಮಂ ಕಿಡಿಸಿ, ವಿನಿವೃತ್ತಸಾಮಾಯಿಕಚ್ಛೇದೋಪಸ್ಥಾಪನಾಶುದ್ಧಿಸಂಯಮಾನು ಗತಾನುವೃತಿಕರಣಸ್ಥಾನನಾಗಿ ತದನಂತರ ಸಮಯದೊಳ್ ಸೂಕ್ಷ್ಮ ಸಾಂಪರಾಯಸಂಯಮಸಮನ್ವಿತಂ ಸೂಕ್ಷ್ಮ ಸಾಂಪರಾಯಕ್ಷಪಕನಾಗಿ ಯಥೋಕ್ತಪರಿಣಾಮಕಾಲದಿಂ ಸೂಕ್ಷ್ಮಸಾಂಪರಾಯಲೋಭಕ್ಕೆ ನಿರ್ಮೂಲಂಮಾಡಿ ನಿರಸ್ತಾಷ್ಟಾವಿಂಶತಿ ಮೋಹನೀಯಮಳಕಳಂಕನಾಗಿ ವೀತರಾಗದ್ವೇಷಭಾವನಾಭಾವಿತ ಯಥಾಖ್ಯಾತಚಾರಿತ್ರಕ್ಷೀಣಕಷಾಯವೀತರಾಗಚ್ಛದ್ಮಸ್ಥಗುಣಸ್ಥಾನಾನೇಕತ್ವವಿತರ್ಕವಿಚಾರಾಭಿಧಾನ**

ಬೇಗದಿಂದ ಕ್ರಮಕ್ರಮವಾಗಿ ನಪುಂಸಕಪದವನ್ನೂ ಸ್ತ್ರೀವೇದವನ್ನೂ ಪುಂವೇದವನ್ನೂ ಪುರಾತನ ಸತ್ಕರ್ಮದೊಡನೆ ಹಾಸ್ಯರತಿ, ಆರತಿ, ಶೋಕ, ಭಯ ಮತ್ತು ಜುಗುಪ್ಸೆಗಳೆಂಬ ಒಂಬತ್ತು ನೋಕಷಾಯಗಳನ್ನೂ ಷಟ್ಕರ್ಮಗಳನ್ನೂ ಘಾತಿಸಿಕೊಂಡನು. ಪುಂವೇದಾದಿ ಒಂಬತ್ತು ಬಂಧಗಳನ್ನು ಸಮಯೋನದ್ವಾವಲಿಕಾಸಮಯಗಳಿಂದ ಕೆಡಿಸಿಕೊಂಡು ಅಪಗತವೇದನಾದನು. ಪ್ರತಿಸಮಯದಲ್ಲಿಯೂ ಪ್ರವರ್ತಿಸುವ "ಸಂಜ್ವಲನ ಚತುಷ್ಕ ಘಾತಿಕಾಶೇಷಾನುಭಾಗಾಶ್ವಕರ್ಣಕರಣಾಪೂರ್ವಕರಣಸ್ಪರ್ಧಕಾಭಿಘಾತ'ದಿಂದ (?) ಅಂತರ್ಮುಹೂರ್ತಕಾಲದಲ್ಲಿ ಕೆಡಿಸಿಕೊಂಡನು. ಬಳಿಕ ಪೂರ್ವಸ್ಪರ್ಧಕಾನುಭಾಗವನ್ನು ಉಚಿತ ಕೃಷ್ಟಿವಿಧಾನದಿಂದಲೂ ಅನಂತಗುಣಹಾನಿರೂಪದಿಂದಲೂ ಹನ್ನೆರಡು ಸಂಗ್ರಹ ಕೃಷ್ಟಿಗಳನ್ನು ಮಾಡುತ್ತ ಅಂತರ್ಮುಹೂರ್ತಕಾಲದಲ್ಲಿ ಕೃಷ್ಟಿರೂಪಗತ ಚತುಷ್ಕಷಾಯಸಮಸ್ತಾನುಭಾಗನಾದನು. ಮತ್ತು ಸ್ವಲ್ಪವೇಗದಿಂದ ಅನುಕ್ರಮವಾಗಿ ಕ್ರೋಧ, ಮಾನ, ಮಾಯಾ, ಲೋಭ-ಸಂಜ್ವಲನಗಳನ್ನೂ, ಮೂರು ಬಗೆಯ ಕೃಷ್ಟಿಗಳನ್ನೂ ಬೇರೆ ಬೇರೆಯಾಗಿ ಕೆಡಿಸಿ, ಕಷಾಯತ್ರಿಕಕ್ಕೆ ನಿರ್ಮೂಲವಿನಾಶವನ್ನು ಮಾಡಿದನು. ಆಮೇಲೆ ಮತ್ತಷ್ಟು ವೇಗದಿಂದ ಲೋಭಸಂಜ್ವಲನದ ಮೊದಲ ಕೃಷ್ಟಿ ರೂಪಾನುಭಾಗವನ್ನು ಅನಂತಗುಣಹಾನಿರೂಪದಿಂದ ಕುಂದಿಸಿದನು. ಸೂಕ್ಷ್ಮಸಾಂಪರಾಯಸಮನ್ವಿತ ಸೂಕ್ಷ್ಮಸಾಂಪರಾಯಕ್ಷಪಕನಾಗಿ ಯಥೋಕ್ತಪರಿಣಾಮದಿಂದ ಸೂಕ್ಷ್ಮಸಾಂಪರಾಯಕೃಷ್ಟಿಗಳನ್ನು ಮಾಡುತ್ತಾ ಅಂತರ್ಮುಹೂರ್ತಕಾಲದಿಂದ ಬಾದರಲೋಭಸಂಜ್ವಲನವನ್ನು ಕೆಡಿಸಿಕೊಂಡನು. ಬಳಿಕ ವಿನಿವೃತ್ತ ಸಾಮಾಯಿಕಚ್ಛೇದೋಪಸ್ಥಾಪನಾಶುದ್ಧಿ ಸಂಯಮಾನುಗತಾನಿವೃತ್ತಿಗುಣಸ್ಥಾನನಾದನು' ಬಳಿಕ ಸಾಂಪರಾಯಸಂಯಮದಿಂದ ಕೂಡಿ ಸೂಕ್ಷ್ಮಸಾಂಪರಾಯಕ್ಷಪಕನಾಗಿ ಯಥೋಕ್ತ ಪರಿಣಾಮಕಾಲದಿಂದ ಸೂಕ್ಷ್ಮಸಾಂಪರಾಯಲೋಭವನ್ನು ಬುಡಸಹಿತ ನಾಶಗೊಳಿಸಿದನು. ಇಪ್ಪತ್ತೆಂಟು

ಧ್ಯಾನಪರಿಣತನಪರಿಮಿತಪ್ರದೇಶನಿರ್ಜರಾದಿ ಕ್ರಿಯಾಕಳಾಪಕಳಿತನುಚಿತಕತಿಪಯಸಮಯಂ ಗಳಿಸಾತ್ಮದ್ವಿಚರಮಸಮಯದೊಳ್ ನಿದ್ರಾಪ್ರಚಲೆಗಳಂ ಕಿಡಿಸಿ ಚರಮಸಮಯದೊಳ್ ಮತಿಶ್ರುತಾವಧಿ ಮನಃಪರ್ಯಯಕೇವಳಾವಬೋಧವಿಷಯಜ್ಞಾನಾವರಣಪಂಚಕಮುಮಂ ಚಕ್ಷುರಚಕ್ಷುರವಧಿಕೇವಲ ದರ್ಶನಾವರಣಚತುಷ್ಕಮುಮಂ ದಾನಲಾಭಭೋಗೋಪಭೋಗವೀರ್ಯಾಂತರಾಯಪಂಚಕಮುಮಂ ನಿರ್ಮೂಳಮಪ್ಪಂತೊರ್ಮೊದಲೆ ಕಿಡಿಸಿ ತದನಂತರಸಮಯದೊಳ್,

ಅಳಜಿ ಕಿಡೆ ಘಾತಿಗಳ್ ದಾ
ನಲಾಭಭೋಗೋಪಭೋಗವೀರ್ಯಂಗಳೊಳ
ಗ್ಗಳಿಸಿದನಂತಚತುಷ್ಟಯ
ವಿಳಾಸಿಕೈವಲ್ಯಲಕ್ಷ್ಮಿಯಂ ಯತಿ ಪಡೆದಂ ೧೫

ಅನತಿಶಯಕೇವಲಜ್ಞಾ
ನನಿರೀಕ್ಷಿತ ವಿಶ್ವನಾಥನಾದಿಜಿನಂ ಫಾ
ಲ್ಗುನಬಹುಳೈಕಾದಶಿಯೊಳ
ಮನಂತಸುಖನಿಳಯಮುತ್ತರಾಷಾಢದೊಳಂ ೧೬

ಮೋಹನೀಯಮಲಕಳಂಕಗಳನ್ನು ಕಳೆದುಕೊಂಡನು. ಬಳಿಕ ರಾಗದ್ವೇಷಭಾವನೆಗಳನ್ನು ಕಳೆದುಕೊಂಡು ಭಾವಿತ ಯಥಾಖ್ಯಾತಚರಿತ್ರನಾಗಿ ಕಷಾಯರಹಿತನಾಗಿ ವೀತರಾಗನಾಗಿ ಛದ್ಮಸ್ಥ ಗುಣಸ್ಥಾನಾನೇಕತ್ವ ವಿತರ್ಕ ವಿಚಾರಾಭಿಧಾನ ಧ್ಯಾನಪರಿಣತ ಪರಿಮಿತಪ್ರದೇಶ ನಿರ್ಜರಾದಿ ಕ್ರಿಯಾಕಲಾಪಯುಕ್ತನಾಗಿ, ಉಚಿತವಾದ ಕೆಲವು ಕಾಲಗಳಿಂದ ಆತ್ಮದ್ವಿಚರಮ ಸಮಯದಲ್ಲಿ ನಿದ್ರಾಪ್ರಚಲೆಗಳನ್ನು ಕೆಡಿಸಿಕೊಂಡನು. ಚರಮಸಮಯದಲ್ಲಿ ಮತಿ, ಶ್ರುತ, ಅವಧಿ, ಮನಃಪರ್ಯಯ, ಕೇವಲಾವಬೋಧವಿಷಯಕವಾದ ಜ್ಞಾನಾವರಣ ಪಂಚಕವನ್ನೂ ಚಕ್ಷು, ಅಚಕ್ಷು, ಅವಧಿ, ಕೇವಲ ಎಂಬ ದರ್ಶನಾವರಣಚತುಷ್ಕವನ್ನೂ ದಾನ, ಲಾಭ, ಭೋಗ, ಉಪಭೋಗ, ವೀರ್ಯಗಳೆಂಬ ಅಂತರಾಯಪಂಚಕವನ್ನೂ ಕೆಡಿಸಿದನು.[1] ಬಳಿಕ ೧೫. ಭಯಗೊಂಡು ಘಾತಿಕರ್ಮಗಳು ಅವನನ್ನು ಬಿಟ್ಟೋಡಿದುವು. ದಾನ, ಲಾಭ, ಭೋಗ, ಉಪಭೋಗ, ವೀರ್ಯಗಳಿಂದ ಅಗ್ಗಳಿಕೆಗೊಂಡ ಅನಂತಜ್ಞಾನ, ಅನಂತದರ್ಶನ, ಅನಂತಸುಖ ಮತ್ತು ಅನಂತವೀರ್ಯಗಳೆಂಬ ಚತುಷ್ಟಯದಲ್ಲಿ ವಿಲಾಸಿಯಾಗಿ ವೃಷಭಯತಿಪತಿಯು ಕೈವಲ್ಯಲಕ್ಷ್ಮಿಯನ್ನು ಪಡೆದನು. ೧೬. ಕೇವಲ ಜ್ಞಾನದಿಂದ ವಿಭೂಷಿತನೂ ವಿಶ್ವದೊಡೆಯನೂ ಆದ ಆದಿಜಿನನು ಫಾಲ್ಗುಣ ಬಹುಳ ಏಕಾದಶಿಯ ದಿನದಂದು ಉತ್ತರಾಷಾಡಾ ನಕ್ಷತ್ರದಲ್ಲಿ ಅನಂತಸುಖನಿಲಯನಾದನು.

---

1 ಈ ವಚನಭಾಗವು ಕೇವಲ ಜೈನಪರಿಭಾಷೆಗಳಿಂದ ತುಂಬಿದೆ. ಅತಿ ವಿಸ್ತರವಾದೀತೆಂದೂ ಕಾವ್ಯಾಭ್ಯಾಸಿಗಳಿಗೆ ಹೆಚ್ಚು ಉಪಯುಕ್ತವಾಗಲಾರದೆಂದೂ ಈ ಭಾಗವನ್ನು ಇಲ್ಲಿ ವಿವರಿಸಿಲ್ಲ.

26

ಧ್ಯಾನಮರೀಚಿಯಿಂ ಬೆದಱಿ ಘಾತಿತಮಸ್ತಮಮೆಯ್ದೆ ಭವ್ಯಸಂ
ತಾನಸರೋಜರಾಜಿಗಲರ್ಪಾದರಮಾದಮಳುಂಬಮಾಗೆ ವೈ
ಮಾನಿಕಚಕ್ರವಾಕದೊಲವುಣ್ಮಿರೆ ಚೆಲ್ವೆಸೆದತ್ತು ಕೇವಲ
ಜ್ಞಾನದಿನೇಶಬಿಂಬದ ಪೊದಟ್ಪುದಯಂ ವೃಷಭೋದಯಾದ್ರಿಯೊಳ್ ೧೭

ವ॥ ಆ ಪ್ರಸ್ತಾವದೊಳ್,

ಸುರಪುಷ್ಪಾಸಾರದಿಂದಂ ಸುರಗಣಪಟಹಪ್ರಸ್ಫುರದ್ಧ್ವಾನದಿಂದಂ
ಸುರಕಾಂತಾರಾಗದಿಂದಂ ಸುರವಿರಚಿತಮಂದಾನಿಳಾಂದೋಳದಿಂದಂ
ಸುರವಂದಿಸ್ತೋತ್ರದಿಂದಂ ದೆಸೆ ಗಗನತಳಂ ತೀವಿ ತಳ್ಳಂಕಗುಟ್ಟು
ತ್ತಿರೆಯುಂ ಕೈವಲ್ಯಬೋಧೋದಯಮಹಿಮೆ ಜಗಕ್ಕಾದುದಾಶ್ಚರ್ಯಭೂತಂ ೧೮

ವ॥ ಆಗಳಾದಿದೇವನ ಕೇವಲಜ್ಞಾನಸಂಪೂರ್ಣಚಂದ್ರೋದಯಜೃಂಭಿತ ಜಗತ್ರಯಾಂಭೋದಿವೇಳಾಪ್ರಧ್ವಾನಾನುಕಾರಿಘಂಟಾರವಕಂಠೀರವಾರಾವಪಟಹಪ್ರಣಾದಶಂಖನಿಸ್ವನಸಮುತ್ಪನ್ನಬೋಧಾನೇಕಯಾನವಿಮಾನಾರೂಢಕಲ್ಪಜಜ್ಯೋತಿಷ್ಕವಾಸ[1]ವ್ಯಂತರಭವನಾಮರನಿಕಾಯಪರಿವೇಷ್ಟಿತನ್, ಅಚಿರರುಚಿ ರುಚಿರನಿಜಾಂಗರುಚಿಗಳೊಳಂ ಅನೇಕಾಳಂಕಾರರತ್ನಪ್ರಭಾಪ್ರಸರದೊಳಂ ಗಗನತಳಮನಳಂಕರಿಸಿ ಸೌಧರ್ಮೇಂದ್ರನಿಂದ್ರಾಣೀಸಮೇತಮನೇಕಕಲ್ಪಾಮರೇಂದ್ರಪರಿವೃತನಾಗಿ ಬರೆ,

೧೭. ಧ್ಯಾನಮರೀಚಿಗಳಿಂದ ಘಾತಿಕರ್ಮಗಳೆಂಬ ಕತ್ತಲೆಯು ಬೆದರಿ ಅಸ್ತವಾಯಿತು. ಭವ್ಯರ ಸಂತಾನವೆಂಬ ಕಮಲರಾಶಿಗೆ ಅರಳುವ ಸೌಭಾಗ್ಯವೊದಗಿತು. ದೇವತೆಗಳೆಂಬ ಚಕ್ರವಾಕಗಳ ಒಲವು ಉಕ್ಕಿತು. ಕೇವಲಜ್ಞಾನವೆಂಬ ಸೂರ್ಯಬಿಂಬದ ಉದಯವು ವೃಷಭೋದಯಾದ್ರಿಯಲ್ಲಾಯಿತು. ವ॥ ಆ ಪ್ರಸ್ತಾವದಲ್ಲಿ ೧೮. ದೇವತೆಗಳು ಸುರಿದ ಹೂವಿನ ಮಳೆಗಳಿಂದಲೂ ದೇವತೆಗಳ ನಗಾರಿಧ್ವನಿಗಳಿಂದಲೂ ಸುರಕಾಂತೆಯರ ಸಂಪ್ರೀತಿಯಿಂದಲೂ ಸುರರು ನಿರ್ಮಿಸಿದ ಮಂದಾನಿಲಗಳಿಂದಲೂ ಸುರವಂದಿಮಾಗಧರ ಹೊಗಳಾಟದಿಂದಲೂ ದಿಕ್ಕುಗಳೂ ಆಕಾಶವೂ ವ್ಯಾಪ್ತವಾಗಿ ತಳಮಳಗೊಂಡವು. ಹೀಗೆ ಕೈವಲ್ಯಬೋಧೋದಯದ ಮಹಿಮೆಯು ಜಗದಾಶ್ಚರ್ಯಕರವಾಗಿದ್ದಿತು. ವ॥ ಆಗ ಆದಿದೇವನ ಕೇವಲಜ್ಞಾನವೆಂಬ ಪೂರ್ಣಚಂದ್ರೋದಯದಿಂದ ಜಗತ್ತ್ರಯವೆಂಬ ಸಮುದ್ರತಟದ ಅಬ್ಬರವು ವಿಜೃಂಭಿಸಿತು. ಅದನ್ನು ಅನುಕರಿಸುತ್ತಾ ಘಂಟಾರವ, ಸಿಂಹಧ್ವನಿ, ಪಟಹಧ್ವನಿಗಳಿಂದಲೂ ಶಂಖಸ್ವನದಿಂದಲೂ ಬೋಧವಡೆದು, ಅನೇಕ ಬಗೆಯ ಯಾನಗಳನ್ನೂ ವಿಮಾನಗಳನ್ನೂ ಹತ್ತಿಕೊಂಡು ಹೊರಟ ಕಲ್ಪಜರಿಂದಲೂ ಜ್ಯೋತಿಷ್ಕ, ವೈಮಾನಿಕ, ವ್ಯಂತರ, ಭವನಾಮರರ ಸಮೂಹದಿಂದಲೂ ಸುತ್ತುವರೆಯಲ್ಪಟ್ಟವನಾಗಿ ವಿದ್ಯುತ್ತಿನ ಕಾಂತಿಯಂತೆ ಸುಂದರವಾದ ದೇಹಕಾಂತಿಗಳಿಂದಲೂ ಒಡವೆಗಳಲ್ಲಿನ ರತ್ನಪ್ರಭೆಗಳ ಹಾರಾಟದಿಂದಲೂ ಗಗನತಲವನ್ನಲಂಕರಿಸಿ ಸೌಧರ್ಮೇಂದ್ರನು ಶಚೀ

೧ ವೈಮಾನಿಕ ಎಂದು ಶುದ್ಧಪಾಠವಿರಬಹುದು.

ಹಾರಾಂಶುಸ್ವಚ್ಛನೀರಂ ಸುರಯುವತಿಮುಖಾಂಭೋಜನೇತ್ರೋತ್ಪಳಶ್ರೀ
ಸಾರಂ ಕಾಶ್ಮೀರರಾಗಾರುಣಿತಕುಚರಥಾಂಗಾಭಿಧಾನೋಜ್ವಳಂ ನೀ
ಹಾರಪ್ರಸ್ಪರ್ಧಿಚಂಚಚ್ಚಮರಜಕಳಹಂಸಾಸ್ಪದಂ ಚೆಲ್ವನಿತ್ತ
ತ್ತೋರಂತಂಭೋದಮಾರ್ಗಂ ತಿಳಿದ ಕೊಳದವೊಲ್ ದೇವಸಂದೋಹದಿಂದಂ ೧೯

ಸುರಕುಸುಮದ ಪೊಸವಾಸಿಗ
ಮೆರಡುಂ ಕರತಳದೊಳೆಸೆದು ತನ್ನಯ ತೋಳೊಳ್
ದೊರೆಯೆನೆ ಬಂದತ್ತು ಸೊಯಂ
ಬರಕ್ಕೆ ಬರ್ಪಂತು ದೇವಗಣಿಕಾನಿಕರಂ ೨೦

ಯುಗಪದ್ವಾದಿತದೇವದುಂದುಭಿಗಳಿಂದಾಯ್ತೆಯ್ದೆ ಶಬ್ದಾತ್ಮಕಂ
ಜಗಮುತ್ತುಂಗಕಿರೀಟರಶ್ಮಿರಚಿತನೇಕೇಂದ್ರಚಾಪಂಗಳಿಂ
ಗಗನಂ ತಿಂತಿಣಿಯಾದುದಾಗಳನಿತುಂ ದಿಗ್ಭಿತ್ತಿಗಳ್ ಚಿತ್ರಭಿ
ತ್ತಿಗಳಂತಾದುವು ಕಲ್ಪಜಾಮರತನುಚ್ಛಾಯಾವಿಳಾಸಂಗಳಿಂ ೨೧

ಜಯ ಜಯ ನಂದ ನಂದ ಪರಮೇಶ್ವರ ಪಾಪವಿನಾಶಲೋಕವಿ
ಸ್ಮಯಕರ ಶಂಭು ಶಂಕರ ಮನೋಜಭಯಂಕರ ಭವ್ಯಬಂಧು ನಿ
ಮ್ಮಯ ದಯೆಯಿಂದಮೀ ಭವಸಮುದ್ರಮನೀಸುವೆವೆಂಬ ದೇವಕೋ
ಟಿಯ ನಿನದಂ ಪಳಂಚಲೆಯೆ ಘೂರ್ಣಿಸಿದತ್ತು ಸಮಸ್ತದಿಕ್ತಟಂ ೨೨

ವ॥ ಅಂತು ಸೌಧರ್ಮೇಂದ್ರಂ ಬಂದು ತನ್ನ ಬೆಸದೊಳ್ ಮುನ್ನಮೆ ಧನದವಿನಿರ್ಮಿತ

ಸಮೇತನಾಗಿ ಕಲ್ಪಾಮರೇಂದ್ರರೊಡನೆ ಬಂದನು. ೧೯. ಅಂಭೋದಮಾರ್ಗವು (ಆಕಾಶ) ದೇವತೆಗಳ ಗುಂಪಿನಿಂದ ತಿಳಿಗೊಳದಂತೆ ಸುಂದರವಾಗಿ ಕಾಣಿಸಿತು. ಹಾರದ ಕಾಂತಿಗಳೇ ಅದರ ಸ್ವಚ್ಛವಾದ ನೀರು. ಕುಂಕುಮರಾಗದಿಂದ ಕೆಂಪಾದ ಕುಚಗಳೆಂಬ ಚಕ್ರವಾಕಗಳಿಂದ ಉಜ್ವಲವಾದದ್ದು. ಅದು ಹಿಮವನ್ನು ಹೋಲುವ ಚಾಮರಗಳೆಂಬ ಕಲಹಂಸಗಳಿಗೆ ಆಶ್ರಯವಾದುದು. ೨೦. ದೇವಗಣಿಕೆಯರ ಸಮೂಹವು ಕಲ್ಪವೃಕ್ಷಪುಷ್ಪಗಳಿಂದ ವಿರಚಿತವಾದ ಹೊಸಬಾಸಿಂಗವನ್ನು ಎರಡೂ ಕೈಗಳಲ್ಲಿ ಹಿಡಿದುಕೊಂಡು ಸ್ವಯಂವರಕ್ಕೆ ಬರುವಂತೆ ಬಂದಿತು. ಆ ಬಾಸಿಂಗವು ಅವರ ತೋಳಿಗೆ ಸದೃಶವಾಗಿ ಕಾಣಿಸುತ್ತಿತ್ತು. ೨೧. ಒಟ್ಟಿಗೆ ಬಾರಿಸಿದ ದೇವದುಂದುಭಿಗಳಿಂದ ಜಗತ್ತು ಶಬ್ದಾತ್ಮಕವಾಯಿತು. ಉನ್ನತವಾದ ಕಿರೀಟಗಳ ಕಿರಣಗಳಿಂದುಂಟಾದ ಅನೇಕ ಕಾಮನಬಿಲ್ಲುಗಳಿಂದ ಗಗನವು ತುಂಬಿ ಹೋಯಿತು. ಕಲ್ಪಜಾಮರರ ದೇಹಚ್ಛಾಯಾವಿಲಾಸಗಳಿಂದ ದಿಗ್ಭಿತ್ತಿಗಳು ಚಿತ್ರಭಿತ್ತಿಗಳಂತಾದುವು. ೨೨. "ನಂದ ನಂದ, ನಿನಗೆ ಜಯವಾಗಲಿ! ನೀನು ಪರಮೇಶ್ವರ. ಪಾಪವಿನಾಶಕ, ಲೋಕಾಶ್ಚರ್ಯಕರ, ಶಂಕರ, ಮನ್ಮಥಭಯಂಕರ, ಭವ್ಯಬಂಧು. ನಿನ್ನ ದಯೆಯಿಂದ ಭವಸಮುದ್ರವನ್ನು ದಾಟುವೆವು" ಎಂಬ ದೇವಕೋಟಿಯ ನಿನದವು ಸಮಸ್ತ ದಿಕ್ತಟವನ್ನು ಮುಟ್ಟಿ ಘೂರ್ಣಿಸಿತು. ವ॥ ಸೌಧರ್ಮೇಂದ್ರನು ತನ್ನ ಆಜ್ಞೆಯಿಂದ ಕುಬೇರನು

ಮಾಗಿರ್ದ ಸಮವಸರಣಮಂ ಕಂಡು, ಅದು ಭೂಭಾಗದಿಂದಮೈಸಾಸಿರದಂಡಂ ಮೇಗೆ ನೆಗೆದಲ್ಲಿ ಪನ್ನೆರಡು ಯೋಜನಸಮವೃತ್ತಮುಂ ಏಕೇಂದ್ರನೀಲಶಿಲಾತಲಘಟಿತಮಸೃಣತಳಮುಂ ದಿಕ್ಚತುಷ್ಟಯ ವ್ಯವಸ್ಥಿತ ದೇವಮಾನವತಿರ್ಯಗ್ವಿನೇಯಜನಸುಖಾರೋಹಣಹೇತುಭೂತಾಪಾದಲೇಪೌಷಧಿಶಕ್ತಿ ಯುಕ್ತಮಣಿಮಯವಿಂಶತಿಸಹಸ್ರಸೋಪಾನವಿರಾಜಿತಮುಂ ಭುವನತ್ರಯಲಕ್ಷ್ಮೀಲಪನ ವಿಳೋಕನಮಂಗಳದರ್ಪಣಾಯಮಾನಮುಮಪ್ಪ ಭೂಮಿಭಾಗದ ಪರ್ಯಂತಪ್ರದೇಶಮನಳಂಕರಿಸಿ ಚಂಚತ್ಪಂಚರತ್ನಪಾಂಶುಮಯಮಾಗಿ,

ವಳಯಾಕೃತಿಯಿಂದಿದನೇಂ
ಬಳಸಿದುದೊ ಸುರೇಂದ್ರಚಾಪಮಂಡಳಮೆನೆ ಬ
ಕ್ಕಳಬಳೆದ ಪಂಚರತ್ನದ
ಬೆಳಗಿಂದಂ ಬೆಳಪುದಲ್ಲಿ ಧೂಳೀಸಾಳಂ ೨೩.

ವ|| ಅದಱ ನಾಲ್ಕುದೆಸೆಯೊಳಂ ಮಕರತೋರಣಾಳಂಕೃತಜ್ಯೋತಿರಮರದೌವಾರಿಕಪರಿಪಾಳಿತ ಬಹಿರಂತರ್ಜಗತೀದ್ವಯನಿಹಿತಪ್ರತ್ಯೇಕಾಷ್ಟೋತ್ತರಶತಾಷ್ಟಮಂಗಳನವನಿಧಿಸಮನ್ವಿತಜಾತರೂಪ ಗೋಪುರಾಭ್ಯಂತರಮಹಾವೀಧೀಮಧ್ಯದೊಳ್ ದ್ವಾದಶಗೋಪುರವಿರಾಜಿತಸಾಲತ್ರಯಪರೀತಕುಂಡದ್ವಯ ಸಮೇತನಂದನಾದಿಷೋಡಶಸರೋವರಪರಿವೇಷ್ಟಿತದಿಕ್ಚತುಷ್ಟಯವ್ಯವಸ್ಥಿತತಪನೀಯ ಷೋಡಶ ಸೋಪಾನೋಪಶೋಭಿತಜಗತೀತಳಮಧ್ಯದೊಳ್ ಅನುಕ್ರಮದೊಳೆಂಟುನಾಲ್ಕುನಾಲ್ಕುಂ ಬಿಲ್ನಿಡಿಯಾಗಿ ವೈಡೂರ್ಯ ಹೇಮಪಂಚರತ್ನಂಗಳಪ್ಪ ಮೂಱು ಪೀಠಂಗಳ ಮೇಗೆ ಚತುರಶ್ರಾಘೋಭಾಗಪರಿವೃತ್ತಾಗ್ರ

ನಿರ್ಮಿಸಿದ 'ಸಮವಸರಣ ಭೂಮಿ'ಯನ್ನು ಕಂಡನು. ಅದು ಭೂಭಾಗದಿಂದ ಐದುಸಾವಿರ ದಂಡದಷ್ಟು ಮೇಲ್ಭಾಗದಲ್ಲಿದ್ದಿತು. ಅದು ಹನ್ನೆರಡು ಯೋಜನದಷ್ಟು 'ಸಮವೃತ್ತ'ವಾಗಿಯೂ ಇಂದ್ರನೀಲಮಯವಾದ ಒಂದೇ ಕಲ್ಲುಚಪ್ಪಡಿಯಿಂದ ನಿರ್ಮಿತವಾದ ತಳದಿಂದ ಕೂಡಿಯೂ ಇದ್ದಿತು. ನಾಲ್ಕುದಿಕ್ಕುಗಳಲ್ಲಿಯೂ ದೇವಮಾನವರಿಗೂ ಪಶುಪ್ರಾಣಿಗಳಿಗೂ ವಿಧೇಯಜನರಿಗೂ ಸುಖವಾಗಿ ಹತ್ತಲು ಕಾರಣವೂ ಪಾದಲೇಪೌಷಧಿ ಶಕ್ತಿಯುಕ್ತವೂ ಮಣಿಮಯವೂ ಆದ ಇಪ್ಪತ್ತು ಸಹಸ್ರ ಮೆಟ್ಟಿಲುಗಳಿಂದಲಂಕೃತವೂ ಆಗಿತ್ತು. ಮೂರುಲೋಕದ ಲಕ್ಷ್ಮಿಗೆ ಮುಖವನ್ನು ನೋಡಲು ಮಂಗಲದರ್ಪಣವೋ ಎಂಬಂತಿತ್ತು. ಅದರ ಪರ್ಯಂತಪ್ರದೇಶವನ್ನು ಅಲಂಕರಿಸಿ ಚಲಿಸುವ ಪಂಚರತ್ನಗಳ ಧೂಳುಗಳಿಂದ ತುಂಬಿ, ೨೩. ಕಾಮನ ಬಿಲ್ಲಿನ ಮಂಡಲವು ವಲಯಾಕೃತಿಯಿಂದ ಬಳಸಿದೆಯೋ ಎಂಬಂತೆ ವಿಶೇಷವಾಗಿ ಬಳೆದ ಪಂಚರತ್ನದ ಬೆಳಗಿನಿಂದ ಧೂಳೀಸಾಲವು[1] ಬೆಳಗುತ್ತಿತ್ತು. ವ|| ಅದರ ನಾಲ್ಕು ದಿಕ್ಕುಗಳಲ್ಲಿ ಮಕರತೋರಣಗಳಿಂದ ಅಲಂಕೃತವೂ ಜ್ಯೋತಿರ್ದೇವತೆಗಳೆಂಬ ದ್ವಾರಪಾಲರಿಂದ ರಕ್ಷಿತವಾದ ಹೊರ ಒಳಗಿನ ಎರಡು ಜಗುಲಿಗಳಲ್ಲಿ ಇಡಲ್ಪಟ್ಟ ಪ್ರತ್ಯೇಕವಾಗಿ ಅಷ್ಟಮಂಗಲ ನವನಿಧಿಗಳಿಂದ ಯುಕ್ತವಾದ ನೂರೆಂಟು ಸುವರ್ಣಮಯಗೋಪುರಗಳು ಇದ್ದುವು. ಅವುಗಳೊಳಗಿನ ಮಹಾವೀಥಿಗಳ ಮಧ್ಯದಲ್ಲಿ ಹನ್ನೆರಡು ಗೋಪುರಗಳಿಂದ ವಿರಾಜಿತವೂ ಮೂರು ಕೋಟೆಗಳಿಂದಲೂ

1 ಧೂಳೀಸಾಲ = ರತ್ನಧೂಳೀಮಯವಾದ ಕೋಟೆ.

ಭಾಗಾಧ್ಯಾಸಿತಹಿರಣ್ಮಯಜಿನಬಿಂಬಕದಂಬಂಗಳುಂ ಪರಿಲಂಬಿತಹೇಮಘಂಟಾಕಿಂಕಿಣೀ ಚಾಮರ ಧ್ವಜಂಗಳುಮಾಗೆ,

ಮಾನಮನೆಂತುಂ ಮಿಥ್ಯಾ
ಜ್ಞಾನಿಗಳೆರ್ದೆಯೊಳಗೆ ನೆಲಸಲೀಯದೆ ನಾಲ್ಕುಂ
ಮಾನಸ್ತಂಭಗಳ್ ರ
ತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ ೨೪

ಮಾನಸ್ತಂಭದಿನಂತಾ
ಮಾನಸ್ತಂಭಂಬರಂ ಸುಧಾಹರ್ಮ್ಯಚಯಂ
ತಾನಯ್ದಯ್ದುವಱಿಡೆಯೊಳ್
ತಾನೊಂದೊಂದರ್ಹದಾಲಯಂ ಸೊಗಯಿಸುಗುಂ ೨೫

ವ|| ಅಂತು ಹರ್ಮ್ಯಚೈತ್ಯಾಲಯಾವನಿಯೆಂಬುದು, ಅದಱ ವಿಸ್ತಾರಮರ್ಧಯೋಜನಂ, ಅಲ್ಲಿಂದತ್ತ ಪೂರ್ವೋಕ್ತವರ್ಣನೋಪೇತವಿವಿಧಮಣಿಖಚಿತರಜತಮಯಚತುರ್ಗೋಪುರ ದ್ವಾರವಿರಾಜಮಾನ ಕನಕವೇದಿಕಾವೃತೋಭಯತಟಘಟಿತಮಣಿಮಯಸೋಪಾನಭಾಸಮಾನ ಮುಮರ್ಧಯೋಜನವಿಸ್ತಾರಮುಮಾಗಿ,

ಬಳಸಿ ಜಳವಿಹಗಜಳಚರ
ಜಳಜೋತ್ಪಳಕಳಿತಮಮಳಜಳಜಳಕೇಲೀ
ವಿಳಸನವಿದಗ್ಧಖೇಚರ
ನಿಳಿಂಪದಂಪತಿಯಿನಂಬುಖಾತಿಕೆ ರಯ್ಯಂ ೨೬

ಎರಡು ಕಂದಕಗಳಿಂದಲೂ ಯುಕ್ತವೂ ಆದ ನಂದನಾದಿ ಹದಿನಾರು ಸೋಪಾನಗಳಿಂದ ಶೋಭಿತವಾದ ಜಗತೀತಲಮಧ್ಯದಲ್ಲಿ ಕ್ರಮವಾಗಿ ಎಂಟು, ನಾಲ್ಕು ಮತ್ತು ನಾಲ್ಕು ಬಿಲ್ಲಿನಷ್ಟು ಉದ್ದವಾಗಿ ವೈಡೂರ್ಯ ಹೇಮಪಂಚರತ್ನಮಯವಾದ ಅಧೋಭಾಗವು ಚಚ್ಚೌಕವಾಗಿಯೂ, ಅಗ್ರಭಾಗವು ಗುಂಡಾಗಿಯೂ ಇರುವ ಮೂರುಪೀಠಗಳ ಮೇಲೆ ಮಂಡಿತವಾದ ಸುವರ್ಣಮಯವಾದ ಜಿನಬಿಂಬಗಳ ಸಮೂಹವು ಜೋತುಬಿದ್ದ ಚಿನ್ನದ ಘಂಟೆಗಳಿಂದಲೂ ಕಿರುಗೆಜ್ಜೆಗಳಿಂದಲೂ ಚಾಮರಗಳಿಂದಲೂ ಧ್ವಜಗಳಿಂದಲೂ ಕೂಡಿದ್ದುವು. ೨೪. ಮಿಥ್ಯಾಜ್ಞಾನಿಗಳ ಎದೆಯಲ್ಲಿ ಅಹಂಕಾರವನ್ನೆಂತೂ ನೆಲಸಲಿಕ್ಕೆ ಅವಕಾಶವೀಯದೆಯೆ ನಾಲ್ಕು ಮಾನಸ್ತಂಭಗಳು ರತ್ನಗಳಿಂದ ಮೆಟ್ಟಿದುವಾಗಿ ಸದಾ ಶೋಭಿಸುತ್ತಿದ್ದುವು. ೨೫. ಮಾನಸ್ತಂಭದಿಂದ ಮತ್ತೊಂದು ಮಾನಸ್ತಂಭದವರೆಗೆ ಐದೈದು ಸುಧಾಪ್ರಾಸಾದಗಳಿದ್ದುವು. ಅವುಗಳ ಬಳಿ ಒಂದೊಂದು ಜಿನಾಲಯವಿತ್ತು. ವ|| ಹಾಗೆ ಹರ್ಮ್ಯಚೈತ್ಯಾಲಯಾವನಿ ಇದ್ದಿತು. ಅದರ ವಿಸ್ತಾರವು ಅರ್ಧಯೋಜನ. ಅಲ್ಲಿಂದ ಮೇಲೆ ಪೂರ್ವೋಕ್ತವರ್ಣನಾವಿಶಿಷ್ಟವೂ ವಿವಿಧ ಮಣಿಖಚಿತವೂ ರಜತಮಯ ಚತುರ್ಗೋಪುರ ದ್ವಾರಯುಕ್ತವೂ ಆದ ಸುವರ್ಣವೇದಿಕೆಗಳೂ, ಎರಡೂ ದಡಗಳಲ್ಲಿ ಮಣಿಗಳಿಂದ ಮೆಟ್ಟಿದ ಸೋಪಾನಗಳೂ ಇದ್ದುವು. ಅಲ್ಲಿ ಅರ್ಧಯೋಜನ ವಿಸ್ತಾರವಾದ, ೨೬. ಜಲಪಕ್ಷಿಗಳೂ ಜಲಚರಗಳೂ ಕಮಲೋತ್ಪಲಗಳೂ ಇವುಗಳಿಂದ ಕೂಡಿದ ತಿಳಿನೀರಿನಲ್ಲಿ

ವ॥ ಅಂತಲ್ಲಿಂದತ್ತ ವಿಚಿತ್ರರತ್ನರಚಿತಜ್ಯೋತಿಷ್ಕದೌವಾರಿಕಾಷ್ಟಮಂಗಳನವನಿಧಿಸನಾಥಜಗತೀಸಮನ್ವಿತತಾರಮಯಚತುರ್ಗೋಪುರವಿಭ್ರಾಜಿತ ಹಿರಣ್ಮಯವೇದಿಕಾವಳಯಿತಮುಂ ಅಶೋಕಲತಿಕಾಪ್ರತಾನನವಮಾಲಿಕಾವಲ್ಲರೀಸಮುಲ್ಲಾಸಮಾನಮಾಳತೀವ್ರತತಿವಿತಾನಚೂತವಲ್ಲೀವೇಲ್ಲನನಿಸರ್ಗಸೌಂದರಕ್ರೀಡಾಚಳಕೇಳೀಸಮಭಿರಾಮಮುಮಾಗಿ,

॥ಪೃಥ್ವೀ॥

ಭ್ರಮದ್ಭ್ರಮರಸಂಕುಲಂ ಕುರುಳ ಬಂಬಲಂ ಪುಷ್ಪವಿ
ಭ್ರಮಂ ನಯನಲೀಲೆಯಂ ಕುಡಿಯ ನೀಳ್ಪು ತೋಳ್ಪೊಂಗಲಂ
ದಮಂ ನೆಱೆಯೆ ಭಂಗಿ ಭಂಗಿಯನೆ ಪೋಲ್ವ ದೇವೀವಿಳಾ
ಸಮಂ ನಿಜವಿಳಾಸದಿಂ ನಗುವುವಲ್ಲಿ ವಲ್ಲೀವನಂ ೨೭

ಅದಱಗಲಮೊಂದುಯೋಜನ
ಮದಱಿಂದತ್ತಣದು ನಿಷಧಗಿರಿನಿಭಮೆಸದಿ
ರ್ದುದು ಬಳಸಿ ಕನಕಶಾಳಂ
ಮೃದುಪವನವಿಲೋಲಕೇತುಮಾಲಾಲಲಿತಂ ೨೮

ವ॥ ಅದಱ ನಾಲ್ಕುಂ ದೆಸೆಯೊಳಂ ರಜತಮಯಗೋಪುರಚತುಷ್ಟಯಂ ನೆಲಸಿರ್ದುದು.

ಅದು ದೌವಾರಿಕಯಕ್ಷಾ
ಸ್ಪದಮಂತದಱೆರಡು ಕೆಲದೊಳೆರಡೆರಡು ಪೊದ
ಱೊದವಿದ ಸುರಸಂಗೀತಕ
ಸದನಂಗಳ್ ದೇವನರ್ತಕೀಶುಭದಂಗಳ್ ೨೯

ಜಲಕೇಳಿಯಾಡುತ್ತಿರುವ ಖೇಚರರಾದ ದೇವದಂಪತಿಗಳಿಂದ ಯುಕ್ತವೂ ಆದ ನೀರುದುಂಬಿದ ಕಂದಕವು ರಮ್ಯವಾಗಿತ್ತು. ವ॥ ಅಲ್ಲಿಂದತ್ತ ವಿಚಿತ್ರ ರತ್ನಗಳಿಂದ ನಿರ್ಮಿತವೂ ಜ್ಯೋತಿಷ್ಕರಾದ ದೌವಾರಿಕರು, ಅಷ್ಟಮಂಗಳ, ನವನಿಧಿಗಳಿಂದ ಮಂಡಿತವೂ ಆದ ಭೂತಳದಿಂದ ಕೂಡಿದ, ಬೆಳ್ಳಿಯ ನಾಲ್ಕು ಗೋಪುರಗಳಿಂದ ಪ್ರಕಾಶಿತವಾದ, ಚಿನ್ನದ ವೇದಿಕೆಗಳಿಂದ ಸುತ್ತುವರೆಯಲ್ಪಟ್ಟ, ಅಶೋಕಲತೆಯ ಸಮೂಹ, ನವಮಾಲಿಕೆಯ ಬಳ್ಳಿಯ ಸಮುಲ್ಲಾಸದಿಂದ ಕೂಡಿದ ಮಾಲತೀಲತಾವಿತಾನ, ಮಾವಿನ ಬಳ್ಳಿಯ ಚೆಲ್ಲಾಟ ಇವುಗಳಿಂದ ಯುಕ್ತವೂ ನಿಸರ್ಗಸುಂದರವೂ ಆದ ಕ್ರೀಡಾಚಲದ ಕೇಳಿಯಿಂದ ಅಭಿರಾಮವಾಗಿ ಲತಾವನವಿತ್ತು. ೨೭. ಹಾರಾಡುವ ದುಂಬಿಗಳ ಗುಂಪು ಅಪ್ಸರೆಯರ ಕೇಶಸಮೂಹವನ್ನೂ ಪುಷ್ಪಗಳ ವಿಭ್ರಮವು ಕಣ್ಣುಗಳ ಲೀಲೆಯನ್ನೂ ಕುಡಿಗಳ ನೀಳ್ಪು ತೋಳುಗಳಂದವನ್ನೂ ಬಳುಕು ಹಾವಭಾವಗಳನ್ನೂ ಹೋಲಲು, ಆ ಲತಾವನವು ತನ್ನ ವಿಲಾಸದಿಂದ ಅಪ್ಸರೆಯರ ವಿಲಾಸವನ್ನು ನೋಡಿ ನಗುವುದು! ೨೮. ಅದರ ಅಗಲ ಒಂದು ಯೋಜನ. ಅದರಿಂದಾಚೆಗೆ ನಿಷಧಗಿರಿಗೆ ಸಮಾನವಾದ ಚಿನ್ನದ ಕೋಟೆ(ಕನಕಶಾಲ)ಯು ಬಳಸಿ ನಿಂತಿದೆ. ಅದರ ಪತಾಕೆಗಳು ಸಾಲಾಗಿ ಮಂದಮಾರುತಕ್ಕೆ ಚಲಿಸುತ್ತಿವೆ. ವ॥ ಅದರ ನಾಲ್ಕು ದಿಕ್ಕುಗಳಲ್ಲಿ ಬೆಳ್ಳಿಯ ಗೋಪುರಗಳು ನೆಲಸಿವೆ. ೨೯. ಅದು ದ್ವಾರಪಾಲಕರಾದ ಯಕ್ಷರಿಗೆ ಆಶ್ರಯವಾದುದು. ಅದರ ಎರಡೂ

ಅವಱ ಕೆಲಂಬಿಡಿದೊಂದೊಂ
ದವಿರಳನವಧೂಪಧೂಮಧೂಸರಿತನಭೋ
ವಿವರಂ ವಿವಿಧಮಣಿಪ್ರಕ
ರವಿರಾಜಿತಧೂಪಧೂಮಘಟಮೆಸೆದಿರ್ಕುಂ ೩೦

ನೆಗೆದಗರುಧೂಪಧೂಮದ
ಮಗಮಗಿಪಮರಿಯರ ಸುಯ್ಯ ಪರಿಮಳದ ಪೊದ
ಱ್ಕೆಗೆ ಸೋಲ್ತು ಸೂೞ ಸೂೞದೆ
ಮೊಗಸಿದುವೆರಡೆಡೆಗಮಲಸದಳಿಗಳ ಬಳಗಂ ೩೧

ವ॥ ಅಂತು ನಾಲ್ಕುಂ ದೆಸೆಯ ವೀಧಿಗಳೊಳಿರ್ದ ನಾಲ್ಕುಂ ಗೋಪುರಂಗಳಿಂದಂ ಪದಿನಾಱುಂ ನಾಟಕಶಾಲೆಗಳಿಂದಂ ಪದಿನಾಱುಂ ಧೂಪಘಟಂಗಳಿಂದಮೊಪ್ಪಿ ತತ್ಕನಕಶಾಲಾಭ್ಯಂತರದೊಳ್ ತ್ರಿಶಾಲ ತ್ರಿಪೀಠೋಪಸ್ಥಿತಾರ್ಹತ್ಪ್ರತಿಮೋಪೇತಚೈತ್ಯದ್ರುಮೋಪೇತಾಭಿರಾಮಮಧ್ಯಪ್ರದೇಶಾಶೋಕ ಸಪ್ತಚ್ಛದ ಚಂಪಕಚೂತಪಾದಪೋಪಶೋಭಿತಮುಮೇಕಯೋಜನಪ್ರಮಾಣವಿಸ್ತಾರಮುಮಾಗಿ,

ಕುಚಭರಚಳಿತಕೃಶೋದರ
ಖಚರೀಸಂಚರಣರಣಿತನೂಪುರರಶನಾ
ಪ್ರಚುರರವಹನರುಚಿರ
ಪ್ರಚುರಂ ಮೃದುಪವನಮುಪವನಂ ಸೊಗಯಿಸುಗುಂ ೩೨

ವ॥ ಅಲ್ಲಿಂದತ್ತ ವನವನಿತೆಯ ಕನಕಕಾಂಚೀಕಳಾಪಮನನುಕರಿಸಿ ರತ್ನಾಭರಣತೋರಣ

ಪಕ್ಕಗಳಲ್ಲಿಯೂ ಎರಡೆರಡು ವಿಸ್ತಾರವಾದ ದೇವನರ್ತಕಿಯರಿಗೆ ಶುಭದಗಳಾದ ಸುರಸಂಗೀತ ಭವನಗಳುಂಟು. ೩೦. ಅವೆರಡರ ಪಕ್ಕಗಳಲ್ಲಿ ಧೂಪದ ಹೊಗೆಯಿಂದ ಕಪ್ಪುಗಟ್ಟಿದ ನಭೋರಂಧ್ರವುಳ್ಳ ಬಗೆಬಗೆಯ ಮಣಿಸಮೂಹಗಳಿಂದ ವಿರಾಜಿತವಾದ "ಧೂಪಧೂಮ"ದ ಘಟವಿದೆ. ೩೧. ಮೇಲಕ್ಕೆದ್ದ ಅಗರುಧೂಪದ ಹೊಗೆಯ ಸುವಾಸನೆಗೂ ಮಗಮಗಿಪ ಅಮರಸ್ತ್ರೀಯರ ಉಸಿರ ಪರಿಮಳಕ್ಕೂ ಸೋತು ಮತ್ತೆ ಮತ್ತೆ ದುಂಬಿವಿಂಡು ಎರಡೆಡೆಗೂ ಅಲಸದೆ ಮುಸುರುತ್ತಿದ್ದವು. ವ॥ ನಾಲ್ಕು ದಿಕ್ಕುಗಳ ನಾಲ್ಕು ಬೀದಿಗಳಲ್ಲಿರುವ ನಾಲ್ಕು ಗೋಪುರಗಳಿಂದಲೂ ಹದಿನಾರು ನಾಟಕ ಶಾಲೆಗಳಿಂದಲೂ ಹದಿನಾರು ಧೂಪಘಟಗಳಿಂದಲೂ ಆ ಸುವರ್ಣಮಂದಿರದೊಳಗೆ ತ್ರಿಶಾಲ ತ್ರಿಪೀಠಗಳಲ್ಲಿ ಮಂಡಿತವಾದ ಅರ್ಹತ್ಪ್ರತಿಮೆಗಳಿಂದಲೂ ಚೈತ್ಯವೃಕ್ಷಗಳಿಂದಲೂ ಯುಕ್ತವಾಗಿ, ಮಧ್ಯಪ್ರದೇಶದಲ್ಲಿನ ಅಶೋಕ, ಏಳೆಲೆಬಾಳೆ, ಸಂಪಿಗೆ, ಮಾವುಗಳಿಂದ ಕೂಡಿ ಒಂದು ಯೋಜನ ಪ್ರಮಾಣದಷ್ಟು ವಿಸ್ತಾರವುಳ್ಳುದಾಗಿ ಒಂದು ಉಪವನವಿತ್ತು. ೩೨. ಸ್ತನಭಾರದಿಂದ ಬಗ್ಗಿದವರೂ ಕೃಶೋದರಿಯರೂ ಆದ ಖಚರೀಜನರು ಸಂಚರಿಸು ವಾಗುಂಟಾದ ಕಾಲಂದುಗೆಗಳ ಧ್ವನಿಗಳಿಂದಲೂ ಒಡ್ಯಾಣಗಳ ಧ್ವನಿಗಳಿಂದಲೂ ಯುಕ್ತವಾಗಿ ಸುಂದರವೂ ಆಗಿ ಮೃದುಪವನಶೋಭಿತವಾದ ಆ ಉಪವನವು ಸೊಗಯಿಸುತ್ತಿದೆ. ವ॥ ಅಲ್ಲಿಂದತ್ತ ವನಸ್ತ್ರೀಯ ಚೆನ್ನದ ಒಡ್ಯಾಣವನ್ನನುಕರಿಸಿ ರತ್ನಾಭರಣ, ತೋರಣ,

ಘಂಟಾಜಾಲಮುಕ್ತಾಲಂಬನಪುಷ್ಪದಾಮಾಷ್ಟಮಂಗಳನವನಿಧಿಪ್ರಧಾನಂಗಳುಂ ಯಕ್ಷದೌವಾರಿಕಾಧಿಷ್ಠಿತಂಗಳಪ್ಪ ನಾಲ್ಕುಂ ರಜತಗೋಪುರಂಗಳನೊಳಕೊಂಡ ಕಳಧೌತವೇದಿಕಾಭ್ಯಂತರದೊಳ್ ಮಣಿಪೀಠದ ಮೇಗಣ ಸುವರ್ಣಸ್ತಂಭಾಗ್ರಂಗಳೊಳ್,

ಗಜವೃಷಭಾಂಕುಶಚಕ್ರಾಂ
ಬುಜಹಂಸಮಯೂರಮತ್ಸ್ಯಫಣಿವೈರಿಮತಂ
ಗಜರಿಪುಚಿಹ್ನವಿಶಾಲ
ಧ್ವಜಂಗಳಿಂ ಧ್ವಜಮಹೀತಳಂ ಸೊಗಯಿಸುಗುಂ ೩೩

ವ|| ಅಂತು ನಾಲ್ಕುಂದೆಸೆಯೊಳಂಬುಧಿವೀಚೀಚಯವಿಳಾಸಮನಿಟಿಪಿ ಮಿಳಿರ್ವ ನಾಲ್ಕಾಸಿರದ ಮೂನೂಱಿರ್ಪತ್ತು ಮಹಾಧ್ವಜಂಗಳಿಂದಂ, ನಾಲ್ವತ್ತಾರು ಲಕ್ಕೆಯುಮಱುವತ್ತೈಸಾಸಿರದ ಅಱುನೂಱು ಪರಿವಾರಧ್ವಜಂಗಳಿಂದಮೆಸೆವ ಪತಾಕಾವನಿತಳಮೊಂದುಯೋಜನಂ, ಅಲ್ಲಿಂದತ್ತಮಷ್ಟಮಂಗಳ ನವನಿಧಿಸಮೇತಂಗಳುಂ ನಾಟ್ಯಶಾಲಾದುಂದುಭಿಧೂಪಘಂಟಾದ್ವಂದ್ವಾಭಿರಾಮಂಗಳುಂ ನಾಗಕುಮಾರದ್ವಾರಪಾಳಕವಿರಾಜಿತಂಗಳುಮಪ್ಪ ಬೆಳ್ಳಿಯ ನಾಲ್ಕುಂ ಗೋಪುರಂಗಳಿಂದಮೊಪ್ಪಿ ವಳಯಾಕೃತಿಯಾಗಿ ಬಳಸಿದ ಮಾನುಷೋತ್ತರಪರ್ವತಮನಿಟಿಸುವ ಜಾತರೂಪಮಯವಿಶಾಲ ವಳಯದೊಳಗೆ ಪರಭಾಗಂಬಡೆದು ಚೈತ್ಯವೃಕ್ಷಪರಿಕಲಿತಚತುರ್ದಿಗವಸ್ಥಿತಸಿದ್ಧಪ್ರತಿಮಾವಭಾಸಿ ಸಿದ್ಧಾರ್ಥವೃಕ್ಷಪರಿಭ್ರಾಜಿತಮಪ್ಪ ಮಧ್ಯಪ್ರದೇಶಮುಮೇಕಯೋಜನವಿಷ್ಕಂಭಮುಮಾಗಿ,

ಗಂಟೆಗಳ ಸಮೂಹ, ಮುತ್ತಿನ ಹಾರ, ಹೂಮಾಲೆ, ಅಷ್ಟಮಂಗಲ, ನವನಿಧಿಗಳಿಂದ ಕೂಡಿದ, ಯಕ್ಷದೌವಾರಿಕರ ಹತೋಟಿಗೊಳಪಟ್ಟ, ನಾಲ್ಕು ಬೆಳ್ಳಿಯ ಗೋಪುರಗಳನ್ನೊಳಕೊಂಡ ಸುವರ್ಣವೇದಿಕಾವಿಶಿಷ್ಟವಾದ ಒಳಗಿನ ಬೀದಿಯ ಮಧ್ಯದಲ್ಲಿ ಮಣಿಪೀಠದ ಮೇಲಿನ ಸುವರ್ಣಸ್ತಂಭಗಳ ತುದಿಯಲ್ಲಿ ೩೩. ಆನೆ, ಎತ್ತು, ಅಂಕುಶ, ಚಕ್ರ, ಕಮಲ, ಹಂಸ, ನವಿಲು, ಮೀನು, ಗರುಡ ಮತ್ತು ಸಿಂಹಗಳ ಚಿಹ್ನೆಗಳಿಂದ ಕೂಡಿದ ಧ್ವಜಗಳಿಂದ 'ಧ್ವಜಮಹೀತಲ'ವು ಶೋಭಿಸುತ್ತಿದ್ದಿತು. ವ|| ಅಂತು ನಾಲ್ಕು ದಿಕ್ಕುಗಳಲ್ಲಿಯೂ ಸಮುದ್ರದ ಅಲೆಗಳ ವಿಲಾಸಗಳನ್ನು ಮೆಟ್ಟಿ ಹಾರಾಡುವ ನಾಲ್ಕು ಸಾವಿರದ ಮುನ್ನೂರಿಪ್ಪತ್ತು (೪೩೨೦) ಮಹಾಧ್ವಜಗಳಿಂದಲೂ ನಲವತ್ತಾರು ಲಕ್ಷದ ಅರವತ್ತೈದು ಸಾವಿರದ ಆರುನೂರು (೪೬,೬೫,೬೦೦) ಪರಿವಾರಧ್ವಜಗಳಿಂದಲೂ ಹೊಳೆವ "ಪತಾಕಾವನಿತಲ"ವು ಒಂದು ಯೋಜನದಗಲದಲ್ಲಿದ್ದಿತು. ಅಲ್ಲಿಂದತ್ತ ಅಷ್ಟಮಂಗಲ ನವನಿಧಿಗಳಿಂದ ಕೂಡಿದ, ನಾಟಗೃಹಧೂಪ ಘಟಗಳೆರಡರಿಂದ ರಮ್ಯವಾದ, ನಾಗಕುಮಾರ ದ್ವಾರಪಾಲಕರಿಂದ ಶೋಭಿತವಾದ, ಬೆಳ್ಳಿಯ ನಾಲ್ಕು ಗೋಪುರಗಳಿಂದ ವಿಜೃಂಭಿಸುತ್ತಿರುವ, ವಲಯಾಕೃತಿಯಿಂದ ಬಳಸಿರುವ, ಮಾನುಷೋತ್ತರಪರ್ವತವನ್ನು ಜರಿಯುವ, ಅರ್ಜುನವೃಕ್ಷಗಳಿಂದ ತುಂಬಿದ ವಿಶಾಲವಲಯದೊಳಗೆ ಶೋಭಾತಿಶಯವಡೆದಿರುವ, ಚೈತ್ಯವೃಕ್ಷ ಗಳಿಂದಲಂಕೃತವಾದ ನಾಲ್ಕು ದಿಕ್ಕುಗಳಲ್ಲಿನ ಸಿದ್ಧಪ್ರತಿಮೆಗಳಿಂದ ಕೂಡಿದ, ಸಿದ್ಧಾರ್ಥ ವೃಕ್ಷಗಳಿಂದ ಪ್ರಕಾಶಿತವಾದ ಮಧ್ಯಪ್ರದೇಶವು ಒಂದು ಯೋಜನದಷ್ಟು ವಿಸ್ತಾರವಾಗಿತ್ತು.

ದೇವೋತ್ತರಕುರುಗಳೆ ನಾ
ನಾವಿಧಕಲ್ಪಾಂಘ್ರಿಪಂಗಳಿಂದಂ ಪತಿಯಂ
ತೀವಿ ಬಳಸಿರ್ದುವೆನೆ ಕ
ಲ್ಪಾವನಿರುಹಭೂಮಿಭಾಗಮತಿರಮಣೀಯಂ ೩೪

ವII ಅಲ್ಲಿಂದತ್ತ ಕಾರ್ತಸ್ವರವೇದಿಕಾವಿಭೂಷಣಂಗಳುಂ ನಾಗದೌವಾರಿಕಾಭಿರಾಮಂಗಳುಂ ಅಷ್ಟಮಂಗಳನವನಿಧಿವಿಳಸಿತಂಗಳುಮಪ್ಪ ರಜತಮಯಚತುರ್ಗೋಪುರಂಗಳೊಳಗೆ ನಾಲ್ಕುಂ ಮಹಾವೀಧಿ ಮಧ್ಯಂಗಳೊಳ್ ರತ್ನತೋರಣಶತಾಂತರಿತಂಗಳುಂ ಜಿನೇಂದ್ರರುಂದ್ರಸಿದ್ಧಾಭ್ಯರ್ಚಿತಂಗಳುಂ ಕದಳಿಕಾತಪತ್ರಚಾಮರಕನಕಘಂಟಾಕಿಂಕಿಣೀಮನೋಹರಂಗಳುಮಪ್ಪ ಒಂಭತ್ತು[೧] ಸ್ತೂಪಂಗಳುಮವರ್ದಿಂತ ತದ್ವೇದಿಕಾವಳಯಾಂತರದೊಳರ್ಧಯೋಜನವಿಸ್ತಾರಮಾಗಿ,

ಭಾಸುರತೇಜೋಭಾಸಿ ಸು
ರಾಸುರಗಂಧರ್ವಕಿನ್ನರೋರಗಖಚರಾ
ಧ್ಯಾಸಿತವಿಚಿತ್ರರತ್ನ
ಪ್ರಾಸಾದಪರೀತಭೂತಳಂ ಕಮನೀಯಂ ೩೫

ವII ಅಲ್ಲಿಂದತ್ತ ಗದಾದಿಹಸ್ತಕಲ್ಪಜದೌವಾರಿಕಾಧಿಷ್ಠಿತ ನವನಿಧಿಮಂಗಳಾಳಂಕೃತೇಂದ್ರ ನೀಲಗೋಪುರಚತುಷ್ಟಯವಿರಾಜಮಾನಗಗನಸ್ಫಟಿಕ ಪ್ರಾಕಾರವೇದಿಕಾಕುಡ್ಯದ್ವಯೋಪಶೋಭಿತಮುಂ ಜಗತ್ತ್ರಯಶ್ರೀನಿವಾಸಮುಮಾಕಾಶಸ್ಫಟಿಕಮಯಮುಮೇಕಗವ್ಯೂತಿವಿಸ್ತಾರಮುಮಾಗಿ ಶ್ರೀಮಂಟಪ ಮಿರ್ದುದು. ಅದಱೊಳಗೆ ಧೂಳಿಸಾಳದಿಂದಂ ಪ್ರಥಮಪೀಠಂಬರಂ ಮಹಾಮಾರ್ಗೋಭಯ

೩೪. ದೇವೋತ್ತರ ಕುರುಗಳು ನಾನಾಬಗೆಯ ಕಲ್ಪವೃಕ್ಷಗಳಿಂದ ಒಡೆಯನನ್ನು ತುಂಬಿ ಬಳಸಿರುವುವೋ ಎನ್ನುವಂತೆ ಕಲ್ಪವೃಕ್ಷಯುಕ್ತವಾದ ಭೂಭಾಗವು ಅತಿರಮ್ಯವಾಗಿತ್ತು. ವII ಅಲ್ಲಿಂದ ಮುಂದೆ ಚಿನ್ನದ ಜಗುಲಿಗಳಿಂದಲಂಕೃತವಾದ, ನಾಗದೌವಾರಿಕರಿಂದ ಸುಂದರವಾದ, ಅಷ್ಟಮಂಗಲ ನವನಿಧಿಗಳಿಂದ ಯುಕ್ತವಾದ, ಬೆಳ್ಳಿಯ ನಾಲ್ಕು ಗೋಪುರಗಳೊಳಗಿನ ನಾಲ್ಕು ಹಿರಿಬೀದಿಗಳ ಮಧ್ಯದಲ್ಲಿ ನೂರು ರತ್ನತೋರಣಗಳಿಂದ ವ್ಯವಹಿತವಾದ ಜಿನೇಂದ್ರರಿಂದಲೂ ಸಿದ್ಧರಿಂದಲೂ ಅರ್ಚಿತವಾದ ಪತಾಕೆ, ಛತ್ರ, ಚಾಮರ, ಚಿನ್ನದ ಬಿಂದಿಗೆ ಮತ್ತು ಗೆಜ್ಜೆಗಳಿಂದ ಸುಂದರವಾದ ಒಂಬತ್ತು ಎತ್ತರವಾದ ಸ್ತೂಪಗಳಿದ್ದುವು. ಆ ಬೀದಿಗಳ ಮಧ್ಯದಲ್ಲಿ ಅರ್ಧಯೋಜನ ವಿಸ್ತಾರವಾದ ಭೂತಲವಿತ್ತು. ೩೫. ಭಾಸುರವಾದ ತೇಜಸ್ಸಿನಿಂದ ಪ್ರಕಾಶಮಾನವಾಗಿ ಸುರ, ಅಸುರ, ಗಂಧರ್ವ, ಕಿನ್ನರ, ಸರ್ಪ ಮತ್ತು ಖಚರರಿಂದ ವಾಸಮಾಡಲ್ಪಟ್ಟುದಾಗಿ ವಿಚಿತ್ರ ರತ್ನಪ್ರಾಸಾದಗಳಿಂದ ಮಂಡಿತವಾಗಿ ಆ ಭೂತಲವು ಕಮನೀಯವಾಗಿತ್ತು. ವII ಅಲ್ಲಿಂದತ್ತ ಗದಾದಿಧಾರಿಗಳಾದ ಕಲ್ಪಜ ದೌವಾರಿಕರಿಂದ ಆಶ್ರಿತವಾದ, ನವನಿಧಿ ಮಂಗಲಗಳಿಂದ ವಿಭೂಷಿತವೂ ನಾಲ್ಕು ಇಂದ್ರನೀಲ ಗೋಪುರಗಳಿಂದ ವಿರಾಜಿತವೂ ಆಗಿರುವ ಗಗನಸ್ಫಟಿಕ ಪ್ರಾಕಾರವೇದಿಕೆ

೧ ಒಂಭತ್ತೊಂಭತ್ತು (ಅನ್ಯತ್ರ)

ಭಾಗಂಗಳೊಳ್ ನೀಳ್ದ ನಿರ್ಮಲಸ್ಫಟಿಕಮಯಭಿತ್ತಿಗಳೆಂಟುಂಬೆರಸು ಪದಿನಾಱುಂ ಭಿತ್ತಿಗಳೊಳ್ ನಾಲ್ಕುಂ ವೀಧಿಗಳುಟೆಯೆ ನೆಗಟ್ದಾ ಪನ್ನೆರಡುಂ ಕೋಷ್ಠಂಗಳೊಳ್,

ಮುನಿನಾಥರ್ ಕಲ್ಪಕಾಂತಾಜನತತಿ ಗಣಿನೀಶ್ರಾವಿಕಾಸಂಕುಳಂ ಭ
ಕ್ತಿನಮಜ್ಜ್ಯೋತಿಷ್ಕದೇವೀಪ್ರತತಿ ವನವಧೂವ್ರಾತಮೌತ್ಸುಕ್ಯವದ್ಭಾ
ವನಭಾಮಾರಾಜಿ ತದ್ಭಾವನಸುರರಖಿಳವ್ಯಂತರಜ್ಯೋತಿರಿಂದ್ರರ್
ವಿನಮತ್ಕಲ್ಪಾಮರೇಂದ್ರರ್ ಮನುಜಸಮಿತಿ ಸಿಂಹಾದಿತಿರ್ಯಕ್ಸಮೂಹಂ ೩೬

ವ॥ ಎಂಬ ದ್ವಾದಶಗಣಂಗಳಿರ್ಕುಂ ಅಲ್ಲಿಂದತ್ತ ಕ್ರಮದೊಳೆ ವೈಡೂರ್ಯಹೇಮಸರ್ವ ರತ್ನಮಯಂಗಳುಮಷ್ಟಚತುಷ್ಟಯಚತುರ್ದಂಡೋತ್ಸೇಧಂಗಳುಂ ಪಂಚಾಶದಧಿಕಸಪ್ತಶತಧನುರ್ವ್ಯಾಪ್ತಂಗಳು ಮೇಕಚಾಪೋತ್ಸೇಧ ಚಿತ್ರಧರ್ಮಚಕ್ರಧರಯಕ್ಷಾಧಿಷ್ಠಿತಂಗಳುಮಪ್ಪ ಮಹಾಧ್ವಜಂಗಳುಮಷ್ಟಮಂಗಳ ದ್ರವ್ಯಸಂಪನ್ನಂಗಳುಮಪ್ಪ ಪ್ರಥಮದ್ವಿತೀಯತೃತೀಯಪೀಠಂಗಳಿಂದಂ ಮೇಗೆ ಷಡ್ದಂಡಶತವಿಸ್ತಾರಾ ಯಾಮದೊಳಂ ನವದಂಡಶತೋತ್ಸೇಧದೊಳಂ ನೆಱೆದು,

ಸುರಭಿಸುರಕುಸುಮಕಾಳಾ
ಗರುಧೂಪೋದ್ದಾಮಗಂಧಮಂ ಜಿನತನುಬಂ
ಧುರಗಂಧಮೆ ಗೆಲ್ದಿರೆ ನಿ
ರ್ಭರಗಂಧಂ ಗಂಧಕುಟಿ ಕರಂ ಸೊಗಯಿಸುಗುಂ ೩೭

ಮತ್ತು ಗೋಡೆಗಳೆರಡರಿಂದ ಶೋಭಿತವಾದ, ಮೂರುಜಗತ್ತಿಗೂ ಲಕ್ಷ್ಮೀನಿವಾಸಸ್ಥಾನವಾದ ಆಕಾಶ ಸ್ಫಟಿಕಮಯವೂ ಒಂದು ಗವ್ಯೂತಿ ವಿಸ್ತಾರವೂ ಆಗಿ ಶ್ರೀಮಂಡಪವಿದ್ದಿತು, ಅದರಲ್ಲಿ ಧೂಳೀಸಾಲದಿಂದ ಪ್ರಥಮಪೀಠದವರೆಗೆ ಮಹಾಮಾರ್ಗದ ಎರಡೂ ಭಾಗಗಳಲ್ಲಿ ಉದ್ದವೂ ಶುದ್ಧಸ್ಫಟಿಕಮಯವೂ ಆದ ಗೋಡೆಗಳೆಂಟರಿಂದ ಕೂಡಿ ಆದ ಒಟ್ಟು ಹದಿನಾರು ಗೋಡೆಗಳಲ್ಲಿ ನಾಲ್ಕು ಬೀದಿಗಳುಳಿಯಲು ಪ್ರಸಿದ್ಧವಾದ ಹನ್ನೆರಡು ವಿಭಾಗಗಳಲ್ಲಿ ೩೬. ಮನಿನಾಥರಾದ ಗಣಧರರೂ ಕಲ್ಪಕಾಂತೆಯರೂ ಮುಖ್ಯಆರ್ಯಿಕೆ ಮತ್ತು ಶ್ರಾವಿಕೆಯರ ಸಮೂಹವೂ ಭಕ್ತಿಭರದಿಂದೆರಗುತ್ತಿರುವ ಜ್ಯೋತಿಷ್ಕದೇವಿಯರ ಸಮೂಹವೂ ವ್ಯಂತರದೇವಸ್ತ್ರೀಯರ ಗುಂಪೂ ಔತ್ಸುಕ್ಯಶಾಲಿಗಳಾದ ಭವನವಾಸಿದೇವಿಯರ ತಂಡವೂ ಭವನವಾಸಿಗಳಾದ ಸುರರೂ ವ್ಯಂತರ ಜ್ಯೋತಿರಿಂದ್ರರೂ ಎರಗುತ್ತಿದ್ದ ಕಲ್ಪಾಮರೇಂದ್ರರೂ ಮನುಷ್ಯರ ಗುಂಪೂ ಸಿಂಹಾದಿತಿರ್ಯಗ್ಜಂತುಗಳೂ ವ॥ ಎಂಬ ಹನ್ನೆರಡು ಗಣಗಳಿದ್ದುವು. ಅದರಿಂದ ಮುಂದೆ ಅನುಕ್ರಮವಾಗಿ ವೈಡೂರ್ಯಮಯ, ಹೇಮಮಯ, ಸರ್ವರತ್ನಮಯಗಳಾದ ಮೂರು ಪೀಠಗಳು ಕ್ರಮವಾಗಿ ಎಂಟು, ನಾಲ್ಕು, ನಾಲ್ಕು ದಂಡಗಳಷ್ಟು ಉನ್ನತವೂ ಏಳುನೂರೈವತ್ತು ಧನುಸ್ಸುಗಳಷ್ಟು ಅಗಲವುಳ್ಳವೂ ಆಗಿದ್ದುವು. ಒಂದು ಧನುಸ್ಸಿನಷ್ಟು ಉನ್ನತವಾದ ಧರ್ಮಚಕ್ರಗಳನ್ನು ಹಿಡಿದ ಯಕ್ಷದೇವತೆಗಳು ಅಲ್ಲಿದ್ದರು. ಆ ಪೀಠಗಳು ಮಹಾಧ್ವಜ(ಯುಕ್ತ)ವಾಗಿದ್ದವು. ಒಂದೊಂದು ಪೀಠದಲ್ಲಿಯೂ ಅಷ್ಟಮಂಗಳದ್ರವ್ಯಗಳಿದ್ದುವು. ಈ ಪ್ರಥಮ, ದ್ವಿತೀಯ, ತೃತೀಯ ಪೀಠಗಳಿಂದಲೂ ಮೇಲೆ ಆರುನೂರು ದಂಡದಷ್ಟು ಅಗಲ ಉದ್ದಗಳುಳ್ಳ ಮತ್ತು ಒಂಬೈನೂರು ದಂಡ ಉನ್ನತಿಯುಳ್ಳ ಗಂಧಕುಟಿಯಿದ್ದಿತು. ೩೭. ಸುವಾಸನೆಯ ಸುರಕುಸುಮ ಮತ್ತು ಕಾಲಾಗರುಧೂಪಗಳ ಮಹಾಗಂಧವನ್ನು ಜಿನೇಶ್ವರನ ದೇಹದ ಸುಗಂಧವೇ ಗೆದ್ದಿತು.

ಆ ಗಂಧಕುಟಿಯ ಮಧ್ಯಮ
ಭಾಗದೊಳೆಸೆದತ್ತು ಮೇರುಶಿಖರೋಪಮಮು
ದ್ರಾಗಮಣಿಕಿರಣಕೃತಪರ
ಭಾಗಂ ಪ್ರಜ್ವಳಿತಸಕಳಗಗನಾಭೋಗಂ ೩೮

ಕೇಸರಿಗಣವಿಧೃತಂ ಸಿಂ
ಹಾಸನಮದನಲ್ಲಿ ನಾಲ್ವೆರಲ್ಮುಟ್ಟದೆ ದೇ
ವಾಸುರಮಕುಟಮಣಿದ್ಯುತಿ
ಭಾಸುರಚರಣಾರವಿಂದನಾದಿಜಿನೇಂದ್ರಂ ೩೯

ಇರೆ ಭಾಮಂಡಲದೀಪ್ತಿಯ
ಪರೆಪುಂ ಛತ್ರತ್ರಯಪ್ರಭಾಪರಿಕರಮುಂ
ಪರೆದು ದಿವಾಕರಹಿಮಕರ
ಕರನಿಕರಪ್ರಚುರರುಚಿಗಳಂ ಮಸುಳಿಸುಗುಂ ೪೦

ಚಾರುವಿಟಪಾವಳೀವೃತ
ಕೋರಕಿತಾಂಕುರಿತ ಪಲ್ಲವಿತ ಮುಕುಳಿತ ವಿ
ಸ್ತಾರಿತರಮ್ಯಾಶೋಕಮ
ಹೀರುಹಮುಮನಭವನಂಗರುಚಿ ಪುದಿದಿರ್ಕುಂ ೪೧

ಸುರಪುಷ್ಪವೃಷ್ಟಿ ಮೊಬಗುವ
ಸುರದುಂದುಭಿ ನಭದೊಳೆಸೆಯೆ ಯಕ್ಷಕುಮಾರರ್
ನೆರೆದಿಕ್ಕೆ ಚತುಷ್ಷಷ್ಟಿ ಚ
ಮರರುಹದ ಪೊದಟ್ಟಿ ಪೊಳೆಪು ದೆಸೆಗೆದೆಸೆದಿರ್ಕುಂ ೪೨

ಅದರಿಂದಾಗಿ ನಿರ್ಭರ ಗಂಧವುಳ್ಳ ಗಂಧಕುಟಿಯು[1] ಮೆರೆಯಿತು. ೩೮. ಆ ಗಂಧಕುಟಿಯ ನಡುವೆ ಮೇರುಶಿಖರೋಪಮವಾಗಿ, ಕಾಂತಿಯನ್ನು ಬೀರುವ ಮಣಿಕಿರಣಗಳಿಂದಲೇ ನಿರ್ಮಿತವಾದಂತಿರುವ, ಸಕಲ ಗಗನ ಭೂಭಾಗವನ್ನು ಪ್ರಜ್ವಲಗೊಳಿಸುತ್ತಿರುವ ಸಿಂಹಾಸನವಿದ್ದಿತು. ೩೯. ಆ ಸಿಂಹಾಸನವನ್ನು ಸಿಂಹಗಳು ಹೊತ್ತಿದ್ದವು. ಆದಿಜಿನೇಂದ್ರನಾದ ವೃಷಭನಾಥನು ದೇವಾಸುರ ಕಿರೀಟಮಣಿಭಾಸಿತ ಚರಣಾರವಿಂದನಾಗಿ ಆ ಸಿಂಹಾಸನದ ನಡುವೆ ಅದನ್ನು ಮುಟ್ಟದಂತೆ ನಾಲ್ಕು ಅಂಗುಲದಷ್ಟು ಮೇಲೆ ಕುಳಿತಿದ್ದನು. ೪೦. ಜಿನೇಶ್ವರನ ಕಾಂತಿಯ ವಿಸ್ತಾರವೂ ಛತ್ರತ್ರಯಗಳ ಪ್ರಭಾಪರಿಕರವೂ ವ್ಯಾಪಿಸಿಕೊಂಡು ಕ್ರಮವಾಗಿ ಸೂರ್ಯಚಂದ್ರರ ಕಿರಣಗಳ ಕಾಂತಿಯನ್ನು ಕುಂದಿಸಿದುವು. ೪೧. ರಮ್ಯವಾದ ವೃಕ್ಷಗಳಿಂದ ಸುತ್ತುವರೆಯಲ್ಪಟ್ಟು ಮೊಗ್ಗುದುಂಬಿದ ಮೊಳಕೆವಡೆದು ಚಿಗುರಿದ ಬಿರಿಮುಗುಳುಗಳಿಂದ ತುಂಬಿದ ಸುಂದರವಾದ ಅಶೋಕವೃಕ್ಷವನ್ನು ಆದಿಜಿನನ ಅಂಗಕಾಂತಿಯು ವ್ಯಾಪಿಸಿತ್ತು. ೪೨. ಸುರರು ಸುರಿದ ಪುಷ್ಪವೃಷ್ಟಿಯೂ ಸುರದುಂದುಭಿಗಳ ಧ್ವನಿಯೂ ಆಕಾಶದಲ್ಲೆಸೆದುವು. ಯಕ್ಷಕುಮಾರರು ಅರವತ್ನಾಲ್ಕು ಚಾಮರಗಳನ್ನು ಬೀಸಿದರು. ಆಗ ಅದರ ಹೊಳಪು

---

1 ಗಂಧಕುಟಿಯನ್ನು ಕುಬೇರನು ರಚಿಸಿದ್ದನು (ಪೂ. ಪು. ೨೩-೧೭)

ವ|| ಮತ್ತಂ ಘಾತಿಗಳ ಕೇಡಿನೊಳ್ ಗವ್ಯೂತಿಶತಚತುಷ್ಟಯ ಸುಭಿಕ್ಷತೆ ಮೊದಲಾಗೆ,

ಮಿತನಖಕೇಶಶೋಭಿತತನುತ್ವಮಭುಕ್ತ್ಯುಪಸರ್ಗಭಾವಮ
ನ್ವಿತಚತುರಾನನತ್ವಮಖಿಳಾಗಮವಿತ್ವಮಪಕ್ಷ್ಮತಾ ಸಮಾ
ಯತಗಗನಪ್ರಚಾರಮಪಜೀವವಧಂ ಪರಿವೀತದೇಹಬಿಂ
ಬತೆವೆರಸಿಂತು ಪತ್ತತಿಶಯಂಗಳಿವೇಂ ಜಿನನೊಳ್ ಪೊದಟ್ದುವೋ ೪೩

ವರವಸತಿ ಚೈತ್ಯಕುಜಗೋ
ಪುರಮಾನಸ್ತಂಭಹರ್ಮ್ಯಸಿದ್ಧಾರ್ಥಕುಜೋ
ತ್ಕರಮಂಟಪಕೇಳೀ ಭೂ
ಧರತುಂಗಸ್ತೂಪಕೇತನಸ್ತಂಭಂಗಳ್ ೪೪

ಜಿನತನುವಿಂ ದ್ವಾದಶಗುಣ
ಮೆನಿಕುಂ ಪ್ರಾಕಾರವೇದಿಕಾನಿಕರಮದೀ
ಶನ ತನುಗೆ ಚತುರ್ಗುಣಮಂ
ತನಿತುಂ ತೋರಣಮುಮದಱನಿನಿಸಭ್ಯುದಯಂ ೪೫

ವ|| ಇಂತು ಧನದಂ ಸಮೆದ ಸಮವಸರಣಮಂ ಕ್ರಮಕ್ರಮದೊಳೆ ನೋಡುತ್ತುಂ ಬಂದು ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಸರ್ವಾಂಗಪ್ರಣತನಾಗಿ,

ಎಲ್ಲ ದಿಕ್ಕುಗಳಲ್ಲಿಯೂ ಪ್ರಕಾಶಿಸಿತು. ವ|| ಆಗ ಘಾತಿಕರ್ಮಗಳೆಲ್ಲವೂ ನಾಶ ಹೊಂದಿದುದರಿಂದ ನಾನೂರು ಗವ್ಯೂತಿಗಳವರೆಗೆ ಸುಭಿಕ್ಷತೆಯುಂಟಾಯಿತು. ಅದೂ ಸೇರಿ ೪೩. ಪರಿಮಿತವಾದ ಪ್ರಮಾಣವುಳ್ಳ ಉಗುರು ಮತ್ತು ಕೂದಲು ಇವುಗಳಿಂದ ಕೂಡಿದ ಶರೀರವಿರುವುದು (೨) ಭೋಜನಾಭಾವ (೩) ದೇಹಕ್ಕೆ ಯಾವ ವಿಧವಾದ ಉಪಸರ್ಗವೂ (ಪೀಡೆಯೂ) ಆಗದಿರುವುದು (೪) ನಾಲ್ಕು ಮುಖಗಳಿಂದ ಕೂಡಿರುವುದು (೫) ಸರ್ವಶಾಸ್ತ್ರಜ್ಞತೆ (೬) ರೆಪ್ಪೆಯಾಡದಿರುವುದು ಅನಿಮಿಷಭಾವ (೭) ಆಕಾಶಸಂಚರಣ (೮) ಪ್ರಾಣಿಹಿಂಸಾಭಾವ (೯) ದೇಹಕ್ಕೆ ನೆರಳು ಇಲ್ಲದಿರುವಿಕೆ (೧೦)-ಈ ಹತ್ತು ಅತಿಶಯಗಳು ಆ ಜಿನೇಶ್ವರದಲ್ಲಿ ಪ್ರಕಾಶಿಸಿದವು.[1] ೪೪. ಶ್ರೇಷ್ಠವಾದ ಗೃಹ, ಚೈತ್ಯವೃಕ್ಷ, ಗೋಪುರ, ಮಾನಸ್ತಂಭ, ಪ್ರಾಸಾದ, ಸಿದ್ಧಾರ್ಥವೃಕ್ಷ, ಮಂಟಪ, ಕ್ರೀಡಾಪರ್ವತ, ಸ್ತೂಪ, ಧ್ವಜಸ್ತಂಭ ಇವುಗಳು ೪೫. ಆದಿತೀರ್ಥಂಕರನ ದೇಹಕ್ಕಿಂತ ಹನ್ನೆರಡರಷ್ಟು ಎತ್ತರವಾಗಿದ್ದವು. ಪ್ರಾಕಾರ, ವೇದಿಕೆಗಳು ಅವನ ದೇಹಕ್ಕಿಂತ ನಾಲ್ಕರಷ್ಟು ಎತ್ತರವಾಗಿದ್ದವು. ಎಲ್ಲ ತೋರಣಗಳೂ ಅದಕ್ಕಿಂತ ಸ್ವಲ್ಪ ಹೆಚ್ಚು ಎತ್ತರವಾಗಿದ್ದವು. ವ|| ಹೀಗೆ ಕುಬೇರನು ನಿರ್ಮಿಸಿದ 'ಸಮವಸರಣ'ವನ್ನು ಕ್ರಮಕ್ರಮವಾಗಿ ನೋಡುತ್ತಾ 'ಗಂಧಕುಟಿ'ಯನ್ನು ಮೂರುಬಾರಿ ಪ್ರದಕ್ಷಿಣೆ ಮಾಡಿ ದೇವೇಂದ್ರನು ಸಾಷ್ಟಾಂಗಪ್ರಣಾಮ ಮಾಡಿದನು.

---

1 ಈ ಪದ್ಯದಲ್ಲಿ ೯ ಅತಿಶಯಗಳನ್ನು ಹೇಳಿದೆ. ಹಿಂದಿನ ಗದ್ಯದಲ್ಲಿ ಹೇಳಿದ 'ಸುಭಿಕ್ಷತೆ'ಯೂ ಸೇರಿ ೧೦ ಅತಿಶಯಗಳು.

ಇನಿತೆಂದಿನ್ನಿವಿವೆಂದುಮೀವಿಧದವೆಂದಾರ್ಬಣ್ಣಿಸಲ್ಬಲ್ಲರೆಂ
ಬಿನಗಂ ನಿರ್ಭರಭಕ್ತಿ ತಮ್ಮ ಮನದೊಳ್ ಕೈಗಣ್ಮೆ ಕೈಮ್ಮೆಯೊಳಿಂ
ದ್ರನುಮಿಂದ್ರಾಣಿಯುಮಿಂದ್ರವೃಂದಸಹಿತಂ ದೇವೇಂದ್ರಲೋಕಂಗಳ
ರ್ಚನೆಯಿಂದರ್ಚಿಸಿದರ್ ಜಿನೇಂದ್ರಪದಪೀಠೋಪಾಂತಭೂಪ್ರಾಂತಮುಂ ೪೬

ಬೆಳಗೀ ಕರ್ಪೂರಪಾಳೀಚಯದ ಸೊಡರ್ಗಳಂ ನೀಡು ಮಂದಾರಮಾಲಾ
ವಳಿಯಂ ಕಟ್ಟೆಯ್ದೆ ದಿವ್ಯಾಂಬರರಚಿತವಿತಾನಂಗಳಂ ನೇಱು ಮುಕ್ತಾ
ಫಳಲಂಬೂಷಂಗಳಂ ಬಿತ್ತರಿಸನವರತಂ ರಂಗದೊಳ್ ಪಂಚರತ್ನಂ
ಗಳನೆಂದಿಂದ್ರರ್ಕಳಂತಃಪುರದ ಕಳಕಳಂ ರಮ್ಯಮಾಯ್ತತ್ತಮಿತ್ತಂ ೪೭

ವ|| ಅಂತರ್ಚಿಸಿ ಕರ್ಮಾರಿವಿಜಯಾನಂತಚತುಷ್ಟಯಪ್ರಾಪ್ತಿವಾಕ್ಪೂಜಾಸ್ಥಾಯಿಕಾ ವಿಹಾರಶರೀರಪ್ರಕೃತಿಗಳೆಂಬೆಂಟುಮತಿಶಯಂಗಳನತಿಶಯಭಕ್ತಿಯಿಂ ಸ್ತುತಿಯಿಸಿ, ನಿಜೋಚಿತಸ್ಥಾನದೊಳ್ಕುಳ್ಳಿರ್ದಾದಿತೀರ್ಥಕರರನೋಲಗಿಸುತಿರ್ಪನ್ನೆಗಂ, ಪುರಿಮತಾಳಪುರಾಧೀಶ್ವರಂ ಭರತಮಹೀಶನಿಂ ನೇರ್ಗಿಱಿಯಂ ವೃಷಭಸೇನಕುಮಾರಂ ನಾನಾವಿಧಾರ್ಚನಾಮಂಗಳದ್ರವ್ಯಹಸ್ತಂ ಸಮಸ್ತಪರಿಜನಪರಿವೃತಂ ಬಂದು ವೃಷಭೇಶ್ವರನ ಶ್ರೀಮುಖಮಂ ಕಾಣಲೊಡಂ ಆಸನ್ನಭವ್ಯತಾಪ್ರೇರಿತನಾಗಿ,

ಭಗವದರುಹನ ಸಮಕ್ಷದೊ
ಳಗಣ್ಯಪುಣ್ಯಪ್ರಭಾವದಿಂದಂ ಕೊಂಡಂ
ಭಗವದ್ರೂಪಮನಿಂದ್ರಾ
ದಿಗಳೆಲ್ಲಂ ಪೊಗೞೆ ಕಾಲಲಬ್ಧಿಯನಾಗಳ್ ೪೮

೪೬. ಇದು ಇಷ್ಟು ಎಂದು, ಇವು ಈ ಸ್ವರೂಪದ್ದೆಂದು, ಈ ರೀತಿಯದೆಂದು ಯಾರು ವರ್ಣಿಸಲು ಶಕ್ತರು? ಎಂಬಂತೆ ಮನಸ್ಸಿನಲ್ಲಿ ನಿರ್ಭರವಾದ ಭಕ್ತಿಯು ತುಂಬಿ ತುಳುಕುತ್ತಿರಲಾಗಿ, ಇಂದ್ರನೂ ಇಂದ್ರಾಣಿಯೂ ಇಂದ್ರನ ಪರಿವಾರದವರೂ ದೇವೇಂದ್ರಲೋಕಗಳಲ್ಲಿನ ಅರ್ಚನಾವಿಧಾನಗಳಿಂದ ಪಾದಪೀಠದ ಸಮೀಪದ ಭೂಪ್ರದೇಶವನ್ನು ಕೈಮ್ಮೆಗಳಿಂದ ಅರ್ಚಿಸಿದರು. ೪೭. "ಕರ್ಪೂರಮಿಶ್ರಿತವಾದ ಸೊಡರನ್ನು ಬೆಳಗು. ಮಂದಾರಪುಷ್ಪಗಳ ಮಾಲೆಗಳನ್ನು ನೀಡು. ದಿವ್ಯಾಂಬರಗಳಿಂದ ನಿರ್ಮಿತವಾದ ವಿತಾನಗಳನ್ನು (ಮೇಲ್ಕಟ್ಟು) ಕಟ್ಟು. ಮುತ್ತುಗಳಿಂದ ವಿರಚಿತವಾದ ಏಳೆಳೆ ಹಾರಗಳನ್ನು ತೂಗುಹಾಕು. ನಿರಂತರವಾಗಿ ರಂಗಸ್ಥಳದಲ್ಲಿ ಪಂಚರತ್ನಗಳನ್ನು ವಿಸ್ತರಿಸು" - ಎಂಬ ಇಂದ್ರಾಂತಃಪುರಸ್ತ್ರೀಯರ ಕಲಕಲಧ್ವನಿಯು ರಮ್ಯವಾಯಿತು. ವ|| ಅವರು ಹಾಗೆ ಅರ್ಚಿಸಿ ಕರ್ಮಾರಿವಿಜಯ, ಅನಂತಚತುಷ್ಟಯ ಪ್ರಾಪ್ತಿ, ವಾಕ್, ಪೂಜಾ, ಆಸ್ಥಾಯಿಕಾ, ವಿಹಾರ, ಶರೀರ, ಪ್ರಕೃತಿಗಳೆಂಬ ಎಂಟು ಅತಿಶಯಗಳನ್ನು ಭಕ್ತಿಯಿಂದ ಸ್ತುತಿಯಿಸಿದರು. ಸ್ವೋಚಿತವಾದ ಸ್ಥಾನದಲ್ಲಿ ಕುಳಿತು ಆದಿತೀರ್ಥಂಕರರನ್ನು ಸೇವಿಸುತ್ತಿದ್ದರು. ಅಷ್ಟರಲ್ಲಿ ಪುರಿಮತಾಲ ಪಟ್ಟಣದೊಡೆಯನಾದ, ಭರತರಾಜನಿಗಿಂತ ಕಿರಿಯನಾದ ವೃಷಭಸೇನಕುಮಾರನು ಅನೇಕ ವಿಧವಾದ ಮಂಗಳದ್ರವ್ಯಗಳನ್ನು ಕೈಯಲ್ಲಿ ಹಿಡಿದುಕೊಂಡು ಪರಿಜನರಿಂದ ಕೂಡಿದವನಾಗಿ ಬಂದು ವೃಷಭೇಶ್ವರನ ಶ್ರೀಮುಖವನ್ನು ಸಂದರ್ಶಿಸಿದನು. ತತ್ಫಲವಾಗಿ ಆಸನ್ನಭವ್ಯತಾ ಪ್ರೇರಿತನಾಗಿ ೪೮. ಭಗವಾನ್ ಅರ್ಹಂತನ ಎದುರಿನಲ್ಲಿ ಅತಿಶಯ ಪ್ರಭಾವದಿಂದ ಭಗವದ್ರೂಪವನ್ನು (ಗಣಧರರೂಪವನ್ನು) ತಳೆದನು. ಇಂದ್ರಾದಿಗಳೆಲ್ಲರೂ ಅವನ

ವ|| ಅಂತು ದೀಕ್ಷಾಗ್ರಹಣಾನಂತರಸಮಯಸಮುತ್ಪನ್ನಸಪ್ತರ್ಧಿಜ್ಞಾನಚತುಷ್ಟಯಂ ಪ್ರಥಮಗಣಧರನಾದಂ, ಅನ್ನೆಗಮಿತ್ತ ಭರತರಾಜನಯೋಧ್ಯೆಯೊಳಾಸ್ಥಾನಮಂಟಪದೊಳಿರೆ ಕಞ್ಚುರೋಹಿತಾಯುಧಧ್ಯಕ್ಷಾಂತಃಪುರವೃದ್ಧಕಂಚುಕಿಗಳ್ ಬಂದು ಮಹೀತಳಾಶ್ಲಿಷ್ಟಜಾನುಲಲಾಟಪಟ್ಟರ್ ಪ್ರಣಾಮಾರ್ಪಣಪುರಸ್ಸರಂ ಶಿರೋವೇಷ್ಟನಪ್ರಲಂಬಚೇಳಾಂಚಳಪಿಹಿತವದನರಾಗಿ,

ಪುರುದೇವಂಗಾದ ಕೈವಲ್ಯದ ಮಹಿಮೆಯನುಗ್ರಾಯುಧಾಗಾರದೊಳ್ ಭಾ
ಸ್ಕರಚಕ್ರೋದ್ಭಾಸಿಚಕ್ರೋದ್ಭವದ ಪಿರಿದುಮಾಶ್ಚರ್ಯಮಂ ಶೋಭಿತಾಂತಃ
ಪುರದೊಳ್ ಮಾದೇವಿಗಾದಾತ್ಮಜನೊಸಗೆಯನಾ ಮೂವರುಂ ಬಿನ್ನಪಂಗೆ
ಯ್ದಿರೆ ಜಾತಾನಂದನೀಮೂಱುಮೊಸಗೆಗಳೊಳಮಿನ್ನಾವುದಂ ಮುನ್ನ ಮಾಟ್ಪೆಂ ೪೯

ಧರ್ಮಾರ್ಥಕಾಮಮೆಂಬಿವು
ಧರ್ಮಾರ್ಥಜನಕ್ಕೆ ನೆಱೆದ ನೆರ್ಮಂತವಱೊಳ್
ಧರ್ಮಂ ಪ್ರಧಾನಮರ್ಥಂ
ಧರ್ಮಾಂಘ್ರಿಪಫಳಮದರ್ಕೆ ರಸಮದು ಕಾಮಂ ೫೦

ಆದಱಿಂದಮಿವಱೊಳರ್ಹ
ತ್ಪದಪದ್ಮಪ್ರಣತಿಮುಖ್ಯಮೊಸಗೆಯುಮೆಮಗಿ
ನ್ನಿದಱಿಂದಮಿಲ್ಲಿ ಮೇಲಾ
ವುದೆಂದು ಬಗೆದಧಿಕಭಕ್ತಿನಿರತಂ ಭರತಂ ೫೧

ಕಾಲಲಬ್ಧಿಯನ್ನು (ಶುಭಕಾಲಪ್ರಾಪ್ತಿ) ಹೊಗಳಿದರು. ವ|| ದೀಕ್ಷಾಸ್ವೀಕಾರದ ತರುವಾಯ ಸಕಾಲದಲ್ಲೊದಗಿದ (ಬುದ್ಧಿ, ಕ್ರಿಯೆ, ವಿಕ್ರಿಯೆ, ತಪ, ಬಲ, ಔಷಧಿ ಮತ್ತು ರಸಗಳೆಂಬ) ಸಪ್ತರ್ಧಿಗಳನ್ನೂ ಜ್ಞಾನಚತುಷ್ಟಯವನ್ನೂ ಪಡೆದು ವೃಷಭಸೇನನು ಪ್ರಥಮಗಣ ಧರನಾದನು.[1] ಇತ್ತ ಭರತರಾಜನು ಅಯೋಧ್ಯೆಯಲ್ಲಿ ಆಸ್ಥಾನದಲ್ಲಿರಲು, ಅವನ ಪುರೋಹಿತನೂ ಆಯುಧಾಧ್ಯಕ್ಷನೂ ಮತ್ತು ಅಂತಃಪುರದ ವೃದ್ಧ ಕಂಚುಕಿಯೂ ಬಂದರು. ಭೂಮಿಗೆ ಮೊಣಕಾಲನ್ನೂ ಹಣೆಯನ್ನೂ ತಾಕಿಸಿ ಪ್ರಣಾಮಗಳನ್ನು ಸಲ್ಲಿಸಿದರು. ಶಿರೋವೇಷ್ಟನದಿಂದ ಜೋತುಬಿದ್ದ ಬಟ್ಟೆಯ ತುದಿಯಿಂದ ಬಾಯಿಯನ್ನು ಮರೆಮಾಡಿಕೊಂಡು, ೪೯. ಪುರುದೇವನಿಗುಂಟಾದ ಕೈವಲ್ಯ ಮಹಿಮೆಯನ್ನೂ ಭಯಂಕರ ವಾದ ಆಯುಧಾಗಾರನಲ್ಲಿ ಸೂರ್ಯಮಂಡಲದಂತೆ ಪ್ರಕಾಶಮಾನವಾದ ಚಕ್ರದ ಉತ್ಪತ್ತಿ ಯಿಂದಾದ ಆಶ್ಚರ್ಯವನ್ನೂ ಸುಂದರವಾದ ಅಂತಃಪುರದಲ್ಲಿ ರಾಣಿ ಮಾದೇವಿಗಾದ ಪುತ್ರೋತ್ಸವದ ಸಂತೋಷವನ್ನೂ (ಕ್ರಮವಾಗಿ) ಆ ಮೂವರು ವಿಜ್ಞಾಪಿಸಿದರು. ಅದನ್ನು ಕೇಳಿ ಸಂತೋಷಗೊಂಡು ಇವುಗಳನ್ನು ಮೊದಲಾದುವನ್ನು ಮಾಡಬೇಕು- ಎಂದು ಭರತನು ಆಲೋಚಿಸಿದನು. ೫೦. ಧರ್ಮ, ಅರ್ಥ, ಕಾಮಗಳೆಂಬುದು ಧರ್ಮಾರ್ಥಿಜನರ ವಿಶ್ವಾಸಕ್ಕೆ ಪಾತ್ರವಾದುವು. ಅವುಗಳಲ್ಲಿ ಧರ್ಮವು ಪ್ರಧಾನ. ಧರ್ಮವೃಕ್ಷದ ಹಣ್ಣು ಅರ್ಥ. ಆ ಹಣ್ಣಿನ ರಸವೇ ಕಾಮ. ೫೧. ಆದ್ದರಿಂದ ಇವುಗಳ ನಡುವೆ ಅರ್ಹಂತನ

1. ಪೂರ್ವಪುರಾಣದಲ್ಲಿ ಈ ವೃತ್ತಾಂತವು ಭರತನಿಗೆ ಉಪದೇಶವಾದ ಮೇಲೆ ಮುಂದಿನ ಸಂದರ್ಭದಲ್ಲಿ ಬರುತ್ತದೆ.

ಪುರಜನಸಕಳಾಂತಃಪುರ
ಪರಿಜನಮದಕರಿಕರೇಣುಪರಿವೃತನಂಭೋ
ಧರರವಗಭೀರಭೇರೀ
ಸ್ವರಪೂರಿತಸಕಳಗಗನದಿಗವನಿಮಧ್ಯಂ ೫೨

ವ|| ಅಂತು ಬಂದು ಗಗನಮಂಡಳಮನಲಂಕರಿಸಿದಭಗವದಾಸ್ಥಾನಮಂಟಪಮಂ ಗಂಟಣಿಯೊಳೆ ಕಂಡು ಮದಗಜೇಂದ್ರಮನಿೞಿದು ರಾಜಚಿಹ್ನಂಗಳನಿರಿಸಿಧೂಳೀಸಾಳಮಾನಸ್ತಂಭಾಂಭಃಖಾತಿಕಾವಲ್ಲೀ ವನೋಪವನಪತಾಕಾವನಿಕಲ್ಪಭೂರುಹಭೂತಳಸ್ತೂಪಪ್ರಾಸಾದಮಾಳಾವಿಳಸಿತಮುಮನವಱಿಡೆಯೆಡೆಯ ಕನಕಪ್ರಾಕಾರವೇದಿಕಾನೇಕಗೋಪುರದ್ವಾರಪಾಳಕಾಷ್ಟಮಂಗಳ ನವನಿಧಿತೋರಣ ಧೂಪಘಟನಾಟ್ಯ ಶಾಲಾಚೈತ್ಯವೃಕ್ಷಸಿದ್ಧಾರ್ಥಮಹೀರುಹಮಹಾಶೋಭೆಯುಮಂ ಶ್ರೀಮಂಟಪಶ್ರೀಯುಮನತ್ಯಂತ ವಿಸ್ಮಯಸ್ಮೇರಮುಖನುಮತಿಚಿರನ್ಯಸ್ತಹಸ್ತಪಲ್ಲವನುಂ ಮುಹುರ್ಮುಹುರಾಂದೋಳಿತ ಮಸ್ತಕನುಂ ಉದಂಚದ್ರೋಮಾಂಚಕಂಚುಕಿತನುಮಾಗಿ ನೋಡುತ್ತುಮುತ್ತುಂಗಪ್ರಥಮದ್ವಿತೀಯ ತೃತೀಯ ಪೀಠಗಳನನೇಕಾರ್ಚನೆಗಳಿಂದರ್ಚಿಸುತ್ತುಂ ಮೂಱುಸೂಳ್ಬಲಗೊಂಡು ಜಗತ್ತ್ರಿತಯಾಧೀಶ್ವರ ಶ್ರೀಮುಖಾಭಿ ಮುಖನಾಗಿ ನಿಂದು ಸ್ತುತಿಸಿ,

ತ್ರಿದಶೇಂದ್ರಮೌಳಿಮಣಿಶೋ
ಣದೀಪ್ತಿಗಳ್ ಪುದಿದು ಪೊಳೆವಲಕ್ತಕರಸದಿಂ
ಪುದಿದಂತೊಪ್ಪಿರ್ಪರ್ಹ
ತ್ಪದಂಗಳೆಮಗೀಗೆ ತಡೆಯದರ್ಹತ್ಪದಮಂ ೫೩

ಪಾದಪದ್ಮಗಳಿಗೆರಗುವುದೇ ಮುಖ್ಯವಾದ ಒಸಗೆ. ನಮಗೆ ಅದಕ್ಕಿಂತ ಮಿಗಿಲಾದುದು ಮತ್ತೊಂದಿಲ್ಲ ಎಂದು ಭರತೇಶನು ಭಕ್ತಿಯಿಂದ ಬಗೆದನು. ೫೨. ಪುರಜನರಿಂದಲೂ ಅಂತಃಪುರಸ್ತ್ರೀಯರಿಂದಲೂ ಪರಿಜನರಿಂದಲೂ ಮದಿಸಿದ ಗಂಡಾನೆ ಹೆಣ್ಣಾನೆಗ ಳಿಂದಲೂ ಪರಿವೃತನಾಗಿ, ಮೋಡದಂತೆ ಗಂಭೀರವಾಗಿ ಧ್ವನಿಗೈವ ಭೇರೀಸ್ವರದಿಂದ ದಿಂಗತರಾಳವನ್ನೂ ಭೂಮಂಡಲವನ್ನೂ ತುಂಬುತ್ತ ಭರತನು ಬಂದನು. ವ|| ಹಾಗೆ ಬಂದು ಗಗನಮಂಡಲವನ್ನು ಅಲಂಕರಿಸಿದ್ದ ಭಗವದಾಸ್ಥಾನಮಂಡಪವನ್ನು ದೂರದಿಂದಲೇ ಕಂಡನು. ಮದ್ದಾನೆಯಿಂದ ಇಳಿದು ರಾಜಚಿಹ್ನೆಗಳನ್ನು ಕೆಳಗಿರಿಸಿದನು. ಧೂಲಿಸಾಲ, ಮಾನಸ್ತಂಭ, ನೀರಿನ ಕಂದಕ, ವಲ್ಲೀವನ, ಉಪವನ, ಪತಾಕಾವನಿ, ಕಲ್ಪವೃಕ್ಷ, ಭೂತಲಸ್ತೂಪ ಮತ್ತು ಪ್ರಾಸಾದಗಳ ಸಾಲನ್ನೂ ಅವುಗಳೆಡೆಯಲ್ಲಿ ಕನಕಪ್ರಾಕಾರ, ವೇದಿಕೆ, ಅನೇಕ ಗೋಪುರ, ದ್ವಾರಪಾಲಕ, ಅಷ್ಟಮಂಗಲ, ನವನಿಧಿ, ತೋರಣ, ಧೂಪಘಟ, ನಾಟ್ಯಶಾಲೆ, ಚೈತ್ಯವೃಕ್ಷ, ಸಿದ್ಧಾರ್ಥವೃಕ್ಷಗಳ ಮಹಾಶೋಭೆಯನ್ನೂ ಶ್ರೀಮಂಡಪದ ಶ್ರೀಯನ್ನೂ ಆಶ್ಚರ್ಯದಿಂದ ಮುಗುಳ್ನಗೆಯನ್ನು ಬೀರುತ್ತ ಬಾಯ ಮೇಲೆ ಕರಕಿಸಲಯವನ್ನಿಟ್ಟವನಾಗಿ ಬಾರಿಬಾರಿಗೂ ತಲೆಯಾಡಿಸುತ್ತ ರೋಮಾಂಚಕಂಚುಕಿತನಾಗಿ ನೋಡಿದನು. ಉತ್ತುಂಗವಾದ ಪ್ರಥಮ, ದ್ವಿತೀಯ ಮತ್ತು ತೃತೀಯಪೀಠಗಳನ್ನು ಅನೇಕಾರ್ಚನೆಗಳಿಂದ ಅರ್ಚಿಸಿದನು. ಮೂರುಬಾರಿ ಪ್ರದಕ್ಷಿಣೆ ಮಾಡಿ ಮೂರು ಲೋಕಕ್ಕೂ ಒಡೆಯನಾದ ಸ್ವಾಮಿಯ ಶ್ರೀಮುಖಕ್ಕೆದುರಾಗಿ ನಿಂತು ಭರತನು ಸ್ತುತಿಸಿದನು. ೫೩. "ಅಮರೇಂದ್ರನ ಕಿರೀಟದಲ್ಲಿನ ಮಣಿಗಳ ಕೆಂಪಾದ ಕಾಂತಿಗಳು ಹರಡಿದ್ದರಿಂದ, ಹೊಳೆಯುವ ಅಲತಿಗೆಯ ರಸದಿಂದ ಕೂಡಿದಂತೆ ಸುಂದರವಾಗಿರುವ ಅರ್ಹಂತನ

ಭುವನೇಶ್ವರ ನಿಜರೂಪ
ಸ್ತವವಸ್ತುಸ್ತವಗುಣಸ್ತವಂಗಳನವಱಿಂ
ತುವರಂ ಬಣ್ಣಿಸಲಮರೇಂ
ದ್ರವಾಸುಕಿಪ್ರಭುಗಳಾರ್ತರಿಲ್ಲೆನ್ನಳವೇ ೫೪

ಅಳತೆಗೆ ತೂಕಕ್ಕೆಣಿಕೆಗ
ಮೊಳಗಾದುವು ಸಕಳವಸ್ತುಗಳ್ ಭುವನಜನ
ಕ್ಕಳಿಯಲ್ ತೂಗಲ್ಕೆಣಿಸ
ಲ್ಕಳುಂಬಮೆನಿಸಿದುವು ನಿನ್ನ ಗುಣಗಣಮರ್ಹಾ ೫೫

ತನ್ನಿರ್ದೆಡೆಯದೆ ಮೇರುವಿ
ನುನ್ನತಿ ಜಳನಿಧಿಯ ಗುಣ್ಪು ನಭದ ವಿಭುತ್ವಂ
ನಿನ್ನ ಗುಣೋನ್ನತಿ ಸಕಳ ಜ
ಗನ್ನುತ ಭುವನಾಂತರಾಳಮಂ ಪರ್ಬಿರ್ಕುಂ ೫೬

ಆಕುಳನೆನಾಗಿ ಸುಟಿದೆನ
ನಾಕುಳಮಪ್ಪೆಡೆಯನಱಸಿ ಕಾಣೆಂ ಮೂಱುಂ
ಲೋಕದೊಳಂ ನಿನ್ನಿರ್ಕೆಯ
ಲೋಕಾಗ್ರಮೆ ಸಂತಮದನೆ ಮಾಡೆನಗರ್ಹಾ ೫೭

ಭವನಿಗಳದ ತೊಡರಂ ಕಳೆ
ಭವಜಳಧಿಯ ತಡಿಗೆ ಸಾರ್ಚು ಭವಗಹನದುಪ
ದ್ರವಮಂ ಕಿಡಿಸು ಭವಾಂತಕ
ಭವನಕ್ಕುಯ್ ತಡೆಯದೆನ್ನ ನೀಂ ಭವಮಥನಾ ೫೮

ಪಾದಗಳು ಆರ್ಹತ್ವದವನ್ನು ಕೂಡಲೆ ನಮಗನುಗ್ರಹಿಸಲಿ. ೫೪. ಹೇ ಭುವನೇಶ್ವರ, ನಿನ್ನ ರೂಪಸ್ತವವನ್ನೂ ವಸ್ತುಸ್ತವವನ್ನೂ ಗುಣಸ್ತವವನ್ನೂ ಬಣ್ಣಿಸಲು ಅಮರೇಂದ್ರ ವಾಸುಕಿಗಳೇ ಅಸಮರ್ಥರೆಂದ ಮೇಲೆ ನಮಗೆಲ್ಲಿಂದ ಶಕ್ತಿ ಬರಬೇಕು? ೫೫. ಸಕಲವಸ್ತುಗಳು ಅಳತೆಗೂ ತೂಕಕ್ಕೂ ಎಣಿಕೆಗೂ ಸಿಗುತ್ತವೆ. ಅರ್ಹಂತಸ್ವಾಮಿಯೆ! ನಿನ್ನ ಗುಣಗಳು ಮಾತ್ರ ಅಳತೆಗೂ ತೂಕಕ್ಕೂ ಎಣಿಕೆಗೂ ಮೀರಿದುವು. ೫೬. ನೀನಿದ್ದೆಡೆಯು ಮೇರುವಿನ ಉನ್ನತಿಗೂ ಜಲನಿಧಿಯ ಆಳಕ್ಕೂ ನಭದ ವಿಭುತ್ವಕ್ಕೂ ಸಾಟಿಯಾದುದು. ನಿನ್ನ ಗುಣೋನ್ನತಿಯು ಸಕಲ ಜಗತ್ತಿನಿಂದ ಸುತ್ತಿಸಲ್ಪಟ್ಟು ಭುವನಾಂತರಾಳವನ್ನೂ ವ್ಯಾಪಿಸಿದೆ. ೫೭. ಶಾಂತಿಪ್ರದವಾದ ಎಡೆಯೊಂದನ್ನು ವ್ಯಗ್ರನಾಗಿ ಹುಡುಕಿಕೊಂಡು ಅಲೆಯುತ್ತಿದ್ದೇನೆ. ಆದರದು ಮೂರು ಲೋಕಗಳಲ್ಲಿಯೂ ನನಗೆ ಎಟಕುತ್ತಿಲ್ಲ. ನೀನಿರುವ ಲೋಕಾಗ್ರವೇ ಶಾಂತವಾಗಿದೆ. ಅದನ್ನೇ ನನಗನುಗ್ರಹಿಸು. ಅರ್ಹದ್ದೇವ! ೫೮. ಸಂಸಾರದ ಸಂಕೋಲೆಯ ತೊಡರಿನಿಂದ ತಪ್ಪಿಸು. ಸಂಸಾರಸಮುದ್ರದ ದಡವನ್ನು ದಾಟಿಸು. ಸಂಸಾರವೆಂಬ ಕಾಡಿನ ಉಪದ್ರವವನ್ನು ಕೆಡಿಸು. ಹೇ ಭವಮಥನ, ಸಂಸಾರನಾಶಕವಾದ

ಮರಣದ ಜನ್ಮದ ನಿಗಳಂ
ನಿರಾಕುಳಂ ಪತ್ತುವಿಡುವಿನಂ ಜಿನ ನಿನ್ನಂ
ಸ್ಮರಿಯಿಪುದನಣೋರಣ್ವಂ
ತರವ್ಯತಿಕ್ರಮಣಮಾತ್ರಮಂ ಮೆಱೆದಪೆನೇ ೫೯

ತಿಳಕಂ ವಶ್ಯಮೆ[೧] ಜಡಜನ
ಮೊಳಗಱೆಯದು ಸಕಳಭವ್ಯತಿಳಕಂಗೆ ಜಗ
ತ್ತಿಳಕ ಭವತ್ಪದ ಚಂದನ
ತಿಳಕಂ ತ್ರೈಲೋಕ್ಯವಶ್ಯಮಕ್ಕುಮವಶ್ಯಂ ೬೦

ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂ
ದ್ರಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಡ್ಪಿಂತು ಬೇಳಲ್ಲೆನು
ತ್ತಮದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾ
ಭಮಮೋಘಂ ದೊರೆಕೊಳ್ಪುದಕ್ಕೆಮಗೆ ಮುಕ್ತಿಶ್ರೀಮನೋವಲ್ಲಭಾ ೬೧

ವ॥ ಎಂದನೇಕಸ್ತೋತ್ರಪವಿತ್ರೀಕೃತಮುಖಾರವಿಂದನಮರಸಮಾಜವಿಸ್ಮಯಸ್ಮೇರೇಕ್ಷಣೈಕ ಲಕ್ಷ್ಯಲಕ್ಷಣನಾಗಿ ನಿಜೋಚಿತಪ್ರದೇಶಸ್ಥಾನದೊಳ್ ಕುಳ್ಳಿರ್ದು,

ನೃಸುರಾಸುರಪರಿಷತ್ಸ
ಸ್ಯಸಂಕುಳಂ ಜಿನವಚೋಮೃತಾಸಾರಮನಂ
ದಸದಳಮೆ ಬಯಸೆ ಭರತಂ
ಬೆಸಗೊಂಡಂ ಜಿನನನಖಿಳವಸ್ತುಸ್ಥಿತಿಯಂ ೬೨

(ನಿನ್ನ) ಭವನಕ್ಕೆ ನನ್ನನ್ನು ತಡೆಯದೆ ಒಯ್ಯಿ, ೫೯. ಹೇ ಜಿನ! ಮರಣದ ಮತ್ತು ಜನನದ ಸಂಕೋಲೆಯು ಪೂರ್ಣವಾಗಿ ನಶಿಸುವವರೆಗೆ ನಿನ್ನನ್ನು ಸ್ಮರಿಸುತ್ತಿರುವೆನು. ಈ ವಿಷಯವಾಗಿ ಒಂದು ಅಣುಮಾತ್ರದ ಉಲ್ಲಂಘನೆಯನ್ನು ನಾನು ತೋರಿಸುವುದಿಲ್ಲ. ೬೦. ಸಕಲಭವ್ಯರಿಗೂ ತಿಲಕಪ್ರಾಯನಾದ ಪರಮನಿಗೆ ತಿಲಕದ (ಅಗತ್ಯವಿಲ್ಲ) (?) ಜಡಜನವು ಅದರ ರಹಸ್ಯವನ್ನು ಅರಿಯದು. ಎಲೈ! ಜಗತ್ತಿಲಕ! ನಿನ್ನ ಈ ಚರಣಚಂದನ ತಿಲಕವು ತ್ರೈಲೋಕ್ಯವನ್ನೂ ಅವಶ್ಯವಾಗಿ ವಶಮಾಡಿಕೊಳ್ಳಲರ್ಹವಾಗಿದೆ. ೬೧. ಇಂದ್ರನ ಉನ್ನತಿ, ಖೇಚರೇಂದ್ರನ ವಿಭವ, ಭೋಗೀಂದ್ರಭೋಗ, ಮಹೇಂದ್ರನ ಮಹೈಶ್ವರ್ಯ ಇವೆಲ್ಲ ಅಸ್ಥಿರಗಳು. ಆದ್ದರಿಂದಲೇ ಅಪ್ರಾರ್ಥನೀಯಗಳು. ಉತ್ತಮದೀಕ್ಷಾವಿಧಿ, ಸಮಾಧಿ ಮರಣ, ಕರ್ಮಕ್ಷಯ ಮತ್ತು ಬೋಧಿಲಾಭಗಳು ನಮ್ಮ ಕೈಸಾರಲಿ, ಮುಕ್ತಿಶ್ರೀ ಮನೋವಲ್ಲಭಾ!" ವ॥ ಹೀಗೆ ಭರತನು ಅನೇಕ ಸ್ತೋತ್ರಗಳಿಂದ ಪವಿತ್ರಗೊಂಡ ಮುಖಕಮಲವುಳ್ಳವನಾಗಿ ದೇವಸಮಾಜದ ಆಶ್ಚರ್ಯದೃಷ್ಟಿಗೆ ಪಾತ್ರನಾಗಿ ಉಚಿತಾಸನದಲ್ಲಿ ಕುಳಿತುಕೊಂಡನು. ೬೨. ಮನುಷ್ಯರ ಮತ್ತು ಸುರಾಸುರರ ಸಮುದಾಯವೆಂಬ ಸಸ್ಯಸಂಕುಲವು ಜಿನವಚನವೆಂಬ ಅಮೃತಧಾರಾವೃಷ್ಟಿಯನ್ನು ಅಧಿಕವಾಗಿ ಬಯಸುತ್ತಿರಲು,

---

೧. "ತಿಲಕಮವಶ್ಯಮೆ" ಎಂದು ಶುದ್ಧಪಾಠವಿರಬಹುದು (ರಂ).

ವ|| ಅಂತು ಬೆಸಗೊಳೆ,

ಅಂದಪಗತತಾಲ್ವೋಷ್ಠ
ಸ್ಪಂದನಮಸ್ಪ ೃಶ್ಯಕರಣವರ್ಣಂ ಜಗದಾ
ನಂದಕರಂ ಜಳಧರರವ
ಸೌಂದರಮತಿವಿಶದಮಧುರಗಂಭೀರರವಂ ೬೩

ವ|| ಅಂತು ನೆಗಟ್ದ ದಿವ್ಯಧ್ವನಿಯೊಳಾ ಪರಮಯೋಗೀಂದ್ರನಿಂತೆಂದು ಬೆಸಸಿದಂ, ನಿನ್ನ ಬೆಸಗೊಂಡ ತತ್ವಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ ; ಅಲ್ಲಿ ಸಂಸಾರಕಾರಣಂಗಳ್ ಹೇಯಂಗಳ್; ಮುಕ್ತಿಕಾರಣಂಗಳುಪಾದೇಯಂಗಳ್ ಅವಱೊಳ್ ದ್ರವ್ಯಕ್ಷೇತ್ರಕಾಲಭವಭಾವಭೇದದಿಂ ಪಂಚವಿಧಂ ಸಂಸಾರಂ. ಅಲ್ಲಿ ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋಗೋಪಾರ್ಜಿತ ಜ್ಞಾನಾವರಣಾದಿಕರ್ಮ್ಮಂಗಳ್ ಸಂಸಾರಕಾರಣಂಗಳ್ ಅನಾದಿ ಬಂಧನ ಬದ್ಧದ್ರವ್ಯಭಾವಕರ್ಮವಿಗಮದಿನನಂತ ಜ್ಞಾನಾದಿನಿಜರೂಪಮಂ ಪಡೆವುದು ಮುಕ್ತಿ. ಸಮ್ಯಗ್ದರ್ಶನಜ್ಞಾನಚರಿತ್ರಂಗಳ್ ಅವಿಕಲ್ಪಂಗಳ್ ಮೋಕ್ಷಕಾರಣಂಗಳ್ ಅಲ್ಲಿ ತತ್ವಾರ್ಥಶ್ರದ್ಧಾನಂ ಸಮ್ಯಗ್ದರ್ಶನಂ; ಆ ತತ್ವಮುಂ ಜೀವಾಜೀವಾ ಸ್ರವಬಂಧಸಂವರನಿರ್ಜರಾಮೋಕ್ಷಭೇದದಿಂ ಸಪ್ತವಿಧಂ; ಪ್ರಮಾಣನಯನಿಕ್ಷೇಪಾನುಯೋಗಸದಾದಿಗಳಿಂ ನಿಶ್ಚಯಿಸಿದ ಸಪ್ತತತ್ವಂಗಳೊಳಗೆ ಚೇತನಾಲಕ್ಷಣಮಪ್ಪುದು ಜೀವತತ್ವಂ. ಆ ಜೀವತತ್ವಮುಂ ಸಂಸಾರಮುಕ್ತಿಭೇದದಿಂ ದ್ವಿವಿಧಮಕ್ಕುಂ, ಅಲ್ಲಿ ಮುಕ್ತಜೀವಮೇಕಪ್ರಕಾರಮೇ. ಸಂಸಾರಿಜೀವಂ

ಭರತನು ಅಖಿಲವಸ್ತುಗಳ ಸ್ಥಿತಿಯನ್ನು ಹೇಳಬೇಕೆಂದು ಜಿನನನ್ನು ಕೇಳಿಕೊಂಡನು. ವ|| ಹಾಗೆ ಪ್ರಶ್ನಿಸಲು, ೬೩. ಆಗ ಜಿನೇಶ್ವರನಿಂದ ಒಂದು ದಿವ್ಯ ಧ್ವನಿಯುಂಟಾಯಿತು. ಧ್ವನಿಯಾಗುವಾಗ ಜಿನನ ತಾಲು, ಓಷ್ಠಗಳ ಸ್ಪಂದನವಾಗಲಿಲ್ಲ, ಅಭ್ಯಂತರಾದಿ ಕರಣಪ್ರಯತ್ನವಿಲ್ಲದೆ ಅಕ್ಷರರೂಪದಲ್ಲಿ ಧ್ವನಿಯುದಿಸಿತು. ಅದು ಮೇಘಧ್ವನಿಯಂತೆ ಸುಂದರವಾಗಿ ಅತಿಸ್ಫುಟವೂ ಮಧುರವೂ ಗಂಭೀರವೂ ಜಗದಾನಂದಕರವೂ ಆಗಿತ್ತು. ವ|| ಪ್ರಸಿದ್ಧವಾದ ಆ ದಿವ್ಯಧ್ವನಿಯಲ್ಲಿ ಪರಮಯೋಗೀಂದ್ರನೆಂದನು. "ನೀನು ಕೇಳಿದ ತತ್ವವು ಹೇಯ, ಉಪಾದೇಯವೆಂದು ಎರಡು ವಿಧ. ಸಂಸಾರಕ್ಕೆ ಕಾರಣವಾದುವು ಹೇಯಗಳು ಮುಕ್ತಿಗೆ ಕಾರಣಗಳು ಉಪಾದೇಯ. ಅವುಗಳಲ್ಲಿ ದ್ರವ್ಯ, ಕ್ಷೇತ್ರ, ಕಾಲ, ಭವ ಮತ್ತು ಭಾವ ಎಂದು ಸಂಸಾರವು ಐದು ವಿಧ. ಅಲ್ಲಿ ಮಿಥ್ಯಾದರ್ಶನ ಅವಿರತಿ, ಪ್ರಮಾದ, ಕಷಾಯಗಳಿಂದುಂಟಾದ ಜ್ಞಾನಾವರಣೀಯಾದಿ ಕರ್ಮಗಳು ಸಂಸಾರಕಾರಣಗಳು ಅನಾದಿ ಸಂಸಾರಬದ್ಧವಾದ ದ್ರವ್ಯಭಾವಕರ್ಮಗಳನ್ನು ಹೋಗಲಾಡಿಸಿಕೊಂಡು ಅನಂತಜ್ಞಾನಾದಿ ನಿಜರೂಪವನ್ನು ಪಡೆಯುವುದು ಮುಕ್ತಿ. ಅವಿಕಲವಾದ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಗಳು ಮೋಕ್ಷಕಾರಣಗಳು. ಅಲ್ಲಿ ತತ್ವಾರ್ಥಶ್ರದ್ಧೆಯೆಂಬುದು ಸಮ್ಯಗ್ದರ್ಶನ. ಆ ತತ್ವವು ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷಗಳೆಂದು ಏಳು ವಿಧ. ಪ್ರಮಾಣ-ನಯ-ನಿಕ್ಷೇಪ, ಅನುಯೋಗ ಮತ್ತು ಸದಾದಿ(ಸ್ಯಾದ್ವಾದ)ಗಳಿಂದ ನಿಶ್ಚಿತಗೊಂಡ ಏಳು ತತ್ವಗಳಲ್ಲೊಂದಾದಂದು ಚೇತನಾಲಕ್ಷಣವಾದ ಜೀವತತ್ವವಾಗಿದೆ. ಅದು ಸಂಸಾರಿ-ಮುಕ್ತ

**ತ್ರಸಸ್ಥಾವರವಿಕಲ್ಪದಿಂದಿರ್ತೆಱನಕ್ಕುಂ. ಅಲ್ಲಿಯುಂ ತ್ರಸನಾಮಕರ್ಮೋದಯವಶಂಗಳ್ ತ್ರಸಕಾಯಂಗಳ್. ಸ್ಥಾವರನಾಮಕರ್ಮಪಾಕಾಧೀನಂಗಳ್ ಸ್ಥಾವರ[ಕಾಯ]ಂಗಳ್ ಸ್ಪರ್ಶನರಸನೇಂದ್ರಿಯೋಪೇತಂಗಳಪ್ಪ ಶಂಖಾದಿ ದ್ವೀಂದ್ರಿಯಂಗಳ್; ಸ್ಪರ್ಶನರಸನಘ್ರಾಣೇಂದ್ರಿಯಸಮನ್ವಿತಂಗಳಪ್ಪ ಪಿಪೀಲಿಕಾದಿ ತ್ರೀಂದ್ರಿಯಂಗಳ್; ಸ್ಪರ್ಶನರಸನಘ್ರಾಣಚಕ್ಷುರಿಂದ್ರಿಯಸಮನ್ವಿತಂಗಳಪ್ಪ ಮಧುಕರಾದಿ ಚತುರಿಂದ್ರಿಯಂಗಳ್, ಸ್ಪರ್ಶನರಸನಘ್ರಾಣಚಕ್ಷುಶ್ರೋತ್ರೇಂದ್ರಿಯಸಮನ್ವಿತಂಗಳಪ್ಪ ಮನುಷ್ಯಾದಿ ಪಂಚೇಂದ್ರಿಯಂಗಳೆಂದಿಂತು ತ್ರಸಜೀವಂಗಳ್ ಚತುರ್ವಿಧಮಕ್ಕುಂ, ಸ್ಪರ್ಶನೇಂದ್ರಿಯಮಾತ್ರಂಗಳ್, ಸ್ಥಾವರಂಗಳೆಂಬುವು. ಅವು ಪೃಥಿವ್ಯಪ್ತೇಜೋವಾಯುವನಸ್ಪತಿಭೇದದಿಂ ಪಂಚವಿಧಂ, ಚೇತನಾರಹಿತಮಜೀವತತ್ವಂ, ಅದು ಗತಿಸ್ಥಿತ್ಯವಗಾಹಶರೀರಾದಿವರ್ತನಾಹೇತುಧರ್ಮಾಕಾಶಪುದ್ಗಲಕಾಲಭೇಧದಿಂ ಪಂಚವಿಧಂ, ಶುಭಾಶುಭರೂಪಮನೋವಾಕ್ಕಾಯಪರಿಸ್ಪಂದಹೇತುಕಮಾಗಿ ಬರ್ಪ ಕರ್ಮದ ಬರವಾಸ್ರವಮೆಂಬುದು. ಕರ್ಮದ ಜೀವನ ಕ್ಷೀರನೀರನ್ಯಾಯಸಂಬಂಧಂ ಬಂಧಮೆಂಬುದು ಶುಭಾಶುಭಪರಿಣಾಮಪ್ರಣಾಳಿಕೆಯಿಂ ಬರ್ಪ ಕರ್ಮಮಂ ಬರಲೀಯದೆ ಗುಪ್ತ್ಯಾದಿಗಳಿಂ ತಗುಳ್ವುದು ಸಂವರೆಯೆಂಬುದು. ಯಥಾಕಾಲಾನುಭವನತಪೋನಿಮಿತ್ತಮಾಗಿ ಸವಿಪಾಕವಿಪಾಕರೂಪದಿಂ ಪೂರ್ವಾರ್ಜಿತಕರ್ಮನಿರ್ಜರಣಂ ನಿರ್ಜರೆಯೆಂಬುದು, ಮೂಲೋತ್ತರಾದಿಭೇದಭಿನ್ನಕರ್ಮಪ್ರಕೃತಿಗಳ ನಿರ್ಮೂಳೋಚ್ಛಿತ್ತಿ ಮೋಕ್ಷಮೆಂಬುದು: ಸಂಶಯವಿಪರ್ಯಯಸಾವದ್ಯಾನವದ್ಯಾವಸಾಯಸ್ವಭಾವರಹಿತಮಾಗಿ ಜೀವಾದಿಪದಾರ್ಥಯಥಾತ್ಮ್ಯಾವಗಮಂ ಸಮ್ಯಗ್ಜ್ಞಾನಂ, ಅದು ಮತಿಶ್ರುತಾವಧಿಮನಃ ಪರ್ಯಯಕೇವಲಜ್ಞಾನಭೇದದಿಂ ಪಂಚವಿಧಂ ಸಂಸಾರಪರಿತ್ಯಾಗೋದ್ಯುಕ್ತಸಮಜ್ಞಾನೋಪೇತಭವ್ಯಜೀವನ**

ಎಂದು ಎರಡು ವಿಧ, ಅಲ್ಲಿ ಮುಕ್ತಜೀವವು ಒಂದೇ ವಿಧ. ಸಂಸಾರಿಜೀವವು ತ್ರಸ, ಸ್ಥಾವರವೆಂದು ಎರಡು ವಿಧ. ಅಲ್ಲಿಯೂ ತ್ರಸವೆಂಬ ನಾಮಕರ್ಮದಿಂದ ಹುಟ್ಟಿದುವು ತ್ರಸಕಾಯಗಳು. ಸ್ಥಾವರವೆಂಬ ನಾಮಕರ್ಮದ ಪಾಕಕ್ಕೆ ಅಧೀನವಾದವು ಸ್ಥಾವರ ಕಾಯಗಳು. ಸ್ಪರ್ಶ, ಜಿಹ್ವೆಗಳೆಂಬ ಇಂದ್ರಿಯೋಪೇತವಾದ ಶಂಖಾದಿ ಜೀವಿಗಳು ದ್ವೀಂದ್ರಿಯಗಳು. ಸ್ಪರ್ಶ, ಜಿಹ್ವೆ, ಘ್ರಾಣೇಂದ್ರಿಯೋಪೇತವಾದ ಪಿಪೀಲಿಕಾದಿಗಳು ತ್ರೀಂದ್ರಿಯಗಳು, ಸ್ಪರ್ಶ, ಜಿಹ್ವೆ, ಘ್ರಾಣ ಮತ್ತು ಚಕ್ಷುರಿಂದ್ರಿಯಾನ್ವಿತವಾದ ದುಂಬಿಗಳೇ ಮೊದಲಾದುವು ಚತುರಿಂದ್ರಿಯಗಳು. ಸ್ಪರ್ಶ, ಜಿಹ್ವೆ, ಘ್ರಾಣ, ಚಕ್ಷು ಮತ್ತು ಶ್ರೋತ್ರಗಳೆಂಬ ಇಂದ್ರಿಯ ಸಮೇತಗಳಾದ ಮನುಷ್ಯಾದಿಗಳು ಪಂಚೇಂದ್ರಿಯಗಳು. ಹೀಗೆ ತ್ರಸಜೀವಗಳು ನಾಲ್ಕು ವಿಧ. ಸ್ಥಾವರಕಾಯಗಳು ಸ್ಪರ್ಶನೇಂದ್ರಿಯ ಮಾತ್ರಗಳು. ಅವು ಪೃಥಿವಿ, ಅಪ್, ತೇಜಸ್ಸು, ವಾಯು ಮತ್ತು ವನಸ್ಪತಿ ಭೇದದಿಂದ ಐದು ವಿಧ. ಚೇತನಾರಹಿತವಾದದ್ದು ಅಜೀವತತ್ವ, ಅದು ಕ್ರಮವಾಗಿ ಗತಿ, ಸ್ಥಿತಿ, ಅವಗಾಹ, ಶರೀರ, ವರ್ತನಾಕಾರಣಗಳಾದ ಧರ್ಮ, ಅಧರ್ಮ, ಆಕಾಶ, ಪುದ್ಗಲ ಮತ್ತು ಕಾಲಭೇದದಿಂದ ಐದುವಿಧ. ಶುಬಾಶುಭ ರೂಪವೂ ಮನೋವಾಕ್ಕಾಯಪರಿಸ್ಪಂದಕ್ಕೆ ಹೇತುವಾಗಿಯೂ ಬರುವ ಕರ್ಮದ ಆಗಮನವು ಆಸ್ರವ, ಕರ್ಮಜೀವಗಳಿಗಿರುವ ಕ್ಷೀರನೀರನ್ಯಾಯಸಂಬಂಧವು ಬಂಧ, ಶುಭಾಶುಭ ಪರಿಣಾಮರೂಪದಿಂದ ಬರಲಿರುವ ಕರ್ಮಗಳಿಗೆ ಬರಲವಕಾಶಗೊಡದೆಯೆ ಗುಪ್ತ್ಯಾದಿಗಳಿಂದ ತಡೆಯುವುದು ಸಂವರೆ, ಕಾಲಾನುಗುಣವಾಗಿ ಅನುಭವಿಸಲಿಕ್ಕೂ ತಪೋನಿಮಿತ್ತಕ್ಕೂ ಸವಿಪಾಕಾವಿಪಾಕರೂಪದಿಂದ ಪೂರ್ವಾರ್ಜಿತವಾದ ಕರ್ಮವನ್ನು

ಬಾಹ್ಯಾಭ್ಯಂತರಕ್ರಿಯಾನಿವೃತ್ತಿ ಸಮ್ಯಕ್ಚಾರಿತ್ರಮೆಂಬುದು. ಅದು ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರಶುದ್ಧಿ ಸೂಕ್ಷ್ಮಸಾಂಪರಾಯಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಮೆಂದುಂ ಹೇಯೋಪಾದೇಯತತ್ತ್ವಮನಱಿಪಿ ಮತ್ತಮಿವರ್ಕಾಧಾರಭೂತಜಗತ್ತ್ರಯಾಂತಸ್ಥಿತೈಕೋನಪಂಚಾಶನ್ನರಕಪ್ರಸ್ತರಭವನವ್ಯಂತರಾವಾಸಾಸಂಖ್ಯಾತದ್ವೀಪಾಬ್ಧಿತ್ರಿಷಷ್ಟಿಸ್ವರ್ಗಪಟಲಂಗಳುಮಂ ವಿಸ್ತರಿಸಿ ತನ್ನಿವಾಸಿಗಳ ದೇಹಾಯುಃಪ್ರಮಾಣಂಗಳುಮಂ ಸುಖದುಃಖಾದಿಗಳುಮಂ ತೀರ್ಥಕರ ಚಕ್ರಧರ ಬಲದೇವ ವಾಸುದೇವ ಪ್ರತಿವಾಸುದೇವ ಕಥಾಸಂಬಂಧಮುಮಂ ನಿರ್ಣಯಂ ಮಾಡಿದಾಗಳ್,

ಸುರದನುಜಮನುಜವರಕಿ
ನ್ನರತಿರ್ಯಗ್ಗಣಮನೆಯ್ದೆ ತಿಳಿಪಿದುದರ್ಹ
ತ್ಪರಮೇಶ್ವರಗದಿತಮನೋ
ಹರಧರ್ಮಾಮೃತಮದಿರ್ದೊಡಮೃತಂ ಸವಿಯೇ ೬೪

ವ್ರತಸಮ್ಯಕ್ತ್ವವಿಶುದ್ಧಿಯೊ
ಳತರ್ಕ್ಯಗುಣನೆಯ್ದೆ ನೆಱೆದು ಭರತೇಶ್ವರನೂ
ರ್ಜಿತಪುಣ್ಯನೊಪ್ಪಿದಂ ಶರ
ದೃತುವಿಕಸತ್ಕಮಳವನಸಲೀಲಶ್ರೀಯಿಂ ೬೫

ತೊಡೆದುಹಾಕುವುದು ನಿರ್ಜರೆ, ಮೂಲೋತ್ತರಾದಿ ಭೇದಭಿನ್ನವಾದ ಕರ್ಮಪ್ರಕೃತಿಗಳನ್ನು ಬುಡಸಹಿತವಾಗಿ ವಿನಾಶಗೊಳಿಸುವುದು ಮೋಕ್ಷ, ಸಂಶಯ, ವಿಪರ್ಯಾಯ, ಸಾವದ್ಯ, ಅನಧ್ಯವಸಾಯ ಸ್ವಭಾವರಹಿತವಾಗಿ (ಸಂಶಯಾದಿಗಳಿಲ್ಲದಂತೆ) ಜೀವಾದಿ ಪದಾರ್ಥಗಳ ಯಾಥಾತ್ಮ್ಯವನ್ನರಿಯುವುದು ಸಮ್ಯಗ್‌ಜ್ಞಾನ. ಅದು ಮತಿ, ಶ್ರುತ, ಅವಧಿ, ಮನಃಪರ್ಯಾಯ ಮತ್ತು ಕೇವಲಜ್ಞಾನ ಎಂದು ಐದುವಿಧ. ಸಂಸಾರಪರಿತ್ಯಾಗೋದ್ಯುಕ್ತವೂ ಸಮ್ಯಗ್‌ಜ್ಞಾನೋಪೇತವೂ ಆದ ಭವ್ಯಜೀವನಿಗೆ ಬಾಹ್ಯಾಭ್ಯಂತರ ಕ್ರಿಯೆಗಳಿಂದ ನಿವೃತ್ತಿಯು ಸಮ್ಯಕ್ಚಾರಿತ್ರ, ಅದು ಸಾಮಾಯಿಕಚ್ಛೇದ, ಉಪಸ್ಥಾಪನೆ, ಪರಿಹಾರಶುದ್ಧಿ, ಸೂಕ್ಷ್ಮಸಾಂಪರಾಯ, ಯಥಾಖ್ಯಾತಚಾರಿತ್ರ ಎಂಬ ಭೇದಗಳಿಂದ ಐದು ವಿಧ" ಎಂಬುದಾಗಿ ಹೇಯೋಪಾದೇಯತತ್ತ್ವಗಳನ್ನು ತಿಳಿಸಿದನು. ಅಲ್ಲದೆ ಇವುಗಳಿಗೆ ಆಧಾರಭೂತವಾದ ಮೂರು ಜಗತ್ತುಗಳೊಳಗಿನ ನಲವತ್ತೊಂಬತ್ತು ನರಕಗಳ ವಿಸ್ತಾರ, ಭವನವ್ಯಂತರಾವಾಸ, ಅಸಂಖ್ಯಾತವಾದ ದ್ವೀಪ, ಸಮುದ್ರಗಳನ್ನು ಮತ್ತು ಅರವತ್ತೂರು ಸ್ವರ್ಗಪಟಲಗಳನ್ನು ವಿಸ್ತಾರವಾಗಿ ತಿಳಿಸಿದನು. ಅಲ್ಲಿ ನೆಲಸಿರುವವರ ದೇಹಾಯುಃಪ್ರಮಾಣಗಳನ್ನೂ ಸುಖದುಃಖಾದಿಗಳನ್ನೂ ತೀರ್ಥಂಕರ, ಚಕ್ರಧರ, ಬಲದೇವ, ವಾಸುದೇವ, ಪ್ರತಿವಾಸುದೇವರ ಕಥಾಸಂಬಂಧವನ್ನು ನಿರ್ಣಯಮಾಡಿ ಹೇಳಿದನು. ಆಗ ೬೪. ಅರ್ಹತ್ಪರಮೇಶ್ವರನಿಂದ ಉಕ್ತವಾದ ಧರ್ಮಾಮೃತವು ಸುರರನ್ನೂ ದನುಜರನ್ನೂ ಮನುಜರನ್ನೂ ಕಿನ್ನರರನ್ನೂ ತಿರ್ಯಗ್ಗಣವನ್ನೂ ತಣಿಸಿತು. ಈ ಧರ್ಮಾಮೃತವಿರಲು ಪ್ರಸಿದ್ಧವಾದ ಅಮೃತವು ಸವಿಯಾಗಬಲ್ಲುದೇ? ೬೫. ಸಮ್ಯಕ್ತ್ವವಿಶುದ್ಧಿಯಿಂದ ಭರತೇಶ್ವರನು ಒಪ್ಪಿದನು. ಅವನು ಅತರ್ಕ್ಯಗುಣನೂ ಊರ್ಜಿತಪುಣ್ಯನೂ ಆಗಿದ್ದನು. ಅವನು ಶರತ್ಕಾಲದಲ್ಲಿ ಅರಳಿದ

ವ|| ತದನಂತರಂ ಕುರುವಂಶಚೂಡಾಮಣಿಯೆನಿಸಿದ ಸೋಮಪ್ರಭನುಮಾತನನುಜನಾದಿದಾನ ತೀರ್ಥಂಕರಪ್ರವರ್ತನಂ ಶ್ರೇಯಾಂಸನುಂ ಭರತೇಶ್ವರಾನುಜನನಂತವೀರ್ಯನುಂ ಭಟ್ಟಾರಕಪಾದ ಮೂಲದೊಳ್ ದೀಕ್ಷೆಯಂ ಕೈಕೊಂಡು ಗಣಧರರಾದರ್; ಬ್ರಾಹ್ಮಿಯುಂ ಸೌಂದರಿಯುಂ ಆತ್ತ ನಿರ್ವೇಗೆಯರ್ ವಿವಾಹವಿಮುಖೆಯರಾಗಿ ಗುರುಪ್ರಸಾದದಿಂ ದೀಕ್ಷೆಯಂ ಕೈಕೊಂಡು ಗಣನೀಗಣ ಪ್ರಧಾನೆಯರಾದರ್ ; ಮತ್ತಂ ಗೃಹಿತೋಪಾಸಕವ್ರತಂ ಶ್ರುತಕೀರ್ತಿಯೆಂಬಂ ಶ್ರಾವಕಾಗ್ರಣಿಯಾದಂ; ಪ್ರಿಯವ್ರತೆಯೆಂಬೊಳಣುವ್ರತಗ್ರಹಣದಿಂ ಶ್ರಾವಿಕಾಪುರಸ್ಸರೆಯಾದಳ್; ಭರತರಾಜಪುತ್ರಂ ಮರೀಚಿಯೊರ್ಬನುಟಿಯೆ ಮುನ್ನಂ ಭಗ್ನತಪರಾದ ಕಚ್ಛಮಹಾಕಚ್ಛಾದಿಗಳರ್ಹದ್ರೂಪಮಂ ಕೈಕೊಂಡರ್; ಅನಂತವೀರ್ಯನೀಕ್ಷೇತ್ರದೊಳನೇಕಕಾಲಂ ಪರಾಮೃಷ್ಟಮಾದ ಮುಕ್ತಿಮಾರ್ಗಮಂ ಮುನ್ನಮೆ ಸಮಱುವೆನೆಂಬಂತೆ ಮೋಕ್ಷಲಕ್ಷ್ಮೀವಲ್ಲಭನಾದಂ ; ಭರತೇಶ್ವರನುಂ ಬಾಹುಬಲಿಕುಮಾರನುಂ ಜಿನೇಶ್ವರಪಾದಪದ್ಮಂಗಳ್ಗೆಱಗಿ ನಿಜರಾಜಧಾನಿಗಳ್ಗೆ ಪೋದರ್. ಇತ್ತ ಸೌಧರ್ಮೇಂದ್ರನುಂ ಧರ್ಮಚಕ್ರವರ್ತಿತ್ವಕ್ಕೆ ದಿಗ್ವಿಜಯಮೆನಿಸಿದ ಭಗವದ್ವಿಹಾರಮನವಧಿಯಿಂದಮಱಿದು, ಅದನೆ ಪುನರುಕ್ತಂ ಮಾಳ್ಪಂತೆ.

ದೇವ ವಿನೇಯೋತ್ಕರಸ
ಸ್ಯಾವಳಿ ಸುಗಿದಗಿದು ಕೂಡೆ ಬಾಡಿರ್ದುದು ಪಾ
ಪಾವಗ್ರಹದಿಂದದನಱಿ
ಳಾವನಿತಳಕಂತು ತಳಿಯೆ ಧರ್ಮಾಮೃತಮಂ ೬೬

ಕಮಲವನದ ಕಾಂತಿಯಿಂದ ಬೆಳಗಿದನು. ವ|| ಬಳಿಕ ಕುರುವಂಶಚೂಡಾಮಣಿಯಾದ ಸೋಮಪ್ರಭನೂ ಆತನ ತಮ್ಮ ಆದಿದಾನತೀರ್ಥಪ್ರವರ್ತಕನಾದ ಶ್ರೇಯಾಂಸನೂ ಭರತೇಶ್ವರನ ತಮ್ಮನಾದ ಅನಂತವೀರ್ಯನೂ ಭಟ್ಟಾರಕನ ಪದತಲದಲ್ಲಿ ದೀಕ್ಷೆಯನ್ನು ಸ್ವೀಕರಿಸಿ ಗಣಧರರಾದರು. ಬ್ರಾಹ್ಮಿಯೂ ಸೌಂದರಿಯೂ ವಿರಕ್ತರಾಗಿ ವಿವಾಹವಿರಹಿತರಾಗಿ ಗುರುಪ್ರಸಾದದಿಂದ ದೀಕ್ಷೆವಹಿಸಿ ಗಣನೀ[1] ಗಣಪ್ರಧಾನೆಯರಾದರು. ಶ್ರುತಕೀರ್ತಿ ಯೆಂಬುವನು ಉಪಾಸಕವ್ರತವನ್ನಪ್ಪಿದವನಾಗಿ ಶ್ರಾವಕಶ್ರೇಷ್ಠನೆನಿಸಿಕೊಂಡನು. ಪ್ರಿಯವ್ರತೆಯೆಂಬುವಳು ಅಣುವ್ರತವನ್ನು ಕೈಹಿಡಿದು ಶ್ರಾವಿಕಾಶ್ರೇಷ್ಠಳಾದಳು. ಭರತರಾಜಪುತ್ರನಾದ ಮರೀಚಿಯೊಬ್ಬನನ್ನುಳಿದು ಭಗ್ನತಪರಾದ ಕಚ್ಛಮಹಾಕಚ್ಛರು ಅರ್ಹದ್ರೂಪಧಾರಿಗಳಾದರು. ಅವರ ಮಧ್ಯದಲ್ಲಿ ಅನಂತವೀರ್ಯನು ಅನೇಕ ಕಾಲದಿಂದ ಅರಸಲ್ಪಟ್ಟ ಮುಕ್ತಿಮಾರ್ಗವನ್ನು ಈ ಕ್ಷೇತ್ರದಲ್ಲಿ ನಾನೇ ಅಂದಗೊಳಿಸುವೆನೆಂಬಂತೆ ಮೋಕ್ಷಲಕ್ಷ್ಮಿಗೆ ವಲ್ಲಭನಾದನು. ಭರತೇಶ್ವರನೂ ಬಾಹುಬಲಿಕುಮಾರನೂ ಜಿನೇಶ್ವರನ ಪಾದಪದ್ಮಗಳಿಗೆ ನಮಸ್ಕರಿಸಿ ನಿಜರಾಜಧಾನಿಗಳಿಗೆ ಹೋದರು. ಸೌಧರ್ಮೇಂದ್ರನು ಧರ್ಮಚಕ್ರವರ್ತಿತ್ವಕ್ಕೆ ದಿಗ್ವಿಜಯದಾಯಕವಾದ ಭಗವದ್ವಿಹಾರವು ನಡೆಯುವುದೆಂದು ಅವಧಿಜ್ಞಾನದಿಂದ ತಿಳಿದು ಅದನ್ನು ಪುನರುಕ್ತ ಮಾಡುವಂತೆ ೬೬. "ದೇವ, ಪಾಪವೆಂಬ ಬರಗಾಲದಿಂದ ವಿನೇಯರಾದ ಶಿಷ್ಯರ ಸಮೂಹವೆಂಬ ಸಸ್ಯಾವಳಿಯು ಕುಗ್ಗಿ ಕುಂದಿ

1 ಗಣನೀ = ಆರ್ಜಿಕೆ

ಮಿಳಿರೆ ದಯಾಧ್ವಜಮುನ್ನತಿ
ಗೊಳಗಾಗಿರೆ ಧರ್ಮಚಕ್ರಮಾಯತಿಯಂ ಕೈ
ಕೊಳೆ ಭವ್ಯವರೂಥಿನಿ ನಿ
ರ್ಮಳ ನಿನ್ನ ವಿಹಾರಮಾರನೇನೆಱಗಿಸದೋ ೬೭

ವ|| ಎಂದು ದೇವೇಂದ್ರನಾದಿಜಿನೇಂದ್ರಂಗೆ ಬಿನ್ನಪಂಗೆಯ್ಯಲೊಡಮನೇಕಭವ್ಯಕೋಟಿಯ ಪುಣ್ಯಪ್ರೇರಣೆಯಿಂದಂ ಸಮವಸರಣಮಂಡಳಂ ಗಗನಮಂಡಳದೊಳ್ ನಡೆಯೆ ಮರುತ್ಕುಮಾರ ಸಮ್ಮಾರ್ಜಿತ ಯೋಜನಾಂತರಿತರಮ್ಯಭೂಮಿಭಾಗನುಂ, ಮೇಘಕುಮಾರಸಸಂಸಿಕ್ತಪ್ರಶಮಿತರಜಃಪ್ರಸರ ಧರಣೀತಳನುಂ, ಪರಿಪಕ್ವಗಂಧಶಾಲಿವನವಿರಾಜಮಾನವಸುಧಾಸೂಚಿತಾಗಮನನುಂ, ಪ್ರಸನ್ನದಿಕ್ಕನ್ಯಾನನ ಸಮುದ್ದಿಷ್ಟಾತ್ಮಸನ್ನಿಧಾನನುಂ, ಧೌತಾಸಿನಿಭನಭೋಮಂಡಳನುಂ, ಜನಿತಜಗಜ್ಜನಾನಂದನುಂ, ಸಮಸ್ತ ಜನಮೈತ್ರೀಸಮೇತನುಂ, ಸಕಳರ್ತುಕುಸುಮಪಲ್ಲವಫಳವಿಳಸಿತತರು ನಿರಂತರಿತರತ್ನಮಯದರ್ಪಣ ಪ್ರತಿಮಾವನೀತಳವಿಳಾಸನುಂ, ಅನುಕೂಲಶಿಶಿರಸುರಭಿಮಂದಾನಿಲನುಂ, ಅನ್ಯೋನ್ಯಾಹ್ವಾನನಿರತ ದಿವಿಜನಿನದಪೂರಿತಸಕಳಗಗನತಳನುಂ, ಆದರ್ಶಾದ್ಯಷ್ಟಮಂಗಳಧ್ವಜಮಾಳಾವಿತಾನವಿಚಿತ್ರಾಂಬರನುಂ, ಸಹಸ್ರದಿನಕರಸ್ಪರ್ಧಿಸಹಸ್ರಾರಧರ್ಮಚಕ್ರಪುರಸ್ಸರನುಮಾಗಿ,

ಬಾಡಿಹೋಗಿದೆ. ಆದ್ದರಿಂದ ಅಖಿಲ ಭೂತಳದ ಹಿತಕ್ಕಾಗಿ ಧರ್ಮಾಮೃತವನ್ನು ಆ ಸಸ್ಯಾವಳಿಯ ಮೇಲೆ ಸಿಂಪಡಿಸುವುದಕ್ಕಾಗಿಯೂ ೬೭. ದಯಾಧ್ವಜವನ್ನು ಹಾರಾಡಿಸುವುದಕ್ಕೂ ಧರ್ಮಚಕ್ರವನ್ನು ಉನ್ನತಗೊಳಿಸುವುದಕ್ಕೂ ಭವ್ಯರ ಸೇನೆಯು ಶ್ರೇಯಸ್ಸನ್ನು ಪಡೆಯುವುದಕ್ಕೂ ಹೇ ನಿರ್ಮಲ ನಿನ್ನ ಧರ್ಮವಿಹಾರವು ನಡೆಯಲಿ; ಅದು ಯಾರನ್ನು ತಲೆಬಾಗಿಸದು?" ವ|| ಎಂದು ದೇವೇಂದ್ರನು ಆದಿಜಿನೇಂದ್ರನಿಗೆ ಬಿನ್ನವಿಸಿದನು. ಆಗ ಭವ್ಯಜನರ ಪುಣ್ಯಕೋಟಿಯ ಪ್ರೇರಣೆಯಿಂದ ಸಮವಸರಣ ಮಂಡಲವು ಗಗನಮಂಡಲದಲ್ಲಿ ಹೊರಟಿತು. ಮರುತ್ಕುಮಾರರು ಯೋಜನಾಂತರದ ರಮ್ಯವಾದ ಭೂಭಾಗವನ್ನು ಗುಡಿಸಿದರು. ಮೇಘಕುಮಾರರು ಭೂಮಿಯಲ್ಲಿದ್ದ ಧೂಳಿಗಳನ್ನೆಲ್ಲ ಅಡಗಿಸಿದರು. ಸುಗಂಧಮಯವಾದ ಬತ್ತದ ಗದ್ದೆಗಳಿಂದ ಶೋಭಿತವಾದ ವಸುಧೆಯು ಸ್ವಾಮಿಯ ಆಗಮನವನ್ನು ಸೂಚಿಸಿತು. ದಿಕ್ಕನ್ಯಕೆಗಳ ಪ್ರಸನ್ನಮುಖಗಳು ಆದಿಜಿನನ ಆತ್ಮಸನ್ನಿಧಾನವನ್ನರಿತುವು. ತೊಳೆದ ಕತ್ತಿಗಳಂತೆ ನಭೋಮಂಡಲ ವಿದ್ದಿತು. ಜಗತ್ತಿನ ಜನಕ್ಕೆಲ್ಲ ಆನಂದವಾಯಿತು. ಸಕಲ ಜನರಲ್ಲಿಯೂ ಸ್ವಾಮಿಗೆ ಮೈತ್ರೀಭಾವವಿದ್ದಿತು. ಸಕಲ ಋತು ಕುಸುಮಪಲ್ಲವಸಹಿತವಾದ ವೃಕ್ಷಗಳಿಂದ ಜಗತ್ತು ರತ್ನದರ್ಪಣದ ವಿಲಾಸವನ್ನು ಪಡೆಯಿತು. ಅನುಕೂಲಶೀತ ಸುರಭಿಯಾದ ಮಂದಾನಿಲವು ಬೀಸಿತು. ಪರಸ್ಪರವಾಗಿ ಕರೆದುಕೊಳ್ಳುವುದರಲ್ಲಿ ನಿರತರಾದ ದಿವಿಜರ ಶಬ್ದಗಳಿಂದ ಗಗನತಲವು ವ್ಯಾಪಿಸಿತು. ಕನ್ನಡಿ ಮುಂತಾದ ಅಷ್ಟಮಂಗಲಗಳಿಂದ ಯುಕ್ತನೂ ಧ್ವಜಮಾಲೆವಿತಾನಗಳೆಂಬ ವಿಚಿತ್ರಾಂಬರಭೂಷಿತನೂ ಆಗಿ ಸಹಸ್ರ ಸೂರ್ಯರಂತೆ ಪ್ರಕಾಶಮಾನವಾದ ಸಹಸ್ರಾರ ಧರ್ಮಚಕ್ರವನ್ನು ಮುಂದಿಟ್ಟುಕೊಂಡು.

ಶಕ ಕಾಶ್ಮೀರಾಂಧ್ರ ಕರ್ನಾಟಕ ಮಗಧಯವಾವಂತಿ ಪಾಂಚಾಳ ಸೌರಾ
ಷ್ಟ್ರ ಕಳಿಂಗಾಭೀರ ಸೌವೀರಕ ಕುರು ಕರಹಾಟಾಂಗ ಗಾಂಧಾರ ವಂಗಾ
ಶ್ಮಕ ಬಾಹ್ಲೀಕಾದಿ ದೇಶಂಗಳ ಸಕಳವಿನೇಯೋತ್ಕರಕ್ಕೆಲ್ಲಮುತ್ಕು
ತ್ಸುಕಮಂ ಮಾಡುತ್ತುಮಿರ್ದಂ ಸುಕವಿಜನಮನೋಮಾನಸೋತ್ತಂಸಹಂಸಂ ೭೮

ವ॥ ಅಂತು ಧರ್ಮಕ್ಷೇತ್ರಂಗಳಂ ವಿಹಾರಿಸಿ ವಿನೇಯಜನಾಶಯಕುಶೇಶಯಂಗಳನಲರ್ಚುತುಂ ಬಂದು,

ಪರಮಾನಂತಚತುಷ್ಟಯೈಕನಿಳಯಂ ಶ್ರೀಮತ್ಸಭಾಮಂಡಳಾಂ
ತರಸಿಂಹಾಸನಸುಸ್ಥಿತಂ ಗಣವೃತಂ ಚಂಚಚ್ಚತುಷ್ಷಷ್ಟಿಚಾ
ಮರವಿಭ್ರಾಜಿತನಾನತತ್ರಿಭುವನಂ ಕುಂದೇಂದುದುಗ್ಧಾಬ್ಧಿಪಾಂ
ಡುರಕೈಲಾಸನಗೇಂದ್ರದೊಳ್ ನೆಲಸಿದಂ ಸಂಸಾರಸಾರೋದಯಂ ೭೯

ಆದಿಪುರಾಣದೊಳ್ ಕೇವಲಜ್ಞಾನೋತ್ಪತ್ತಿಮಹೋತ್ಸವಂ

## ದಶಮಾಶ್ವಾಸಂ

೭೮. ಶಕ, ಕಾಶ್ಮೀರ, ಆಂಧ್ರ, ಕರ್ನಾಟಕ, ಮಗಧ, ಯವ, ಅವಂತಿ, ಪಾಂಚಾಲ, ಸೌರಾಷ್ಟ್ರ, ಕಳಿಂಗ, ಆಭೀರ, ಸೌವೀರ, ಕುರು, ಕರಹಾಟಕ, ಅಂಗ, ಗಾಂಧಾರ, ವಂಗ, ಅಶ್ಮಕ ಮತ್ತು ಬಾಹ್ಲೀಕ ರಾಜ್ಯಗಳಲ್ಲಿ ವಿನೇಯರಾದ ಭವ್ಯರಿಗೆ ಸುಕವಿಜನಮನ ಮಾನಸೋತ್ತಂಸಹಂಸನಾದ ಆದಿಜಿನೇಶ್ವರನು ಅತ್ಯುತ್ಸವವನ್ನು ಮಾಡುತ್ತ ಇದ್ದನು. ವ॥ ಅಂತು ಧರ್ಮಕ್ಷೇತ್ರಗಳಲ್ಲಿ ವಿಹರಿಸುತ್ತ ವಿಧೇಯಜನರ ಹೃದಯಗಳೆಂಬ ಕಮಲಗಳನ್ನು ಅರಳಿಸುತ್ತ ಬಂದು ೭೯. ಅನಂತಜ್ಞಾನ, ಅನಂತದರ್ಶನ, ಅನಂತಸುಖ ಮತ್ತು ಅನಂತವೀರ್ಯಗಳಿಗೆ ಏಕಾಶ್ರಯನೂ ಸಭಾಮಂಡಲಮಧ್ಯಸ್ಥಿತವಾದ ಸಿಂಹಾಸನದಲ್ಲಿ ಮಂಡಿತನೂ ಗಣಧರಸಮೇತನೂ ಅರುವತ್ತುನಾಲ್ಕು ಚಾಮರಗಳಿಂದ ರಾಜಿತನೂ ತ್ರಿಲೋಕನಮಸ್ಕೃತನೂ ಆದ ಮತ್ತು ಕುಂದ, ಚಂದ್ರ ಮತ್ತು ಕ್ಷೀರಸಮುದ್ರಗಳಂತೆ ಬೆಳ್ಳಗಿರುವ ಕೈಲಾಸಪರ್ವತದಲ್ಲಿ ಸಂಸಾರಸಾರೋದಯನು ನೆಲಸಿದನು.

ಇಂತು ಕೇವಲ ಜ್ಞಾನೋತ್ಪತ್ತಿ ಮಹೋತ್ಸವವೆಂಬ
ಹತ್ತನೆಯ ಆಶ್ವಾಸ ಮುಗಿಯಿತು.

# ಏಕಾದಶಾಶ್ವಾಸಂ

ಶ್ರೀಪರಿಪೂರ್ಣಂ ಭರತಮ
ಹೀಪಾಳಂ ಚಕ್ರಪೂಜೆಗೆಯ್ದಂ ಸಕಳ
ಕ್ಷ್ಮಾಪಶಿರೋರತ್ನಾಂಶು
ವ್ಯಾಪಿತಚರಣಂ ಸರಸ್ವತೀಮಣಿಹಾರಂ ೧

ವ|| ಆಗಳ್

ನೆಲನಾಕಾಶಂ ದಿಶಾಮಂಡಲಮೆನಿತನಿತುಂ ಚಕ್ರವರ್ತಿಪ್ರತಾಪಾ
ನಲತೀವ್ರಜ್ಯೋತಿಯಿಂ ಪರ್ವುವುದನಿದುವೆ ಪೇೞ್ವಪ್ಪುದೆಂಬಂತಿರೌರ್ವ
ಜ್ವಲನಜ್ವಾಳಾಕಳಾಪೋದ್ಗಮಮನನುಗುಣಂ ಮಾಡುತುಂ ದ್ವಾದಶಾರ್ಕೋ
ಜ್ವಲತೇಜಶ್ಚಕ್ರರೂಪಂ ಬೆಳಗಿದುದು ಜಗಚ್ಚಕ್ರಮಂ[1] ಚಕ್ರರತ್ನಂ ೨

ಅದು ದೇವಲೋಕದಂತೊ
ಪ್ಪಿದುದು ಸಹಸ್ರಾರಸಹಿತಮದು ಚಕ್ರಿಯ ತೇ
ಜದ ಜಸದವಾರ್ಯಶೌರ್ಯದ
ಪೊದಳ್ದ ಭುಜವೀರ್ಯದೊಂದು ರೂಪನೆ ಪೋಲ್ಕುಂ ೩

ವ|| ಆ ಸುದರ್ಶನಮೆಂಬ ಚಕ್ರರತ್ನಮಂ ಪೂಜಿಸಿಂಬೞಿಯಂ ದ್ವಾದಶ ಯೋಜನಾಯಾಮದೊಳಂ ನವಯೋಜನವಿಸ್ತಾರದೊಳಂ ಬೀಡಂ ಬಿಡುವ ಚಕ್ರವರ್ತಿಯ ಕಟಕಮಂ ತನ್ನ ನೆೞಲೊಳೆ

೧. ಶ್ರೀಪರಿಪೂರ್ಣನೂ ಸರಸ್ವತೀಮಣಿಹಾರನೂ ಸಕಲರಾಜರ ಶಿರೋರತ್ನಗಳ ಕಾಂತಿಗಳಿಂದ ವ್ಯಾಪ್ತವಾದ ಕಾಲುಗಳುಳ್ಳವನೂ ಆದ ಭರತರಾಜನು ಚಕ್ರಪೂಜೆಯನ್ನು ಮಾಡಿದನು. ವ|| ಆಗ ೨. ಬಡಬಾನಲನ ಜ್ವಾಲಾಸಮೂಹದ ಉದಯವನ್ನು ಅನುಕರಿಸುತ್ತಾ ದ್ವಾದಶ ಸೂರ್ಯರ ತೇಜೋಮಂಡಲದಂತಿದ್ದ ಚಕ್ರರತ್ನವು ಜಗತ್ತನ್ನು ಬೆಳಗಿತು. ಅದು ನೆಲವನ್ನೂ ಆಕಾಶವನ್ನೂ ದಿಶಾಮಂಡಲವನ್ನೂ ಚಕ್ರವರ್ತಿಯ ಪ್ರತಾಪಾಗ್ನಿಯ ತೀವ್ರಜ್ಯೋತಿಯು ಎತ್ತೆತ್ತಲೂ ಹರಡಿಕೊಂಡಿದೆ ಎಂದು ಹೇಳುವಂತೆ ಕಾಣಿಸಿತು. ೩. ಆ ಚಕ್ರವು ದೇವಲೋಕದಂತೆ ಸಹಸ್ರಾರವುಳ್ಳದ್ದಾಗಿತು. ಅದು ಚಕ್ರಿಯ ತೇಜಸ್ಸು, ಯಶಸ್ಸು, ಅಪ್ರತಿಹತವಾದ ವೀರ್ಯ ಮತ್ತು ತೋಳ್ಬಲ-ಇವುಗಳ ರೂಪವನ್ನು ಹೋಲಿತು. ವ|| ಸುದರ್ಶನವೆಂಬ ಚಕ್ರರತ್ನವನ್ನು ಪೂಜಿಸಿದ ಬಳಿಕ ಹನ್ನೆರಡು ಯೋಜನದುದ್ದವೂ ಒಂಬತ್ತು ಯೋಜನದ ಅಗಲವೂ ಇರುವ ಜಾಗದಲ್ಲಿ ಬೀಡುಬಿಡುವ ಚಕ್ರವರ್ತಿಯ ಸೇನೆಯನ್ನು 'ತನ್ನ ನೆಳಲೊಳೆ ಕಾವ' ಸೂರ್ಯಪ್ರಭವೆಂಬ ವಿಚಿತ್ರ

---

೧. ೨ನೆಯ ಪದ್ಯದ ಒಂದನೆಯ ಪಾದದಲ್ಲಿ 'ದಿಶಾ' ಶಬ್ದ ಬಂದಿರುವುದರಿಂದ ಅದು ಪುನರುಕ್ತವಾಗಬಾರದೆಂದು ಇಲ್ಲಿ 'ಜಗಚ್ಚಕ್ರಮಂ' ಎಂಬ ಪಾಠಾಂತರವನ್ನೇ ಇಟ್ಟುಕೊಳ್ಳಲಾಗಿದೆ.

**ಕಾವ ಸೂರ್ಯಪ್ರಭಮೆಂಬ ವಿಚಿತ್ರಮಣಿಮಯೂಖಚಿತ್ರಿತಚ್ಛತ್ರರತ್ನಮುಮುತ್ಖಾತಮಾತ್ರ ವಿತ್ರಸ್ತ ಸಮಸ್ತಾರಿಮಂಡಲಮುಂ ವೀರಲಕ್ಷ್ಮೀಕರ್ಣಪೂರನೀಳೇಂದೀವರಶ್ಯಾಮಳಮುಮಪ್ಪ ಸಾನಂದಕಮೆಂಬ ಖಡ್ಗರತ್ನಮುಂ, ವಿಜಯಾರ್ಧಾಚಳಮಹಾಗುಹಾಗಹ್ವರಮುಖವಜ್ರಕವಾಟಪುಟವಿಘಟನಪಟುವಪ್ಪ ಚಂಡವೇಗಮೆಂಬ ದಂಡರತ್ನಮುಂ, ಅಗಾಧಜಲದುರ್ಗಸಮುತ್ತರಣನಿರತಸಕಳಶಿಬಿರಸಂಧಾರಣ ಶಕ್ತಿಯುಕ್ತಮಪ್ಪ ವಜ್ರಮಯಮೆಂಬ ಚರ್ಮರತ್ನಮುಂ, ಚಕ್ರವರ್ತಿಯ ಮಣಿಮಕುಟಶಿಖರಾಯಮಾನಮಪ್ಪ ಚೂಡಾಮಣಿಯೆಂಬ ಮಣಿರತ್ನಮುಂ, ಮಹಾಗುಹಾಗಹ್ವರಾಂತರಸೂಚಿನಿರ್ಭೇದ್ಯತಮಸ್ತಮೋ ನಿರಸನಪ್ರಭಾಪ್ರಭೂತಗುಣೋಪೇತಮಪ್ಪ ಚಿಂತಾಜನನಿಯೆಂಬ ಕಾಕಿಣಿರತ್ನಮುಂ, ನಾಮಗ್ರಹಣಮಾತ್ರ ದಿಂದಮೆ ಸಮಸ್ತವಸ್ತುವಿಸ್ತಾರಾಂತರ್ನಿಹಿತವಸ್ತುಸಮರ್ಪಣಪರಾಯಣನಪ್ಪ ಕಾಮವೃಷ್ಟಿಯೆಂಬ ಗೃಹಪತಿರತ್ನಮುಂ, ಮ್ಲೇಚ್ಛರಾಜಸೇನಾಪತಿಚ್ಛದಮದಾವಲೇಪಪರಿಲೋಪವಿಳಾಸಿಯುಂ ಷಡ್ವಿಧ ಸೇನಾನಾಯಕಪರಾಯಣನುಮಪ್ಪಯೋಧ್ಯನೆಂಬ ಸೇನಾನಿರತ್ನಮುಂ, ಮಹಾನದಾವಗಾಹನಸಮಯನೌ ದ್ರೋಣಿಸಂಕ್ರಮಾದಿವಿಧಾನಪ್ರಾಗಲ್ಭ್ಯನುಂ ಅನುಸ್ಮರಣಮಾತ್ರನಿಷ್ಪಾದಿತ ಸಪ್ತತಳಾದಿಪ್ರಾಸಾದ ಪ್ರಕರನುಮಪ್ಪ ಭದ್ರಮುಖನೆಂಬ ತಕ್ಷರತ್ನಮುಂ, ಶಾಂತಿಕಪೌಷ್ಟಿಕಕ್ರಿಯಾಕುಶಲನುಂ ಧರ್ಮಕಾರ್ಯಾದಿಕುಶಲನು ಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ, ಕಾಮರೂಪಿಯುಂ ಕಾಮಚಾರಿಯು ಮಪ್ಪ ವಿಜಯಾರ್ಧಪರ್ವತಮೆಂಬ ಹಸ್ತಿರತ್ನಮುಂ, ಪವನವೇಗನಿವರ್ತನನಿಪುಣಮುಂ ದ್ವಾದಶಯೋಜನೋಲ್ಲಂಘನರಹೋನಿವಾಸಭೂಮಿಯುಮಪ್ಪ ಪವನಂಜಯಮೆಂಬ ತುರಗರತ್ನಮುಂ,**

ಮಣಿಕಿರಣಗಳಿಂದ ಚಿತ್ರಿತವಾದ ಛತ್ರರತ್ನವೂ, ಉತ್ಖಾತ ಮಾತ್ರದಿಂದಲೇ ಸಮಸ್ತ ಶತ್ರುಸಮೂಹವನ್ನು ಭಯಗೊಳಿಸಬಲ್ಲ ವೀರಲಕ್ಷ್ಮಿಯ ಕರ್ಣಪೂರವೋ ಎನಿಸಿರುವ ನೀಲೋತ್ಪಲೇಂದೀವರಶ್ಯಾಮವಾದ ಸಾನಂದಕವೆಂಬ ಖಡ್ಗರತ್ನವೂ, ವಿಜಯಾರ್ಧಪರ್ವತದಲ್ಲಿನ ಮಹಾಗುಹೆಯ ವಜ್ರದ ಬಾಗಿಲನ್ನೊಡೆಯಲರ್ಹವೆನಿಸಿದ ಚಂಡವೇಗವೆಂಬ ದಂಡರತ್ನವೂ, ಅಗಾಧವಾದ ಜಲದುರ್ಗವನ್ನು ದಾಟಿಸುವುದರಲ್ಲಿ ನಿಪುಣವೂ, ಶಿಬಿರಗಳೆಲ್ಲವನ್ನೂ ಸಂಧರಿಸಲು ಸಮರ್ಥವೂ ಎನಿಸಿದ ವಜ್ರಮಯವೆಂಬ ಚರ್ಮರತ್ನವೂ, ಚಕ್ರವರ್ತಿಯ ಮಣಿಕಿರೀಟಕ್ಕಗ್ರಗಣ್ಯವಾದ ಚೂಡಾಮಣಿಯೆಂಬ ಮಣಿರತ್ನವೂ, ಮಹಾಗುಹೆಗಳಲ್ಲಡಗಿರುವ ಸೂಚೀ ನಿರ್ಭೇದ್ಯವಾಗಬಲ್ಲ ಕತ್ತಲಷ್ಟನ್ನೂ ಹೋಗಲಾಡಿಸಬಲ್ಲ ಅತಿಶಯವಾದ ಕಾಂತಿಯಿಂದ ಕೂಡಿದ ಚಿಂತಾಜನನಿಯೆಂಬ ಕಾಕಿಣೀರತ್ನವೂ ಹೆಸರನ್ನು ಹೇಳಿದ ಮಾತ್ರದಿಂದಲೇ ವಸ್ತುಗಳೊಳಗಿನ ವಸ್ತುಗಳನ್ನು ಹುಡುಕಿ ತಂದುಕೊಡುವುದರಲ್ಲಿ ಸಮರ್ಥನೆನಿಸಿದ ಕಾಮವೃಷ್ಟಿಯೆಂಬ ಗೃಹಪತಿರತ್ನವೂ, ಮ್ಲೇಚ್ಛರಾಜ ಸೇನಾಪತಿಗಳೇ ಮುಂತಾದವರ ಮದಗರ್ವಗಳನ್ನು ಮುರಿಯಬಲ್ಲ, ಷಡ್ವಿಧಸೇನಾನಾಯಕಪರಾಯಣನಾದ ಅಯೋಧ್ಯನೆಂಬ ಸೇನಾನಿರತ್ನವೂ, ಮಹಾನದಿಗಳನ್ನು ದಾಟಲು ಯೋಗ್ಯವಾದ ನಾವೆ, ದೋಣಿ ಸಂಕ್ರಮಾದಿ ವಿರಚನೆಗಳಲ್ಲಿ ಕುಶಲನಾದವನೂ, ಸ್ಮರಿಸಿದ ಮಾತ್ರದಿಂದಲೇ ಏಳು ಮಹಡಿಯೇ ಮೊದಲಾದ ಉಪ್ಪರಿಗೆಮನೆಗಳನ್ನು ನಿರ್ಮಿಸಬಲ್ಲ ಭದ್ರಮುಖನೆಂಬ ತಕ್ಷರತ್ನನೂ ಶಾಂತಿಪೌಷ್ಟಿಕವೇ ಮುಂತಾದ ಧರ್ಮಕಾರ್ಯಗಳಲ್ಲಿ ಕುಶಲನಾದ ಬುದ್ಧಿಸಾಗರನೆಂಬ ಪುರೋಹಿತರತ್ನನೂ ಕಾಮರೂಪಿಯೂ ಕಾಮಚಾರಿಯೂ ಆದ ವಿಜಯಾರ್ಧಪರ್ವತವೆಂಬ ಗಜರತ್ನವೂ

ಮನೋಹರಮಪ್ಪ ಸ್ತ್ರೀರತ್ನಮುಮೆಂದಿಂತು ಜೀವಾಜೀವರತ್ನಂ ಬೇಱೆವೇಱೆ ಸಹಸ್ರ ಯಕ್ಷರಕ್ಷಿತಂಗಳಪ್ಪುವಂ,

ಪೂಜಿಸಿ ಪೊಱಮಟ್ಟಗ್ರತ
ನೂಜೋತ್ಪತ್ತ್ಯುತ್ಸವಕ್ಕೊಡರ್ಚುವ ಪದದೊಳ್
ರಾಜಾಧಿರಾಜನಮರಮ
ಹೀಜದ ಲೀಲೆಯನೆ ಲೀಲೆಯಿಂ ಕೈಕೊಂಡಂ ೪

ಮಲೆಪರ್ಗಭಿಚಾರಕ್ರಿಯೆ
ವಲಮೆನಿಸಲ್ ಚಕ್ರ ಪೂಜನಂ ಸಕಳಮಹೀ
ವಳಯಕ್ಕೆ ಶಾಂತಿಕರ್ಮಂ
ಬಲಮೆನಿಸಲ್ ಜಾತಕರ್ಮಮೇಂ ನೆಱೆದತ್ತೋ ೫

**ವ॥ ಅಂತು ಭರತೇಶ್ವರಚಕ್ರವರ್ತಿ ಚಕ್ರಪೂಜಾಗ್ರತನೂಜಜಾತಕರ್ಮೋತ್ಸವನಿರ್ವರ್ತನಾತಿ ಪ್ರೀಣಿತಾಂತಃಕರಣನಾಗಿರ್ಪನ್ನೆಗಮಾತನ ತೀವ್ರಪ್ರತಾಪಮೆ ತನ್ನೊಳ್ ಸಂಕ್ರಮಿಸಿದಂತೆ ದಿನಕರಕಿರಣಂಗಳೊಳ್ ಪಳಚ್ಚನಪ್ಪ ಪೊಳೆಪುಂ, ಆತನ ಬೆಳ್ಗೊಡೆಯ ಪಜ್ಜಳಿಸುವ ಪಜ್ಜಳಿಕೆಯೆ ತನ್ನೊಳಪೊಕ್ಕಂತೆ ಚಂದ್ರಮಂಡಲಕುಚ್ಚಮಾಗೆ ಪಳಚ್ಚನಪ್ಪ ಬೆಳ್ದಿಂಗಳುಂ, ಆತನ ದಿಗ್ವಿಜಯದೊಸಗೆಯೊಳ್**

ಗಾಳಿಯ ವೇಗವನ್ನೂ ತಡೆಗಟ್ಟಬಲ್ಲ ಹನ್ನೆರಡು ಯೋಜನದಷ್ಟು ದೂರ ವೇಗವಾಗಿ ಓಡಬಲ್ಲ ಪವನಂಜಯವೆಂಬ ಅಶ್ವರತ್ನವೂ, ಮನೋಹರವಾದ ಸ್ತ್ರೀರತ್ನವೂ-ಹೀಗೆ ಅನೇಕ ಬಗೆಯ ಜೀವಾಜೀವರತ್ನಗಳು[1] ಹುಟ್ಟಿದವು. ಅವು ಬೇರೆ ಬೇರೆ ಸಹಸ್ರಾರು ಯಕ್ಷರಕ್ಷಿತಗಳಾಗಿರಲು ಅವನ್ನು ಭರತರಾಜನು ೪. ಪೂಜಿಸಿದನು. ಅನಂತರ ಜ್ಯೇಷ್ಠಪುತ್ರನ ಜನ್ಮೋತ್ಸವಕ್ಕೆ ತೊಡಗಲಾಗಿ, ರಾಜಾಧಿರಾಜನಾದ ಭರತನು ಕಲ್ಪವೃಕ್ಷದ ಲೀಲೆಯನ್ನು ಲೀಲೆಯಿಂದ ಕೈಕೊಂಡನು. (ಯಥೇಚ್ಛವಾಗಿ ದಾನಮಾಡಿದನೆಂದು ಅಭಿಪ್ರಾಯ). ೫. ಎದುರು ಬೀಳುವ ಶತ್ರುಗಳ ಮೇಲೆ ಅಭಿಚಾರಕ್ರಿಯೆಯಿದ್ದಂತೆ ಚಕ್ರಪೂಜನೆಯೂ ಸಕಲ ಭೂಮಂಡಲಕ್ಕೆ ಶಾಂತಿಕರ್ಮವಾದಂತೆ ಜಾತಕರ್ಮವೂ ಅದೇನು ವೈಭವದಿಂದ ಜರುಗಿದುವೊ! ವ॥ ಭರತೇಶ್ವರಚಕ್ರವರ್ತಿಯು ಚಕ್ರಪೂಜೆ, ಜ್ಯೇಷ್ಠಪುತ್ರನ ಜಾತಕರ್ಮೋತ್ಸವಗಳನ್ನು ಪೂರ್ಣಗೊಳಿಸಿ ಸಂತುಷ್ಟ ಮನೋಭಾವದಿಂದಿದ್ದನು. ಆಗ ಅವನ ತೀವ್ರ ಪ್ರತಾಪವೇ ತನ್ನಲ್ಲಿ ಸಂಕ್ರಮಿಸಿದಂತೆ ಸೂರ್ಯನ ಕಿರಣಗಳಲ್ಲಿ ಅಕಸ್ಮಾತ್ತಾಗುಂಟಾದ ಹೊಳಪೂ ಆತನ ಶ್ವೇತಛತ್ರಿಯ ಪ್ರಜ್ವಲಿಸುವ ಉಜ್ವಲತೆಯೇ ತನ್ನ ಒಳಹೊಕ್ಕಂತೆ ಚಂದ್ರಮಂಡಲದಲ್ಲಿ ಹೆಚ್ಚಾಗಿ ಉಂಟಾದ ಬೆಳದಿಂಗಳೂ ಆತನ ದಿಗ್ವಿಜಯ ಪ್ರಯಾಣದ ಸಂತೋಷದಲ್ಲಿ ದಿಗಂಗನೆಯರೆತ್ತಿದ ಬೆಳ್ಳಿಯ ಕಲಶಗಳಂತೆ ತಳತಳಿಸಿ ಹೊಳೆಯುವ ಬಿಳಿಯ ಮೊಗ್ಗುಗಳೂ ಆತನ ಬರವಿನ ಉತ್ಸವಕ್ಕೆ

1. ಜೀವಾಜೀವ ರತ್ನಗಳು = ಜೀವವಿರುವ ಗೃಹಪತಿರತ್ನಾದಿಗಳು, ಜೀವವಿಲ್ಲದ ಖಡ್ಗರತ್ನಾದಿಗಳು.

ದಿಗಂಗನೆಯರೆತ್ತಿದ ಬೆಳ್ಳಿಯಕಳಶಂಗಳಂತೆ ತಳದಳಿಸಿ ಪೊಳೆವ ಬಳಿಯ ಮುಗುಳ್ಗಳುಂ, ಆತನ ಬರವಿನುತ್ಸವಕ್ಕೆ ಸಂತಸಂಬಟ್ಟು ಮಹೀಲಲನೆಯ ನಗೆಮೊಗದಂತೆ ತಿಳಿದ ಕೊಳಂಗಳುಂ, ಆತನಂತಃಪುರಕಾಂತೆಯರ ನಗೆಮೊಗದ ನಗೆಗಣ್ಗಳ ಬೆಡಂಗನೆ ಕಿಱುನಗೆನಗುವಂತೆ ಮೆಲ್ಲಮೆಲ್ಲನುಳ್ಳಲರ್ವ ಮಹೋತ್ಪಳನೀಳೋತ್ಪಳಂಗಳುಂ ಆತಂಗೆ ತುಱುಂಗಲುಂ ಬಂಬಲುಮಾಗೆ ಬೀಸುವ ಚಾಮರದ ಪೊಳೆಪುಗಳೇ ದೆಸೆದೆಸೆಗೆಸೆವಂತೆ ಪಸರಿಸಿ ನೆಗೆವದ ರಾಜಹಂಸಗಳುಂ, ಆತನ ಪಡೆಗೆ ನಡೆಯಲೆಡೆಮಾಡಿದಂತೆ ಬಳ್ವಳಾದ ದೆಸೆಗಳುಂ, ಆತನ ವಿಜಯಾರ್ಥಸೈನ್ಯಕ್ಕೆ ತಡೆಯದೆ ಪಾಯಲ್ಕೆವೇಟ್ಕುಮೆಂಬಂತೆ ನೆಲೆಮಾಡಿದ ಮಹಾನದಿಗಳುಂ, ಆತನ ವಿಜಯಕಟಕಮದ ಸಿಂಧುರಬಂಧುರಮದಗಂಧಮನೆ ತನಗೆ ಪಡೆವಂತೆ ದೆಸೆದೆಸೆಗೆ ಪೊಣ್ಮುವ ಸಪ್ತಚ್ಛದವನಂಗಳುಂ ತನ್ನ ಬರವಂ ಪ್ರಕಟಂಮಾಡೆ,

ಪೊಸಜಾದಿಯ ಬೆಳೆದೊಱಗಿದ
ಪೊಸಗಟಿಮೆಯ ಪೊಸತರಲ್ದ ತಾವರೆಗಳ ಕಂ
ಪಸದಳಮೆಸೆದಿರೆ ದೆಸೆದೆಸೆ
ಗೊಸಗೆಯೆ ಬರ್ಪಂತೆ ಕಣ್ಗೆವಂದುದು ಶರದಂ ೬

ಖರಕಿರಣಂಗಳ ಕಾಯ್ಪಿನ
ಖರತನದಿಂ ಚಂದ್ರಕಿರಣದುಜ್ವಳಿಕೆಯಿನಾ
ಭರತನ ಮುಳಿಸೊಸಗೆಯನನು
ಕರಿಸಿದುದೇಂ ಚಕ್ರವರ್ತಿವೃತ್ತಮೊ ಶರದಂ ೭

ಸಂತೋಷಹೊಂದಿದ ಭೂಲಲನೆಯ ನಗೆಮೊಗದಂತೆ ತಿಳಿಗೊಳಗಳೂ ಅವನ ಅಂತಃಪುರಸ್ತ್ರೀಯರ ನಗೆಮೊಗ ನಗೆಗಣ್ಗಳ ಬೆಡಗನ್ನು ನೋಡಿ ಕಿರುನಗೆಯಿಂದ ನಗುವಂತೆ ಮೆಲ್ಲಮೆಲ್ಲನರಳಿದ ಮಹೋತ್ಪಲ (ಕಮಲ) ನೀಲೋತ್ಪಲಗಳೂ ಅವನಿಗೆ ಗೊಂಚಲು ಗೊಂಚಲಾಗಿ ಬೀಸುವ ಚಾಮರದ ಹೊಳಪುಗಳು ದಿಕ್ಕುದಿಕ್ಕುಗಳಲ್ಲೆಲ್ಲ ಹರಡಿದಂತೆ ಹಾರಾಡುವ ರಾಜಹಂಸಗಳೂ ರಾಜನ ಸೈನ್ಯಕ್ಕೆ ನಡೆಯಲು ಸ್ಥಳಮಾಡಿಕೊಟ್ಟಂತೆ ಸ್ವಚ್ಛವಾಗಿ ವಿಸ್ತರಿಸಿದ ದಿಕ್ಕುಗಳೂ ಅವನ ವಿಜಯಸೈನ್ಯಕ್ಕೆ ತಡೆಯದೆ ದಾಟಲವಕಾಶವೀಯ ಬೇಕೆಂಬಂತೆ ತಳಕ್ಕೆ ಸಾರಿದ (ಆಳವಿಲ್ಲದ) ಮಹಾನದಿಗಳೂ ಅವನ ವಿಜಯ ಶಿಬಿರವು ಮದಸಿಂಧುರವನ್ನೂ ಮದಗಂಧವನ್ನೂ ತಮಗೆ ಪಡೆದಂತೆ ದೆಸೆದೆಸೆಗೆ ಪೊಣ್ಮುವ ಏಳೆಲೆ ಬಾಳೆಗಳೂ ಶರತ್ಕಾಲದ ಬರವನ್ನು ಪ್ರಕಟಮಾಡಿದುವು. ೬. ಹೊಸದಾದ ಜಾತಿಪುಷ್ಪ, ಬೆಳೆದು ಮಲಗಿದ ಬತ್ತ ಮತ್ತು ಆಗತಾನೆ ಅರಳಿದ ತಾವರೆಗಳ ಸುವಾಸನೆಯು ಅತಿಯಾಗಿ ಎಸೆದಿತ್ತು. ದಿಕ್ಕುಗಳೆಲ್ಲಕ್ಕೂ ಸಂತೋಷವು ಬರುವಂತೆ ಶರತ್ಕಾಲವು ಸೊಗಯಿಸಿತು. ೭. ಸೂರ್ಯನ ಕಾವಿನ ತೀವ್ರತೆಯಿಂದ ಭರತನ ಮುಳಿಸನ್ನೂ ಚಂದ್ರಕಿರಣದ ಉಜ್ವಲತೆಯಿಂದ ಅವನ ಸಂತೋಷವನ್ನೂ ಶರದೃತು ಅನುಕರಿಸಿತು. ಅದು ಚಕ್ರವರ್ತಿಯ ನಡತೆಯನ್ನೇ ಅದೇನು ಅನುಸರಿಸಿತೊ!

ಸುರಿದಪುದು ಮುಗಿಲ ಮುತ್ತಿನ
ಸರಿ ಗಗನದಿನೆನಿಸಿ ಪೊಳೆವುವೆಳವಿಸಿಲೊಳ್ ಬೆ
ಳ್ಸರಿ ತೋರವನಿಯ ಪುದುವಿನೊ
ಳರಲ್ದ ತಿಳಿಗೊಳನೆ ನಭದೊಳಿಟಿದಂತಿರ್ಕುಂ ೮

ಕಾಂತಿಯೊಳ್ ಪುದಿದು ಬೆಳಪ ಬೆ
ಳಂತಿಗೆ ಬೆಳ್ದಿಂಗಳಲರ್ದ ಪೊಸಜಾದಿ ದಿಶಾ
ಕಾಂತೆಯ ಬೆಳ್ಪಸದನದದ
ಗುಂತಿಯನೇಂ ತನಗೆ ನಾಡೆಯುಂ ಮಾಡಿದುದೋ ೯

ವ|| ಅಂತು ತನ್ನ ದಿಗ್ವಿಜಯೋದ್ಯೋಗಕ್ಕುಪಯೋಗಿಯಾಗಿ ಬಂದ ಶಾರದಶ್ರೀಯ ನಿದಿರ್ಗೊಂಡನೇಕಗಣಕಗಣಗಣಿತಶುಭದಿನನಕ್ಷತ್ರಮುಹೂರ್ತದೊಳ್ ದಿಗ್ವಿಜಯಪ್ರಯಾಣಭೇರಿಯಂ ಪೊಯ್ಸಿದಾಗಳ್,

ಸಮದಾರಾತಿಮರಾಳನೀರದರವಂ ಸಂಕ್ರುದ್ಧವೈವಸ್ವತೋ
ಪಮವಿದ್ವಿಷ್ಟಫಣೀಂದ್ರಚಂದ್ರಕರವಂ ದೋರ್ದಂಡಕಂಡೂಯದು
ರ್ದಮವೈರಿದ್ವಿರದೇಂದ್ರಕೇಸರಿರವಂ ತಾನೆಂಬಿನಂ ವ್ಯೋಮಭಾ
ಗಮನೆಯ್ದಿರ್ದುದು ಚಕ್ರವರ್ತಿವಿಜಯಪ್ರಸ್ಥಾನಭೇರೀರವಂ ೧೦

೮. ಆಕಾಶದಿಂದ ಮೋಡವೆಂಬ ಮುತ್ತಿನ ಮಳೆ ಸುರಿಯುವುದೋ ಎಂಬಂತೆ ತೋರುತ್ತಿದ್ದ ಬಿಳುಪಾದ ಇಬ್ಬನಿಯು ಹೊಳೆಯುವ ಬಿಸಿಲಲ್ಲಿ ರಂಜಿಸುತ್ತಿರುವಾಗ ಅದರ ನಡುವೆ ಮಂಜಿನ ದಪ್ಪಹನಿಗಳು ಕಾಣಿಸುತ್ತಿರಲು, ಅರಳಿದ ಹೂಗೊಳವೇ ಆಕಾಶದಿಂದ ಇಳಿದುಬಂದಂತೆ[1] ತೋರಿತು. ೯. ಕಾಂತಿಯಿಂದ ಕೂಡಿ ಹೊಳೆಯುವ ಬೆಳ್ಳನೆಯ ಬೆಳ್ದಿಂಗಳೂ ಹೊಸಜಾದಿಯೂ ದಿಶಾಕಾಂತೆಯ ಅಲಂಕಾರದ ಅತಿಶಯವನ್ನು ಶರತ್ಕಾಲಕ್ಕೆ ಅಂದವಾಗಿ ಮಾಡಿದುವು. ವ|| ತನ್ನ ದಿಗ್ವಿಜಯೋದ್ಯಮಕ್ಕೆ ಸಹಾಯಕವಾಗಿ ಬಂದ ಶಾರದಶ್ರೀಯನ್ನು ಎದುರುಗೊಂಡು ಜೋಯಿಸರ ಸಮೂಹದಿಂದ ಹೇಳಲ್ಪಟ್ಟ ಶುಭದಿನ, ಶುಭನಕ್ಷತ್ರ ಮತ್ತು ಶುಭಮುಹೂರ್ತಗಳಲ್ಲಿ ದಿಗ್ವಿಜಯಾರ್ಥವಾದ ಭೇರಿಯನ್ನು ಭರತೇಶ್ವರನು ಹೊಡೆಯಿಸಿದನು. ೧೦. ಚಕ್ರವರ್ತಿಯ ವಿಜಯಪ್ರಯಾಣ ಕಾಲದಲ್ಲಿನ ಭೇರೀಧ್ವನಿಯು ಆಕಾಶಮಂಡಲವನ್ನೆಲ್ಲ ಆವರಿಸಿತು. ಅದು ಮತ್ತರಾದ ವೈರಿಗಳೆಂಬ ಹಂಸಗಳಿಗೆ ಮೋಡದ ಧ್ವನಿಯಾಯಿತು. ಕೋಪೋದ್ರಿಕ್ತನಾದ ಯಮನಿಗೆ ಸದೃಶರಾದ ವಿದ್ವೇಷಿಗಳೆಂಬ ಫಣೀಂದ್ರರಿಗೆ ನವಿಲ ಧ್ವನಿಯಾಯಿತು. ತೋಳ್ತೀಟೆ ಯಿಂದ ದುರ್ದಮರಾದ ಶತ್ರುಗಳೆಂಬ ಆನೆಗಳಿಗೆ ಸಿಂಹಧ್ವನಿಯಾಯಿತು!

1. ಶರತ್ಕಾಲದ ಮೋಡವು ಬಿಳುಪಾದ್ದರಿಂದ ಅದು ಮುತ್ತಿನ ರಾಶಿಯಂತೆ ಇದ್ದಿತು. ಮಂಜು ಮುತ್ತಿನ ಮಳೆಯಂತಿತ್ತು. ಬಿಸಿಲಲ್ಲಿ ದಪ್ಪಹನಿಗಳು ಬಣ್ಣಬಣ್ಣವಾಗಿ ಕಾಣಿಸುತ್ತ ಅರಳಿದ ಹೂವಿನಂತಿದ್ದುವು. ಮಂಜು = ಕೊಳದ ನೀರು; ಬಣ್ಣಬಣ್ಣದ ದಪ್ಪಹನಿ = ಅರಳಿದ ಹೂ.

ವ॥ ಆ ವಿಜಯಪ್ರಸ್ಥಾನಭೇರಿನಿನಾದಾನಂತರಮೆ ಶಾರದನೀರದನಿಕಾಶವಿಶಾಲಧವಳ ದುಕೂಲಾಂಬರವಿರಾಜಮಾನನುಂ, ಚಂದ್ರಾತಪಪಾಂಡುರಹರಿಚಂದನಾನುಲಿಪ್ತಗಾತ್ರನುಂ, ಅಭಿನವವಿಳಸಿತಮಾಳತೀಮಾಳಾಪರಿಷ್ಕೃತಮಕುಟನುಂ, ಅಪೂರ್ವದೂರ್ವಾಪ್ರವಾಳಾಲಂಕೃತ ಕರ್ಣಪೂರನುಂ, ಗೋರೋಚನಾರಚಿತವಿಚಿತ್ರತಿಳಕವಿಳಸಿತಲಲಾಟನುಂ, ತಾರಾತರಳಮುಕ್ತಾ ಫಳಕಲಿತಜಾನುಲಂಬಿತಬ್ರಹ್ಮಸೂತ್ರನುಂ, ಇಂದ್ರಚಾಪವಿಳಾಸೋಪಹಾಸಿರುಂದ್ರೇಂದ್ರಚ್ಛಂದ ಹಾರಾಭಿರಾಮವಿಶಾಳವಕ್ಷಸ್ಥಳನುಂ ಪುರೋಹಿತೋಚ್ಚಾರ್ಯಮಾಣಪುಣ್ಯಾಶೀರ್ವಚನನಿರ್ಘೋಷ ದತ್ತಕರ್ಣನುಮಾಗಿರ್ದಾಗಳ್,

ದಕ್ಷಿಣಭುಜಮುಚಿರಪ್ರತಿ
ಪಕ್ಷಮಹೀಪಾಲವಿಜಯಲಕ್ಷ್ಮೀಲಲನಾ
ವಕ್ಷೋಜಸ್ಪರ್ಶನಮನ
ನಕ್ಷರಮಱಿಪಿದುದು ಪತಿಗಮಂದಸ್ಪಂದಂ ೧೧

ಅರಿಮಕುಟರತ್ನಮಂ ನಿಜ
ಚರಣಕ್ಕರ್ಘ್ಯಪ್ರದೀಪಮಾಗಿಪ್ಪುದನಾ
ಭರತೇಶ್ವರಂಗೆ ಕಾಣ್ಬಂ
ತಿರೆ ಸೂಚಿಸಿದತ್ತು ದಕ್ಷಿಣಾಕ್ಷಿಸ್ಪಂದಂ ೧೨

ವ॥ ಆಗ ವಿಜಯಪ್ರಯಾಣದ ಭೇರೀಧ್ವನಿಯ ಬಳಿಕ ಶರತ್ಕಾಲದ ಮೇಘಕ್ಕೆ ಸದೃಶವೂ ಬಿಳುಪೂ ವಿಶಾಲವೂ ಆದ ರೇಷ್ಮೆಯ ವಸ್ತ್ರದಿಂದ ಭರತನು ಭೂಷಿತನಾದನು. ಬೆಳದಿಂಗಳಿನಂತೆ ಬೆಳ್ಳಗಿರುವ ಶ್ರೀಚಂದನವನ್ನು ಮೈಗೆ ಹಚ್ಚಿಕೊಂಡನು. ಆಗತಾನೆ ಅರಳಿದ ಮಾಲತೀಮಾಲೆಯಿಂದ ಶೋಭಿತವಾದ ಕಿರೀಟವನ್ನು ಧರಿಸಿದನು. ಎಳಗರಿಕೆಯ ಚಿಗುರನ್ನು ಕರ್ಣಪೂರವನ್ನಾಗಿ ಮಾಡಿಕೊಂಡನು. ಗೋರೋಚನದಿಂದ ನಿರ್ಮಿತವಾದ ತಿಲಕವನ್ನು ಹಣೆಯಲ್ಲಿಟ್ಟುಕೊಂಡನು. ತಾರಗೆಗಳಂತೆ ಹೊಳೆಯುವ ಮುತ್ತುಗಳಿಂದ ಭೂಷಿತವಾಗಿ ಮೊಣಕಾಲನ್ನು ಮುಟ್ಟುವ ಬ್ರಹ್ಮಸೂತ್ರವನ್ನು ಹಾಕಿಕೊಂಡನು. ಕಾಮನಬಿಲ್ಲನ್ನು ನೋಡಿ ನಗುವ ಇಂದ್ರಚ್ಛಂದಹಾರವನ್ನು ಎದೆಯ ಮೇಲೇರಿಸಿದನು. ಪುರೋಹಿತನು ಹೇಳುತ್ತಿರುವ ಆಶೀರ್ವಚನದ ಕಡೆಗೆ ಕಿವಿಗೊಟ್ಟನು. ಆಗ ೧೧. ಅವನ ಬಲಭುಜವು ಬಲವಾಗಿ ಅದುರಿತು. ಆ ಸ್ಪಂದನವು ಅತಿಶೀಘ್ರದಲ್ಲಿಯೇ ಶತ್ರುರಾಜರ ವಿಜಯಲಕ್ಷ್ಮೀಲಲನೆಯರ ಸ್ತನಸ್ಪರ್ಶವು ಅವರ ಪತಿಯಾದ ಭರತನಿಗೆ ಆಗುವುದೆಂದು ಮಾತಿಲ್ಲದೆ ಸೂಚಿಸಿತು! ೧೨. ಶತ್ರುರಾಜರ ಕಿರೀಟರತ್ನವು ತನ್ನ ಚರಣಗಳಿಗೆ ಅರ್ಘ್ಯಪ್ರದೀಪವಾಗಿರುವುದನ್ನು ಭರತೇಶ್ವರನಿಗೆ ಕಾಣಿಸುವಂತೆ ಬಲಗಣ್ಣಿನ ಅದುರಾಟವು ಸೂಚಿಸಿತು. ವ॥ ಆಗ ತನ್ನ ಶಿಲ್ಪಿರತ್ನನಿಂದ ಪ್ರಯತ್ನಪೂರ್ವಕವಾಗಿ ನಿರ್ಮಿತವಾದ ಬೆಳ್ದಾವರೆಯ ದಳಗಳಂತೆ ಬಿಳುಪಾದ, ಮನಸ್ಸಿನಂತೆ ವೇಗವುಳ್ಳ, ಇಚ್ಛೆಯಂತೆ ಸಂಚರಿಸುವ, ಬಲವಾದ ಬೆನ್ನುಳ್ಳ ಕುದುರೆಗಳನ್ನು ಹೂಡಿದ, ಅನುಕೂಲನೂ ಶೂರನೂ ರಥವಿದ್ಯೆಯಲ್ಲಿ ಪರಿಣತನೂ ಆದ ಸಾರಥಿಯಿಂದ ವಿರಾಜಿತವೂ ಆದ,

ವ|| ಆಗಳ್ ನಿಜಸ್ಥಪತಿರತ್ನಪ್ರಯತ್ನನಿರ್ಮಿತಮುಂ, ಕುಮುದದಳಧವಳಮನೋಜವಕಾಮಚಾರಿಸ್ಥೂರೀಪೃಷ್ಠ[೧]ಯೋಜಿತಮುಂ, ಅನುಕೂಲಶೂರರಥಕಲ್ಪಪರಿಣತರಥಚೋದಕಪರಿಭ್ರಾಜಿತಮುಂ ಆಗಿ,

ಒದವಿದ ಚಕ್ರರತ್ನದೊಳಿದೊಂದೆಣೆಯಾಯ್ತೆನಿಸಿರ್ದ ಚಕ್ರಯು
ಗ್ಮದಿನಮರ್ದಚ್ಚು ವಜ್ರಮಯಮಾಗೆ ಕನನ್ಮಣಿಮೌಕ್ತಿಕಪ್ರಭಾ
ಸ್ಪದಮಮರೇಂದ್ರರುಂದ್ರಗಿರಿಕುಂಜವಿಚಂಚಳಕೇತನಾಳಿ ಕ
ಟ್ಟಿದಿರೊಳೆ ಬಂದು ನಿಂದುದಜಿತಂಜಯಮಾತ್ತಮನೋರಥಂ ರಥಂ ೧೩

ವ|| ಆಗಳ್ ಮೌಹೂರ್ತಿಕರ್ ಬಂದು ದೇವಾ ವಿಜಯಪ್ರಸ್ಥಾನಲಗ್ನಂ ಸಾರೆವಂದುದೆಂದು ಬಿನ್ನಪಂಗೆಯ್ದಾಗಳ್,

ರೋದೋಂತರ್ಭಾಗದೊಳ್ ದುಂದುಭಿಗಳೆಸೆಯೆ ಮಾಂಗಲ್ಯಗೀತಪ್ರಣಾದಂ
ವಾದಿತ್ರಧ್ವಾನದೊಳ್ ಸಂದಣಿಸೆ ಗುರುಜನೋದ್ಗೀತನಾನಾವಿಧಾಶೀ
ರ್ವಾದಂ ಶೇಷಾಕ್ಷತಂಗಳ್ವೆರಸೆಸೆಯೆ ಮಹಾವಂದಿವೃಂದಾಂಕಮಾಲಾ
ನಾದಂ ಗಂಭೀರನಾದಂ ನೆಗಟ್ದಿರೆ ತಳರ್ದಂ ರಾಗದಿಂ ಸಾರ್ವಭೌಮಂ ೧೪

ವ|| ಅಂತು ತಳರ್ದು ಕೃತಪ್ರಸ್ಥಾನವಿವಿಧಮಂಗಳವಿಧಾನೋಚ್ಛ್ರಿತಚಿತ್ರಾತಪತ್ರಧೋಧೂಯಮಾನಧವಳಚಾಮರಸಹಸ್ರಸಂಭಾದಿತಸಹಸ್ರಕರಪ್ರಭಾಪ್ರಸರರಥಮನೇಜಿಮಹಾಮಕುಟಬದ್ಧಪರಿವೃತಂ

೧೩. ಮನೋರಥವನ್ನು ಈಡೇರಿಸಬಲ್ಲ ಅಜಿತಂಜಯ ಎಂಬ ರಥವು ಕಣ್ಣೆದುರಿನಲ್ಲಿ ಬಂದು ನಿಂತಿತು. ಪ್ರಸಿದ್ಧವಾದ ಚಕ್ರರತ್ನಕ್ಕೆ ಸದೃಶವಾದುವು ಎಂಬಂತಿದ್ದ ಚಕ್ರಯುಗಳದಿಂದ ಕೂಡಿದ ಅದರ ಅಚ್ಚು ವಜ್ರದಂತೆ ಗಟ್ಟಿಯಾಗಿದ್ದಿತ್ತು. ರಥವು ಹೊಳೆಯುವ ಮಣಿಮೌಕ್ತಿಕಗಳ ಕಾಂತಿಗಳಿಂದ ವಿಜೃಂಭಿತವಾಗಿತ್ತು. ಅಮರೇಂದ್ರಪರ್ವತದಲ್ಲಿನ ಲತಾಕುಂಜದಂತೆ ಚಲಿಸುವ ಪತಾಕೆಯುಳ್ಳುದಾಗಿತ್ತು. ವ|| ಆಗ ಜ್ಯೋತಿಷ್ಕರು ಬಂದು "ದೇವ! ವಿಜಯಪ್ರಯಾಣಕ್ಕೆ ಯೋಗ್ಯವಾದ ಲಗ್ನವು ಬಂದಿದೆ" ಯೆಂದು ವಿಜ್ಞಾಪಿಸಿದರು. ಆಗ ೧೪. ಭರತಚಕ್ರವರ್ತಿಯು ಪ್ರೀತಿಯಿಂದ ವಿಜಯಪ್ರಯಾಣಕ್ಕಾಗಿ ರಥವನ್ನೇರಿದನು. ಭೂಮಿ ಮತ್ತು ಆಕಾಶಗಳ ನಡುವೆ ನಗಾರಿಗಳು ಮೊಳಗುತ್ತಿದ್ದುವು. ಮಂಗಳಗೀತೆಗಳ ಧ್ವನಿಗಳು ವಾದ್ಯಧ್ವನಿಗಳೊಡನೆ ಸಂಗತವಾದುವು. ಗುರುಜನರು ಘೋಷಿಸುತ್ತಿದ್ದ ಹಲವು ಬಗೆಯ ಆಶೀರ್ವಚನಗಳು ಶೇಷಾಕ್ಷತೆಗಳೊಡನೆ ಬೆರೆತುವು. ವಂದಿಮಾಗಧರು ಗಂಭೀರನಾದದಿಂದ ನಿರಂತರವಾಗಿ ಹೇಳುತ್ತಿದ್ದ ಶೌರ್ಯವೃತ್ತ ವರ್ಣನೆಗಳ ಧ್ವನಿಯು ಹರಡಿತು. ವ|| ರಾಜನು ಹೀಗೆ ವಿಜಯಾರ್ಥವಾಗಿ ಹೊರಟನು. ಪ್ರಸ್ಥಾನಕಾಲದಲ್ಲಿ ವಿವಿಧ ಮಂಗಳಸೂಚಕಗಳಾದ ಎತ್ತಿದ ಚಿತ್ರವರ್ಣದ ಕೊಡೆಗಳೂ ಬೀಸುತ್ತಿರುವ ಸಾವಿರಾರು ಬಿಳಿಯ ಚಾಮರಗಳೂ-ಇವುಗಳಿಂದ ಮುಚ್ಚಲ್ಪಟ್ಟ ಸೂರ್ಯನ ಪ್ರಭೆಯುಳ್ಳ

---

೧ 'ಸ್ಥೂರೀಪೃಷ್ಠ' ಎಂದು ಮಾಘಕಾವ್ಯದಲ್ಲಿ ಪ್ರಯೋಗವಿದೆ 'ನವಾರೂಢ ಅಶ್ವ' ಎಂದು ಮಲ್ಲಿನಾಥ ವ್ಯಾಖ್ಯಾನ.

ರಾಜಭವನಮಂ ಪೊಱಮಟ್ಟು ಚಂಚತ್ಪಂಚರತ್ನತೋರಣಾಲಂಕೃತ ರಾಜಮಾರ್ಗದಿಂ ಬರ್ಪಾಗಳ್,

॥ ಪೃಥ್ವೀ ॥

ದಿಶಾಯುವತಿಕೇಳಿಕೀರ್ಣಪಟವಾಸಚೂರ್ಣಂ ಜಗ
ತ್ಕುಶೇಶಯನಿವಾಸಿನೀಪ್ರಮದಮುಷ್ಟಿ ಪಿಷ್ಟಾತಕಂ
ವಿಶಾಲತರತುಂಗಸೌಧತಳಸಂಗಿಪಾರಾಂಗನಾ
ವಶೀಕರಣಚೂರ್ಣಮಾದುದು ಬಳೌಘಧೂಳೀಚಯಂ ೧೫

ವ॥ ಅಂತು ಬರ್ಪಾಗಳಂಗಜವಿಜಯಕದಳಿಕಾವಿಳಾಸಮಂ ತಾಳ್ದಿ,

ನೊಸಲಂ ತೊಂಗಲ್ಮುಗುರುಳ್ ಮೇಲುದನೊಗೆವ ಕುಚಂ ಬೆನ್ನನಾನೀಳಕೇಶ
ಪ್ರಸರಂ ಚೆಲ್ವಿಂ ಪೊದಟಿಲ್ದೊಳ್ನಿಱಿಯನೆಡದ ತೋಳ್ ಸೋಗೆಯಂ ನೂಲತೊಂಗಲ್
ದೆಸೆಯಂ ಕಣ್ ಕೆನ್ನೆಯಂ ಭ್ರೂಲತಿಕೆಗಳುರಮಂ ಸಂಚಳತ್ತಾರಹಾರಂ
ಪಸರಂಬೆತ್ತೆತ್ತಮೋರಂತಲೆಯೆ ಭರತನಂ ನೋಡಲೈತಂದಳೊರ್ವಳ್ ೧೬

ವ॥ ಮತ್ತೊರ್ವಳುತ್ತುಂಗಸೌಧೋತ್ಸಂಗದೊಳ್ ನಿಂದು ಮನುವಂಶಧ್ವಜನಂ ಮಕರಧ್ವಜನೆಂದು ಬಗೆದು,

ರಥವನ್ನೇರಿ ಅನೇಕ ಕಿರೀಟಾಲಂಕೃತರಾದ ರಾಜರೊಡನೆ ರಾಜಭವನದಿಂದ ಹೊರಟು ಪಂಚರತ್ನಮಯ ತೋರಣಗಳಿಂದ ಅಲಂಕೃತವಾದ ಬೀದಿಯಲ್ಲಿ ಬರುತ್ತಿದ್ದನು. ಆಗ, ೧೫. ಆ ಸಮಯದಲ್ಲಿ ಸೇನೆಯಿಂದ ಎದ್ದ ಧೂಳು ದಿಗಂಗನೆಯರು ಆಟವಾಡುವಾಗೆರಚಿದ ಪಟವಾಸದ ಚೂರ್ಣದಂತಿತ್ತು. ಜಗತ್ಕಮಲದಲ್ಲಿ ವಾಸಿಸುವ ಲಕ್ಷ್ಮೀದೇವಿಯು ಲೀಲೆಗಾಗಿ ತನ್ನ ಮುಷ್ಟಿಯಲ್ಲಿ ಹಿಡಿದೆರಚಿದ ಬುಕ್ಕಿಹಿಟ್ಟಿನಂತಿತ್ತು. ಅದು ವಿಶಾಲವೂ ಉನ್ನತವೂ ಆದ ಉಪ್ಪರಿಗೆಯ ಮೇಲೆ ನಿಂತಿದ್ದ ಪೌರಸ್ತ್ರೀಯರನ್ನು ವಶೀಕರಿಸಲು ಸಾಧಕವಾದ ಚೂರ್ಣವಾಯ್ತು. ವ॥ ಹಾಗೆ ಬರುತ್ತಿರುವಾಗ ಮನ್ಮಥವಿಜಯಸಾಧಕವಾದ ಬಾವುಟದ ವಿಲಾಸವನ್ನು ತಳೆದು ೧೬. ಓರ್ವ ಸುಂದರಿಯು ಭರತೇಶ್ವರನನ್ನು ನೋಡಲು ಬಂದಳು. ಅವಳ ನೀಳ್ದ ಮುಂಗುರುಳು ಹಣೆಯ ಮೇಲೆ ಅಲೆದಾಡಿತು. ಮೇಲಕ್ಕೆ ಚಲಿಸುವ ಕುಚಗಳು ಸೆರಗನ್ನು ಅಲುಗಾಡಿಸಿದುವು. ನೀಳವಾದ ಕೇಶಸಮೂಹವು ಬೆನ್ನ ಮೇಲೆ ಅಲೆಯಿತು. ಅವಳ ಎಡದ ತೋಳು ಸೀರೆಯ ನಿರಿಯನ್ನು ಆಡಿಸಿತು. ಶಿರೋಭೂಷಣದ ಕುಚ್ಚು ಕಡೆಗಣ್ಣಿನ ಕಾಡಿಗೆಯ ಗೆರೆಗೆ ತಾಗಿತು. ಕಣ್ಣು ದಿಕ್ಕುಗಳ ಕಡೆಗೆ ತಿರುಗಿತು. ಲತೆಯಂತೆ ಕೋಮಲವಾಗಿರುವ ಹುಬ್ಬುಗಳು ಕೆನ್ನೆಯನ್ನು ತಾಗಿದುವು. ಮುತ್ತಿನಹಾರವು ಎದೆಗಳ ಮೇಲಾಡಿತು! ವ॥ ಮತ್ತೊಬ್ಬಳು ಎತ್ತರವಾದ ಉಪ್ಪರಿಗೆಯ ಮನೆಯಮೇಲೆ ನಿಂತು ಮನುವಂಶಜನಾದ ಭರತೇಶ್ವರನನ್ನು ಮನ್ಮಥನನ್ನಾಗಿ ಬಗೆದಳು. ಅವಳು

ಇದು ನಿನ್ನರ್ಚಿಸುವಿಕ್ಷುಚಾಪಮಿದು ನಿನ್ನೀಲೋಕಮಂ ಕೈಗೆ ಮಾ
ಡಿದ ಪುಷ್ಪಾಸ್ತ್ರಮಿದಲ್ತೆ ನಿನ್ನ ವಿಜಯಪ್ರಾರಂಭದೊಳ್ ತೋರ್ಕೆಗೆ
ತ್ತಿದ ಚೈತ್ರಧ್ವಜಮೆಂದು ತೋರ್ಪ ತೆಱದಿಂ ಭ್ರೂಲಾಸ್ಯಮಂ ನೀಳ್ದಪಾಂ
ಗದ ಬೆಳ್ದಿಂಗಳನೆಡ್ಡಮಪ್ಪ ಕಬರೀವಿಸ್ತಾರಮಂ ತೋಱಿದಳ್ ೧೭

ವ।। ಮತ್ತಮೊಂದುತ್ತುಂಗಪ್ರಾಸಾದೋಪರಿ[೧]ತಳದೊಳ್ ನಿಂದು,

ವಿಶದೋಜ್ಜೃಂಭಿತಯೌವನಾಸವಮದಪ್ರೋಲ್ಲಾಸದಿಂ ಚಿತ್ತಭೂ
ವಶೆಯೊರ್ವಳ್ ಮನುವಂಶಚಂದ್ರಮುಖಚಂದ್ರಾಲೋಕದಿಂ ಚಂದ್ರಕಾಂ
ತಶಿಲಾಪುತ್ರಿಕೆಯಂತೊಸರ್ತು ಕೊಳಗೊಂಡಾನೀರೊಳರ್ದಿರ್ದು ಚಿ
ತ್ತಶಯಾಕ್ರೀಡಸರೋವತೀರ್ಣರತಿಯೊಂದಾಕಾರಮಂ ತಾಳ್ದಿದಳ್ ೧೮

ವ।। ಮತ್ತಮೊಂದೆಡೆಯೊಳೊರ್ವಳ್;

ವಿವಿಧಾತೋದ್ಯಲಯಾನುಬಂಧಿವಿಳಸಲ್ಲಾಸ್ಯಂ ತಗುಳ್ದಲ್ಲಿ ನಾ
ಟ್ಯವಿದರ್ ತಾಂಗೆಯುಮೇಱಿ ನೃತ್ಯಗೃಹಮಂ ಚಕ್ರೇಶ್ವರೋದ್ದಾಮರೂ
ಪವಿಳೋಕಾಮೃತತೃಪ್ತಲೋಚನಮನಸ್ಸಂಕಲ್ಪಸಂಭೋಗಸಂ
ಭವಘರ್ಮಾಂಬುಗಳಿಂದಮಿರ್ಮಡಿಸಿದಳ್ ನೃತ್ಯಶ್ರಮಸ್ವೇದಮಂ ೧೯

೧೭. "ಇದು ನಿನ್ನನ್ನು ಸೇವಿಸುವ ಬಿಲ್ಲು!" ಎಂದು ತನ್ನ ಹುಬ್ಬುಗಳ ಕುಣಿತವನ್ನು ತೋರಿಸಿದಳು! "ಇದು ಲೋಕವನ್ನೆಲ್ಲ ಕೈವಶಮಾಡಿಕೊಳ್ಳುವ ನಿನ್ನ ಹೂವಿನ ಬಾಣ" ಎಂದು ತನ್ನ ನೀಳವಾದ ಕಡೆಗಣ್ಣಿನ ಬೆಳ್ದಿಂಗಳನ್ನು ತೋರಿಸಿದಳು! "ಇದು ನಿನ್ನ ವಿಜಯಾರ್ಥದ ಪ್ರಯಾಣದ ಪ್ರಾರಂಭದಲ್ಲಿ ಪ್ರದರ್ಶನಕ್ಕಾಗಿ ಮೇಲಕ್ಕೆತ್ತಿ ಹಿಡಿದ ಚೈತ್ರಧ್ವಜ" ಎಂದು ಅಂದವಾಗಿ ಅಲಂಕೃತವಾದ ಕೇಶಪಾಶವನ್ನು ತೋರಿಸಿದಳು! ವ।। ಮತ್ತೊಬ್ಬಳು ಎತ್ತರವಾದ ಪ್ರಾಸಾದದ ಮೇಲ್ಗಡೆ (ಕೊನೆಯ ಅಂತಸ್ತು?) ನಿಂತು ೧೮. ನವ ಯೌವನವೆಂಬ ಮದ್ಯದಮದದ ಅತ್ಯಾನಂದದಿಂದ ಕಾಮವಶಳಾದಳು. ಬಳಿಕ ಮನುವಂಶಚಂದ್ರನಾದ ಭರತೇಶ್ವರನ ಮುಖಚಂದ್ರನನ್ನು ನೋಡಿ ಚಂದ್ರಕಾಂತಶಿಲೆಯ ಬೊಂಬೆಯಂತೆ ಕರಗಿ ಕೊಳವಾಗಿ ಆ ನೀರಿನಲ್ಲಿ ಮುಳುಗಿದಳು! ಆಗ ಅವಳು ಕಾಮನ ಉದ್ಯಾನದ ಸರೋವರವನ್ನಿಳಿದ ರತಿಯ ಆಕಾರವನ್ನು ತಳೆದಳು. ವ।। ಮತ್ತೊಂದೆಡೆಯಲ್ಲಿ ಒಬ್ಬಳು ೧೯. ವಿವಿಧವಾದ ಆತೋದ್ಯಲಯಗಳಲ್ಲಿ ಲಾಸ್ಯವು ನಡೆಯುತ್ತಿರಲು ನಾಟ್ಯವಿದರು ಅಡ್ಡಿಮಾಡಿದರೂ ನಾಟ್ಯಗೃಹವನ್ನೇರಿದಳು. ಅಲ್ಲಿ ನಿಂತು ಚಕ್ರೇಶ್ವರನ ರಮ್ಯವಾದ ರೂಪದ ದರ್ಶನಾಮೃತದಿಂದ ಕಣ್ಣುಗಳಿಗೆ ತೃಪ್ತಿಯನ್ನು ಹೊಂದಿಸಿ ಮನಸ್ಸಿನಲ್ಲಿ ಊಹಿಸಿದ ಸಂಭೋಗದಿಂದುಂಟಾದ ಬೆವರಿನಿಂದ ನೃತ್ಯಶ್ರಮ ಪ್ರಯುಕ್ತವಾದ ಸ್ವೇದವನ್ನು

---

೧ 'ಉಪರಿಮ' ಎಂದಿರುವುದರಲ್ಲಿ 'ಮ'ಕಾರ ಸರಿಯಲ್ಲವೆಂದು ತೆಗೆದುಹಾಕಿದೆ.

ವ|| ಮತ್ತೊರ್ವಳ್,

|| ಪೃಥ್ವಿ ||

ಸಮಾಕುಳಗತಿಸ್ಖಲಚ್ಚಳನಸಂಚಳತ್ತಾರಹಾ
ರಮಂ ತಳದೊಳೊತ್ತುವೊಂದು ನೆವದಿಂದನಂಗಾಸ್ತ್ರವಿ
ದ್ಧಮಂ ಪಡೆದು ಗೂಡುವಾಯ್ದೆರ್ದೆಯನೊತ್ತಿ ನಿಷ್ಕಂಪಪ
ಕ್ಷ್ಮಮಾಂತು ತರಳಾಕ್ಷಿ ವಿಸ್ಮಯದೆ ಚಕ್ರಿಯಂ ನೋಡಿದಳ್ ೨೦

ವ|| ಮತ್ತಮೊರ್ವಳ್ ಅಭಿನವಯೌವನಾಸವಮದವಿಳಾಸನಿರಂಕುಶೆ ಕುಂಕುಮಪಂಕಾಂಕಿತೋಚ್ಚಕುಚಯುಗಳಮೆ ಸಿಂದೂರಿತಮಸ್ತಕಪಿಂಡಮಂಡಲಮವಿರಳಚಳತ್ಕಾಂಚೀಕಳಾಪಮಣಿಕಿಂಕಿಣೀಗಣಝುಂಕಾರಮೆ ಮದನದಿಂಡಿಮರವಾಡಂಬರಮಾಳೋಳತುಳಾತಕೋಟಿತಳಕ್ವಣಿತಮೆ ನಿಗಳಾಂದುಕಾರವಮಾಗೆ,

ಸಮದಂ ಯಾನಮೆ ಮಂದಮಂದಗಮನಂ ಕಸ್ತೂರಿಕಾಪಂಕಪ
ಟ್ಟಮೆ ಧಾರಾಮದಪಟ್ಟಮಾಯ್ತೆನಿಪಿನಂ ಸೇನಾಮನೋಮರ್ದನೋ
ದ್ಯಮದಿಂದಂಗಜಚಕ್ರವರ್ತಿಯಂ ಗಜಂ ವಾರಾಂಗನಾರೂಪದಿಂ
ದಮೆ ಬರ್ಪಂತಿರೆ ಬಂದು ಚಕ್ರಧರರೂಪಾಶ್ಚರ್ಯಮಂ ನೋಡಿದಳ್ ೨೧

ವ|| ಮತ್ತೊರ್ಬಳ್ ನಿಜಪ್ರಸಾಧನಗ್ರಹಣಪ್ರಸ್ತಾವದೊಳ್,

ಇಮ್ಮಡಿಗೊಳಿಸಿದಳು! ವ|| ಮತ್ತೊಬ್ಬಳು ೨೦. ಮನಸ್ಸಿನ ಕಾತರತೆಯಿಂದ ನಡೆಯುವಾಗ ಎಡವಲು ಎದೆಯ ಮೇಲಿನ ತಾರಹಾರವು ಚಲಿಸಿತ್ತು. ಆಗ ಅವಳು ಮನ್ಮಥಾಸ್ತ್ರದ ಪೆಟ್ಟನ್ನು ಹೊಂದಿ ಹಾರದ ತಳವನ್ನು ಒತ್ತಿ ಹಿಡಿಯುವ ನೆವದಿಂದ ಕೊರಗುವ ಎದೆಯನ್ನು ಒತ್ತಿ ಹಿಡಿದುಕೊಂಡು ರೆಪ್ಪೆಗೂದಲು ಅಲುಗದ ಹಾಗೆ ವಿಸ್ಮಯದಿಂದ ಚಕ್ರಿಯಾದ ಭರತನನ್ನು ನೋಡಿದಳು. ವ|| ಹೊಸ ಯೌವನವೆಂಬ ಮದ್ಯದ ಮದದಿಂದುಂಟಾದ ವಿಲಾಸದಿಂದ ನಿರಂಕುಶಳಾದ ಮತ್ತೊಬ್ಬಳು ಬಂದಳು. ಅವಳ ಕುಂಕುಮಪಂಕವಡೆದ ಉನ್ನತವಾದ ಸ್ತನಗಳೆರಡು ಕುಂಕುಮ ಹಚ್ಚಿದ (ಆನೆಯ) ಕುಂಭಸ್ಥಳವಾಯಿತು. ಒತ್ತಾಗಿ ಅಲುಗುವ ಒಡ್ಯಾಣದ ಮಣಿಕಿಂಕಿಣಿಗಳ ಝುಂಕಾರವೇ ಮನ್ಮಥನ ನಗಾರಿಯ ಶಬ್ದಾಡಂಬರವಾಯಿತು. ತೂಗುತ್ತಿರುವ ಕಾಲಂದುಗೆಯ ಇನಿದನಿಯೇ ಆನೆಯ ಕಾಲ್ಸರಪಳಿಯ ಶಬ್ದವಾಯಿತು. ೨೧. ಮದಸಹಿತವಾದ ಅವಳ ಗಮನವು ಮದಗಜದ ಮಂದಗಮನವಾಯಿತು. ಕಸ್ತೂರಿಗಂಧದಪಟ್ಟೆಯು ಮನ್ಮಥಗಜದ ಮದಧಾರೆಯ ಪಟ್ಟೆಯಂತೊಪ್ಪಿತು. ಸೇನೆಯ ಮನಸ್ಸನ್ನು ಮರ್ದಿಸುವ ಪ್ರಯತ್ನದಿಂದ ಮನ್ಮಥನ ಆನೆಯು ವಾರಾಂಗನಾ ರೂಪದಿಂದ ಬರುತ್ತಿರುವಂತೆ ಬಂದು ಅವಳು ಭರತಚಕ್ರವರ್ತಿಯ ವಿಸ್ಮಯಕರ ರೂಪವನ್ನು ಕಂಡಳು. ವ|| ಮತ್ತೋರ್ವಳು ತನ್ನನ್ನು ಅಲಂಕರಿಸಿಕೊಳ್ಳುವ ಸಂದರ್ಭದಲ್ಲಿ

ಪಿರಿದೊಂದುತ್ಸುಕಭಾವದಿಂ ಸರಿಗೆಯಂ ಕಾಲೊಳ್ ಕಟೀಸೂತ್ರಮಂ
ಕೊರಲೊಳ್ ಚಂಪಕಮಾಲೆಯಂ ಕನಕಕಾಂಚೀಸ್ಥಾನದೊಳ್ ರತ್ನನೂ
ಪುರಮಂ ಕೈಗಳೊಳಾಗಳಾಗಳೆ ತೊಡರ್ಚುತ್ತುಂ ಜನಂ ಕೂಡೆ ಕ
ಪ್ಪರೆಗೊಂಡೆಯ್ತರೆ ನೋಡಲೆಂದು ಪರಿದಳ್ ಚಕ್ರೇಶಸೌಂದರ್ಯಮಂ ೨೨

ವ|| ಇಂತು ಭರತೇಶ್ವರಚಕ್ರವರ್ತಿಯ ರೂಪಾತಿಶಯಮಂ ನೋಡುವಲ್ಲಿ,

|| ಮಾಲಿನೀ ||

ಗಣಿಕೆಯರ ವಿಳಾಸಾಗಾರದೊಳ್ ಜಾಳಮಾರ್ಗ
ಪ್ರಣಯಿನಿಯರಪಾಂಗಶ್ರೇಣಿಯೊಳ್ ಮೂಱುಬಣ್ಣಂ
ಪೆಣೆದೊದವೆ ಗವಾಕ್ಷಸ್ಥೇಂದುಕಾಂತೇಂದ್ರನೀಲಾ
ರುಣಮಣಿಕಿರಣಂಗಳ್ ಪೊಣ್ಮುವಂತಾದುವಾಗಳ್ ೨೩

ವ|| ಅಂತು ಮನಸಿಜನಾವೇಶಮಂತ್ರದಿಂ ಸ್ತೋಭಂಗೊಂಡಂತೆ ಪುರಪುರಂಧ್ರೀಕ್ಷೋಭಮಾಗೆ ಮನುವಂಶಚಂದ್ರೋದಯಕ್ಷುಭಿತನಗರಕ್ಷೀರಾಂಭೋರಾಶಿಯ ಕಲ್ಲೋಲಮಾಲೆಗಳಂತೆ ದೆಸೆದೆಸೆಗೆ ಪೊಳೆವ ಪುರಾಂಗನಾಜನದಪಾಂಗಮಾಳೆಗಳುಂ ತಡಿಯ ಶೀಕರನಿಕರಂಗಳಂತೆ ಸೊಗಯಿಸುವ ಧವಳಾಕ್ಷತಸಿತಕುಸುಮಮಂಗಳಲಾಜಾಂಜಲಿಗಳುಮನುರಾಗಮಂ ಪಡೆಯೆ ಪುರಪ್ರಧಾನಜನಸಹಿತಾ

೨೨. ಚಕ್ರೇಶ್ವರನ ರೂಪಾತಿಶಯವನ್ನು ಕಾಣಲು ಸಂಭ್ರಮದಿಂದ ಹೋದಳು. ಆಗ ಅವಳು ಅತ್ಯುತ್ಸಾಹದಿಂದ ಕಂಠಾಭರಣವಾದ ಸರಿಗೆಯನ್ನು ಕಾಲೊಳಿಟ್ಟಳು! ಒಡ್ಯಾಣವನ್ನು ಕೊರಲೊಳಿಟ್ಟಳು! ಸಂಪಿಗೆಯ ಮಾಲೆಯನ್ನು ಕನಕಕಾಂಚೀಸ್ಥಾನದಲ್ಲಿಯೂ ರತ್ನನೂಪುರಗಳನ್ನು ಕೈಗಳಲ್ಲಿಯೂ ಧರಿಸಿದಳು! ವ|| ಹಾಗೆ ಭರತೇಶ್ವರನ ರೂಪಾತಿಶಯವನ್ನು ನೋಡುವಾಗ ೨೩. ಗಣಿಕೆಯರ ವಿಲಾಸಭವನದ ಗವಾಕ್ಷಗಳಲ್ಲಿ ತಲೆಯಿಟ್ಟು ನೋಡುತ್ತಿರುವ ಲಲನೆಯರ ಕಡೆಗಣ್ಣುಗಳ ಸಾಲಿನಲ್ಲಿ ಮೂರು ಬಣ್ಣಗಳು ಹೆಣೆದುಕೊಂಡಿರಲು, ಆಗ ಗವಾಕ್ಷಗಳಲ್ಲಿದ್ದ ಇಂದುಕಾಂತ, ಇಂದ್ರನೀಲ ಮತ್ತು ಅರುಣಮಣಿಗಳ ಕಿರಣಗಳು ತಮ್ಮ ಕಾಂತಿಗಳನ್ನು ಹೊರಹೊಮ್ಮಿಸುವಂತೆ ಕಾಣಿಸಿದುವು.[1] ವ|| ಮನ್ಮಥನ ಆವೇಶಮಂತ್ರದಿಂದ ಅವಿನೀತವಾದಂತೆ ಪುರಸ್ತ್ರೀಯರ ಮನಸ್ಸು ಕ್ಷೋಭೆಗೊಂಡಿತು. ಮನುವಂಶವೆಂಬ ಆಕಾಶದಲ್ಲಾದ ಚಂದ್ರೋದಯದಿಂದ ಕ್ಷುಭಿತವಾದ ನಗರವೆಂಬ ಕ್ಷೀರಸಮುದ್ರದ ಕಲ್ಲೋಲಮಾಲೆಗಳಂತೆ ದಿಕ್ಕುದಿಕ್ಕುಗಳಲ್ಲಿ ಹೊಳೆಯುವ ನಗರಸ್ತ್ರೀಯರ ಕಣ್ನೋಟಗಳ ಸಮೂಹಗಳೂ, ಕಲ್ಲೋಲಮಾಲೆಗಳ ನೀರುಹನಿಗಳಂತೆ ಸೊಗಯಿಸುವ ಧವಳಾಕ್ಷತ, ಬಿಳಿಹೂ ಮತ್ತು ಮಂಗಲಾರ್ಥವಾದ ಲಾಜಾಂಜಲಿಗಳೂ ಅನುರಾಗವನ್ನುಂಟುಮಾಡಿದುವು. ಪುರಪ್ರಮುಖರಿತ್ತ ಆಶೀರ್ವಚನಪರಂಪರೆಗಳನ್ನು ಸ್ವೀಕರಿಸುತ್ತ ಭರತೇಶ್ವರನು ಪಂಚರತ್ನಮಯವಾದ ತೋರಣಗಳ ಕಾಂತಿಗಳಿಂದ

---

1 ಕಾಂತೆಯರ ಅಪಾಂಗವೀಕ್ಷಣಗಳು ಬೆಳ್ಳಗೂ, ಕಪ್ಪಗೂ, ಕೆಂಪಗೂ ಇರುತ್ತವೆಯೆಂದು ಕವಿಸಮಯ.

ಶೇಷಾಶೀರ್ವಾದ ಪರಂಪರೆಯನಾನುತ್ತುಂ ಪಂಚರತ್ನತೋರಣದ್ಯುತಿಸಮುದ್ಯೋತಿತಕನಕಪ್ರಾಕಾರ ಪ್ರತೋಳಿದ್ವಾರಮನೆಯ್ದೆವಂದಾಗಳ್,

ಗಿರಿರಾಜೋದಗ್ರಸಿಂದೂರಿತಕರಟಿಘಟಾಟೋಪಮಂ ಕುಂಕುಮಾಂಭ
ಸ್ಸ್ಫುರಿತಾಂಗೋತ್ತುಂಗವಲ್ಗತ್ತುರಗಬಲಮದೋದ್ದಾಮಮಂ ಚಿತ್ರನೇತ್ರಾಂ
ಬರನಾನಾಹೇತಿಹಸ್ತೋದ್ಭಟಭಟಪೃತನಾಭೀಳಮಂ ಚಿತ್ತದೊಳ್ ವೀ
ರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ ೨೪

ಎರಡು ಕೆಲದೊಳಮರಸನ
ಬರಮಂ ಪಾಱುತ್ತೆ ಭೂಪರಿರ್ದಲ್ಲಿಯೆ ಮಾ
ಣ್ದೆರದೆಱಗೆ ಮಕುಟಮಣಿಗಣ
ಮರೀಚಿ ಪುದಿದತ್ತು ದೆಸೆಯುಮಂ ವಸುಧೆಯುಮಂ ೨೫

ವ॥ ಅಂತು ಕಿರೀಟಕೋಟಿರತ್ನರಶ್ಮಿರಂಜಿತದಿಕ್ಚಕ್ರಮಾಗಿ ಬಂದೆಱಗಿದ ರಾಜಚಕ್ರಮನನು ಕ್ರಮದೊಳೆ ನೇತ್ರತ್ರಿಭಾಗಕಟಾಕ್ಷಸಮಗ್ರೇಕ್ಷಣಭ್ರೂವಿಭ್ರಮದರಹಸಿತಾಳಾಪನಪರಿಹಾಸವಿಸ್ರಂಭಾಳಾಪಂಗಳಿಂ ಸಂತಸಂಬಡಿಸುತ್ತುಂ ಬಂದಂದಿನ ದಿನಮಯೋಧ್ಯಾಪುರಾಸನ್ನದೊಳ್ ನಿಜಸ್ಥಪತಿರತ್ನವಿರಚಿತಮಾಗಿ,

ವಿಜಯಶ್ರೀಗೃಹಮೆನಿಸುವ
ವಿಜಯಪ್ರಸ್ಥಾನಶಿಬಿರನೃಪಮಂದಿರಮಂ
ವಿಜಿಗೀಷು ಬಂದು ಪೊಕ್ಕಂ
ವಿಜಯಾಳಂಕಾರಬಾಹು ಭರತಮಹೀಶಂ ೨೬

ಪ್ರಕಾಶಿತವಾದ ಕನಕಪ್ರಾಕಾರದ ರಾಜಮಾರ್ಗದ್ವಾರವನ್ನು ಸೇರಿದನು. ಆಗ, ೨೪. ಸಾರ್ವಭೌಮನು ತನ್ನ ಮನದಲ್ಲಿ ವೀರರಸವು ಎಲ್ಲೆ ಮೀರಿ ಹೊರಹೊಮ್ಮುತ್ತಿರಲು ನಿಜಸೇನೆಯನ್ನು ನೋಡಿದನು. ಆ ಬಲವು ಗಿರಿರಾಜನಂತೆ ಉನ್ನತವಾದ ಕುಂಕುಮ ಹಚ್ಚಿದ ಕುಂಭಸ್ಥಳಗಳುಳ್ಳ ಆನೆಗಳ ಗುಂಪಿನಿಂದ ವಿಜೃಂಭಿಸುತ್ತಿತ್ತು. ಕುಂಕುಮದ ನೀರಿನಿಂದ ಹೊಳೆಯುವ ಚಲಿಸುವ ಎತ್ತರವಾದ ಶರೀರವುಳ್ಳ ಮದಿಸಿದ ಕುದುರೆಗಳ ಆಡಂಬರದಿಂದ ಕೂಡಿತ್ತು. ಚಿತ್ರವಿಚಿತ್ರವಾದ ಬಟ್ಟೆಗಳನ್ನುಟ್ಟ ಅನೇಕ ವಿಧ ಆಯುಧಗಳನ್ನು ಹಿಡಿದ ಶೂರರಾದ ಕಾಲಾಳುಗಳ ಸೇನೆಯಿಂದ ಭಯಂಕರವಾಗಿತ್ತು. ೨೫. ಎರಡು ಪಕ್ಕಗಳಲ್ಲಿ ಅರಸನ ಆಗಮನವನ್ನು ನಿರೀಕ್ಷಿಸುತ್ತ ರಾಜರು ನಿಂತಲ್ಲಿಯೇ ನಿಂತು ವಂದಿಸಿದರು. ಆಗ ಅವರ ಕಿರೀಟಗಳಲ್ಲಿನ ಮಣಿಸಮೂಹಗಳ ಕಾಂತಿಯು ದಿಕ್ಕುಗಳನ್ನೂ ವಸುಧೆಯನ್ನೂ ವ್ಯಾಪಿಸಿ ಹರಡಿತು. ವ॥ ಅಂತು ಕಿರೀಟಗಳಲ್ಲಿನ ರತ್ನಕಾಂತಿಗಳಿಂದ ರಂಜಿತವಾದ ದಿಙ್ಮಂಡಲವುಳ್ಳವರಾಗಿ ಬಂದು ನಮಸ್ಕರಿಸಿದ ರಾಜಸಮೂಹವನ್ನು ಅನುಕ್ರಮವಾಗಿ ಕಡೆಗಣ್ಣಿನಿಂದಲೂ ಕಟಾಕ್ಷದಿಂದಲೂ ಪೂರ್ಣನೇತ್ರಗಳಿಂದಲೂ ಹುಬ್ಬುಗಳನ್ನು ಹಾರಿಸುವುದರಿಂದಲೂ ಅರೆನಗೆಯಿಂದಲೂ ಸಂಭಾಷಣೆಯಿಂದಲೂ ಪರಿಹಾಸದಿಂದಲೂ ವಿಶ್ವಾಸಪ್ರಯುಕ್ತವಾದ ಮಾತುಗಳಿಂದಲೂ ಸಂತೋಷಪಡಿಸುತ್ತಾ ಬಂದು ಅಂದಿನ ದಿನ ಅಯೋಧ್ಯೆಯ ಬಳಿಯಲ್ಲಿ ತನ್ನ ಶಿಲ್ಪಿರತ್ನದಿಂದ ವಿರಚಿತವಾದ ೨೬. ವಿಜಯಕಾಂಕ್ಷರ್ಹ ವಾದ ವಿಜಯಲಕ್ಷ್ಮಿಗೃಹವೋ ಎಂಬಂತಿರುವ ವಿಜಯಪ್ರಯಾಣಕಾಲದಲ್ಲಿ ರಾಜನ

ವ॥ ಅಂತು ಪೊಕ್ಕು ಮಂಗಳಶೇಷಾಕ್ಷತಂಗಳನಾಂತುಕೊಂಡು ಹರಿನೀಲಕುಟ್ಟಿಮನಿಹಿತರಜತ ಹೇಮಭಾಜನಾಲಂಕೃತಮಾಗಿ ವಿಕಸಿತಾಂಭೋಜಹೇಮಕಮಳಮನೋಹರತರಶ್ರೀಯಂ ತಾಳ್ದಿರ್ದ ಭೋಜನಭೂಮಿಗೆ ರಾಜಹಂಸವಿಳಾಸದಿಂ ಬಿಜಯಂಗೆಯ್ದು ಸಕಲವಿದ್ಯಾಪ್ರವೀಣಗುರುಜನಾರ್ಯಜನ ವಿಳಾಸಿನೀಜನಪರಿವೃತನತಿಮೃದುರಸನಾಸಮ್ಮರ್ದನಮಾತ್ರದ್ರಾವಣೀಯಘೃತಪೂರಮುಮಂ, ಅಲ್ಪದಶನದಂಶಮಾತ್ರ ಖಂಡನೀಯಮಂಡಕಮುಮನತ್ಯಂತಕೋಮಳತಾಳುತಳಸಂಘಟ್ಟಮಾತ್ರ ಕ್ಷೋದನೀಯ ಮೋದಕಮುಮಂ, ಅನಿಷ್ಠುರೋಷ್ಠಪುಟಮಧ್ಯಸಂಧಾರಣಮಾತ್ರಚೂರ್ಣನೀಯ ಶಾಕವರ್ತಿಕಮುಮಂ, ಅತಿದೂರೋಚ್ಛ್ವಾಸವಿಕಾಸನಾಸಾಂಜಲಿಪುಟಪೀಯಮಾನನವೀನಹೈಯಂಗವೀನ ಮುಮಂ, ನೀಹಾರ ಶಕಲಪರಿಣತಕಪಿತ್ಥಫಳಪರಿಮಳಮಧುರದಧಿಯುಮಂ, ಏಕೀಭೂತಸಕಳಭುವನ ಶಿಶಿರದ್ರವ್ಯಸಂಭಾರದ್ರವ ಶಂಕಾಕರಶಿಖರಿಣೀರಮಣೀಯಮುಮಂ, ಅಮೃತಪಿಂಡಾಯಮಾನ ಪಿಂಡದುಗ್ಧಸ್ನಿಗ್ಧಮುಮಪ್ಪ ಮನೋಹರಾಹಾರಮುಮಂ,

ಕೆಲದೊಳ್ ರಾಜಕುಮಾರವೃಂದಮಿದಿರೊಳ್ ವಾರಾಂಗನಾವರ್ಗಮಾ
ದಲೆ ವಂದಿಪ್ರಕರಂ ಯಥೋಚಿತನಿಜಸ್ಥಾನಂಗಳೊಳ್ ಗಾಯಕರ್
ಪಲರುಂ ಬಂದುಣೆ ನೋಡಿಯುಂ ನುಡಿದುಮಟ್ಟುತ್ತುಂ ಪಸಾಯಂಗಳಂ
ಕೆಲಕೆಲ್ಲಂ ಭರತೇಶನಾರೊಗಿಸಿದಂ ಕಲ್ಯಾಣಕಾಹಾರಮಂ ೨೭

ನಿವಾಸಕ್ಕಾಗಿಯೇ ನಿರ್ಮಿತವಾದ ಶಿಬಿರವನ್ನು ವಿಜಯಾಲಂಕಾರಬಾಹುವೂ ವಿಜಿಗೀಷುವೂ ಆದ ಭರತಚಕ್ರವರ್ತಿಯು ಬಂದು ಹೊಕ್ಕನು. ವ॥ ಅಲ್ಲಿ ಮಂಗಳ ಶೇಷಾಕ್ಷತೆಗಳನ್ನು ಸ್ವೀಕರಿಸಿದನು. ಇಂದ್ರನೀಲಮಣಿಗಳಿಂದ ಮೆಟ್ಟಿದ ನೆಲದ ಮೇಲಿಟ್ಟ ಬೆಳ್ಳಿ ಮತ್ತು ಚಿನ್ನದ ಪಾತ್ರೆಗಳಿಂದ ಕೂಡಿರುವ, ಅರಳಿದ ಕಮಲಗಳಿಂದಲೂ ಚಿನ್ನದ ತಾವರೆಗಳಿಂದಲೂ ಮನೋಹರವಾದ ಸರೋವರದ ಕಾಂತಿಯನ್ನು ತಳೆದಿರುವ ಭೋಜನಭೂಮಿಗೆ ರಾಜಹಂಸದ ನಡಿಗೆಯಿಂದ ಬಿಜಯಂಗೈದನು. ಸಮಸ್ತ ವಿದ್ಯೆಗಳಲ್ಲಿಯೂ ನುರಿತ ಗುರುಜನರಿಂದಲೂ ಆರ್ಯಜನರಿಂದಲೂ ವಿಲಾಸಯುಕ್ತರಾದ ಸ್ತ್ರೀಯರಿಂದಲೂ ಪರಿವೃತನಾಗಿ, ಅತಿಮೃದುವಾದ ನಾಲಿಗೆಯ ಅದುಮುವಿಕೆಯಿಂದಲೇ ಕರಗಿಹೋಗುವ ತುಪ್ಪದ ಪೂರಿಗಳು, ಹಲ್ಲುಗಳ ತಾಕುವಿಕೆಯ ಮಾತ್ರದಿಂದಲೇ ಪುಡಿಪುಡಿಗೊಳ್ಳುವ ಮಂಡಿಗೆಗಳು, ಮೃದುವಾದ ದವಡೆಗಳ ಸಂಘಟ್ಟಣೆಯ ಮಾತ್ರದಿಂದಲೇ ನುರಿಯುವ ಕಡುಬುಗಳು, ಮೃದುವಾದ ತುಟಿಗಳ ಮಧ್ಯದಲ್ಲಿಡೋಣದರಿಂದಲೇ ಪುಡಿಪುಡಿಗೊಳ್ಳುವ ಶಾಕವರ್ತಿಕಗಳು[1], ದೀರ್ಘವಾಗಿ ಉಸಿರೆಳೆದುಕೊಂಡು ಅರಳಿದ ಮೂಗುಗಳೆಂಬ ಬೊಗಸೆಗಳಿಂದ ಕುಡಿಯಲ್ಪಡುವ (ಮೂಸಲ್ಪಡುವ) ಆಗತಾನೆ ಕಾಯಿಸಿದ ತುಪ್ಪ, ಹಿಮದ ತುಂಡುಗಳಂತೆ ಬೆಳ್ಳಗಿರುವ ಮಾಗಿದ ಬೇಲದ ಹಣ್ಣುಗಳಂತೆ ಪರಿಮಳಯುಕ್ತವೂ ಮಧುರವೂ ಆದ ಮೊಸರು, ಸಮಸ್ತ ಲೋಕದ ತಂಪಾದ ಪದಾರ್ಥಗಳು ಒಟ್ಟಾಗಿ ಕಲೆತು ಕರಗಿವೆಯೋ ಎಂಬ ಶಂಕೆಯನ್ನುಂಟುಮಾಡುವ ಶಿಖರಿಣಿ (ಒಂದು ಭಕ್ಷ್ಯ) ಇವುಗಳಿಂದ ರಮಣೀಯವಾದ ಅಮೃತಪಿಂಡದಂತೆ ಹಾಲುಜಿಡ್ಡುಗಳಿಂದ ಯುಕ್ತವಾದ ಮನೋಹರವಾದ ಆಹಾರವನ್ನು ಭುಂಜಿಸಿದನು. ೨೭. ಪಕ್ಕದಲ್ಲಿ ರಾಜಕುಮಾರರ ಸಮೂಹವೂ, ಎದುರಿನಲ್ಲಿ ಗಣಿಕೆಯರ ತಂಡವೂ, ಅತ್ತೊಂದೆಡೆಯಲ್ಲಿ ವಂದಿಮಾಗಧರ

---

1 ಶಾಕವರ್ತಿಕ = ಪಲ್ಯ? ತರಕಾರಿಯಿಂದ ಮಾಡಿದ ಬೋಂಡ?

ವ|| ಅಂತಾರೋಗಿಸಿದಿಂ ಬಳಿಯಂ ಆಚಾಂತಚಂದ್ರಕಾಂತದ್ರವಸುರಭಿಸಲಿಲನುಂ, ಘನಸಾರ ಚಂದನಸಾರಪ್ರಮೃಷ್ಟಕರತಳನುಮಾಗಿ, ಕೃತಕಸ್ತೂರಿಕಾವಿಲೇಪನನುಂ, ವಿರಚಿತಸುರಭಿಕುಸುಮಶೇಖರನುಂ ಮೃಗಮದಖದಿರಗುಳಿಕಾಬಹಳಕರ್ಪೂರಪಾಳೀಸಮಿಶ್ರತಾಂಬೂಲದ್ವಿಗುಣಿತವದನಾರವಿಂದಾಮೋದನುಮಾಗಿ, ಷಟ್ಖಂಡಮಂಡಳವಿಜಯವಿಳಾಸವಿಹಾರಶೀಲಂ ಕತಿಪಯಪದಂಗಳಂ ವಿಹಾರಿಸಿ, ದುಕೂಲ ಪ್ರಚ್ಛದಾಚ್ಛಾದಿತಸುಖಾಸನಾಸೀನಂ ಮಣಿಮಯಸಿಂಹಾಸನಮನವಷ್ಟಂಭಿಸಿ,

ಕಳಕಂಠೀಗೀತಂ ಬಗೆ
ಗೊಳಿಯುಂ ವೀಣಾಕ್ವಣಂ ಮನಂಗೊಳಿಯುಮಿಳಾ
ವಳಯೇಶ್ವರನಮರ್ದಿದ ಕಡ
ಲೊಳಗಿರ್ಪಂತಿರ್ದನಂತವಾಸದೊಳಾಗಳ್ ೨೮

ವ|| ಅಂತು ಅಂದಿನ ದಿವಸಮಂ ಕಳಿದು ಮಱುದಿವಸಂ ದ್ವಾದಶಯೋಜನ ಸಂಸರ್ಪದ್ಗಂಭೀರ ವೀರಾರಾವಂಗಳಪ್ಪ ನಂದಿಗಳೆಂಬ ಪನ್ನೆರಡುಭೇರಿಗಳುಂ, ಅಹಿತಮಹೀಪಾಳಹೃದಯಕವಾಟಪುಟ ವಿಘಟನಪಟುಗಳಪ್ಪ ವಿಜಯಘೋಷಂಗಳೆಂಬ ಪನ್ನೆರಡು ಪಟಹಂಗಳುಂ, ಅಗಣ್ಯಪುಣ್ಯಾಬ್ಧಿಸಂಭವಂಗಳಪ್ಪ ಗಂಭೀರಾವರ್ತಗಳೆಂಬಿರ್ಪತ್ತುನಾಲ್ಕು ಶಂಖಂಗಳುಂ, ಮತ್ಸ್ಯಮಕರಕುಲಿಶಕಲಶ ಕುಳೀರವರಾಹವಾನರ ಕಂಠೀರವ ಚಮೂರುಮಯೂರಗುರುಡ ಫಣಿರಾಜಚಿಹ್ನಂಗಳಪ್ಪ ನಾಲ್ವತ್ತೆಂಟುಕೋಟಿಪತಾಕೆಗಳೆಸೆಯೆ

ಗುಂಪೂ, ಯಥೋಚಿತವಾದ ಸ್ಥಾನಗಳಲ್ಲಿ ಗಾಯಕರೂ ಬಂದು ಕುಳಿತು ಊಟಮಾಡುತ್ತಿದ್ದರು. ಅವರನ್ನು ನೋಡುತ್ತಾ, ಅವರೊಡನೆ ಮಾತಾಡುತ್ತಾ, ಅವರನ್ನು ನಿರ್ಬಂಧಗೊಳಿಸಿ ಊಟಮಾಡಿಸುತ್ತಾ, ಉಡುಗೊರೆಗಳನ್ನಿತ್ತು ಸನ್ಮಾನಿಸುತ್ತಾ ಕಲ್ಯಾಣಕರವಾದ ಆಹಾರವನ್ನು ಭರತೇಶನು ಆರೋಗಿಸಿದನು. ವ|| ಹಾಗೆ ಭುಂಜಿಸಿದ ಬಳಿಕ ಚಂದ್ರಕಾಂತಮಣಿಗಳು ಸ್ರವಿಸಿದ ಪರಿಮಳಯುಕ್ತವಾದ ನೀರನ್ನು ಕುಡಿದನು. ಪಚ್ಚಕರ್ಪೂರವನ್ನೂ ಚಂದನಸಾರವನ್ನೂ ಕೈಗಳಿಗೆ ಹಚ್ಚಿಕೊಂಡನು. ಮೈಗೆ ಕಸ್ತೂರಿಯನ್ನು ಬಳಿದುಕೊಂಡನು. ಸುವಾಸನಾಮಯವಾದ ಹೂವುಗಳನ್ನು ತಲೆಯಲ್ಲಿ ಧರಿಸಿ ಕೊಂಡನು. ಕಸ್ತೂರಿ, ಕಾಚು, ಪಚ್ಚಕರ್ಪೂರಗಳಿಂದ ಮಿಶ್ರಿತವಾದ ತಾಂಬೂಲವನ್ನು ಸೇವಿಸಿ ಮುಖಕಮಲದ ಸುವಾಸನೆಯನ್ನು ಇಮ್ಮಡಿಗೊಳಿಸಿಕೊಂಡನು. ಷಟ್ಖಂಡಯುಕ್ತವಾದ ಭೂಮಂಡಲದ ವಿಜಯವಿಲಾಸದಿಂದ ವಿಹಾರಶೀಲನಾಗಿ ಕೆಲವು ಹೆಜ್ಜೆಗಳನ್ನಿಟ್ಟು ರೇಷ್ಮೆ ಬಟ್ಟೆಗಳ ಹೊದಿಕೆಗಳಿಂದ ಅಲಂಕೃತವಾದ ಮಣಿಮಯ ಸಿಂಹಾಸನದಲ್ಲಿ ಕುಳಿತುಕೊಂಡನು. ೨೮. ಕಲಕಂಠಿಯರ ಸಂಗೀತವು ಮನಸ್ತೋಷವನ್ನು ಮಾಡಿತು. ವೀಣಾಧ್ವನಿಯು ಮನಸ್ಸನ್ನು ಸೂರೆಗೊಂಡಿತು. ಹೀಗೆ ಭೂಮಂಡಲಕ್ಕೊಡೆಯನಾದ ಭರತಚಕ್ರವರ್ತಿಯು (ರಾಜಧಾನೀ ಸಮೀಪದ) ಬಿಡಾರದಲ್ಲಿ ಅಮೃತಸಾಗರದಲ್ಲಿದ್ದಂತಿದ್ದನು. ವ|| ಹಾಗೆ ಆ ದಿವಸವನ್ನು ಕಳೆದನು. ಮರುದಿನ ಹನ್ನೆರಡು ಯೋಜನದಷ್ಟು ದೂರ ವ್ಯಾಪಿಸಬಲ್ಲ, ಗಂಭೀರ ಧೀರ ಧ್ವನಿಗಳನ್ನು ಗೈಯುತ್ತಿರುವ ಆನಂದಿಗಳೆಂಬ ಹನ್ನೆರಡು ಭೇರಿಗಳೂ, ಶತ್ರುರಾಜರ ಹೃದಯವೆಂಬ ಬಾಗಿಲನ್ನೊಡೆಯಲು ಸಮರ್ಥವೆನಿಸಿದ ವಿಜಯಘೋಷಗಳೆಂಬ ಹನ್ನೆರಡು ಪಟಹಗಳೂ, ಅತಿಪುಣ್ಯಕರವಾದ ಕ್ಷೀರಸಾಗರದಲ್ಲೊಗೆದ ಗಂಭೀರಾವರ್ತಗಳೆಂಬ ಇಪ್ಪತ್ನಾಲ್ಕು ಶಂಖಗಳೂ, ಮೀನು, ಮೊಸಳೆ, ವಜ್ರಾಯುಧ, ಹಂದಿ, ಕಪಿ, ಸಿಂಹ,

ಪೂರ್ವಾಭಿಮುಖನಾಗಿ ಚಕ್ರರತ್ನಪುರಸ್ಸರಂ ಬಿಜಯಂಗೆಯ್ವಾಗಳ್,

ಅನವರತಗಳನ್ಮದದು
ರ್ದಿನಾನನಂ ವರ್ಷಜಳಸಮನ್ವಿತಮಂಭೋ
ದನಿನಾದಂ ಭದ್ರಮನಂ
ಮನೋಜವಂ ಚತುರಶೀತಿಲಕ್ಷಪ್ರಮಿತಂ ೨೯

॥ ಮಾಲಿನೀ ॥

ಘನಘಟೆ ನಭದಿಂದಂ ಧಾತ್ರಿಗೆತ್ತೆತ್ತ ಬಂದ
ತ್ತೆನಿಸಿ ಕಳಿದುದೆತ್ತಂ ಚೂತಸಪ್ತಚ್ಛದೈಳಾ
ವನಸುರಭಿಮದಾಸಾರಸವಾಸಕ್ತಭೃಂಗೀ
ನಿನದಮುಖರಿತಾಶಾಚಕ್ರಗಂಧೇಭಚಕ್ರಂ ೩೦

ವನಧಿಯ ನೀಳ್ದ ಪೆರ್ದೆರೆಗಳೀನೆಲನಂ ಕವಿದಪ್ಪುವೀಗಳೆಂ
ಬಿನಮತಿವೇಗದಿಂ ಪರಿವ ಪಾಱುವ ಲಕ್ಕೆಯನೊಡ್ಡುವೊಳ್ಪು ತ
ನ್ನನೆ ನಡೆನೋಡಿಸುತ್ತುಮಿರೆ ಜಾಯಿಲಮೊಂದೆರಡೆಂದು ತೋಱೆ ನೆ
ಟ್ಟನೆ ಪದಿನೆಂಟುಕೋಟಿವರೆಗಂ ತಳರ್ದತ್ತು ತುರಂಗಸಾಧನಂ ೩೧

ಜಿಂಕೆ ಮತ್ತು ಗರುಡರ ಚಿಹ್ನೆಗಳಿಂದ ಚಿಹ್ನಿತವಾದ ನಲವತ್ತೆಂಟು ಕೋಟಿ ಬಾವುಟಗಳೂ ಪ್ರಕಾಶಿಸುತ್ತಿರಲು ಪೂರ್ವಾಭಿಮುಖವಾಗಿ ಚಕ್ರರತ್ನವನ್ನು ಮುಂದಿಟ್ಟುಕೊಂಡು ವಿಜಯಾರ್ಥವಾಗಿ ಪ್ರಯಾಣವೆಳಸಿದನು. ೨೯. ಎಡೆಬಿಡದೆ ಸುರಿಸುತ್ತಿರುವ ಮದಜಲದಿಂದ ದುರ್ದಿನದಂತಾದ ಮುಖವುಳ್ಳ, ಮಳೆನೀರಿನಿಂದ ಸುರಿವ ನೀರಿನಿಂದ ಕೂಡಿದ[1] ಮೋಡದ ಗರ್ಜನೆಯುಳ್ಳ ಮನೋಜವಗಳಾದ, ಭದ್ರಮನ ಜಾತಿಗೆ ಸೇರಿದ ಎಂಬತ್ನಾಲ್ಕು ಲಕ್ಷ ಗಜಗಳು ಹೊರಟವು. ೩೦. ಮೋಡದ ಗುಂಪು ಆಕಾಶದಿಂದ ಭೂಮಿಗೆ ಎಲ್ಲ ಕಡೆಯಿಂದಲೂ ಧುಮುಕಿತೋ ಎಂಬಂತೆ ಮಾವು, ಏಳೆಲೆಬಾಳೆ, ಏಲಕ್ಕಿಗಳಿಂದ ತುಂಬಿದ ಕಾಡು, ಇವುಗಳಂತೆ ಸುಗಂಧಮಯವಾದ ಮದೋದಕದಲ್ಲಿ ಆಸಕ್ತವಾದ ದುಂಬಿಗಳ ಝೇಂಕಾರಗಳಿಂದ ಮೊಳಗುತ್ತಿರುವ ದಿಕ್ಚಕ್ರವುಳ್ಳ ಗಂಧಗಜಗಳ ಗುಂಪು ಸುತ್ತಲೂ ಚಲಿಸಿತು. ೩೧. ಸಮುದ್ರದ ಉದ್ದವೂ ದೊಡ್ಡವೂ ಆದ ತೆರೆಗಳು ಈ ನೆಲವನ್ನು ಕವಿಯುತ್ತಿವೆಯೆಂಬಂತೆ ಹದಿನೆಂಟು ಕೋಟಿಯವರೆಗೆ ಕುದುರೆ ಸೈನ್ಯವು ಚಲಿಸಿತು. ಅತಿವೇಗದಿಂದ ಓಡುವ, ನೆಗೆಯುವ ಸೊಬಗು ಜನರ ಗಮನವನ್ನು ತನ್ನೆಡೆಗೆ ಸೆಳೆಯುತ್ತಿದ್ದ ಜಾತ್ಯಶ್ವವು ಒಂದಿದ್ದರೆ ಎರಡಿದ್ದಂತೆ ಕಾಣಿಸುತ್ತಿತ್ತು (?).

1 ವರ್ಷಜಳಸಮನ್ವಿತಂ = ಇದರ ಅನ್ವಯ ಎಲ್ಲಿಗೆ? ಮುಂದಿನ ಪದ್ಯದ 'ಘನಘಟೆ' ಯಲ್ಲಿಯೆ? 'ಭದ್ರಮನಂ, ಮನೋಜವಂ' ಎಂಬುದಕ್ಕೆ ಅನ್ವಯ ಹೇಗೆ? ಆನೆಯನ್ನಾಗಲಿ, ಮೇಘವನ್ನಾಗಲಿ 'ಮನೋಜವ' ಎನ್ನುವುದು ಕವಿಸಂಪ್ರದಾಯವಲ್ಲ. ಈ ಪದ್ಯವೇ ಅಸಂಘುಲ.

ವಿವಿಧಾಯುಧಪೂರ್ಣಂಗಳ್
ಪ್ರವೀರಪುರುಷಪ್ರತಿಷ್ಠಿತಂಗಳ್ ಚೇತೋ
ಜವಹರಿಯೋಗ್ಯಂಗಳ್[೧] ತಳ
ರ್ದುವಾಗಳೆಂಭತ್ತು ನಾಲ್ಕುಲಕ್ಕೆ ರಥಂಗಳ್ ೩೨

ಪಾದಾಭಿಘಾತವಿಚಳ
ನ್ಮೇದಿನ್ಯುತ್ಥಿತವಿಶಾಲಧೂಳೀಪಟಲಾ
ಚ್ಛಾದಿತಗಗನಂ ನಡೆದುದು
ಪಾದಾತಂ ಚತುರಶೀತಿಕೋಟಿಪ್ರಮಿತಂ ೩೩

ಎಡೆನೆಱೆಯದು ಭುವನತಳಂ
ನಡೆವ ಚತುರ್ಬಲಕೆ ದಿವಿಜಖೇಚರಸೈನ್ಯ
ಕ್ಕೆಡೆನೆಱೆಯದು ಗಗನಮುಮೆನೆ
ಷಡಂಗಬಲಮಿಂತು ತಳರೆ ತಳರ್ದಂ ಭರತಂ ೩೪

ದೆಸೆಗಳನೆಂಟುಮಂ ನೆಱೆಯೆ ಮುನ್ನಮೆ ಬಳ್ವಳನಾಗೆ ಮಾಡದಾ
ಗಸಮುಮನುಚ್ಚಮಾಗಿನಿಸನೆತ್ತದೆ ನೀಳ್ದಿರೆ ಭೂಮಿಭಾಗಮಂ
ಪಸರಿಸದೀಬಳಪ್ರವರಮಂ ಭರತೇಶ್ವರನೇಕೆಯೋ ವಿನಿ
ರ್ಮಿಸಿದನೆನಲ್ಕೆ ಪೆಂಪುವಡೆದೇಂ ನಡೆದತ್ತೊ ಸಮಸ್ತಸಾಧನಂ ೩೫

ವ॥ ಅಂತು ಮಹೀಭಾಗಮೆಲ್ಲಂ ಚತುರಂಗಮಯಮುಂ, ದಿಗ್ವಿಭಾಗಮೆಲ್ಲಂ

೩೨. ನಾನಾ ಬಗೆಯ ಆಯುಧಗಳಿಂದ ಪೂರ್ಣವೂ, ವೀರಪುರುಷರಿಂದ ವಿಜೃಂಭಿತವೂ ಮನೋವೇಗದಿಂದೋಡುವ ಕುದುರೆಗಳಿಂದ ಎಳೆಯಲ್ಪಟ್ಟುವೂ ಆದ ಎಂಬತ್ನಾಲ್ಕು ಲಕ್ಷ ರಥಗಳು ಆಗ ಚಲಿಸಿದುವು. ೩೩. ಪದಾತಿಗಳ ಕಾಲುಗಳ ಹೊಡೆತದಿಂದ ನೆಲದಿಂದೆದ್ದ ಧೂಳು ಗಗನವನ್ನು ಆಚ್ಛಾದಿಸಿತು. ಹೀಗೆ ಪದಾತಿಬಲವು ಎಂಬತ್ನಾಲ್ಕು ಕೋಟಿಯಿಂದ ಕೂಡಿತ್ತು. ೩೪. ಭರತನ ಚತುರ್ಬಲ ಸೈನ್ಯಕ್ಕೆ ಭುವನತಲದಲ್ಲಿಯೂ, ದಿವಿಜ ಖೇಚರರ ಸೈನ್ಯಗಳಿಗೆ ಆಕಾಶದಲ್ಲಿಯೂ ನಡೆಯಲೆಡೆಯಿರಲಿಲ್ಲ-ಎಂಬುವಂತೆ ಷಡ್ಬಲ[1] ಸೈನ್ಯವು ಹೊರಡಲು ಭರತನೂ ಹೊರಟನು. ೩೫. ಎಂಟು ದಿಕ್ಕುಗಳನ್ನೂ ವ್ಯಾಪಿಸುವುದಕ್ಕಿಂತ ಮೊದಲೇ ಅವನ್ನು ಉದ್ದಮಾಡದೆಯೆ, ಆಕಾಶವನ್ನು ಸ್ವಲ್ಪ ಎತ್ತರವಾಗಿ ಎತ್ತರಿಸದೆಯೆ, ಭೂಭಾಗವನ್ನೆಲ್ಲ ಅಗಲವಾಗಿ ಹರಡದೆಯೆ ಸೈನ್ಯಸಮೂಹವನ್ನು ಭರತೇಶ್ವರನೇಕೆ ನಿರ್ಮಿಸಿದನೋ ಎಂಬಂತೆ ಅವನೆಲ್ಲ ಸೈನ್ಯವೂ ಪೆಂಪುವಡೆದು ಮುನ್ನಡೆಯಿತು. ವ॥ ಭೂಭಾಗವೆಲ್ಲ ಚತುರಂಗಮಯವಾಯಿತು. ದಿಗ್ವಿಭಾಗವೆಲ್ಲ ಧೂಳೀಮಯವಾಯಿತು.

---

೧ 'ಯೋಜ್ಯಂಗಳ್' ಅಥವಾ ಯುಗ್ಯಂಗಳ್ ಎಂದು ಶುದ್ಧಪಾಠವಿರಬಹುದು.

1 ಷಡ್ಬಲ = ಆನೆ, ಕುದುರೆ, ರಥ, ಪದಾತಿ, ದಿವಿಜ, ಖೇಚರ (ವಿದ್ಯಾಧರ).

ರಜೋಮಯಮುಂ, ನಭೋಭಾಗಮೆಲ್ಲಂ ದಿವಿಜವಿದ್ಯಾಧರಮಯಮುಂ, ಅಂತರಿಕ್ಷಮೆಲ್ಲಮಾತಪತ್ರ ಮಂಡಳಮಯಮುಂ, ಸಮೀರಣಸಂಚರಣಮೆಲ್ಲಂ ಮದಗಂಧಮಯಮುಂ, ಸೃಷ್ಟಿಯೆಲ್ಲಮವ ನಿಪಾಳಮಯಮುಂ, ಭುವನವಿವರಮೆಲ್ಲಂ ಜಯಜಯನಿನಾದಮಯಮುಂ ಆಗಿ ನಡೆವ ನಿಜವಿಜಯಸೈನ್ಯದೊಳನೇಕ ಮಕುಟಬದ್ಧಶೇಖರಸಹಸ್ರಪರಿಸ್ರಸ್ತ ಕುಸುಮಕೇಸರರಜಮುಂ, ಅನವರತವಿತರಣನಿರತ ರಾಜಕುಮಾರಮುಷ್ಟಿ ವಿಕೀರ್ಯಮಾಣಸಂತರ್ಪಣಚೂರ್ಣಸಂಕೀರ್ಣ ಕರ್ಪೂರರಜಮುಂ, ಸಮದ ವಿಜಯಗಜವಿಶಾಲ ಕುಂಭಭಿತ್ತಿಪರಿಕ್ಷಿಪ್ತಸಾಂದ್ರಸಿಂದೂರರಜಮುಂ ನೆಱಂಬಡೆದು,

ಮದಕರಿತುರಂಗಮಾನವ
ಪದಹತಿಯಿಂ ಗಗನತಳವನೊಡನಡರ್ದ ರಜಂ
ಪದೆಪೊದವೆ ದಿಗಂಗನೆಯರ
ಕೆದಱಿದ ಪಟವಾಸಚೂರ್ಣರಜಮನೆ ಪೋಲ್ತುಂ ೩೬

ಪರಿಪೂರಿತಸಕಳದಿಗಂ
ಬರತಳಮನುಕೂಲಮಂದಪವನವಿಲೋಲಂ
ಕರಮೆಸೆದುದು ಬಹಳ ರಜೋಂ
ಬುರಾಶಿಯೊಳ್ ಮತ್ಸ್ಯಮಕರಕೇತನನಿಕರಂ ೩೭

ಕರಿಕರಶೀಕರಮದಜಳ
ತುರಂಗಲಾಲಾಂಬುಸೇಕದಿಂದಡಿದುಡಿದಿ
ರ್ದ ರಜಂ ನರೇಂದ್ರಚಾಮರ
ಮರುದಭಿಹತಿಯಿಂ ತೆರಳ್ದು ತೊಳ್ದತ್ತಾಗಳ್ ೩೮

ನಭೋಭಾಗವೆಲ್ಲ ದಿವಿಜ ವಿದ್ಯಾಧರಮಯವಾಯಿತು. ಆಕಾಶವೆಲ್ಲ ಛತ್ರಸಮೂಹದಿಂದ ತುಂಬಿಹೋಯಿತು. ಗಾಳಿಯ ಸಂಚಾರವೆಲ್ಲ ಮದಗಂಧಮಯವಾಯಿತು. ಸೃಷ್ಟಿಯೆಲ್ಲ ರಾಜಮಯವಾಯಿತು. ಭೂವಿವರವೆಲ್ಲ ಜಯಜಯಕಾರಮಯವಾಯಿತು. ತನ್ನ ವಿಜಯ ಸೈನ್ಯದೊಳಗಿನ ಸಾಮಂತರಾಜರ ಕಿರೀಟಗಳಿಂದ ಚ್ಯುತವಾದ ಕುಸುಮಕೇಸರಗಳ ಧೂಳೂ ಸದಾ ಚೆಲ್ಲುವುದರಲ್ಲಿ ನಿರತರಾದ ರಾಜಕುಮಾರರ ಮುಷ್ಟಿಗಳಿಂದ ಎರಚಲ್ಪಟ್ಟ ಬುಕ್ಕಿಹಿಟ್ಟಿನಿಂದ ಮಿಶ್ರವಾದ ಕರ್ಪೂರಚೂರ್ಣವೂ ವಿಜಯಸಹಾಯಕಗಳಾದ ಮದ್ದಾನೆಗಳ ಕುಂಭಭಿತ್ತಿಗಳಿಂದ ಜಾರಿದ ಸಿಂಧೂರರಜವೂ ಒಟ್ಟಾಗಿ ಸೇರಿಕೊಂಡು ೩೬. ಮದ್ದಾನೆ, ಕುದುರೆ ಮತ್ತು ಮಾನವರ ಕಾಲ್ತುಳಿತದಿಂದ ಎದ್ದ ಧೂಳು ಗಗನತಲಕ್ಕೇರಿತು. ಅದು ಹರಡಿ ದಿಗಂಗನೆಯರು ಚೆಲ್ಲಿದ ಪಟವಾಸಚೂರ್ಣದ ರಜವನ್ನು ಹೋಲಿತು. ೩೭. ಧೂಳಿಯೆಂಬ ಸಮುದ್ರದಲ್ಲಿ ಮೀನು, ಮೊಸಳೆ ಮೊದಲಾದ ಚಿಹ್ನೆಗಳಿಂದ ಕೂಡಿದ ಬಾವುಟಗಳ ಸಮೂಹವು ಸಕಲ ದಿಗಂತವನ್ನೂ ವ್ಯಾಪಿಸಿ, ಅನುಕೂಲವೂ, ಮಂದವೂ ಆದ ಗಾಳಿಯಿಂದ ವಿಲೋಲವಾಯಿತು. ೩೮. ಆನೆಯ ಸೊಂಡಿಲಿನ ನೀರಹನಿಗಳಿಂದಲೂ ಮದಜಲಗಳಿಂದಲೂ ಕುದುರೆಗಳ ಬಾಯಿಜೊಲ್ಲುಗಳಿಂದಲೂ ಅಳಿದುಳಿದ ಧೂಳಿಗಳು

ಸಿವಿಗೆ ತಟಿದುಣುಗಲೊಡನೆ
ಕ್ಕುವ ಕುಂಚಂ ಲೀಲೆವಡೆಯೆ ಚೆಲ್ವೆಸೆದುದು ಪ
ಣ್ಣವತಿಸಹಸ್ರಾಂತಃಪುರ
ಮವಯವದೊಳೆ ಭರತಚಕ್ರವರ್ತಿಯ ಕೆಲದೊಳ್ ೩೯

ಬಾಸಣಿಸಿದ ಚೀನದ ಪೊಸ
ವಾಸಣಿಗೆಯ ಪೊನ್ನಸಿವಿಗೆ ಮಣಿಮಯಕಳಶೋ
ದ್ಭಾಸಿ ದೆಸೆದೆಸೆಯೊಳೆಸೆಯೆ ವಿ
ಳಾಸಂ ಬೆರಸಣುಗಭೋಗಿಯರ್ ಕರಮೆಸೆದರ್ ೪೦

ಆವಯವದೆ ಕುಣಿದು ಮೆಟ್ಟುವ
ಸವಡಿಯ ಬಿಜ್ಜಣಿಗೆವಿಡಿದ ಸತ್ತಿಗೆಯ ವಿಳಾ
ಸವಮರ್ದ ಲೀಲೆಯಿಂ ಪೆಂ
ಡವಾಸದೊಳ್ ಪೆಂಡಿರೊಯ್ಯನೊಯ್ಯನೆ ನಡೆದರ್ ೪೧

ಕರಿಣೀವೃಂದದ ಮೇಲೆ ತಳ್ತ ತಟಿಗಳ್ ವಾರಾಂಗನಾಗೀತಮಂ
ದ್ರರವಂಗಳ್ ಚಳಕೇಶಪಾಶಕುಸುಮಾಮೋದಾಸವಾಸಕ್ತಭೃಂ
ಗರವಂಗಳ್ ಪ್ರಿಯಕುಬ್ಜವಾಮನಗಣಾಲಾಪಂಗಳತ್ಯಂತಸೌಂ
ದರಶುದ್ಧಾಂತವಧೂಕದಂಬಕಮನೇಂ ಮೆಯ್ವೆರ್ಚಿಸಲ್ಕಾರ್ತುದೋ ೪೨

ರಾಜಚಾಮರಗಳ ಗಾಳಿಹೊಡೆತದಿಂದ ಚಲಿಸಿ ಆಗ ಹಿಮ್ಮೆಟ್ಟಿತು. ೩೯. ಮೇನೆ, ಛತ್ರಗಳ ಸಮೂಹ, ಬೀಸುತ್ತಿರುವ ಚಾಮರ ಇವು ಸುಂದರವಾಗಿರಲು, ತೊಂಬತ್ತಾರು ಸಾವಿರ ಅಂತಃಪುರಸ್ತ್ರೀಯರು ಭರತಚಕ್ರವರ್ತಿಯ ಸಮೀಪದಲ್ಲಿ ಸೇನೆಯ ನಡುವೆ ಚೆಲುವಿನಿಂದ ಶೋಭಿಸಿದರು. ೪೦. ಮಣಿಮಯವಾದ ಕಲಶಗಳಿಂದ ಪ್ರಕಾಶಿತವಾದ, ರೇಷ್ಮೆಯ ಹೊಸ ಪರದೆಗಳಿಂದ ಮರೆಮಾಡಿದ ಚಿನ್ನದ ಶಿಬಿಕೆಯು ದಿಕ್ಕುವಿದಿಕ್ಕುಗಳಲ್ಲೆಲ್ಲಾ ಎಸೆಯಿತು. ವಿಲಾಸಯುಕ್ತರಾದ ಉಣುಗ[1]ರಾದ ಭೋಗಿಗಳು ಕೆಲವರು ಅಲ್ಲಿ ಕಾಣಿಸಿದರು. ೪೧. ಯಥೇಚ್ಛವಾಗಿ ಕುಣಿದು ಹೆಜ್ಜೆಹಾಕುತ್ತ, ಬೀಸಣಿಗೆಗಳ ಜೋಡಿಯನ್ನೂ, ಸತ್ತಿಗೆಯನ್ನೂ ಹಿಡಿದ ಹೆಂಗಸರು ಅಂತಃಪುರದ ಸ್ತ್ರೀಯರ ನಡುವೆ ಲೀಲೆಯಿಂದ ಒಯ್ಯನೆ ನಡೆದರು. ೪೨. ಹೆಣ್ಣಾನೆಗಳ ಗುಂಪಿನ ಮೇಲೆ ಹಿಡಿದ ಛತ್ರಗಳೂ, ವಾರಗಣಿಕೆಯರ ಗಂಭೀರ ಗೀತ ಧ್ವನಿಗಳೂ, ಚಲಿಸುವ ಕೇಶಪಾಶಗಳಲ್ಲಿನ ಹೂವುಗಳ ಸುಗಂಧಯುಕ್ತವಾದ ಮದ್ಯಕ್ಕೆರಗಿದ ದುಂಬಿಗಳ ಧ್ವನಿಗಳೂ, ಪ್ರಿಯರಾದ ಗೂನ, ಕುಳ್ಳರ ಆಲಾಪಗಳೂ ಅಂತಃಪುರದ ಸುಂದರಸ್ತ್ರೀಯರ ಸಮೂಹವನ್ನು ಸಂತೋಷಪಡಿಸಿದವು.

---

1 ಉಣುಗಭೋಗಿ = ಉಂಡಾಡಿಗಳಾದ ವಿಲಾಸಿಗಳು (?) 'ಅಣುಭೋಗಿ' ಎಂಬ ಪಾಠವಾದರೆ ಪ್ರೀತಿಪಾತ್ರರಾದ ಭೋಗಿಗಳು ಎಂದು ಹೇಳಬಹುದು. ಭೋಗಿ = ವಿಲಾಸಿನಿ (?)

ಪೊಳೆವಲರಮರ್ದಿನ ಕಪ್ಪುರ
ವಳಕಿನ ಕತ್ತುರಿಯ ಕೊಳತದುರ್ವಾಭರಣಂ
ಗಳ ಪೊಳೆವ ಮಾಣಿಕಂಗಳ
ಬೆಳಗಿದೆ ಸೂಚಿಸಿತು ಭರತನಂತಃಪುರಮಂ ೪೩.

ಶೃಂಗಾರಾಂಭೋಧಿವೇಳಾವಿಳಸನದೆಸಕಂ ಮೇಣ್‌ಸ್ಮರಪ್ರಾಜ್ಯಸಾಮ್ರಾ
ಜ್ಯಾಂಗಂ ಮೇಣ್ ಚೈತ್ರಲಕ್ಷ್ಮೀಪರಿಕರವಿಭವಂ ಮೇಣೆದೆಂಬಂತೆ ಲೀಲಾ
ಪಾಂಗಜ್ಯೋತ್ಸ್ನಾಮೃತಾಂಭಃಪ್ಲವಧವಳಿತದಿಗ್ಭಿತ್ತಿ ಬಂದತ್ತು ಪುಷ್ಪಾ
ಸ್ತ್ರಂಗೇಕಚ್ಛತ್ರಮಾಯ್ತೀಜಗಮೆನೆ ಭರತಾಂತಃಪುರಸ್ತ್ರೀಸಮೂಹಂ ೪೪

ಲಯದಿಂ ಮೆಲ್ಪಿಂ ಬೆಡಂಗಂ ಪಡೆವ ತುರಗದಿಂ ಚಿತ್ರಿತಚ್ಛತ್ರಿಕಾಲೀ
ಲೆಯಿನುದ್ದಂ ಬರ್ಪ ಚೇಟೀನಿವಹದ ಬರವಿಂ ಭೂಷಣಾಡಂಬರೋದ್ಯೋ ್ಯೀ
ತಿ[೧]ಯಿನೊಪ್ಪಿರ್ದುದ್ವಿಳಾಸಂ ವಿಳಸಿತಕಮಳಾವಾಸಮೀಬರ್ಪುದುಂ ರಾ
ಣಿಯವಾಸಂ ನೋಡಿಮೆಂಬಂತೆಸೆದುದು ಪಲವುಂ ತಂಡದಿಂ ಪೆಂಡವಾಸಂ ೪೫

ತುರಗಮುಮೊಂದು ಸತ್ತಿಗೆಯುಮೊಂದಿರೆ ಕಾಪಿನ ಬಂಟು ಸುತ್ತಲುಂ
ಬರೆ ಮುಸುಕಿಟ್ಟಪಟ್ಟಣಿಗೆಯುಂ ಪೊಱಪೊಣ್ಮುವ ಕಣ್ಣಬಿಳ್ಪುಮೋ
ಪರ ಮನದೊಳ್ ತೆಱಂಬೊಳೆವ ಚಾಳೆಗಳಂತಿರೆ ನಾಟ್ಟಿಳಾಸದೊಳ್
ಪೊರೆದಿರೆ ಬಂದುದಂದೊಡನೆ ಸಜ್ಜನವೆಂಡಿರ ತಂಡಮೋಳಿಯೊಳ್* ೪೬.

೪೩. ಹೊಳೆಯುವ ಹೂಗಳ, ತೊಡೆದುಕೊಂಡ ಕರ್ಪೂರದ ಹಳುಕಿನ, ಕಸ್ತೂರಿಯ, ಕೊಳತವೆಂಬ ಪರಿಮಳ ದ್ರವ್ಯದ ಮತ್ತು ಶ್ರೇಷ್ಠ ಆಭರಣಗಳಲ್ಲಿಸೆಯುವ ಮಾಣಿಕ್ಯಗಳ ಬೆಳಕು ಭರತನ ಅಂತಃಪುರವಿದೆಂದು ಸೂಚಿಸಿತು. ೪೪. ಈ ಜಗತ್ತು ಮನ್ಮಥನಿಗೆ ಏಕಚ್ಛತ್ರವಾಯ್ತೋ ಎಂಬುವಂತೆ ಭರತನ ಅಂತಃಪುರದ ಸ್ತ್ರೀಸಮೂಹವು ಬಂದಿತು. ಅದು ಶೃಂಗಾರರಸ ಸಮುದ್ರದ ದಡದ ವಿಲಾಸಕಾರ್ಯವೋ ಅಥವಾ ಮನ್ಮಥನ ಸಾಮ್ರಾಜ್ಯಾಂಗವೋ ಅಥವಾ ಚೈತ್ರಲಕ್ಷ್ಮಿಯ ವಿಲಾಸಸಾಮಗ್ರಿಗಳ ವೈಭವವೋ ಎಂಬಂತೆ ಕಾಣಿಸಿತು. ಲೀಲಾವಿಜೃಂಭಿತವಾದ ಕಡೆಗಣ್ನೋಟದ ಬೆಳದಿಂಗಳೆಂಬ ಅಮೃತಪ್ರವಾಹದಿಂದ ದಿಗ್ಭಿತ್ತಿಗಳನ್ನು ಬೆಳ್ಳಗೆ ಮಾಡುತ್ತಾ ಬಂದಿತು. ೪೫. ಲಯದಿಂದಲೂ ಮೃದುತೆಯಿಂದಲೂ ಬೆಡಗನ್ನು ಪಡೆದ ಕುದುರೆಗಳಿಂದಲೂ ಚಿತ್ರ ವಿಚಿತ್ರವಾದ ಛತ್ರಗಳ ಲೀಲೆಯಿಂದ ಸಾಲಾಗಿ ಸಾಗುತ್ತಿರುವ ಚೇಟಿಯರ ಗುಂಪಿನ ಬರವಿನಿಂದಲೂ ಆಭರಣಗಳ ಆಡಂಬರದ ಕಾಂತಿಯಿಂದಲೂ ಸೊಬಗುವಡೆದ ಕಮಲಾವಾಸವೇ ಬರುತ್ತಿರುವಂತೆ ರಾಣಿವಾಸವು ಬರುತ್ತಿದೆ, ನೋಡಿ ಎಂಬಂತೆ ಹಲವು ಗುಂಪುಗಳಲ್ಲಿರುವ ಪೆಂಡವಾಸವು ಪ್ರಕಾಶಿಸಿತು. ೪೬. ಕುದುರೆ, ಸತ್ತಿಗೆ ಕೂಡಿಬರಲು, ರಕ್ಷಣೆಯ ಭಟರು ಸುತ್ತಲೂ ಬರುತ್ತಿರಲು, ಮುಸುಕುಹಾಕಿದ ಬಿಳಿಯ ಬಟ್ಟೆಯೂ ಹೊರಹೊಮ್ಮುವ ಕಣ್ಣಿನ ಬಿಳುಪೂ

---

೧ ಉದ್ಯೋತಿ = ಪ್ರಕಾಶವುಳ್ಳದ್ದು. ಅದ್ದರಿಂದ 'ದ್ಯೋತಿಯಿದೊಪ್ಪಿರ್ದು' ಎಂಬುದು ಶುದ್ಧ
* ೪೬, ೪೭ ಪದ್ಯಗಳು ಪ್ರಕ್ಷಿಪ್ತವೆಂದು ತೋರುತ್ತದೆ.

ಪಡೆಗಡ್ಡಮಿರ್ದ ಬೆಟ್ಟ
ಟ್ಟೆಡೆ ಮಟ್ಟಮಿಱುಂಬಮೆಂಬವಂ ಸಣ್ಣಿಸಿ ಸಾ
ರ್ವೆಡೆ ನಡೆವ ದಂಡರತ್ನಂ
ಪಡೆವಳ್ಳನ ಮುಂದೆ ನಡೆಯೆ ನಡೆದಂ ಭರತಂ ೪೭

ವ॥ ಆ ಪ್ರಸ್ತಾವದೊಳ್,

ಅಂತು ನೃಪಂ ನಡೆಯೆ ಲಲಾ
ಟಂ ತಪತಪನಾಂಶುವಿಂ ಸರೋವರಜಲಮೋ
ರಂತಿರೆ ಕಾಯ್ದೊಂಡದ ನೀ
ರಂತಿರೆ ಕುದಿದತ್ತು ಪೊಳೆಯೆ ಜಲಚರನಿಕರಂ ೪೮

ಬಾಳಕಳಹಂಸ[೧]ಜಾಳ ಮೃ
ಣಾಳಂಗಳ ನಡುವೆ ಶಿಶಿರಕರಕರಶತದಾಂ
ದೋಳದೊಳಿರ್ಪಂತಿರ್ದುದು
ಲೀಳೆಯಿನೇಂ ಲೀಲೆ ರಾಜಹಂಸಂಗರಿದೇ ೪೯

ತಪನಕರಂ ತನುಗಳನು
ರ್ಚ ಪೋಗೆ ಸಾರ್ದತ್ತು ಜಕ್ಕವಕ್ಕಿಯ ಪೊಣರುಂ
ಗ್ಲಪಿತಮನಮಾಗಳುದ್ದಂ
ಡಪುಂಡರೀಕೋಜ್ಜ್ವಳಾತಪತ್ರದ ನೆೞಲಂ ೫೦

ಪ್ರಿಯರ ಮನಸ್ಸಿನಲ್ಲಿ ಹೊಳೆಯುವ ಬಾಳೆಯ ಮೀನುಗಳಂತೆ ಕಾಣುವ ನಾಡು ವಿಳಾಸದಿಂದ ಮೆರೆಯುತ್ತಿರಲು, ಸಜ್ಜನವೆಂಡಿರ ಗುಂಪು ಸಾಲಾಗಿ ಕೂಡಿಬರುತ್ತಿದ್ದಿತು. ೪೭. ಸೈನ್ಯಕ್ಕೆ ಎದುರಾಗುವ ಬೆಟ್ಟವನ್ನು ಇಟ್ಟೆಡೆಯಲ್ಲಿ ಮಟ್ಟಮಾಡಿ ಚೂರ್ಣಗೈಯುವ ದಂಡರತ್ನವು ಸೇನಾಧಿಪತಿಯ ಮುಂದೆ ನಡೆಯಲು ಭರತನು ಮುಂದುವರಿದನು. ವ॥ ಆ ಪ್ರಸ್ತಾವದಲ್ಲಿ ೪೮. ಹಾಗೆ ರಾಜನು ನಡೆದನು. ಹಣೆಯನ್ನು ಸುಡುತ್ತಿರುವ ಸೂರ್ಯನ ತಾಪದಿಂದ ಸರೋವರದ ನೀರು ಒಂದೇ ಸಮನಾಗಿ ಎಲ್ಲೆಡೆಯೂ ಕಾದು, ನೀರು ಕಾಯಿಸುವ ಹಂಡೆಯೊಳಗಿನ ನೀರಿನಂತಾಯಿತು. ಅದರಲ್ಲಿ ಜಲಚರ ಸಮೂಹವು ಗೋಚರವಾಗುವಂತೆ ನೀರು ಕುದಿಯಿತು! ೪೯. ಬಾಲಕಲಹಂಸಗಳ ಮತ್ತು ತಾವರೆದಂಟುಗಳ ನಡುವೆ ರಾಜಹಂಸವು ಚಂದ್ರನ ನೂರಾರು ಕರಗಳು (ಕಿರಣ-ಕೈ) ಆಡಿಸುವ ಉಯ್ಯಾಲೆಯಲ್ಲಿ ಲೀಲೆಯಿಂದ ತೂಗುತ್ತಿರುವಂತೆ ಇದ್ದಿತು. ರಾಜಹಂಸನಿಗೆ ಈ ಲೀಲೆ ಅಸಾಧ್ಯವೇ? (ರಾಜಹಂಸನಾದ ಭರತನಿಗೂ ಮಕ್ಕಳೊಡನೆ ಕೂಡಿ ಉಯ್ಯಾಲೆಯಲ್ಲಿರುವುದು ಅಸಾಧ್ಯವಲ್ಲ). ೫೦. ಸೂರ್ಯನು ದೇಹಗಳನ್ನು ಕಾಯಿಸಲು ಚಕ್ರವಾಕಪಕ್ಷಿಯ ಜೊತೆಯು ದುಃಖಿತವಾದ ಮನಸ್ಸುಳ್ಳುದಾಗಿ ಉನ್ನತ ಕಮಲವೆಂಬ

---

೧ 'ಬಾಲಕಲಹಂಸೆ ಬಾಲಮೃಣಾಳಂಗಳ....' ಎಂಬ ಪಾಠಾಂತರವೂ ಗ್ರಾಹ್ಯವಾಗಿದೆ.

ಪೊಳೆವಿನಕಿರಣಂ ಮೆಯ್ಗಳ
ನಳುರೆ ಕನಲ್ದಗಿದು ಸೋಗೆಯಂ ಪರಪಿ ನೆಟಿ
ಲ್ಗಳನಾಸೆವಡೆ ಶಿಖಾವಳಿ
ಕುಳತಾಂಡವಮೆಸೆದುದಾ ಶರತ್ಸಮಯದೊಳಂ ೫೧

ಕರಣೇಗಣಕರಶೀಕರ
ಪರಿಕರದೊಳಮಲೆವ ಚಮರರುಹಪವನಪರಂ
ಪರೆಯೊಳಮಾಱದೆ ನೃಪಸೌಂ
ದರೀಶ್ರಮಾಂಭಃಕಣಂಗಳುಣ್ಮಿದುವಾಗಳ್ ೫೨

ಲಾವಣ್ಯರಸದ ಬಿಂದುಗ
ಳಾವರಿಸಿದುವೆನಿಸಿ ಪೊಳೆದುವವನೀಶ್ವರಕಾಂ
ತಾವದನಂಗಳ್ ಸ್ವೇದಜ
ಲಾವಳಿಯಿಂ ಸಜಲಲವಸರೋಜಂಗಳವೋಲ್ ೫೩

ಕಡುವೆಂಕೆಯಿಂ ಕಟಾಕ್ಷಂ
ಬಿಡಿದಿೞಿವ ಲಲಾಟಕುಂಕುಮಸ್ವೇದಜಳಂ
ಕಿಡಿಸಿದುದು ಕದಪಿನೊಳ್ ಪೊ
ಲ್ತಡೆ ಬರೆದರಸಿಯರ ಪತ್ರಲೇಖಾವಳಿಯಂ ೫೪

॥ ಪೃಥ್ವೀ ॥

ಶರತ್ತಪನತಾಪದಿಂ ಕೊರಗಿ ಕೂಡೆ ಕೋರ್ಸಿದಾ
ನರೇಶ್ವರವಧೂಕದಂಬಕಮನಾಱಿಸಲ್ಕಾಗಳ
ಬ್ಜರೇಣುಗಳನೆತ್ತಿ ಬಂದುದಿದಿರ್ವರ್ಪವೋಲ್ ನಂದನೋ
ತ್ಕರಂಬಿಡಿದು ಮಾರುತಂ ಚಳತರಂಗೆಯಿಂ ಗಂಗೆಯಿಂ ೫೫

ಉಜ್ವಲವಾದ ಕೊಡೆಯ ನೆಳಲನ್ನು ಆಶ್ರಯಿಸಿತು. ೫೧. ಪ್ರಕಾಶಮಾನವಾದ ಸೂರ್ಯನ ಕಿರಣಗಳು ದೇಹಗಳನ್ನು ವ್ಯಾಪಿಸಿದುವು. ಅದರಿಂದ ನವಿಲುಗಳು ಕ್ಷೋಭೆಗೊಂಡು ಹೆದರಿ ನೆಳಲಿಗೆ ಆಸೆಪಟ್ಟು ತಮ್ಮ ಗರಿಗಳನ್ನು ಹರಡಿಕೊಂಡವು. ಆಗ ಶರತ್ಕಾಲವಾಗಿದ್ದರೂ ನವಿಲುಗಳ ತಾಂಡವನೃತ್ಯವು ಕಾಣಿಸಿತು. ೫೨. ಹೆಣ್ಣಾನೆಗಳ ಸೊಂಡಿಲುಗಳಲ್ಲಿನ ನೀರುಹನಿಗಳಿಂದಲೂ ಬೀಸುವ ಚಾಮರಗಳ ಗಾಳಿಯಿಂದಲೂ ಅಡಗದೆಯೆ, ರಾಜಸ್ತ್ರೀಯರಿಗೆ ಬೆವರಿನ ಹನಿಗಳು ಹೆಚ್ಚಿದುವು. ೫೩. ರಾಜಸ್ತ್ರೀಯರ ಮುಖಗಳು ಬೆವರಿನ ಹನಿಗಳಿಂದ ಕೂಡಿ ಖಲಕಣಿಕೆಗಳಿಂದ ಸಮನ್ವಿತವಾದ ಸರೋಜಗಳೋ ಎಂಬಂತಿದ್ದುವು. ಅವು ಲಾವಣ್ಯರಸದ ಮಕರಂದಗಳಿಂದ ಅನ್ವಿತವಾದಂತೆ ಪ್ರಕಾಶಿಸಿದುವು. ೫೪. ಹೆಚ್ಚಾದ ಶಾಖದಿಂದ ಕಡೆಗಣ್ಣ ಮೂಲಕ ಇಳಿಯುತ್ತಿರುವ ಹಣೆಯಲ್ಲಿನ ಕುಂಕುಮ ಮಿಶ್ರಿತವಾದ ಬೆವರುಹನಿಗಳು ಅರಸಿಯರ ಕೆನ್ನೆಗಳ ಮೇಲೆ ಪ್ರಾತಃಕಾಲದಲ್ಲಿ ಬರೆದ ಪತ್ರಾವಳಿಗಳನ್ನು ಅಳಿಸಿದುವು. ೫೫. ಶರತ್ಕಾಲದ ಸೂರ್ಯನ ತಾಪದಿಂದ ಸೊರಗಿ ಸುಸ್ತಾದ ರಾಜವಧೂಸಮೂಹವನ್ನು ಶಾಂತಗೊಳಿಸಲು ನಂದನವನಗಳ ಮೂಲಕ ಮಾರುತನು ಚಲಿಸುತ್ತಿರುವ ಅಲೆಗಳುಳ್ಳ ಗಂಗೆಯಿಂದ ತಾವರೆಯ ರೇಣುಗಳನ್ನು ಹೊತ್ತು

ವ|| ಅಂತು ಮಳಯಜರಸಶಿಶಿರಶೀಕರಾಸಾರಚಾರಿಯಾಗಿ ಬಂದ ಮಂದಾನಿಳನ ಬಟೆಯನೆ ಬಂದು,

ಹಿಮಶೈಲಾಗ್ರಸರಸ್ಸರೋರುಹರಜಃಪಿಂಗಾಂಗೆಯಂ ತೀರಸಾ
ರಮಹೀಜಪ್ರಸವಪ್ರಭೂತಮಕರಂದಾಮೋದಸಂಸಂಗೆಯಂ
ಭ್ರಮರೀಗೀತಸಮೇತಹೇಮನಳಿನೀ ಶ್ರೀಸಂಗೆಯಂ ನೋಡಿ ನಾ
ಡೆ ಮನಂಗೊಂಡನಿಳೇಶ್ವರಂ ಲುಳಿತಮತ್ಸ್ಯಾಪಾಂಗೆಯಂ ಗಂಗೆಯಂ ೫೬

ಆ ರಮ್ಯನದಿಯ ಚೆಲ್ವನಿ
ಳಾರಾಮಾರಮಣನಟ್ಟಿಯಿಂ ನೋಡುವಿನಂ
ಸಾರಥಿ ಕಣ್ಣಱಿದೊಯ್ಯನೆ
ತೇರಂ ಕೊಸೆಗೊಂಡು ಚಕ್ರಿಯಂ ಬಿನ್ನವಿಕುಂ ೫೭

ದಿವಿಜಜನಸೇವಿತಂ ಭುವ
ನವಂದ್ಯಮಹ್ಲಾದಿತತ್ರಿಲೋಕಂ ನೋಡೀ
ದಿವಿಜನದಿ ನಿನ್ನ ಗುರುವಿನ
ಧವಳಯಶಶ್ರೀಯನಿನಿಸನನುಕರಿಸಿರ್ಕುಂ ೫೮

ನಿನ್ನಾಜ್ಞೆಯಂತೆ ಗಗನಮ
ನುನ್ನತಿಯಿಂ ದಾಂಟ ಪೆಱರ್ಗೆ ಲಂಘಿಸಲರಿದಂ
ಬನ್ನೆಗಮೊಪ್ಪಿರ್ದುದು ಲೋ
ಕೋನ್ನತ ನೋಡಿದಱ ಕನಕವೇದಿಕೆಯಿರವಂ ೫೯

ತಂದು ಇದಿರು ಬರುವಂತೆ ಬೀಸಿದನು. ವ|| ಹಾಗೆ ಶ್ರೀಗಂಧರಸದ ತಣ್ಣೀರುಹನಿಗಳೊಡನೆ ಬೀಸಿದ ಮಂದಾನಿಲನ ಸಮೀಪದ ದಾರಿಯನ್ನು ಸೇರಿ, ೫೬. ಚಂಚಲವಾದ ಮೀನೆಂಬ ಕಡೆಗಣ್ಣೋಟವುಳ್ಳ ಗಂಗೆಯನ್ನು ಆಸಕ್ತಿಯಿಂದ ನೋಡಿ ಇಳೇಶ್ವರನು ಸಂತುಷ್ಟನಾದನು. ಹಿಮಗಿರಿಯ ಮೇಲಿನ ಕೊಳದಲ್ಲಿ ಬೆಳೆದ ಕಮಲಗಳ ಧೂಳಿಯಿಂದ ಅದರ ನೀರು ಹೊಂಬಣ್ಣವಾಗಿತ್ತು. ದಡದ ಶ್ರೇಷ್ಠ ಕಲ್ಪವೃಕ್ಷಗಳಲ್ಲಿನ ಪುಷ್ಪಗಳಿಂದ ಹರಿದುಬಂದ ಮಕರಂದದ ಸುವಾಸನೆಯಿಂದ ಗಂಗಾನದಿ ಶೋಭಿಸುತ್ತಿತ್ತು. ದುಂಬಿಗಳ ಸಂಗೀತಗಳಿಂದ ಅನ್ವಿತವಾಗಿ ಅದು ಸುವರ್ಣಕಮಲಗಳ ಕಾಂತಿಯಿಂದೊಪ್ಪಿತು (ಗಂಗೆಯು ಪದ್ಮಿನೀಜಾತಿಯ ತರುಣಿಯಂತೆ ಕಾಣಿಸಿದಳು). ೫೭. ಆ ರಮ್ಯವಾದ ನದಿಯ ಚೆಲ್ವನ್ನು ಆ ಭೂರಮಣನು ಪ್ರೀತಿಯಿಂದ ನೋಡುತ್ತಿರಲು, ಸಾರಥಿಯು ರಾಜನ ಇಂಗಿತವನ್ನು ಅರಿತನು. ತೇರನ್ನು ಕಡಿವಾಣದ ಹಗ್ಗವನ್ನು ಹಿಡಿದು ನಿಲ್ಲಿಸಿ ಚಕ್ರಿಗೆ ಹೀಗೆ ಬಿನ್ನವಿಸಿದನು. ೫೮. "ಸುರಜನ ಸೇವಿತವೂ, ಜಗದ್ವಂದ್ಯವೂ, ತ್ರಿಲೋಕಗಳನ್ನು ಸಂತೋಷಪಡಿಸಿದುದೂ ಆಗಿದೆ ಈ ಗಂಗಾನದಿ. ನೋಡು, ಈ ಸ್ವರ್ಗನದಿಯು ನಿನ್ನ ತಂದೆಯ ಶುಭ್ರವಾದ ಯಶಶ್ರೀಯನ್ನು ಅನುಕರಿಸುತ್ತಿದೆ! ೫೯. ಲೋಕೋನ್ನತ! ಈ ಕನಕವೇದಿಕೆಯ ಇರವನ್ನು ನೋಡು. ಇದು ನಿನ್ನ ಅಪ್ಪಣೆಯಂತೆ ತನ್ನ ಉನ್ನತಿಯಿಂದ ಆಕಾಶವನ್ನು ಮೀರಿಸಿದೆ. ಬೇರೆಯವರಿಗೆ

ತ್ರಿದಶಸ್ತುತ ನೋಡ ಪೊದ
ೞ್ದದವಿದ ತಾಳೀತಮಾಳ ನೀಳದ ಕರ್ಪಿಂ
ಪುದಿದು ಪರಭಾಗಮಂ ಪಡೆ
ದಿದೞಿರಡುಂ ಕೆಲದೊಳೆಸೆವ ವನರಾಜಿಗಳಂ ೬೦

ಪರೆದು ತಟವನದ ಪಸುರೆಸೆ
ದಿರೆ ತನ್ನೊಳ್ ತನ್ನ ಬಣ್ಣಮೆಸೆದಿರದಿರೆ ವಿ
ಸ್ಫುರಿತತರ ಕನಕವೇದಿಕೆ
ಮರಕತವೇದಿಕೆಯ ಚೆಲ್ವನಿರ್ಕುೞಿಗೊಳ್ಗುಂ ೬೧

ವನಕುಸುಮಸ್ತಬಕದ ನೆೞ
ಲಿನಿಸಚ್ಚಾಂಬುವಿನೊಳೆಸೆಯೆ ಮಧುಕರಮದು ಭೋಂ
ಕೆನೆ ಪಾಯ್ದೞಿಂಕೆ ನಾಂದೊಡೆ
ಜೆನುಂಗಿ ನೆಲಸಿದುದು ಏಕಚಕನಕಾಬ್ಜನಿಯೊಳ್ ೬೨

ಕೊಡೆಯೆಲೆಗಳ ತಿಂತಿಣಿಯಿ
ಟ್ಟೆಡೆಗಳ ಕಟ್ತಲೆಯನಿರುಳೆಗೆತ್ತಾತ್ಮೇಶಂ
ತಡೆದೊಡೆ ನರೇಂದ್ರ ನೋಡೀ
ನಡುವಗಲೊಳ್ ಚಕ್ರವಾಕವಧು ವಿರಹಿಸುವಳ್ ೬೩

ಮದಗಂಧಮೆಂದೆ ಸಪ್ತ
ಚ್ಛದಗಂಧಮನೀವನೇಭಮಾಘ್ರಾಣಿಸಿ ಪೆ
ರ್ಚಿದ ಮುಸಕದಿಂದೆ ಪಾಯ
ಲ್ಮದಿರ್ಪುೞಗೆಯ್ವುದು ನೋಡ ವನವೇದಿಕೆಯಂ ೬೪

ದಾಟಲು ಸಾಧ್ಯವಿಲ್ಲ ಎನ್ನುವಂತೆ ಪ್ರಕಾಶಿಸುತ್ತಿದೆ. ೬೦. ಅಮರನುತ! ವಿಸ್ತಾರವಾಗಿ ಹರಡಿದ ಕಪ್ಪಾದ ತಾಳೆ ಹೊಂಗೆಮರಗಳ ಕಪ್ಪಿನಿಂದ ಶೋಭಾತಿಶಯವನ್ನು ಪಡೆದು ಕನಕವೇದಿಕೆಯ ಎರಡೂ ಪಕ್ಕಗಳಲ್ಲಿ ಅಂದವಾಗಿ ಕಂಗೊಳಿಸುತ್ತಿರುವ ವನರಾಜಿಯನ್ನು ನೋಡು. ೬೧. ದಡದ ಮೇಲೆ ಬೆಳೆದಿರುವ ಕಾಡಿನ ಹಸಿರುಬಣ್ಣವು ತನ್ನಲ್ಲಿ ವ್ಯಾಪಿಸಿರಲಾಗಿ, ತನ್ನ ಬಣ್ಣವು ಕಾಣದಂತಾಗಲು ಅತಿಪ್ರಕಾಶವಾದ ಕನಕವೇದಿಕೆಯು ಮರಕತವೇದಿಕೆಯ ಚೆಲ್ವನ್ನು ಸೂರೆಗೊಳ್ಳುತ್ತಿದೆ! ೬೨. ಕಾಡುಹೂಗಳ ಗೊಂಚಲಿನ ನೆಳಲು ಸ್ವಚ್ಛವಾದ ನೀರಿನಲ್ಲಿ ಎಸೆಯಲಾಗಿ ಅದನ್ನು ಹೂಗೊಂಚಲೆಂದು ತಿಳಿದು ದುಂಬಿಯೊಂದು ಅಲ್ಲಿಗೆ ಹಾರಿತು. ತತ್ಫಲವಾಗಿ ಅದರ ರೆಕ್ಕೆಗಳು ನೆನೆಯಲು ಝೇಂಕರಿಸುತ್ತ ಅರಳಿದ ಹೊಂಬಣ್ಣದ ಕಮಲದ ಮೇಲೆ ದುಂಬಿಯು ನೆಲಸಿತು! ೬೩. ಕೊಡೆಯಾಕೃತಿ ಯಲ್ಲಿರುವ ಎಲೆಗಳ ಗುಂಪಿನೆಡೆಗಳ ಕತ್ತಲೆಯನ್ನು ರಾತ್ರಿಯೆಂದು ತಿಳಿದು ಗಂಡುಚಕ್ರವಾಕ ಪಕ್ಷಿಯು ಬರಲು ತಡಮಾಡಿತು. ಎಲೆ ನರೇಂದ್ರ, ಇದರಿಂದ ಚಕ್ರವಾಕವಧುವು ನಡುಹಗಲಿನಲ್ಲಿಯೇ ವಿರಹಾನುಭವವನ್ನು ಪಡೆಯಿತೆಂಬುದನ್ನು ಗಮನಿಸು! ೬೪. ಸಪ್ತಚ್ಛದದ ಗಂಧವನ್ನು ಮದಗಂಧವೆಂದೇ ಈ ಕಾಡಾನೆ ಆಘ್ರಾಣಿಸಿತು! ತತ್ಫಲವಾಗಿ

ಮದಕಳಹಂಸೆಯ ಪಿಂಡಿದೆ
ಪೊದಳ್ದ ಚಮರೀಜಮಾಗೆ ಜಳದೇವತೆಗೆ
ತ್ತಿದ ಪಚ್ಚೆಯ ಸತ್ತಿಗೆಗಳ
ಪುದುವೆನಿಪುದು ವನಜವನದ ಕೊಡೆಯೆಲೆ ಪಲವುಂ ೬೫

ಮಲಯಸಮೀರಣೇರಣಚಲತ್ತರುಶಾಖೆಗಳೊರ್ಮೆಗೊರ್ಮೆ ನೀ
ರೊಳಗೆ ಬೞಲ್ದು ಹೇಮಸರಸೀಜರಜಾರುಣವಾರಿಯಂ ಪುದುಂ
ಗೊಳಿಸಿ ನಭಂಬರಂ ಮಿಳಿರ್ದಲಂಪಿನ ದಂಪತಿಯಿರ್ಪ ಜೊಂಪಮಂ
ತಳಿತಳಿದಲ್ಲಿ ತಣ್ಪುವೆಸಕೆಯ್ವುವು ತೀರವನಾಂತರಾಳದೊಳ್ ೬೬

ಬಳ್ಳಿಗವುಂಗಂ ತಳ್ತಿಲೆ
ವಳ್ಳಿಯ ಕಟ್ತಲೆಯನಲೆವ ಸೊಡರ್ಗುಡಿಗಳನೀ
ಯಳ್ಳಿಱಿದಲೆವುವು ಬನದೊಳ
ಗುಳ್ಳಲರ್ದುಜ್ಜ್ವಳಿಪ ಚಂಪಕಪ್ರಸವಂಗಳ್ ೬೭

ಗೊಲೆಯೊಳ್ಪಣ್ತುದು ಮ್ಯೆಂದವಾೞೆ ಪಥಿಕರ್ಬರ್ಕೆಂದು ಭೃಂಗಂಗಳಿಂ
ದುಲಿವಂತಿರ್ದುದು ಪಣ್ತು ಬಕ್ಕೆ ತನಿವಣ್ಣಾಗಿರ್ದುದಿಮ್ಮಾವು ಕ
ಟ್ತಲಿಸಿರ್ದತ್ತೆಲೆವಳ್ಳಿ ಕಾಯ್ತು ಕರೆವಂತಿರ್ದತ್ತು ಚೆಂದೆಂಗು ಸಾ
ಱಲೆವಂತಿರ್ದುದು ಬಂದ ಕರ್ಬೆನೆ ವನಶ್ರೀ ಬಣ್ಣಿಸಲ್ಬರ್ಕುಮೇ ೬೮

ಅದು ಅತ್ಯುದ್ರೇಕಗೊಂಡು (ಇನ್ನೊಂದು ಆನೆಯೆಂಬ ಭ್ರಾಂತಿಯಿಂದ) ಈ ವನವೇದಿಕೆಯನ್ನು ತಳ್ಳಲು ಯತ್ನಿಸುತ್ತಿದೆ, ನೋಡು! ೬೫. ಕಲಹಂಸೆಗಳ ಗುಂಪು ಜಲದೇವತೆಗೆ ಬೀಸುವ ಚಾಮರಗಳಾಗಿವೆ. ಕಮಲವನದ ಕೊಡೆಯಾಕೃತಿಯ ಎಲೆಗಳು, ಆ ದೇವತೆಗೆ ಎತ್ತಿದ ಪಚ್ಚೆರತ್ನದ ಕೊಡೆಗಳ ಸಮೂಹದಂತೆ ಕಾಣುತ್ತವೆ! ೬೬. ತೀರದ ವನಮಧ್ಯದಲ್ಲಿ ಮಲಯಮಾರುತದ ಬೀಸಾಟದಿಂದ, ಅಲುಗುತ್ತಿರುವ ಮರದ ಕೊಂಬೆಗಳು ನೀರೊಳಗೆ ಜೋಲಾಡುತ್ತ ಚಿನ್ನದ ಕಮಲಧೂಳಿಯಿಂದ ಕೆಂಪಾದ ನೀರನ್ನು ಆಕಾಶದವರೆಗೂ ಹರಡುವುವು. ಅವು ತೀರವನಗಳ ನಡುವೆ ಸಂತೋಷದಿಂದಿರುವ ದಂಪತಿಗಳ ಗುಂಪಿಗೆ ಎರಚಿ ತಣ್ಪನ್ನುಂಟುಮಾಡುವುವು. ೬೭. ಅರಳಿದ ಸಂಪಗೆಯ ಹೂಗಳು ಅಲೆಯುವ ದೀಪದ ಕುಡಿಗಳನ್ನು ಉಲ್ಲಂಘಿಸಿ ಎಂದರೆ ದೀಪದ ಕುಡಿಗಳ ಹೋಲಿಕೆಯನ್ನು ಪಡೆದು, ಎಳೆಯ ಅಡಿಕೆಮರಗಳಿಗೆ ಹಬ್ಬಿರುವ ಎಲೆಬಳ್ಳಿಗಳಿಂದಾದ ವನದ ಕತ್ತಲೆಯನ್ನು ಚುಚ್ಚಿ ನಾಶಪಡಿಸುತ್ತಿವೆ! ೬೮. ವ್ಯೆಂದಬಾಳೆಯು ಗೊನೆಯಲ್ಲಿಯೇ ಹಣ್ಣಾಗಿದೆ! ಪಥಿಕರು ಬರಲೆಂದು ಹಲಸು ಹಣ್ಣಾಗಿ ದುಂಬಿಗಳ ಮೂಲಕ ಕರೆಯುವಂತಿದೆ. ಇಮ್ಮಾವುಗಳು ತನಿವಣ್ಣಾಗಿವೆ. ಎಲೆವಳ್ಳಿಗಳು ಕತ್ತಲೆಯನ್ನು ಬೀರಿವೆ. ತೆಂಗಿನಮರಗಳು ಕಾಯಿಬಿಟ್ಟು ಕರೆಯುವಂತಿವೆ. ಬಲಿತ ಕಬ್ಬು ಹತ್ತಿರಕ್ಕೆ ಕರೆಯುವಂತೆ ಆಡುತ್ತಿದೆ. ವನಶ್ರೀಯನ್ನು ಯಾರು ತಾನೆ ವರ್ಣಿಸಲು ಸಾಧ್ಯ?

ಕಡುಪಗಲಾದುದು ಬೀಡಂ
ಬಿಡಿಸುವುದೀಪುಣ್ಯನದಿಯ ತಡಿಯೊಳ್ ದೇವರ್
ನಡೆವುದು ವನಜಳಕೇಳಿಗೆ
ಕಡುರಯ್ಯಂ ಬನದ ತೊಱೆಯ ಸಿರಿ ಧರಣಿಪತೀ ೬೯

ಎಂದೊಡೆ ಭರತೇಶ್ವರನಾ
ನಂದದೆ ಬೀಡಂ ಬಿಡಲ್ಕೆವೇೞ್ದಿೞಿದು ಜಯ
ಸ್ಯಂದನದಿಂದಂ ಜನಿತಾ
ನಂದದೆ ಬನಮಂ ವಿಳಾಸದಿಂ ಪುಗುತಂದಂ ೭೦

ವ|| ಆಗಳ್ ಶರದದ ಬಿಸಲಳುರೆ ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪುಚ್ಚಳಿದರೆವೊರೆಕನಾದ ಕುಂಕುಮಪತ್ರಭಂಗದ ಕೊಱಗಿದ ನಗೆಮೊಗಂಗಳುಂ ಪಯಣದೊಳ್ಳೆ ವಿಳ್ಳೆಯಾಗಿ ಬಂಬಲ ಬಾಡಿದ ತನುಲತೆಗಳುಂ ಎಱೆವಿಱಸಾದ ತಲೆದುಡುಗೆಗಳುಂ ಬಾಡಿದ ಪೂಮಾಲೆಯೊಡನೆ ಬೞಲ್ದ ಸೋರ್ಮುಡಿಯುಂ ಅಡಿಗಡಿಗೆ ತಡತಡವಪ್ಪ ನಡೆಗಳುಂ ಬೆರಸು,

ವನದೇವತೆಗಳ್ ನಂದನ
ವನಮಂ ಪುಗುವಂತೆ ತಳಿರ ಕಳಿಕೆಯ ಪೊಸಪೂ
ವಿನ ಮೇಗೆ ದಿಟ್ಟಿಯಾಗಿರೆ
ವನಜಾನನೆಯರ್ ವಿಳಾಸವನಮಂ ಪೊಕ್ಕರ್ ೭೧

ಪುಗೆ ನಡೆವ ಪರಿಶ್ರಮದಿಂ
ದೊಗೆವ ಲತಾಂಗಿಯರ ಸುಯ್ಯ ಕಂಪಿಂಗಳಿಗಳ್
ಮೊಗಸಿ ಮುಸುಱಿದುವು ಪೊಸಗಂ
ಪುಗಂಡು ಸ್ವೈರಿಸುವ ಮಧುಕರಂಗಳುಮೊಳವೇ ೭೨

೬೯. ಹಗಲೇರಿತು. ಈ ಪುಣ್ಯನದಿಯ ತಡಿಯಲ್ಲಿ ಬೀಡನ್ನು ಬಿಡಿಸು. ದೇವ, ವನಜಲಕೇಳಿಗಳಿಗೆ ತೆರಳೋಣ. ಎಲೈ ರಾಜನೇ, ಬನದ ಮತ್ತು ತೊರೆಯ ಸಿರಿಯು ಅತಿ ರಮ್ಯವಾಗಿದೆ." ೭೦. ಎನ್ನಲು ಭರತೇಶ್ವರನು ಆನಂದದಿಂದ ಅಲ್ಲಿ ಬೀಡನ್ನು ಬಿಡಲು ಆಜ್ಞಾಪಿಸಿದನು. ರಥದಿಂದಿಳಿದು ಸಂತೋಷದಿಂದ ವನವನ್ನು ವಿಲಾಸಪೂರ್ವಕವಾಗಿ ಹೊಕ್ಕನು. ವ|| ಆಗ ಶರತ್ಕಾಲದ ಬಿಸಿಲು ವ್ಯಾಪಿಸಿತ್ತು. ಬೆವರುಹನಿಗಳಿಂದ ತೊಯ್ದು ಸ್ತ್ರೀಯರ ಕುಂಕುಮಪತ್ರಭಂಗಗಳು ಅರ್ಧಮರ್ಧ ಅಳಿಸಿಹೋದುವು. ಅವರ ನಗೆಮೊಗಗಳು ಆಯಾಸದಿಂದ ಸೊರಗಿದ್ದವು. ಪ್ರಯಾಣದ ಆಯಾಸದಿಂದ ಬಳ್ಳಿಯಂತಿರುವ ದೇಹಗಳು ಬಾಡಿದ್ದುವು. ತಲೆಯುಡುಗೆಗಳು ಅಸ್ತವ್ಯಸ್ತವಾಗಿದ್ದುವು. ಹೂಮಾಲೆಗಳು ಬಾಡಿ ಕೂದಲುಗಂಟು ಸಡಿಲವಾಗಿತ್ತು. ಬಳಲಿಕೆಯಿಂದ ಸ್ತ್ರೀಜನರು ನಿಂತು ನಿಂತು ನಡೆಯುತ್ತಿದ್ದರು. ೭೧. ಆ ಕಮಲಮುಖಿಯರು ಚಿಗುರುಗಳನ್ನೂ ಮೊಗ್ಗುಗಳನ್ನೂ ಹೊಸಹೂವುಗಳನ್ನೂ ನೋಡಿ, ವನದೇವತೆಗಳು ನಂದನವನವನ್ನು ಹೊಗುವಂತೆ ವಿಲಾಸದಿಂದ ವನವನ್ನು ಹೊಕ್ಕರು. ೭೨. ಅಲ್ಲಿ ನಡೆದ ಆಯಾಸದಿಂದುಂಟಾದ ಲತಾಂಗಿಯರ ಉಸಿರಿನ ಸುವಾಸನೆಗೆ ದುಂಬಿಗಳು ಅತ್ಯಾಸೆಯಿಂದ

ಕತ್ತುರಿಯ ಕಂಪುಮಂ ಬೆಮ
ರೊತ್ತರಿಸಿ ಪೊದಟ್ಟಿ ಕಂಪನೀಯುತ್ತಿರೆ ವೃ
ತ್ತೋತ್ತುಂಗಸ್ತನೆಯರ್ ಶ್ರಮ
ಮುತ್ತುಮದೇಂ ಸುರಭಿಗಂಧಮಂ ಬೀಱಿದರೋ ೭೩

ವ|| ಆಗಳ್ ಭರತೇಶ್ವರಂ ಸಮಸ್ತಾಂತಃಪುರದೊಡನಿಡಿದಡರೆ ಸಲೆ ಪೂತಚೂತಲತೆಯನೊಳಗುಮಾಡಿ ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳಬಳೆದೆಳೆದಳಿಸುವ ಪೊಸಗೆಂದಳಿರ ಗೊಂದಳದೊಳೆ ಸಂದಣಿಸಿದಶೋಕಲತೆಯೋಲಗಶಾಲೆಯೊಳಗಣ ಕಪ್ಪುರವಳುಕಿನ ಜಗುಲಿಯ ಮೇಗಣ ಕುಸುಮದೆಸಳ ಮಿಸುಗುವ ಪೊಸದಳಿಂಬದ ಮೇಗೆ ಕಿಱಿದುಬೇಗಂ ವಿಶ್ರಮಿಸಿ ಮೇಳದಾಕೆಗಳ್ ವೆರಸು ಬಂದು ಕಾವಣಮಂ ಪುಗಲೊಡಂ,

ತಳಿರ ಪೊಸದಳಿರ ಕಾವಣ
ದೊಳಗೆ ನೃಪೇಶ್ವರನ ಘರ್ಮಜಳಕಣಗಣಮಂ
ಕಳೆದುದು ಚಂದನಹಿಮಕರ
ವಿಲುಳಿತಜಳಪರಿಚಿತಂ ಜಳಾರ್ದ್ರಸಮೀರಂ ೭೪

ವ|| ಅಂತು ಭರತರಾಜಂ ಸಕಳರ್ತುಕರಾಜನಪ್ಪ ಮನೋಜರಾಜಂಗೆ ಮಾಡಿದುದೆನಿಸುವ ವಿರಾಜಮಾನರಕ್ತಾಶೋಕಪಲ್ಲವೋಲ್ಲಸಿತಕಾಯಮಾನದೊಳ್ ಕಿನ್ನರಕರಕಿಸಲಯಚಳನಸಮುತ್ಪನ್ನ ಕಾಕಳೀಕಳರವಮಿಳಿತಮಧುಕರತಂತ್ರೀಸಮಂಚಿತವಿಪಂಚೀಮಂದ್ರತಾರಮಧುರಮೂರ್ಛನಾ

ಮುತ್ತಿಕೊಂಡುವು. ಹೊಸ ಸುವಾಸನೆಯನ್ನು ಕಂಡ ದುಂಬಿಗಳು ಅದನ್ನನುಭವಿಸದೆ ಎಂದಾದರೂ ಸುಮ್ಮನಿದ್ದಾವೆ? ೭೩. ಉತ್ತುಂಗಸ್ತನೆಯರ ಬೆವರಿನ ಕಂಪು ಕತ್ತುರಿಯ ಕಂಪನ್ನು ಒತ್ತರಿಸಿತು. ಅವರು ಶ್ರಮದ ಮುತ್ತುಗಳನ್ನೂ ಬೆವರಿನ ಹನಿಗಳನ್ನೂ ಸುರಭಿಗಂಧವನ್ನೂ ಅತಿಶಯವಾಗಿ ಸೂಸಿದರು. ವ|| ಆಗ ಭರತೇಶ್ವರನು ಸಮಸ್ತಾಂತಃ ಪುರಸ್ತ್ರೀಯರೊಡನೆ ಹೂಬಿಟ್ಟ ಚೂತಲತೆಯಿಂದ ಬಳಸಿದ ಮಾಧವೀಲತೆಯ ಚಪ್ಪರದ ಮುಂದೆ ಸುಂದರವಾಗಿ ಬೆಳೆದ ಕೆಂದಳಿರಿಂದ ತುಂಬಿದ ಅಶೋಕಲತೆಯ ಓಲಗಶಾಲೆಯೊಳಗೆ ಕರ್ಪೂರದ ತುಂಡುಗಳಿಂದ ಕೂಡಿದ ಜಗುಲಿಯ ಮೇಲೆ ಕುಸುಮದೆಸಳುಗಳಿಂದ ಪ್ರಕಾಶಿತವಾದ ಹೊಸಮಡಿಬಟ್ಟೆಯ ಮೇಲೆ ಸ್ವಲ್ಪಕಾಲ ವಿಶ್ರಮಿಸಿಕೊಂಡು ಮೇಳದಾಕೆಗಳೊಡನೆ ಚಪ್ಪರವನ್ನು ಪ್ರವೇಶಿಸಿದನು. ಆಗ, ೭೪. ಹೊಸದಳಿರುಗಳು ತುಂಬಿದ ಚಪ್ಪರದಲ್ಲಿ, ರಾಜನ ಬೆವರುಹನಿಗಳನ್ನು ಚಂದನ ಮತ್ತು ಚಂದ್ರಕಿರಣಗಳಿಂದ ಸ್ರವಿಸಿದ ಜಲವನ್ನು ಹೊತ್ತ ಗಾಳಿಯು ಹೋಗಲಾಡಿಸಿತು. ವ|| ಹಾಗೆ ಭರತರಾಜನು ಋತುಗಳೆಲ್ಲಕ್ಕೂ ರಾಜನಾದ ಮನ್ಮಥನಿಗಾಗಿ ನಿರ್ಮಿಸಲಾದ ರಕ್ತಾಶೋಕಪಲ್ಲವಗಳ ಚಪ್ಪರದಲ್ಲಿ ಚಿಗುರಿನಂತೆಸೆಯುವ ಕಿನ್ನರೀಹಸ್ತಗಳ ಚಾಲನದಿಂದ ಮಧುರ ಕಲರವಗಳನ್ನು ಬೀರುವ ದುಂಬಿಗಳೆಂಬ ತಂತಿಗಳಿಂದುಂಟಾದ ವೀಣೆಯ ಮಂದ್ರ ತಾರಮಧುರಮೂರ್ಛನಾದಿಗಳಿಂದ ಕೂಡಿದ ಪ್ರಯೋಗಗಳನ್ನೂ, ಅಂತಃಪುರಪರಿವಾರದ ವಾರಾಂಗನೆಯರ ಸಂಗೀತಗಳನ್ನೂ ಹೊಸಹೂಗಳ ಪರಾಗಾಸವದಲ್ಲಿ ಪ್ರೀತಿಗೊಂಡ

ಸನಾಥಸಪ್ರಯೋಗಂಗಳುಮಂ ಅಂತಃಪುರಪರಿವಾರವಾರವಾರಾಂಗನಾಸಂಗೀತಗೀತಂಗಳುಮಂ ನವಪ್ರಸವಪರಾಗಾಸವಾಸಕ್ತ ಭೃಂಗಾಂಗನಾಗೀತಂಗಳುಮಂ ಆಲಿಸಿ ಕೇಳುತ್ತಿರ್ಪನ್ನೆಗಂ ಆತನಂತಃಪುರಸ್ತ್ರೀಯರಿಮ್ಮಾವಿನ ಸೊನೆಯ ಸೋನೆಯೊಳ್ ತಳಿದೆಳದಳಿರ ಜೊಂಪಂಗಳೊಳಂ ಕುಳಿರ್ವ ಪುಳಿನಂಗಳೊಳಂ ಕೋಡುವ ಧಾರಾಗೃಹಂಗಳೊಳಂ ವಿಶ್ರಮಿಸಿ ಶಾರದಾತಪಪರಿಶ್ರಮಮಂ ಕಳೆಯೆ,

ನವನಖಪದರೇಖೆಗಳಂ
ಸವತಿಯರಿದಿರೊಳ್ ವಿಳಾಸವತಿಯರ್ ಮೆಱೆಯಲ್
ಅವಯವದಿಂ ಕುಪ್ಪಸಮಂ
ಸವಂಗಮಂ ಕಳೆದು ಕಳೆದರಲ್ಲಿಂದವರಂ ೭೫

ಪೊಳೆವಲರ ಪಸೆಯೊಳಿರ್ದುಂ
ಪುಳಿನದ ಲೋಹಾಸನಂಗಳೊಳ್[1] ನೆಮ್ಮಿರ್ದುಂ
ಚಳದಳಕೆಯರರೆಬರದೇಂ
ಕಳೆದರೊ ಶರದಾತಪಪ್ರಭೂತಶ್ರಮಮಂ ೭೬

ಪೊಸತಳಿರ್ಗಳ ಬಿಜ್ಜಣಿಗೆಯಿ
ನೆಸೆಪೆಲರ್ಗಳಿನೊಗೆವ ಘರ್ಮಜಲಮಂ ಪೀರ್ದಾ
ಱೆಸಿದುವು ಕುಸುಮರಜಂಗಳ್
ಪೊಸಯಿಸಿದುವು ಬಣ್ಣಮಂ ಲತಾಂಗಿಯರ್ಗಾಗಳ್ ೭೭

ಭೃಂಗಾಂಗನೆಯರ ಗೀತೆಗಳನ್ನೂ ಕೇಳುತ್ತಿದ್ದನು. ಆಗ ಅಂತಃಪುರಸ್ತ್ರೀಯರು ಇಮ್ಮಾವಿನ ಸೋನೆಯ ಜಡಿಮಳೆಯಲ್ಲಿ ತೊಯ್ದು ಎಳೆದಳಿರುಗಳ ಪೊದೆಗಳಲ್ಲಿಯೂ ತಣ್ಣನೆಯ ಪುಲಿನಗಳಲ್ಲಿ ತಣ್ಣಗಿರುವ ಧಾರಾಗೃಹಗಳಲ್ಲಿಯೂ ವಿಶ್ರಾಂತಿಯನ್ನು ಪಡೆಯುತ್ತಾ ಶರತ್ಕಾಲದ ಬಿಸಿಲಿನ ಪರಿಶ್ರಮವನ್ನು ಕಳೆದರು. ೭೫. ವಿಲಾಸಿನಿಯರು ನೂತನವಾದ ನಖಕ್ಷತಗಳನ್ನು ತಮ್ಮ ಸವತಿಯರೆದುರಿನಲ್ಲಿ ಪ್ರಕಾಶಪಡಿಸಿಕೊಳ್ಳಲು, ತಮ್ಮ ಅವಯವಗಳಿಂದ ಕುಪ್ಪಸವನ್ನೂ ಅಂಗಿಯನ್ನೂ ನಖಕ್ಷತಗಳು ಕಾಣುವವರೆಗೆ ಕಳಚಿಕೊಂಡರು! ೭೬. ಹೊಳೆಯುವ ಹೂಗಳ ಹಾಸಿಗೆಯ ಮೇಲಿದ್ದುಕೊಂಡು ಮರಳಿನ ಮೇಲೆ ಮಂಡಿತವಾದ ಲೋಹಾಸನಗಳಲ್ಲೊರಗಿಕೊಂಡು ಅಲುಗುವ ಮುಂಗುರುಳುಳ್ಳವರಲ್ಲಿ ಕೆಲವರು ಶರತ್ಕಾಲದ ಬಿಸಿಲಿನಿಂದಾದ ಶ್ರಮಾಧಿಕ್ಯವನ್ನು ಎಷ್ಟು ಚೆನ್ನಾಗಿ ಕಳೆದರೊ! ೭೭. ಕುಸುಮಧೂಳಿಗಳು ಹೊಸತಳಿರುಗಳೆಂಬ ಬೀಸಣಿಗೆಗಳ ಗಾಳಿಯಿಂದ ಬೆವರಿನ ನೀರನ್ನು ಹೀರಿ ಆರಿಸಿದುವು. ಲತಾಂಗಿಯರ ಬಣ್ಣವನ್ನು ಹೊಸದುಗೊಳಿಸಿದುವು.

---

೧ 'ಲೋಲಾಸನಂಗಳೊಳ್' ಎಂಬ ಶುದ್ಧಪಾಠವಿರಬಹುದು.

ಅಲರ ಮುಸುರಿಗೆಯೊಳುಸಿರ್ದು
ಳ್ಪಲರ್ದಡ್ಡಂ ನಿಮಿರ್ದ ಲತೆಯ ಮೇಲೆ ವಿಳಾಸಂ
ನಿಲೆ ನೀಡಿ ಕಾಲನರೆಬರ್
ಮಲಂಗಿದರ್ ಪೊಳೆವ ತಳಿರ ಬೊಂದರಿಗೆಗಳೊಳ್ ೭೮

ತಳಿರ್ಗಳ ಕಂಡವಡಂಗಳೆ
ತಳಿರ್ಗಳ ಪಾಸುಗಳೆ ತಳಿರ್ಗಳೋವರಿಗಳೆ ಕೆಂ
ದಳಿರ್ಗಳಪೊಳೆವಿಱೆಸಲ್ಗಳೆ
ವಿಳಾಸಮಂ ಮೆಱೆದರಲ್ಲಿ ಕೆಲರಬಲೆಯರೊಳ್ ೭೯

ಪೊಳೆವೆಳೆದಳಿರೊಳೆ ಪುದಿದೆಳೆ
ದಳಿಸಿ ಕುಳಿರ್ಕೋಟ್ಟಿ ಸೊನೆಯ ಸೋನೆಯನೆ ಪುದುಂ
ಗೊಳಿಸಿದೆಳವಳ್ಳಿ ಮಾವಿನ
ಕುಳಿರ್ವೋವರಿಯಲರ ಪಸೆಯೊಳುಸಿರ್ದರ್ ಕೆಲಬರ್ ೮೦

ಪನಸಾಮ್ರಕದಳಿನಾರಂ
ಗನಾಳಿಕೇರೀಫಲಾಮೃತಾಸ್ವಾದದೆ ತ
ಣ್ಣನೆ ತಣಿದು ಕಿವಿಯೊಳಮರ್ದಿನ
ಪನಿಪನಿಪಿನಮೆಸೆದರರೆಬರಳಿಕುಳರುತಿಯಿಂ ೮೧

ಗಿಳಿಗಳೊಳೆ ಗಳಪಿ ಮೊಱೆವಳಿ
ಕುಳದೊಡನಾಳೈಸಿ ಪುರುಳಿಯೊಡನೆಳಸಿ ನವಿ
ಲ್ಗಳ ಬಳಗದೊಡನೆ ನರ್ತಿಸಿ
ವಿಳಾಸಿನೀನಿವಹಮಾಗಳೇಂ ದಳ್ಳಿಸಿತೋ ೮೨

೭೮. ಕೆಲವರು ಚಿಗುರುಹಾಸಿಗೆಗಳಲ್ಲಿ ಹೂಗಳ ದಿಂಬಿನ ಮೇಲೆ (ತಲೆ ಇಟ್ಟು) ಉಸಿರು ಬಿಡುತ್ತ, ಚೆನ್ನಾಗಿ ಅರಳಿ ಅಡ್ಡವಾಗಿ ಬೆಳೆದಿದ್ದ ಬಳ್ಳಿಗಳ ಮೇಲೆ ವಿಲಾಸದಿಂದ ಕಾಲುಗಳನ್ನು ಚಾಚಿ ಮಲಗಿದರು. ೭೯. ಚಿಗುರುಗಳ ತೆರೆಗಳು, ಚಿಗುರುಗಳ ಹಾಸಿಗೆಗಳು, ಚಿಗುರುಗಳ ಒಳಮನೆಗಳು, ಕೆಂದಳಿರುಗಳ ಇಳಿಜಾರಿನ ಮನೆಯ ಹೊದಿಕೆಗಳು ಇಂಥ ಮನೆಗಳಲ್ಲಿ ಕೆಲವರು ಸ್ತ್ರೀಯರು ವಿಲಾಸವನ್ನು ಮೆರೆಸಿದರು. ೮೦. ಹೊಳೆಯುವ ಎಳತಾದ ಚಿಗುರುಗಳಿಂದ ತುಂಬಿದ ತುಂಬ ತಣ್ಣಗಿರುವ, ಸೊನೆಯ ಸೋನೆಯನ್ನು ಹರಡಿದ ಎಲೆಬಳ್ಳಿಯಿಂದ ಸುತ್ತಿದ ಮಾವಿನ ತಂಪಾದ ತಗ್ಗುಪ್ರದೇಶಗಳಲ್ಲಿನ ಹೂವಿನ ಹಾಸಿಗೆಗಳಲ್ಲಿ ಮಲಗಿ ಕೆಲವರು ಉಸಿರಾಡಿದರು. ೮೧. ಹಲಸು, ಮಾವು, ಬಾಳೆ, ಕಿತ್ತಲೆ ಮತ್ತು ತೆಂಗುಗಳ ಫಲಾಮೃತಾಸ್ವಾದದಿಂದ ತಣ್ಣನೆ ತಣಿದವರಾಗಿ ಕೆಲವರು ದುಂಬಿಗಳ ಗುಂಜಾರವದಿಂದ ಕಿವಿಗಳಲ್ಲಿ ಅಮೃತದ ಹನಿಗಳನ್ನು ತುಂಬಿಕೊಳ್ಳುವಂತೆ ಎಸೆದರು. ೮೨. ಗಿಳಿಗಳೊಡನೆ ಹರಟುತ್ತಾ ದುಂಬಿವಿಂಡಿನ ಗುಂಜಾರವವನ್ನು ಕೇಳುತ್ತಾ, ಹೆಣ್ಣುಗಿಳಿಗಳನ್ನೆಳಸುತ್ತಾ, ನವಿಲುಗಳ ಬಳಗದೊಡನೆ ಕುಣಿಯುತ್ತಾ ವಿಲಾಸಿನಿಯರ ಗುಂಪು

ಅಂತು ಭರತೇಶ್ವರಂ ಸಕ
ಳಾಂತಃಪುರಸಹಿತಮಲ್ಲಿ ವಿಶ್ರಮಿಸಿ ವನಾ
ಭ್ಯಂತರಮಂ ತೊಟಿಲೆ ಮನ
ಕ್ಕಂತಿಲ್ಲದ ಮುದಮನುಂಟುಮಾಡಿದುದು ಬನಂ ೮೩

ಕೊಳಗಳ ಮರಗಳ ಲತೆಗಳ
ಫಳಪ್ರಸೂನಂಗಳೊದವಿನೊಳ್ ಪಕ್ಷಿಗಣಂ
ಗಳ ಪುದುವಿನೊಳಾಱುಂ ಋತು
ಗಳ ಚೆಲ್ವಂ ಕಾಣಲಾದುದಾ ನಂದನದೊಳ್ ೮೪

ಪೊಸತಲರ್ದ ಕೊಸಗು ತಳಿರ್ವೊೞ
ದಸುಗೆ ಪಸುರ್ನನೆಯೊಳಿಡಿದ ಮಲ್ಲಿಗೆ ನನೆಯಿಂ
ಮುಸುಕಿದ ತಳಿರಂ ಪೇಱಿದ
ಪೊಸಮಾವುಗಳಿಂ ಬಸಂತಮೆಸೆದಪುದಿದಱೊಳ್ ೮೫

ನವಚೂತಾಂಕುರಸುರಭಿ
ದ್ರವಮಂ ಸವಿದನಿತಱಿಂದೆ ಮದನಧನುರ್ಜ್ಯಾ
ರವಸನ್ನಿಕಾಶಮಿೞಗಳ್
ಕಿವಿಯಂ ಮುಟ್ಟಿದುದು ಪಿಕದ ಪಂಚಮನಿನದಂ ೮೬

ಪಾದರಿ ಪೂತುವು ತೋರಿದು
ವಾದುವು ಮಲ್ಲಿಗೆಗಳೆಯ್ದೆ ಪಣ್ತುವು ಮಾವಿಂ
ಬಾದುದು ನಿದಾಘಮಧುವಿನ
ಭೇದಮದೀ ಬನದೊಳಾ ತಪಕ್ಕೆಡೆಯುಂಟೇ ೮೭

ಗರ್ವದಿಂದ ಮೆರೆಯಿತು. ೮೩. ಹೀಗೆ ಭರತೇಶ್ವರನು ಆ ವನದಲ್ಲಿ ಎಲ್ಲ ಅಂತಃಪುರದ ಸ್ತ್ರೀಯರೊಡನೆ ವಿಶ್ರಮಿಸಿಕೊಂಡು ಕಾಡಿನೊಳಗೆಲ್ಲ ಸಂಚರಿಸಿದನು. ವನವು ಆತನ ಮನಸ್ಸಿಗೆ ಅಪರಿಮಿತವಾದ ಆನಂದವನ್ನುಂಟುಮಾಡಿತು. ೮೪. ಆ ವನದ ಕೊಳಗಳಲ್ಲಿಯೂ, ಮರಬಳ್ಳಿಗಳ ಫಲಕುಸುಮಗಳಲ್ಲಿಯೂ, ಪಕ್ಷಿಸಮೂಹದ ನಂಬುತನದಲ್ಲಿಯೂ ಆರೂ ಋತುಗಳ ಸೌಂದರ್ಯವನ್ನು ನಂದನವನದಲ್ಲಿ ಕಾಣಲಾಯಿತು.[1] ೮೫. ಹೊಸತಾಗಿ ಅರಳಿದ ಬೆಟ್ಟದಾವರೆಗಳಿಂದಲೂ ಚಿಗುರಿದ ಅಶೋಕವೃಕ್ಷಗಳಿಂದಲೂ ಹಸುರು ಮೊಗ್ಗುಗಳಿಂದ ತುಂಬಿದ ಮಲ್ಲಿಗೆಗಳಿಂದಲೂ ಚಿಗುರುಗಳಿಂದ ತುಂಬಿದ, ಮೊಗ್ಗುಗಳಿಂದ ಕೂಡಿದ ಮಾವಿನ ಮರಗಳಿಂದಲೂ ವಸಂತಋತುವು ಈ ನಂದನವನದಲ್ಲಿ ಕಾಣಿಸಿತು. ೮೬. ಹೊಸಮಾವಿನ ಚಿಗುರಿನ ಸುವಾಸನೆಯ ರಸವನ್ನುಂಡ ಕೋಗಿಲೆಯ ಪಂಚಮಸ್ವರವು ಮನ್ಮಥನ ಬಿಲ್ಲಿನ ಹೆದೆಯ ಧ್ವನಿಗೆ ಸಾಟಿಯಾಗಿ ಕಿವಿಯನ್ನು ಮುಟ್ಟಿತು. ೮೭. ಪಾದರಿಯ ಗಿಡವು ಹೂಬಿಟ್ಟಿತು. ಮಲ್ಲಿಗೆಗಳು ಹೂಬಿಟ್ಟುವು. ಮಾವುಗಳು ಹಣ್ಣಾದುವು. ಇದೇ

---

1. ದಿವ್ಯಪ್ರಭಾವದಿಂದ ಆ ವನದಲ್ಲಿ ಎಲ್ಲ ಋತುಗಳ ಸೌಂದರ್ಯವೂ ಏಕಕಾಲದಲ್ಲಿ ಕಂಡುಬಂದಿತೆಂದು ಅಭಿಪ್ರಾಯ. ೮೫ನೆಯ ಪದ್ಯದಿಂದ ಕ್ರಮವಾಗಿ ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರ-ಎಂಬ ಆರು ಋತುಗಳ ವರ್ಣನೆ ಇದೆ.

ವಾರಾಕದಂಬಸುರಭಿಸ
ಮೀರಂ ಪರಿಪಕ್ವರಾಜಜಂಬೂದ್ರುಮವಿ
ಸ್ತಾರಂ ಶಿಖಂಡಿತಾಂಡವ
ಸಾರಂ ನವಜಳದಸಮಯಮೇನೆಸೆದಪುದೋ ೫೮

ಸೋಂಕುವೆಲರ್ ಜಾದಿಯ ಕಂ
ಪಂ ಕರಮಗ್ಗಲಿಸಿ ಸೋಂಕಿದಪ್ಪುದಿದೆಂತೋ
ಭೋಂಕನೆ ಪಯಣದೊಳೆಮ್ಮಂ
ಸೋಂಕಿದ ಶರದೃತುವೆ ಬನದೊಳವತರಿಸಿದುದೋ ೫೯

ಅಲರ್ದ ಪೊಸಸಿಂದುರಂಗಳ
ನಲೆದಳಿಕುಳಮಂ ತಳರ್ಚೆ ತಣ್ಮೆಲೆವೆಲರೀ
ಯಲೆದಪುವೆಮ್ಮಂತಃಪುರ
ಲಲನೆಯರಂ ಕೋಡುಸೇಡುಗೊಳ್ವಿನಮೀಗಳ್ ೬೦

ವನತರುಪತ್ರಂಗಳನೊಯ್ಯ
ನೆ ನೆಲೆಯಿಂ ಪತ್ತುವಿಡಿಸಿ ಕಳಿಕೆಗಮುತ್ಪ
ತ್ತಿನಿಮಿತ್ತಮಾಗಿ ಶಿಶಿರಮು
ಮಿನಿಸಿನಿಸನೆ ತನ್ನ ನೆಜನನಜಿಪಿದುದೀಗಳ್ ೬೧

ವ|| ಅಂತು ದಿವ್ಯಪ್ರಭಾವದಿಂ ಸಕಳರ್ತುಕಸೌಂದರ್ಯಮುಮಂ ಬೇಱೆವೇಱೆ ತೋಱುವ ರಾಜ್ಯಲಕ್ಷ್ಮೀವಲ್ಲಭಂ ವನಲಕ್ಷ್ಮಿಯಂ ನೋಡುವಾಗಳ್,

ವಸಂತಕಾಲಕ್ಕೂ ಬೇಸಿಗೆಗೂ ಇರುವ ಭೇದ. ಏಕೆಂದರೆ, ಈ ವನದಲ್ಲಿ ಬಿಸಿಲಿಗೆ ಎಡೆಯೇ ಇಲ್ಲ. ೫೮. ಸಾಲಾಗಿ ನಿಂತ ಈಚಲುಮರದ ಹೂಗಳಿಂದ ಸುವಾಸನೆಯನ್ನು ಹೊಂದಿದ ಗಾಳಿಯಿಂದ ಯುಕ್ತವೂ ನೇರಿಲೆ ಹಣ್ಣುಗಳಿಂದ ತುಂಬಿದ ಮರಗಳಿಂದ ವಿಜೃಂಭಿತವೂ ನವಿಲುಗಳಿಂದ ಮೆರೆಯುತ್ತಿರುವುದೂ ಆದ ನೂತನ ವರ್ಷಾಕಾಲದ ಸಮಯವು ವಿಶೇಷವಾಗಿ ಪ್ರಕಾಶಿಸಿತು. ೫೯. ಬೀಸುತ್ತಿರುವ ಗಾಳಿಯು ವಿಶೇಷವಾಗಿ ಜಾಜಿಪುಷ್ಪಗಳ ಸುವಾಸನೆಯನ್ನು ವಿಸ್ತಾರಗೊಳಿಸಿ ಸೋಂಕುತ್ತಿದೆ. ಪಯಣಸಮಯದಲ್ಲಿ ಸಂಭವಿಸಿದ ಶರದೃತುವೇ ಈಗ ವನದಲ್ಲಿ ಥಟ್ಟನೆ ಅವತರಿಸಿತೊ ಏನೋ? ೬೦. ಅರಳಿರುವ ಹೊಸ ಲಕ್ಕಿಹೂಗಳ ಮೇಲೆರಗಿದ ದುಂಬಿವಿಂಡನ್ನು ಚದುರಿಸುವ ತಣ್ಣನೆಯ ಗಾಳಿಯು ಅಂತಃಪುರದ ಲಲನೆಯರನ್ನು ಚಳಿಯ ಕೊರೆತಕ್ಕೆ ಸಿಕ್ಕಿಸಿ ಅಲೆಯುವಂತೆ ಮಾಡಿತು. ೬೧. ಕಾಡಿನಲ್ಲಿರುವ ಮರದ ಎಲೆಗಳನ್ನು ಉದುರಿಸಿ ಹೊಸಚಿಗುರಿಗೆ ನಿಮಿತ್ತವಾಗಿರುವ ಶಿಶಿರಋತು ತಾನು ಸಮೀಪಿಸಿದ್ದೇನೆಂಬುದನ್ನು ಸೂಚಿಸಿತು. ವ|| ಎಂದು ದಿವ್ಯಪ್ರಭಾವದಿಂದ ಎಲ್ಲ ಋತುಗಳ ಸೌಂದರ್ಯವನ್ನೂ ಬೇರೆಬೇರೆಯಾಗಿ ಪ್ರದರ್ಶನಗೊಳಿಸುತ್ತಿರುವ ವನಲಕ್ಷ್ಮಿಯನ್ನು ಆ ರಾಜ್ಯಲಕ್ಷ್ಮಿಯೊಡೆಯನು ನೋಡಿದನು.

ನೋಡುತ್ತೆಂತಿರ್ಪ ಮೀಬಂದತಿಥಿಗತಿಥಿಸತ್ಕಾರಮಂ ನಾಮಮೋಘಂ
ಮಾಡಲ್ವೇಟ್ಕುಂ ಯಥಾಶಕ್ತಿಯಿನೆನುತೆ ಮಹಾಶ್ಚರ್ಯಮಂ ಕಣ್ಗಳುಂಬಂ
ಮಾಡುತ್ತುಂ ದಿವ್ಯವಸ್ತ್ರಾಭರಣಕುಸುಮಗಂಧಂಗಳಂ ಚಕ್ರಿಗಾಗಳ್
ನೀಡಿತ್ತತ್ಯಂತರಾಗೋತ್ಥಿತಕರತಳದಿಂ ತದ್ವನಸ್ತ್ರೀಸಮೂಹಂ ೯೨

ವ|| ಆಗಳಾ ವನದೇವತಾಪ್ರೇರಣೆಯೊಳೆ ಚಕ್ರವರ್ತಿಗೆ ಸಂಗೀತಮಂ ತೋಱುವಂತೆ,

ಅಳಿನಿನದದ ಮದಕೋಕಿಳ
ಕಳನಿನದದ ಜತಿಯೊಳಭಿನಯಂ ನೆಗಟ್ಟೆನೆಗಂ
ಲಳಿತಮನೇನಾಡಿಸಿದನೊ
ಮಳಯಾನಿಳನರ್ತಕಂ ಲತಾನರ್ತಕಿಯಂ ೯೩

ಅಂಕುರಪಲ್ಲವಕುಸುಮಾ
ಳಂಕಾರದ ಚೂತಲತಿಕೆ ನರ್ತಕಿವೋಲ್ ತ
ನ್ನಂಕುರದಿಂ ಶಾಖೆಯಿನೇ
ನಂಕುರಶಾಖಾಭಿನಯಮನಭಿನಯಿಸಿದುದೋ ೯೪

ಮುಱುಕದ ಮೆಲ್ಪಿನ ಭಂಗಿಯ
ನೆಱವಿನೊಳಿವೆ ಮಿಗಿಲವರ್ಕಮೆನೆ ಭರತನ ಕ
ಣ್ಗೆಱಕಮನೆ ಪಡೆದು ಚೆಲ್ವಿಂ
ಮಱಸಿದುವುದ್ಯಾನಲತೆಗಳಂ ವನಲತೆಗಳ್ ೯೫

ವ|| ಅನ್ನೆಗಂ ಅಲ್ಲಿ ನವಮಾಳಿಕಾಕುಸುಮಸುಕುಮಾರಿಯರ್ ನವಮಾಳಿಕಾಲತೆಗಳುಮಂ, ರಂಭಾಸ್ತಂಭೋಪಮಾನೋರುಯುಗಳೆಯರ್ ಶಾತಕುಂಭರಂಭಾವನಂಗಳುಮಂ, ಅಭಿನವಮೃಗ

ಆಗ ೯೨. ಬಂದ ಈ ಅತಿಥಿಗೆ ಅಮೋಘವಾದ ಸತ್ಕಾರವನ್ನು ಯಥಾಶಕ್ತಿ ಸಲ್ಲಿಸಬೇಕು. ಸುಮ್ಮನೆ ನೋಡುತ್ತ ಹೇಗಿರೋಣ ಎಂದುಕೊಂಡು ಆ ವನದೇವತೆಗಳು ಪ್ರೀತಿಯಿಂದ ತಮ್ಮ ಕರತಳಗಳನ್ನೆತ್ತಿ ಚಕ್ರಿಗೆ ದಿವ್ಯವಸ್ತ್ರಾಭರಣಗಳನ್ನೂ ಕುಸುಮ ಸುಗಂಧಗಳನ್ನೂ ಕಣ್ಣಿಗೆ ವಿಶೇಷವಾಗಿ ಆಶ್ಚರ್ಯವಾಗುವಂತೆ ಸಮರ್ಪಿಸಿದರು. ವ|| ಆಗ ವನದೇವತೆಗಳ ಪ್ರೇರಣೆಯಿಂದಲೇ ಚಕ್ರವರ್ತಿಗೆ ಸಂಗೀತವನ್ನು ತೋರುವ ಹಾಗೆ ೯೩. ದುಂಬಿಗಳ ಝೇಂಕಾರ, ಮತ್ತಕೋಗಿಲೆಗಳ ಇನಿದನಿ ಇವುಗಳಿಂದ ಕೂಡಿದ ತಾಳಗತಿಯೊಡನೆ ಅಭಿನಯವು ಜರುಗುವಾಗ ಮಲಯಾನಿಳನೆಂಬ ನರ್ತಕನು ಲತಾನರ್ತಕಿಯನ್ನು ಸುಂದರವಾಗಿ ಆಡಿಸಿದನು. ೯೪. ಮೊಳಕೆ, ಚಿಗುರು, ಹೂವು ಮುಂತಾದ ಅಲಂಕಾರಗಳಿಂದ ಕೂಡಿದ ಚೂತಲತಿಕೆಯು ನರ್ತಕಿಯಂತೆ ಅಂಕುರಗಳಿಂದಲೂ ಶಾಖೆಗಳಿಂದಲೂ ಅಂಕುರಶಾಖಾಭಿನಯವನ್ನು ಅಭಿನಯಿಸಿತು. ೯೫. ಒಯ್ಯಾರ, ಮಾರ್ದವಗಳ ಭಂಗಿಯ ನೆರವಿನಿಂದ ಇವು ಅವರಿಗಿಂತ ಮಿಗಿಲಾದುವೆಂಬಂತೆ ಭರತನ ಕಣ್ಣುಗಳಿಗೆ ಪ್ರೀತಿಯನ್ನುಂಟು ಮಾಡಿ, ವನಲತೆಗಳು ಚೆಲ್ವಿನಿಂದ ಉದ್ಯಾನಲತೆಗಳನ್ನು ಮರೆಯುವಂತೆ ಮಾಡಿದುವು. ವ|| ಅಲ್ಲಿ ನವಮಾಲಿಕಾಕುಸುಮ ಸುಕುಮಾರಿಯರು ನವಮಾಲಿಕೆಯ ಬಳ್ಳಿಗಳನ್ನೂ ಬಾಳೆಯಕಂಬಗಳಿಗೆಣೆಯಾದ ತೊಡೆಗಳುಳ್ಳ ಹೆಂಗಸರು ಚಿನ್ನದ ಬಾಳೆಯ ವನಗಳನ್ನೂ

ಮದತಿಳಕವಿಳಸಿತಲಲಾಟೆಯರ್ ಉತ್ಪಳತಿಳಕತರುಗಳುಮಂ, ಚಂಪಕಮುಕುಳನೀಕಾಶನಾಸಾವಂಶೆಯರ್ ಕನಕಕಿಂಕಿಣೀಕಮನೀಯಕುಸುಮಚಂಪಕವಿಟಪಿಗಳುಮಂ, ರಕ್ತಾಶೋಕಪಲ್ಲವಾಧರೆಯರ್ ಅತಿರಕ್ತಪಲ್ಲವಾಶೋಕಾನೋಕಹಂಗಳುಮಂ, ಕಾಮಕಾರ್ಮುಕೋಪಮಾನಭ್ರೂಲತಿಕೆಯರ್ ಪುನ್ನಾಗಲತಿಕೆಗಳುಮಂ ನೋಡುತ್ತುಂ, ಕುಸುಮಾಪಚಯಕ್ರೀಡಾವಿಳಾಸದಿಂ ತೊಟಲ್ವಲ್ಲಿ

ತಳಿರೊಳ್ಗೊಂಬಿನೊಳೂಳ್ವ ಕೋಕಿಳಕುಳಂ ಪೂಗೊಂಬಿನೊಳ್ಪಾಡುತಿ
ರ್ಪಳಿವೃಂದಂ ತುಱುಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ವಾಯ್ದು ಬಂ
ಡಳಿಸುತ್ತಿರ್ಪ ಶುಕಾಳಿ ತಮ್ಮ ಬೆಸದಿಂ ತಂತಮ್ಮ ಠಾಣಾಂತರಂ
ಗಳೊಳಿರ್ದಂಗಜತಂತ್ರದಂತೆಸೆವಿನಿಂ ಚೆಲ್ವಾದುವಿಮ್ಮಾವುಗಳ್ ೯೬

ತೀವಿರ್ದತ್ತು ಮೊದಲ್ಮೊದಲ್ಗೆ ಪಣೆಯುಂ ಮೂಗಯ್ಯ ಮೂಗಯ್ಯನಿ
ತ್ತಾವರ್ಕೆಯ್ದೆ ಕವಲ್ಕವಲ್ತು ಪಲವುಂ ಕೊಂಬಾದುವೊಳ್ಗೊಂಬುಮಂ
ತೀವಿರ್ದತ್ತು ತಳಿರ್ಮೊದಲ್ವಣೆಕವಲ್ಗೊಂಬೆಂಬುವೀಕೆಂದಳಿ
ರ್ಮಾವಿಂಗಲ್ಲದೆ ಮಾವುಗಳ್ಗೆ ಪೆಱವಕ್ಕೆಂತೇಂ ಬೆಡಂಗಕ್ಕುಮೇ ೯೭

ವ॥ ಎಂದು ಅದಂ ಮೆಚ್ಚಿ ಮತ್ತೊಂದು ಪಲ್ಲವಿತಕೋರಕಿತಕುಸುಮಿತ ಫಲಿತಪರಿಣತಫಲ ಲಲಿತಸಹಕಾರಭೂರುಹಮನತಿನಿಬಿಡಾಲಿಂಗನಂಗೆಯ್ದು

ಕಸ್ತೂರಿಯ ತಿಲಕಗಳಿಂದ ವಿರಾಜಿತವಾದ ಹಣೆಯುಳ್ಳ ಸ್ತ್ರೀಯರು ಉತ್ಪಲತಿಲಕ ವೃಕ್ಷಗಳನ್ನೂ ಸಂಪಿಗೆಯ ಮೊಗ್ಗುಗಳಿಗೆ ಸಮಾನವಾದ ಮೂಗುಳ್ಳವರು ಚಿನ್ನದ ಗೆಜ್ಜೆಗಳಂತೆ ಸುಂದರವಾದ ಹೂದುಂಬಿದ ಸಂಪಿಗೆಯ ಮರಗಳನ್ನೂ ರಕ್ತಾಶೋಕ ಪಲ್ಲವದಂತಿರುವ ತುಟಿಗಳುಳ್ಳವರು ಕೆಂಪುಚಿಗುರುಳ್ಳ ಅಶೋಕವೃಕ್ಷಗಳನ್ನೂ, ಕಾಮನ ಬಿಲ್ಲಿನಂತಿರುವ ಭ್ರೂಲತೆಗಳುಳ್ಳವರು ಪುನ್ನಾಗಲತೆಗಳನ್ನೂ ನೋಡುತ್ತಾ ಹೂಬಿಡಿಸುವ ಕ್ರೀಡಾವಿಲಾಸದಿಂದ ಸಂಚರಿಸಿದರು. ಅಲ್ಲಿ ೯೬. ಚಿಗುರುಗಳಿಂದ ತುಂಬಿದ ಕೊಂಬೆಗಳಲ್ಲಿ ಕೋಗಿಲೆಗಳ ಗುಂಪು ಕೂಗುತ್ತಿದ್ದಿತು. ಹೂವುಗಳಿಂದಿಡಿದ ಕೊಂಬೆಗಳಲ್ಲಿ ದುಂಬಿವಿಂಡು ಹಾಡುತ್ತಿದ್ದಿತು. ಕಾಯ್ಗೊಂಚಲುಗಳಿಂದ ತುಂಬಿದ ತೂಗುವ ಕೊಂಬೆಗಳಲ್ಲಿ ಹಾರಾಡುತ್ತಾ ಹಣ್ಣಿನರಸವನ್ನು ಗಿಳಿಗಳು ಕುಡಿಯುತ್ತಿದ್ದುವು. ಹೀಗೆ ಮನ್ಮಥನ ಆಜ್ಞೆಯಂತೆ ಅವುಗಳು ತಮ್ಮ ತಮ್ಮ ಸ್ಥಾನಗಳಲ್ಲಿರಲು ಕಾಮತಂತ್ರದಂತೆ ಎಸೆಯುವ ಇಮ್ಮಾವುಗಳು ಚೆಲುವಾಗಿ ತೋರಿದುವು. ೯೭. ಗಿಡದ ಬುಡವು ಪುಷ್ಟವಾಗಿ ಬೆಳೆದಿತ್ತು. ಬುಡದಿಂದಲೂ ಕವಲೊಡೆಯುವ ಗಿಣ್ಣಿನ ಜಾಗವು ಮೂರು ಮೂರು ಮೊಳಕ್ಕೆ (ಅಥವಾ ಒಂದೊಂದು ಮೊಳಕ್ಕೆ) ಪರಿವಿಡಿಯಿಂದ ಇದ್ದಿತು. ಅದರಲ್ಲಿ ಕವಲು. ಕವಲಿನೊಡನೆ ಅದಕ್ಕೆ ಹಲವಾರು ಕೊಂಬೆಗಳು. ಒಂದೊಂದು ಕೊಂಬೆಯಲ್ಲಿಯೂ ತಳಿರು ತುಂಬಿತ್ತು. ಹೀಗೆ ಬುಡ, ಕವಲೊಡೆಯುವ ಜಾಗ, ಕವಲು, ಕೊಂಬೆ, ಕೆಂದಳಿರು-ಇವು ಮಾವಿನ ಮರಕ್ಕೆ ಮೀಸಲು. ಮಾವಿನ ಮರಗಳಿಗಲ್ಲದೆ ಇತರ ಮರಗಳಿಗೆ ಈ ಬೆಡಗು ಇರುತ್ತದೆಯೆ?[1] ವ॥ ಎಂದು ಅದನ್ನು ಮೆಚ್ಚಿಕೊಂಡು ಚಿಗುರಿಟ್ಟ, ಮೊಗ್ಗಿಟ್ಟ, ಹೂವಿಟ್ಟ, ಹಣ್ಣಿಟ್ಟ ಮತ್ತು ಮಾಗಿದ

---

1. ಈ ಪದ್ಯದ ಅರ್ಥ ಇನ್ನೂ ವಿಚಾರಣೀಯವಾಗಿದೆ. ಮೊದಲ್=ಬುಡ, ಪಣೆ= ಕವಲೊಡೆಯುವ ಜಾಗ. ಆವರ್ಕೆ=ಪರಿವಿಡಿಯಿಂದ. ಇದು ಅವ್ಯಯ. ನೋಡಿ (ಶಬ್ದಮಣಿದರ್ಪಣ .... ೧೦೦-೨?)

ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀಂ ನೀಜನೈ ಪುಷ್ಪಸಂ
ಕುಳದೊಳ್ ನೀನೆ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ ಪಣ್ತ ಪ
ಣ್ಗಳಿನೋವೋ ಪೆಜತೇನೊ ನೀನೆ ಭುವನಕ್ಕಾರಾಧ್ಯನೈ ಭಂಗಕೋ
ಕಿಳಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ ೯೮

ವ|| ಎಂದದಂ ಪೊಗೞ್ದು,

ರತದೊಳಗಗ್ಗಳಂ ಮುಖರತಂ ಸುರತೋತ್ಸವಮೆಂದು ಕಾಮಿನಿ
ಪ್ರತತಿಗೆ ತೋರ್ಪವೋಲ್ಮಧುರಸೀತ್ಕೃತನಾದದೊಳುಣ್ಮಿ ಪೊಣ್ಮಿ [ಚೂ]
ಷಿತಕಮನೌಪರಿಷ್ಟಕರತಂಗಳ ಭೇದದೊಳೊಂದಿದಾಮ್ರ [ಚೂ][೧]
ಷಿತಕಮನಾಮ್ರಪಕ್ವಫಳದೊಳ್ ಶುಕಕಾಮಿನಿ ಚೆಲ್ವುದೋಱಿದಳ್ ೯೯

ವ|| ಎಂದದಂ ಮೆಚ್ಚುತ್ತುಂ,

ಪೊಸಮಾವಿನ ಮಿಡಿಯೊಳ್ ಪ
ಚ್ಚೆಸಾರಮಂ ಮಾಡುವಟ್ಟೆಯಿಂ ಮತ್ತೊರ್ವಳ್
ಪಸದನದ ಬಸನಿ ನಿಜಕರ
ಕಿಸಲಯರುಚಿ ಪಸುರೊಳೆಸೆಯೆ ಮಿಡಿಯಂ ಕೊಯ್ದಳ್ ೧೦೦

ಹಣ್ಣಿನ ಮತ್ತೊಂದು ಮಾವಿನಮರವನ್ನು ದಟ್ಟವಾಗಿ ಅಪ್ಪಿಕೊಂಡು, ೯೮. "ನೀನೆ ತಳಿರುಗಳ ವಿಷಯದಲ್ಲಿ ಅತಿ ಸುಂದರ, ಮೊಗ್ಗುಗಳಲ್ಲಿಯೂ ನೀನೇ ಚೆಲುವ, ಹೂಗಳ ವಿಷಯದಲ್ಲಿಯೂ ನೀನು ವಿಲಾಸಿ, ಮಿಡಿಗಾಯಿಗಳಲ್ಲಿಯೂ ನೀನೇ ಸುಂದರ, ಮಾಗಿದ ಹಣ್ಣುಗಳಿಂದ ನೀನು ಭುವನೈಕಪೂಜಿತ. ಮತ್ತೇನೆನ್ನೋಣ! ದುಂಬಿ, ಕೋಗಿಲೆ, ಗಿಣಿಗಳಿಗೆ ಪ್ರಿಯನಾದ ಚೂತರಾಜ, ಇತರ ಗಿಡಗಳು ನಿನ್ನಷ್ಟು ಸುಂದರವಾಗಿವೆಯೇ?" ವ|| ಎಂದು ಒಬ್ಬಳು ಅದನ್ನು ಹೊಗಳಿದಳು. ೯೯. "ಮುಖರತವುಳ್ಳ ಸುರತೋತ್ಸವವು ರತಿಕ್ರೀಡೆಗಳಲ್ಲಿ ಉತ್ತಮವಾದುದು" ಎಂದು ಕಾಮಿನಿಯರಿಗೆ ತೋರಿಸುವಂತೆ ಒಂದು ಹೆಣ್ಣುಗಿಳಿಯು ಮಾವಿನ ಹಣ್ಣಿನ ಮೇಲೆ ಕುಳಿತು, ಮಧುರವಾಗಿ ಸೀತ್ಕರಿಸುತ್ತ, ಸಂತೋಷದಿಂದ ಹಿಗ್ಗುತ್ತ, ಚೀಪಿದ ರಸವನ್ನು ಸೂಸುತ್ತ, ಔಪರಿಷ್ಟಕ ರತಿಕ್ರೀಡೆಗಳಲ್ಲೊಂದಾದ ಆಮ್ರಚೂಷಿತಕವೆಂಬುದನ್ನು ಸುಂದರವಾಗಿ ಪ್ರಕಟಿಸಿತು[1]. ವ|| ಎಂದು ಆ ಗಿಣಿಯನ್ನು ಅವಳು ಹೊಗಳಿದಳು. ೧೦೦. ಅಲಂಕಾರಪ್ರಿಯಳೊಬ್ಬಳು ಹೊಸ ಮಾವಿನಮಿಡಿಯಲ್ಲಿ ಪಚ್ಚೆಯ ಹಸಿರುಹಾರವನ್ನು ಮಾಡುವ ಆಸೆಯಿಂದ ಮಿಡಿ

---

೧ 'ಭೂ' ಎಂದಿದ್ದ ಪಾಠವನ್ನು 'ಚೂ' ಎಂದು ಪರಿಷ್ಕರಿಸಿ ಕೊಟ್ಟ ಕೀರ್ತಿ ಶ್ರೀ ಡಿ.ಎಲ್. ನರಸಿಂಹಾಚಾರ್ಯರಿಗೆ ಸಲ್ಲುತ್ತದೆ (ಕನ್ನಡ ಗ್ರಂಥ ಸಂಪಾದನೆ ಪು. ೧೬೯)

1. ಈ ಪದ್ಯದಲ್ಲಿ ಹೆಣ್ಣುಗಿಳಿಯು ಮಾವಿನ ಹಣ್ಣನ್ನು ತಿಂದ ಬಗೆಯನ್ನು ವರ್ಣಿಸಲಾಗಿದೆ. ಮೊದಲು ಹಣ್ಣನ್ನು ಚುಂಬಿಸಿ ಮಧುರವಾಗಿ ಸೀತ್ಕಾರಮಾಡಿ ಹಿಗ್ಗಿ ಹೊರಚಿಮ್ಮಿ ಕಣ್ಣುಮುಚ್ಚಿ ಹಣ್ಣಿನ ಮೇಲೆ ಕುಳಿತು ಹೆಣ್ಣುಗಿಣಿ ಹಣ್ಣನ್ನು ತಿಂದಿತೆಂದು ತಾತ್ಪರ್ಯ. ಇದರಿಂದ ಚುಂಬನಾದಿಗಳನ್ನು ಸೂಚಿಸಿದಂತಾಯಿತು.

ಪೊಸಮುತ್ತಿನ ಲಂಬಣದೊಳ್
ಮುಸುಂಕಿದಂತಿಡಿಯೆ ಪೂತ ಸುರಯಿಯ ಮುಗುಳಂ
ಪಸವಟ್ಟಂತೊರ್ವಳ್ ತನ
ಗೆ ಸರಿಗೆಗಂ ಲಂಬಣಕ್ಕಮಟ್ಟಿಯೊಳಾಯ್ದಳ್ ೧೦೧

ಒದೆದ ಮೃದುತಳದ ಕೆಂಪೇಂ
ಪುದಿದುದೊ ಕೆಂದಳಿರನದಱ ನೂಪುರನಿನದಂ
ಪುದಿದುದೊ ಪೊರೆವಳಿಗಳನೆನಿ
ಸಿದಶೋಕೆಯ ತಳಿರನೊರ್ವಳಟ್ಟಿಯೆ ತಿಱಿದಳ್ ೧೦೨

ಎಳಮಾವನದೊಂದೆಳಲತೆ
ಬಳಸಲ್ ಬಗೆದಪ್ಪುದೆಂಬಿನಂ ನಳಿತೋಳಿಂ
ಸೆಳೆಗೊಂಬಂ ತೆಗೆದೊರ್ವಳ್
ವಿಳಾಸವತಿ ತಿಱಿದಳಾಮ್ರನವಕಿಸಲಯಮಂ ೧೦೩

ಪೊಗಡದ ಪೊಸವೂವಿನ ತುಡು
ಗೆಗಳ್ಗಮಧರದ ಪೊದಟ್ಟಿ ತನಿಗಂಪಿಂಗಂ
ಮೃಗನಯನೆಯರನೆ ಬಿಡದೋ
ಲಗಿಸಿದುದಳಿನಿಕರಮವರನಾರೋಲಗಿಸರ್ ೧೦೪

ವ|| ಮತ್ತಮೊರ್ವಳ್ ಮಲ್ಲಿಕಾವಲ್ಲರೀಸಮುಲ್ಲಸಿತಮುಕುಳಂಗಳನಲಂಪಿನೊಳಾಯ್ದು ಕೊಯ್ದು ಮಲ್ಲಿಕಾಮಾಲಭಾರಿಣಿ,

ಗಾಯನ್ನು ಕೊಯ್ದಳು. ಆಗ ಅವಳ ಕರಪಲ್ಲವಗಳ ಕಾಂತಿಯು ಮಿಡಿಯ ಹಸುರುಬಣ್ಣದಲ್ಲಿ ಸೇರಿ ಪ್ರಕಾಶಿಸಿತು. ೧೦೧. ಹೊಸ ಮುತ್ತಿನಹಾರದಲ್ಲಿ ಸೇರಿಕೊಂಡಂತೆ ದಟ್ಟವಾಗಿ ತುಂಬಲು, ಹೂವಡೆದ ಸುರಗಿಯ ಮೊಗ್ಗುಗಳನ್ನು ಆಸೆಪಟ್ಟು ಒಬ್ಬಳು ತನಗೆ ಸರಿಗೆಯನ್ನೂ ಹಾರವನ್ನೂ ಮಾಡಿಕೊಳ್ಳಲು ಕೊಯ್ದಳು. ೧೦೨. ತಾನು ಒದೆದ ಮೃದುವಾದ ಅಂಗಾಲಿನ ಕೆಂಪು ಕೆಂದಳಿರನ್ನು ವ್ಯಾಪಿಸಿತೋ ಎಂಬಂತೆಯೂ ಇದ್ದ ಅಶೋಕವೃಕ್ಷದ ತಳಿರನ್ನು ಪ್ರೀತಿಯಿಂದೊಬ್ಬಳು ಕೊಯ್ದಳು. ೧೦೩. ಎಳಮಾವನ್ನು ಎಳಲತೆಯು ಸುತ್ತುಹಾಕ ಲಾಶಿಸಿತೊ ಎಂಬಂತೆ ತನ್ನ ಕೋಮಲವಾದ ತೋಳಿನಿಂದ ಉದ್ದವಾದ ರೆಂಬೆಯೊಂದನ್ನು ಹಿಡಿದು ಒಬ್ಬ ವಿಲಾಸವತಿಯು ಮಾವಿನ ಹೊಸಚಿಗುರನ್ನು ಕೊಯ್ದಳು. ೧೦೪. ಪಗಡೆವೃಕ್ಷದ ಹೊಸಹೂಗಳ ಆಭರಣಗಳಿಗೂ ಅಧರಗಳ ತಣ್ಣನೆಯ ಸುವಾಸನೆಗೂ ದುಂಬಿವಿಂಡು ಹರಿಣಾಕ್ಷಿಯರನ್ನು ಬಿಡದೆ ಓಲಗಿಸಿತು. ಅವರನ್ನು ಯಾರುತಾನೆ ಆಶ್ರಯಿಸರು? ವ|| ಮತ್ತೋರ್ವಳು ಮಲ್ಲಿಗೆಯ ಬಳ್ಳಿಗಳಲ್ಲಿರುವ ಸೊಗಸಾದ ಮೊಗ್ಗುಗಳನ್ನು ಆನಂದದಿಂದ ಆಯ್ದು ಕೊಯ್ದು ಮಲ್ಲಿಕಾಮಾಲೆಗಳನ್ನು ಧರಿಸಿದಳು. ಅವಳು

ಮಗಮಗಿಸಲ್ಕೆ ಮಂದಯಿಸಿ ದಿಕ್ತಟಮಂ ಬಟಸಲ್ಕೆ ಪೀರ್ವ ತುಂ
ಬಿಗೆ ತಣಿಪಲ್ಕೆ ನಮ್ಮ ಜಸಮಂ ಬೆಳಗಲ್ಕಿವೆ ಸಾಲ್ಗುಮೆಂದು ತ
ಳ್ತಗಲದಲಂಪಿನಿಂ ಮಧು ಮನೋಭವರಿರ್ವರುಮಟ್ಟೆವಟ್ಟು ಮ
ಲ್ಲಿಗೆಗೆ ಬಸಂತದೊಳ್ ಬಯಸಿ ಮಾಡಿದರಲ್ಲರೆ ಪಟ್ಟಬಂಧಮಂ ೧೦೫

ಭುವನದೊಳಿಂತು ನಿನ್ನಸಿವ ಗೋಸನೆ ಸಂದುದು ಪಟ್ಟಬಂಧದು
ತ್ಸವಮಿದು ದೇವ ಮಲ್ಲಿಗೆ ಪಸುರ್ಗನೆದೋಱಿದುದೆಂದು ನಾಡೆ ಬಿ
ನ್ನವಿಸಲೊಡಂ ವಸಂತಕನದೇಂ ಗುಡಿ ತೋರಣಶೋಭೆ ಪೊಯ್ಲ ಬ
ದ್ದವಣಮಳುಂಬಮಾದುದೊ ನಿಕೇತನದಲ್ಲಿ ಮನೋಜರಾಜನಾ ೧೦೬

॥ ಅಕ್ಕರ ॥

ಸೊಡರ ಬೆಳಗಿನೊಳ್ ಕೊರಗುವ ಜಾಜಿಯಂ ತುಂಬಿಯೊಳ್ಳಗೆಗೊಂಡ ಸಂಪಿಗೆಯಂ
ಮುಡಿಯೆ ಸೊಗಯಿ[ಸ][1]ದದಿಮುರ್ಕ್ತೆಯಲರಂ ಮಸಿಯೊಳೆ ಸವನಾದ ಗೊಜ್ಜಗೆಯಂ
ಸುಡಿಯಲಕ್ಕುಮೆ ಪೂಗಳ ಲೆಕ್ಕಮನೆಂದೆಯ್ದೆ ಕಾಮನೊಡ್ಡೋಲಗದೊಳ್
ಮುಡಿಗೆಯಿಕ್ಕಿಯುಂ ಕೈಯನೆತ್ತಿ ಪೊಗೞ್ದುಂ ತಣಿಯನೆ ಮದನನುಂ ಮಲ್ಲಿಗೆಯಂ ೧೦೭

ವ॥ ಎಂದು ಸಂತಸಂಬಡಿಸಿ

ಪರಿಯ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತೆಂಬೆಲ
ರ್ಪೊರೆವೊರೆಯಂ ಸಡಿಲ್ಚೆ ನಡು ಪೊಂಗಿರೆ ಮಲ್ಲಿಗೆಗಳ್ ವಸಂತದೊಳ್
ಬಿರಿದೊಡೆ ನಲ್ಲರಂ ನೆನೆದು ನಲ್ಲರ ಮೆಲ್ಲೆರ್ದೆಗಳ್ ನಿರಂತರಂ
ಬಿರಿವುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆಗೊಂಡುದೋ ೧೦೮

೧೦೫. "ಮಲ್ಲಿಗೆಗಳು ಸುವಾಸನೆಯನ್ನು ಬೀರಲಿಕ್ಕೂ ನಿಧಾನವಾಗಿ ದಿಕ್ತಟವನ್ನು ಬಳಸಲಿಕ್ಕೂ ಪುಷ್ಪರಸವನ್ನು ಹೀರುತ್ತಿರುವ ದುಂಬಿಯನ್ನು ಸಂತೋಷಪಡಿಸಲಿಕ್ಕೂ ತಮ್ಮ ಯಶಸ್ಸನ್ನು ಬೆಳಗಲಿಕ್ಕೂ ಇದೇ ಸಾಕೆಂದು ಹೆಚ್ಚಾದ ಆನಂದದಿಂದ ವಸಂತ ಮನ್ಮಥರಿಬ್ಬರೂ ಉದ್ದೇಶಿಸಿ ಮಲ್ಲಿಗೆಗೆ ವಸಂತದಲ್ಲಿ ಪಟ್ಟಬಂಧವನ್ನು ಕಟ್ಟಿದರಲ್ಲವೆ! ೧೦೬. ದೇವ, ನಿನ್ನ ಘೋಷಣೆ ಭುವನದಲ್ಲಿ ನಡೆಯಿತು. ಈಗ ಪಟ್ಟಾಭಿಷೇಕದ ಉತ್ಸವ. ಮಲ್ಲಿಗೆಗೆ ಹಸುರು ಮೊಗ್ಗುಗಳು ಮೂಡಿದುವು ಎಂದು ವಸಂತನು ಬಿನ್ನವಿಸಲು, ಪತಾಕಾ ತೋರಣಗಳ ಶೋಭೆಯೂ ವಾದ್ಯಗಳ ಮೊಳಗಾಟವೂ ಮನೋಜರಾಜನ ಮನೆಯಲ್ಲಿ ಅತಿಶಯ ವಾದುವು. ೧೦೭. ದೀಪದ ಬೆಳಕಿನಿಂದಲೇ ಬಾಡಿಹೋಗುವ ಜಾಜಿಯನ್ನೂ ದುಂಬಿಗಳನ್ನು ದ್ವೇಷಿಸುವ ಸಂಪಿಗೆಯನ್ನೂ ಮುಡಿಯಲು ಸೊಗಸದಿರುವ ಮಾಧವೀಪುಷ್ಪವನ್ನೂ ಮಸಿಗೆ ಸಮನಾದ ಗೊಜ್ಜುಗೆಯನ್ನೂ ಹೂಗಳ ಗಣನೆಯಲ್ಲಿ ಹೆಸರಿಸಲು ಸಾಧ್ಯವೇ? ಕಾಮನೊಡ್ಡೋಲಗದಲ್ಲಿ ಕಿರೀಟವಿಟ್ಟು ಕೈಯನ್ನೆತ್ತಿ ವಸಂತರಾಜನು ಮಲ್ಲಿಗೆಯನ್ನು ಹೊಗಳಿ ಹೊಗಳಿ ತಣಿಯಲಾರದವನಾಗಿದ್ದಾನೆ" ವ॥ ಎಂದು ಸಂತೋಷಗೊಳಿಸಿದಳು. ಮತ್ತು ೧೦೮. "ಮೊಗ್ಗುಗಳಲ್ಲಿ ಹಸುರು ಹೋಯಿತು, ಬಿಳುಪು ಮೂಡಿತು. ದಪ್ಪ ಮೊಗ್ಗುಗಳಲ್ಲಿ

೧ ಸಿ (ಅನ್ಯತ್ರ)

ವ|| ಎನೆ ಮತ್ತೊರ್ವಳ್ ಮಾಳತೀನವಮಾಳಿಕಾಕುಸುಮಸುಕುಮಾರೆ,

ರತಿಗೆ ಮುಡಿಯಲ್ಕೆ ಮದನಂ
ಗೆ ತುಱುಂಬಲ್ಕಿರ್ದುದೆಂದು ಮಧು ಸುಟಿವ ಮಧು
ವ್ರತಮುಮನಲೆದಪನೆಂಬೀ
ಪ್ರತೀತಿಗಿರುವಂತಿಯಂತೆ ನೋಂತಲರೊಳವೇ ೧೦೯

ವ|| ಎನೆ ಮತ್ತೊರ್ವಳ್ ಮಾಧವೀಲತಾಲಲಿತೆ

ಇದಿರೊಳ್ ನೆನೆದೋಱೆ ವಸಂ
ತದೂತಿಯೆನೆ ನೆಗೞ್ದ ಮಾಧವೀಲತೆಯನೆ ಸಂ
ದದಿರ್ಮುತ್ತೆಯ ಪೂಗೊಂಚಲ
ಪುದುವಿನೊಳೆಱಗಿದ ಮದಾಳಿಗಳ್ ಮಱೆದಪುವೇ ೧೧೦

ವ|| ಎನೆ ಮತ್ತೊರ್ವಳ್ ಮಾಲತೀಶ್ಯಾಮಲಾಂಗಿ,

ಪೊಸತಲರ್ದ ಪದದೊಳುಣ್ಮುವ
ಪೊಸಗಂಪಂ ಪಡೆದು ಪೊೞ್ತಱೊಳ್ ಜನಮಂ ಸೋ
ಲಿಸುಗುಮನಂಗಾಮೃತಸೌ
ಖ್ಯಸಾರಮಂ ಜಾತಿಯಲ್ಲದೇಂ ಪಡೆದಪುದೇ ೧೧೧

ವ|| ಎನೆ ಮತ್ತೊರ್ವಳ್ ಕುಂದಕುಟ್ಮಲರದನೆ,

ಪದರುಗಳು (ದಳಗಳು) ಕಾಣಿಸಿಕೊಂಡುವು. ತಂಗಾಳಿಯು ದಳಗಳನ್ನು ಸಡಿಲಗೊಳಿಸಿತು. ನಡು ಅರಳಿತು. ಹೀಗೆ ಮಲ್ಲಿಗೆಗಳು ವಸಂತದಲ್ಲಿ ಬಿರಿದು ನಲ್ಲರನ್ನು ನೆನೆಯುವಂತೆ ಮಾಡಿದುವು. ಅಂತೆಯೇ ನಲ್ಲರ ಮೆಲ್ಲೆದೆಗಳೂ ನಿರಂತರವಾಗಿ ಬಿರಿಯುವುವು. ಮಲ್ಲಿಗೆಗೂ ನಲ್ಲರ ಮೆಲ್ಲೆದೆಗೂ ಅದೆಂತು ಜೋಡಣೆಯೊದಗಿತೊ?" ಎಂದಳು. ವ|| ಮಾಲತಿ ಮತ್ತು ನವಮಾಲತಿಗಳ ಪುಷ್ಪಗಳಂತೆ ಕೋಮಲೆಯಾದ ಮತ್ತೋರ್ವಳು ೧೦೯. "ರತಿದೇವಿಗೆ ಮುಡಿಯಲಿಕ್ಕೂ, ಮನ್ಮಥನಿಗೆ ಧರಿಸಲಿಕ್ಕೂ ಇದೆಯೆಂದು ಹೇಳಲು ವಸಂತನು ಸುಳಿಯುತ್ತಿರುವ ದುಂಬಿಯನ್ನು (ದೂತನನ್ನಾಗಿ) ಕಳುಹಿಸುತ್ತಾನೆ ಎಂಬ ಪ್ರಸಿದ್ಧಿಗೆ ಇರುವಂತಿಯಂತೆ ವ್ರತಮಾಡಿದ ಮತ್ತೊಂದು ಪುಷ್ಪವೆಲ್ಲಿ?" ಎಂದಳು. ವ|| ಮಾಧವೀ ಲತಾಪ್ರಿಯಳಾದ ಇನ್ನೊಬ್ಬಳು ೧೧೦. "ಎದುರಿನಲ್ಲಿ ಮೊಗ್ಗುಬಿಟ್ಟು ವಸಂತನ ದೂತಿಯಂತೆ ಪ್ರಸಿದ್ಧವಾದ ಮಾಧವೀಲತೆಯನ್ನು ಮಾಧವೀಪುಷ್ಪದ ಗೊಂಚಲಿಗೆರಗಿದ ಮದಿಸಿದ ದುಂಬಿಗಳು ಮರೆಯುತ್ತವೆಯೇ?" ಎಂದಳು. ವ|| ಮಾಲತೀಪುಷ್ಪದಂತೆ ಶ್ಯಾಮಲಾಂಗಿಯಾದ ಮತ್ತೋರ್ವಳು ಎಂದಳು. ೧೧೧. "ಆಗತಾನೆ ಅರಳಿದೊಡನೆ ಉಕ್ಕೇರಿ ಬರುತ್ತಿರುವ ಹೊಸ ಸುವಾಸನೆಯನ್ನು ಹೊತ್ತಾರೆ ಹೊತ್ತುತಂದು ಜನರ ಮನಸ್ಸನ್ನು ಇದು ಸೋಲಿಸುತ್ತದೆ. ಅನಂಗಾಮೃತದ ಸೌಖ್ಯಸಾರವನ್ನು ಜಾದಿಯಲ್ಲದೆ ಬೇರೆ ಯಾವ ಹೂವಿಗೆ ತಾನೆ ಹೊಂದಲು ಸಾಧ್ಯ?" ಎಂದಳು. ವ|| ಮೊಲ್ಲೆಯ ಮೊಗ್ಗುಗಳಂತೆ

ಪುಲ್ಲಶರಂಗಿಸುವೆಡೆಗಿವೆ
ನಲ್ಲಂಬುಗಳೆನಿಸಿ ತುಱುಗಿ ಮಲರ್ದಲರ್ದೆಸೆವೀ
ಮೊಲ್ಲೆಯುಮೊಲಿಸಿದ ನಲ್ಲರ
ಲಲ್ಲೆಯುಮಾರಾರ ಮನಮುಮಂ ಸೋಲಿಸವೇ ೧೧೨

ವ॥ ಎನೆ ಮತ್ತೊರ್ವಳ್ ಸುರಭಿಪಾಟಲೀಪಾಟಲದಶನವಸನೆ,

ಕಂಪುಗೊಳಲ್ಬುಸಿರ್ದುಸಿರಿನಿ
ಸಂ ಪೊಱಮಟ್ಟೆಸಳ ತುದಿಯನೆಯ್ದಲೊಡಂ ಮು
ನ್ನಂ ಪಳಿಯವಪ್ಪ ಪೂಗಳ
ಕಂಪಿನೊಳೇಂ ಪೊಗೞ ಪಾಟಲೀ ಪರಿಮಳಮಂ ೧೧೩

ವ॥ ಎನೆ ಮತ್ತೊರ್ವಳ್ ಅಭಿನವಸುರಭಿಕುಸುಮಸೌರಭೆ,

ಎಸಳ್ಗಳನೆಯ್ದೆ ಕಂಡರಿಸಿ ಮುತ್ತಿನೊಳಲ್ಲಿ ಸುವರ್ಣಚೂರ್ಣಮಂ
ಪಸರಿಸಿ ಕೇಸರಾಕೃತಿಯೊಳಲ್ಲಿಗೆ ಕರ್ಣಿಕೆಯಂದಮಾಗೆ ಕೀ
ಲಿಸಿ ಪೊಸತಪ್ಪ ಮಾಣಿಕದ ನುಣ್ಬೆರಲಂ ಮಧು ಮನ್ಮಥಂಗೆ ಬ
ಣ್ಣಿಸಿ ಸಮೆದಂತೆ ತೋಱುವುದು ಪೂಗಳೊಳೇಂ ಸುರಹೊನ್ನೆ ಚೆನ್ನನೋ ೧೧೪

ವ॥ ಎನೆ ಮತ್ತೊರ್ವಳ್ ಕರ್ಣಿಕಾರಕುಸುಮಸುಕುಮಾರವರ್ಣೆ,

ಹಲ್ಲುಗಳುಳ್ಳ ಮತ್ತೊಬ್ಬಳು, ೧೧೨. "ಮನ್ಮಥನ ಮೇಲೆ ಬಾಣಗಳನ್ನು ಪ್ರಯೋಗಿಸಲು ಇವೇ ಒಳ್ಳೆಯ ಬಾಣಗಳು ಎಂಬಂತೆ ದಟ್ಟವಾಗರಳಿ ಹೊಳೆಯುವ ಮೊಲ್ಲೆಹೂಗಳೂ, ಒಲವು ತರುವ ನಲ್ಲರ ಲಲ್ಲೆಗಳೂ ಯಾರ ಮನಸ್ಸನ್ನು ತಾನೆ ಸೋಲಿಸವು?" ಎಂದಳು. ವ॥ ಸುವಾಸನಾಯುಕ್ತವಾದ ಪಾಟಲಪುಷ್ಪದಂತೆ ಎಳೆಗಂಪಾದ ತುಟಿಗಳುಳ್ಳ ಮತ್ತು ಎಳೆಗೆಂಪಿನ ಸೀರೆಯನ್ನುಟ್ಟಿದ್ದ ಮತ್ತೊಬ್ಬಳು. ೧೧೩. "ಸುವಾಸನೆಯನ್ನು ತೆಗೆದುಕೊಳ್ಳಲಿಕ್ಕಾಗಿ ಮೂಸಿದೊಡನೆಯೆ ಉಸುರಿನ ಸ್ವಲ್ಪಭಾಗವು ಹೊರಬಂದು ಎಸಳತುದಿಯನ್ನು ಮುಟ್ಟುವುದಕ್ಕಿಂತ ಮೊದಲೇ ಬಾಡಿ ಹಳೆಯದಾಗುವ ಇತರ ಹೂಗಳ ಪರಿಮಳದಿಂದೇನು? ಈ ಪಾಟಲೀಪುಷ್ಪದ ಪರಿಮಳವನ್ನು ಹೊಗಳು!" ಎಂದಳು. ವ॥ ಆಗ ಹೊಸ ಸುರಹೊನ್ನೆಯ ಹೂವುಗಳ ಸುಗಂಧವನ್ನು ಬೀರುತ್ತಿದ್ದ ಒಬ್ಬಳು. ೧೧೪. "ಮುತ್ತುಗಳಿಂದ ಎಸಳುಗಳನ್ನು ಸರಿಯಾಗಿ ನಿರ್ಮಿಸಿ, ಅದರಲ್ಲಿ ಕೇಸರಾಕಾರದಲ್ಲಿ ಚಿನ್ನದಪುಡಿಗಳನ್ನು ಉದುರಿಸಿ, ಮಾಣಿಕ್ಯದಿಂದಾದ ತನ್ನ ನುಣ್ಬೆರಳನ್ನು ಅದರ ನಡುವೆ ಕರ್ಣಿಕೆಯಂತೆ ಇಟ್ಟು, ವಸಂತನು ಮನ್ಮಥನಿಗೆ ಈ ಹೂವನ್ನು ಬಣ್ಣಿಸಿ ಹೇಳುತ್ತಿರುವನೋ ಎಂಬಂತೆ ತೋರುವ ಈ ಸುರಹೊನ್ನೆ ಹೂಗಳಲ್ಲಿ ಅದೆಷ್ಟು ಸುಂದರವೊ!" ಎಂದಳು. ವ॥ ಆಗ ಕರ್ಣಿಕಾರ ಕುಸುಮಗಳಂತೆ ಸುಕುಮಾರವರ್ಣೆಯಾದ ಒಬ್ಬಳು,

ಪರಿಣಯನೋತ್ಸವಂ ರತಿಗನಂಗನೊಳಾಗೆ ವಸಂತಕಾಂತೆಯರ್
ನೆರೆದು ದಿಗಂಗನಾಸಮಿತಿಗಟ್ಟಿಜೆನೊಳ್ ಕುಡುವಲ್ಲಿ ಕೇಸರಂ
ಬೆರಸಿದ ಪೊನ್ನಬಾಯಿನದ ಬಟ್ಟಲಿವೆಂಬಿನಮಾರ್ದ್ರಕೇಸರಂ
ಬೆರಸಿದ ಚೆಲ್ವು ತಳ್ತೆಸಳದೇನೆಸೆದಿರ್ದುದೊ ಕರ್ಣಿಕಾರದಾ ೧೧೫

ವ॥ ಎನೆ ಮತ್ತೊರ್ವಳ್ ಚಂಪಕಕುಸುಮಗಂಧಿ,

ಪಡೆದೊಡೆ ಕಂಪಂ ಬಣ್ಣಂ
ಬಡೆಯವು ಬಣ್ಣಮನೆ ಪಡೆದುವಪ್ಪೊಡೆ ಕಂಪಂ
ಪಡೆಯವುಟೆದಲರ್ಗಳೆರಡುಮ
ನೊಡೆವೆಳೆದೀ ಚಂಪಕಕ್ಕೆ ಪೂಗಳ್ ದೊರೆಯೇ ೧೧೬

ಗಟ್ಟನೆ ಕೊಳೆ ಕಡುಗಂಪಿನೊ
ಳಟ್ಟಮೆಗೊಳಗಪ್ಪೆವೆಂದು ಮಧುಪಂಗಳ್ ತಂ
ಮಟ್ಟಮೆಯೆ ಚೌತಮಾಗಿರೆ
ನಿಟ್ಟಿರಿಸಿದುವುಂತೆ ಚಂಪಕಕ್ಕೆಱಗದುವೇ ೧೧೭

ವ॥ ಎನೆ ಮತ್ತೊರ್ವಳ್ ಕೇತಕೀದಳಧವಳಲೋಚನೆ,

ಭುವನದೊಳೆಮ್ಮ ಮುಟ್ಟದಲರಾವುವೆಱಂಕೆಯ ಗಾಳಿ ಮುಟ್ಟೆ ಕಂ
ದುವುವೆಸಳೊರ್ಮೆ ಪೀರಲೊಡಮಾಗಳೆ ಸೋರ್ವುವು ಕಂಪು ಸೋಂಕೆ ಕಂ
ದವು ದಳಮೆಯ್ದೆ ಪೀರೆ ತವದುಣ್ಬುವ ಸೌರಭಮೆಂದು ಪೀರ್ದು ಪೀ
ರ್ದವಚಱದೇಂ ತೆಱಂದಿರಿದು ಪಾಯ್ದುವೊ ಕೇತಕಿಯೊಳ್ ಮದಾಳಿಗಳ್ ೧೧೮

೧೧೫. "ರತಿಗೆ ಮನ್ಮಥನೊಡನೆ ಮದುವೆಯಾದಾಗ ವಸಂತ ಕಾಂತೆಯರು ದಿಗಂಗನೆಯರಿಗೆ ಪ್ರೀತಿಯಿಂದ ಕೊಟ್ಟ, ಕುಂಕುಮ ಕೇಸರಗಳನ್ನು ತುಂಬಿದ ಚಿನ್ನದ ಬಾಗಿನದ ಬಟ್ಟಲುಗಳೊ ಎಂಬಂತೆ, ಹೊಸ ಪರಾಗಗಳಿಂದ ಕೂಡಿದ ಕರ್ಣಿಕಾರದ ಎಸಳುಗಳು ಎಷ್ಟು ಚೆನ್ನಾಗಿವೆ!" ಎಂದಳು. ವ॥ ಸಂಪಿಗೆಯ ಪರಿಮಳವನ್ನು ಬೀರುವ ಮತ್ತೊಬ್ಬಳು, ೧೧೬. "ಕೆಲವು ಹೂಗಳಲ್ಲಿ ಕಂಪಿದ್ದರೆ ಬಣ್ಣವಿಲ್ಲ, ಮತ್ತೆ ಕೆಲವು ಪುಷ್ಪಗಳಲ್ಲಿ ಬಣ್ಣವಿದ್ದರೆ ಕಂಪಿಲ್ಲ, ಬಣ್ಣ ಸುವಾಸನೆಗಳೆರಡನ್ನೂ ಪಡೆದ ಅರಳಿದ ಸಂಪಿಗೆಗೆ ಸಮನಾದ ಹೂವೊಂದಿದೆಯೇ? ೧೧೭. ಗಳಕ್ಕನೆ ಬಂಡನ್ನುಂಡರೆ ಕಡುಗಂಪಿನಿಂದ ಅಜೀರ್ಣಕ್ಕೊಳಗಾಗುವೆವೆಂದು ದುಂಬಿಗಳು ತಿಳಿದುವು. ಆದ್ದರಿಂದ ಅಜೀರ್ಣವು[1] ನಿಶ್ಚಯವಾಗಿ ಒದಗುವುದೆಂದು (?) ಸಂಪಿಗೆಯನ್ನು ಉಪೇಕ್ಷಿಸಿದುವು! ಇಲ್ಲದಿದ್ದರೆ ಅವು ಸಂಪಿಗೆಗೆ ಎರಗದೆ ಇರುವುವೆ!" ಎಂದಳು. ವ॥ ಕೇತಕೀದಳದಂತೆ ಶುಭ್ರವಾದ ಕಣ್ಣುಳ್ಳವಳೊಬ್ಬಳು ೧೧೮. "ದುಂಬಿಗಳು ನಾವು ಪ್ರಪಂಚದಲ್ಲಿ ಮುಟ್ಟದ ಹೂಗಳಾವುವು? ನಮ್ಮ ರೆಕ್ಕೆಗಳ

---

1 ಪದ್ಯದಲ್ಲಿರುವ 'ಚೌತ' ಎಂಬುದಕ್ಕೆ ಸರಿಯಾದ ಅರ್ಥವೇನೆಂಬುದು ಚಿಂತನೀಯ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟುವಿನಲ್ಲಿ 'ಆಧಿಕ್ಯ ; ಹೆಚ್ಚಳ' (?) ಎಂದು ಅರ್ಥವನ್ನು ಬರೆಯಲಾಗಿದೆ. ಚೌತವೆಂಬುದು 'ಚತುರಸ್ರ' ಶಬ್ದದಿಂದ ಬಂದಿರಬಹುದು. ಚತುರಸ್ರ = ಎಲ್ಲ ವಿಧದಲ್ಲೂ ಸರಿ, ನಿಶ್ಚಿತ.

ಎಸಳಂ ಮುಟ್ಟಲೊಡಂ ತ
ನ್ನ ಸೌರಭಂಗೆಟ್ಟು ನೆಗಟ್ದ ಕತ್ತುರಿ ಮಣ್ಣಂ
ಮಸಿಗಮೆಣೆಯಪ್ಪುದೆನೆ ಬ
ಣ್ಣಿಸುವಂ ಕೇದಗೆಯ ಕಂಪನೇವಣ್ಣಿಸುವಂ ೧೧೯

ವ॥ ಎನೆ ಮತ್ತೊರ್ವಳ್ ನೀಲೋತ್ಪಳದಳನಯನೆ,

ಉನ್ನತಮಾಗಿರೆ ಸೊಕ್ಕಿ
ದುರ್ನ್ನತಕುಚೆಯರ ವಿಲೋಚನಾರುಣರುಚಿಯಂ
ತನ್ನೆಸಳ್ಗಳಿನನುಕರಿಸುವ
ಚೆನ್ನೈದಿಲ ಕಂಪನೆಯ್ದಲಾರ್ಪುವೆ ಪೂಗಳ್ ೧೨೦

ವ॥ ಎನೆ ಮತ್ತೊರ್ವಳ್ ಸಿಂಧುವಾರಸುರಭಿನಿಶ್ವಾಸೆ,

ಅಲರ್ದರೆಗಳಿಗೆಯೆ ಜಾದಿಯ
ಮಲೆಪುಂ ಮಲ್ಲಿಗೆಯ ಪೊಂಕಮುಂ ಬಟಿಕವನಾ
ರ್ತಲೆಯೊಳ್ ತಾಳ್ದುವರೆಂದೇ
ನಲೆದುದೊ ಸಿಂದುರವೆ ತವದ ತನಿಗಂಪಿಂದಂ ೧೨೧

ವ॥ ಎನೆ ಮತ್ತೊರ್ವಳ್ ವಕುಳಮುಕುಳಾಸವವದನಪರಿಮಳೆ,

ಗಾಳಿಯು ಒಮ್ಮೆ ಸೋಂಕಿದರೆ ಎಸಳುಗಳು ಕಂದುವುವು. ಒಮ್ಮೆ ಹೀರಿದರೆ ಒಡನೆ ಸುವಾಸನೆಯ ಬಂಡು ಮುಗಿಯುವುದು. ಆದರೆ ಕೇದಗೆಯ ದಳಗಳು ಮುಟ್ಟಿದರೂ ಕಂದವು. ಎಷ್ಟು ಹೀರಿದರೂ ಸೌರಭವು ಹೆಚ್ಚುತ್ತಲೇ ಹೋಗುವುದು" ಎಂದು ಸೌರಭವನ್ನು ಕುಡಿದು ಕುಡಿದು ಬೇಸರ ಪಡದೆ ಮತ್ತೆ ಮತ್ತೆ ಕೇತಕಿಗಳಲ್ಲಿ ಎರಗುತ್ತವೆ, ೧೧೯. ಒಂದು ಎಸಳನ್ನು ಮುಟ್ಟಿದರೆ ಸಾಕು, ಕಸ್ತೂರೀ ಮಲ್ಲಿಗೆಹೂ ಸುವಾಸನೆಯನ್ನು ಕಳೆದುಕೊಂಡು ಮಣ್ಣಿಗೂ ಮಸಿಗೂ ಸಮಾನವಾಗುವುದು! ಹೀಗೆ ಬಣ್ಣಿಸುವ ಕವಿ ಕೇದಗೆಯ ಸುವಾಸನೆಯನ್ನು ಹೇಗೆಂದು ವರ್ಣಿಸುವನು?" ಎಂದಳು. ವ॥ ಆಗ ನೀಲೋತ್ಪಲದಳನಯನೆಯಾದ ಮತ್ತೋರ್ವಳೆಂದಳು; ೧೨೦. "ಸ್ತನಗಳ ಔನ್ನತ್ಯದಿಂದ ಉನ್ಮತ್ತರಾದ ಉನ್ನತ ಕುಚೆಯರ ಕಣ್ಣುಗಳ ಅರುಣಕಾಂತಿಯನ್ನು ತನ್ನೆಸಳುಗಳಿಂದನುಕರಿಸುವ ಚನ್ನೈದಿಲೆಗಳ ಕಂಪನ್ನು ಬೇರೆ ಹೂಗಳು ಪಡೆಯಲು ಶಕ್ತವಾಗಬಲ್ಲುವೆ?" ವ॥ ಆಗ ಸಿಂಧುವಾರ ಪುಷ್ಪದ ಸುಗಂಧವನ್ನು ಬೀರುವ ನಿಶ್ವಾಸವುಳ್ಳ ಇನ್ನೊಬ್ಬಳು ೧೨೧. "ಜಾದಿಮಲ್ಲಿಗೆಗಳ ಅಹಂಕಾರಕ್ಕೆ ಅವುಗಳರಳಿದ ಅರಗಳಿಗೆ ಮಾತ್ರ ಅವಕಾಶ, ಬಳಿಕ ಅವನ್ನಾರು ತಾನೆ ತಲೆಯ ಮೇಲೆ ಏರಿಸಿಕೊಳ್ಳುವರು! ಎಂದುಕೊಂಡು ಸಿಂಧುರವು ಕುಗ್ಗದ ಮೃದುಮಧುರ ಸುವಾಸನೆಯಿಂದ ಎಷ್ಟು ಮೆರೆಯುವುದೊ!" ಎಂದಳು. ವ॥ ಬಕುಳದ ಮೊಗ್ಗಿನ ಮಧ್ಯದಂತೆ ಮುಖಪರಿಮಳವುಳ್ಳ ಮತ್ತೋರ್ವಳು,

ಮುಕ್ಕುಳಿಸಿಯುಗುಳ್ವ ಮಧುವಿಂ
ಮಿಕ್ಕೆಸೆವಾಮೋದಮಿದಱ ತಣ್ಗಂಪಿನೊಳೊಳ
ಪೊಕ್ಕುದೆನೆ ಮಧುವ ಕಂಪಂ
ಮುಕ್ಕುಳಿಸಿದ ವಕುಳಮಾರುಮಂ ಸೊಕ್ಕಿಸದೇ ೧೨೨

ವ|| ಎನೆ ಮತ್ತೊರ್ವಳ್ ಶತಪತ್ರಿಕಾಕುಬ್ಜಕುಸುಮಮಾಳಾಕೋಮಳೆ,

ಮಗಮಗಿಸುವ ಕಂಪೆಸಳೊಳೆ
ತಗುಳ್ದುಂ ಮೆಲ್ಪೆಸೆಯೆ ಮನಮನಳಿಗಳ ಬಳಗಂ
ಜಗದ ಮನದೊಡನೆ ಸೇವಂ
ತಿಗೆಗಂ ಗೊಜ್ಜಗೆಗಮಲ್ಲದೇನೆಱಗುಗುಮೇ ೧೨೩

ವ|| ಅಂತುಮಲ್ಲದೆ,

ಉದಿರ್ದೊಪ್ಪುವುದೆಯ್ದೆ ತುಱುಂ
ಬಿದೊಡೊಪ್ಪುವುದೆಸಳ ಮೆಲ್ಪಿನಿಂದೊಪ್ಪುವುದು
ಣ್ಮಿದ ತಣ್ಗಂಪಿಂದೊಪ್ಪುವು
ದದಱಿಂದಲರೊಳಗೆ ಗೊಜ್ಜ ಗೊಜ್ಜಗೆಯೆ ವಲಂ ೧೨೪

ವ|| ಎನೆ ಮತ್ತೊರ್ವಳ್ ಕಸ್ತೂರಿಕಾಕದಂಬಚುಂಬಿತಕಬರೀಭಾರೆ,

೧೨೨. "ಮುಕ್ಕುಳಿಸಿ ಉಗುಳಿದ ಮದ್ಯಕ್ಕಿಂತ ಉತ್ತಮವಾದ ಪರಿಮಳವು ತನ್ನ ಕಂಪಿನಲ್ಲಿದೆಯೆಂದು ಆ ಮದ್ಯದ ಕಂಪನ್ನೇ ಮತ್ತೆ ಉಗುಳುವ ಬಕುಳವು ಯಾರನ್ನು ತಾನೇ ವಶಪಡಿಸಿಕೊಳ್ಳದು?" ಎಂದಳು.[1] ವ|| ಸೇವಂತಿಗೆಯ ಮಾಲೆಯಂತೆಯೂ ಗೊಜ್ಜಗೆಹೂವಿನ ಮಾಲೆಯಂತೆಯೂ ಕೋಮಲೆಯಾದ ಮತ್ತೋರ್ವಳು ೧೨೩. "ಮಗಮಗಿಸುವ ಕಂಪು ಎಸಳುಗಳಲ್ಲಿ ಸೇರಿಕೊಂಡು ದುಂಬಿಗಳ ಮನಸ್ಸನ್ನು ಸಂತೋಷಗೊಳಿಸಲು, ದುಂಬಿಗಳ ಬಳಗವು ಲೋಕದ ಮನಸ್ಸಿನೊಡನೆ ಸೇವಂತಿಗೆಗೂ ಗೊಜ್ಜಗೆಗೂ ಅಲ್ಲದೆ ಇತರ ಪುಷ್ಪಗಳಿಗೆ ಎರಗುತ್ತದೆಯೇ? ವ|| ಅಂತಲ್ಲದೆ ೧೨೪. ಗೊಜ್ಜಗೆಯ ದಳಗಳು ಉದುರಿ ಹೋದರೂ ಒಪ್ಪುವುವು. ದಳಗಳು ದಟ್ಟವಾಗಿ ಸೇರಿಕೊಂಡರೂ ಒಪ್ಪುತ್ತವೆ. ಎಸಳುಗಳ ಮಾರ್ದವದಿಂದ ಅದು ಕಣ್ಗೊಪ್ಪುವುದು. ಹೊರಹೊಮ್ಮುವ ತಣ್ಣನೆಯ ಕಂಪಿನಿಂದ ಒಪ್ಪುವುದು. ಆದಕಾರಣ ಹೂವುಗಳಲ್ಲೆಲ್ಲ ಗೊಜ್ಜಗೆಯೇ[2] ಹಿರಿಯಳು" ಎಂದಳು. ವ|| ಕಸ್ತೂರಿ ಮುಂತಾದ ಸುಗಂಧದ್ರವ್ಯ

---

1 ಸ್ತ್ರೀಯರು ಬಾಯಲ್ಲಿ ಮದ್ಯವನ್ನು ತುಂಬಿಕೊಂಡು ಉಗುಳಿದರೆ ಬಕುಳವೃಕ್ಷವು ಹೂ ಬಿಡುವುದೆಂದು ಕವಿಸಮಯ. ಬಕುಳದ ವಾಸನೆ ಮದ್ಯದ ವಾಸನೆಯಂತಿದೆಯೆಂಬ ಅಭಿಪ್ರಾಯದಿಂದ ಈ ಪದ್ಯದಲ್ಲಿ ವರ್ಣನೆ ಇದೆ.

2 ಗೊಜ್ಜ = ಹಿರಿಯ; ಗೊಜ್ಜೆ = ಹಿರಿಯಳು. ಗೊಜ್ಜಗೆ ಎಂಬುದು ಸ್ತ್ರೀಲಿಂಗವೆಂದು ಕಲ್ಪಿಸಿ ಹೀಗೆ ಪ್ರಯೋಗಿಸಲಾಗಿದೆ.

ಪರಿಮಳಿತಸೌಂದರಂ ಬಂ
ಧುರಗಂಧಂ ಮದನರಾಗವರ್ಧನಕರಮೀ
ಮರುವಂ ಕರ್ಬಾಳಮುಮಿರೆ
ಮರುಳಲ್ಲವೆ ಕುಸುಮನಿಚಯದೊಳ್ ಪಾಯ್ವಳಿಗಳ್ ೧೨೫

ವ|| ಎಂದು ಭಿನ್ನರುಚಿಗಳಾಗಿ ತಂತಮ್ಮ ಮೆಚ್ಚಿದಿಚ್ಚೆಯ ಪೂಗಳನೆ ಪೊಗೞೆ ಮತ್ತೊರ್ವಳ್ ಕುಂಕುಮಪಂಕಾಂಕಿತಕದಂಬಚುಂಬಿತಮೃಗಾಂಕವಕ್ತ್ರೆ

ಲಲನಾಮುಖೇಂದುಲಾವ
ಣ್ಯಲೀಲೆಯಂ ಪಡೆವ ಬಣ್ಣದಿಂ ಕಂಪಿಂದೇ
ನಲೆದುದೊ ಪೈತುಗದಂತಿರೆ
ತಲೆಗೇಱುವ ಕುಸುಮನಿಚಯಮಂ ಕಾಶ್ಮೀರಂ ೧೨೬

ವ|| ಎಂದು ಬಗೆಗೆವಂದ ಪೂಗಳೊಳ್ ಪೂದುಡುಗೆಯಂ ಮಾಡಿ ವಸಂತಕಾಂತೆಯರಂತೆ ನೆಱೆಯೆ ಕಯ್ಗೆಯ್ದಾಗಳ್,

ಬನದ ತಳಿರ್ ಕಳಿಕೆ ಮುಗುಳ್
ನನೆ ಬಿರಿಮುಗುಳಲರ ಗೊಂಚಲೆಂಬಿವು ವನಜಾ
ನನೆಯರ ಪೂದುಡುಗೆಗೆ ಮು
ಟ್ಟನಾದುವೇಂ ಪೆಂಪೊ ಭರತನಂತಃಪುರದಾ ೧೨೭

ವ|| ಆಗಳಂತಃಪುರಕಾಂತಾಪ್ರಸಾಧನಕುಸುಮಾಮೋದಮತಿಪ್ರಮೋದಮಂ ಪಡೆಯೆ,

ಸಮೂಹದಿಂದ ಕೂಡಿದ ತುರುಬುಳ್ಳ ಮತ್ತೋರ್ವಳು ೧೨೫. "ಪರಿಮಳಯುಕ್ತವೂ ಸುಂದರವೂ ಆಗಿರುವ, ಮನೋಹರವಾದ ಗಂಧವುಳ್ಳ, ಮನ್ಮಥಪ್ರೀತಿಯನ್ನೆಬ್ಬಿಸುವ ಮರುಗವೂ ಕರ್ಬಾಳವೂ (ಪರಿಮಳಯುಕ್ತವಾದ ಬೇರುಳ್ಳ ಹುಲ್ಲು) ಇರಲು ಹೂಗಳ ಮೇಲೆ ಬೀಳುವ ದುಂಬಿಗಳ ಮರುಳಲ್ಲದೆ ಮತ್ತೇನು?" ಎಂದಳು. ವ|| ಹೀಗೆ ಭಿನ್ನರುಚಿಗಳಾಗಿ ತಮತಮಗೆ ಇಷ್ಟವೆನಿಸಿದ ಹೂಗಳನ್ನೇ ಹೊಗಳುತ್ತಿರಲು ಕೇಸರಿಯ ಶೋಭಿತಳಾದ ಮತ್ತೊಬ್ಬ ಚಂದ್ರವದನೆಯು ಹೇಳಿದಳು. ೧೨೬. "ಅಂಗನೆಯರ ಮುಖೇಂದುವಿನ ಲಾವಣ್ಯವನ್ನು ಪಡೆದ ಬಣ್ಣದಿಂದಲೂ ಅದರ ಪರಿಮಳದಿಂದಲೂ ಕುಂಕುಮ ಕೇಸರವು, ಪಿತ್ತರೋಗದಂತೆ ತಲೆಗೇರುವ ಹೂಗಳೆಲ್ಲವನ್ನೂ ಸೋಲಿಸಿಬಿಟ್ಟಿದೆ!" ಎಂದಳು. ವ|| ಆ ಸ್ತ್ರೀಯರು ಇಷ್ಟವೆನಿಸಿದ ಹೂಗಳಲ್ಲಿ ಹೂವಿನುಡಿಗೆಯನ್ನು ಮಾಡಿಕೊಂಡು ವಸಂತಕಾಂತೆಯರಂತೆ ನೆರೆದು ಅಲಂಕರಿಸಿಕೊಂಡರು. ಆಗ, ೧೨೭. ವನದ ಚಿಗುರುಗಳೂ ಕುಡಿಗಳೂ ಎಳೆಮೊಗ್ಗು ಹುಸಿಮೊಗ್ಗು ಬಿರಿ ಮೊಗ್ಗುಗಳೂ, ಹೂಗೊಂಚಲುಗಳೂ ಭರತರಾಜನ ಅಂತಃಪುರದ ಕಮಲಮುಖಿಯರ ಹೂವಿನ ಅಲಂಕಾರಕ್ಕೆ ಅತ್ಯಂತ ಕಳಪೆಯೆನಿಸಿದುವು! ಭರತನ ಅಂತಃಪುರ ಸ್ತ್ರೀಯರ ಸೌಂದರ್ಯಾತಿಶಯ ಎಷ್ಟು ಹಿರಿದೊ! ವ|| ಆಗ ಅಂತಃಪುರದ ಕಾಂತೆಯರ

ಅವಚಱಿದೊಂದೆ ಪದ್ಮದೊಳೆ ನೇಲ್ದೊಳಗಾದಳಿಗೆಮ್ಮ ವೃತ್ತಿ ಸಂ
ಭವಿಸದು ಕಲ್ವುದಲ್ತೆ ವಿಟರಿಂ ವಿಟವೃತ್ತಮನೆಮ್ಮೊಳಿಲ್ಲಿಗಾ
ಮೊವಜಿರೆಮೆಂಬವೊಲ್ಮೊರೆವ ಮೆಲ್ಪೆಸೆಯುತ್ತಿರೆ ಸೂಱಸೂಱದೇಂ
ಸವಿದುವೊ ಬಣ್ಣವಣ್ಣಿಗೆಯ ಪೂಗಳ ಸೌರಭಮಂ ಮದಾಳಿಗಳ್ ೧೨೮

ವ|| ಆಗಳಾಕೆಗಳಲಕ್ತಕಾರಕ್ತಮಣಿನೂಪುರಕ್ವಣಿತಸುಭಗವಾಮಪಾದಪ್ರಹರಣದೊಳ ಶೋಕತರುಗಳಂ ಕುಸುಮಿಸಿಯುಂ, ವದನಸರಸಿಜಾಸವಸೇಕದೊಳೆ ವಕುಳಕುಜಂಗಳನಲರ್ಚಿಯುಂ, ಉನ್ನತಕುಚತಟಾಘಾತದೊಳೆ ಕುರವಕಂಗಳಂ ಪುಷ್ಪಿತಂಗಳಂ ಮಾಡಿಯುಂ, ಕ್ಷೀರಗಂಡೂಷಸೇಚನದೊಳೆ ಚಂಪಕವಿಟಪಿಗಳನಲರ್ಚಿಯುಂ, ಆಯತಧವಳಾಪಾಂಗಸಂಗದೊಳೆ ತಿಳಕಭೂರುಹಂಗಳನಭಿನವಲತಾಂತಂಗಳೊಳ್ ಕೂಡಿಯುಂ-ಇಂತು ನಾನಾವಿಧಕ್ರೀಡೆಯಿಂದುಪವನಕ್ರೀಡೆಯಂ ನಿರ್ವರ್ತಿಸಿ,

ಇದು ಕಡುನಾಣ ಪುತ್ತುವಲಮಿಂ ನೆನೆಯುತ್ತಿರಿಮೆಮ್ಮನೆಂಬುದಾ
ವುದು ಗುಣಮೆಮ್ಮೊಳಾಗೆ ನೆನೆದಪ್ಪಿರಶೋಕಮೆ ವಾಮಪಾದದಿಂ
ದೊದೆದುದೊ ಕೇಸರದ್ರುಮಮೆ ನಿನ್ನುಮನಾನನಸಿಂಧುವಿಂದೆ ಪೂ
ಟ್ಟುದೊ ಕೃತಮಾವುದಿಂ ಮಱವುದೆಮ್ಮ ಮದೋತ್ಕಟಚೇಷ್ಟಿತಂಗಳಂ ೧೨೯

ವ|| ಎಂದಶೋಕವಕುಳಪಾದಪಂಗಳಂ ಬೀೞ್ಕೊಂಡು,

ಅಲಂಕರಣಾರ್ಥವಾದ ಕುಸುಮಗಳ ಸುವಾಸನೆಯು ಬಹು ಸಂತೋಷವನ್ನುಂಟು ಮಾಡಲು ೧೨೮. 'ಬೇಸರ ತರಿಸುವ ಕಮಲವೊಂದರಲ್ಲಿ ಸಿಕ್ಕಿಹಾಕಿಕೊಂಡಿರುವ ದುಂಬಿಗೆ ನಮ್ಮಂತೆ ಜೀವನವು ಸಾಧ್ಯವಿಲ್ಲ. ವಿಟರು ವಿಟವೃತ್ತಿಯನ್ನು ನಮ್ಮಿಂದ ಕಲಿಯಬೇಕು. ಈ ವಿಷಯಕ್ಕೆ ನಾವೇ ಗುರುಗಳು!' ಎಂದು ಹೇಳುವ ಹಾಗೆ ಮಧುರವಾಗಿ ಮೊರೆಯುತ್ತಿರುವ ಮದಿಸಿದ ದುಂಬಿಗಳು ಬಣ್ಣಬಣ್ಣದ ಹೂವುಗಳ ಸೌರಭವನ್ನು ಬಾರಿಬಾರಿಗೂ ಸವಿದುವು. ವ|| ಆಗ ಆ ತರುಣಿಯರ ಅಲತಿಗೆಯ ರಸದಿಂದ ಕೆಂಪಾದ ಮಣಿನೂಪುರಗಳ ಶಬ್ದಗಳಿಂದ ಸುಂದರವಾದ ಎಡಗಾಲಿನ ಒದೆತದಿಂದ ಅಶೋಕವೃಕ್ಷಗಳು ಹೂಬಿಟ್ಟುವು! ಮುಖಕಮಲದ ಮದ್ಯವನ್ನು ಉಗುಳುವುದರಿಂದ ಬಕುಳದ ಮರಗಳು ಅರಳಿದುವು. ಉನ್ನತಸ್ತನಗಳ ಪ್ರಹಾರದಿಂದ (ಆಲಿಂಗನದಿಂದ) ಗೋರಂಟಿಗಳು ಪುಷ್ಪಿತವಾದುವು. ಮುಕ್ಕುಳಿಸಿದ ಹಾಲಿನ ಸೇಚನೆಯಿಂದ ಸಂಪಿಗೆಮರಗಳು ಹೂಬಿಟ್ಟುವು. ಉದ್ದವೂ ಬಿಳುಪೂ ಆದ ಕಣ್ಣಂಚಿನ ಸಂಗದಿಂದ ತಿಲಕವೃಕ್ಷಗಳು ಹೊಸಹೂಗಳನ್ನು ತಳೆದವು. (ಲತಾಂತ-ಹೂ) ಹೀಗೆ ನಾನಾವಿಧದ ಆಟಗಳಿಂದ ಆ ಲಲನೆಯರು ಉಪವನಕ್ರೀಡೆಯನ್ನು ನೆರವೇರಿಸಿದರು. ೧೨೯. ಅನಂತರ ಆ ಸ್ತ್ರೀಯರು "ಓ ವೃಕ್ಷಗಳೆ, ನಮ್ಮನ್ನು ನೆನೆಸಿಕೊಳ್ಳುತ್ತಿರಿ ಎನ್ನುವುದು ಲಜ್ಜಾಸ್ಪದವಾದ ವಿಷಯವಲ್ಲವೆ? ನಮ್ಮಲ್ಲಿ ಯಾವ ಗುಣಗಳಿವೆಯೆಂದು ನೆನೆಸಿಕೊಳ್ಳುತ್ತೀರಿ! ಎಲೈ ಅಶೋಕವೆ, ನಿನ್ನನ್ನು ಒದ್ದುದು ಗುಣವೆ? ಬಕುಳವೆ, ನಿನ್ನನ್ನು ಬಾಯಿಯ ಥೂತ್ಕಾರದ್ರವದಿಂದ ಮುಚ್ಚಿದುದು ಗುಣವೆ? ನಾವು ಮಾಡಿದ್ದೇನು? ನಮ್ಮ ಮದೋತ್ಕಟ ಚೇಷ್ಟೆಗಳನ್ನು ದಯವಿಟ್ಟು ಮರೆಯಿರಿ!" ವ|| ಎಂದು ಹೇಳಿ ಅಶೋಕ ಬಕುಳವೃಕ್ಷಗಳನ್ನು

ನನೆಗಳ ಗೊಂಚಲಂ ತಳಿರ ತೊಂಗಲನಾಡುವ ಬೆಳ್ವಳಪ್ಪ ಕೊಂ
ಬಿನ ಮಿಡಿಯಂ ತೆರಳ್ಚಿ ತೆಗೆದೋವದೆ ಕಾಯದೆ ಕೂರಕರ್ಮದಿಂ
ಸೊನೆಸುರಿವನ್ನೆಗಂ ಪಱಿದು ನೋಯಿಸಿ ಕಾಡಿದೆವಿನ್ನದೊಂದುಮಂ
ನೆನೆಯದೆ ನೀನುಮಾಮುಮೊಡನಿರ್ದಿರವಂ ನೆನೆ ಬಾಲಚೂತಮೇ ೧೩೦

ವ॥ ಎಂದು ಮಾಕಂದಮಹೀರುಹಮನಪ್ಪುಕೆಯ್ದು,

ಭಂಗಿಗಳೊಳೆಮ್ಮೊಳಾದೀ
ಸಂಗಡಮಂ ನೀಮೆ ಮನದೆಗೊಂಡೆಮ್ಮ ಕಿಸುರ್
ಪಿಂಗುಗಗಲ್ವೆಡೆಯೊಳ್ ಕೆಳೆ
ಸಂಗಳಿಸುಗೆ ನಿಮಗಮೆಮಗಮಿಂ ಲತೆಗಳಿರಾ ೧೩೧

ವ॥ ಎಂದು ವನಲತೆಗಳನನುನಯಿಸಿ,

ಪದೆಮುತ್ತಂಸವತಂಸಶೋಭೆಗೆ [illegible]ನಸ್ಪಾಲಪ್ರವಾಳೋಲ್ಲಸ
ನ್ಮೃದುಪುಷ್ಪಸ್ತಬಕಂಗಳಂ ಪಱಿದೆವಿನ್ನಾದೋಷಮಂ ಕೊಳ್ಳದಿ
ರ್ಪುದು ಕೇಳೀ ವನಪಾದಪಂಗಳಿರ ಚಿತ್ತಂಗೊಂಡು ಬೀೞ್ಕೊಂಡು ರಾ
ಗದೆ ನಿಮ್ಮಂ ಬಲಗೊಂಡು ಪೋಪ ಗುಣಮಂ ಕೊಳ್ಳಿಂ ಮನಃಪ್ರೀತಿಯಿಂ ೧೩೨

ವ॥ ಎಂದು ವನತರುಗಳನೊಡಂಬಡಿಸಿ,

ಬನದ ಪಡಿಯಱಿನನಂಗಂ
ನಿನಗಿತ್ತೊಡೆ ಪುಗಲಿಮೆಂಬುದೇಂ ದೋ[illegible] ಟೀ
ನೆನೆಯೆವದಂ ನಿನ್ನಿಂಚರ
ಮನೆ ಮನದೊಳ್ ನೆನೆವೆವಾಗಳುಂ ಪರಭೃತಮೇ ೧೩೩

ಬೀಳ್ಕೊಟ್ಟರು. ೧೩೦. "ಮೊಗ್ಗುಗಳ ಕುಚ್ಚನ್ನೂ ತಳಿರ ಗೊಂಚಲನ್ನೂ ಸುಂದರವಾಗಿ ಆಡುತ್ತಿರುವ ಕೊಂಬೆಗಳಲ್ಲಿನ ಮಿಡಿಗಾಯಿಗಳನ್ನೂ ಪ್ರೀತಿಸದೆ, ರಕ್ಷಿಸದೆ, ಸೊನೆ ಸುರಿಯುವಂತೆ ಹಿಂಸಾಚಾರಗಳಿಂದ ತರಿದು ನೋಯಿಸಿ ಕಾಡಿಸಿದೆವು. ಎಲೆ ಬಾಲಚೂತ! ಈ ಎಲ್ಲ ಅಪರಾಧಗಳನ್ನೂ ಮನಸ್ಸಿಗೆ ತಂದುಕೊಳ್ಳದೆ ನಾವೂ ನೀನೂ ಜೊತೆಯಲ್ಲಿದ್ದುದನ್ನು ಮಾತ್ರ ಸ್ಮರಿಸಿಕೊ!" ವ॥ ಎಂದು ಸಿಹಿಮಾವಿನ ಗಿಡವನ್ನು ಆಲಿಂಗಿಸಿಕೊಂಡರು. ೧೩೧. "ಎಲೆ ಲತೆಗಳೆ! ನಾನಾ ತೆರನಾದ ನಾಟ್ಯಭಂಗಿಗಳ ಮೂಲಕ ನಮ್ಮೊಡನಾದ ಸಹವಾಸವನ್ನು ನೀವೇ ನೆನೆಸಿಕೊಳ್ಳಿರಿ, ಅಗಲುವ ಈ ಸಮಯದಲ್ಲಿ ನಮ್ಮ ಮತ್ಸರವು ಕೊನೆಗೊಳ್ಳಲಿ. ಮತ್ತೆ ನಿಮಗೂ ನಮಗೂ ಸ್ನೇಹವು ಸಂಘಟಿಸಲಿ?" ವ॥ ಎಂದು ವನಲತೆಗಳನ್ನು ಪ್ರಾರ್ಥಿಸಿದರು. ೧೩೨. "ನಮ್ಮ ಕರ್ಣಾಭರಣ ಶಿರೋಭೂಷಣಗಳಿಗಾಗಿ ನಿಮ್ಮ ಎಳೆಚಿಗುರುಗಳಿಂದ ಶೋಭಿಸುತ್ತಿರುವ ಪುಷ್ಪಸ್ತಬಕಗಳನ್ನು ಹರಿದೆವು. ಆ ದೋಷಗಳನ್ನು ಗಣನೆಗೆ ತಂದುಕೊಳ್ಳದಿರಿ. ಕೇಲೀವನದ ವೃಕ್ಷಗಳೆ! ಚಿತ್ತಗೊಟ್ಟು ಪ್ರೀತಿಯಿಂದ ನಮ್ಮನ್ನು ಬೀಳ್ಕೊಡಿ. ನಿಮ್ಮನ್ನು ಪ್ರದಕ್ಷಿಣೆ ಮಾಡಿ ಹೋಗುವ ಈ ನಮ್ಮ ಸದ್ಭಾವನೆಯನ್ನು ಪ್ರೀತಿಯಿಂದ ಸ್ವೀಕರಿಸಿ!" ವ॥ ಎಂದು ವನವೃಕ್ಷಗಳನ್ನೊಡಂಬಡಿಸಿದರು. ೧೩೩. "ಓ ಕೋಗಿಲೆ, ಮನ್ಮಥನು ಈ ವನದ ಕಾವಲುಗಾರಿಕೆಯನ್ನು ನಿನಗೆ ಕೊಟ್ಟಿರುವಾಗ, ನೀನು 'ಪುಗಲಿಂ

ಇರು ಮೌನವ್ರತಮಂ ತಳೆ
ದರಣ್ಯದೊಳಗಾರ್ಗೆ ಮೆಱೆದಪ್ಪೆ ನಿನ್ನೆಸೆವಿಂ
ಚರಮಂ ಕಳಕೋಕಿಳ ಕಿ
ನ್ನರವೀಣಾಕ್ವಣಿತದಿಂಪನನುಕರಿಸುವುದಂ ೧೩೪

ವ|| ಎಂದು ಕೋಕಿಳಕುಳಮಂ ವಿಸರ್ಜಿಸಿ,

ಪೊಸತಲ್ತು ನಿನಗೆ ಪೂವಿನ
ಪೊಸಗಂಪೀಬನದೊಳೀಮೃಗೋದ್ಭವಗಂಧಂ
ಪೊಸತದನೋಲಗಿಸಿದೆವಿರು
ಕುಸುಮಾಸವರಸದೆ ತಣಿದು ನೀನಳಿಕುಳಮೇ ೧೩೫

ವ|| ಎಂದು ಮಧುಕರನಿಕರಮಂ ಬಿಡಿಸಿ,

ಮನದ ಪೊಡರ್ಪುಗುಂದದೆ ಲತಾಲಯಕೇಳಿವಿಹಾರದಲ್ಲಿ ನಂ
ದನವನವಿಭ್ರಮಭ್ರಮಣದಲ್ಲಿ ಸರೋವರದೀರ್ಘಿಕಾಂಬುಮ
ಜ್ಜನಯುತಲೀಲೆಯಲ್ಲಿ ಬರವೊಂದುಗುಮೀಗಳಿನೆಮ್ಮ ಪೋಗು ಗೆಂ
ಟನಿತೆಡೆಯಂ ತಗುಳ್ದು ಬರಲಾರ್ಪಿರೆ ನಿಮ್ಮ ವಿಳಾಸಯಾನದಿಂ ೧೩೬

ವ|| ಎಂದತಿಲಲಿತಗಮನಸಮುಚ್ಚಳಿತರಶನಾಕಳಾಪನೂಪುರಕಿಂಕಿಣೀಕ್ವಣಿತಾನುಸಾರಿಯಾಗಿ ಬರ್ಪ ರಾಜಹಂಸಮಂಡಳಮಂ ಮಗುಟ್ಚಿ ಬರ್ಪಾಗಳ್,

ಪುಗಲಿಂ' (ಒಳಗೆ ಹೊಗಬೇಡಿ, ಹೊಗಬೇಡಿ) ಎಂದು ಹೇಳುವುದು ತಪ್ಪಾಗುವುದೆ? ಚೀ! ಅದನ್ನು ನಾವು ನೆನೆಯುವುದಿಲ್ಲ. ನಿನ್ನ ಇಂಚರವನ್ನು ಮಾತ್ರ ಸದಾ ಸ್ಮರಿಸಿಕೊಳ್ಳುವೆವು! ೧೩೪. ಎಲೆ ಕೋಗಿಲೆ, ನೀನು ಮೌನವ್ರತವನ್ನು ಧರಿಸಿ ಇನ್ನು ಮೇಲೆ ಸುಮ್ಮನಿರು! ಕಿನ್ನರರ ವೀಣಾಧ್ವನಿಯ ಇಂಪನ್ನು ಅನುಕರಿಸುವ ನಿನ್ನ ಇಂಚರವನ್ನು ಈ ಅರಣ್ಯದಲ್ಲಿ ಯಾರಿಗಾಗಿ ಮೆರೆಸುವೆ?" ವ|| ಎಂದು ಕೋಗಿಲೆಗಳ ಸಮೂಹವನ್ನು ಬೀಳ್ಕೊಂಡರು. ೧೩೫. "ಈ ಹೂವಿನ ಹೊಸ ಸುಗಂಧವು ಈ ಕಾಡಿನಲ್ಲಿ ನಿಮಗೆ ಹೊಸತಲ್ಲ; ಈ ಕಸ್ತೂರೀಗಂಧವು ನಿಮಗೆ ಹೊಸತು. ಅದನ್ನು ನಿಮಗೆ ಕೊಟ್ಟು ಸತ್ಕರಿಸಿದೆವು. ಎಲೆ ದುಂಬಿವಿಂಡೆ, ಇನ್ನುಮೇಲೆ ಕುಸುಮಾಸವವನ್ನುಂಡು ತಣಿದಿರು!" ವ|| ಎಂದು ಹೇಳಿ ದುಂಬಿವಿಂಡನ್ನು ಬೀಳ್ಕೊಂಡರು. ೧೩೬. "ಲತಾ ಮಂದಿರದ ಕೇಳೀವಿಹಾರದಲ್ಲಿಯೂ ನಂದನೋದ್ಯಾನದಲ್ಲಿ ವಿಲಾಸಪ್ರಯುಕ್ತವಾದ ಸಂಚಾರದಲ್ಲಿಯೂ ಸರೋವರದ ಕಾಲುವೆಯ ಜಲಕ್ರೀಡೆಯಲ್ಲಿಯೂ ಮನಸ್ಸಿನ ಉತ್ಸಾಹವನ್ನು ಕಳೆದುಕೊಳ್ಳದೆ ಬರುವುದು ನಿಮಗೆ ಸಾಧ್ಯ. ಈಗ ನಾವು ಹೋಗತಕ್ಕ ದಾರಿ ದೂರ. ವಿಲಾಸಪ್ರಯುಕ್ತವಾದ ನಡಿಗೆಯಿಂದ ಅಷ್ಟು ದೂರ ನಮ್ಮನ್ನು ಹಿಂಬಾಲಿಸಿ ಬರಲು ನೀವು ಶಕ್ತರೇ? ವ|| ಎಂದು ಅತಿಮನೋಹರವಾದ ನಡಿಗೆಯಿಂದ ಚಲಿಸುವ ಒಡ್ಯಾಣ ಮತ್ತು ಅಂದುಗೆಗಳ ಕಿರುಗೆಜ್ಜೆಗಳ ಧ್ವನಿಯನ್ನು ಹಿಂಬಾಲಿಸಿ ಬರುತ್ತಿರುವ ರಾಜಹಂಸಗಳ ಮಂಡಲವನ್ನು ಹಿಂದಿರುಗಿಸಿ

ಪೊಳೆಯುತ್ತಿರ್ಪಕ್ಷವಿಕ್ಷೇಪದ ಪೊಳಪುಗಳಿಂದಾನನಶ್ರೀವಿಲಾಸಂ
ಗಳಿನಂಗೋಪಾಂಗದೊಳ್ ಸಂಗಳಿಸುವ ಪಲವುಂ ಭಂಗಿಯುಂ ಕೂಡೆ ನೀಲೋ
ತ್ಪಲಷಂಡಂ ಪದ್ಮಷಂಡಂ ಲಲಿತವನಲತಾಷಂಡಮುಂ ತಂಡತಂಡಂ
ಗಳಿನೀಬಂದಪ್ಪುದೆಂಬಂತೆಸೆದುದು ಭರತಾಂತಃಪುರಸ್ತ್ರೀಸಮೂಹಂ ೧೩೭

ವ|| ಅಂತು ವನವಿಹಾರಾನಂತರಂ ಭರತೇಶ್ವರಚಕ್ರವರ್ತಿ ವನಕುಸುಮಪಲ್ಲವೋಪಶೋಭಿತ ಲೀಲಾಪ್ರಸಾಧನಂ ಮದಾಂಧಸಿಂದುರಲೀಲೆಯಿಂ[illegible]ಮಂತಃಪುರಕರಿಣೀಗಣಂ ಬೆರಸು ಗಂಗಾಜಲಕ್ರೀಡಾ ಸಕ್ತ[illegible] ತತ್ಪರಿಸರಪ್ರದೇಶಮನೈಯ್ದಿವಂದು ಪಂಚಪ್ರಪಂಚರತ್ನಂಗಳೊಳಂ ಕೆದಱಿದ ಕಾಳಾಗರು ಕಾಶ್ಮೀರ[illegible]ಸ್ತೂರಿಕಪೂರ್ರಯಕ್ಷಕರ್ದಮಕ್ಷೋದದೊಳಂ ನದೀತರಂಗಂಗಳಂ ವಿಚಿತ್ರವರ್ಣಂಗಳಂ ಮಾಡಿ,

ಯುವತಿಜನಶಂಕೆಯಂ ಮು
ನ್ನವಯವದೊಳೆ ಪೊಕ್ಕು ಕಳೆದು ಸುರಸರಿದಂಭಃ
ಪ್ಲವದೊಳೆ ಚಕ್ರಧರಂ ದು
ಗ್ಧವಾರ್ಧಿಯೊಳ್ ನಿಂದ ಕನಕಗಿರಿಯನೆ ಪೋಲ್ತಂ ೧೩೮

ವ|| ಅಂತು ಚಕ್ರಧರನ ಕ್ರೀಡಾಪ್ರಾರಂಭಮಂ ಕಂಡು ನೀರಾಟಕ್ಕೆ ತಕ್ಕ ಪಸದನಂಗೊಂಡು ತಂಡತಂಡದಿಂ ಪುಗುವಾಗಳ್,

ಕಳಹಂಸೀಲೀಲೆ ನೀಲೋತ್ಪಳರುಚಿ ಕನಕಾಂಭೋಜಿನೀಲಕ್ಷ್ಮಿಭೃಂಗೀ
ವಳಯಂ ಶ್ರೀಚಕ್ರವಾಕದ್ವಯವಿಳಸನಮಂತಃಪುರಸ್ತ್ರೀಸಹಸ್ರಂ
ಗಳ ಮೆಯ್ಯೊಳ್ ತಾನೆ ತಳ್ತೊಪ್ಪುಯ್ದಸೆದುದು ಪೆಸರ್ಗೊಳ್ವಿಗ್ಗರಾರೆಂಬಿನಂ ನಿ
ರ್ಮಳಹಾರಸ್ವಚ್ಛನೀರಂ ಸೊಗಯಿಸಿತದು ಬೇಱೊಂದು ಗಂಗಾಪ್ರವಾಹಂ ೧೩೯

ಬಂದರು. ಆಗ ೧೩೭. ಹೊಳೆಯುತ್ತಿರುವ ಕಟಾಕ್ಷವಿಕ್ಷೇಪಗಳ ಹೊಳಪಿನಿಂದ ನೀಲೋತ್ಪಲಗಳೂ ಮುಖಶ್ರೀವಿಲಾಸದಿಂದ ಕಮಲಸಮೂಹವೂ ಅಂಗೋಪಾಂಗ ಗಳಲ್ಲುಂಟಾದ ಹಲವಾರು ವಿಧ ಭಂಗಿಗಳಿಂದ ಸುಂದರವಾದ ವನಲತೆಗಳ ಸಮೂಹವೂ ತಂಡತಂಡವಾಗಿ ಬರುತ್ತಿರುವಂತೆ ಭರತಚಕ್ರವರ್ತಿಯ ಅಂತಃಪುರಸ್ತ್ರೀಸಮೂಹವೆಸೆಯಿತು. ವ|| ವನವಿಹಾರದ ತರುವಾಯ ಭರತೇಶ್ವರಚಕ್ರವರ್ತಿಯು ಕಾಡುಹೂವುಗಳಿಂದಲೂ ಚಿಗುರುಗಳಿಂದಲೂ ಅಲಂಕಾರ ಮಾಡಿಕೊಂಡು ಮತ್ತಗಂಧಗಜಲೀಲೆಯಿಂದ ಅಂತಃಪುರ ಸ್ತ್ರೀಯರೆಂಬ ಹೆಣ್ಣಾನೆಗಳಿಂದ ಪರಿವೃತನಾಗಿ ಗಂಗೆಯಲ್ಲಿ ಜಲಕ್ರೀಡೆಯನ್ನು ನಡೆಸಲು ಗಂಗಾನದಿಯ ಪ್ರದೇಶವನ್ನು ಸೇರಿದನು. ಹೊಳೆಯುವ ಪಂಚರತ್ನಗಳಿಂದಲೂ ಕಾಲಾಗರು, ಕಾಶ್ಮೀರ, ಕಸ್ತೂರಿ, ಕರ್ಪೂರ ಮತ್ತು ಯಕ್ಷಕರ್ದಮ ಚೂರ್ಣಗಳಿಂದಲೂ ನದೀತರಂಗಗಳನ್ನು ವಿಚಿತ್ರವರ್ಣಗಳನ್ನಾಗಿ ಮಾಡಿದನು. ೧೩೮. ಯುವತಿಜನರ ಭಯವನ್ನು ಸುಲಭವಾಗಿ ಹೋಗಲಾಡಿಸಲು ಭರತನೇ ಸ್ವತಃ ಗಂಗಾನದಿಯ ಪ್ರವಾಹವನ್ನು ಹೊಕ್ಕನು. ಆಗ ಅವನು ಕ್ಷೀರಸಮುದ್ರದಲ್ಲಿ ನಿಂತ ಕನಕಗಿರಿಗೆಣೆಯಾದನು. ವ|| ಹಾಗೆ ಚಕ್ರಧರನ ಜಲಕ್ರೀಡಾರಂಭವನ್ನು ನೋಡಿ ನೀರಾಟಕ್ಕೆ ಯೋಗ್ಯವಾದ ಅಲಂಕಾರಗಳನ್ನು ಕೈಕೊಂಡು ಸ್ತ್ರೀಯರು ತಂಡತಂಡವಾಗಿ ಪ್ರವೇಶಿಸಿದರು. ಆಗ ೧೩೯. ಕಲಹಂಸಿಗಳ ಲೀಲೆ, ಕನ್ನೈದಿಲೆಗಳ ಕಾಂತಿ, ಕನಕ ಕಮಲಿನೀಕಾಂತಿ, ಹೆಣ್ದುಂಬಿಗಳ ಸಮೂಹ, ಚಕ್ರವಾಕಗಳೆರಡರ

ಜಳಕೇಳಿಯೊಳಧಿಪನನೆರ್ದೆ
ಗೊಳಿಸಿದುದಂತಃಪುರೀಜನಂಗಳ ಲೀಲಾ
ಕಿಳಕಿಂಚಿತ ಲಲಿತವಿಹೃ
ದ್ವಿಳಾಸವಿಚ್ಛಿತ್ತಿ ವಿಭ್ರಮಾದಿ ಗುಣಂಗಳ್ ೧೪೦

ಸರಸಿಜನೀಲೋತ್ಪಲಕರಿ
ಕರಹಂಸೀವದನರೂಪದಿಂ ನೆಱೆದಂತಃ
ಪುರಕಾಂತಾಕರತಳದೊಳ್
ಕರಮೆಸೆದುವು ಕನಕಶೃಂಗಕಂಗಳ್ ಪಲವುಂ ೧೪೧

ಜಲಕೇಳಿ ನಿಮಿರ್ಗೆ ಭರತನ
ಲಳಿತಾಂತಃಪುರದೊಳೆಂಬ ತನ್ನಱಿಕೆಯೊಳಾ
ಜಳದೇವಿ ಬೆಸಸೆ ಗಂಗಾ
ಜಳಮಾಯ್ತು ನಿತಂಬಿನೀ ನಿತಂಬದ್ವಯಸಂ ೧೪೨

ನವವಧುವ ಶಂಕೆಯಂ ಕಳೆ
ವ ವಿದಗ್ಧವಿಟಂಬೊಲಲೆವ ತೆರೆಗಳ್ ಮೆಲ್ಲಂ
ಬವರಿಸಿ ಸೋಂಕುತ್ತುಂ ಕಳೆ
ದುವು ಘನಕುಚಕಳಶಕುಂಕುಮಸ್ಥಾಸಕಮಂ ೧೪೩

ವಿಲಾಸ ಇವುಗಳು ಅಂತಃಪುರದ ಸ್ತ್ರೀಯರ ಮೈಯಲ್ಲಿ ತಾವಾಗಿ ಪ್ರಕಾಶಿಸಿದುವು. (ಅವರ ಅವಯವಗಳನ್ನು) ಹೆಸರು ಹಿಡಿದು ಕರೆಯುವ ದಡ್ಡರಾರು? ಎಂಬಂತೆ ನಿರ್ಮಲ ಮುಕ್ತಾಹಾರವೆಂಬ ನೀರುಳ್ಳ ಮತ್ತೊಂದು ಗಂಗಾಪ್ರವಾಹವು ಸುಂದರವಾಗಿ ಪ್ರಕಾಶಿಸಿತು.[1] ೧೪೦. ಜಲಕ್ರೀಡೆಯಲ್ಲಿ ಅಂತಃಪುರಸ್ತ್ರೀಯರ ಲೀಲೆ, ಕಿಲಕಿಂಚಿತ, ಲಲಿತವಿಹೃತಿ, ವಿಲಾಸ ವಿಚ್ಛಿತ್ತಿ, ವಿಭ್ರಮಾದಿ ಗುಣಗಳು ರಾಜನ ಮನಸ್ಸನ್ನು ಸಂತೋಷಗೊಳಿಸಿದುವು. ೧೪೧. ಕಮಲ, ನೀಲೋತ್ಪಲ, ಆನೆಯ ಸೊಂಡಿಲು ಮತ್ತು ಹಂಸಿಯ ಮುಖಗಳ ಆಕೃತಿಯಿಂದಿರುವ ಚಿನ್ನದ ಪಿಚಕಾರಿಗಳು ನೆರೆದಿದ್ದ ಅಂತಃಪುರದ ಸ್ತ್ರೀಯರ ಕರತಲದಲ್ಲಿ ಮೆರೆದುವು. ೧೪೨. ಸುಂದರರಾದ ಅಂತಃಪುರಸ್ತ್ರೀಯರೊಡನೆ ಭರತನ ಜಲಕೇಳಿಯು ವೃದ್ಧಿಹೊಂದಲಿ-ಎಂದು ಜಲದೇವತೆಯು ಪ್ರೀತಿಯಿಂದ ಆಜ್ಞಾಪಿಸಲು, ಗಂಗೆಯ ನೀರು ಸ್ತ್ರೀಯರ ಸೊಂಟದಷ್ಟು ಪ್ರಮಾಣವುಳ್ಳದ್ದಾಯಿತು. ೧೪೩. ನವವಧುವಿನ ಭಯವನ್ನು ಹೋಗಲಾಡಿಸಲು ಚದುರನಾದ ವಿಟನಂತೆ ಸುತ್ತ ಅಲೆಯುವ ತರಂಗಗಳು ಮೃದುವಾಗಿ ಸವರುತ್ತ ಸೋಂಕಿ ಸ್ಥೂಲವಾದ ಸ್ತನಕಲಶಗಳ ಕುಂಕುಮಲೇಪನವನ್ನು ತೊಡೆದುಹಾಕಿದುವು.

---

1 ಕಲಹಂಸೀಲೀಲೆ ಮೊದಲಾದುವು ಅಂತಃಪುರಸ್ತ್ರೀಯರ ಪಾದ, ನೇತ್ರ, ಮುಖ, ಕಣ್ಣುಗುಡ್ಡೆ, ಸ್ತನದ್ವಯಗಳಲ್ಲಿ ಕ್ರಮವಾಗಿ ಎಸೆಯಿತು. ಅವರ ಮುತ್ತಿನಹಾರವೇ ಗಂಗಾಜಲದಂತೆ ಕಾಣಿಸಿತು. ಅಂತಃಪುರಸ್ತ್ರೀಸಹಸ್ರವೇ ಮತ್ತೊಂದು ಗಂಗಾಪ್ರವಾಹ ಎಂದು ಅಭಿಪ್ರಾಯ.

ಅಲಘುನಿತಂಬದ ಪೊಯ್ಲೊಳ್
ನೆಲೆಮೊಲೆಯಳ್ಳೇಜೆನೊಳ್ ತರಂಗಂಗಳ್ ತೂ
ಳ್ದಲಱುಗುಮವಱಳ್ಳೇಜೆನೊ
ಳಲಱುಗುಮೆರ್ದೆ ತೆರೆಗಳಳಜೆ ತೂಳ್ವುದು ಪಿರಿದೇ ೧೪೪

ಮಂದರ ಪರ್ವತಮಮಂ ಸುರ
ಸೌಂದರಿಯರ್ ದುಗ್ಧಜಳದೆ ತಳಿವಂತೆವೊಲಾ
ನಂದೋದಯದಂತಃಪುರ
ಸೌಂದರಿಯರ್ ತಳಿದರಾದಿದೇವಾತ್ಮಜನಂ ೧೪೫

ವ|| ಆಗಳಮೃತಕಿರಣನಮೃತಜಲಂಗಳಿಂ ಕುಮುದಿನಿಗಳಂ ತಳಿವಂತೆ,

ಕಳಿಕಾಸಂದೋಹಮಂ ಪೊಣ್ಮುವ ಪುಳಕಚಯಂ ಪಲ್ಲವೋಲ್ಲಾಸಮಂ ಕೆಂ
ದಳಮೆತ್ತಂ ಪೊದಟ್ದಿರ್ಪಲರ್ಗಳನಲರ್ಗಣ್ಪೊಲ್ತು ಕೈಮಿಕ್ಕು ಚೆಲ್ವಿಂ
ಪೊಳೆಯುತ್ತಿರ್ಪನ್ನೆಗಂ ಕುಂಕುಮದ ಕದಡಿನೊಳ್ ಕೆಂಕಮಾಗಿರ್ದ ನೀರಂ
ತಳಿದಂ ಶುದ್ಧಾಂತಕಾಂತಾಲತಿಕೆಗಳನತಿಪ್ರೀತಿಯಿಂ ರಾಜರಾಜಂ ೧೪೬

ಸುರ್ಕಟಿದುರುಳಿಗುರುಳ್ ನಸು
ಸುರ್ಕಿದ ಕುಚಚೂಚುಕಂ ಬೆಳರ್ತಧರಂ ನೀರ್
ಪೊರ್ಕುಟಿಯೊಳ್ ಜೋಲ್ದುಳ್ಳುಡೆ
ಸಾರ್ಕೆಯೊಳೇಂ ನೃಪನ ಮನಮನಳವಡಿಸಿದುದೋ ೧೪೭

೧೪೪. ದಪ್ಪವಾದ ನಿತಂಬದ ಹೊಡೆತದಿಂದಲೂ ಸ್ತನಗಳ ಇರಿತದಿಂದಲೂ ಅಲೆಗಳು ಮುನ್ನುಗ್ಗಿ ವಿಸ್ತಾರಗೊಂಡವು. ನಿತಂಬ ಮತ್ತು ಸ್ತನಗಳ ಪ್ರಹಾರಗಳಿಂದ ಹೃದಯವೇ ಹಿಗ್ಗುತ್ತದೆ! ಅಲೆಗಳು ವಿಸ್ತಾರಗೊಂಡು ಮುನ್ನುಗ್ಗುವುದು ಹೆಚ್ಚೆ! ೧೪೫. ಮಂದರಪರ್ವತದ ಮೇಲೆ ಸುರಸುಂದರಿಯರು ದುಗ್ಧಜಲವನ್ನೆರಚುವಂತೆ ಆನಂದದಿಂದ ಅಂತಃಪುರದ ಸುಂದರಿಯರು ಆದಿದೇವನ ಮಗನಾದ ಭರತನ ಮೇಲೆ ನೀರೆರಚಿದರು. ವ|| ಆಗ ಚಂದ್ರನು ಅಮೃತಜಲವನ್ನು ಕುಮುದಿನಿಗಳ ಮೇಲೆ ಎರಚುವಂತೆ, ೧೪೬. ಕುಂಕುಮವನ್ನು ಕದಡಿ ಕೆಂಪಾದ ನೀರನ್ನು ಅರಮನೆಯ ಕಾಂತೆಯರೆಂಬ ಬಳ್ಳಿಗಳ ಮೇಲೆ ಪ್ರೀತಿಯಿಂದ ಭರತಚಕ್ರವರ್ತಿಯು ಎರಚಿದನು. ಕಾಂತೆಯರ ರೋಮಾಂಚಗಳು ಮೊಗ್ಗುಗಳ ಸಮೂಹವನ್ನು ಹೋಲಿದುವು. ಕೆಂಪಾದ ಅಂಗೈ ಪಲ್ಲವೋಲ್ಲಾಸವನ್ನು ಹೋಲಿತು. ಅಲರ್ಗಣ್ಣುಗಳು ಸುತ್ತಲೂ ಹರಡಿದ ಹೂವುಗಳನ್ನು ಹೋಲಿದುವು. ಹೀಗೆ ಅತಿಶಯವಾದ ಚೆಲ್ವಿನಿಂದ ಕಾಂತಾಲತೆಯರು ಬೆಳಗಿದರು. ೧೪೭. ಕಾಂತೆಯರ ನೆಟ್ಟಗಾದ ಗುಂಗುರುಕೂದಲು, ಕೊಂಚ ಸುಕ್ಕಿಹೋದ ಚೂಚುಕ, ಬಿಳುಪೇರಿದ ತುಟಿ, ಹೊಕ್ಕಳಲ್ಲಿಳಿದ ನೀರು, ಜಾರಿದಬಟ್ಟೆ-ಇವುಗಳ ಸಾಮೀಪ್ಯದಿಂದ ನೃಪನ ಮನಸ್ಸಿಗೆ

ಕಳೆದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ
ಬಳೆಯಿಸಿದತ್ತು ಕಣ್ಗೆಸೆವ ರಾಗಮನೆಯ್ದಿಸಿ ಕೇಶಹಸ್ತಮಂ
ಚಳಯಿಸಿದತ್ತು ಮೆಯ್ಗೆ ಪುಳಕೋದಯಮಂ ಪಡೆದತ್ತು ತಲ್ಲತಾ
ಲಳಿತೆಯರ್ಗಿತ್ತುದಿಂತು ಜಲಕೇಳಿ ಮನೋಭವಕೇಳಿಲೀಲೆಯಂ ೧೪೮

ಅಂತು ಬೆಳರ್ತಧರಂ ಕ
ಣ್ಣಿಂ ತುಳ್ಕುವ ಕೆಂಪು ಸರದ ನಡುಕಂ ಮಿಗೆ ತ
ನ್ನಂತಃಪುರಲಲನೆಯರ್ಗೆ ರ
ತಾಂತದ ವಿಭವಮನೆ ಮಾಡಿ ತಾಂ ಪೊಱಮಟ್ಟಂ ೧೪೯

॥ ಮಾಲಿನೀ ॥

ಮನಸಿಜನೃಪಲೀಲಾಲಾಂಛನಂ ಸ್ವಸ್ತಿಕಂ ಸ್ತ್ರೀ
ಜನದೊಳೆಸೆದು ನಿಂದತ್ತುತ್ತರೀಯಾಂತರೀಯಂ
ತೊನೆಯೆ ತೊಲಗಿ ನಿಂದಿರ್ದಲ್ಲಿ ತಂದಿತ್ತುದುಚ್ಚ
ಸ್ತನದೊಳಮರ್ದಹಸ್ತಸ್ವಸ್ತಿಕಂಗಳ್ ಬೆಡಂಗಂ ೧೫೦

ಮಱಸಿರ್ದಂಬರಮೆಯ್ದೆ ನಾಂದ ತನುವಂ ಪತ್ತಿರ್ದು ಕಣ್ಗೆಲ್ಲಿಯುಂ
ತೆಱಪಂ ಮಾಡಿ ಮನೋಜಚಕ್ರಿಯ ಜಯಶ್ರೀರಾಜ್ಯಚಿಹ್ನಂಗಳಂ
ಮೆಱೆದೊಂದಂದದಿನೀಕ್ಷಣಕ್ಕೆ ಪರಮಾನಂದಾಮೃತಂ ಸಾರ್ವಿನಂ
ಮೆಱೆದರ್ ಚಕ್ರಿಯ ಮುಂದೆ ತತ್ಕೃತವಿಚಿತ್ರಾನಂಗಚಿಹ್ನಂಗಳಂ ೧೫೧

ವ॥ ಅಂತು ಜಲಕ್ರೀಡಾವಿನೋದಂಗಳಂ ನಿರ್ವರ್ತಿಸಿದಾಗಳ್,

ಸಂತೋಷವುಂಟಾಯಿತು. ೧೪೮. ಜಲಕೇಳಿಯು ಆ ಕಾಂತೆಯರ ಪತ್ರರಚನೆಯ ಬೆಡಗನ್ನು ಹೋಗಲಾಡಿಸಿತು. ವಕ್ರವಾದ ಮುಂಗುರುಳುಗಳನ್ನು ನೀಳವಾಗಿಸಿತು. ಕಣ್ಣುಗಳಲ್ಲಿ ಕೆಂಪನ್ನು ಹೆಚ್ಚಿಸಿತ್ತು, ಕೇಶರಾಶಿಯನ್ನು ಆಡಿಸಿತು, ಮೈಯಲ್ಲಿ ಪುಲಕೋದಯವನ್ನು ತಂದಿತು. ಹೀಗೆ ಲತಾಕೋಮಲೆಯರಿಗೆ ಜಲಕೇಳಿಯು ಮನ್ಮಥಕೇಳೀಲೀಲೆಯನ್ನುಂಟುಮಾಡಿತು. ೧೪೯. ಅಂತು ಬಿಳುಪೇರಿದ ತುಟಿಗಳೂ ಕಣ್ಣುಗಳಲ್ಲಿ ತುಳುಕಾಡುವ ಕೆಂಪೂ ಸ್ವರದ ನಡುಕವೂ ಅತಿಶಯವಾಗಿ ಅಂತಃಪುರಸ್ತ್ರೀಯರಿಗುಂಟಾಯಿತು. ಹೀಗೆ ಭರತನು ಅವರಿಗೆ ರತಾಂತದ ಸೊಗಸನ್ನು ತಂದುಕೊಟ್ಟು ನದಿಯಿಂದ ಹೊರಬಂದನು. ೧೫೦. ಮನ್ಮಥರಾಜನ ಲೀಲಾಲಾಂಛನವಾದ ಸ್ವಸ್ತಿಕವು ಸ್ತ್ರೀಜನರಲ್ಲಿ ಎಸೆದು ನಿಂತಿತು. ಹೊದೆಯುವ ಮತ್ತು ಉಡುವ ಬಟ್ಟೆಗಳು ಅಲುಗಾಡಿ ತೊಲಗಲು ಉಚ್ಛಸ್ತನಗಳ ಮೇಲೆ ಸ್ವಸ್ತಿಕಾಕಾರದಲ್ಲಿಟ್ಟ ಹಸ್ತಗಳು ಅವರಿಗೆ ಬೆಡಗನ್ನು ತಂದೊಡ್ಡಿದುವು. ೧೫೧. ಮೈಮುಚ್ಚಿದ ಸ್ತ್ರೀಯರ ಬಟ್ಟೆಗಳು ಒದ್ದೆಯಾದ ದೇಹಕ್ಕೆ ಅಂಟಿಕೊಂಡು, ಮನ್ಮಥಚಕ್ರವರ್ತಿಯ ಜಯಶ್ರೀ ರಾಜ್ಯಚಿಹ್ನೆಗಳನ್ನು ತೆರಪುಮಾಡಿ ಕಣ್ಣಿಗೆ ಕಾಣಿಸಿದವು! (ಸ್ತ್ರೀಯರ ಅವಯವಗಳು ಕಂಡವೆಂದು ಅಭಿಪ್ರಾಯ). ಚಕ್ರವರ್ತಿಯಾದ ಭರತನಿಗೆ ಪರಮಾನಂದ ಉಂಟಾಗುವಂತೆ ತಮ್ಮ ಅಂಗಗಳಲ್ಲಿ ಆತನು ಮಾಡಿದ ಅನೇಕ ಬಗೆಯ ಮನ್ಮಥಚಿಹ್ನೆಗಳನ್ನು (ನಖಕ್ಷತಾದಿಗಳನ್ನು) ಸ್ತ್ರೀಯರು ಮೆರೆಸಿದರು. ವ॥ ಹಾಗೆ ಜಲಕ್ರೀಡಾವಿನೋದಗಳನ್ನು ಮಾಡಿ ಮುಗಿಸಿದರು. ಆಗ,

ಉದಿರ್ದಲ್ಲೊಕ್ಕ ವಿಚಿತ್ರಪುಷ್ಪಚಯದಿಂ ತದ್ಗಂಧಸಂಸಕ್ತಷ
ಟ್ಪದದಿಂ ಸ್ತ್ರೀಕುಚಕುಂಭಕುಂಕುಮರಜಃಕಲ್ಲೋಳದಿಂ ಬಣ್ಣವ
ಣ್ಣದ ಚೆಲ್ವಂ ಗೆಡೆಗೊಂಡು ಚಿತ್ರಿತಪತಾಕಾಲೀಲೆಯಂ ತಾಳ್ದಿ ನಿಂ
ದುದು ಗಂಗಾನದಿ ಚಕ್ರವರ್ತಿಯ ಸಮಸ್ತಾಂತಃಪುರಕ್ರೀಡೆಯೊಳ್ ೧೫೨

ಧರೆಯೊಳ್ ಸಂದಿರ್ದ ಗಂಗಾನದಿಗೆ ಜಯಸಮಾರಂಭನಿಶ್ಶೇಷದಿಕ್ಸಂ
ಚರಣಾಕ್ಷುಣ್ಣಾವಗಾಹಾಗತಕರಟಶಿರಃಪೀಠಸಿಂದೂರಪಾಂಸೂ
ತ್ಕರದಿಂ ಸೀಮಂತಸಿಂದೂರದ ವಿರಚನೆಯಂ ಕೂಡೆ ಮಾಡುತ್ತುಮಿರ್ದಂ
ಭರತೇಶಂ ತತ್ತಟೀನಂದನವಿಟಪಿತಟಚ್ಛಾಯವಿಶ್ರಾಂತಸೈನ್ಯಂ ೧೫೩

ವನಲಕ್ಷ್ಮೀಲೀಲೆಯಂ ತದ್ವನಕುಸುಮದಳಂಕಾರದಿಂ ತಾಳ್ದುತುಂ ಯೌ
ವನಲಕ್ಷ್ಮೀಲೀಲೆಯಂ ತನ್ನೊಡನೆ ಮೆಱೆಯುತುಂ ತನ್ನ ಶುದ್ಧಾಂತಕಾಂತಾ
ಜನಮೊಪ್ಪಿರ್ದಲ್ಲಿ ನಾನಾ ವನಕುಸುಮಲತೋತ್ತಂಸಕರ್ಣಾವತಂಸಂ
ಮನುವಂಶಂ ಶೋಭೆವೆತ್ತಂ ಸುಕವಿಜನಮನೋಮಾನಸೋತ್ತಂಸಹಂಸಂ ೧೫೪

೧೫೨. ಕೆಳಗುದುರಿದ ಚಿತ್ರವಿಚಿತ್ರವಾದ ಪುಷ್ಪಗಳ ಸಮೂಹಗಳಿಂದಲೂ ಆ ಪುಷ್ಪಗಳಲ್ಲಿ ಗಂಧಕ್ಕೆರಗಿದ ದುಂಬಿಗಳಿಂದಲೂ ಸ್ತ್ರೀಯರ ಕುಂಭಗಳಂತಿರುವ ಕುಚಗಳಲ್ಲಿನ ಕುಂಕುಮಧೂಳಿಗಳಿಂದ ಮಿಶ್ರಿತವಾದ ದೊಡ್ಡ ಅಲೆಗಳಿಂದಲೂ ಬಣ್ಣಬಣ್ಣದ ಚೆಲ್ವಿಗೆಡೆಯಾದ ಗಂಗಾನದಿಯು ಚಕ್ರವರ್ತಿಯ ಎಲ್ಲ ಅಂತಃಪುರಸ್ತ್ರೀಯರ ಜಲಕ್ರೀಡೆಗಳಿಗೆ ಸಂಬಂಧಿಸಿದ ಬಣ್ಣ ಬಣ್ಣದ ವಿಜಯ ಬಾವುಟದ ಲೀಲೆಯನ್ನು ತಳೆಯಿತು. ೧೫೩. ಭರತನು ಗಂಗಾನದೀತೀರದಲ್ಲಿದ್ದ ಉದ್ಯಾನವನದ ಮರಗಳ ನೆರಳಲ್ಲಿ ತನ್ನ ಸೈನ್ಯಕ್ಕೆ ವಿಶ್ರಾಂತಿಯನ್ನಿತ್ತನು. ವಿಜಯಯಾತ್ರೆಯಲ್ಲಿ ಸಕಲ ದಿಕ್ಕುಗಳನ್ನೂ ಸಂಚರಿಸಿದ್ದರಿಂದ ಚೆನ್ನಾಗಿ ಸ್ನಾನಮಾಡಬೇಕೆಂದು[1] ಆನೆಗಳು ಗಂಗಾನದಿಯಲ್ಲಿ ಇಳಿದುವು. ಆಗ ಅವುಗಳ ಕುಂಭಸ್ಥಳದ ಸಿಂದೂರಚೂರ್ಣದಿಂದ ಭರತನು ಗಂಗೆಯ ಬೈತಲೆಗೆ ಸಿಂದೂರವನ್ನು ಹಚ್ಚಿದಂತಾಯಿತು! ಹೀಗೆ ಮಾಡುತ್ತ ಭರತನು ಅಲ್ಲಿ ಇದ್ದನು. ೧೫೪. ಭರತನ ಅಂತಃಪುರಸ್ತ್ರೀಯರು ಅವನ ಕುಸುಮಗಳ ಅಲಂಕಾರದಿಂದ ವನಲಕ್ಷ್ಮೀ ಲೀಲೆಯನ್ನು ತಳೆದು ಯೌವನದ ಸೊಗಸನ್ನು ಭರತನೊಡನೆ ಮೆರೆಸುತ್ತ ಪ್ರಕಾಶಿಸಿದರು. ಸುಕವಿಜನಮಾನಸೋತ್ತಂಸಹಂಸನಾದ ಮನುವಂಶದಲ್ಲೊಗೆದ ಭರತನು

---

1 ಮೂಲದಲ್ಲಿ 'ಸಂಚರಣಕ್ಷುಣ್ಣಾವಗಾಹ' ಎಂಬ ಪಾಠವಿದ್ದಲ್ಲಿ ತಿರುಗಾಟದಿಂದ ಮೇಲೆದ್ದ ಸಿಂಧೂರವೆಂಬ ಧೂಳಿನ ರಾಶಿಯಿಂದ ಎಂದರ್ಥವಾಗುತ್ತದೆ.

ವನಕೇಳೀವಿಭವಂ ಸಲೀಲಸಲಿಲಕ್ರೀಡಾವಿಳಾಸಂ ಸಮ
ಸ್ತನಿಜಾಂತಃಪುರದೊಳ್ ಪೊದಟ್ಟೆಸೆಯೆ ಕಣ್ಗೊಂಡುಂ ಮನಂಗೊಂಡುಮಿಂ
ದ್ರನೆ ಭೋಗೀಂದ್ರನೆ ಖೇಚರೇಂದ್ರನೆ ದಲೀ ಭೂಪೇಂದ್ರನೆಂಬನ್ನೆಗಂ
ಮನುವಂಶಪ್ರಭು ಬೀಡಿನತ್ತ ತಳರ್ದಂ ಸಂಸಾರಸಾರೋದಯಂ ೧೫೫

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾ
ಪ್ರಸರ ಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ದಿಗ್ವಿಜಯಪ್ರಾರಂಭನಿರೂಪಣಂ
ಏಕಾದಶಾಶ್ವಾಸಂ

ವಿವಿಧವಾದ ಹೂವುಗಳನ್ನು ತಲೆಯ ಮೇಲೆಯೂ ಕಿವಿಗಳಲ್ಲಿಯೂ ಧರಿಸುತ್ತ ಪ್ರಕಾಶಿಸಿದನು. ೧೫೫. ವನಕ್ರೀಡೆಯ ವೈಭವದಿಂದ ಮೆರೆದು, ವಿಲಾಸದಿಂದ ಜಲಕ್ರೀಡೆಯನ್ನಾಡಿ ಸಮಸ್ತ ಅಂತಃಪುರಸ್ತ್ರೀಯರೊಡನೆ ಕಣ್ಣಿಗೆ ಅಂದವಾಗಿ ಮನಸ್ಸಿಗೆ ಆಕರ್ಷಕವಾಗಿ ಭರತನು ಎಸೆದನು. ಅನಂತರ ದೇವೇಂದ್ರನೋ ಭೋಗೀಂದ್ರನೋ ಖಚರೇಂದ್ರನೋ ಎಂಬಂತೆ ಸಂಸಾರಸಾರೋದಯನಾದ ಮನುವಂಶಪ್ರಭುವಾದ ಭೂಪೇಂದ್ರ ಭರತೇಶನು ತನ್ನ ಶಿಬಿರದ ಕಡೆಗೆ ಹೊರಟನು.

ಇಂತು ದಿಗ್ವಿಜಯಪ್ರಾರಂಭ ನಿರೂಪಣವೆಂಬ
ಹನ್ನೊಂದನೆಯ ಆಶ್ವಾಸ ಮುಗಿಯಿತು.

# ದ್ವಾದಶಾಶ್ವಾಸಂ

ಶ್ರೀವರನೊಡನೆಯೆ ವನಜಳ
ದೇವತೆಗಳ್ ಬರ್ಪುವೆನಿಸಿ ತನ್ನೊಡವರೆ ಮಾ
ದೇವಿಯರೇನೆಸೆದನೊ ಧೃತ
ಲಾವಣ್ಯರಸಂ ಸರಸ್ವತೀಮಣಿಹಾರಂ ೧

ವ॥ ಅಂತು ಭರತೇಶ್ವರಚಕ್ರವರ್ತಿನಿಜಸ್ಥಪತಿರತ್ನವಿರಚಿತ ಮಣಿಮಯರಾಜಮಂದಿರಮಂ ಪುಗುವುದುಂ, ಆ ಪ್ರಸ್ತಾವದೊಳಂತಃಪುರದ ಪೂಸಿದ ಕಾಶ್ಮೀರರಾಗಮುಂ ಉಟ್ಟ ಕೌಸುಂಭಾಂಬರ ರುಚಿಯುಂ ತೊಟ್ಟ ಪದ್ಮರಾಗಾಭರಣಕಿರಣಂಗಳುಂ ಸಂಕ್ರಮಿಸಿದಂತೆ,

ಒಳಕೊಂಡ ಕೆಂಪಿನಿಂ ದಿನ
ವಳಯಂ ಪೊಲ್ತಿರ್ದುದಪರದಿಗ್ವಧು ಭೂಭೃ
ತ್ತಿಳಕಂಗೆ ಪಿಡಿವ ಬಗೆ ಕೈ
ಕೊಳೆ ಬೆಳಗಿದ ಪದ್ಮರಾಗಮಣಿದರ್ಪಣಮಂ ೨

ವ॥ ಆಗಳ್ ವೃಷಭೇಶ್ವರನಂದನಂ ಸಂಧ್ಯಾಸಮಯೋಚಿತ ಜಿನೇಂದ್ರವಂದನಾಕುತೂಹಲಿತಾಂತಃಕರಣನಾಗಿ,

ಬೆಳಗುವ ಕೈದೀವಿಗೆಗಳ
ಬೆಳಗುಂ ತರತರದಿನೊಗೆವ ತಾರಗೆಗಳ ಗೊಂ
ದಳಮುಮಿಳಾತಳದ ವಿಯ
ತ್ತಳದ ವಿಳಾಸಮನದೇನೊಡಂಬಡಿಸಿದುದೋ ೩

೧. ಸರಸ್ವತೀಮಣಿಹಾರನೂ ಲಾವಣ್ಯರಸಯುಕ್ತನೂ ಆದ ಭರತಚಕ್ರವರ್ತಿಯು ಶ್ರೀಕಾಂತನೊಡನೆ ವನಜಲದೇವತೆಗಳು ಬರುತ್ತಿರುವರೋ ಎಂಬಂತೆ ಜೊತೆಯಲ್ಲಿ ಅರಸಿಯರು ಬರುತ್ತಿರಲು ಅದೆಷ್ಟು ಪ್ರಕಾಶಿಸಿದನೊ. ವ॥ ಅಂತು ಭರತೇಶ್ವರಚಕ್ರವರ್ತಿಯು ತನ್ನ ಶ್ರೇಷ್ಠಶಿಲ್ಪಿಯಿಂದ ವಿರಚಿತವೂ ಮಣಿಮಯವೂ ಆದ ಅರಮನೆಯನ್ನು ಹೊಕ್ಕನು. ಆ ಸಮಯದಲ್ಲಿ ಅಂತಃಪುರದ ಸ್ತ್ರೀಯರು ಹಚ್ಚಿಕೊಂಡ ಕೇಸರಿಬಣ್ಣವೂ ಉಟ್ಟ ಕೌಸುಂಭವಸ್ತ್ರದ ಕಾಂತಿಯೂ ತೊಟ್ಟ ಪದ್ಮರಾಗಮಣಿಗಳಿಂದ ನಿರ್ಮಿತವಾದ ಆಭರಣಗಳ ಕಿರಣಗಳೂ ಸೇರಿದಂತೆ ೨. ಸೂರ್ಯಮಂಡಲವು ಕೆಂಪಾಗಿ ಹೊಳೆಯಿತು. ಪಶ್ಚಿಮ ದಿಗಂಗನೆಯು ಆ ಭರತರಾಜನಿಗೆ ಪದ್ಮರಾಗ ಮಣಿಮಯವಾದ ಕನ್ನಡಿಯನ್ನು ಹಿಡಿದಳೋ ಎಂಬಂತೆ ಸೂರ್ಯಮಂಡಲವು ಬೆಳಗಿತು. ವ॥ ಆಗ ವೃಷಭೇಶ್ವರನ ಪುತ್ರನಾದ ಭರತನು ಸಂಧ್ಯಾಕಾಲಕ್ಕೆ ತಕ್ಕುದಾದ ಜಿನೇಂದ್ರನ ವಂದನೆಯಲ್ಲಿ ಕುತೂಹಲಾವಿಷ್ಟವಾದ ಮನಸುಳ್ಳವನಾದನು. ಆಗ ೩. ಜ್ವಲಿಸುತ್ತಿರುವ ಕೈದೀವಿಗೆಗಳ ಬೆಳಕೂ ತರತರವಾಗಿ ಬೆಳಗುವ ತಾರೆಗಳ ಸಮೂಹವೂ ಭೂತಳ ವಿಯತ್ತಳಗಳ ವಿಲಾಸವನ್ನು ಏಕಕಾಲದಲ್ಲಿ

ಭರತನನೋಲಗಿಸಲ್ಬಂ
ದರಸುಗಳ ಕಿರೀಟಪದ್ಮರಾಗಪ್ರಭೆಗಳ್
ಪರೆವಂತೆ ಪರೆದು ಕೌಸುಂ
ಭರಾಗರಮಣೀಯಮಾಯ್ತು ಸಂಧ್ಯಾರಾಗಂ ೪

ವ|| ತದನಂತರದೊಳ್ ತದಾಸ್ಥಾನಮಂಟಪದೊಳ್ ಬೆಳಗುವ ಕೈದೀವಿಗೆಗಳ ಬೆಳಗುಗಳೊಳಂ ಬಳ್ವಳಬಳೆದು ನಿಮಿರ್ವ ಕಾಡಿಗೆಗುಡಿಗಳ ಮಹೇಂದ್ರನೀಲಮರಕತಮಣಿಭವನಂಗಳ ವಿಜಯಕಟಕಸಮದಗಜ [ಸಮಜಂಗಳ][೧] ಕರ್ಪುಗಳೆಲ್ಲಮಂ ನೆರಂಬಡೆದು,

ಬಳೆದ ತಮೋಮದೇಭಘಟೆಯೊಡ್ಡೊಡೆವನ್ನೆಗಮುನ್ನತೋದಯಾ
ಚಳಗುಹೆಯಿಂ ಲಸತ್ಕಿರಣಕೇಸರಮಂ ಪರಪುತ್ತುಮಾಗಳಾ
ಗುಳಿಸುವ ಬಾಯ ಕೆಂಪನುದಯಂಗೆಯೆ ಪೊಣ್ಮುವ ಕೆಂಪು ಪೋಲ್ವಿನಂ
ತಳರೆ ಬೆಡಂಗಿನೊಳ್ ಪುದಿದುದೆಬ್ಬರಮುದ್ಗತಚಂದ್ರಸಿಂಹದಾ ೫

ನೆರೆದೈ ಸಂಜೆಯೊಳೆಂದು ಕಾಯ್ದೊದೆದೊಡೇನಾತ್ಮಾಂಗದೊಳ್ ರೋಹಿಣೀ
ಚರಣಾಲಕ್ತಕರಾಗಮಚ್ಚಿರಿದುದೋ ಮೇಣ್ ಕಾಮಿಗಳ್ಗೀವ ರಾ
ಗರಸಂ ಪೊಣ್ಮಿದುದೋ ತಮೋಗಜದ ಕೋಡೇಚೆಂದಮೇಂ ನೊಂದುದೋ
ಹರಿಣಂ ಮೇಣೆನಿಸಿತ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ* ೬

ಅತಿಶಯವಾಗುಂಟುಮಾಡಿದುವು. ೪. ಭರತನನ್ನು ಓಲಗಿಸಲು ಬಂದ ರಾಜರ ಕಿರೀಟಗಳಲ್ಲಿನ ಪದ್ಮರಾಗಕಾಂತಿಗಳು ಹರಡಿದಂತೆ ಹರಡಿ ಸಂಧ್ಯಾರಾಗವು ಕೌಸುಂಭರಾಗದಂತೆ ರಮಣೀಯವೆನಿಸಿತು. ವ|| ಬಳಿಕ ಅವನ ಆಸ್ಥಾನಮಂಟಪದಲ್ಲಿ ಬೆಳಗುವ ಕೈದೀವಿಗೆಗಳ ಬೆಳಕಿನಲ್ಲಿ ಅತಿಶಯವಾಗಿ ಬಳೆದೆದ್ದು ನಿಮಿರುವ ಕಾಡಿಗೆಯ ತುದಿಗಳ ಕಪ್ಪೂ ಮಹೇಂದ್ರನೀಲ ಮತ್ತು ಮರಕತಮಣಿಭವನಗಳ ಕಪ್ಪೂ ವಿಜಯಾರ್ಥವಾಗಿ ಹೊರಟ ಉನ್ಮತ್ತಗಜಗಳ ಕಪ್ಪೂ ಒಟ್ಟಾಗಿ ಕಲೆತು, ೫. ಸಾಂದ್ರವಾದ ಆ ಕತ್ತಲೆಯೆಂಬ ಮದ್ದಾನೆಗಳ ಗುಂಪನ್ನೊಡೆಯುವುದಕ್ಕಾಗಿಯೇ ತುಂಗವಾದ ಉದಯಪರ್ವತದ ಗುಹೆಯಿಂದ ಕಿರಣಗಳೆಂಬ ಕೇಸರಗಳನ್ನು ಹರಡುತ್ತಾ ತೆರೆದ ಬಾಯ ಕೆಂಪುಬಣ್ಣವನ್ನು ಚಂದ್ರೋದಯವಾದ ಕೆಂಪು ಹೋಲಿಬಂದು ಚಂದ್ರನೆಂಬ ಸಿಂಹದ ಉದಯವಾಯಿತು. ೬. ಸಂಧ್ಯಾಂಗನೆಯೊಡನೆ ಸಂಗಮವೆಸಗಿದನೆಂಬ ಕೋಪಾತಿರೇಕದಿಂದ ಶರೀರವನ್ನೊದೆಯಲು ರೋಹಿಣಿಯ ಕಾಲಿನ ಅರಗಿನ ಬಣ್ಣವು ಮುದ್ರಿತವಾಯಿತೋ ಕಾಮಿಗಳಿಗೀವ ರಾಗರಸವುಕ್ಕಿತೋ ಕತ್ತಲೆಂಬ ಆನೆಯ ಕೊಂಬಿನ ಗಾಯದಿಂದ ಜಿಂಕೆಯು ನೊಂದಿತೋ ಎಂಬಂತೆ ರಕ್ತಕಾಂತಿಯಿಂದ ಚಂದ್ರನ ಬಿಂಬವು ಬೆಳಗಿತು.

೧ 'ಸಾಮಜಂಗಳ', 'ಸಾಮಜಂಗಳ' (ಅನ್ಯತ್ರ) ಸಮಜ = ಸಮೂಹ.

* ಈ ಪದ್ಯವು ಪಂಪಭಾರತ ೪-೫೦ರಲ್ಲಿ ಬಂದಿರುವುದರಿಂದ ಇದು ಇಲ್ಲಿ ಪ್ರಕ್ಷಿಪ್ತವಾಗಿರಬಹುದು.

॥ ಪೃಥ್ವೀ ॥

ಅದೊಂದಿನಿಸುಬೇಗದಿಂ ನವಜಪಾಪ್ರಸೂನಾಭಮಾ
ಯ್ತದೊಂದಿನಿಸುಬೇಗದಿಂ ಕನಕಕುಂಭದಂತಾಯ್ತು ಮ
ತ್ತದೊಂದಿನಿಸುಬೇಗದಿಂ ಮೃದುಮೃಣಾಳಸಂಕಾಶಮಾ
ಯ್ತದೇಂ ಬಟಿಕೆ ಬಿಂಬದುಜ್ವಳಿಕೆಯೋ ಸುಧಾಸೂತಿಯಾ ೭

ವ॥ ಅಂತು ಪುರಂದರದಿಗ್ವಧೂವದನಮಂಗಳಮಣಿದರ್ಪಣಮುಮನಿಂದ್ರಗಜೇಂದ್ರಧವಳ ಕರ್ಣಚಾಮರಮುಮನನುಕರಿಸಿ,

ತ್ರಿಜಗತ್‌ಸಾಶ್ಚರ್ಯದಂಡಸ್ಥಪತಿಗೃಹಪತಿಚ್ಛತ್ರಯೋಷಿತ್ಪುರೋಧೋ
ಗಜನಿಸ್ತ್ರಿಂಶಾಶ್ವಕಾಕಿಣ್ಯಜಿನಮಣಿಚಮೂನಾಥಚಕ್ರಾಧಿನಾಥಂ
ಗೆ ಜಯಪ್ರಾರಂಭಿಗಚ್ಛಸ್ಪಟಿಕಕಳಶಮಂ ತೀವಿ ದಿವ್ಯಾಂಬುವಿಂ ನಾ
ಕಜನಾಥಂ ಮಜ್ಜನಕ್ಕೆತ್ತಿದ ತೆಱದೆ ಸುಧಾಸೂತಿ ಕಣ್ಗೆಡ್ಡಮಾದಂ ೮

ಪಗಲಂತಿರ್ದಚ್ಛವೆಳ್ದಿಂಗಳೊಳಿನಕಿರಣದ್ಯೋತಿಗೆತ್ತಾಗಳಾಗಳ್
ಮುಗಿದಿರ್ದಂಭೋಜಮೋರೊಂದಲರ್ದುದು ಬಿಸುಸುಯ್ದತ್ತಗಲ್ದಿರ್ದ ನೀರ್ವ
ಕ್ಕಿಗಳಾಗಳ್ ಕೂಡಿ ತೋಡಾದುವು ಕುವಲಯಷಂಡಂಗಳಾಶಂಕೆಯಿಂದಂ
ಮುಗಿಯಲ್ಕೆಂದಿರ್ದವೇಸುಜ್ವಳಿಸಿದುದೊ ಜಗಚ್ಚಕ್ರಮಂ ಚಂದ್ರಬಿಂಬಂ ೯

ವ॥ ಅಂತು ಪುರಂದರಕರೋದ್ಧೃತಗಗನತಳಸ್ಪರ್ಧಿ ಸ್ಫಟಿಕ[೧]ಕಳಶಮುಖವಿಗಳಿತಸುಧಾಧಾರಾ ಪ್ರಸರಮನನುಕರಿಸಿ,

೭. ಚಂದ್ರಬಿಂಬವು ಅದೊಂದು ನಸುವೇಗದಿಂದ ಹೊಸ ದಾಸವಾಳದ ಪುಷ್ಪದ ಕಾಂತಿಪಡೆದಿತು. ಮತ್ತೊಂದಿನಿಸುವೇಗದಿಂದ ಚಿನ್ನದ ಕಲಶದ ಕಾಂತಿಯನ್ನು ತಳೆದಿತು. ಮಗುದೊಂದಿನಿಸು ವೇಗದಿಂದ ಮೃದುಮೃಣಾಳಸದೃಶವಾಯಿತು. ಹೀಗೆ ಚಂದ್ರಬಿಂಬದ ಉಜ್ವಲತೆಯು ಅದೆಷ್ಟು ಆಶ್ಚರ್ಯಕರವೋ! ವ॥ ಹಾಗೆ ಪೂರ್ವ ದಿಗ್ವಧುವಿನ ಮಂಗಳ ದರ್ಪಣವನ್ನೂ ಐರಾವತದ ಶ್ವೇತಕರ್ಣಚಾಮರವನ್ನೂ ಅನುಕರಿಸಿ, ೮. ಮೂರು ಜಗತ್ತಿಗೂ ಆಶ್ಚರ್ಯಕರರಾದ ದಂಡಪತಿ, ಸ್ಥಪತಿ, ಗೃಹಪತಿ, ಛತ್ರ, ಸ್ತ್ರೀ, ಪುರೋಹಿತ, ಆನೆ, ಖಡ್ಗ, ಕುದುರೆ, ಕಾಕಿಣಿ, ಚರ್ಮ, ಮಣಿ, ರತ್ನಗಳ ಮತ್ತು ಸೇನೆಗಳ ಅಧಿಪತಿಯಾಗಿಯೂ ಚಕ್ರೇಶ್ವರನಾಗಿಯೂ ಜಗಜ್ಜಯಕ್ಕಾಗಿ ಹೊರಟ ಭರತರಾಜನಿಗೆ ಸ್ಫಟಿಕಮಯವಾದ ಮಂಗಳಕಲಶವನ್ನು ದಿವ್ಯಾಂಬುವಿನಿಂದ ತುಂಬಿ ಇಂದ್ರನು ಮಜ್ಜನಕ್ಕಾಗಿ ಎತ್ತಿದಂತೆ ಚಂದ್ರನು ವಿರಾಜಿಸಿದನು. ೯. ಹಗಲಿನಂತಿದ್ದ ಸ್ವಚ್ಛವಾದ ಬೆಳ್ದಿಂಗಳನ್ನು ಸೂರ್ಯನ ಕಿರಣಗಳೆಂದು ಭ್ರಮಿಸಿ ಮೊಗ್ಗಾದ ಕಮಲಗಳು ಅರಳಿದುವು. ನಿಟ್ಟುಸಿರೆಳೆಯುತ್ತಾ ಅಗಲಿದ್ದ ಚಕೋರಗಳು ಜೊತೆಯಾದುವು. ಕುಮುದ ಪುಷ್ಪಗಳು ಸೂರ್ಯನ ಶಂಕೆಯಿಂದ ಮೊಗ್ಗಾಗತೊಡಗಿದುವು! ಹೀಗೆ ಜಗಚ್ಚಕ್ರವನ್ನು ಚಂದ್ರಬಿಂಬವು ಅದೆಷ್ಟು ಉಜ್ವಲವಾಗಿ ಪ್ರಕಾಶಿಸಿತೊ! ವ॥ ಅಂತು ಇಂದ್ರನು ಎತ್ತಿ ಹಿಡಿದ, ಗಗನತಳದಂತೆ ನಿರ್ಮಲವಾದ ಸ್ಫಟಿಕಮಯ ಕಲಶದ ಬಾಯಿಂದ ಹರಿದುಬಂದ ಅಮೃತದ ಧಾರೆಯ

---

೧ 'ಗಗನಸ್ಫಟಿಕ' ಎಂದಿರುವ ಪಾಠದಲ್ಲಿ 'ಗಗನ' ಶಬ್ದವು ಪ್ರಾಮಾದಿಕ ಎಂದು ಕೈಬಿಟ್ಟಿದೆ.

ಭರತೇಶ್ವರನಂತಃಪುರ
ದರಸಿಯರ ವಿಲೋಚನೋತ್ಪಳಾಕರಮನಳಂ
ಕರಿಸಿ ದೆಸೆದೆಸೆಗೆ ಪಸರಿಸಿ
ಶರದದ ಬೆಳ್ದಿಂಗಳೇಂ ಮನಂಗೊಳಿಸಿದುದೋ ೧೦

ಒಸರ್ದಪುದಮರ್ದಿನ ಪಾಲ್ಮಳೆ
ಪಸರಿಸಿತೆನೆ ಜಗಮನೊಡನೆ ಕಪ್ಪುರದ ರಜಂ
ಮುಸುಕಿದುದೆನೆ ಪುದಿದೇನಾ
ಱೆಸಿದುದೊ ಪೊಳೆವಮೃತಕಿರಣನಮೃತಕರಂಗಳ್ ೧೧

ವ॥ ಅಂತು ಕಾಮರಾಗರಸಸಾಗರಮಂ ನೆಲೆವೆರ್ಚಿಸುವ ಶರಚ್ಚಂದ್ರಾತಪದೊಳ್ ಪಗಲಿನ ಶರದಾತಪಪರಿಶ್ರಮಮನಾಱಿಸಿ ನಿಜವಿಜಯಕಟಕದ ನಾಗರಿಕರಮಣರಮಣೀಜನಂಗಳ್ ಕೌಮುದೀ ಮಹೋತ್ಸವೋತ್ಸುಕರಾಗಿ ನೆರೆದಲ್ಲಿ,

ಮೃಗಮದದಣ್ಪು ಜಾಜಿಯ ಬಟಲ್ಮುಡಿ ನೆಯ್ದಿಲ ಕರ್ಣಪೂರಮು
ಟ್ಟಗಲದೆ ಕಟ್ಟಿದೈಸರಮದೊಂದು ಬೆಡಂಗಿನ ಸೇತಮಾಲೆ ಪ
ಟ್ಟಗೆ ಕಟಸೂತ್ರಮೆಂಬಿವು ಮನಂಗೊಳೆ ಮನ್ಮಥಚಕ್ರವರ್ತಿಗೀ
ಕೆಗಳೆ ವಿನೋದದಾಕೆಗಳೆನಲ್ ಮೆಱೆದತ್ತು ವಿಳಾಸಿನೀಜನಂ ೧೨

ವ॥ ಆಗಳಾ ಸ್ತ್ರೀಸಮೂಹಂ ನೆಱೆದಿರಲಲ್ಲಿ ವಿಳಾಸಿನೀವಾಟದೊಳೊಂದೆಡೆಯೊಳೊಂದು ಕಮನೀಯಕಾಯಮಾನಾಭ್ಯಂತರಚಂಚತ್ಕಾಂಚನಮಂಚೋಪಶೋಭಿತ ಮೃದುತಳ್ಪದೊಳೆರಡಱಿಯದೆ ಕೂರ್ತ ನಲ್ಲಳ್,

ಪ್ರಕಾಶವನ್ನು ಅನುಕರಿಸಿ, ೧೦. ಭರತರಾಜನ ಅಂತಃಪುರದ ಸ್ತ್ರೀಯರ ಕಣ್ಣುಗಳೆಂಬ ಕನ್ನೈದಿಲೆಯ ಸಮೂಹವನ್ನು ಅಲಂಕರಿಸಿ ದಿಕ್ಕುದಿಕ್ಕುಗಳಿಗೆ ಹರಡಿದ ಶರತ್ಕಾಲದ ಬೆಳ್ದಿಂಗಳು ಮನಂಗೊಳಿಸಿತು. ೧೧. ಅಮೃತವು ಜಿನುಗಿತೋ ಹಾಲಿನ ಮಳೆಯು ಹರಡಿತೋ ಕರ್ಪೂರದ ಧೂಳಿಯು ಜಗತ್ತನ್ನೆಲ್ಲಾ ಮುಸುಕಿತೋ ಎಂಬಂತೆ ಹೊಳೆಯುವ ಚಂದ್ರನ ಅಮೃತಕಿರಣಗಳು ಹರಡಿಕೊಂಡು ತಂಪು ಬೀರಿದವು. ವ॥ ಮನ್ಮಥರಾಗರಸದ ಕಡಲನ್ನು ಉಕ್ಕಿಸಿ ಹೆಚ್ಚಿಸುವ ಶರತ್ಕಾಲದ ಬೆಳದಿಂಗಳಿನಿಂದ ಶರತ್ಕಾಲದ ಬಿಸಿಲಿನ ತಾಪವನ್ನು ಪರಿಹರಿಸಿಕೊಂಡು ರಾಜನ ವಿಜಯಶಿಬಿರದ ನಾಗರಿಕ ನರನಾರಿಯರು ಕೌಮುದೀ ಮಹೋತ್ಸವದಲ್ಲಿ ಉತ್ಸುಕರಾಗಿ ನೆರೆದರು. ಅಲ್ಲಿ, ೧೨. ಕಸ್ತೂರಿಯ ಲೇಪನವೂ ಜಾಜೀಪುಷ್ಪದ ಮಾಲೆಯನ್ನು ಮುಡಿದ ಮುಡಿಯೂ ನೆಯ್ದಿಲೆಯ ಕರ್ಣಪೂರವೂ ಉಟ್ಟ ಬಟ್ಟೆಯಗಲಕ್ಕೂ (?) ಕಟ್ಟಿದ್ದ ಐದೆಳೆಯ ಸರವೂ ಬೆಡಗಿನ ಶುಭ್ರಮಾಲೆಯೂ ರೇಷ್ಮೆ ವಸ್ತ್ರವೂ ಕಟಿಸೂತ್ರವೂ ಮನಸ್ಸನ್ನು ಸೆರೆಹಿಡಿದುವು. ಮನ್ಮಥಚಕ್ರವರ್ತಿಗೆ ಇವರೇ ವಿನೋದವನ್ನುಂಟುಮಾಡುವ ಸ್ತ್ರೀಯರೆನ್ನುವಂತೆ ವಿಲಾಸಿನೀಜನವು ನೆರೆದಿತು. ವ॥ ಆ ಸ್ತ್ರೀಯರು ಸೇರಿರಲಾಗಿ ವಿಲಾಸಿನಿಯರ ಉದ್ಯಾನದಲ್ಲಿರುವ ಸುಂದರವಾದ ಚಪ್ಪರದ ಕೆಳಗೆ ಅಂದವಾದ ಚಿನ್ನದ ಮಂಚದ ಮೇಲೆ ಶೋಭಿಸುವ ಮೆತ್ತನೆಯ

ಪೊದಟ್ಟಿ ಕಬರೀಭರಂ ಪರೆದು ಪರ್ವೆ ತುಂಗಸ್ತನಂ
ಕದಕ್ಕದಿಸೆ ಕಣ್ಮಲರ್ ಪೊಳೆಯೆ ಕಾಂತನಂ ಮೆಚ್ಚಿಸಲ್
ವಿದಗ್ಧೆ ಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂ
ದದೊಂದು ಪೊಸಗಾರ ಸೋಗೆನವಿಲಾಟಮಂ ತೋಱಿದಳ್ ೧೩

ವ|| ಮತ್ತೊಂದೆಡೆಯೊಳ್ ಒರ್ವಂ ತನ್ನ ಪ್ರಾಣೇಶ್ವರಿಯ ಮೊಗಮಂ ನೋಡಿ ತಲೆಯಂ ತೂಗಿದೊಡೆ ಆಕೆ ಶಂಕಾಕುಳಿತೆಯಾಗಿ ತನ್ನ ಕೆಳದಿಗಿಂತೆಂದಳ್,

ತುಂಗಘನಸ್ತನಂ ಬೆಮರೆ ಮೇಲುದನಾಂ ತೆಱೆದಿರ್ದೊಡತ್ತಲಿ
ರ್ದಂಗಜಸನ್ನಿಭಂ ತಲೆಯನೇಕೆಗೆ ತೂಗಿದನೆಂದೊಡಕ್ಕ ಕೇ
ಳಂಗನೆ ನಿನ್ನ ಬೀಗಿ ಬಿಗಿದಿರ್ದ ಕುಚದ್ವಯಮಧ್ಯದಲ್ಲಿ ತಾಂ
ಪಿಂಗದೆ ನಟ್ಟ ದಿಟ್ಟಿಯನವಂ ಕಿಟಿಲೆಂದನುಗೆಯ್ದು ತೂಗಿದಂ ೧೪

ವ|| ಮತ್ತಮೊಂದೆಡೆಯೊಳ್,

ಮಿಳಿರ್ವಸಿಯ ಪಸಿಯ ಪೊಸಬಾ
ಸುಳ ಕರರುಹರೇಖೆ ತುಱುಗಿ ರತನಾಟ್ಯಪರಿ
ಸ್ಖಲಿತಕ್ಕೆ ಮುಳಿದು ದಂಪತಿ
ಗಳನಂಗಜನಟನ ಸೆಳೆಯ ಬಾಸುಳಿವೆನಿಕುಂ ೧೫

ವ|| ಎನೆ ಮತ್ತೊರ್ವನಿಂತೆಂದಂ,

ಹಾಸಿಗೆಯಲ್ಲಿ ಕಪಟವನ್ನು ಕಂಡರಿಯದ ಒಲವುದೋರಿದ ನಲ್ಲೆಯು ಕುಳಿತಿದ್ದಳು. ೧೩. ಸೊಂಪಾದ ಕೂದಲಗಂಟು ಬಿಚ್ಚಿಹೋಗಿ ಹರಡಿಕೊಂಡಿತು. ತುಂಬಿದ ಸ್ತನಗಳು ಅದುರಿದುವು. ಕಣ್ಗಳೆಂಬ ಹೂಗಳರಳಿದುವು. ತನ್ನ ಕಾಂತನನ್ನು ಮೆಚ್ಚಿಸಲು ವಿದಗ್ಧೆಯೊಬ್ಬಳು ನರ್ತಕೀಲೀಲೆಯಿಂದ ಪುರುಷಾಯಿತವನ್ನು ನಡಯಿಸಿದಳು. ಆಗ ಅವಳು ನೂತನವಾದ ಮಳೆಗಾಲದ ಸೋಗೆನವಿಲಿನಾಟವನ್ನು ತಳೆದಳು. ವ|| ಇನ್ನೊಂದು ಕಡೆ ಒಬ್ಬನು ತನ್ನ ಕಾಂತೆಯ ಮುಖವನ್ನು ನೋಡಿ ತಲೆದೂಗಿದನು. ಆಗ ಅವಳು ಶಂಕೆಯಿಂದ ತನ್ನ ಗೆಳತಿಗೆ ಹೀಗೆಂದಳು. ೧೪. "ಉನ್ನತವೂ ಸಾಂದ್ರವೂ ಆದ ನನ್ನ ಸ್ತನಗಳು ಬೆವರಿದುವು. ಆಗ ನಾನು ನನ್ನ ಸೆರಗನ್ನು ತೆಗೆದಿದ್ದೆನು. ಅತ್ತಕಡೆ ಕಾಮನಂತಿದ್ದ ನಲ್ಲನು ತನ್ನ ತಲೆಯನ್ನೇಕೆ[1] ತೂಗಿದನು?" ಎಂದು ಕೇಳಿದಳು. ಆಗ ಅವಳ ಗೆಳತಿಯು "ಅಕ್ಕ, ಕೇಳು ನಿನ್ನ ಬೀಗಿ ಬಿಗಿದಿರ್ದ ಸ್ತನದ್ವಯಗಳ ನಡುವೆ ನಟ್ಟ ತನ್ನ ದೃಷ್ಟಿಯನ್ನು ಅವನು ಕೀಳಲೆಂದು ತಲೆಯನ್ನು ತೂಗಿದನು!" ಎಂದಳು. ವ|| ಮತ್ತೊಂದು ಪ್ರದೇಶದಲ್ಲಿ ಒಬ್ಬನು ೧೫. "ಕತ್ತಿಯನ್ನು ಬೀಸೋಣದರಿಂದುಂಟಾದ ಹೊಸಬಾಸುಂಡೆಯಂತಿರುವ ನಖಕ್ಷತಗಳು ರತನಾಟ್ಯ ಪರಿಸ್ಖಲನಕ್ಕೆ ಕೋಪಿಸಿಕೊಂಡ ಮನ್ಮಥನೆಂಬ ನಟನು ಕೋಲಿನಿಂದ ಹೊಡೆದುದರಿಂದ ದಂಪತಿಗಳಲ್ಲಾದ ಬಾಸುಂಡೆಗಳೋ ಎಂಬಂತಿದ್ದುವು" ವ|| ಎಂದನು. ಮತ್ತೊಬ್ಬನು

1 ಪದ್ಯದಲ್ಲಿ ಏಕೆಗೆ ಎಂಬ ಶಬ್ದವಿದೆ. ಗೆ ಎಂಬುದು ಸ್ತ್ರೀಸಂಬೋಧನೆಯಲ್ಲಿ ಬಳಸುವ ಒಂದು ಅವ್ಯಯ. ಗೆ = ಎತಾ.

ಬಳ್ಳಿಗಳಿಮ್ಮಾವಿನ ಮರ
ನುಳ್ಳೆಡೆಗಳನಱಸಿ ಪೋಪುವಲ್ಲವು ಕೆಲದೊಳ್
ಕಳ್ಳಿಯಿಡಲಡರ್ವುವಬಲೆಯ
ರಳ್ಳೆರ್ದೆಗಳ್ ಪುರುಷಗುಣಮನಱಿದೆಱಗುಗುಮೇ ೧೬

ವ॥ ಮತ್ತಮೊಂದೆಡೆಯೊಳ್ ಪಲಬರ್ ವಿದಗ್ಧವಿಟರ್ ನೆರೆದಿರ್ದಲ್ಲಿಯೊರ್ವಂ,

ಬಸನಿಯೆ ಗೆಲ್ಲಕಾಱನ ನೆಗಟ್ತೆಗೆ ಕೇಳಿಗೆ ನಾಡೆ ಗೆಂಟದಂ
ಬೆಸಗೊಳವೇಡ ನೆಟ್ಟನೆ ಚದುರ್ ತನಗುಳ್ಳೊಡೆ ಮೆಲ್ಪು ಮೇಳಮಂ
ಪೊಸಯಿಸಿ ತನ್ನ ಮುನ್ನುಳಿವು ಬೇಟದ ಲಲ್ಲೆಯ ಬಲ್ಮೆ ಪತ್ತಿ ಸು
ತ್ತಿಸೆ ಪುರುಡಿಂಬುಕ್ಕೆಸೆ ಬಿಯಮಾಱಿಸಿ ಪೊಂದದವಂ ಬೊಜಂಗನೇ ೧೭

ನೆಲನಂ ಪರ್ವುವ ಬಳ್ಳಿಗಂ ಚದುರನೊಳ್ ಮೈಮ್ಮೈಯೊಡಂಬಟ್ಟು ತ
ಳ್ತಲರ್ವಾ ಕೋಮಳೆಗಂ ತಗುಳ್ಪ ಪೆಱದೊಂದೆಂದಕ್ಕುಮಾ ಬಳ್ಳಿಗೆ
ಯ್ದಲಳುಂಬಂ ನೆಲನಾಕೆಗಂ ಬಳಸಿಯುಂ ಲಲ್ಲೈಸಿಯುಂ ನೋಡಿ ಕಾ
ಣಲಳುಂಬಂ ಮನಮೆಂಬಿದಂ ಚದುರೊಳ್ ಮುಂ ಕೇಳದಿಂ ಕೇಳ್ವನೇ ೧೮

ವ॥ ಎಂದು ಮತ್ತೊರ್ವನಿಂತೆಂದಂ,

ಹೀಗೆಂದನು: ೧೬. "ಬಳ್ಳಿಗಳು ಸಿಹಿಮಾವಿರುವೆಡೆಗಳನ್ನು ಹುಡುಕಿಕೊಂಡು ಹೋಗುವುದಿಲ್ಲ. ಅವು ಪಕ್ಕದಲ್ಲಿ ಕಳ್ಳಿಗಿಡಗಳಿದ್ದರೂ ಅವನ್ನೇ ಆಶ್ರಯಿಸಿಕೊಳ್ಳುವುವು! ಹೆಂಗಸರ ಅಳ್ಳೆದೆಗಳು ಪುರುಷಗುಣವನ್ನರಿತು ಅವರನ್ನು ಆಶ್ರಯಿಸುತ್ತವೆಯೆ?" ವ॥ ಮತ್ತೊಂದೆಡೆಯಲ್ಲಿ ಹಲವು ಚದುರ ವಿಟರು ನೆರೆದಿದ್ದರು. ಆಗ ಅವರಲ್ಲೊಬ್ಬನು ೧೭. "ವ್ಯಸನಿಯಾದವನು ಗೆಲ್ಲಕಾರ (ಜಯಶಾಲಿ)ನ ನೆಗಳ್ತೆಗೂ (ಕಾರ್ಯಪಾಟವ)ಕೇಳಿಗೂ ತುಂಬ ದೂರವಾದನು. ಅದೇಕೆಂದು ಕೇಳಬೇಡ. ಅವನು ತನ್ನಲ್ಲಿ ಚಾತುರ್ಯವಿದ್ದಿದ್ದರೆ, ಮೃದುವಾದ ಮೇಳವನ್ನು (ಮೃದುಪ್ರಣಯವನ್ನು) ಹೊಸತುಗೊಳಿಸಿ ತನ್ನ ಮೊದಲ ಸ್ಥಿತಿಯನ್ನೂ ಪ್ರೇಮಾಭಿವರ್ಧಕವಾದ ಸವಿನುಡಿಗಳಲ್ಲಿನ ಪ್ರಾಗಲ್ಭ್ಯವನ್ನೂ ಪ್ರಕಟಗೊಳಿಸಿ ಸ್ಪರ್ಧೆಯನ್ನುಂಟುಮಾಡಿ ದುಂದುಮಾಡಿ ಕೂಡುವನು. ಹಾಗಲ್ಲದವನು ವಿಟಪುರುಷನೇ? ೧೮. ಚತುರನಾದ ವಿಟನು ಮೃದುವಾಗಿ ವ್ಯವಹರಿಸಿ ಲಲ್ಲೆಮಾತುಗಳಿಂದ ವಶಪಡಿಸಿಕೊಂಡು ನಲ್ಲೆಯೊಡನೆ ಕೂಡುತ್ತಾನೆ. ನೆಲದಲ್ಲಿ ಹಬ್ಬುವ ಬಳ್ಳಿಗೂ ಚದುರನೊಡನೆ ಮೈಮೈ ಕೂಡಿಸಿದ ಲತಾಕೋಮಲೆಗೂ ಬೇರೊಂದು ಸಂಬಂಧವಾವುದಿದೆ? ಆ ಬಳ್ಳಿಗೆ ಹಬ್ಬಲು ಅತಿಶಯವಾಗಿ ಆಶ್ರಯವಾದುದು ನೆಲ. ಬಳಸಿಕೊಂಡು ಲಲ್ಲೆಮಾತಾಡಿ ಆಕೆಯನ್ನು ಕಾಣಲು ಕಾರಣವಾದುದು ಮನಸ್ಸು ಎಂಬುದನ್ನು ಮೊದಲು ಚದುರರನ್ನು ಕೇಳಿ ತಿಳಿಯಬೇಕಾಗಿತ್ತು. ಆಗ ಕೇಳದಿದ್ದ ಮೇಲೆ ಇನ್ನು ಕೇಳುವನೆ?" (?) ಎಂದನು. ವ॥ ಆಗ ಮತ್ತೊಬ್ಬನು ಹೀಗೆ ಹೇಳಿದನು.

ನಿಧಿ ದೊರೆಕೊಳ್ವೊಡಂ ಕುಲಧನಂ ದೊರೆಕೊಳ್ವೊಡಮೆಲ್ಲಿಯಾನುಮ
ಲ್ಲದೆ ದೊರೆಕೊಳ್ಳದಂತೊಲವುಗಳ್ದೊರೆಕೊಳ್ವೊಡಮೆಲ್ಲಿಯಾನುಮ
ಲ್ಲದೆ ದೊರೆಕೊಳ್ಳವಂತಱಿದರಿಂ ದೊರೆಕೊಂಡುವನೇವಮಾಗಲೀ
ಯದೆ ಕಿಡಲೀಯದಿರ್ಪರವಿದೊಂದೆ ಚದುರ್ ಚದುರೆಂಬುದಾವುದೋ ೧೯

ಬಳಸುವ ಬೇಟದೊಳ್ ಮೊಳೆದ ಗೊಟ್ಟಿಯೊಳೀರೆಲೊವೋದ ಲುಂದಿನೊಳ್
ಬಳೆದ ವಿಯೋಗದೊಳ್ ಪೊಱೆದ ಚಿಂತೆಯೊಳೀ ಮಡಲ್ತ ತಳ್ತ ಮೆ
ಯ್ಗಳೊಳಡರ್ದೋತು ದೂತವಚನಾಮೃತದೊಳ್ ಗೊಲೆಗೊಂಡ ಬೇಟವೆಂ
ಬೆಳಲತೆ ಕೂಟದೊಳ್ ಪದೆದು ಪಣ್ತೆರ್ದೆಗಿಂಪಿನಲಂಪನೀಯದೇ ೨೦

ದಿವಸಂಗಳ್ ವಿಧುಬಿಂಬಚುಂಬಿತನಭೋಭಾಗಂಗಳಾದಂದುಮಾ
ಮ್ರವನಂಗಳ್ ಕಳಿಕಾಪ್ರವಾಳಕುಸುಮಾಕ್ರಾಂತಂಗಳಾದಂದುಮಾ
ದ ವಿನೋದಂಗಳನಂಗರಾಗರಸಸಂಕೀರ್ಣಂಗಳಾದಂದುಮಾ
ಱುವ ಪಾಂಗಾವುದು ಕೊಂಡುಪೋಗಗಲಲಾನಾಱೆಂ ಮನೋವಲ್ಲ[ಭೇ][1] ೨೧

ಒದವಿದ ಚಿಂತೆ ಪೆರ್ಚೆ ಪಸಿವಿಲ್ಲದೆ ಮರ್ಚೆರ್ದೆಯುರ್ಚೆ ನಿದ್ರೆಯಿ
ಲ್ಲದೆ ಬಗೆ ಬೆರ್ಚೆ ಬುದ್ಧಿಯಣಮಿಲ್ಲದೆ ನಲ್ಲಳಗಲ್ಕೆಯಿಂದಮಾ
ದದವಳಲಚ್ಚಿಗಂ ಮಱುಕಮೆಂಬಿವಱಿಂದೆ ಕನಲ್ದು ಮುನ್ನೆ ಬೇ
ಟದ ಸವಿಗಂಡನಲ್ಲದಱಿಯಂ ಶ್ರಮಮಂ ಕಡುವೇಟಕಾಱರಾ ೨೨

೧೯. "ನಿಧಿಯೂ ಕುಲಧನವೂ ಎಲ್ಲೆಡೆಗಳಲ್ಲಿಯೂ ಸಿಗದ ಹಾಗೆ ಪ್ರೀತಿಯೂ ಎಲ್ಲೆಡೆಗಳಲ್ಲಿಯೂ ಸಿಗದು. ಆದ್ದರಿಂದ ದೊರೆಕೊಂಡುದನ್ನು ಸ್ವಲ್ಪವೂ ದ್ವೇಷಿಸಲವಕಾಶವೀಯದೆಯೆ, ಕೆಡಿಸಲವಕಾಶವೀಯದೆಯೆ ಅದನ್ನುಳಿಸಿಕೊಳ್ಳುವುದೊಂದು ಜಾಣತನ. ಇದಕ್ಕಿಂತ ಬೇರೊಂದು ಚದುರತನವಿಲ್ಲ. ೨೦. ಪ್ರೇಮವೆಂಬ ಬಳ್ಳಿಯು ಬಳಸುವ ಪ್ರೀತಿಯಲ್ಲಿ ಮೊಳೆಯುತ್ತದೆ. ಸಲ್ಲಾಪದಿಂದ ಎರಡೆಲೆ ಬಿಡುತ್ತದೆ. ಸಂಗದಲ್ಲಿ ಬೆಳೆಯುತ್ತದೆ. ವಿಯೋಗದಿಂದ ಪುಷ್ಟಿಸುತ್ತದೆ. ಚಿಂತೆ ಮಾಡುವುದರಿಂದ ಹಬ್ಬುತ್ತದೆ. ಕೂಡಿದ ಶರೀರದ ಮೇಲೆ ಹಬ್ಬುತ್ತದೆ. ದೂತವಚನಾಮೃತದಿಂದ ಗೊನೆಯಾಗುತ್ತದೆ. ಕೂಟದಲ್ಲಿ ವಿಸ್ತಾರಗೊಂಡು ಹಣ್ಣು ಬಿಡುತ್ತದೆ. ಅದು ಹೃದಯಕ್ಕೆ ಇಂಪಿನಲಂಪನ್ನೀಯದೆ? ೨೧. ಪೂರ್ಣಚಂದ್ರನು ಆಗಸದಲ್ಲಿ ತಾನೇತಾನಾಗಿ ವಿರಾಜಿಸುವ ಈ ದಿನಗಳಲ್ಲಿ ಮಾವಿನ ತೋಟಗಳು ಚಿಗುರಿಟ್ಟು ಮೊಗ್ಗುವಡೆದು ಹೂವಾಗಿ ಕಂಗೊಳಿಸುತ್ತವೆ. ಮನ್ಮಥರಾಗರಸದಿಂದ ವಿಮಿಶ್ರವಾದ ವಿನೋದಗಳು ಜರುಗುತ್ತವೆ. ಈ ಸಮಯದಲ್ಲಿ ನನ್ನ ಕಾಮಾಗ್ನಿಯು ಆರುವ ಬಗೆಯೆಂತು? ಮನೋವಲ್ಲಭೆ! ನನ್ನನ್ನೂ ಕೊಂಡುಹೋಗು, ನಾನು ನಿನ್ನನ್ನು ಆಗಲಿರಲಾರೆನು" ಎಂದು ಹಲುಬಿದನು. ೨೨. ಅವನ ಚಿಂತೆಯು ಹೆಚ್ಚಿತು. ಹಸಿವು ಹೋಯಿತು. ಹೃದಯದಲ್ಲಿ ಕತ್ತಲೆಯು ಕವಿಯಿತು. ನಿದ್ದೆಯಿಲ್ಲದೆ ಮನಸ್ಸು ಬೆಚ್ಚಿತು.

---

೧ ಭಾ (ಅನ್ಯತ್ರ)

ವ।। ಎಂದು ಬೇಟಮನೆ ವಸ್ತುಮಾಡಿಯೆ ಕವಿತ್ವ ವರ್ಣಕವಿತ್ವಕಾಮತತ್ತ್ವವಿದನೆನಿಸಿದತಿವಿದಗ್ಧನೊರ್ವನಿಂತೆಂದಂ,

ಅಲೆದುಂ ನೋಡಿಯೊಜಿಲ್ದುವಿಟ್ಟ ಪದಮುಂ ನೋಳ್ಪುಂ ಕಳಲ್ದು ಪಳಂ
ಚಲೆದುಂ ಮುಟ್ಟದ ಸೀಯನಪ್ಪ ದನಿಯುಂ ಮೇಲ್ವಾಯ್ದುಮೇವೈಸಿಯುಂ
ಪಿರಿದುಂ ಲುಂದುವ ಬೇಟದೊಂದು ಸುಸಿಲುಂ ನೋಯಿಕ್ಕುಮಾಜಿಕ್ಕುಮ
ಗ್ಗಲಿಕುಂ ಕಬ್ಬದ ಗೇಯದೊಂದು ಸುಸಿಲೊಂದಿಂಪೆಂಬುದೇಗೆಯ್ಯದೋ ೨೩

ವ।। ಎಂದು ಮಾಣದೆ,

ಒಡನಿರಲಿತ್ತುದಿಲ್ಲ ವಿಧಿ ನಮ್ಮನಳಲ್ದಳವೇಡ ನೀಂ ಮನಂ
ಬಿಡೆ ನಡೆಯೆಂದು ಪೇಟ್ದನಿಸನಾಂ ಮಗುಳ್ದಾಗಳೆ ಸೂಸಿ ಕಣ್ಣ ನೀ
ರೊಡನೊಡನುಣ್ಮೆ ಕುಂಕುಮದೊಳರ್ದಿದ ಬಾಳೆಗಳನ್ನಮಾಗಿ ಕೆಂ
ಪಡರ್ದಲರ್ಗಣ್ಗಳಿಂದುಗುಟ್ದು ನೋಡಿದುದಂ ನೆನೆವೆಂ ಮೃಗಾಕ್ಷಿಯಾ ೨೪

ವ।। ಎಂದೆರ್ದೆಯಾಜಿದೆ,

ಒದವಿ ತಗುಳ್ದ ಗಗ್ಗರಿಕೆ ಸೂಸುವ ಕಣ್ಬನಿ ಕಣ್ಗಳೊಳ್ ಕಲಂ
ಕಿದ ಬೆಳರ್ಗೆಂಪು ಕಣ್ಗವರೆ ಸಾರ್ಚಿದಗಲ್ಕೆಯೊಳಿಂತು ಬೇಟದು
ಬ್ಬದಿಗಮನಾಂತ ನಲ್ಲಳ ಮುಖಾಂಬುಜಮಂ ನಡೆ ನೋಡಿ ನೋಡಿ ಸಾ
ಯದೆ ಬರ್ದುಕಾಡಿದಂ ಜವನ ಬಾರಿಯೊಳಂ ಬರ್ದುಕಾಡದಿರ್ಕುಮೇ ೨೫

ಬುದ್ಧಿಯಿನಿಸೂ ಇಲ್ಲದೆ ಪ್ರಿಯಳ ವಿರಹದಿಂದ ದುಃಖವುಂಟಾಯಿತು. ಕಣ್ಣುಗಳಲ್ಲಿ ದುಃಖವೂ ಮರುಕವೂ ಉಂಟಾದುವು. ಜೊತೆಗಾರರ ಸಹಾನುಭೂತಿಯಿಲ್ಲವೆಂದು ಅವನು ಕನಲಿದನು. ಇತರ ವಿರಹಿಗಳ ಕಷ್ಟವನ್ನು ಅವನೇನು ಬಲ್ಲನು! ವ।। ಆಗ ಪ್ರೇಮವನ್ನು ಕುರಿತು ಕವಿತ್ವವನ್ನೂ ವರ್ಣಕವಿತ್ವವನ್ನೂ ಮಾಡುವುದರಲ್ಲಿ ಪ್ರಗಲ್ಭನೆನಿಸಿದವನೂ ಕಾಮತತ್ತ್ವವನ್ನು ಬಲ್ಲವನೂ ಆದ ಒಬ್ಬನು ಹೀಗೆಂದನು: ೨೩. "ಅಲೆದರೂ ನೋಡಿದರೂ ಹೆಜ್ಜೆಯಿಟ್ಟು ಸರಿದರೂ ಬೇಸತ್ತರೂ ಸೀಯೆಂದು ಶಬ್ದಮಾಡಿದರೂ ಮೇಲೆ ಬಿದ್ದು ಗೋಳಾಡಿಸಿದರೂ ಮಲಗಿ ಬೇಟಕ್ಕೆಳಸುವ ರತಿಕ್ರೀಡೆಯು ಯಾರಿಗೆ ನೋವನ್ನುಂಟು ಮಾಡುವುದು? ಕಾವ್ಯ, ಸಂಗೀತ, ಸಂಭೋಗಗಳ ಸೊಗಸು ಏನನ್ನು ಮಾಡಲಾರದು?" ಎಂದನು. ವ।। ಎಂದು ನಿಲ್ಲಿಸದೆ, ೨೪. "ದೈವವು ನಮಗೆ ಒಟ್ಟಿಗಿರಲು ಅವಕಾಶವೀಯಲಿಲ್ಲ. ದುಃಖಿಸಿ ಅಳಬೇಡ! ನೀನು ಧೈರ್ಯದಿಂದ ಹೋಗು" ಎಂದು ಹೇಳಿದಳು. ನಾನು ಸ್ವಲ್ಪ ಹಿಂದಿರುಗಿ ನೋಡಿದಾಗ ಅವಳ ಕಣ್ಣುಗಳಿಂದ ನೀರು ಮತ್ತೆ ಮತ್ತೆ ಉಕ್ಕಿ ಹರಿಯಿತು. ಆಗ ಅವಳ ಕೆಂಪಾದ ಅಲರ್ಗಣ್ಣುಗಳು ಕುಂಕುಮದಲ್ಲದ್ದಿದ ಮೀನುಗಳಂತೆ ಕಾಣಿಸಿದುವು. ಹಾಗೆ ಕಂಬನಿಗಳನ್ನು ಸುರಿಸುತ್ತಾ ನೋಡಿದ ಆ ಮೃಗಾಕ್ಷಿಯನ್ನು ಸ್ಮರಿಸುತ್ತೇನೆ". ವ।। ಎಂದು ಮನ ತಣಿಯದೆ, ೨೫. ದೀರ್ಘವಾದ ಅಗಲಿಕೆಯಲ್ಲಿ ಗರ್ಗರಧ್ವನಿಯು ಒತ್ತಿ ಒತ್ತಿ ಬಂದಿತು. ಕಣ್ಣುಗಳಿಂದ ಕಣ್ಣೀರು ಹರಿಯಿತು.

ವ|| ಎಂದುಮವಧರಿಸದೆ,

ನಡುಕಮುಮಳ್ಕಱುಂ ಬೆರಸಗಲ್ಕೆಯೊಳಿಂದಿನಿತೆಂಬವೊಲ್ತೊಡಂ
ತೊಡರೆ ರಸಾಂತದೊಳ್ ಬಗೆದು ಭೋಂಕೆನೆ ಪೋದಪನೋಪನೀಸಲುಂ
ಕಿಡೆಯಸುವಿಲ್ಲದೆಂದಜಿದಳಲ್ತೆಱಿದೊಂದಿದ ಲುಂದುಗಳ್ಗೆ ನೀ
ರ್ಗುಡಿದವೊಲಾದುದುಚ್ಚಳಿಸಿ ಸೂಸುವ ಕಣ್ಬನಿ ಕಂಜವಕ್ತ್ರೆಯಾ ೨೬

ವ|| ಎಂದು ಸೈರಿಸದೆ,

ಅಮರ್ದಿನ ದೋರೆಯಂತೆ ನುಡಿಯಿಂಪಮರ್ದಂ ತಳಿದಂತೆ ಸೋಂಕಿನಿಂ
ಪಮರ್ದಿನ ಪೂರದಂತೆ ಪದೆದಿಂಪಮರ್ದಂ ಕುಡಿವಂತೆ ಲುಂದಿನಿಂ
ಪಮರ್ದೊಡಮೇನಗಲ್ಕೆ ಮುಳಿಸೆಂಬೆರಡುಂ ಗಡ ಕಾಳಕೂಟಮಾ
ಗಮರ್ದಿನ ಕಾಳಕೂಟದೊಡವುಟ್ಟಿದಳೆಂದಪೆನೆನ್ನ ನಲ್ಲಳಂ ೨೭

ವ|| ಮತ್ತಮೊಂದೆಡೆಯೊಳಂದೆ ಪೊಸಯಿಸಿದ ಪೊಸವೇಟಕಾಱರಪ್ಪ ಕಡುನಲ್ಲರುಮಿರ್ವರು ಮಿರೆ,

ಕುಡುಗುರುಳೆಂಬ ತಂಬೆಲರ ಬೆಂಬಿಡಿದಿಂ ಪೊಸವೇಟಮೆಂಬ ಚಿ
ಲ್ವಿಡಿದೆಳಮಾಮರಂ ಪುಳಕಮೆಂಬ ನವಾಂಕುರದಿಂ ವಿಳಾಸಮಂ
ಪಡೆದನುರಾಗಮೆಂಬ ತಳಿರಿಂದೆಸೆದಳ್ಕಱನಾಳ್ದ ನೋಟಮೆಂ
ಬಿಡಿದಲರಿಂ ಮುಸುಂಕಿ ಸುಸಿಲೆಂಬ ಬಸಂತದೊಳೇಂ ಪೊದಟ್ಟುವೋ ೨೮

ಬಿಳಿಚಿಕೊಂಡ ಕೆಂಬಣ್ಣವು ಕರಗಿ ಕಣ್ಣಿನ ತುದಿಗೆ ಬಂದಿತು. ಹೀಗೆ ಅಗಲಿಕೆಯಿಂದ ಉದ್ವೇಗ ಪಡೆದ ಪ್ರಿಯಳ ಮುಖಕಮಲವನ್ನು ನೋಡಿ ನೋಡಿ ಯಮನ ಸರದಿ ಬಂದಿದ್ದರೂ ಸಾಯದೆ ಬದುಕಿದನು. ಯಮನ ಸರದಿ ಬಂದರೂ ಜಾಣತನವು ಕಾಡದೆ ಇದ್ದೀತೆ? (ಅಥವಾ ಜೀವನವು ನಡೆಯದಿದ್ದೀತೆ?) (?) ವ|| ಎಂದು ಅವಧರಿಸದೆಯೆ, ೨೬. "ನಡುಕವೂ ಪ್ರೇಮವೂ ಬೆರೆಸಿರಲು, ಇದು ಸ್ವಲ್ಪವೇ ಎಂದು ಗಣಿಸದೆ ಬಟ್ಟೆಯನ್ನು ನಲ್ಲನು ಹೊಗುವನು. ಇದನ್ನು ದಾಟಲು ಎಡೆಯಿಲ್ಲ" ಎಂದು ನಲ್ಲಳು ಕಣ್ಣೀರು ಹರಿಸಿರಲು "ಆ ಕಣ್ಣೀರು ನಮ್ಮ ಬೇಟಕ್ಕೆ ನೀರೆರೆದಂತಾಯಿತು" ವ|| ಎಂದು ಸೈರಿಸದೆಯೆ ೨೭. "ಅವಳ ಮಾತಿನ ಇಂಪು ಅಮೃತಧಾರೆಯಂತಿದೆ. ಅವಳ ಸಂಸ್ಪರ್ಶದ ಮಾಧುರ್ಯವು ಅಮೃತವನ್ನು ಚಿಮುಕಿಸಿದಂತಿದೆ. ಎಲ್ಲೆಡೆಗಳಲ್ಲಿಯೂ ವ್ಯಾಪಿಸಿದ ಪ್ರೇಮದಿಂಪು ಅಮೃತದ ಹೊನಲಿನಂತಿದೆ. ಶಯನದಿಂಪು ಅಮೃತವನ್ನು ಕುಡಿದಂತಿದೆ, ಏನಿದ್ದರೇನು? ಅವಳ ವಿರಹ ಕೋಪಗಳೆರಡೂ ಕಾಲಕೂಟವಿಷ! ಆದ್ದರಿಂದ ನನ್ನ ನಲ್ಲಳನ್ನು ಅಮೃತ ಕಾಲಕೂಟಗಳೊಡನೆ ಹುಟ್ಟಿದವಳು ಎಂದು ತಿಳಿಯುತ್ತೇನೆ!'' ಎಂದನು. ವ|| ಮತ್ತೊಂದೆಡೆಯಲ್ಲಿ ಅಂದೇ ಕಲೆತ ಪ್ರೇಮಿಗಳಿಬ್ಬರಿದ್ದರು. ೨೮. ವಕ್ರವಾದ ಮುಂಗುರುಳೆಂಬುದು ಒಂದು ತಂಗಾಳಿ. ಅದನ್ನು ಅನುಸರಿಸಿ ಬಂದ ನೂತನ ಪ್ರೇಮವೆಂಬುದು ಎಳೆಮಾವಿನ ಮರ, ಅದು ಪುಳಕವೆಂಬ ನವಾಂಕುರದಿಂದ ವಿಲಾಸವನ್ನು

ವ|| ಮತ್ತಮೊಂದೆಡೆಯೊಳ್ ಪಳಿಕೆಯ್ದು ಬಂದು ನಲ್ಲಳ ಮುಳಿಸನೊಳಕೊಂಡು ಮುಖಮಂ ಮುಗುಳ್ನಗೆವೆರಸು ನುಡಿದು ಗೆಂಟಾದಂ, ಮತ್ತಮೊಂದೆಡೆಯೊಳ್ ಪಳವಳಿಯ ಬೇಟದ ತೋಟಿಯಂ ತೊಡರ್ದಟ್ಟುಪೆತ್ತ ಪೊಲೆವುಲ್ಲೆಯಳ್ಪಿಯಾದ ಮಾತಂ ತನ್ನ ಸೂಳೆಯ ಬೇಸಱಿಂ ಕೆಳೆಯಂಗಿಂತೆಂದಂ,

ಮಱುಗುವೆನಾನಿವಳ್ಗಿವಳವಂಗೆರಡಿಲ್ಲದೆ ನಲ್ಲಳಾತನುಂ
ಮಱುಗುವನಾಕೆಗಾಕೆಯುಮನಂಗವಿನೋದದೊಳೆನ್ನ ಪಂಬಲೊಳ್
ಮಱುಗುವಳೆಂದೊಡೇಂ ತಿಳಿವನಾತನನಾಕೆಯನೆನ್ನ ನೋಡು ಕಾ
ಯ್ದಱಿಯೆ ವಿಧಾತ್ರನೇಂ ಪಡೆದನೋ ಬಿಸವಂದಮನೊಂದವಿಂದಮಂ ೨೯

ವ|| ಎಂದು ನುಡಿದಂ, ಮತ್ತೊರ್ವನಿಂತೆಂದಂ

ಲಲಿತಲತಾಂಗಿ ನೂತವಿಪರೀತರತಕ್ಕಡಿಯಿಟ್ಟಳೆನ್ನ ಕ
ಣ್ಗಳ ಪಸವೋಡೆ ನೋಡಲಣಮಾಯದೆ ನೀಳ್ದ ಕುರುಳ್ ಮದೀಯಕೋ
ಮಳೆಯ ಮುಖೇಂದುವಂ ಮಱಸಿದಂದಿನದೊಂದೊಳಲಿಂದಮೀಗಳಿಂ
ತೆಳಸಿತಳಲ್ ಮುಗಿಲ್ ಮಱಸಿ ಭೋಂಕೆನೆ ಕಂಡಮೃತಾಂಶುಬಿಂಬಮಂ ೩೦

ವ|| ಅಂತು ಕಂಡು ಮೀಱಲಾರದಿಂತೆಂದಂ,

ಪಡೆಯಿತು. ಅನುರಾಗವೆಂಬ ತಳಿರಿಂದ ಪ್ರಕಾಶಿಸಿತು. ಪ್ರೇಮಪೂರ್ಣವಾದ ನೋಟವೆಂಬ ಸಾಂದ್ರಪುಷ್ಪಗಳಿಂದ ತುಂಬಿ ತುಳುಕುತ್ತಿತ್ತು. ಸುರತವೆಂಬ ವಸಂತದಲ್ಲಿ ವೃದ್ಧಿ ಪಡೆಯಿತು. ವ|| ಮತ್ತೊಂದು ಪ್ರದೇಶದಲ್ಲಿ ಒಬ್ಬನು ನಿಂದಿಸಿದ ನಲ್ಲಳ ಕೋಪವಿಜೃಂಭಿತವಾದ ಮುಖವನ್ನು ನೋಡಿ ನಸುನಕ್ಕು ನುಡಿದು ದೂರವಾದನು. ಮತ್ತೊಂದು ಪ್ರದೇಶದಲ್ಲಿ ಒಬ್ಬನು ಕಾಮಾತುರನಾಗಿ ವ್ಯಸನದಿಂದ ಅಟ್ಟಲ್ಪಡುವ ಜಿಂಕೆಯ ಚಾಪಲ್ಯದಿಂದ ಕೂಡಿದ ಮಾತನ್ನು, ತನ್ನ ಸೂಳೆಯೊಳಾದ ಬೇಸರದಿಂದ ಗೆಳೆಯನಿಗೆಂದನು. ೨೯. "ನಾನು ಅವಳಿಗಾಗಿ ಮರುಕಗೊಳ್ಳುವೆನು. ಅವಳು ಅವನಿಗಾಗಿ ಎರಡು ಬಗೆಯದ ನಲ್ಲಳು. ಅವನೂ ಅವಳಿಗಾಗಿ ಮರುಕಗೊಳ್ಳುವನು. ಆಕೆಯೂ ಅನಂಗವಿನೋದದಿಂದಲೂ ನನ್ನ ಮೇಲಿನ ಹಂಬಲದಿಂದಲೂ ಮರುಗುವಳು. ಹೀಗಿರಲು ಏನೆನ್ನೋಣ? ಆತನನ್ನೂ ಆಕೆಯನ್ನೂ ನನ್ನನ್ನೂ ವಿಧಾತನು ಸಮಯ ಕಾಯ್ದು ಇರಿಯುವುದಕ್ಕಾಗಿ ಪಡೆದನೋ ಏನೋ? ಈ ಒಂದು ಆಶ್ಚರ್ಯವನ್ನು ನೋಡು". ವ|| ಮತ್ತೊಬ್ಬನಿಂತೆಂದನು. ೩೦. "ಮನೋಹರಳಾದ ಆ ಲತಾಂಗಿಯು ಉತ್ತಮವಾದ ಪುರುಷಾಯಿತಕ್ಕೆ ಪ್ರಾರಂಭಿಸಿದಳು. ನನ್ನ ಕಣ್ಣುಗಳ ಆಶೆ ತೀರುವಂತೆ ನೋಡಲು ಸ್ವಲ್ಪವೂ ಅವಕಾಶಕೊಡದಂತೆ ನೀಳ್ದ ಮುಂಗುರುಳುಗಳು ನನ್ನ ನಲ್ಲೆಯ ಮುಖೇಂದುವನ್ನು ಮರಸಿದುವು. ಆಗ ಅವಳ ಮುಖವು ಮೋಡಗಳ ಮರೆಯಲ್ಲಿರುವ ಚಂದ್ರಬಿಂಬವನ್ನು ಕಂಡಂತಿತ್ತು". ವ|| ಅಂತು ಕಂಡು ಅಗಲಿಕೆಯನ್ನು ಮೀರಲಾರದೆ ಹೀಗೆ ಹೇಳಿದನು.

ಬನಮಂ ಕೋಗಿಲೆ ಜಕ್ಕವಕ್ಕಿ ಪಗಲಂ ಪೂಗೊಂಚಲಂ ತುಂಬಿ ಚಂ
ದ್ರನನಂಭೋನಿಧಿ ಬಂದ ದೂವೆ ಮಲೆಯಂ ಕಾರ್ಗಾಲಮಂ ಸೋಗೆ ಮುಂ
ಬನಿಯಂ ಚಾದಗೆವಕ್ಕಿ ಹಂಸೆ ಕೊಳನಂ ಪದ್ಮಂಗಳಾದಿತ್ಯನಂ
ನೆನೆವಂತಾಂ ನೆನೆವೆಂ ಸರೋಜಮುಖಿಯಂ ಶ್ಯಾಮಾಂಗಿಯಂ ನಲ್ಲಳಂ ೩೧

ನುಡಿವೊಡೆ ಲಲ್ಲೆಯೆಂಗುಮೆರ್ದೆವೇಟ್ವೊಡೆ ಕೈತವಮೆಂಗುಮಾಸೆಯಿಂ
ಪಿಡಿದೊಡೆ ಸೇದೆಯೆಂಗುಮಿರಿಮೆಂದೊಡೆ ಕೈತವಮೆಂಗುಮೆಂದುನಾಂ
ಮಿಡುಕದೆ ಪೋದಗಲ್ವೆಡೆಯೊಳಿನ್ನಿರೆನೆಂಬೊಡೆ ಕಣ್ಣ ನೀರ್ಗಳೋ
ಗಡಿಸದೆ ಸೂಸೆ ಗಗ್ಗರಿಕೆಗೊಂಡುದನಾಂ ನೆನೆವೆಂ ಲತಾಂಗಿಯಂ ೩೨

ವ|| ಎಂದು ಮತ್ತೊಂದೆಡೆಯೊಳ್ ಒರ್ವಂ ವಿರಹಪರಿತಾಪದೊಳ್ ಸೈರಿಸಲಾಱದೆ ಮದನನಂ ಬಯ್ದು ಬೆಚ್ಚನೆ ಸುಯ್ದು ತನ್ನ ಕೆಳೆಯಂಗಿಂತೆಂದಂ,

ಪಗಲಿರುಳೆನ್ನದೆನ್ನೊಳೆ ಕಡಂಗುವನೆನ್ನೊಳೆ ಬಲ್ಪುದೋರ್ಪನಾ
ನಗಿದಱಿದಿರ್ದೊಡಂ ಚಲದಿನೆನ್ನೊಳೆ ಪೊಂಗಿ ಪೊಡರ್ಪುದೋರ್ಪನೋ
ಲಗವುರುಡಿಲ್ಲ ಮೆಚ್ಚವಣೆಗಿಲ್ಲ ಕರಂ ಮುಳಿಸಿಲ್ಲ ಕಾಯ್ದು ಕಂ
ಮಗೆ ಬಳಿಸಂದು ಕೊಂದಪನಕಾರಣದಿಂ ಮೊಱೆಯೋ ಮನೋಭವಾ ೩೩

ವ|| ಮತ್ತಮೊಂದೆಡೆಯೊಳೆರಡಱಿಯದೆ ಕೂರ್ತ ನಲ್ಲಳ್,

೩೧. "ಕೋಗಿಲೆಯು ವನವನ್ನೂ ಚಕ್ರವಾಕವು ಹಗಲನ್ನೂ ದುಂಬಿಯು ಹೂಗೊಂಚಲನ್ನೂ ಸಮುದ್ರವು ಚಂದ್ರನನ್ನೂ ಬಂಧನವಡೆದಾನೆಯು ವನವನ್ನೂ ನವಿಲು ಮಳೆಗಾಲವನ್ನೂ ಚಾದಗೆಯು ಮೊದಲು ಬಿದ್ದ ಹನಿಗಳನ್ನೂ ಹಂಸವು ಕೊಳವನ್ನೂ ಪದ್ಮಗಳು ಸೂರ್ಯನನ್ನೂ ನೆನೆಯುವ ಹಾಗೆ ನಾನು ಕಮಲಮುಖಿಯೂ ಸುಂದರಾಂಗಿಯೂ ಆದ ನಲ್ಲಳನ್ನು ನೆನೆಯುವೆನು." ೩೨. "ನುಡಿದರೆ ಲಲ್ಲೆಮಾತು ಎನ್ನುವಳು. ಹೃದಯ ಬಿಚ್ಚಿ ಮಾತನಾಡಿದರೆ ಕೈತವ (ಮೋಸ) ಎನ್ನುವಳು. ಅಪೇಕ್ಷೆದೋರಿಸಿದರೆ ದಣಿವೆನ್ನುವಳು. ಇರು ಎಂದರೆ ಕೈತವ ಎನ್ನುವಳು. ನಾನು ಮರುಗದೆ ಹೋದಾಗ ಅಗಲುವ ಸಮಯದಲ್ಲಿ ನಾನು ಇನ್ನಿರುವುದಿಲ್ಲ ಎಂದಾಗ ಕಣ್ಣೀರು ಸುರಿಸುವಳು. ಹೀಗೆ ಗದ್ಗದಧ್ವನಿಗೈಯುವ ಲತಾಂಗಿಯನ್ನು ನೆನೆಯುವನು" ಎಂದನು. ವ|| ಮತ್ತೊಂದು ದೆಸೆಯಲ್ಲೊಬ್ಬನು ವಿರಹತಾಪವನ್ನು ಸೈರಿಸಲಾರದೆ ಮನ್ಮಥನನ್ನು ಬಯ್ದು ಬಿಸಿಯುಸಿರು ಬಿಟ್ಟು ತನ್ನ ಗೆಳೆಯನಿಗೆ ಹೀಗೆಂದನು. ೩೩. "ಹಗಲಿರುಳೆನ್ನದೆ ನನ್ನಲ್ಲಿಯೇ ಮನ್ಮಥನು ಕೋಪಗೊಳ್ಳುವನು. ನನ್ನಲ್ಲಿಯೇ ಶಕ್ತಿದೋರುವನು. ನಾನು ಹೆದರಿ ನಿರ್ಬಲನಾಗಿದ್ದರೂ ಛಲದಿಂದ ನನ್ನ ವಿಷಯದಲ್ಲಿ ಪರಾಕ್ರಮವನ್ನು ತೋರಿಸುವನು. ನನಗೆ ಸಂಪತ್‌ಪ್ರಯುಕ್ತವಾದ ಸ್ಪರ್ಧೆಯಾಗಲೀ ಮೆಚ್ಚಿಕೆಯಾಗಲೀ ಹೆಚ್ಚು ಕೋಪವಾಗಲೀ ಇಲ್ಲ. ಹಾಗಿದ್ದರೂ ಕೋಪಿಸಿಕೊಂಡು ಮೌನವಾಗಿ ಹತ್ತಿರಕ್ಕೆ ಬಂದು ಅಕಾರಣವಾಗಿ ಮನ್ಮಥನು ಕೊಲ್ಲುತ್ತಾನೆ. ಓ ಮನ್ಮಥ, ಶರಣಾದೆನು" ಎಂದನು. ವ|| ಮತ್ತೊಂದೆಡೆಯಲ್ಲಿ ಎರಡು ಬಗೆಯದ ನಲ್ಲಳಿಗ,

ಮುಳಿದು ಮನಃಪ್ರಿಯಂ ಪೆಱಗುಗೆಯ್ದಿರೆ ಬೆಂಬಿಡಿದಪ್ಪಿಕೊಂಡ ನ
ಲ್ಲಳ ಮೊಲೆಯೊತ್ತಿನೊಳ್ ತಳರ್ದುದಾಕೆಯ ದೂರಿಸಿ ಸುಯ್ದ ಸುಯ್ಯೊಳು
ಚ್ಚಳಿಸಿದುದಾ ಸರೋಜದಳನೇತ್ರೆಯ ನಲ್ಮೆಯೊಳತ್ತ ಕಣ್ಣ ನೀ
ರ್ಗಳ ಪೊನಲಿಂದೆ ಕರ್ಚಿ ಕಳೆದಂತಿರೆ ಪೋದುದು ಕೋಪಮೋಪನಾ ೩೪

ವ।। ಮತ್ತೊಂದೆಡೆಯೊಳ್ ಒರ್ವಳ್ ಆತ್ಮೀಯಪ್ರಾಣನಾಥನಗಲ್ಕೆಯಂ ಸೈರಿಸಲಾಱದೆ,

ಪ್ರಾಣದಗಲ್ಕೆಯೊಳ್ ಮಱುಕಮೇದೊರೆತಕ್ಕುದೊಡಲ್ಲಳಂ ಕೆಲಂ
ಕಾಣದು ಕಾಣ್ಬುದಾವುದೊಡಲಲ್ತಿದು ಕಾರಿವಮೆನ್ನೊಡಲ್ಗೆ ನೀಂ
ಪ್ರಾಣಮಮೋಘಮಪ್ಪುದಜೆನೋಪನೆ ನಿನ್ನನಗಲ್ವಗಲ್ಕೆಯುಂ
ಪ್ರಾಣದಗಲ್ಕೆಯುಂ ಸಮನದಕ್ಕೆ ವಿಯೋಗಮನೆಂತು ಸೈರಿಪೆಂ ೩೫

ವ।। ಎಂದು ತನ್ನ ನಿರ್ಭರಪ್ರಣಯನಿಗಳದೊಳೆ ತೊಡರ್ಚಿ ತಾಗಿದಳ್ ಮತ್ತೊರ್ವಳ್ ನಿಜಪ್ರಾಣೇಶ್ವರನನೆಂತುಂ ತನ್ನೊಳಳವಡಿಸಲಾಱದೆ ನಿಜಪ್ರಿಯಸಖಿಗಿಂತೆಂದಳ್,

ಅನುವಂಗೆಯ್ದುಳಿಯೆಂಬ ತಾಯ ನುಡಿಯಂ ಕೈಕೊಂಡೆನೇ ನಂಟರೀ
ತನ ನಣ್ಪಂ ಬಿಸುಡೆಂದೊಡಾ ನುಡಿಯನಾನೇಗೊಂಡೆನೇ ನಾಣನೆ
ಳ್ಳನಿತುಂ ಕಾದೆನೆ ಬೇಡಿದೊಂದು ಪುರುಳಂ ಮಾರ್ಕೊಂಡೆನೇ ಬೇಡಿ ವೇ
ದನೆಗೊಂಡಾನೆಱೆದಟ್ಟೆಯುಂ ಬಗೆಯನೇಗಂಡಂ ಮನಂಗಂಡನೋ ೩೬

೩೪. ಕಾಂತನು ಕೋಪಗೊಂಡು ಪಕ್ಕಕ್ಕೆ ತಿರುಗಿಕೊಂಡನು. ಕಾಂತೆಯು ಕಾಂತನನ್ನು ಬೆಂಬಿಡದೆ ಹೋಗಿ ಅಪ್ಪಿಕೊಂಡಳು. ಆಗ ಅವಳ ಮೊಲೆಯೊತ್ತಿನಿಂದ ನಲ್ಲನ ಕೋಪವು ಸ್ವಲ್ಪ ಹೋಯಿತು. ನಲ್ಲೆಯನ್ನು ನಿಂದಿಸಿ ನಲ್ಲನು ಬಿಟ್ಟ ಬಿಸಿಯುಸಿರಿನಿಂದ ನಲ್ಲೆಯಾದ ಕಮಲನೇತ್ರೆಯ ಕಣ್ಣುಗಳಿಂದ ಕಣ್ಣೀರು ಉಕ್ಕಿತು. ಅದರಿಂದ ಪೂರ್ಣವಾಗಿ ನಲ್ಲನ ಕೋಪವು ತೊಳೆದುಹೋಯಿತು! ವ।। ಮತ್ತೊಂದೆಡೆಯಲ್ಲಿ ತನ್ನ ಪ್ರಾಣನಾಥನ ವಿಯೋಗವನ್ನು ಸೈರಿಸಲಾರದೆ ಒಬ್ಬಳು ೩೫. "ಪ್ರಾಣವೇ ಅಗಲುತ್ತಿರುವಾಗ ಮರುಕದಿಂದೇನು?" "ಇದು ಶರೀರವಲ್ಲವೆ?" "ಕಾಣುವುದಿಲ್ಲ" "ಹಾಗಾದರೆ ಇಲ್ಲಿ ಕಾಣುವುದೇನು" "ಅಲ್ಲ, ಇದು ದೇಹದಂತಿರುವ ಕೃತಕ" "ದೇಹಕ್ಕೆ ಏನು ಬೇಕು?" "ನೀನು ಅಮೋಘವಾದ ಪ್ರಾಣ" "ಆಗಿರಬಹುದು" "ಆದ್ದರಿಂದಲೇ, ಕಾಂತ, ಪ್ರಾಣವಿಯೋಗವೂ ನಿನ್ನ ವಿಯೋಗವೂ ಸಮವಾದುದು. ನಿನ್ನೀ ವಿಯೋಗವನ್ನು ಹೇಗೆ ಸಹಿಸಲಿ?" (ನಲ್ಲನಲ್ಲೆಯರ ಸಂಭಾಷಣೆ) ವ।। ಎಂದು ತನ್ನ ಅತಿಶಯವಾದ ಪ್ರೇಮಸಂಕೋಲೆಯಲ್ಲಿ ಸಿಕ್ಕಿಸಿಕೊಂಡು ತಬ್ಬಿಕೊಂಡಳು. ಮತ್ತೊಬ್ಬಳು ತನ್ನ ಪ್ರಿಯನನ್ನು ತನ್ನ ವಶದಲ್ಲಿಟ್ಟುಕೊಳ್ಳಲಾಗದೆ ತನ್ನ ಪ್ರೀತಿಯ ಗೆಳತಿಗಿಂತೆಂದಳು. ೩೬. "ಸಮಾಧಾನಗೊಳಿಸಿ ಅವನನ್ನು ಬಿಡು ಎಂದ ತಾಯ ಮಾತನ್ನು ಕೇಳಿದೆನೆ? ಈತನ ಸಂಬಂಧವನ್ನು ತೊರೆ ಎಂದ ನೆಂಟರಿಷ್ಟರ ಮಾತನ್ನು ಗೌರವಿಸಿದೆನೆ? ಸ್ತ್ರೀಸಹಜವಾದ ಲಜ್ಜೆಯನ್ನು ಎಳ್ಳಷ್ಟಾದರೂ ಉಳಿಸಿಕೊಂಡೆನೆ? ಬೇಕಾದ ಒಂದು

ವ॥ ಎಂದು ನುಡಿಯುತ್ತುಮಿರ್ದಳ್, ಮತ್ತೊಂದೆಡೆಯೊಳ್ ತೋಳ ಪಲ್ಲಟದೊಳ್ ಬೆದಱಿದ ಬಗೆವೆರಸು ಲಲ್ಲೆಗೆಯ್ವಳನೊರ್ವನತಿಚತುರ ವಿಟಂ,

ಬಿಗಿದಮರ್ದಪ್ಪುಗಳಮರ್ಕೆಗಳೊಯ್ವನೆ ಸುಯ್ವ ಸುಯ್ಯ ಗಾ
ಳಿಗಳೊಳಮರ್ಕೆಗೆಟ್ಟೊಡಲವ್ವೋಡಿದುದೆಂದಗಿವೆನ್ನ ನಿನ್ನ ಪ
ತ್ತುಗೆಯ ತೊಡರ್ಪದಿಂದು ಪಱಿದತ್ತು ಮನಂ ಬಱಿಕೆಯ್ದೆ ಸೊರ್ಕಿದಾ
ನೆಗೆ ಪಱಿವಂತಿರಿಂದು ಪಱಿದತ್ತೆನಗಂ ನಿನಗಂ ತಳೋದರೀ ೩೭

ವ॥ ಎಂದು ಪಱಿಪಡೆ ನುಡಿದು ಗೆಂಟಾದಂ, ಮತ್ತಮೊಂದೆಡೆಯೊಳ್ ಒರ್ಬನಗಲ್ದ ತನ್ನ ಮನೋನಯನವಲ್ಲಭೆಯಂ ನೆನೆದು,

ಮಿಸುಗುವ ತನ್ನ ಬಾಯ್ದೆಱೆಯೊಳಾಲದ ಪಣ್ಣನೆ ಮೆಯ್ಯ ಬಣ್ಣದೊಳ್
ಕೊಸಗನೆ ತನ್ನ ಬಳ್ವಳಿಕೆಯೊಳ್ ಸೆಳೆಗೊಂಬನೆ ಪೋಲ್ತು ನೋಡ ಮಾ
ನಸೆಯಣಮಲ್ಲಳಿಂತು ಮರವಾನಸಿಯಾಗಿಯುಮಾದುದೊಂದು ಮಾ
ನಸಿಕೆ ಮನಂಗೊಳಲ್ಕೆನಗಮತ್ತಳಗಂ ತರಳಾಯತಾಕ್ಷಿಯಾ ೩೮

ವ॥ ಎಂದುಮವಧರಿಸದೆ,

ನಳಿತೋಳೊಳ್ ತೊಡರ್ದೊಂದು ತೋಳಮಣಿವೋಲ್ ತುಂಗಸ್ತನದ್ವಂದದೊಳ್
ಪೊಳೆಯುತ್ತಾರದವೊಲ್ ಸಮುನ್ನತನಿತಂಬೋದ್ದೇಶದೊಳ್ ಪರ್ವಿ ಪ
ಜ್ಜಳಿಸಿತ್ತುಜ್ಜ್ವಳಕಾಂಚಿವೋಲಿನಿಯಳಂ ಪತ್ತಿರ್ಪ ಸೈಪೇಕೆ ಸಂ
ಗಳಿಕುಂ ಮೌನದೆ ಮುನ್ನ ಮಾನವಱಿ ನೋಂತಾ ನೋಂಪಿಯಂ ನೋಂತೆನೇ ೩೯

ವಸ್ತುವನ್ನಾದರೂ ಅವನಿಂದ ತರಿಸಿಕೊಂಡೆನೆ? ಬೇಡಿಕೊಂಡು ತಿರಸ್ಕರಿಸಲ್ಪಟ್ಟರೂ ನಾನೇ ಪ್ರೀತಿಯಿಂದ ಹೇಳಿಕಳುಹಿಸಿದರೂ ಅವನು ಲಕ್ಷಿಸುತ್ತಿಲ್ಲವಲ್ಲಾ? ಆ ಕಾಂತನು ನನ್ನನ್ನು ಮನಸ್ಸಿನಲ್ಲಿ ಏನೆಂದು ತಿಳಿದುಕೊಂಡಿರುವನೊ?" ವ॥ ಎಂದು ನುಡಿಯುತ್ತಿದ್ದಳು. ಮತ್ತೊಂದೆಡೆಯಲ್ಲಿ ತೋಳುಗಳ ಅದಲು ಬದಲಿನಿಂದ ಬೆದರಿದ ಮನಸ್ಸಿನಿಂದ ಕೂಡಿ ವ್ಯರ್ಥವಾಗಿ ಲಲ್ಲೆಗೈಯುತ್ತಿದ್ದವಳನ್ನು ಕುರಿತ ಅತಿಚದುರನಾದ ವಿಟನೊಬ್ಬನು ೩೭. "ಗಾಢಾಲಿಂಗನಗಳೂ ಅನುನಯಗಳೂ ಒಯ್ಯನೆ ಬಿಡುವ ಉಸಿರುಗಾಳಿಯಿಂದ ವಿಯೋಗ ಹೊಂದಿ ಶರೀರದಿಂದ ಚ್ಯುತವಾದುವು ಎಂದು ಹೆದರಿರುವ ನನ್ನ ನಿನ್ನ ಪ್ರೇಮಬಂಧನವು ಇಂದು ಹರಿದುಹೋಯಿತು. ಮನಸ್ಸು ಇಲ್ಲದ ಮೇಲೆ ಇಷ್ಟೇ ಸರಿ. ಕೃಶಾಂಗಿಯೇ ನನಗೂ ನಿನಗೂ ಸೊಕ್ಕಿದ ಆನೆಗೆ ಮದವು ಹರಿದ ಹಾಗೆ, ಇಂದು ಮನಸ್ಸು ಹರಿದುಹೋಯಿತು." ವ॥ ಎಂದು ಕತ್ತರಿಸಿದಂತೆ ನುಡಿದು ದೂರವಾದನು. ಮತ್ತೊಂದೆಡೆಯಲ್ಲೊಬ್ಬನು ಅಗಲಿದ ತನ್ನ ಮನೋವಲ್ಲಭೆಯನ್ನು ಸ್ಮರಿಸಿಕೊಂಡು, ೩೮. "ಹೊಳೆಯುವ ತುಟಿಯು ಆಲದ ಹಣ್ಣನ್ನೂ ಮೈಯ ಬಣ್ಣವು ಬೆಟ್ಟದಾವರೆಯ ಬಣ್ಣವನ್ನೂ ಬಳುಕಾಟವು ತೆಳುವಾದ ರೆಂಬೆಗಳನ್ನೂ ಹೋಲುತ್ತವೆ. ಆದ್ದರಿಂದ ನೋಡು. ಇವಳಲ್ಲಿ ಸ್ವಲ್ಪವೂ ಮಾನವಲಕ್ಷಣವಿಲ್ಲ. ಇವಳು ವನಮಾನುಷಿ! ಆದರೂ ನನಗೆ ಇವಳಲ್ಲಿ ಮನಃಪ್ರೀತಿಯುಂಟಾಗಿದೆ. ತರಳಾಯತಾಕ್ಷಿಯನ್ನು ಮನಸ್ಸಿನಲ್ಲಿ ಧ್ಯಾನಿಸಿದರೆ ವ್ಯಥೆಯೂ ಮೂಡುತ್ತದೆ" ವ॥ ಎಂದು ಲಕ್ಷ್ಯಗೊಡದೆ, ೩೯. "ಒಂದು ತೋಳನ್ನು ಕೋಮಲವಾದ ನಲ್ಲೆಯ ತೋಳಿನಲ್ಲಿ ತೊಡರಿಸಿಕೊಂಡು ಅವಳ ತುಂಗಸ್ತನಗಳೆರಡರ ಮೇಲೆ ಮಣಿಯಂತೆ

ವ|| ಎಂದು ಪಂಬಲಿಸುತ್ತಿರ್ದಂ, ಮತ್ತೊಂದೆಡೆಯೊಳ್ ತನ್ನ ಅಭಿನವವಿರಹಪರಿತಾಪದೊಳಿಂತೆಂದಳ್,

ಒಡಲುರಿಗುಂ ಮನಂ ಮಱುಗುಗುಂ ಕಿವಿ ಗಿಱ್ರನೆವೋಕುಮತ್ತೆ ಕ
ಣ್ಬಿಡಗುಗುಮೆಯ್ದೆ ಬಾಯ್ಬಿಡದೆ ಬತ್ತುಗುಮಳ್ಕೆರ್ದೆ ನೊಂದು ಕುಂದುಗುಂ
ನುಡಿ ತಡಿವಕ್ಕುಮಿಚ್ಛೆವಿಡುಗುಂ ಗಡ ನಲ್ಲರಗಲ್ಕೆಗೆಂಬ ನಾ
ಣ್ಣುಡಿಯನೆ ಕೇಳ್ದೆನಿನ್ನೆವರಮೋವೊಲವೆಂಬುದದಿಂತುಟಾಗದೇ ೪೦

ವ|| ಎಂದು ಪಂಬಲಿಸುತ್ತಿರ್ದಳ್, ಮತ್ತೊಂದೆಡೆಯೊಳ್ ಒರ್ವಳ್ ನಿಜಮನೋವಲ್ಲಭಪರಿತಾಪತಾಪಿತತನುಲತಿಕೆ ಗಗನತಳತಿಳಕನನಮೃತಕಿರಣನಂ ನೋಡಿ,

ಇನಿಯನಗಲ್ದುಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾ
ವಿನ ತಳಿರ್ವಾಸಿನೊಳ್ ಪೊರಳುತಿರ್ದಪೆನಾಗಳುಮಿಂತೆ ನೀನುಮೆ
ನ್ನನೆ ನಡೆನೋಡುತುಂ ನಭದೊಳಿರ್ದಪೆಯಪ್ಪುದಱಿಂದೆ ನಿನ್ನನಾ
ನನುವಿಪೆನೆನ್ನ ಮೆಯ್ಬಡವೊ ನಲ್ಲನ ಮೆಯ್ಬಡವೋ ನಿಶಾಕರಾ ೪೧

ವ|| ಎಂದು ಪಂಬಲಿಸುತಿರ್ದಳ್, ಮತ್ತಮೊಂದೆಡೆಯೊಳ್ ಒರ್ಬಳ್,

ಹೊಳೆದು ತಣಿಯದಂತೆ, ಎತ್ತರವಾದ ನಿತಂಬದ ಪ್ರದೇಶದ ಮೇಲೆ ಹರಡಿ ಪ್ರಜ್ವಲಿಸುವ ಒಡ್ಯಾಣದಂತೆ ಇನಿಯಳನ್ನು ತಬ್ಬಿಕೊಳ್ಳುವ ಪುಣ್ಯ ನನಗೆ ಸುಮ್ಮನೆ ಒದಗುತ್ತದೆಯೆ? ಅಂಥವರು ಮಾಡಿದ ವ್ರತವನ್ನು ನಾನು ಹಿಂದೆ ಮಾಡಿದೆನೆ?" ವ|| ಎಂದು ಹಂಬಲಿಸುತ್ತಿದ್ದನು. ಮತ್ತೊಂದೆಡೆಯಲ್ಲೊಬ್ಬಳು ನೂತನವಾದ ವಿರಹತಾಪದಿಂದ ಹೀಗೆ ಹೇಳಿದಳು. ೪೦. "ನಲ್ಲರು ಅಗಲಿದರೆ ಒಡಲುರಿಯುತ್ತದೆ. ಮನವು ವ್ಯಥೆಗೊಳ್ಳುತ್ತದೆ. ಕಿವಿಯೊಳಗೆ ಗಿರ್ರನೆ ಶಬ್ದವಾಗುತ್ತದೆ. ಕಣ್ಣುಗಳು ತೆರೆದೇ ಇರುತ್ತವೆ. ಬಾಯಿಯು ಒಂದೇ ಸಮನಾಗಿ ಬತ್ತುತ್ತದೆ. ಅಳ್ಳೆದೆಯು ನಂದಿ ಕುಂದುತ್ತದೆ. ಮಾತುಗಳು ತಡವರಿಸುತ್ತವೆ. ಇಚ್ಛೆಯು ಕೆಡುತ್ತದೆ ಎಂಬ ಹೇಳಿಕೆಯನ್ನು ಇದುವರೆಗೆ ನಾನು ಕೇಳಿದ್ದೆನು. ಓ, ಓ, ಪ್ರೀತಿಯೆಂಬುದು ಹೀಗಾಗಬೇಕೆ?" ವ|| ಎಂದು ಹಂಬಲಿಸುತ್ತಿದ್ದಳು. ಮತ್ತೊಂದೆಡೆಯಲ್ಲಿ ತನ್ನ ಕಾಂತನ ಅಗಲಿಕೆಯ ಪರಿತಾಪದಿಂದ ತಪ್ತವಾದ ತನುಲತೆಯುಳ್ಳ ಮತ್ತೊಬ್ಬಳು ಗಗನತಿಲಕನಾದ ಚಂದ್ರನನ್ನು ಕಂಡು, ೪೧. "ನನ್ನ ಇನಿಯನು ನನ್ನನ್ನಗಲಿ ಪರದೇಶದಲ್ಲಿದ್ದಾನೆ. ನಾನು ಇಲ್ಲಿ ಮಾವಿನ ಚಿಗುರುಗಳಿಂದ ನಿರ್ಮಿತವಾದ ಹಾಸಿಗೆಯಲ್ಲಿ ಹೊರಳಾಡುತ್ತಿದ್ದೇನೆ. ನೀನು ಯಾವಾಗಲೂ ನನ್ನ ನಡೆ ನೋಡುತ್ತಾ ಆಕಾಶದಲ್ಲಿರುವೆ. ಆದ್ದರಿಂದ ನನ್ನ ದೇಹ ಕೃಶವಾಗಿದೆಯೋ ಅಥವಾ ನನ್ನ ನಲ್ಲನ ದೇಹ ಕೃಶವಾಗಿದೆಯೋ ಎಂದು ನಿನ್ನನ್ನು ಕೇಳುತ್ತೇನೆ, ಹೇಳು, ಎಲೆ ಚಂದ್ರ!" ಎಂದು ಹಂಬಲಿಸುತ್ತಿದ್ದಳು. ವ|| ಮತ್ತೊಂದೆಡೆಯಲ್ಲಿ

ಅವಧಿಯನೊಂದುತಿಂಗಳೆಡೆಯಿಟ್ಟನಿಯಂ ತಡೆದಿರ್ಪ ನಲ್ಲನೆಂ
ಬವಸರದೊಳ್ ನಿಜಾಂಘ್ರಿನಖದರ್ಪಣಚುಂಬಿತ [ದೃಷ್ಟೆಜಾನನೇಂ
ದುವ][೧]ನವಲೋಕಿಸುತ್ತವಧಿತಪ್ಪಿದುದಾಜಿನೆ ಪತ್ತುತಿಂಗಳಾ
ದುವು ಬರಲಾತನಾಱದೊಡೆ ಸಾಯಲುಮಾಱೆನೆ ಸತ್ತು ನೀಗೆನೇ ೪೨

ವ॥ ಎಂಬು ಪಂಬಲಿಸುತ್ತಿರ್ದಳ್, ಮತ್ತೊಂದೆಡೆಯೊಳ್ ಒರ್ವಳ್ ತನ್ನ ಪ್ರಾಣವಲ್ಲಭಂ ಬಂದುದರ್ಕೆ ರಾಗಿಸಿ ಇಂತೆಂದಳ್,

ಎನಗೆನ್ನೋಪನ ಬಂದುದರ್ಕಿದುವೆ ದಲ್ ತೆಲ್ಲಂಟಿ ನೀಂ ನಿನ್ನ ಕಂ
ಪನುಗುಳ್ ಮಲ್ಲಿಗೆ ಚಂದ್ರ ನಿನ್ನ ಪೊಳೆಪಂ ನೀಂ ತೋಱು ನೀಂ ಮೆಲ್ಲಮೆ
ಲ್ಲನೆ ಮಂದಾನಿಳ ತೀಡು ಕೋಗಿಲೆ ಸರಂದೋಱೆಂದು ಮೆಯ್ವೆರ್ಚೆ ತ
ನ್ನಿನಿಯಂ ಬಂದೊಡೆ ನಲ್ಲಳೇಂ ನಲಿದಳೋ ನಾನಾವಿಳಾಸಂಗಳಿಂ ೪೩

ವ॥ ಎನೆ, ಮತ್ತೊಂದೆಡೆಯೊಳ್,

ವಿದ್ರುಮದಶನಚ್ಛದೆ ಕೋ
ಪೋದ್ರೇಕದಿನೆರ್ದು ಪೋಗೆ ತೆಗೆದಪ್ಪಿದೊಡು
ನ್ನಿದ್ರಾಂಭೋಜಾಸ್ಯೆಗೆ ಮದ
ನದ್ರವಮುಂ ಕಣ್ಣ ನೀರುಮುಣ್ಮಿದುವಾಗಳ್ ೪೪

ವ॥ ಎಂದು ನುಡಿಯುತ್ತುಮಿರ್ದಳ್, ಮತ್ತಮೊಂದೆಡೆಯೊಳ್ ಒರ್ಬಂ ಚದುರವಿಟಂ,

ಮಗುದೊಬ್ಬಳು, ೪೨. "ಒಂದು ತಿಂಗಳೊಳಗೆ ಬರುವೆನೆಂದು ಗಡುವಿಟ್ಟು ನಲ್ಲನು ಬರದೆ ತಡಮಾಡುತ್ತಿರುವನಲ್ಲ" ಎಂದು ಯೋಚಿಸುತ್ತಾ ತನ್ನ ಪಾದನಖಗಳೆಂಬ ಕನ್ನಡಿಗಳಲ್ಲಿ ತನ್ನ ಮುಖಚಂದ್ರನನ್ನು ನೋಡುತ್ತಾ "ಅವಧಿ ಕಳೆದುಹೋಯಿತು. ಅರಲ್ಲ, ಹತ್ತು ತಿಂಗಳಾದವು. ಅವನು ಬರಲಾಗದಿದ್ದರೆ ನಾನು ಸಾಯಲಾರೆನೆ? ಸತ್ತು ನೀಗೆನೆ?" ವ॥ ಎಂದು ಹಂಬಲಿಸುತ್ತಿದ್ದಳು. ಮತ್ತೊಂದೆಡೆಯಲ್ಲಿ ಒಬ್ಬಳು ತನ್ನ ಕಾಂತನು ಬಂದುದಕ್ಕೆ ಸಂತೋಷಪಟ್ಟು ಹೀಗೆಂದಳು. ೪೩. "ನನ್ನ ಕಾಂತನು ಬಂದುದಕ್ಕೆ ಇದೇ ನನಗಿದು ಕಾಣಿಕೆ. ಎಲೆ ಮಲ್ಲಿಗೆ! ನೀನು ನಿನ್ನ ಕಂಪನ್ನು ಹೊರಗೆಡಹು, ಎಲೆ ಚಂದ್ರ! ನೀನು ನಿನ್ನ ಹೊಳಪನ್ನು ತೋರು. ಮಂದಾನಿಲ! ನೀನು ಮೆಲ್ಲನೆ ಬೀಸು. ಎಲೆ ಕೋಗಿಲೆ, ನೀನು ನಿನ್ನ ಸ್ವರವನ್ನು ಪ್ರಕಾಶಗೊಳಿಸು" ಎಂದು ಹೇಳುತ್ತ ನಲ್ಲನು ಬಂದಾಗ ನಲ್ಲೆಯು ಮೈಯುಬ್ಬಿ ನಾನಾ ವಿಲಾಸಗಳಿಂದ ನಲಿದಳು. ವ॥ ಮತ್ತೊಂದೆಡೆಯಲ್ಲಿ, ೪೪. "ಹವಳದಂತೆ ತುಟಿಗಳುಳ್ಳವಳೊಬ್ಬಳು ಕೋಪೋದ್ರೇಕದಿಂದಾಗಿ ಎದ್ದು ಹೊರಟಳು. ಆಗ ಅವಳನ್ನು ಅವಳ ಇನಿಯನು ತೆಗೆದಪ್ಪಿಕೊಂಡನು. ಆಗ ಆ ಕಮಲಾಸ್ಯೆಗೆ ಮದನದ್ರವವೂ ಕಣ್ಣ ನೀರೂ ಒಟ್ಟಿಗೆ ಉಕ್ಕಿದುವು". ವ॥ ಎಂದು ಒಬ್ಬಳು ನುಡಿಯುತ್ತಿದ್ದಳು. ಮತ್ತೊಂದೆಡೆಯಲ್ಲಿ

---

೧ ಮಗ್ನಜಾನನೆಂ [೧]ದವ (ಅನ್ಯತ್ರ)

ಒದವಿದ ಕೂರ್ಮೆಯಿಲ್ಲದಳಿಪಾರಯಮಿಲ್ಲದ ಪಾಳಿ ರಾಗಮಿ
ಲ್ಲದ ಸುಸಿಲಟ್ಕೆಜೆಲ್ಲದ ಪದಂ ನೆವಮಿಲ್ಲದ ಕಾಯ್ಪು ಬೇಟಮಿ
ಲ್ಲದ ಪುರುಡೇವಮಿಲ್ಲದಳಲುಬ್ಬೆಗಮಿಲ್ಲದ ಕಣ್ಣ ನೀರ್ ಕರಂ
ಚದುರರುಮಂ ಮನಂಗೊಳಿಪುದೇಂ ಕಡುಜಾಣೆಯರೋ ಲತಾಂಗಿಯರ್ ೪೫

ವ|| ಎಂದು ನುಡಿದಂತನೇಕಪ್ರಕಾರದ ಕಟಕದ ನಾಗರಿಕನರನಾರೀಜನಂಗಳಂಗಜರಾಗರಂಜಿತ ವಿನೋದಂಗಳೊಳಿರೆ,

ಭರತೇಶ್ವರಂ ನಿಜಾಂತಃ
ಪುರಕುಮುದವನಂಗಳಲರೆ ತನ್ನಿಂ ತಾನುಂ
ಶರದದ ಚಂದ್ರಮನೊಳ್ ಮ
ಚ್ಚರಿಪಂತಿರೆ ಚಂದ್ರಚರಿತಮಂ ಕೈಕೊಂಡಂ ೪೬

ಅವತಂಸೋತ್ಪಲತಾಡನಂ ಕನಕಕಾಂಚೀಬಂಧನಂ ನೂಪುರಾ
ರವಝುಂಕಾರಿತಚಾರುವಾಮಚರಣಾಘಾತಂ ಚಳದ್ಭ್ರೂಲತಾ
ಗ್ರವಿಭಾಗೋತ್ಕಟತರ್ಜನಂ ತರಳಿತಾತಾಮ್ರಾಧರಂ ಚಕ್ರಿಗಿ
ತ್ತುವಲಂಪಂ ಪ್ರಣಯಪ್ರಕೋಪಸುರತಪ್ರಾರಂಭದೊಳ್ ಕಾಂತೆಯಾ ೪೭

ವ|| ಅಂತು ಸುರತಾಂಬುರಾಶಿಯನೀಸಿ ನಿದ್ರಾಂಗನಾಲಿಂಗಿತನಾಗಿರ್ಪನ್ನೆಗಂ,

ಚದುರವಿಟನು, ೪೫. "ಪ್ರೀತಿಯಿಲ್ಲದ ಹೆಬ್ಬಯಕೆ, ವಿಚಾರವಿರದ ಸರದಿ, ರಾಗವಿಲ್ಲದ ಸುರತ, ಪ್ರೀತಿಯಿಲ್ಲದ ಮಾತು, ಕಾರಣವಿಲ್ಲದ ಕೋಪ, ಒಲವಿರದ ಸ್ಪರ್ಧೆ, ನಾಚಿಕೆಯಿರದ ಅಳಲು, ಉದ್ವೇಗವಿಲ್ಲದ ಕಂಬನಿ ಇವು ಚದುರರನ್ನೂ ಸಂತೋಷ ಗೊಳಿಸುವುವು! ಲತಾಂಗಿಯರು ಅದೆಷ್ಟು ಜಾಣೆಯರೊ?" ಎಂದು ನುಡಿಯುತ್ತಿದ್ದನು. ವ|| ಹೀಗೆ ಅನೇಕ ಪ್ರಕಾರದಿಂದ ಸೇನಾಶಿಬಿರಗಳಲ್ಲಿ ನಾಗರಿಕರಾದ ನರನಾರಿಯರು ಕಾಮರಾಗದಿಂದ ರಂಜಿತವಾದ ವಿನೋದಗಳನ್ನು ನಡೆಸುತ್ತಿದ್ದರು.[1] ಆಗ. ೪೬. ಭರತೇಶ್ವರನ ಅಂತಃಪುರವೆಂಬ ಕುಮುದವನಗಳು ಅರಳಿದುವು. ಆಗ ಭರತ ಚಕ್ರವರ್ತಿಯೂ ಶಾರದಚಂದ್ರನ ಮೇಲೆ ಮತ್ಸರಗೊಂಡವನಂತೆ ಚಂದ್ರಚರಿತವನ್ನು ಕೈಗೊಂಡನು. (ಚಂದ್ರನಂತೆ ಅಂತಃಪುರಕುಮುದವನಗಳನ್ನರಳಿಸಿದನು) ೪೭. ನಲ್ಲಳ ತಲೆಯ ಆಭರಣವಾದ ಉತ್ಪಲದಿಂದ ಹೊಡೆತವೂ ಚಿನ್ನದ ಒಡ್ಯಾಣದಿಂದ ಬಂಧನವೂ ಅಂದುಗೆಗಳ ಶಬ್ದಗಳಿಂದ ಕೂಡಿದ ಎಡಗಾಲಿನ ಒದೆತಗಳೂ ಚಲಿಸುತ್ತಿರುವ ಹುಬ್ಬುಗಳ ತುದಿಯಿಂದ ಸೂಚಿತವಾದ ತರ್ಜನೆಯೂ ಅಲುಗುತ್ತಿರುವ ಕೆಂದುಟಿಗಳೂ ಪ್ರಣಯ ಕೋಪವುಳ್ಳ ಸುರತದ ಆರಂಭದಲ್ಲಿ ಚಕ್ರಿಗೆ ಆನಂದವನ್ನು ತಂದುವು. ವ|| ಅಂತು ಸುರತಸಮುದ್ರವನ್ನು ದಾಟಿ ಭರತೇಶ್ವರನು ನಿದ್ರಾಂಗನೆಯ ತೋಳ್ತೆಕ್ಕೆಯಲ್ಲಿದ್ದನು. ಆಗ,

---

1. ಈ ಆಶ್ವಾಸದ ೧೨ನೆಯ ಪದ್ಯದಿಂದ ಇಲ್ಲಿಯವರೆಗೆ ಅನೇಕ ಪದ್ಯಗದ್ಯ ಭಾಗಗಳು ವಿಭಿನ್ನಪ್ರತಿಗಳಲ್ಲಿ ದೊರೆಯುವುದಿಲ್ಲ. ಇವುಗಳಲ್ಲಿ ಬಹುಭಾಗ ಪ್ರಕ್ಷಿಪ್ತವೆಂದೇ ತೋರುತ್ತದೆ.

ಕಮಳೋದ್ದಾಮಕಷಾಯಸೌರಭಮಿಳನ್ಮತ್ತಾಳಿನೀಗೀತ ಪಂ
ಚಮಹಾಶಬ್ದವಿಜೃಂಭಿತಧ್ವನಿ ಲಸದ್ಗಾಂಧಾರನಾದಂ ಪ್ರಭಾ
ತಮರುತ್ಸುಂದರಮಂದಮಂದಗಮನಂ ಶಂಖಸ್ವನಂ ಪೂರ್ವದಿ
ಗ್ರಮಣೀವಕ್ತ್ರಸರೋಜರಾಗಮಯಮಾಯ್ತೆತ್ತಂ ತ್ರಿಯಾಮಾಂತ್ಯದೊಳ್ ೪೮

ಮಂಗಳಗೀತಿಗಳೊಳ್ಪುಗೆ
ಮಂಗಳಪಾಠಕರವಂಗಳಿಂದೆಸೆದಿರೆ ರಾ
ಜಾಂಗಣದೊಳ್ ಭರತನ ನಿ
ದ್ರಾಂಗನೆಯಂ ಪತ್ತುವಿಡಿಸುವಂತೆವೊಲಾಗಳ್ ೪೯

ನಿನಗೋಗಂಬಾಡುವ ಯುವ
ತಿನಿಕಾಯದ ದನಿಗೆ ಸೆಣಸುವಂತೆವೊಲಲರ್ವೀ
ವನಜವನಂಗಳ ತೊವರ್ಗಂ
ಪನಾಂಪ ಬಗೆ ಬಳಿಯೆ ಮೊರೆವುವಳಿಗಳ ಬಳಗಂ ೫೦

ಸರಸಿಜವನಂಗಳಲರ್ವಿನ
ಮಿರಲಾಱದೆ ಕಟದೊಳೆಱಗುವಳಿನಿವಹದ ಝಂ
ಕರಣಕ್ಕೆ ಕಾಯ್ಪುಗೊಂಡೆ
ೞ್ದರಸ ತೊಳಲ್ದಪುವು ನಿನ್ನ ವಿಜಯಗಜಂಗಳ್ ೫೧

ಹಿಮಕರಮಂಡಳಮಿದು ಶ
ತ್ರುಮಂಡಳಾಭಂ ನೃಪೇಂದ್ರ ಮಸುಳ್ದುದು ಬೇಗಂ
ನಿಮಿರಲ್ ಬಗೆದಪುದೀ ಮಿ
ತ್ರಮಂಡಲಂ ಮಿತ್ರಮಂಡಳಾಭಂ ನಿನ್ನಾ ೫೨

೪೮. ರಾತ್ರಿಯ ಕೊನೆಯ ಯಾಮದಲ್ಲಿ ಪೂರ್ವದಿಕ್ಕೆಂಬ ರಮಣಿಯ ಮುಖಕಮಲದ ರಾಗವು ಎಲ್ಲೆಡೆಯೂ ಹರಡಿತು. ಆಗ ಕಮಲಗಳ ಉತ್ಕೃಷ್ಟಕಷಾಯದ ಪರಿಮಳಕ್ಕೆರಗಿದ ದುಂಬಿಗಳ ಝೇಂಕಾರವೂ ಪಂಚಮಹಾವಾದ್ಯಗಳ ಧ್ವನಿಗಳಿಂದ ಶೋಭಿಸುತ್ತಿರುವ ಸಂಗೀತವೂ ಪ್ರಾತಃಕಾಲದ ಗಾಳಿಯ ಸುಂದರವಾದ ಮಂದಗಮನವೂ ಶಂಖಧ್ವನಿಯೂ ಉಂಟಾದುವು. ರಾತ್ರಿ ಕಳೆಯಲಾಗಿ ಪೂರ್ವದಿಕ್ಕೆಂಬ ರಮಣಿಯ ಮುಖಕಮಲದ ಕಾಂತಿ ಎಲ್ಲೆಡೆಯೂ ಹರಡಿತು. ೪೯. ರಾಜಾಂಗಣದಲ್ಲಿ ಜರುಗುತ್ತಿದ್ದ ಮಂಗಳಗೀತೆಗಳೂ ಮಂಗಳಪಾಠಕರ ಹೊಗಳಿಕೆಯ ಧ್ವನಿಗಳೂ ಭರತನ ನಿದ್ರಾಂಗನೆಯನ್ನು ತಟ್ಟಿ ಎಬ್ಬಿಸುವಂತೆ ತೋರುತ್ತಿದ್ದುವು. ಆಗ ಮಂಗಳಪಾಠಕರು ಹಾಡಿದರು. ೫೦. "ಅರಳಿದ ತಾವರೆಗಳ ಹಿತವಾದ ಸುವಾಸನೆಯನ್ನು ಪಡೆಯಲು ಬಯಸಿ ಮೊರೆಯುವ ದುಂಬಿವಿಂಡು ನಿನಗಾಗಿ ಹಾಡುವ ಯುವತಿಸಮೂಹದ ದನಿಗೆ ಮೇಲಾಟ ಹೂಡುತ್ತಿದೆಯೋ ಎಂಬಂತೆ ಝೇಂಕರಿಸುತ್ತಿವೆ. ೫೧. ಕಮಲವನಗಳು ಅರಳಲು ಅವುಗಳ ಸುವಾಸನೆಯನ್ನುಣ್ಣಲು ಆತುರಗೊಂಡ ದುಂಬಿಗಳು ಆನೆಯ ಗಂಡಸ್ಥಳದಲ್ಲಿ ಝೇಂಕರಿಸಲಾರಂಭಿಸಿದುವು. ಅರಸ! ಅವುಗಳಿಂದ ಗಾಬರಿಗೊಂಡೆದ್ದು ನಿನ್ನ ವಿಜಯಗಜಗಳು ತೊಳಲುತ್ತಿವೆ. ೫೨. ಶತ್ರುಸಮೂಹದಂತೆ ಚಂದ್ರಮಂಡಲವು ನಿಸ್ತೇಜಸ್ಕವಾಯಿತು. ನಿನ್ನ

ಪುರಪರಮೇಶ್ವರನಂದನ
ದೊರೆಕೊಳಿಸುಗೆ ನಿನಗೆ ತಡೆಯದಾಪುರುಪರಮೇ
ಶ್ವರನ ನಿರತಿಶಯಗುಣಪರಿ
ಕರಮುಂ ತತ್ಪ್ರಾತಿಹಾರ್ಯಮುಂ ಮಂಗಳಮುಂ ೫೩

ವ|| ಎಂಬ ಮಂಗಳಪಾಠಕರವಂಗಳೊಡನೆ ಭರತೇಶ್ವರನುನ್ನಿದ್ರನಾದನನ್ನೆಗಂ,

ದೆಸೆಗಳ ಸಂದಂ ಪಱಿದಾ
ಗಸದಿಂದಂ ಪತ್ತುವಿಡಿಸುವಂತೆವೊಲಿಳೆಯಂ
ಮಸಕದೊಳೆ ಪೊತ್ತು ನೆಗೆದವೊ
ಲೆಸೆದುದು ದಿಗ್ವಿಜಯಭೂರಿಭೇರೀನಿನದಂ[1] ೫೪

ವ|| ಅಂತು ಭೇರಿಯಂ ಪೊಯ್ಸಿದನನ್ನೆಗಂ,

|| ಉತ್ಸಾಹ ||

ಚಕ್ರರತ್ನಮೊಂದೆಯಲ್ತು ಚಕ್ರಿಗಾನುಮಲ್ತೆ ದೋ
ಶ್ಚಕ್ರಮೆಂದು ಬಂದು ಮುಂದೆ ನಿಲ್ವ ಮಾಟ್ಕೆಯಿಂ ಪ್ರಭಾ
ಚಕ್ರಮೆಸೆಯೆ ಚೆಲ್ವುವೆತ್ತುದುದಯಮಂದು ಪದ್ಮಿನೀ
ಚಕ್ರವಾಳ ಚಕ್ರವಾಕಚಕ್ರ ಚಕ್ರವರ್ತಿಯಾ ೫೫

ಆಗಳ್ ಪ್ರಭಾತಕಾಲನಿ
ಯೋಗಮನಾ ಚಕ್ರವರ್ತಿ ನಿರ್ವರ್ತಿಸಿ ಪೋ
ಪೋಗಲ್ವೇಟ್ ಪಯಣಮನೆಂ
ದಾಗಳ್ ತರವೇಟಿ ವಿಜಯಪರ್ವತಗಜಮುಂ ೫೬

ಮಿತ್ರಮಂಡಲದಂತಿರುವ ಸೂರ್ಯಮಂಡಲವು ಬೇಗನೆ ಉದಯವಾಗಲು ಬಯಸುತ್ತಿದೆ. ೫೩. ಪುರಪರಮೇಶ್ವರನ ಪುತ್ರನೆ; ನಿನಗೆ ಪುರುಪರಮೇಶ್ವರನ ನಿರತಿಶಯವಾದ ಗುಣಸಮೂಹವೂ ಅವನ ಮಹಿಮೆಯೂ ಮಂಗಳವೂ ಬೇಗ ಉಂಟಾಗಲಿ" ವ|| ಎಂದು ಸ್ತುತಿಗೈಯುತ್ತಿದ್ದರು. ಮಂಗಳಪಾಠಕರ ಶಬ್ದಗಳಿಂದ ಭರತೇಶ್ವರನು ನಿದ್ದೆಯಿಂದ ಎಚ್ಚರಹೊಂದಲು, ೫೪. ದಿಕ್ಕುಗಳ ಸಂದನ್ನು ಕತ್ತರಿಸಿ ಆಕಾಶದಿಂದ ಬೇರ್ಪಡಿಸಿದಂತೆ, ಭೂಮಿಯನ್ನು ಉತ್ಸಾಹದಿಂದ ಹೊತ್ತು ಮೇಲ್ನೆಗೆದಂತೆ, ದಿಗ್ವಿಜಯಪ್ರಯುಕ್ತವಾಗಿ ಭೇರಿಯ ದೊಡ್ಡಧ್ವನಿಯು ಪ್ರಕಾಶಿಸಿತು. ವ|| ಅಂತು ಭೇರಿಯನ್ನು ಹೊಡೆದಾಗ, ೫೫. ಭರತ ಚಕ್ರವರ್ತಿಗೆ ಚಕ್ರರತ್ನ ಒಂದೇ ಅಲ್ಲ. ನಾನೂ ಸಹ ಅವನ ಬಾಹುವಿಗೆ ಬಲವನ್ನು ನೀಡುವ ಚಕ್ರ ಎಂದು ಸೂರ್ಯಪ್ರಭಾಚಕ್ರವು ಮುಂದೆ ಬಂದು ಕಾಣಿಸಿಕೊಂಡಿತು. ಪದ್ಮಿನಿಗಳ ಸಮುದಾಯಕ್ಕೂ ಮತ್ತು ಚಕ್ರವಾಕ ಸಂಘಕ್ಕೂ ಚಕ್ರವರ್ತಿಯಾದ ಸೂರ್ಯನ ಉದಯ ಸೊಗಸಾಯಿತು. (ಮತ್ತು ಪದ್ಮಿನೀಸ್ತ್ರೀಯರೆಂಬ ಚಕ್ರವಾಕಪಕ್ಷಿಗಳಿಗೆ ಚಕ್ರವರ್ತಿಯಾದ ಭರತನ ಅಭ್ಯುದಯವನ್ನು ಸೂಚಿಸಿತು). ೫೬. ಆಗ ಭರತಚಕ್ರವರ್ತಿಯು ಪ್ರಭಾತಕಾಲದ ಕಾರ್ಯಗಳನ್ನೆಲ್ಲ ನೆರವೇರಿಸಿದನು. "ದಿಗ್ವಿಜಯಾರ್ಥವಾಗಿ

೧ ಈ ಪದ್ಯವು ಆ. ೧೩-೪೨ರಲ್ಲಿಯೂ ಬಂದಿದೆ.

ಇದನಾನೆ ಮಾಡುವಾಗಳ್
ಬದಿ ಗಿರಿಗಳ್ ನೆರೆದ ರೂಪಪರಮಾಣುಗಳಂ
ದದಿನಿರ್ದುವಕ್ಕುಮೆನೆ ತನ
ಗೊದವಿದಗುರ್ವೆಸೆಯೆ ಮುಂದೆ ನಿಂದತ್ತು ಗಜಂ ೫೭

ವ|| ಅಂತು ದಿಗ್ಗಜೇಂದ್ರ ದೇವಾಂಶದೊಳ್ ನಿರ್ಮಿಸಿದಂತಿರ್ದ ವಿಜಯಪರ್ವತಗಜಮಂ ನೋಡಲೊಡಂ,

ಪರಿಪೂರ್ಣೋತ್ಕಟದಾನಧಾರೆ ಕಟದಿಂ ಪಾಯ್ತರ್ಪುದುಂ ಪೆರ್ಚಿ ಪು
ಷ್ಕರದಿಂ ಶೀಕರನಿರ್ಝರಂ ಸುರಿವುದುಂ ನೇತ್ರಂಗಳೊಳ್ ಬಂದು ಬೆ
ಳ್ನೊರೆಯಂ ಪೋಲ್ತುದುಮುರ್ಬಿ ಕಾರ್ಮುಗಿಲ ನೀರ್ವೊಲ್ ಕೋಶದಿಂದಂ ಮದಂ
ಸುರಿಯುತ್ತಿರ್ಪುದುಮೊಪ್ಪೆ ಚಕ್ರಿಯ ಮನಂಗೊಂಡತ್ತು ಮತ್ತದ್ವಿಪಂ ೫೮

ದಕ್ಷಿಣಕಟಮನೆ ಸಿವುಱುವ
ದಕ್ಷಿಣರದನದೊಳೆ ಹಸ್ತಮಂ ಪೇಱುವ ಚೆ
ಲ್ವೀಕ್ಷಣಹರಮೆನೆ ಜಯಮನ
ನಕ್ಷರಮಱಿಪಿದುದು ಭರತರಾಜಮದೇಭಂ ೫೯

ದಂತೋತ್ಸಂಗಸ್ಥಿತಜಯ
ಕಾಂತೆಗೆ ಚೆಲ್ವಾಗೆ ಪಿಡಿದ ಸೀಗುರಿದಟಿಯೆಂ
ಬಂತೆವೊಲೆಸೆದುವು ಮದಜಳ
ಮಂ ತಣಿಯುಣಲೆಱಗಿ ಸುಳಿವ ಮದಮಧುಪಂಗಳ್ ೬೦

ಹೋಗೋಣವೆಂದು ಹೇಳು" ಎಂದು ಆಜ್ಞಾಪಿಸಿ ವಿಜಯಪರ್ವತವೆಂಬ ಆನೆಯನ್ನು ಕರೆತರುವಂತೆ ಹೇಳಿದನು. ೫೭. ಈ ಆನೆಯನ್ನು ಬ್ರಹ್ಮನು ಸೃಷ್ಟಿಸುವಾಗ ಬೆಟ್ಟಗಳನ್ನು ನಿರ್ಮಿಸಲುಪಯುಕ್ತವಾದ ರೂಪಪರಮಾಣುಗಳನ್ನು ಬಳಸಿದ್ದಾನೆಯೋ ಎಂಬಂತಿದ್ದ ಬೃಹದಾಕಾರದ ಆನೆಯು ಬಂದು ನಿಂತಿತು. ವ|| ದಿಗ್ಗಜೇಂದ್ರಗಳ ದೇವಾಂಶದಿಂದ ನಿರ್ಮಿತವಾಗಿದೆಯೋ ಎಂಬಂತಿದ್ದ ವಿಜಯಪರ್ವತ ಗಜೇಂದ್ರನನ್ನು ನೋಡುವಾಗ, ೫೮. ಉತ್ಕಟವಾದ ಮದಧಾರೆಯು ಅದರ ಕೆನ್ನೆಯಿಂದ ಪ್ರವಹಿಸಿತು. ಸೊಂಡಲಿನಿಂದ ತುಂತುರುಗಳ ಹೊನಲು ಹರಿಯಿತು. ಕಣ್ಣುಗಳಲ್ಲಿನ ಬಿಂದುವು[1] (?) ಬೆಳ್ನೊರೆಯನ್ನು ಹೋಲಿತು. ಕಾರ್ಮುಗಿಲ ನೀರಿನಂತೆ ಕೋಶದಿಂದ (ಮದಸಂಗ್ರಹಸ್ಥಾನ) ಮದ ಸುರಿಯಿತು. ಹೀಗಿದ್ದ ಮದ್ದಾನೆಯು ಚಕ್ರಿಯ ಮನಸ್ಸನ್ನು ಆಕರ್ಷಿಸಿತು. ೫೯. ಭರತರಾಜನ ಮದ್ದಾನೆಯು ತನ್ನ ದಕ್ಷಿಣದ ಕೆನ್ನೆಯ ಮೇಲೆ ತುಂತುರುಹನಿಗಳನ್ನು ಸೂಸುತ್ತ ದಕ್ಷಿಣದ ದಂತದ ಮೇಲೆ ಸೊಂಡಿಲನ್ನು ಹೇರಿತು. ಆ ಚೆಲ್ವು ನೋಟಕರ ನೋಟವನ್ನು ಸೆಳೆಯುತ್ತಾ ಮಾತಿಲ್ಲದೆ ಜಯವನ್ನು ಸೂಚಿಸಿತು. ೬೦. ಮದಜಲವನ್ನು ತೃಪ್ತಿಯಾಗುವಂತೆ ಕುಡಿದು ಸುಳಿಯುತ್ತಿರುವ ದುಂಬಿಗಳು ದಂತಗಳೆಂಬ ತೊಡೆಯ ಮೇಲೆ ಮಂಡಿತಳಾದ ಜಯ

1 'ನಿಂದು' ಎಂಬ ಪಾಠಾಂತರವಿದೆ. 'ಕಣ್ಣ ಪ್ರಾಂತದಲ್ಲಿ ಮದೋದಕದ ಹನಿಗಳು ನಿಂತು' ಎಂಬ ಅರ್ಥವನ್ನು ಹೇಳಬಹುದು.

ಇದು ವಿದ್ವಿಷ್ಟಪ್ರತಾಪೋದಯದವದಹನೋದ್ರೇಕವಿಧ್ವಂಸಿನೀಳಾಂ
ಬುದಧರಾಸಾರಮೆಂಬಂತೊದವಿದ ಮದಧಾರಾಜಳಾಸಾರದಿಂದು
ರ್ಬಿದಗುರ್ಬಂ ತಾಳ್ದಿ ನಿಂದೂರ್ಜಿತಜಯಗಜಮಂ ರಾಗದಿಂದೇಱಿದಂ ನೀ
ರದಗರ್ಜದ್ಭೂರಿಭೇರೀರವಬಧಿರಿತದಿಙ್ಮಂಡಲಂ ಸಾರ್ವಭೌಮಂ ೬೧

ವ|| ಅಂತಧರೀಕೃತಸಪ್ತಚ್ಛದಾಮೋದಗಜಮದಗಂಧಾಂಬುಕುಲ್ಯಾಪ್ರವಾಹದೊಳಂ ಅಪಹಸಿತ ಶರದಿಂದುಕುಂದಸ್ತಬಕಕರ್ಣಚಾಮರರಾಜಹಂಸ ಸಲೀಲೋತ್ತಂಸದೊಳಂ ವಿಜಯಶ್ರೀಕೇಶಹಸ್ತ ಶಂಕಾಕಾರಿಶಂಕುಕೇಳೀಮಯೂರಶೋಭೆಯೊಳಂ ಗಗನಗಂಗಾತರಂಗಾಯಮಾನ ಕದಳಿಕಾಕಾನನ ಕಮನೀಯದೊಳಂ ವಿಕ್ರಮಕ್ರೀಡಾಪರ್ವತಮಿರ್ಪಂತಿರ್ದ ವಿಜಯಪರ್ವತಗಜೇಂದ್ರಮನೇಱಿ ದಂಡ ಚಕ್ರರತ್ನಂಗಳ್ ಮುಂದೆ ನಡೆವಿನಂ ಅನುಕೂಲಾನಿಲಾಂದೋಳಾಯಮಾನ ರಾಜಕುಂಜರವಿಜಯ ಕದಳಿ ಕಾತರಂಗಿತ ಗಗನಾಂಗಣನುಂ ಉದಾತ್ತಹೇಷಾರವಮುಖರಿತಬಹುಭಂಗಿರಂಗತ್ತರಂಗಿತ ಧರಣೀತಳಾಂಗಣನುಂ ಅನೇಕ ಸೇವಕಕ್ಷತ್ರಿಯಾತಪತ್ರಮಂಡಲಪಿಹಿತದಿನಕರನುಂ ಉಚ್ಚಳಿತಬಹಳಧೂಳೀ ಪಟಲಪಿಹಿತರಿಪುನೃಪತಿನಗರನುಂ ಅತಿಪ್ರಚುರಚಳದವನಿಪಾಳಸಂಚಳಚ್ಚಾಮರಮರುತ್ಪ್ರೇಂಖೋಳಿತಾ ಭರಣವಿಚಿತ್ರನೇತ್ರ ವೈಜಯಂತಿಕಾಂಚಳನುಂ ಅತಿಚಕಿತಾರಾತಿಶುದ್ಧಾಂತಕಾಂತಾತ್ಯಂತಚಿಂತಾಶ್ವಾಸಾನಿ ಲಾಂದೋಳಿತ ಕುಚಸಿಚಯಾಂಚಳನುಂ ಉದ್ದಾಮಪದಾತಿಪದಕ್ಷೋಭಸಂಚಳಿತಧರಾಚಕ್ರನುಂ ಅಖಿಳದಿಗ್ವಿಜೃಂಭಣ ಪ್ರಯಾಣಮಂಗಳಾನಕಾನೇಕರವಶ್ರವಣಕಂಪಿತಪರಚಕ್ರನುಮಾಗಿ ನಡೆಯೆ,

ಲಕ್ಷ್ಮಿಗೆ ಹಿಡಿದ ಚಾಮರಗಳೋ ಎಂಬಂತೆ ಪ್ರಕಾಶಿಸಿದುವು. ೬೧. ಸಾರ್ವಭೌಮನು ಪ್ರೀತಿಯಿಂದ ಆ ಪ್ರಸಿದ್ಧ ಜಯಗಜವನ್ನು ಏರಿದನು. ಅದು ಶತ್ರುಜನರ ಪ್ರತಾಪೋದಯವೆಂಬ ಕಾಳ್ಗಿಚ್ಚಿನ ಉದ್ರೇಕವನ್ನು ನಾಶಪಡಿಸುವ ನೀಲಮೇಘದ ಸುರಿ ಮಳೆಯೋ ಎಂಬಂತೆ ಸುರಿಯುತ್ತಿದ್ದ ಮದಧಾರಾಜಲಾಸಾರದಿಂದ ಭಯಂಕರವಾಗಿತ್ತು. ಆಗ ಮೊಳಗಿದ ಮೋಡದ ಗರ್ಜನೆಯಂತಿದ್ದ ಭೇರೀರವಗಳು ದಿಙ್ಮಂಡಲಗಳನ್ನು ಕಿವುಡಾಗಿಸಿದುವು. ವ|| ಏಳೆಲೆಬಾಳೆಗಳ ಸುವಾಸನೆಯನ್ನು ಮೀರಿಸುತ್ತಿದ್ದ ಆನೆಯ ಮದಗಂಧಜಲದ ಕಾಲುವೆಯ ಪ್ರವಾಹದಿಂದಲೂ ಶರಚ್ಚಂದ್ರ ಮತ್ತು ಕುಂದಪುಷ್ಪ ಮಂಜರಿಗಳನ್ನು ತಿರಸ್ಕರಿಸುತ್ತಿದ್ದ ಕರ್ಣಚಾಮರಗಳೆಂಬ ರಾಜಹಂಸಗಳ ಉತ್ತಮ ಲೀಲೆಗಳಿಂದಲೂ ವಿಜಯಲಕ್ಷ್ಮಿಯ ಕೇಶಪಾಶದ ಸಂದೇಹವನ್ನುಂಟುಮಾಡುವ ಶಂಕುನಾಮಕ ಆಯುಧಗಳೆಂಬ ಕೇಳೀಮಯೂರಗಳ ಶೋಭೆಯಿಂದಲೂ ಆಕಾಶಗಂಗೆಯ ಅಲೆಗಳಂತಿರುವ ಪತಾಕೆಗಳೆಂಬ ಕಾಡಿನ ಕಮನೀಯತೆಯಿಂದಲೂ ಶೋಭಿಸುತ್ತ ವಿಕ್ರಮಕ್ರೀಡಾಪರ್ವತವೊ[1] ಎಂಬಂತಿದ್ದ ವಿಜಯಪರ್ವತವೆಂಬ ಗಜೇಂದ್ರವನ್ನು ಭರತನು ಏರಿದನು. ಆಗ ದಂಡರತ್ನ ಚಕ್ರರತ್ನಗಳು ಮುನ್ನಡೆದುವು. ಅನುಕೂಲಕರವಾದ ಗಾಳಿಯಿಂದ ಉಯ್ಯಾಲೆಯಂತೆ ಆಡುತ್ತಿದ್ದ, ರಾಜಗಜಗಳ ಮೇಲೆ ಎತ್ತಿಹಿಡಿದ ವಿಜಯಪತಾಕೆಗಳಿಂದ ಗಗನಾಂಗಣವು ತರಂಗಿತವಾಯಿತು. ಹೇಷಾರವಗಳನ್ನು ಮಾಡುತ್ತಿದ್ದ ಕುದುರೆಗಳ ಅನೇಕ

---

1 ಹಿಂದಿನ ವಿಶೇಷಣಗಳು ಮತ್ತಗಜವನ್ನು ವಿಕ್ರಮಕ್ರೀಡಾಪರ್ವತವೆಂದು ಉತ್ಪ್ರೇಕ್ಷಿಸಲು ಸಹಾಯಕವಾಗಿವೆ. ಕುಲ್ಯಾಪ್ರವಾಹ-ಮೊದಲಾದವು ಪರ್ವತದಲ್ಲಿರುತ್ತವೆ.

ಅಡಿಯಿಡಲೀ ಧರಾವಳಯವಿಟ್ಟೆಡೆಯೆಂಬಿನಮಭ್ರಮಂಡಲಂ
ಕಡುನಳಿದಾದುದೀ ಬಲದ ಧೂಳಿಯೊಳೆಂಬಿನಮೊಂದನೊಂದು ತ
ಳ್ತಿಡೆಗಿಜಿದತ್ತೆಲುಂ ನಡೆವ ದಂತಿಘಟಾಳಿಯಿನೆತ್ತಪೋದುದಾ
ವೆಡೆಯದು ಪೇಟ್ ದಿಶಾವಳಯಮೆಂಬಿನಮಾದುದದೊಂದು ವಿಸ್ಮಯಂ ೬೨

ತಡೆವಂ ಗಂಗಾದ್ವಾರದಿ
ನೆಡೆಯೊಳ್ ಬೀಡಿಲ್ಲ ಭರತರಾಜಂಗೆಂದೇಂ
ನಡೆದುದೊ ಪೆರ್ಬಡೆ ಗಂಗೆಯ
ತಡಿವಿಡಿದೆರಡನೆಯ ಗಂಗೆ ನಡೆವಂತಾಗಳ್ ೬೩

ಸಾಗರದೊಳಗಿರ್ದಂಕದ
ಮಾಗಧನಂ ಕಟ್ಟದಲ್ಲದಿರನರಸನೆನು
ತ್ತೋಗಡಿಸದೆ ನಡೆದುದು ಬಲ
ಸಾಗರಮಾಸಾಗರಂಬರಂ ತರತರದಿಂ ೬೪

ವ।। ಆಗಳ್,

ರೀತಿಯ ನೆಗೆತಗಳಿಂದ ಭೂಮ್ಯಂಗಣವು ತರಂಗಿತವಾಯಿತು. ಸೇವಕರಿಂದಲೂ ಕ್ಷತ್ರಿಯರಿಂದಲೂ ಹಿಡಿಯಲ್ಪಟ್ಟ ಕೊಡೆಗಳ ಗುಂಪಿನಿಂದ ಸೂರ್ಯನು ಮುಚ್ಚಲ್ಪಟ್ಟನು. ಮೇಲಕ್ಕೆದ್ದ ಧೂಳೀಸಮೂಹದಿಂದ ಶತ್ರುನಗರವು ಮರೆಮಾಡಲ್ಪಟ್ಟಿತು. ವೇಗವಾಗಿ ಸಂಚರಿಸುತ್ತಿದ್ದ ರಾಜರು ಬೀಸಿದ ಚಾಮರಗಳ ಗಾಳಿಯಲ್ಲಿ ಆಭರಣಗಳಿಂದಲಂಕೃತವಾದ ಚಿತ್ರವಸ್ತ್ರಗಳ ಬಾವುಟದ ಸೆರಗು ಆಡುತ್ತಿತ್ತು. ತುಂಬ ಹೆದರಿದ ಶತ್ರುಗಳ ಅಂತಃಪುರಸ್ತ್ರೀಯರ ಅತಿಚಿಂತೆಯಿಂದುಂಟಾದ ನಿಟ್ಟುಸಿರಿನ ಗಾಳಿಯಿಂದ ಸ್ತನಗಳ ಮೇಲಿನ ಸೀರೆಯ ಸೆರಗುಗಳು ಹಾರಾಡಿದುವು, ಶೂರರಾದ ಕಾಲಾಳುಗಳ ಕಾಲುಗಳ ತುಳಿತದಿಂದ ಧರಾಮಂಡಲವು ಅದುರಿತು. ಎಲ್ಲ ದಿಕ್ಕುಗಳಿಗೂ ಹರಡಿದ ವಿಜಯಪ್ರಯಾಣಕಾಲದ ಮಂಗಳವಾದ್ಯಗಳ ಶಬ್ದಗಳನ್ನು ಕೇಳಿ ಶತ್ರುಸಮೂಹವು ನಡುಗಿಹೋಯಿತು. ಈ ರೀತಿಯಲ್ಲಿ ಭರತೇಶನು ವಿಜಯಪ್ರಯಾಣಮಾಡಿದನು. ೬೨. ಹೆಜ್ಜೆಯಿಡಲು ಭೂಮಂಡಲವು ಇಕ್ಕಟ್ಟಾಯಿತು. ಸೈನ್ಯದ ಧೂಳಿಯಿಂದ ಮೇಘಮಂಡಲವು ತುಂಬ ಜಗ್ಗಿಹೋಯಿತು ಎಂಬಂತೆ ಆನೆಗಳ ಹಿಂಡು ಒಂದಕ್ಕೊಂದು ತಗುಲಿಕೊಂಡು ಕಿರಿದಾದ ಜಾಗದಲ್ಲಿ ನಡೆಯಿತು. ತತ್ಫಲವಾಗಿ ದಿಕ್ಕುಗಳು ಎತ್ತಹೋದುವು? ದಿಕ್ಕುಗಳಾವುವು? ಎಂಬುದೊಂದೂ ತಿಳಿಯಲಿಲ್ಲ! ಇದೊಂದು ವಿಸ್ಮಯ! ೬೩. ಗಂಗೆಯ ಮುಖದ್ವಾರದಲ್ಲಿ ಸೇನೆಯನ್ನು ನಿವೇಶನಗೊಳಿಸೋಣ. ಭರತರಾಜನಿಗೆ ನಡುವೆ ಬೀಡುಬಿಡಲು ಸಾಧ್ಯವಿಲ್ಲ ಎಂದು ಹೆಬ್ಬಲವು ಗಂಗೆಯ ದಡವನ್ನು ಹಿಡಿದು ಎರಡನೆಯ ಗಂಗೆಯು ಹರಿಯುವಂತೆ ನಡೆಯಿತು. ೬೪. ರಾಜನು ಸಾಗರದಲ್ಲಿ ನೆಲಸಿರುವ ಶೂರನಾದ ಮಾಗಧನನ್ನು ಸೆರೆಹಿಡಿಯದೆ ಬಿಡೆನೆಂದು ಹೇಳುತ್ತ, ಉತ್ಸಾಹದಿಂದ ಸೈನ್ಯಸಾಗರವು ಸಾಗರದವರೆಗೆ ತರತರವಾಗಿ ನಡೆಯಿತು, ವ।। ಆಗ

ಚತುರಂಗಬಲಸಮನ್ವಿತ
ರತರ್ಕ್ಯವಿಕ್ರಮರನೇಕಕರಿತುರಗಮಣಿ
ಪ್ರತತಿಗಳಂ ಮುಂದಿಟ್ಟವ
ನತರಾದರ್ ಚಕ್ರಿಗಳ್ಕಿ ದಂಡೋಪನತರ್ ೬೫

ಅತಿಭಯಮಮಂ ತಮಗೆ ಚಮೂ
ಪತಿಮಾಡಿದೊಡಳ್ಕಿ ಕುಪ್ಯಸಾರಾದಿ ಧನ
ಪ್ರತತಿಯನಿತ್ತೆತ್ತಂ ಪ್ರತಿ
ಹತಭುಜವಿಕ್ರಾಂತರಂತಪಾಳರ್ ಕಂಡರ್ ೬೬

ಕಸ್ತೂರಿಕಾಂಡಕಂ ವನ
ಹಸ್ತಿರದಂ ಹಸ್ತಿಮಸ್ತಕೋದ್ಭವಮುಕ್ತಾ
ವಿಸ್ತಾರಮೆಂದು ತಂದು ಸ
ಮಸ್ತವನಾಧೀಶರವನಿಪತಿಯಂ ಕಂಡರ್ ೬೭

ವ|| ಮತ್ತಂ ಪ್ರಾಚ್ಯಾರ್ಣವತಟನಿಕಟವರ್ತಿಗಳಪ್ರತಿಪ್ರಚಂಡಮಾಂಡಳಿಕರ್ ಭರತೇಶ್ವರ ಚಕ್ರವರ್ತಿಯ ಬರವಂ ಕೇಳ್ದು

ಕರಿಸಂಘಾತಮುಮಂ ಹಯವ್ರಜಮುಮಂ ಪಿಂತಿಕ್ಕಿ ತೂರ್ಯಸ್ವನೋ
ತ್ಕರಮಂ ಮಾಣಿಸಿ ಹೇತಿಮುಕ್ತಭಟದೋರ್ದಂಡಾಗ್ರಶುಂಭದ್ಧ್ವಜೋ
ತ್ಕರಸಂದೋಹಮುಮಂ ಬಿಸುಟ್ಟುಡುಗಿ ಪಿಂಛಚ್ಛತ್ರಮಂ ಪ್ರಶ್ರಯಾ
ಕರವೇಷೋಚಿತರರ್ಘ್ಯಹಸ್ತರಿದಿರಂ ಬಂದರ್ ಭಯಭ್ರಾಂತಿಯಿಂ ೬೮

೬೫. ಚತುರಂಗಸೈನ್ಯಸಮೇತರಾದ ಅಪ್ರತಿಮ ಪರಾಕ್ರಮಿಗಳೆಂದು ಪ್ರಸಿದ್ಧರಾದ ವೀರರು ಆನೆ ಕುದುರೆ ಮತ್ತು ಶ್ರೇಷ್ಠವಾದ ರತ್ನಸಮೂಹಗಳನ್ನೂ ತಂದೊಪ್ಪಿಸಿ ದಂಡಕ್ಕೆ ಹೆದರಿ ಚಕ್ರಿಗೆ ತಲೆಬಾಗಿದರು. ೬೬. ಚಮೂಪತಿಯು ತಮಗೆ ಅತ್ಯಂತ ಭಯವನ್ನುಂಟುಮಾಡಲು, ಭಯದಿಂದ ಗಡಿಯ ರಕ್ಷಕರಾಜರು ಅವನಿಗೆ ಚಿನ್ನವೆ ಮೊದಲಾದ ಧನರಾಶಿಗಳನ್ನು ಕಾಣಿಕೆಯಾಗಿತ್ತು ಶರಣಾಗತರಾದರು. ೬೭. ಕಸ್ತೂರಿಯ ಅಂಡವನ್ನೂ (ನಾಭಿಕೋಶವನ್ನೂ) ಕಾಡಾನೆಗಳ ದಂತಗಳನ್ನೂ ಆನೆಗಳ ತಲೆಯೋಡಿನಲ್ಲಿರುವ ಮುತ್ತುಗಳನ್ನೂ ತಂದೊಪ್ಪಿಸಿ ಕಾಡೊಡೆಯರು ಅವನಿಪತಿಯನ್ನು ಸಂದರ್ಶಿಸಿದರು. ವ|| ಮತ್ತೆ ಪೂರ್ವಸಮುದ್ರತಟ ನಿವಾಸಿಗಳೂ ಅತಿಪ್ರಚಂಡರೂ ಆದ ಮಂಡಲಾಧೀಶ್ವರರು ಭರತೇಶಚಕ್ರವರ್ತಿಯ ಆಗಮನವನ್ನು ಕೇಳಿ ೬೮. ಆನೆಗಳ ಹಿಂಡನ್ನೂ ಕುದುರೆಗಳ ಗುಂಪನ್ನೂ ಹಿಂದೆ ಇಟ್ಟು, ತೂರ್ಯಸ್ವನಗಳನ್ನು ತಡೆಗಟ್ಟಿ, ಆಯುಧಗಳನ್ನು ತೊರೆದು, ಭಟರ ಬಾಹುದಂಡಾಗ್ರದಲ್ಲಿ ಹಿಡಿದ ಪತಾಕೆಗಳನ್ನು ಬಿಸುಟು, ನವಿಲುಗರಿಗಳ ಛತ್ರಿಯನ್ನು ಮಡಚಿ, ವಿನಯಾನ್ವಿತವಾದ ವೇಷಗಳನ್ನು ತೊಟ್ಟು, ಅರ್ಘ್ಯವನ್ನು ಕೈಯಲ್ಲಿ ಹಿಡಿದವರಾಗಿ ಭಯಭ್ರಾಂತಿಗಳಿಂದ

ವ|| ಅಂತು ತನ್ನ ಬಲಂ ಬೆರಸೆಲ್ಲಿಯುಂ ನಿಲ್ಲದೆ ಬಂದು ಕಾಲಾನುಭಾವದಿಂ ಯುಗಾರಂಭ ವರ್ಷಾರಂಭದೊಳಂ ತಗುಳ್ದಿರ್ದೀದ್ವೀಪದೊಳಗಣ ನದೀನದಂಗಳ ಜಲಂಗಳನೊಳಕೊಂಡ ಲಂಘ್ಯತ್ವದೊಳಂ ದ್ವೀಪಪರ್ಯಂತವೇಷ್ಟನದೊಳಂ ನೆಱೆದು ವಜ್ರವೇದಿಕೆಯಿಂ ಪೊಱಪೊಣ್ಮಿದ ಲವಣ ಸಮುದ್ರದೊಳಗಣೆ ಪೋಲ್ತಿರ್ದುಪಸಮುದ್ರದ ತಡಿವಿಡಿದು ಅದಂ ನೋಡುತ್ತಂತೆ ಬಂದು ಗಂಗಾದ್ವಾರದ ವಜ್ರವೇದಿಕೋತ್ತುಂಗತೋರಣದ್ವಾರದಂತರ್ವಣ ತುಂಗಕುಜಂಗಳ ನೆೞಲ್ಗಳೊಳ್ ನಾಲ್ವತ್ತೆಣ್ಗಾವುದದ ನೀಳದ ಮೂವತ್ತಾಱು ಗಾವುದದಗಲದ ಬೀಡಿಂಗೆ ವಾಸ್ತುವಿಭಾಗಕ್ಕೆಡೆಯಿಲ್ಲದೆ ಕುಱುಂಬಗಳೊಳ್ ಬೀಡಂ ಬಿಡಿಸಿದಾಗಳ್,

ಗಂಗಾದ್ವಾರಾಂತರ್ವಣ
ತುಂಗಕುಜಂಗಳ ನೆೞಲ್ಗಳುಂ ತೀಡುವ ತ
ದ್ಗಂಗಾತರಂಗಮರುದಾ
ಸಂಗಮುಮೇಂ ಪಡೆಯ ಸೇದೆಯಂ ಪಿಂಗಿಸಿತೋ ೬೯

ವ|| ಆಗಳ್,

ಭುವನಸ್ತುತ್ಯಾದಿಚಕ್ರೇಶ್ವರಬಲರಜದಿಂ ಪೂತಮಾಗಿರ್ದೆನೆಂಬು
ತ್ಸವದೊಳ್ ವೇಳಾತರಂಗೋತ್ಕರಚಯದಿಂದಾಡುವಂತಿರ್ದ ಪೂರ್ವಾ
ರ್ಣವಮಂ ಬಾಹಾಬಳೋಪಾರ್ಜಿತವಿಜಯಯಶೋದುಂದುಭಿಧ್ವಾನಧೀರಾ
ರವಮಂ ಕೈಕೊಂಡುದಂ ಕ್ಷತ್ರಿಯಕುಲತಿಲಕಂ ನೋಡಿದಂ ಚಕ್ರನಾಥಂ ೭೦

ಇದಿರಾಗಿ ಬಂದರು. ವ|| ಹಾಗೆ ಸಮಸ್ತ ಸೈನ್ಯದೊಡನೆಲ್ಲಿಯೂ ನಿಲ್ಲದೆ ಒಂದು ಕಾಲಪ್ರಭಾವದಿಂದ ಯುಗಾರಂಭದಲ್ಲಾದ ಮಳೆಗಾಲದ ಆರಂಭದಲ್ಲಿ ಉಂಟಾದ ದ್ವೀಪಗಳೊಳಗಿನ ನದೀನದಗಳ ನೀರಿನ ಪ್ರವಾಹದಿಂದ ದಾಟಲಾಗದ ದ್ವೀಪದ ಸಮೀಪದೇಶಗಳವರೆಗೂ ಬಳಸಿರುವ ವಜ್ರವೇದಿಕೆಯಿಂದ ಹೊರಬಿದ್ದು ಲವಣ ಸಮುದ್ರದೊಳಗಿನ ಭಾಗವನ್ನು ಹೋಲುತ್ತಿದ್ದ ಉಪಸಮುದ್ರದ ದಡಹಿಡಿದು ಅದನ್ನು ನೋಡುತ್ತ ಬಂದು ವಜ್ರವೇದಿಕೆಯ ಉನ್ನತವಾದ ತೋರಣದ್ವಾರದಲ್ಲಿನ ಅಂತರ್ವನದ ಉನ್ನತವೃಕ್ಷಗಳ ನೆರಳಲ್ಲಿ ನಲವತ್ತೆಂಟು ಗಾವುದದಷ್ಟು ನೀಳವಾಗಿರುವ ಮೂವತ್ತಾರು ಗಾವುದದಷ್ಟು ಅಗಲವಾಗಿರುವ ಸೇನೆಯ ಬೀಡಿಗೆ ತಕ್ಕ ವಾಸ್ತುವಿಭಾಗಕ್ಕೆ ಅವಕಾಶ ವಿಲ್ಲದ್ದರಿಂದ ದಿಣ್ಣೆಗಳ (?) ಮೇಲೆ ಬೀಡನ್ನು ಬಿಡಿಸಿದನು. ೬೯. ಗಂಗೆಯ ದ್ವಾರಗಳಲ್ಲಿನ ಅಂತರ್ವನದ ಉನ್ನತ ವೃಕ್ಷಗಳ ನೆಳಲುಗಳೂ ಗಂಗೆಯ ಪ್ರವಾಹದ ಅಲೆಗಳ ಮೇಲೆ ಬೀಸಿಕೊಂಡು ಬಂದ ಗಾಳಿಯೂ ಭರತೇಶಚಕ್ರವರ್ತಿಯ ಸೇನಾಪಡೆಯ ಬೆವರನ್ನು ಹೋಗಲಾಡಿಸಿದುವು. ವ|| ಆಗ ೭೦. ಕ್ಷತ್ರಿಯಕುಲತಿಲಕನಾದ ಚಕ್ರನಾಥನು ಪೂರ್ವಸಮುದ್ರವನ್ನು ಕಂಡನು. ಅದು ಲೋಕಸ್ತುತನಾದ ಆದಿಚಕ್ರಿಯ ಸೈನ್ಯಧೂಳಿಯಿಂದ ಪವಿತ್ರನಾಗಿದ್ದೇನೆಂಬ ಸಂತೋಷದಿಂದ ತಟದ ಅಲೆಗಳೆಂಬ ಕೈಗಳಿಂದ ಮೇಲೆದ್ದು ಆಡುವಂತೆ ಕಾಣಿಸಿತು. ಸಮುದ್ರದ ಮೊರೆತವು ತೋಳ್ಬಲದಿಂದ ಸಂಪಾದಿತವಾದ ಭರತನ ವಿಜಯಕೀರ್ತಿಯ ಸೂಚಕವೆನಿಸಿದ ದುಂದುಭಿಗಳ ಧೀರಧ್ವನಿಗಳಂತೆ ತೋರಿತು.

ವ|| ಅಂತು ಗಗನತಳಮಂ ತಱುಂಬುವಂತೆ ನೆಗೆದ ವಜ್ರವೇದಿಕೆಯುಮಂ ಅಂಬುದಪಥಕ್ಕಾಲಂಬಮಿರ್ಪಂತಿರ್ದ ಲವಣಾಂಬುರಾಶಿಯಂ ನೋಡಿ,

ಎನಗೆ ಪೊಸಂತಿಲೀ ನೆಗೆಬ್ದ ವಜ್ರದ ವೇದಿಕೆ ಗೋಷ್ಪದಂ ದಲೀ
ವನನಿಧಿ ಪಾಯ್ದು ಮಾಗಧನನೀಗಳೆ ಕಟ್ಟುವೆನಿಲ್ಲಿ ಪೂಣ್ದು ನಿ
ಲ್ವನಿತುವರಂ ಸುರಂ ಗಹನಮೇ ಪುದಿದವ್ವಳಿಪೆನ್ನ ಕಾಯ್ಪು ಪೋ
ಪಿನಮಿರದೀಗಳೀಂಟುವೆನೊ ದಾಂಟುವೆನೋ ಲವಣಾಂಬುರಾಶಿಯಂ ೭೧

ಚಕ್ರದೊಳೇಂ ಮತ್ತೇಜ
ಶ್ಶಕ್ರಮೆ ಮುಂದಕ್ಕೆ, ದಂಡರತ್ನಂಬರಮಾರ್
ವಕ್ರಮೆನಗಖಿಳಧರಣೀ
ಚಕ್ರದೊಳಿನ್ನೆನ್ನ ಬಾಹುದಂಡಮೆ ಸಾಲ್ಗುಂ ೭೨

ವ|| ಎಂದು ನಿಜಭುಜಬಳಾವಲೇಪಮನೆ ಮುಂದಿಟ್ಟು ನುಡಿದ ಚಕ್ರವರ್ತಿಯಂ ಪುರೋಹಿತ ಪ್ರಮುಖಕುಲವೃದ್ಧರ್,

ದೇವರ ಭುಜಗರ್ವಕ್ಕೇ
ನಾವುದುಮರಿದುಂಟೆ ಸಂದ ಚಕ್ರಿಗಳೆಸಕಂ
ದೇವ ನಿನಗೆಸಕಮದಱಿಂ
ದೇವರ್ ನೆಗಬಲ್ವೇಳ್ಕುಮೆಂಬುದುಮಾಗಳ್ ೭೩

ಅಧಿವಾಸಿತಜೈತ್ರಾಸ್ತ್ರಂ
ವಿಧುವಿಶದದುಕೂಲವಸನಶೋಭಂ ನಾನಾ
ವಿಧಮಂತ್ರಾನುಷ್ಠಾನ
ಪ್ರಧಾನನುಪವಾಸದಿಂ ತ್ರಿರಾತ್ರಮನಿರ್ದಂ ೭೪

ವ|| ಅಂತು ಆ ಗಗನತಳವನ್ನು ತಡೆಯುವಂತೆ ಮೇಲಕ್ಕೆದ್ದ ವಜ್ರದ ವೇದಿಕೆಯನ್ನೂ ಮೇಘಮಾರ್ಗಕ್ಕೆ ಅವಲಂಬನವೆಂಬಂತಿರುವ ಲವಣಸಮುದ್ರವನ್ನೂ ನೋಡಿ ೭೧. "ನನಗೆ ಈ ಮೇಲಕ್ಕೆದ್ದ ವಜ್ರವೇದಿಕೆಯು ಮನೆಯ ಹೊಸಲು, ಸಮುದ್ರವು ನನಗೆ ಒಂದು ಗೋಷ್ಪದ. ಮಗಧಾಮರನು ಪ್ರತಿಜ್ಞೆ ಮಾಡಿ ನಿಲ್ಲುವುದರೊಳಗೆ ಅವನನ್ನು ಕಟ್ಟುತ್ತೇನೆ. ಇದರಲ್ಲೇನು ಅಚ್ಚರಿ? ನನ್ನ ಕೋಪವಾರುವುದರೊಳಗೆ ಸಮುದ್ರವನ್ನು ಕುಡಿಯುವೆನು, ಇಲ್ಲವೆ ದಾಟುವೆನು! ೭೨. ಚಕ್ರದಿಂದೇನುಪಯೋಗ? ನನ್ನ ತೇಜಶ್ಶಕ್ರವೇ ಮುಂದಿರಲಿ! ದಂಡರತ್ನದ ಪರ್ಯಂತ ಹೋಗುವಷ್ಟು, ಈ ನಿಖಿಲಜಗತ್ತಿನಲ್ಲಿ ನನಗೆ ವಿರೋಧಿ ಯಾರಿದ್ದಾರೆ? ಇನ್ನು ನನ್ನ ಬಾಹುದಂಡವೇ ಸಾಕು"[1]. ವ|| ಎಂದು ತನ್ನ ತೋಳ್ಬಲದ ಮೇಲಿನ ಗರ್ವದಿಂದ ನುಡಿದ ಚಕ್ರವರ್ತಿಗೆ ಪುರೋಹಿತನೇ ಮೊದಲಾದ ಕುಲವೃದ್ಧರೆಂದರು: ೭೩. "ಮಹಾಸ್ವಾಮಿ! ತಮ್ಮ ತೋಳ್ಬಲದ ಅಭಿಮಾನಕ್ಕೆ ಆವುದೂ ಎದುರಿಲ್ಲ. ಹೆಸರಾಂತ ಚಕ್ರವರ್ತಿಗಳ ಕಾರ್ಯಗಳೇ ನಿಮ್ಮ ಕಾರ್ಯಗಳು. ಅವನ್ನೇ ತಾವು ಮುಂದುವರಿಸಿಕೊಂಡು ಹೋಗಬೇಕು". ೭೪. ಆಗ ಭರತನು ಜೈತ್ರಾಸ್ತ್ರಗಳನ್ನು ಮಂತ್ರದಿಂದ ಸಂಸ್ಕರಿಸಿದನು. ಚಂದ್ರನಂತೆ ಬೆಳ್ಳಗಿರುವ ರೇಷ್ಮೆ ವಸ್ತ್ರಗಳನ್ನುಟ್ಟನು. ವಿವಿಧ

---

1 'ವಿನಪ'ದಲ್ಲಿ ಈ ಪದ್ಯದ ವಿಚಾರವಾಗಿ ಪ್ರಸ್ತಾಪವಿದೆ

ವ॥ ಅಂತು ದರ್ಭಶಯನತಳಗತನಾಗಿರ್ದು ಪಂಚಪರಮೇಷ್ಠಿಗಳ್ಗೆ ಪೂಜೆಯಂ ಪುರೋಹಿತಂ ಮಾಡಿ ಶಾಂತಿಕಪೌಷ್ಟಿಕಕ್ರಿಯೆಯಂ ನಿರ್ವರ್ತಿಸಿ ಮಱುದಿವಸಂ ನೇಸರ್ಮೂಡೆ ಮಂಗಳಾಳಂಕರಣಾಳಂಕೃತನಾಗಿ ಪಡೆವಳ್ಳನಂ ಪಡೆಗೆ ಕಾಪುವೇೞ್ದು ದಿವ್ಯಾಸ್ತ್ರಂಗಳಿಂ ತೆಕ್ಕನೆ ತೀವಿ ಜಳಸ್ಥಳಾವಿಳಂಬಿಗಳಪ್ಪ ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದಜಿತಂಜಯಮೆಂಬ ರಥಮನೇಱೆ ತನ್ನ ಮನದನ್ನನಪ್ಪ ಸಾರಥಿಯಂ ಚೋದಿಸಲ್ವೇೞ್ದು ವೇದ್ಯಾರೋಹಣಂ ತನಗೆ ವಿಜಯಶ್ರೀವಿವಾಹವೇದ್ಯಾರೋಹಣಮನೆ ಪೋಲೆ,

ವೇದಿಯನಾತ್ಮಗೃಹಾಂಗಣ
ವೇದಿಯೊಳೆಣೆಯಾಗೆ ಬಗೆದು ಜಳಧಿಯುಮಂ ಲ
ಕ್ಷ್ಮೀದಯಿತಂ ನೀರ್ವರಿಯಿಂ
ದಾದಮೆ ಕಿಱಿದೆಂದು ಬಗೆದು ನೋಡಿದನಾಗಳ್ ೭೫

ವ॥ ಅಂತು ತನಗೆ ವಿಜಯಕಾರ್ಯಸಿದ್ಧಿದ್ವಾರಮಿರ್ಪಂತಿರ್ದ ಗಂಗಾದ್ವಾರದೊಳಗನೆ ಲವಣಜಳಧಿಯಂ ಪೊಕ್ಕಾಗಳ್,

ನೆಗೞ್ದೆನ್ನ ಗುಣನಲಂಘ್ಯಂ
ಜಗದೊಳದಂ ಕಿಡಿಸಿದಪ್ಪನೀ ನೃಪನೆಂದ
ೞ್ವಗದೊಳೆ ಪುಯ್ಯಲಿಪಂತೆವೊ
ಲೊಗೆದುದು ಚಳದನಿಲಹತಪಯೋನಿಧಿನಾದಂ ೭೬

ಪ್ರೋದ್ವೃತ್ತತರಂಗಬಾಹು ಸ
ಮುದ್ಯಚ್ಛೀಕರವಿಮಿಶ್ರಮುಕ್ತಾಕ್ಷತದಿಂ
ದಾದ್ಯಮಹೀಪತಿಗೆತ್ತಿದ
ಪಾದ್ಯಮನನುಕರಿಪುದಾಯ್ತು ವಾರ್ಧಿವಿಳಾಸಂ ೭೭

ಮಂತ್ರಾನುಷ್ಠಾನಗಳಲ್ಲಿ ತೊಡಗಿ ಮೂರು ದಿನಗಳ ಕಾಲ ಉಪವಾಸವಿದ್ದನು. ವ॥ ಹಾಗೆ ದರ್ಭೆಗಳ ಹಾಸಿಗೆಯಲ್ಲಿದ್ದುಕೊಂಡು 'ಪಂಚಪರಮೇಷ್ಠಿ'ಗಳಿಗೆ ಪೂಜೆ ಮಾಡಿದನು. ಪುರೋಹಿತನು ಶಾಂತಿಪೌಷ್ಟಿಕಕ್ರಿಯೆಗಳನ್ನು ನೆರವೇರಿಸಿದನು. ಮರುದಿನ ಸೂರ್ಯೋದಯದಲ್ಲಿ ಭರತನು ಮಂಗಳಾಲಂಕರಣಗಳಿಂದ ಭೂಷಿತನಾಗಿ ಸೇನಾಪತಿಗೆ ಸೇನೆಯನ್ನು ನೋಡಿಕೊಳ್ಳುವಂತೆ ಆಜ್ಞಾಪಿಸಿ ದಿವ್ಯಾಸ್ತ್ರಗಳಿಂದ ಹೆಚ್ಚಾಗಿ ತುಂಬಿದ ಮತ್ತು ಜಲಸ್ಥಳಗಳಲ್ಲಿ ಸಂಚರಿಸಬಲ್ಲ ಹಸುರುಬಣ್ಣದ ಕುದುರೆಗಳನ್ನು ಹೂಡಿದ ಅಜಿತಂಜಯವೆಂಬ ರಥವನ್ನೇರಿ ಪ್ರಿಯನಾದ ಸಾರಥಿಯನ್ನು ರಥ ನಡಸುವಂತೆ ಆಜ್ಞಾಪಿಸಿದನು. ರಥವೇದಿಕೆಯ ಆರೋಹಣವು ರಾಜನಿಗೆ ವಿಜಯಶ್ರೀ ವಿವಾಹದ ವೇದಿಕೆಯ ಆರೋಹಣಕ್ಕೆಣೆಯಾಯಿತು. ೭೫. ಸಿರಿಯೊಡೆಯನಾದ ಚಕ್ರಿಯು ವಜ್ರವೇದಿಕೆಯನ್ನು ತನ್ನ ಗೃಹಾಂಗಣದ ವೇದಿಕೆಗೆಣೆಯಾಗಿಯೂ ಸಮುದ್ರವನ್ನು ನೀರಿನ ಕಾಲುವೆಗಿಂತ ಕಿರಿದೆಂದೂ ಭಾವಿಸಿ ನೋಡಿದನು. ವ॥ ಅಂತು ತನ್ನ ವಿಜಯಕಾರ್ಯಸಿದ್ಧಿಗೆ ದ್ವಾರವೋ ಎಂಬಂತಿದ್ದ ಗಂಗಾದ್ವಾರದಲ್ಲಿದ್ದ ಲವಣಸಮುದ್ರವನ್ನು ಹೊಕ್ಕನು. ಆಗ, ೭೬. "ಜಗತ್ತಿನಲ್ಲಿ ನನಗೆ ಅಲಂಘ್ಯತೆಯೇ ಪ್ರಸಿದ್ಧವಾದ ಗುಣ. ಅದನ್ನು ಈ ನೃಪನು ಕೆಡಿಸಿದನೆಂಬ ಗಾಬರಿಯಿಂದ ಕೂಗಿಕೊಳ್ಳುವಂತೆ ಗಾಳಿಯ ಹೊಡೆತದಿಂದ ಸಮುದ್ರದಲ್ಲಿ ಶಬ್ದವುಂಟಾಯಿತು. ೭೭. ಮೇಲಕ್ಕೆದ್ದ ಅಲೆಗಳೆಂಬ ತೋಳುಗಳಿಂದ ಎರಚಲ್ಪಟ್ಟ ತುಂತುರುಹನಿಗಳೊಡನೆ

ತರಳತರಂಗತುರಂಗಂ
ಕರಿಮಕರಕರೀಂದ್ರಮಖಿಳಶಫರಪದಾತು
ತ್ಕರಮುಗ್ರಗ್ರಾಹರಥಂ
ಭರತಂಗಿತ್ತುದು ಪಯೋಧಿ ಬಳವಿಳಸನಮಂ ೭೮

ಪುಗೆ ಪಲವುಂ ತೊಱೆಗಳ ನೀ
ರಗಾಧಜಳರಾಶಿ ಕುಡಿದು ತಣಿಯದೆ ಪಾತಾ
ಳಗಣಂಗಳಿವೆತ್ತಂ ತಾ
ಳುಗೆವರೆಗಂ ತೆಱೆದ ಬಾಯನನುಕರಿಸಿರ್ಕುಂ ೭೯

ವ॥ ಮತ್ತಮಂಬರಂಬರಂ ಬಗಿದು ನಿಮಿರ್ವ ತೆರೆಗಳೆಂಬ ಗಿರಿಗಳ ಮೇಗೆ ಕೃತಕಗಿರಿಗಳಿರ್ಪಂತಿರ್ದ ವೀಣಾಧರಕಿನ್ನರಪನ್ನಗಾಮರರುಮನೋಳಿವಟ್ಟು ಬರ್ಪ ಶಂಖದ ಬಳ್ಳವಳ್ಳಿಗಳುಮನಳ್ಳವಿಳ್ಳೆಯಾಗಿ ಪೋಗಲೀಯದೆ ತಳ್ತು ಪರಭಾಗಂಬಡೆದ ವಿದ್ರುಮಲತೆಗಳುಮಂ ಕರಿಮಕರಂಗಳ ಕಯ್ಯೋಱೆನೊಳ್ ಬಿಬ್ಬಿಱಿಬಿಱಿದೊಡೆದ ಮುಕ್ತಾಪುಟೋದರಂಗಳೊಳಗಣಿಂದಮುಚ್ಚಳಿಸಿದ ತಾರಾತರಳ ಮುಕ್ತಾಫಳಂಗಳುಮನಟ್ಟೆವಟ್ಟು ನೋಡುತ್ತುಂ ಪೋಗೆವೋಗೆ,

ರಥದಿಂದಂ ಮುಂಚೆ ಮನೋ
ರಥಂ ಮನೋರಥದಿನತ್ತಲದು ಮುಂಚೆ ಬ್ರಹ
ದ್ರಥಮಿಂತು ಭರತರಾಜನ
ರಥದ ಮನೋರಥದ ಬೇಗಮೊದವಿದುದಾಗಳ್ ೮೦

ಮಿಶ್ರಿತವಾದ ಮುತ್ತಿನ ಅಕ್ಷತೆಗಳಿಂದ ಸಮುದ್ರದ ವಿಲಾಸವು ಆದಿರಾಜನಿಗೆತ್ತಿದ ಪಾದೋದಕವನ್ನು ಅನುಕರಿಸುವಂತೆ ತೋರಿತು. ೭೮. ಚಂಚಲವಾದ ಅಲೆಗಳೇ ಕುದುರೆ. ಕರಿಮಕರಗಳೇ ಗಜೇಂದ್ರ. ಸಮಸ್ತವಾದ ಮೀನುಗಳೇ ಒಂದು ಕಾಲಾಳುಪಡೆ. ಭಯಂಕರವಾದ ಮೊಸಳೆಯೇ ರಥ. ಇವು ಭರತನಿಗೆ ಸಮುದ್ರವು ಅರ್ಪಿಸಿದ ಸೇನೆಯ ವಿಲಾಸವನ್ನು ತಂದವು. ೭೯. ಹಲವಾರು ತೊರೆಗಳ ನೀರು ಸೇರಿದ ಅಗಾಧವಾದ ಜಲರಾಶಿಯು, ಎಷ್ಟು ಕುಡಿದರೂ ತಣಿಯದೆ ಪಾತಾಳದ ಗಣಗಳು ದವಡೆಗಳವರೆಗೂ ತೆರೆದ ಬಾಯೋ ಎಂಬಂತೆ ತೋರಿತು. ವ॥ ಮತ್ತು ಆಕಾಶದವರೆಗೆ ಬೆಳೆದು ಚಲಿಸುತ್ತಿದ್ದ ತೆರೆಗಳೆಂಬ ಬೆಟ್ಟಗಳ ಮೇಲೆ ಕೃತಕಗಿರಿಗಳಂತಿದ್ದ ವೀಣಾಧರ-ಕಿನ್ನರ-ಪನ್ನಗ-ಅಮರರನ್ನೂ ಗುಂಪುಗುಂಪಾಗಿ ಬರುವ ಶಂಖದ ಹಬ್ಬುಗೆಗಳನ್ನೂ ಚದುರಿಹೋಗಲವಕಾಶಕೊಡದೆಯೆ, ಶೋಭಾತಿಶಯವನ್ನು ಪಡೆದ ಹವಳದ ಬಳ್ಳಿಗಳನ್ನೂ ಮಕರಗಳೆಂಬ ಆನೆಗಳ ಹೊಡೆದಾಟದಲ್ಲಿ[1] ಬಿರಿದೊಡೆದ ಮುತ್ತಿನ ಚಿಪ್ಪುಗಳೊಳಗಿನಿಂದ ಸಿಡಿದೆದ್ದ ತಾರಗೆಗಳಂತೆ ತರಳವಾದ ಮುಕ್ತಾಫಲಗಳನ್ನೂ ಪ್ರೀತಿಯಿಂದ ನೋಡುತ್ತ ಹೋದನು. ೮೦. ರಥಕ್ಕಿಂತ ಮುಂದೆ ಮನೋರಥವೂ ಆ ಮನೋರಥಕ್ಕಿಂತ ಮುಂದೆ ರಥವೂ ಇದ್ದುವು! ಹೀಗೆ ಭರತಮಹಾರಾಜನ ರಥ ಮನೋರಥಗಳ ವೇಗವೊದಗಿತು. ಆಗ

1 ಕಯ್ಯೋಱು = ಆನೆಗಳ ಕಾಳಗ.

ಆ ಲವಣಜಳಧಿಯಂ ಪರಿ
ಕಾಲನೆ ಬಗೆವಂತೆ ಬಗೆದು ಸಾರಥಿ ರಥಮಂ
ಲೀಲೆಯೆ ಚೋದಿಸೆ ತೆರೆಗಳ
ಮಾಲೆಯನವಯವದೆ ದಾಂಟಿ ಪರಿದುವು ಹರಿಗಳ್ ೮೧

ಕುದುರೆಯ ಖುರಂಗಳಿನಿಸಾ
ಱದೆಯುಂ ಚಕ್ರಂಗಳರ್ದು ಬಾರದೆಯುಂ ಚ
ಕ್ರದ ಚೀತ್ಕಾರರವಂ ಕುಂ
ದದೆಯುಂ ರಥಮಿಂತು ಪರಿದುದಂಭೋನಿಧಿಯೊಳ್ ೮೨

ಪತಿಯ ಜಯಸ್ತಂಭದ ಪರಿ
ಣತಿ ದಲಿದಲ್ಲದೊಡೆ ಜಳಪಥಂ ಸ್ಥಳಪಥದಂ
ತತಿಸುಗಮಮಾಗದೆನೆ ಪರಿ
ದು ತೋಯರಾಶಿಯೊಳದೇಂ ರಥಂ ಸೊಗಯಿಸಿತೋ ೮೩

ವ|| ಅಂತು ಚಕ್ರವರ್ತಿಯ ಪುಣ್ಯಾತಿಶಯಮನಱಿಪಿ ಜಳಧಿಯೊಳ್ ಬ್ಯೆತ್ರಂ ಪರಿವಂತೆ,

ಇನ್ನಪ್ಪ ಚಕ್ರವರ್ತಿಗ
ಳೆನ್ನೀ ಮಾರ್ಗದೊಳೆ ನಡೆಯಿಮೆಂದಱಿಪುವವೋಲ್
ತನ್ನ ರಥಾಂಗಾಹತಿಯಿಂ
ಮುನ್ನಮೆ ನೀರ್ ತಳರೆ ಚೆಲ್ವುವರಿದತ್ತು ರಥಂ ೮೪

ವ|| ಅಂತು ಶೂರಸಾರಥಿಚೋದಿತಮಪ್ಪ ರಥಮುಂ ಪುಣ್ಯಸಾರಥಿಚೋದಿತಮಪ್ಪ ಮನೋರಥಮುಂ ಉತ್ಸಾಹಮಂ ಪಡೆಯೆ ಪನ್ನೆರಡುಯೋಜನಂಬರಂ ಪೋದಾಗಳ್,

೮೧. ಆ ಉಪ್ಪಿನ ಕಡಲನ್ನು ಕಾಲುವೆಯೆಂದು ಭಾವಿಸಿ ಸಾರಥಿಯು ರಥವನ್ನು ಲೀಲೆಯಿಂದ ಚೋದಿಸಿದನು. ಕುದುರೆಗಳು ತೆರೆಗಳ ಮಾಲೆಯನ್ನು ಸುಲಭವಾಗಿ ದಾಟಿ ಮುನ್ನಡೆದುವು. ೮೨. ಕುದುರೆಗಳ ಗೊರಸುಗಳು ಮುಳುಗದಂತೆಯೂ ರಥದ ಚಕ್ರಗಳು ನೆನೆಯದಂತೆಯೂ ಚಕ್ರದ ಚೀತ್ಕಾರಧ್ವನಿಯು ಕುಂದದಂತೆಯೂ ರಥವು ಸಮುದ್ರದ ಮೇಲೆ ಹರಿಯಿತು. ೮೩. ಇದು ಭರತಚಕ್ರವರ್ತಿಯ ಜಯಸ್ತಂಭದ ಪರಿಣತಿಯೇ ನಿಜ. ಅದಿಲ್ಲದಿದ್ದರೆ ಜಲಪಥವು ಸ್ಥಲಪಥದಂತೆ ಸುಗಮವಾಗಲು ಹೇಗೆ ಸಾಧ್ಯ? ಹೀಗೆ ಜಲರಾಶಿಯ ಮೇಲೆ ಹರಿದು ರಥವು ಅತಿಯಾಗಿ ಸೊಗಯಿಸಿತು. ವ|| ಹೀಗೆ ಭರತಚಕ್ರವರ್ತಿಯ ಪುಣ್ಯಾತಿಶಯವನ್ನು ಸೂಚಿಸುತ್ತಾ ರಥವು ಸಮುದ್ರದಲ್ಲಿ ನೌಕೆಯಂತೆ ಹರಿಯುತ್ತಿರಲು, ೮೪. 'ಮುಂದಾಗುವ ಚಕ್ರವರ್ತಿಗಳೆಲ್ಲರೂ ನನ್ನ ಈ ಮಾರ್ಗದಲ್ಲಿಯೇ ನಡೆಯಿರಿ' ಎಂದು ತಿಳಿಸುವ ಹಾಗೆ ರಥಚಕ್ರದ ಹೊಡೆತಕ್ಕಿಂತ ಮೊದಲೆ ನೀರು ಚಲಿಸಲು ರಥವು ಚೆಲ್ವಾಗಿ ಸಾಗಿತು. ವ|| ಹೀಗೆ ಶೂರನಾದ ಸಾರಥಿಯಿಂದ ಪ್ರೇರಿತವಾದ ರಥವೂ, ಪುಣ್ಯಸಾರಥಿಯಿಂದ ಪ್ರೇರಿತವಾದ (ಭರತನ) ಮನೋರಥವೂ ಉತ್ಸಾಹವನ್ನು ಪಡೆದು ಹನ್ನೆರಡು ಯೋಜನದವರೆಗೆ ಹೋಯಿತು. ಆಗ,

ಮಿಡುಕಲ್ಕಲ್ಲಿಲ್ಲಿಂದೊಂ
ದಡಿಯಂ ನಿನಗೆಂದು ಲವಣವಾರಾಶಿಯೆ ಬ
ಲ್ವಿಡಿವಿಡಿದಂತೆ ವರೂಥಂ
ಮಿಡುಕದೆ ನಿಂದತ್ತು ಚೋದ್ಯಮಪ್ಪಿನಮಾಗಳ್ ೮೫

ವ॥ ಅಂತು ಬೀಟ್ಟುಂಡಿಕ್ಕಿದ[೧] ಬಹಿತ್ರದಂತೆ ಅಲ್ಲಿಂ ತಳರದೆ ನಿಂದ ತನ್ನ ರಥಮಂ ಕಂಡು,

ಕುಡಿವೆನೊ ಲವಣಾಬ್ಧಿಯನೀ
ಗಡೆ ತೋಳೊಳ್ ತುಳ್ಕಿ ಬಱಿದು ಮಾಟ್ಟೆನೊ ಪೇೞೆಂ
ದೊಡನಳುರ್ವ ಕೋಪದಿಂ ಕಣ್
ಕಿಡಿಯಂ ಕೆಂಡಮುಮನುಗುೞೆ ಮುಳಿದಂ ಭರತಂ ೮೬

ವ॥ ಅಂತು ಮುಳಿದು,

ಕುಡಿತೆಯ ನೀರಂತುಗಲುಂ
ಕುಡಿಯಲ್ಕುಂಟೆನಗೆ ಲವಣವಾರ್ಧಿಯ ನೀರಂ
ಕದುಪಿದಱೊಳೊಪ್ಪದೀಗಳೆ
ಸುಡುವೆಂ ಬಾಣಾನಳಾರ್ಚಿಯಿಂ ಮಾಗಧನಂ ೮೭

ವ॥ ಎಂದು ವಜ್ರಕಾಂಡಮೆಂಬ ನಿಜವಿಜಯಕಾರ್ಮುಕಕ್ಕೆ ಸುರಕರಿಕರಾನುಕಾರಿಯಪ್ಪ ನಿಜಭುಜಾದಂಡಮಂ ನೀಡಿ ನೀಡಿಲ್ಲದೇಱಿಸಿ ನೀವಿ(ಯಂ)[೨] ಜೇವೊಡೆದಾಗಳ್,

೮೫. ಇಲ್ಲಿಂದ ಒಂದು ಹೆಜ್ಜೆಯನ್ನೂ ಮುಂದಕ್ಕಿಡಲು ಬಿಡುವುದಿಲ್ಲ ಎಂದು ಆ ಲವಣಸಮುದ್ರವೇ ಬಲವಾಗಿ ಹಿಡಿದು ನಿಲ್ಲಿಸಿದಂತೆ ರಥವು ನಿಂತುಹೋಯಿತು. ಇದೊಂದು ಆಶ್ಚರ್ಯ! ಆಗ, ವ॥ ಲಂಗರು ಹಾಕಿದ ಹಡಗಿನಂತೆ ಅಲ್ಲಿಂದ ಚಲಿಸದೆ ನಿಂತ ತನ್ನ ರಥವನ್ನು ನೋಡಿ, ೮೬. ಲವಣಸಮುದ್ರವನ್ನು ಕುಡಿಯುವೆನೋ ಇಲ್ಲವೆ ತೋಳುಗಳಿಂದ ತುಳುಕಿಸಿ ಬರಿದುಮಾಡುವೆನೋ ಎಂಬಂತೆ ಆವರಿಸಿದ ಕೋಪದಿಂದ ಕಣ್ಣುಗಳು ಕಿಡಿಯನ್ನೂ ಕೆಂಡವನ್ನೂ ಕಾರುತ್ತಿರಲು ಭರತೇಶನು ಮುಳಿದನು. ವ॥ ಅಂತು ಕೋಪಗೊಂಡು ೮೭. "ಬೊಗಸೆಯ ನೀರಿನಂತೆ ಲವಣಸಮುದ್ರದ ನೀರನ್ನು ಆಚೆಗೆ ಚೆಲ್ಲುವುದಕ್ಕೂ ಕುಡಿಯಲಿಕ್ಕೂ ನನಗೆ ಶಕ್ಯವಿದೆ. ಆದರೆ ಸಮುದ್ರದಲ್ಲಿ ಪರಾಕ್ರಮವನ್ನು ಮೆರೆಸುವುದು ತರವಲ್ಲ. ಈಗಲೇ ನನ್ನ ಬಾಣಗಳೆಂಬ ಬೆಂಕಿಯ ಜ್ವಾಲೆಗಳಿಂದ ಮಾಗಧನನ್ನು[1] ಸುಡುವೆನು" ವ॥ ಎಂದು ವಜ್ರಕಾಂಡವೆಂಬ ತನ್ನ ವಿಜಯಕ್ಕೆ ಕಾರಣವಾದ ಬಿಲ್ಲಿಗೆ ಐರಾವತದ ಸೊಂಡಿಲಿನಂತಿರುವ ತನ್ನ ದೋರ್ದಂಡವನ್ನು ಚಾಚಿ, ತಡವಿಲ್ಲದೆ

---

೧ ಇದು ಖಚಿತವಾಗಿ ಅಪಪಾಠವೆಂದೂ, 'ಬಿಣ್ಣುಂಡಿಕ್ಕಿದ' ಎಂಬುದೇ ಸರಿಪಾಠವೆಂದೂ ಡಾ. ಎಲ್. ಬಸವರಾಜು ಹೇಳುತ್ತಾರೆ. (ಅವರು ಸಂಪಾದಿಸಿದ ಆದಿಪುರಾಣ ಪು. ೪೦೭.)

೨ ನೀವಿ (ಅನ್ಯತ್ರ)

1 ಮಾಗಧ = ಒಬ್ಬ ವ್ಯಂತರದೇವ.

ಲವಣಾಂಭೋರಾಶಿ ತೂಳ್ದಚ್ಚಳಿಸಲೊಡರಿಸಿತ್ತೀ ಧರಾಭಾಗಮಂ ಪ
ತ್ತುವಿಡಲ್ ಭೂಭೃತ್ಕುಳಂಗಳ್ ಬಗೆದುವು ಜಳಧಿದ್ವೀಪಮಧ್ಯಸ್ಥನಾನಾ
ದಿವಿಜಾವಾಸಂಗಳಭ್ರಕ್ಕೊಗೆದುವು ಭರದೊಳ್ ಕೂಡೆ ದಿಕ್ಪಾಲಲೀಲಾ
ಭವನಂಗಳ್ ಬಿರ್ದುವಿಂತಾಯ್ತಖಿಳಮಹಿತಳಕ್ಷೋಭಮಾ ಚಕ್ರಿಯಿಂದಂ ೮೮

ವ|| ಅಂತಮೋಘಬಾಣಮಂ ಬಾಣಧಿಯಿನುರ್ಚಿಕೊಂಡು,

ಪುರುಪರಮೇಶ್ವರಪುತ್ರಂ
ಭರತೇಶ್ವರಚಕ್ರವರ್ತಿ ಬಂದಿರ್ದಂ ತ
ದ್ಧರಣಿನಿವಾಸಿಗಳುಂ ವ್ಯಂ
ತರಾಮರರ್ ಬಂದು ಕಾಣ್ಬುದವನತಮುಕುಟರ್ ೮೯

ಎಂಬಕ್ಕರದಿಂದೆಸೆದುದ
ನಂಬರತಳಮೊಡನೆ ಬೆಳಗೆ ಬೆಳಪ್ಪುದನಾ ಶೌ
ರ್ಯಾಂಬುಧಿ ತೊಟ್ಟಿಸಲೊಡಮಿರ
ದಂಬರದಿಂದುಳ್ಕುವುಳಮಂ ಪೋಲ್ತು ಶರಂ ೯೦

ಕಾಳಾಂತಪವನಹತಿಕ
ಲ್ಲೋಳಾವಿಳಜಳಧಿನಿನದಮೋ ನಿರ್ಘಾತಾ
ಭೀಳತರರಭಸಮೋ ಲಯ
ಕಾಳಾಂಬುದಘೋಷಮೋ ನೆಲಂ ಮೊಳಗಿದುದೋ ೯೧

ಹೆದೆಯನ್ನೇರಿಸಿ ಧನುಷ್ಟಂಕಾರ ಮಾಡಿದನು. ೮೮. ಆ ಚಕ್ರಿಯಿಂದ ನಿಖಿಲವಾದ ಭೂಮಂಡಲಕ್ಕೆ ಕ್ಷೋಭೆಯುಂಟಾಯಿತು. ಲವಣಸಮುದ್ರವು ಕ್ಷೋಭೆಗೊಂಡು ಮೇಲಕ್ಕೆ ಉಕ್ಕಲು ಪ್ರಯತ್ನಿಸಿತು. ಭೂಭಾಗವನ್ನು ಬಿಟ್ಟುಬಿಡಲು ಪರ್ವತಕುಲಗಳು ಬಗೆದುವು (ಅಲ್ಲಾಡಿದುವು). ಸಮುದ್ರದ್ವೀಪಗಳ ಮಧ್ಯಸ್ಥವಾದ ದಿವಿಜರ ಆವಾಸಸ್ಥಾನಗಳು ಆಕಾಶಕ್ಕೆ ನೆಗೆದುವು. ಭರದಿಂದ ದಿಕ್ಪಾಲಕರ ಲೀಲಾಭವನಗಳು ಕೆಳಕ್ಕುರುಳಿದುವು. ವ|| ಹಾಗೆ ಒಂದು ಅಮೋಘ ಬಾಣವನ್ನು ಬತ್ತಳಿಕೆಯಿಂದ ಸೆಳೆದುಕೊಂಡು ೮೯. "ಪುರುರಾಜನ ಪುತ್ರನಾದ ಭರತೇಶ್ವರಚಕ್ರವರ್ತಿಯು ಬಂದಿರುವನು. ಅವನ ಭೂಮಿಯಲ್ಲಿ ವಾಸಮಾಡುವ ವ್ಯಂತರಾಮರರು ಆನಮ್ರಕಿರೀಟರಾಗಿ (ತಲೆಬಾಗಿಸಿಕೊಂಡು) ಬಂದು ಕಾಣುವುದು!" ೯೦. ಎಂಬಕ್ಷರಗಳಿಂದ ಕೂಡಿ ಆಕಾಶತಳವನ್ನು ಬೆಳಗುವ ಬಾಣವೊಂದನ್ನು ಆ ಶೌರ್ಯಸಮುದ್ರನು ಹೂಡಿಬಿಟ್ಟನು. ಅದು ಆಕಾಶದಿಂದುರುಳುತ್ತಿರುವ ಉಲ್ಕೆಯನ್ನು ಹೋಲಿತು. ೯೧. ಅದರ ಶಬ್ದವು ಪ್ರಳಯಕಾಲಾಂತ್ಯದ ಗಾಳಿಯ ಹೊಡೆತದಿಂದೆದ್ದ ಹೆದ್ದೆರೆಗಳಿಂದ ಕ್ಷೋಭೆಗೊಂಡ ಸಮುದ್ರದ ಶಬ್ದವೋ ಸಿಡಿಲಿನ ಭೀಕರವಾದ ರಭಸವೋ ಪ್ರಳಯಕಾಲದ ಮೇಘಗಳ ಘೋಷವೋ ನೆಲವು ಮೊಳಗಿತೋ ಎಂಬಂತಿದ್ದಿತು.

ಎನೆ ಪುರಜನಮಂತಃಪುರ
ಜನಮುಂ ಪರಿಜನಮುಮಳ್ಕೆ ತದ್ರಾಜನಿಕೇ
ತನದಲ್ಲಿ ಬಿರ್ದು ಪಡೆದುದು
ಮನಕ್ಕೆ ಕಡುಮುಳಿಸಿನೆಸಕಮಂ ಮಾಗಧನಾ ೯೨

ವ॥ ಆ ಪ್ರಸ್ತಾವದೊಳಾತನ ಪರಿವಾರಾಮರರ್ ನಾನಾವಿಧಾಯುಧವ್ಯಗ್ರಪಾಣಿಗಳುಮುದಾರ ವೀರರಸರಭಸೋಗ್ರಪಾಣಿಗಳುಮಾಗಿ ಮಾಗಧನ ಮುಂದೆ ಬಂದು ನಿಂದು,

ಇದನಾವನೆಚ್ಚನಾತಂ
ತ್ರಿದಶಂ ಮೇಣಕ್ಕೆ ದಾನವಂ ಮೇಣಕ್ಕಾ
ವುದು ಗಹನಮಾತನಾತನ
ಪೊದರ್ಪುಮಾರ್ಪೆನಿಪುವೆಮ್ಮೊಳೇಂ ಸಂದಪುವೇ ೯೩

ಬೆಸಸೆಮ್ಮನೀಗಳಿಂತೀ
ಬೆಸದೊಳ್ ಕಡೆಗಣಿಸಿ ಬಟೆಯಮಾವೆಡೆಯೊಳ್ ನೀಂ
ಬೆಸಸುವೆಯೊ ನಿನ್ನ ಕಣ್ಣೊಳ್
ಪಸರಿಸೆ ಕಡುಗೆಂಪು ನೋಡಿಯುಂ ಸೈರಿಪೆವೇ ೯೪

ಎನೆ ಮಾಗಧನಿಂತುಟೆ ನಿ
ಮ್ಮನಿಬರ ವಿಕ್ರಾಂತಮಾದೊಡಂ ಸೈರಿಸಿಮಿ
ನ್ನಿನಿಸಂ ನೀಮಾಳ್ಗಳಿರಾ
ನೆ ನಿಮ್ಮ ಕುಲಪತಿಯೆನೆನಗೆ ಮಲೆವರುಮೊಳರೇ ೯೫

೯೨. ಆ ಬಾಣವು ಮಾಗಧನ ಅರಮನೆಯಲ್ಲಿ ಬೀಳಲಾಗಿ ಪುರಜನರೂ ಅಂತಃಪುರದ ಜನರೂ ಪರಿಜನರೂ ಹೆದರಿದರು. ಆ ಸ್ಥಿತಿಯು ಮಾಗಧನ ಮನಸ್ಸಿಗೆ ಕಡುಕೋಪವನ್ನುಂಟುಮಾಡಿತು. ವ॥ ಆ ಪ್ರಸ್ತಾವದಲ್ಲಿ ಮಾಗಧನ ಪರಿವಾರದಲ್ಲಿದ್ದ ಅಮರರು ನಾನಾವಿಧವಾದ ಆಯುಧಗಳನ್ನು ಕೈಗಳಿಂದ ಹಿಡಿದವರಾಗಿ ತಮ್ಮ ಕಲಿತನಕ್ಕನುಗುಣವೂ ಉಗ್ರವೂ ಆದ ಮಾತುಗಳನ್ನು ಆಡುತ್ತಾ ಮಾಗಧನ ಮುಂದೆ ಬಂದು ನಿಂತರು. ೯೩. "ಈ ಬಾಣವನ್ನು ಬಿಟ್ಟವನಾರು? ಅವನು ದೇವನೇ ಆಗಿರಲಿ. ಇಲ್ಲವೆ ದಾನವನೆ ಆಗಿರಲಿ, ಅದೇನೂ ಮಹತ್ತರವಾದ ವಿಷಯವಲ್ಲ. ಅವನೂ ಅವನ ಪರಾಕ್ರಮವೂ ಸಮರ್ಥರಾದ ನಮ್ಮಲ್ಲಿ ನಡೆಯವು. ೯೪. ನಮಗೆ ಆಜ್ಞೆಯನ್ನು ಕೊಡು, ಈಗ ಈ ಕಾರ್ಯವನ್ನು ಉಪೇಕ್ಷಿಸುವುದಾದರೆ ಬಳಿಕ ಯಾವ ಬೇರೆ ಕಾರ್ಯದಲ್ಲಿ ನಮಗೆ ಆಜ್ಞೆಯನ್ನೀಯುವೆ? ನಿನ್ನ ಕಣ್ಣಲ್ಲಿ ಕಡುಗೆಂಪು ಮೂಡಿರುವುದನ್ನು ನೋಡಿಯೂ ನಾವು ಸೈರಿಸುತ್ತೇವೆಯೆ?" ೯೫. ಎಂದು ವಿಜ್ಞಾಪಿಸಿಕೊಂಡರು. ಆಗ ಮಾಗಧನು "ಹೀಗೆ ನಿಮ್ಮ ಪರಾಕ್ರಮವು ಮಹತ್ತಾದುದೆಂಬುದರಲ್ಲಿ ಸಂಶಯವಿಲ್ಲ. ಆದರೂ ನೀವು ಸ್ವಲ್ಪ ಸೈರಣೆಯಿಂದಿರಿ. ನೀವು ನನ್ನ ಸೇವಕರು. ನಿಮ್ಮ ಕುಲಪತಿಯು ನಾನು. ನನ್ನನ್ನು

ಪರಿಭವದ ಪೊಱೆಯನಾಂತಿ
ರ್ದರಾತಿಗಳ್ಗಳ್ಕಿ ತನ್ನ ಕುಲಮುಂ ಚಲಮುಂ
ದೊರೆಯುಂ ಕಿಡೆ ಬಾೞ್ವಂ ಗಂ
ಡರೂಪಿನೊಳ್ ಗಂಡನಲ್ತು ಪೆಂಡತಿಯೆ ವಲಂ ೯೬

ಅಧಟಂ ಕೊಂಡಾಡದೆ ಬೇ
ಡಿದರ್ಗೀಯದೆ ಮಱೆಗೆ ವಂದರಂ ಕಾಯದೆ ನೀ
ಳ್ದೊದವಿದ ಜಸಮನುಪಾರ್ಜಿಸ
ದಧಮನದೇತರ್ಕೆ ಬಾೞ್ಕೆ ಜೀವನ್ಮೃತಕಂ ೯೭

ಬಗೆಗೊಂಡ ಕುಲಧನಂ ಸಮ
ದಗಜಂ ಜಾತ್ಯಶ್ವಮೆಂಬಿವಂ ಮತ್ತೊರ್ಬಂ
ಪಗೆವಂಗೆ ಕೊಟ್ಟು ಚೀಃ ಕೆ
ಮ್ಮಗೆ ಬೆಸೆವವನರಸದೆಂತೊ ಪಗರಣದರಸಂ ೯೮

ಶರಶಾಳಿಯೆನೆಂಬುದನೀ
ಶರದಿಂದೆಮಗಱಿಪಲೆಚ್ಚು ಕುಲಧನಚಯಮಂ
ತರಿಸಿಕೊಳಲ್ಬಗೆದಧಟನ
ಪುರುಳಂ ಪೊಣರ್ದಾಗಳಱಿವೆನುಗ್ರಾಹವದೊಳ್ ೯೯

ಶರಚಾಪಚಕ್ರಭೀಕರ
ಕರವಾಳಾಯುಧವಿರಾಜಿ ಮತ್ಕರಯುಗಮಿಂ
ದೊರೆಗಿಡೆ ಪೆಱಂಗೆ ಮುಗಿವುದೆ
ಕಿರೀಟಮಿದು ಪೆಂಪುಗಿಡೆ ಪೆಱಂಗೆಱಗುವುದೇ ೧೦೦

ದ್ವೇಷಿಸುವವರು ಈ ಜಗತ್ತಿನಲ್ಲಿ ಇದ್ದಾರೆಯೇ? ೯೬. ತಿರಸ್ಕಾರದ ಹೊರೆಯನ್ನು ಹೊತ್ತು, ಶತ್ರುಗಳಿಗೆ ಹೆದರಿ, ತನ್ನ ಕುಲದ ಗೌರವವೂ ಛಲವೂ ದೊರೆತನವೂ ಹಾಳಾಗುವಂತೆ ಬಾಳುವವನು ಗಂಡಸಲ್ಲ. ಅವನು ಗಂಡುರೂಪಿನ ಹೆಂಗಸೇ ಸರಿ. ೯೭. ಶೂರರನ್ನು ಕೊಂಡಾಡಿದ, ಬೇಡಿದವರಿಗೆ ಕೈಯೆತ್ತಿ ಕೊಡದ, ಶರಣಾಗತರನ್ನು ರಕ್ಷಿಸದ, ಪ್ರಾಪ್ತವಾದ ಯಶಸ್ಸನ್ನೊಲ್ಲದ ಅಧಮನ ಬಾಳು ನಿರರ್ಥಕ. ಅವನು ಇದ್ದರೂ ಸತ್ತಂತೆಯೇ. ೯೮. ಮೆಚ್ಚಿಗೆಯಾದ ಕುಲಧನವನ್ನೂ ಮದ್ದಾನೆಯನ್ನೂ ಜಾತ್ಯಶ್ವವನ್ನೂ ಶತ್ರುವಿಗೆ ಸಮರ್ಪಿಸಿ ಕುಳಿತವನು ಅರಸನೆ? ಚೀ! ಅವನೊಬ್ಬ ನಾಟಕದಲ್ಲಿ ಪಾತ್ರಧಾರಿಯಾದ ಅರಸ! ೯೯. ತಾನು ಉತ್ತಮವಾದ 'ಶರಶಾಲಿ' ಎಂಬುದನ್ನು ನಮ್ಮ ಮುಂದೆ ಪ್ರದರ್ಶಿಸಿಕೊಳ್ಳಲು ಈ ಬಾಣವನ್ನು ಬಿಟ್ಟು ನಮ್ಮ ಕುಲಧನವನ್ನು ತರಿಸಿಕೊಳ್ಳಲಾಶಿಸಿರುವ ಆ ಉದ್ಧತನ ಸತ್ವವನ್ನು ಉಗ್ರವಾದ ಕಾಳಗದಲ್ಲಿ ಯುದ್ಧಮಾಡಿ ಅರಿಯುವೆನು. ೧೦೦. ಬಾಣ, ಬಿಲ್ಲು, ಚಕ್ರ, ಕತ್ತಿ ಮುಂತಾದ ಆಯುಧಗಳಿಂದ ವಿಭೂಷಿತವಾದ ನನ್ನ ಕೈಗಳೆರಡು ಪರೀಕ್ಷಿಸಿದರೆ ಶತ್ರುವಿಗೆ ಮುಗಿಯುತ್ತವೆಯೆ? ಈ ಕಿರೀಟವು ತನ್ನ ಹಿರಿಮೆಯನ್ನು ತೊರೆದು ಇನ್ನೊಬ್ಬನಿಗೆ ಎರಗುವುದೆ?

ಕುಲದ ಚಲದಾಯದಱವಿನ
ಕಲಿತನದುನ್ನತಿಯನಲಸದೀ ಸುರಸಭೆಯೊಳ್
ಪಲವಾಡುವೆನ್ನ ನಾಲಗೆ
ಬಲಸ್ಥನೊರ್ವಂಗೆ ಜೀಯ ದೇವೆಂದಪುದೇ ೧೦೧

ಶರಮನಿದಂ ಕಡಿಕಡಿದುಡಿ
ದೆರಡೆರಡಪ್ಪಂತು ತಱದು ರಿಪುಬಲಗಹನಾಂ
ತರಮಂ ಸುಡಲೊಗೆವುದು ದು
ರ್ಧರಕೋಪಾಗ್ನಿಯನೆ ಮುನ್ನಮಾಂ ಪೊತ್ತಿಸೆನೇ ೧೦೨

ವ॥ ಎಂದು ನುಡಿವನಿತುಮಂ ನುಡಿದು ಮಾಣ್ದ ಮಾಗಧಾಮರನಂ ದೃಷ್ಟಪರಂಪರರಪ್ಪ ಕುಲವೃದ್ಧರೆಯ್ದೆವಂದು,

ಚಲದಭಿಮಾನದುನ್ನತಿಯ ಪೆಂಪನೆ ತಾಳ್ದಿದುವೀ ನಿಕಾಮಕೋ
ಮಲಭವದುಕ್ತಿಗಳ್ ಬೆಸಸುವರ್ ಪೆಱರಾರಿದನಿಂತು ಸಂದ ತೋ
ಳ್ವಲದದಟಂ ಪರಾಭವಮನೇಕೆಯೊ ಸೈರಿಸುವಂ ಬಲಸ್ಥನೊಳ್
ಬಲಮನೆ ಪೂಣ್ಬುದುಂ ಪರಿಭವಕ್ಕೆ ಮೊದಲ್ ಸುರಸೈನ್ಯನಾಯಕಾ ೧೦೩

ಕಡುಗಲಿತನಮುಂ ಚಾಗದ
ಪಡೆಮಾತುಂ ವಿದ್ಯೆಯುರ್ಕುಮೊರ್ವನೊಳೆಂತುಂ
ನಡೆಯವು ಭುವನಾಂತರದೊಳ್
ನಿಡಿಯರ್ಗಂ ನಿಡಿಯರೊಳರಿದೇಂ ವಿಸ್ಮಯಮೇ ೧೦೪

೧೦೧. ಕುಲ, ಛಲ, ಸಾಮರ್ಥ್ಯ, ಶೂರತನ ಮತ್ತು ದಿಟ್ಟತನಗಳ ಉನ್ನತಿಯನ್ನು ಹಲವು ರೀತಿಯಾಗಿ ಸುರಸಭೆಯಲ್ಲಿ ಅಲಸದೆ ಹೇಳಿಕೊಳ್ಳುವ ನನ್ನ ನಾಲಗೆಯು ಬಲಿಷ್ಠನೊಬ್ಬನಿಗೆ "ಜೀಯ, ದೇವ" ಎಂದು ಹೇಳಲಾಶಿಸುವುದೆ? ೧೦೨. ಈ ಬಾಣವನ್ನು ಕತ್ತರಿಸಿ ತುಂಡುತುಂಡಾಗಿ ಸೀಳಿ ಶತ್ರುಸೈನ್ಯವೆಂಬ ಕಾಡಿನ ಮಧ್ಯಭಾಗವನ್ನು ಸುಡಲು ಎಸೆಯಬೇಕು. ಅದಕ್ಕೆ ಕೋಪಾಗ್ನಿಯನ್ನು ನಾನೇ ಮೊದಲು ಹೊತ್ತಿಸಲಾರೆನೆ?" ವ॥ ಎಂದು ನುಡಿಯುವುದನ್ನೆಲ್ಲ ನುಡಿದು ನಿಲ್ಲಿಸಿದ ಮಾಗಧಾಮರನನ್ನು ಪರಂಪರೆಯೆಲ್ಲವನ್ನೂ ಅರಿತ ಕುಲವೃದ್ಧರು ಸಮೀಪಿಸಿ ಹೀಗೆಂದರು: ೧೦೩. ನಿನ್ನ ಅತಿ ಕೋಮಲವಾದ ಮಾತುಗಳು ಛಲಾಭಿಮಾನಗಳ ಉನ್ನತಿಯ ಹಿರಿಮೆಯನ್ನು ತಾಳ್ದಿವೆ. ಮತ್ತಾರು ತಾನೆ ಇಂಥ ಮಾತುಗಳನ್ನು ಹೇಳುವರು? ಭುಜಬಲವಡೆದ ಯಾವ ಶೂರನು ತಾನೆ ಪರಾಭವವನ್ನು ಸಹಿಸಿಯಾನು? ಎಲೆ ಸುರನಾಯಕ! ಆದರೆ ಬಲಾಢ್ಯನಲ್ಲಿ ಬಲವನ್ನು ಪ್ರದರ್ಶಿಸುವುದು ಸೋಲಿಗೆ ನಾಂದಿಯೆನಿಸುವುದು! ೧೦೪. ಈ ಪ್ರಪಂಚದಲ್ಲಿ ಶೌರ್ಯವೂ ತ್ಯಾಗದ ಹೊಗಳಿಕೆಯೂ ವಿದ್ಯಾಗರ್ವವೂ ಒಬ್ಬನಲ್ಲೇ ಎಂದೂ ನಿಯತವಾಗಿ ಉಂಟಾಗವು. ದೊಡ್ಡವರಿಗಿಂತ ದೊಡ್ಡವರು ಲೋಕದಲ್ಲಿ ಇದ್ದೇ ಇರುತ್ತಾರೆ. ಇದೇನೂ ಆಶ್ಚರ್ಯವಲ್ಲ.

ಮುನ್ನಾಲೋಚಿಸದಾವುದು
ಮಂ ನೆಗಟಬಲ್ಲಾಗದೆಂಬುದೇದೊರೆತಿದನೆ
ಚ್ಚುನ್ನತಯಶನಾವನದಂ
ಮುನ್ನಂ ತಿಳಿದಱಿದು ನೆಗಟಿ ನೆಗಟ್ಟುದನೀಗಳ್ ೧೦೫

ವ|| ಅದಲ್ಲದೆಯುಂ ಪೂರ್ವಾಪರವಿದೇಹಂಗಳ್ಗೆ ದೇವನಿಕಾಯದೊಡನೆ ಜಿನೇಂದ್ರವಂದನಾ ಭಕ್ತಿಯಿಂ ಪೋದಲ್ಲಿ ಭರತಕ್ಷೇತ್ರದೊಳೀ ಯುಗದೊಳ್ ತೀರ್ಥಕರರುಂ ಚಕ್ರವರ್ತಿಗಳುಮಪ್ಪರೆಂದು ಸರ್ವಜ್ಞರ್ ಬೆಸಸೆ ಪಲವು ಸೂಟಾಮೆಲ್ಲಂ ಕೇಳ್ದಱಿದೆವು,

ಸಾಮಾನ್ಯಮಲ್ತು ಶರಮಿದು
ಸಾಮಾನ್ಯಮನುಷ್ಯನಲ್ಲನಿವನೆಚ್ಚಾತಂ
ನಾಮಾಕ್ಷರಮಾಳಿಕೆಗಳ್
ತಾಮಱಿಪವೆ ಚಕ್ರವರ್ತಿಯೆಂಬುದನಾತಂ ೧೦೬

ಮಾಗಧ ಪೆಱತಂ ಬಗೆಯದಿ
ರಾಗದು ಚಕ್ರಿಯೊಳೊಡಂಬಡಂ ನೆಗಟಲ್ ನೀ
ನೀಗಳೆ ಪೂಜಿಸು ಶರಮಂ
ಬೇಗಂ ಪೋಗೆಱಗು ಚಕ್ರವರ್ತಿಯ ಪದದೊಳ್ ೧೦೭

ನಯಮಪ್ಪೊಡೆ ಸೇವಕವೃ
ತ್ತಿಯೆ ದಲ್ ನಮಗೆಳೆವ ತೊಱೆಯನಿದಿರಿಸುವುದದೆ
ಲ್ಲಿಯ ಗಾಂಪು ಚಕ್ರವರ್ತಿಯೊ
ಳಯಶಂ ನಮಗುಱದು ಬೇಗಮೆಱಗುವುದುಱುಗುಂ ೧೦೮

೧೦೫. ಪೂರ್ವಾಲೋಚನೆ ಇಲ್ಲದೆ ಯಾವ ಕೆಲಸವನ್ನೂ ಮಾಡಕೂಡದು. ಇದೇ ಯುಕ್ತವಾದ ಮಾರ್ಗ. ಈ ಬಾಣವನ್ನು ಎಸೆದ ಕೀರ್ತಿಶಾಲಿ ಯಾರೆಂಬುದನ್ನು ಮೊದಲು ತಿಳಿದು ಮಾಡಬೇಕಾದುದನ್ನು ಮಾಡು. ವ|| ಅದೂ ಅಲ್ಲದೆ ಪೂರ್ವಾಪರ ವಿದೇಹಗಳಿಗೆ ದೇವಸಮೂಹದೊಡನೆ ಜಿನೇಂದ್ರವಂದನಾಭಕ್ತಿಯಿಂದ ನಾವು ಹೋದಾಗ ಭರತಕ್ಷೇತ್ರದಲ್ಲಿ ಈ ಯುಗದಲ್ಲಿ ತೀರ್ಥಂಕರರೂ ಚಕ್ರವರ್ತಿಗಳೂ ಹುಟ್ಟುವರೆಂದು ಸರ್ವಜ್ಞರಾದವರು ಹಲವಾರು ಬಾರಿ ಹೇಳಿದುದನ್ನು ಕೇಳಿ ಬಲ್ಲೆವು. ೧೦೬. ಈ ಬಾಣವು ಸಾಮಾನ್ಯವಾದುದಲ್ಲ, ಇದನ್ನು ಬಿಟ್ಟವನೂ ಸಾಮಾನ್ಯ ಮನುಷ್ಯನಲ್ಲ. ಅವನು ಚಕ್ರವರ್ತಿಯೆಂಬುದನ್ನು ಬಾಣದಲ್ಲಿರುವ ಅವನ ನಾಮಾಕ್ಷರಮಾಲಿಕೆಗಳೇ ತಿಳಿಸುತ್ತವೆಯಲ್ಲವೆ? ೧೦೭. ಮಾಗಧ! ಬೇರೆ ರೀತಿಯಲ್ಲಿ ಆಲೋಚಿಸಬೇಡ. ಅದರಿಂದ ಚಕ್ರವರ್ತಿಯೊಡನೆ ಹೋಲಿಕೆ[1] ಸಾಧ್ಯವಿಲ್ಲ. ನೀನೀಗಲೆ ಶರವನ್ನು ಪೂಜಿಸು. ಬೇಗ ಹೋಗು. ಚಕ್ರವರ್ತಿಯ ಕಾಲುಗಳ ಮೇಲೆ ಬೀಳು. ೧೦೮. ರಾಜನೀತಿಯನ್ನು ಬಲ್ಲೆಯಾದರೆ ಸೇವಕವೃತ್ತಿಯನ್ನೊಪ್ಪುವುದು ನಮಗೆ ಒಳ್ಳೆಯದು. ವೇಗವಾಗಿ ಹರಿಯುವ ಪ್ರವಾಹವನ್ನು ಎದುರಿಸುವ ಮೂರ್ಖತನವೇಕೆ? ಅಂತೆ ಈಗ

1 'ವಡಂಬಂ' ಎಂಬ ಪಾಠವನ್ನು ಡಾ|| ಬಸವರಾಜು ಅವರು ಅಂಗೀಕರಿಸಿ, ಅದಕ್ಕೆ 'ವಿರೋಧ, ದ್ವೇಷ' ಎಂಬ ಅರ್ಥವನ್ನು ಹೇಳಿದ್ದಾರೆ.

ಪುರುಪರಮೇಶ್ವರಪುತ್ರಂ
ಚರಮಾಂಗಂ ಚಕ್ರವರ್ತಿಯೆಂದೊಡೆ ಪೇೞಲ್
ದೊರೆ ಪೆಱರಾರ್ ಭರತನೊಳೆನೆ
ಕರಗಿದುದಾ ಗರ್ವಪರ್ವತಂ ಮಾಗಧನಾ ೧೦೯

ವ॥ ಅಂತು ನಿಜಶೌರ್ಯಮದಜ್ವರಂ ಮಂತ್ರಿವರ್ಗವೈದ್ಯವಚನೌಷಧಿಗಳಿಂ ಪತ್ತುವಿಡೆ,

ಮುನ್ನಂ ಪೂಜಿಸಿ ಶರಮಂ
ರನ್ನದ ಪಡಲಗೆಯೊಳಿಟ್ಟು ನಿಜಪರಿವಾರಂ
ತನ್ನುಳ್ಳನಿತುಂ ಬೆರಸು ಭ
ಯನ್ನಡುಕಮನೀಯೆ ಬಂದು ಕಂಡಂ ದಿವಿಜಂ ೧೧೦

ಪೊಂಗುಳಿದು ಭರತನೃಪಚರ
ಣಂಗಳ್ಗಾ ಮಾಗಧಾಮರಂ ವಿನಮಿತಸ
ರ್ವಾಂಗಚಟ್ಚಾರವಕೆ ಭು
ಜಂಗನ ಕೊರಲಂತೆ ಬಾಗಿದಂ ಮೂಱಿಡೆಯೊಳ್ ೧೧೧

ತಳಮುಳುಗುತ್ತೆಱಗುವುದುಂ
ವಿಳಸನ್ಮಾಗಧಕಿರೀಟರತ್ನಾಂಶುಗಣಂ
ಗಳಿಯಿಸುದುದವನ ಗರ್ವಮೆ
ಗಳಿಯಿಸುವಂತಿರೆ ನೃಪೇಂದ್ರಪದಸರಸಿಜದೊಳ್ ೧೧೨

ನಾವು ಚಕ್ರವರ್ತಿಯೊಡನೆ ಹೊಂದಿಕೊಳ್ಳದಿರುವುದು ಅಯಶಸ್ಕರ. ಬೇಗನೇ ಅವನಿಗೆ ತಲೆಬಾಗುವುದೇ ಹಿಡಿಸುತ್ತದೆ. ೧೦೯. ಇನ್ನು ಈ ಜನ್ಮದ ಕೊನೆಯಲ್ಲಿ ನಿರ್ವಾಣವನ್ನು ಪಡೆಯಲಿರುವ ಚರಮಾಂಗನೂ ಪುರುರಾಜಪುತ್ರನೂ ಚಕ್ರವರ್ತಿಯೂ ಆದ ಭರತಮಹಾರಾಜನಿಗೆ ಎಣೆ ಯಾರು?" ಎಂದು ಹೇಳಲು ಮಾಗಧನ ಗರ್ವಪರ್ವತವು ಕರಗಿಹೋಯಿತು. ವ॥ ಹೀಗೆ ಅವನ ಶೌರ್ಯಮದವೆಂಬ ಜ್ವರವು ಮಂತ್ರಿವರ್ಗವೆಂಬ ವೈದ್ಯರ ವಚನೌಷಧದಿಂದ ವಾಸಿಯಾಯಿತು. ೧೧೦. ಮಾಗಧನು ಮೊದಲು ಬಾಣವನ್ನು ಪೂಜಿಸಿ ರತ್ನದ ಹಡಲಿಗೆಯಲ್ಲಿಟ್ಟನು. ತನ್ನೆಲ್ಲ ಪರಿವಾರದೊಡನೆ ಕೂಡಿ ಭಯದಿಂದ ನಡುಗುತ್ತಾ ಚಕ್ರವರ್ತಿಯನ್ನು ಸಂದರ್ಶಿಸಿದನು. ೧೧೧. ಮಾಗಧಾಮರನು ಹೆಮ್ಮೆಯನ್ನು ತೊರೆದನು. ಭರತಚಕ್ರವರ್ತಿಯ ಚರಣಾರವಿಂದಗಳಿಗೆ ಸಾಷ್ಟಾಂಗಪ್ರಣತನಾದನು. ಪುಂಗಿಯ ಧ್ವನಿಗೆ ಹಾವಿನ ಕೊರಳಿನಂತೆ ಮೂರೆಡೆ ಬಾಗಿದನು. ೧೧೨. ಮಾಗಧನು ತಳಮಳಗೊಳ್ಳುತ್ತಾ ನಮಸ್ಕರಿಸಿದನು. ಆಗ ಅವನ ಗರ್ವವೆ ಕರಗಿ ನೀರಾದಂತೆ ಅವನ ಕಿರೀಟದಲ್ಲಿನ ರತ್ನಗಳ ಕಾಂತಿಸಮೂಹವು ಭರತಚಕ್ರವರ್ತಿಯ ಪಾದಕಮಲದ ಮೇಲೆ

ಚಕ್ರಂ ಪುಟ್ಟಲೊಡಂ ಪರ
ಚಕ್ರಭಯಂಕರ ಬರಲ್ಕೆಟ್ಬುದನಱಿದೆಂ
ವಿಕ್ರಮಮನಟಿದೆನೆನತೊಂ
ದಕ್ರಮಮಂ ಸೈರಿಸೊಂದು ಸೂಟ್ ಚಕ್ರಧರಾ ೧೧೩

ವಿಜಿತರಿಪುನೃಪ ಭವತ್ಪದ
ರಜದಿಂದಂ ವಾರ್ಧಿಯೊಂದು ಪೂತಮೆ ಪಾದಾಂ
ಬುಜಸೇವೆಯಿಂದಮಾನುಂ
ವಿಜಯಶ್ರೀಯುತ ಪವಿತ್ರಗಾತ್ರನೆಸಾದೆಂ ೧೧೪

ಎಂದೆಂದಿದು ಭರತಯಶೋ
ದುಂದುಭಿರವಮೆನಿಸಿ ದೆಸೆಗೆ ಪೊಣ್ಮುವ ನಿಜವಾ
ಕ್ಸೌಂದರ್ಯದೆ ಪೊಲ್ತಂ ಪುರು
ನಂದನನಂ ಪೊಗಟ್ಟಿ ಮಾಗಧಂ ಮಾಗಧನಂ ೧೧೫

ಇವು ದಿವದೊಳಗಗ್ಗಳಮೆನಿ
ಸುವ ರತ್ನವ್ರಾತಮೆಮ್ಮ ಮನೆಯೊಳ್ ನಿನಗಿಂ
ತಿವು ನಿಧಿಗಧಿವಾಸಿಸಲ
ಪ್ಪುವೆಂದು ರತ್ನಂಗಳನಿತುಮಂ ಮುಂದಿಟ್ಟಂ ೧೧೬

ಇವು ರತ್ನಕುಂಡಲಂ ಜಿತ
ರವಿಮಂಡಳಮಿವು ತುಡಲ್ಕೆ ಯೋಗ್ಯಂ ನಿನಗ
ಲ್ಲವು ಪೆಱರ್ಗದೆನ್ನ ಭಕ್ತಿಯ
ನಿವಱಿಂದಾಂ ನಿನಗೆ ಮೆಱೆದಪೆಂ ಚಕ್ರಧರಾ ೧೧೭

ಹರಡಿತು. ೧೧೩. "ಶತ್ರುಮಂಡಲಕ್ಕೆ ಭಯವನ್ನುಂಟುಮಾಡತಕ್ಕವನೆ! ಚಕ್ರವು ಹುಟ್ಟಿದೊಡನೆ ನೀನು ನನ್ನನ್ನು ಬರಲಿಕ್ಕೆ ಹೇಳುವೆಯೆಂಬುದನ್ನರಿತೆನು. ನಿನ್ನನ್ನೆದುರಿಸುವ ಪರಾಕ್ರಮವನ್ನು ತೋರೆದೆನು. ಚಕ್ರಧರ! ನನ್ನ ಈ ಅಕ್ರಮವನ್ನು ಇದೊಂದು ಬಾರಿ ಸಹಿಸು" ಎಂದು ಬೇಡಿಕೊಂಡನು. ೧೧೪. "ಶತ್ರುಗಳ ಹುಟ್ಟನ್ನಡಗಿಸಿದ ಎಲೆ ರಾಜನೆ! ನಿನ್ನ ಪಾದಧೂಳಿಯಿಂದ ಸಮುದ್ರವೂ ಪವಿತ್ರಗೊಂಡಿತು. ವಿಜಯಶ್ರೀ ವಿಭೂಷಿತನೆ! ನಿನ್ನ ಪಾದಕಮಲಗಳ ಸೇವೆಯಿಂದ ನಾನೂ ಪವಿತ್ರವಾದ ದೇಹವುಳ್ಳವನಾದೆನು" ಎಂದನು. ೧೧೫. ಹೀಗೆ ಭರತಚಕ್ರವರ್ತಿಯು ಕೀರ್ತಿದುಂದುಭಿಯ ಧ್ವನಿಯನ್ನು ಎಲ್ಲ ದಿಕ್ಕುಗಳಲ್ಲಿಯೂ ಮೊಳಗಿಸುವ ತನ್ನ ವಾಕ್ಸೌಂದರ್ಯದಿಂದ ಪುರುನಂದನನನ್ನು ಹೊಗಳುವ ಮಾಗಧಾಮರನು ಮಾಗಧನ (ಹೊಗಳುಭಟನ) ಸ್ಥಿತಿಯನ್ನಪ್ಪಿದನು. ೧೧೬. "ಇವು ದೇವಲೋಕದಲ್ಲಿನ ರತ್ನಶ್ರೇಷ್ಠಗಳು. ಇವು ನನ್ನ ಮನೆಯಲ್ಲಿದ್ದುವು. ನಿನ್ನ ನಿಧಿಗಳನ್ನು ಇಡಲು ಇವು ಹಾಸುಗಲ್ಲುಗಳಂತೆ ಉಪಯುಕ್ತವಾಗುತ್ತವೆ" ಎಂದು ನುಡಿದು ರತ್ನಗಳನ್ನೆಲ್ಲ ಮುಂದಿಟ್ಟನು. ೧೧೭. "ಸೂರ್ಯಮಂಡಲವನ್ನು ತಮ್ಮ ಕಾಂತಿಗಳಿಂದ ಗೆದ್ದ ರತ್ನಕುಂಡಲಗಳಿವು. ಇವು ನಿನಗೆ ಧರಿಸಲು ಯೋಗ್ಯವಾದುವು. ಇವು ನನ್ನ ಪ್ರೀತಿಯ

ವಾರಾಶಿಯೊಳಿನ್ನವು ಮು
ತ್ತೋರನ್ನವು ಪಡೆಯಲಾಗವತಿತರಳತರ
ತ್ತಾರಾಹಾರಂ ಜಿತನೀ
ಹಾರಂ ತ್ರೈಲೋಕ್ಯಸಾರಮಿಂತಿದು ಹಾರಂ ೧೧೮

ಇದು ನಿನ್ನೀಯಗಲ್ದುರದೊಳ್
ಪೊದಟ್ದು ತನತೊಂದು ಜನ್ಮಮಂ ಸಫಲಂ ಮಾ
ಟ್ದುದಿದಿಂದುಕುಂದದಳಶಾ
ರದನೀರದನಿರ್ಮಳಂ ಭವತ್ಕೀರ್ತಿಯವೋಲ್ ೧೧೯

ವ|| ಎಂದು ಮಾಗಧಾಮರಂ ತನ್ನ ಸದ್ಭಾವಸರ್ವಸ್ವದೊಡನೆ ಸರ್ವಸ್ವಮೆಲ್ಲಮುಮಂ ಮುಂದಿಟ್ಟಾಗಳ್,

ಕುಳಶೈಲೋನ್ನತನುಗ್ರಶಾತ್ರವಶಿರೋಮಾಣಿಕ್ಯಮಾಳಾಂಶುಮಾಂ
ಸಳಿತಶ್ರೀಪದಪೀಠರತ್ನಕಿರಣಂ ಚಕ್ರೇಶ್ವರಂ ವಾರ್ಧಿಭೂ
ತಳನಾಥಂಗನುರಾಗಮಂ ಬಳೆಯಿಸಲ್ಕರ್ಘ್ಯಕ್ರಿಯಾತಂಡುಲಂ
ಗಳಿವೆಂದಾದರದಿಂದೆ ಕೊಂಡನವಱೊಳ್ ಪತ್ತೆಂಟುರತ್ನಂಗಳಂ ೧೨೦

ವ|| ಅಂತು ಮಾಗಧನಂ ಸಂತಸಂಬಡಿಸಿ ಪೋಗಲ್ವೇಟ್ದು ನಿಜವಿಜಯಕಟಕಾಭಿಮುಖನಾದ ನಾಗಳ್ ಸಾರಥಿ ರಥಮಂ ಚೋದಿಸುತ್ತುಂ,

ಕಾಣಿಕೆ. ಇವನ್ನರ್ಪಿಸಿ ನಿನ್ನ ಮೇಲಿನ ನನ್ನ ಭಕ್ತಿಯನ್ನು ಮೆರೆಯಿಸುತ್ತೇನೆ. ೧೧೮. "ಇಂಥ ಮುತ್ತುರತ್ನಗಳು ಸಮುದ್ರದಲ್ಲಿ ಸಿಗವು. ಇದು ಮಿರಮಿರನೆ ಹೊಳೆಯುವ ತಾರಹಾರ. ಇದು ಮಂಜಿನ ಮಣಿಗಳನ್ನೂ ತನ್ನ ಕಾಂತಿಗಳಿಂದ ಮೀರಿಸಿದೆ. ಇದು ತ್ರೈಲೋಕ್ಯಸಾರ. ೧೧೯. ಈ ಹಾರವು ನಿನ್ನ ಅಗಲವಾದೆದೆಯನ್ನು ಅಲಂಕರಿಸಿ ತನ್ನ ಜನ್ಮವನ್ನು ಸಫಲಗೊಳಿಸಿಕೊಳ್ಳಲಿ. ಇದು ನಿನ್ನ ಕೀರ್ತಿಯಂತೆಯೂ ಕುಂದಪುಷ್ಪದ ದಳಗಳಂತೆಯೂ ಶರತ್ಕಾಲದ ಮೋಡದಂತೆಯೂ ನಿರ್ಮಲವಾಗಿದೆ." ವ|| ಎಂದು ಸದ್ಭಾವಗಳೊಡನೆ ತನ್ನ ಸರ್ವಸ್ವವನ್ನೂ ಮಾಗಧಾಮರನು ಭರತಚಕ್ರವರ್ತಿಯ ಮುಂದಿಟ್ಟನು. ಆಗ ೧೨೦. ಕುಲಪರ್ವತದಂತೆ ಉನ್ನತನೂ ಉಗ್ರರಾದ ಶತ್ರುಗಳ ಶಿರೋಮಾಣಿಕ್ಯಗಳ ಕಾಂತಿಗಳಿಂದಿಡಿದ ಪಾದಪೀಠಗಳಲ್ಲಿನ ರತ್ನಗಳ ಕಿರಣಗಳಿಂದ ಪ್ರಕಾಶಿತನೂ ಆದ ಚಕ್ರೇಶ್ವರನು, ಸಮುದ್ರ ಭೂಮಿಗಳಿಗೊಡೆಯನಾದ ಮಾಗಧನೊಡನೆ ಅನುರಾಗವನ್ನು ಬಳೆಯಿಸಲು ಅರ್ಘ್ಯಕ್ರಿಯಾರ್ಥವಾದ ಅಕ್ಕಿಕಾಳುಗಳು ಎಂದು ಭಾವಿಸಿ ಆ ರತ್ನಗಳ ನಡುವೆ ಕೆಲವು ರತ್ನಗಳನ್ನು ಮಾತ್ರ ಆದರದಿಂದ ಪರಿಗ್ರಹಿಸಿದನು. ವ|| ಹೀಗೆ ಮಾಗಧನನ್ನು ಸಂತೋಷಪಡಿಸಿ ಅವನಿಗೆ ಹಿಂದಿರುಗಲು ಅಪ್ಪಣೆಮಾಡಿದನು. ವಿಜಯ ಶಿಬಿರಾಭಿಮುಖನಾಗಿ ಹೊರಟನು. ಆಗ ಸಾರಥಿಯು ರಥವನ್ನು ನಡೆಯಿಸುತ್ತ

ಮಾಗಧನಂ ಗೆಲ್ದೊಸಗೆಗೆ
ರಾಗಿಸಿ ಜಳರಾಶಿ ನಿನಗೆ ಸೇಸಿಕ್ಕುವವೋಲ್
ಈಗಳ್ ಸೊಗಯಿಸಿದುದು ಮು
ಕ್ತಾಗಣಮಿಶ್ರಿತತರಂಗಹಸ್ತೋತ್ಕರದಿಂ ೧೨೧

ಪಸರಿಸಿದ ಪದ್ಮರಾಗದ
ಪೊಸಗೆಂಪಂ ಮಾಂಸಮೆಂದು ಮುಂ ಕರ್ದುಕಲ್ಕಾ
ಟಸಿಯುಂ ಬಟಿಕದನುರಿಯೆಂ
ಬ ಸಂಕೆಯಿಂ ಪೊರ್ದದಿರ್ದುವೀ ಮತ್ಸ್ಯಂಗಳ್ ೧೨೨

ಸಮದ ಕರಿಮಕರಹತಿಯಿಂ
ಸಮುಚ್ಚಳದ್ವೀಚಿಮಾಳಿಕಾಸ್ಫಾಳಾಂತ
ಸ್ಸ್ತಿಮಿತಾಕ್ಷನೀಗಳೀ ತಿಮಿ
ತಿಮಿಂಗಿಳಂಗೆತ್ತು ನೋೞ್ಪುದೀ ಸ್ಯಂದನಮಂ ೧೨೩

ಕಡುಗುಣ್ಪುವೆರಸು ದಾಂಟಂ
ಗಡ ಮೇರೆಯನೆಂದು ವಜ್ರವೇದಿಕೆಯಂ ತಾಂ
ತೊಡೆಸಕ್ಕಿವೊಯ್ವವೋಲ್ ಪೊ
ಯ್ದೊಡನೊಡನುಚ್ಚಳಿಪುವಿದಱ ತುಂಗತರಂಗಂ ೧೨೪

ವ|| ಎಂಬಿನೆಗಂ; ಅತ್ತ ವಿಜಯಕಟಕಜನಮಂಬುಧಿತಳದೊಳಿರ್ದು ಅರಸನೊಂದೆ ಮೆಯ್ಯೊಳ್ ಪೋಗಿ ಬಾರದೆ ತಡೆದುದರ್ಕೆ ಕಟ್ಟುಕಡಿದು,

೧೨೧. "ಚಕ್ರೇಶ್ವರ ಮಾಗಧನನ್ನು ಗೆದ್ದ ಸಂತೋಷಾರ್ಥವಾಗಿ ಜಲರಾಶಿಯು ಮುತ್ತುಗಳಿಂದ ಮಿಶ್ರಿತವಾದ ತರಂಗಗಳೆಂಬ ಕೈಗಳಿಂದ ನಿನಗೆ ಸೇಸೆಯಿಕ್ಕುವಂತೆ ತೋರುತ್ತಿದೆ! ೧೨೨. ಮೀನುಗಳು ಪದ್ಮರಾಗಮಣಿಗಳ ಹೊಸಗೆಂಪನ್ನು ಮಾಂಸವೆಂದು ಅದನ್ನು ಕುಟುಕಲು ಉದ್ದೇಶಿಸಿದವು. ಮತ್ತೆ ಅವನ್ನು ಬೆಂಕಿಯೆಂದು ಸಂದೇಹಿಸಿ ಸಮೀಪಿಸಲಿಲ್ಲ! ೧೨೩. ಮದಿಸಿದ ನೀರಾನೆ ಮತ್ತು ಮೊಸಳೆಗಳ ಹೊಡೆತದಿಂದ ಮೇಲಕ್ಕೆದ್ದ ಅಲೆಗಳ ಸಾಲಿನ ಆಸ್ಫಾಲನೆಯಿಂದ ನೆಟ್ಟ ಕಣ್ಣುಳ್ಳ ತಿಮಿಯು ಈ ರಥವನ್ನು ತಿಮಿಂಗಿಲವೆಂಬ ಭ್ರಾಂತಿಯಿಂದ ನೋಡುತ್ತಿದೆ! ೧೨೪. ಅತ್ಯಧಿಕವಾಗಿರುವ ಕಾರಣ ಮೇರೆಯಾಗಿರುವ (ಅಡ್ಡಲಾದ) ವಜ್ರವೇದಿಕೆಯನ್ನು ದಾಟಲು ಸಾಧ್ಯವಾಗದಲ್ಲವೆ ಎಂದು ತೊಡೆ ಸವರಿ ಹೊಡೆದು (ಸೆಡ್ಡು ಹೊಡೆದು) ಎತ್ತರವಾದ ಅಲೆಗಳು ಒಡನೆ ಮೇಲಕ್ಕೆ ನೆಗೆಯುತ್ತಿವೆ."
ವ|| ಎಂದು ಹೇಳಿದನು. ವಿಜಯಶಿಬಿರದ ಜನರು ಸಮುದ್ರತಟದಲ್ಲಿರುವ ರಾಜನಾದ ಭರತೇಶ್ವರನು ಏಕಾಕಿಯಾಗಿ ಹೋಗಿ ಅಲ್ಲಿಯವರೆಗೆ ಬಾರದೆ ತಡಮಾಡಿದುದಕ್ಕಾಗಿ

ಅರಸಂ ತುಂಗತರಂಗಭಂಗುರಗಭೀರಾಂಭೋಧಿಯಂ ಪೊಕ್ಕನೊಂ
ದೆ ರಥಂ ಸಾರಥಿಯೊರ್ವನಾರುಮೊಡನಿಲ್ಲೆಂತೆಂತುಟಾ ಬಲ್ಲಿದಂ
ಸುರನಾ ಮಾಗಧನಲ್ಲಿ ಭೂಭುಜನ ದೋರ್ದಂಡಕ್ಕೆ ಪುಣ್ಯೋದಯಂ
ನೆರಮಕ್ಕೆಂದು ಪಲುಂಬಿ ಪಂಬಲಿಪುದಾಯ್ತಂತಾಕುಳವ್ಯಾಕುಳಂ ೧೨೫

ವ|| ಅನ್ನೆಗಂ,

ಪರಿತಂದಪ್ಪುದದೊಂದದೇಂ ಮಕರಮೋ ತುಂಗಾದ್ರಿಯಂ ಪೋಲ್ವ ಪೆ
ರ್ದೆರೆಯೋ ಪೆರ್ದೆರೆಯಲ್ತು ಪೋ ಮಕರಮುಂ ತಾನಲ್ಲದುದ್ಯದ್ಧ್ವಜಂ
ಭರತಾಧೀಶ್ವರನೇಱಿ ಪೋದ ರಥಮೀ ಬಂದಂ ಧರಾಧೀಶನೆಂ
ಬ ರವಂ ಪೊಂಪುಱಿವೋಗೆ ವಾರಿಧಿತಟಂ ಚೆಲ್ವಾದುದಾ ಸೈನ್ಯದಿಂ ೧೨೬

ತೆರೆಗಳ ಪೊಯ್ಲಂ ಸ್ಯಂದನ
ತುರಗಂಗಳ್ ಮೊಗಮನೆತ್ತಿ ಬಂಚಿಸಿ ಮಟ್ಟಂ
ಪರಿಯೆ ತೆರೆಯಿಲ್ಲದೆಡೆಯೊಳ್
ವರೂಥಮವಯವದೆ ತಡಿಯನೆಯ್ದಿದುದಾಗಳ್ ೧೨೭

ವ|| ಅಂತು,

ಮಣಿಸಂಘಾತಂಗಳಂ ಮಾಗಧನತಿಭಯದಿಂದಿತ್ತುವಂ ಚಕ್ರಿಚೂಡಾ
ಮಣಿ ಕೈಕೊಂಡಾಜ್ಞೆಯಂ ದಾಂಟದೆ ನಡೆವುದು ನೀನೆಂದಣಂ ಮಾಣದೇಕ
ಕ್ಷಣದಿಂದಂ ತನ್ನ ಲೀಲಾರಥದೊಳೆ ಲವಣಾಂಭೋಧಿಯಂ ದಾಂಟಿ ನಾನಾ
ಗುಣರತ್ನಾಂಭೋಧಿ ಬಂದಂ ಸುಕವಿಜನಮನೋಮಾನಸೋತ್ತಂಸಹಂಸಂ ೧೨೮

ಸಹನೆ ಕಳೆದುಕೊಂಡರು. ೧೨೫. "ಅರಸನು ದೊಡ್ಡ ದೊಡ್ಡ ಅಲೆಗಳು ಎದ್ದು ಬೀಳುತ್ತಿರುವ ಆಳವಾದ ಸಮುದ್ರವನ್ನು ಹೊಕ್ಕನು. ಅವನೊಡನೆ ಸಾರಥಿ ರಥಗಳಲ್ಲದೆ ಮತ್ತೇನೂ ಇರಲಿಲ್ಲ. ಏನಾಗುವುದೋ ತಿಳಿಯದು. ಬಲ್ಲಿದನಾದ ಮಾಗಧಾಮರನು ಅಲ್ಲಿರುವನು. ರಾಜನಾದ ಭರತೇಶ್ವರನ ದೋರ್ದಂಡಕ್ಕೆ ಅವನ ಪುಣ್ಯೋದಯವು ನೆರವಾಗಲಿ" ಎಂದು ಗಾಬರಿಗೊಂಡ ಜನರು ಹಂಬಲಿಸಿದರು. ವ|| ಅಷ್ಟರಲ್ಲಿ ೧೨೬. "ಹರಿದು ಬರುತ್ತಿರುವುದೇನಿರಬಹುದು? ಮೊಸಳೆಯೇ? ತುಂಗಪರ್ವತವನ್ನು ಹೋಲುವ ದೊಡ್ಡ ಅಲೆಯೇ? ಅದು ದೊಡ್ಡ ಅಲೆಯೂ ಅಲ್ಲ, ಮೊಸಳೆಯೂ ಅಲ್ಲ, ಅದು ಮೇಲೆತ್ತಿ ಕಟ್ಟಿದ ಬಾವುಟವುಳ್ಳ ಭರತರಾಜನು ಏರಿಹೋದ ರಥ. ಅಗೋ! ಧರಾಧೀಶನು ಬಂದೇಬಿಟ್ಟನು!" ಎಂಬ ಶಬ್ದದಿಂದ ರೋಮಾಂಚಗೊಂಡ ಆ ಸೈನ್ಯದಿಂದ ಸಮುದ್ರತಟವು ಚೆಲ್ವಾಯಿತು. ೧೨೭. ರಥಕ್ಕೆ ಹೂಡಿದ ಕುದುರೆಗಳು ತಮ್ಮ ಮುಖವನ್ನೆತ್ತಿಕೊಂಡು ಅಲೆಗಳ ಹೊಡೆತದಿಂದ ತಪ್ಪಿಸಿಕೊಂಡು ಮಟ್ಟಸವಾಗಿ ಸಾಗಿಬಂದವು. ಆಗ ಅಲೆಗಳಿಲ್ಲದ ಜಾಗದಲ್ಲಿಳಿದು ರಥವು ಸುಲಭವಾಗಿ ದಡವನ್ನು ಮುಟ್ಟಿತು. ವ|| ಹಾಗೆ ೧೨೮. ಮಾಗಧಾಮರನು ಅತಿಭಯದಿಂದಿತ್ತ 'ಮಣಿಸಂಘಾತ'ಗಳನ್ನು ಭರತಚಕ್ರವರ್ತಿಯು ಪರಿಗ್ರಹಿಸಿದನು. "ಎಲೆ ಮಾಗಧ! ನೀನು ನನ್ನಾಜ್ಞೆಯನ್ನು ಸ್ವಲ್ಪವೂ ಮೀರದೆ ನಡೆಯುವುದು" ಎಂದು ಹೇಳಿದನು.

ವ॥ ಅಂತು ಸಮುತ್ತೀರ್ಣಪ್ರತಿಜ್ಞಾಪಾರಂ ಪಾರಾವಾರವನೆಯ್ದಿದಾಗಳ್ ಗಂಗಾದ್ವಾರದೊಳ್ ಬಂದು ಕಾಣ್ಬ ಮಕುಟಬದ್ಧರುಂ ತದ್ವೇದೀತಟದೊಳ್ ಬಂದೆಱಗುವಧಿಕಾರಿಗಳುಂ ಶಿಬಿರಬಹಿರ್ಭಾಗದೊಳ್ ಬಂದು ಕೈಕೊಂಡ ಸೈನ್ಯಂಗಳುಂ ಬೆರಸು,

ನೆರೆದಂತಃಪುರಕಾಂತೆಯರ್ ಪಲಬರುಂ ಸೇಸಿಕ್ಕೆಯುಂ ವಾರಸೌಂ
ದರಿಯರ್ ಚಾಮರಮಿಕ್ಕೆಯುಂ ಮಕುಟಬದ್ಧಾಧೀಶರಾಗಳ್ ವಸುಂ
ಧರೆಯಂ ಪರ್ವಿರೆ ಮ್ಮೆಯನಿಕ್ಕೆಯುಮುದಾತ್ತೋತ್ಸಾಹದಿಂ ರಾಜಮಂ
ದಿರಮಂ ಪೊಕ್ಕನುದಾರಸಾರವಿಭವಂ ಸಂಸಾರಸಾರೋದಯಂ ೧೨೯

ಇದು ದೇವೇಂದ್ರಮುನೀಂದ್ರವಂದ್ಯ ಪರಮಜಿನೇಂದ್ರಮುಖಚಂದ್ರವಾಕ್ಚಂದ್ರಿಕಾ
ಪ್ರಸರಪ್ರಸಾದೋದೀರ್ಣ ಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಮಾಗಧದರ್ಪದಳನಂ
ದ್ವಾದಶಾಶ್ವಾಸಂ

ಒಡನೆ ತನ್ನ ಲೀಲಾರಥದಿಂದ ಲವಣಸಮುದ್ರವನ್ನು ದಾಟಿ ಸುಕವಿಜನ ಮನೋಮಾನಸೋತ್ತಂಸಹಂಸನೂ ನಾನಾಗುಣರತ್ನಸಾಗರನೂ ಆದ ಭರತರಾಜನು ಬಂದನು. ವ॥ ಭರತನು ಪ್ರತಿಜ್ಞೆಯನ್ನು ನಿರ್ವಹಿಸಿ ಸಮುದ್ರದ ದಡವನ್ನು ಸೇರಿದನು. ಗಂಗಾತೀರದಲ್ಲಿ ಬಂದು ಕಂಡ ಕಿರೀಟಧಾರಿಗಳಾದ ರಾಜರನ್ನೂ ಆ ವೇದಿಯ ದಡದಲ್ಲಿ ಬಂದೆರಗಿದ ಅಧಿಕಾರಿಗಳನ್ನೂ ಶಿಬಿರದ ಹೊರಗಡೆ ಬಂದು ಕೈಮುಗಿದ ಸೈನ್ಯಗಳನ್ನೂ ಕೂಡಿದನು. ೧೨೯. ಆಗ ಅಲ್ಲಿ ನೆರೆದ ಅಂತಃಪುರಸ್ತ್ರೀಯರು ಕೆಲವರು ರಾಜನಿಗೆ ಸೇಸೆಯನ್ನಿಕ್ಕಿದರು. ವಾರಸ್ತ್ರೀಯರು ಚಾಮರಗಳನ್ನು ಬೀಸಿದರು. ಕಿರೀಟಧಾರಿಗಳಾದ ರಾಜರು ಆ ಭೂಮಿಯಲ್ಲಿ ನೆರೆದು ರಾಜನನ್ನು ಭಕ್ತಿಯಿಂದ ನಮಸ್ಕರಿಸಿದರು. ಮಹತ್ತಾದ ಐಶ್ವರ್ಯವುಳ್ಳ ಸಂಸಾರಸಾರೋದಯನಾದ ಭರತಚಕ್ರವರ್ತಿಯು ರಾಜಮಂದಿರವನ್ನು ಅಮಿತೋತ್ಸಾಹದಿಂದ ಪ್ರವೇಶಿಸಿದನು.

ಇಂತು ಮಾಗಧದರ್ಪದಳನವೆಂಬ ಹನ್ನೆರಡನೆಯ ಆಶ್ವಾಸ ಮುಗಿಯಿತು.

# ತ್ರಯೋದಶಾಶ್ವಾಸಂ

ಶ್ರೀಯೊಳೊಡಂಬಡಿಸಿ ಜಯ
ಶ್ರೀಯಂ ಷಟ್ಖಂಡಮಂಡಳಕ್ಷಿತಿಯುಮನಾ
ತ್ಮೀಯಂ ಮಾಡುವೆನೆಂಬ ನಿ
ಜಾಯತಿಯಿಂದಂ ಸರಸ್ವತೀಮಣಿಹಾರಂ ೧

ವ|| ಅಂತು ಭರತೇಶ್ವರಚಕ್ರವರ್ತಿ ದಕ್ಷಿಣದಿಗಂಗನಾಲಂಕಾರನಾಗಿ ನಡೆದು ದಕ್ಷಿಣಾಂಬುರಾಶಿಯನೆಯ್ದಿ ವೈಜಯಂತೀದ್ವಾರದೊಳ್ ಬೀಡಂ ಬಿಟ್ಟಾಗಳ್,

ಏಲಾಲವಂಗಲವಲೀ
ವೇಲಾವನಭೂಮಿಯೊಳ್ ನಿಧೀಶ್ವರಸೈನ್ಯ
ವ್ಯಾಲಗಜಂಗಳ್ ವನಗಜ
ಲೀಲೆಯನನುಕರಿಸೆ ಕಣ್ಗೆವಂದುವು ಪಲವುಂ ೨

ವ|| ಅಂತಾ ವನೋಪಾಂತದೊಳ್ ಮುನ್ನಿನಂತೆ ಶಿಬಿರಮಂ ನಿಜಿಸಿ ವೈಜಯಂತೀದ್ವಾರದೊಳಗಣಿಂದಮೊಂದೇ ರಥದೊಳ್ ಲವಣಜಲಧಿಯಂ ಪೊಕ್ಕು,

ಮಾಗಧನಂ ಗೆಲ್ದಂತವೊ
ಲಾಗಡೆ ವರತನುವನೊತ್ತಿ ಕಪ್ಪಂಗೊಂಡು
ದ್ಯೋಗದ ಕಲಿತನಮಂ ಪೊಗ
ಟ್ವಾಗಳವಾಙ್ಮನಸಗೋಚರಂ ಪೌರವನಾ ೩

೧. ಸರಸ್ವತೀಮಣಿಹಾರನಾದ ಭರತೇಶನು ಜಯಲಕ್ಷ್ಮಿಯನ್ನು ರಾಜ್ಯಶ್ರೀಯೊಡನೆ ಸೇರಿಸಿದನು. ಷಟ್ಖಂಡಮಂಡಿತವಾದ ಭೂಮಿಯನ್ನೂ ತನ್ನ ವಶಪಡಿಸಿಕೊಳ್ಳುವೆನೆಂಬ ಕೆಚ್ಚಿನಿಂದ, ವ|| ಆ ಭರತೇಶ್ವರಚಕ್ರವರ್ತಿಯು ದಕ್ಷಿಣದಿಕ್ಕೆಂಬ ಅಂಗನೆಗೆ ಅಲಂಕಾರಪ್ರಾಯನಾಗಿ ನಡೆದು ದಕ್ಷಿಣಸಮುದ್ರವನ್ನು ಸೇರಿ, 'ವೈಜಯಂತೀ ದ್ವಾರ'ದಲ್ಲಿ ಬೀಡು ಬಿಟ್ಟನು. ೨. ಏಲಕ್ಕಿ, ಲವಂಗ ಮತ್ತು ಲವಲೀಬಳ್ಳಿಗಳಿಂದ ಶೋಭಿತವಾದ ಸಮುದ್ರತೀರದ ಕಾಡುಪ್ರದೇಶಗಳಲ್ಲಿ ನಿಧೀಶ್ವರನಾದ ಭರತನ ಸೈನ್ಯದ ಮದ್ದಾನೆಗಳು ಕಾಡಾನೆಗಳ ಲೀಲೆಯನ್ನನುಕರಿಸುತ್ತಾ ಕಣ್ಣುಗಳಿಗೆ ಸುಂದರವಾಗಿ ತೋರಿದವು. ವ|| ಆ ವನದ ಸಮೀಪದಲ್ಲಿ ಮುನ್ನಿನಂತೆ ಶಿಬಿರವನ್ನು ಬಿಟ್ಟನು. ವೈಜಯಂತೀದ್ವಾರದೊಳಗಿನಿಂದ ಒಂದೇ ರಥದಲ್ಲಿ ಸಮುದ್ರವನ್ನು ಹೊಕ್ಕನು. ೩. ಮಾಗಧನನ್ನು ಗೆದ್ದಂತೆ ವರತನು[1]ವನ್ನೂ ಗೆದ್ದು ಅವನಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸಿದನು. ಆ ಪೌರವನ (ಭರತನ) ಯುದ್ಧಪ್ರಯತ್ನದಲ್ಲಿ ಕಲಿತನವನ್ನು ಹೊಗಳುವಾಗ ಅದು ಮಾತಿಗೂ, ಮನಸ್ಸಿಗೂ ಗೋಚರಿಸದಾಯಿತು.

1. ವರತನು = ಇವನೊಬ್ಬ ವ್ಯಂತರದೇವಾಧಿಪತಿ.

ವ॥ ಅಂತು ವರತನುವಿನ ಕೈಯೊಳಭೇದ್ಯಕವಚಮುಮಂ ಚೂಡಾರತ್ನಮುಮಂ ರತ್ನಕಟಕಂ ಬೆರಸು ಪಲವುಂ ಪರಾರ್ಥ್ಯರತ್ನಂಗಳಂ ಕೊಂಡು ಮಗುಳ್ದು ಲವಣಸಮುದ್ರದುಪಸಮುದ್ರದ ನಡುವೆ ನಡೆದು ಚಂದನಪನಸನಾಳಿಕೇರತಾಂಬೂಲವಲ್ಲೀಪ್ರಚುರಪ್ರದೇಶಂಗಳೊಳ್ ನಿಜವಿಜಯಕುಂಜರಂಗಳಂ ವಿಹಾರಿಸಿ ಬಂದು ಸಿಂಧುದ್ವಾರದೊಳ್ ಸಮುದ್ರಕಲ್ಲೋಲಲೀಲಾಂದೋಳಿತ ವನದೇವತಾಂದೋಳನಾನುಕಾರಿತಾಂಬೂಲಲತಿಕಾಲಂಬಕ್ರಮುಕಮುಮಾಕಂಪಿತಮಧುಕರನಿಕರಾನುಕಾರಿ ಲತಾಗೃಹಪ್ರದೀಪ ಚಂಪಕಮಂ ಪ್ರೇಂಖೋಳಿತ ಮನಸಿಜವಿಜಯಪ್ರಶಸ್ತಿಲೇಖನೋಚಿತಚ್ಛದಶ್ರೀತಾಳಿಕಮುಮಪ್ಪ ವೇಳಾ ವನದೊಳಾವಾಸಿತವಿಜಯಕಟಕನಾಗಿ ಪೂರ್ವಸ್ಥಿತಿಯೊಳೆ ಪೋಗಿ,

ಜಳಧಿಯ ನೀರನದೊಂದಾಂ
ಗೊಳಗಿನ ನೀರೆಂದು ಬಗೆದು ದಾಂಟಿದ ವಸುಧಾ
ತಳಪತಿಗಿತ್ತಂ ತ್ರಾಸಂ
ಗೊಳುತುಂ ಸರ್ವಸ್ವಮಂ ಪ್ರಭಾಸಾಮರನುಂ ೪

ವ॥ ಅಂತಾ ಪ್ರಭಾಸಾಮರನಂ ನಿಜವಿಜಯಯಶಃಪ್ರಭಾಸಮೂಹದಿಂದಂ ಪುದಿದು ಸಿಂಧು ನದೀತೀರಂಬಿಡಿದು ಬರ್ಪಲ್ಲಿ,

ಎಳವಿಸಿಲೀಗಳೀಗಳೆ ಮುದಿರ್ದುದು ಚೂತಕುಜಾತಮೀಗಳೀ
ಗಳೆ ನನೆದೋಱಿತಿಂದೊಳದಿನುನ್ಮದಷಟ್ಪದವೃಂದಮೀಗಳೀ
ಗಳೆ ಮೊರೆದತ್ತು ಚಂದನದ ತಕ್ಕಬಳಾನಿಕರಕ್ಕದೀಗಳೀ
ಗಳೆ ನೆಗಱ್ದತ್ತೆಲೇ ಪುಗಿಲದಾಗಳೆ ವೇಡ ವಸಂತರಾಜನಾ ೫

ವ॥ ಹೀಗೆ ವರತನುವಿನಿಂದ ಅಭೇದ್ಯವಾದ ಕವಚವನ್ನೂ ಚೂಡಾರತ್ನವನ್ನೂ ರತ್ನಕಟಕಸಹಿತವಾಗಿ ಕೆಲವು ಶ್ರೇಷ್ಠರತ್ನಗಳನ್ನೂ ಸ್ವಾಧೀನಪಡಿಸಿಕೊಂಡನು. ಲವಣ ಸಮುದ್ರದ ಉಪಸಮುದ್ರದ ನಡುವೆ ನಡೆದು ಚಂದನ, ಹಲಸು, ತೆಂಗು ಮತ್ತು ಎಲೆಬಳ್ಳಿಗಳಿಂದ ತುಂಬಿದ ಪ್ರದೇಶಗಳಲ್ಲಿ ತನಗೆ ವಿಜಯವನ್ನು ತಂದುಕೊಟ್ಟ ಆನೆಗಳನ್ನು ವಿಹರಿಸುವಂತೆಸಗಿದನು. ವೇಲಾವನದಲ್ಲಿ ಅವನು ತನ್ನ ಗೆದ್ದ ಸೈನ್ಯವನ್ನು ವಾಸಗೊಳಿಸಿದನು. ಅಲ್ಲಿ ಕಡಲ ಅಲೆಗಳ ಬಡಿತದಿಂದ ಅತ್ತಯಿತ್ತಾಡುವ ವನದೇವತೆಗಳ ಜೋಕಾಲಿಯೋ ಎಂಬಂತಿರುವ ಎಲೆಬಳ್ಳಿಗಳಿಂದ ಅಡಕೆಮರಗಳು ಸುತ್ತುವರೆಯಲ್ಪಟ್ಟಿದ್ದುವು. ಹಾರಾಡುತ್ತಿರುವ ದುಂಬಿವಿಂಡನ್ನು ಹೋಲುವ ಲತಾಗೃಹದಲ್ಲಿ ಸಂಪಗೆಯು ದೀಪದಂತಿತ್ತು. ಉಯ್ಯಾಲೆಯಂತೆ ಆಡುತ್ತಿರುವ ಮನ್ಮಥನ ವಿಜಯಪ್ರಶಸ್ತಿಲೇಖನಕ್ಕೆ ಉಚಿತವಾದ ಗರಿಗಳನ್ನು ಶ್ರೀತಾಳೆಮರಗಳು ಪಡೆದಿದ್ದುವು. ಮೊದಲಿನಂತೆಯೇ ಹೋಗಿ, ೪. ಸಮುದ್ರದ ನೀರನ್ನು ಗೋಷ್ಪದದ ನೀರೆಂದು ತಿಳಿದು ಅದನ್ನು ಸುಲಭವಾಗಿ ದಾಟಿದನು. ಆಗ ಪ್ರಭಾ ಸಾಮರನು[1] ಹೆದರಿ ತನ್ನ ಸರ್ವಸ್ವವನ್ನೂ ಭರತಚಕ್ರವರ್ತಿಗರ್ಪಿಸಿದನು. ವ॥ ಹೀಗೆ ಪ್ರಭಾಸಾಮರನನ್ನು ತನ್ನ ವಿಜಯವೆಂಬ ಯಶಃಪ್ರಭಾಸಮೂಹದಿಂದ ಮುಚ್ಚಿ ಸಿಂಧೂನದೀತೀರವನ್ನು ಹಿಡಿದು ಬರುತ್ತಿದ್ದನು. ಆಗ, ೫. ಎಳೆಬಿಸಿಲು ಆಗತಾನೆ ಮುಸುರಿತು. ಆಗತಾನೆ ಚೂತವೃಕ್ಷವು ಮೊಗ್ಗುವಡೆಯಿತು. ಇಂದೋಳರಾಗದಿಂದ

---

೧. ಇವನೊಬ್ಬ ವ್ಯಂತರದೇವಾಧಿಪತಿ.

ಜಿನುಗುವ ತುಂಬಿಯಿಂಚರಮೆ ಗಾಣರ ಕಾಕಳಿ ಕೂಡೆ ಸೋರ್ವ ಮಾ
ವಿನ ಸೊನೆ ಗಂಧಸಿಂಧುರಮದಂ ತಳಿರೋಳಿ ತಗುಳ್ದು ತಳ್ತ ಕೇ
ತನತತಿ ಚಾಮರೋತ್ಕರದೆಲರ್ ಮಳಯಾನಿಳನಾಗೆ ರಾಜರಾ
ಜನ ಪಡೆ ಚೆಲ್ವನೇನೆಟಿದುಕೊಂಡುದೊ ಬಂದ ವಸಂತರಾಜನಾ ೬

ವ॥ ಮತ್ತಮತ್ಯಂತಧೌತಕಲಧೌತಸ್ಥಾಸಕಾಳಂಕೃತನಕ್ಷತ್ರಮಾಳಾಪರಿಕಲಿತಕರೀಂದ್ರಂಗಳೆ ವಿಕಚಕರ್ಣಿಕಾಕಾರನಿಕೀರ್ಣಜಂಗಮಕ್ರೀಡಾಗಿರೀಂದ್ರಂಗಳಾಗೆ, ಸಕದಿಕ್ಪ್ರಚಳಿತ ರಾಜಪುತ್ರಮಯೂರಾತಪತ್ರ ನಿಚಯಮೆ ಸಂಚಾರೀಭೂತಚೂತಭೂಜಾರಾಮಮಾಗೆ, ವಿಜಯಕೌಸುಂಭರಕ್ತಾಂಶುಕಪತಾಕಾನಿಕಾಯಮೇ ಪಲ್ಲವಿತಾಶೋಕವನಮಾಗೆ, ಮದಾಮೋದಸುರಭಿಯುಂ ಮದಶೀಕರಾಸಾರಶಿಶಿರಮುಂ ಮದಾ ಮೋದಭರಮಂಥರಮುಂ ಅಪ್ಪ ಕರಿಕರ್ಣತಾಳಾನಿಳನೆ ಮಳಯರುಹನಂದನಾಂದೋಳನೋದ್ಗಂಧಿಯುಂ ಮಳಯಗಿರಿನಿರ್ಝರಾಸ್ಫಾಳಿತಶೀತಳಮುಂ ಮಳಯವಿಳಾಸಿನೀನಿರಂತರಾಳಸ್ತನತಟಸ್ಖಲನಮಂದಮಂದ ಗಮನಮುಮಪ್ಪ ಮಳಯಾನಿಳನಾಗೆ,

ಕರಿಣೀವೃಂದವ್ರಜದ್ಗಾಯನಸಮುದಯಕರ್ಣಾಮೃತಸ್ಯಂದಿ ಹಿಂದೋ
ಳರವಂ ಸಾಮೋದನಾನಾವಿಧಕುಸುಮರಸಾಪಾನಸಾನಂದಭೃಂಗಾ
ಘರವಂ ತಾನಾಗೆ ಪುಷ್ಪಾಕರಬಳವಿಜಯೋದ್ದರ್ಪಕಂದರ್ಪಲೀಲಾ
ಕರನಾದಂ ಚೈತ್ರಯಾತ್ರೋತ್ಸವದೊಳಖಿಳಷಟ್ಖಂಡಭೂಮಂಡಲೇಶಂ ೭

ತುಂಬಿಯಿಂಡು ಆಗತಾನೆ ವೊರ್ಥೆಯತೊಡಗಿತು. ಮಹಿಳಾವೃಂದಕ್ಕೆ ಚಂದನದ ಲೇಪನವೊದಗಿತು. ಎಲೇ, ಅದು ವಸಂತರಾಜನ ಆಗಮನ ಕಾಲ! ಹಾಗೆ ಆಗಬೇಡವೆ? ೬. ಗಾಯಕರ ಮಧುರಧ್ವನಿಯೇ ಗುನುಗುಟ್ಟುವ ದುಂಬಿಯ ಧ್ವನಿ. ಮದ್ದಾನೆಯ ಮದವೇ ಸೋರುವ ಮಾವಿನ ಸೋನೆಯ ವಾಸನೆ. ಎತ್ತಿಹಿಡಿದ ಪತಾಕೆಗಳ ಗುಂಪೇ ಚಿಗುರಿನ ಸಮೂಹ, ಚಾಮರಸಮೂಹದ ಗಾಳಿಯೇ ಒಂದು ಮಲಯಾನಿಲ. ಹೀಗೆ ರಾಜ ರಾಜನಾದ ಭರತನ ಸೈನ್ಯವು ವಸಂತರಾಜನ ಚೆಲ್ವನ್ನು ಸೆಳೆದುಕೊಂಡಿತು. ವ॥ ಮತ್ತು ಶುದ್ಧವಾದ ಚಿನ್ನದ ಲೇಪನಗಳಿಂದ ಅಲಂಕೃತವಾದ ನಕ್ಷತ್ರಮಾಲೆಗಳಿಂದ ಯುಕ್ತವಾದ ಗಜೇಂದ್ರಗಳೇ ಅರಳಿದ ಕಣಗಿಲೆಗಳಿಂದ ಯುಕ್ತವಾಗಿ ಚಲಿಸುವ ಕ್ರೀಡಾಗಿರೀಂದ್ರಗಳಾದುವು. ಎಲ್ಲ ದಿಕ್ಕುಗಳನ್ನೂ ಕುರಿತು ಹೊರಟ ರಾಜಪುತ್ರರ ಮಯೂರಾತಪತ್ರಗಳ ಸಮೂಹವೇ ಚಲಿಸುವ ಮಾವಿನ ತೋಟವಾಯಿತು. ವಿಜಯಗಜಗಳ ಮೇಲೆ ಕಟ್ಟಿದ ಕುಸುಬೆ ಹೂವಿನಂತೆ ಕೆಂಪಾದ ಬಾವುಟಗಳ ಗುಂಪೇ ಚಿಗುರಿಟ್ಟ ಅಶೋಕವನವಾಯಿತು. ಮದಜಲದ ಸುವಾಸನೆಯಿಂದ ಸುವಾಸಿತವೂ ಮದಜಲಬಿಂದುಗಳ ಸುರಿಮಳೆಯಿಂದ ತಂಪಾದುದೂ ಮದದ ಸುವಾಸನೆಯ ಭಾರದಿಂದ ಮಂದವೂ ಆದ ಆನೆಗಳ ಕಿವಿಯೆಂಬ ಬೀಸಣಿಗೆಯ ಗಾಳಿಯೇ ಶ್ರೀಗಂಧದ ತೋಟಗಳ ಆಂದೋಲನದಿಂದಾದ ಸುವಾಸನೆಯುಳ್ಳುದೂ ಮಲಯಪರ್ವತದಲ್ಲಿನ ಪ್ರವಾಹಗಳ ಸಂಸ್ಪರ್ಶದಿಂದ ಶೀತಲವೂ ಮಲಯಸ್ತ್ರೀಯರ ಘನಸ್ತನತಟದಿಂದುರುಳಿ ಮೆಲ್ಲಮೆಲ್ಲನೆ ಚಲಿಸುವುದೂ ಆದ ಮಲಯಾನಿಲವೂ ಆಯಿತು. ೭. ಷಟ್ಖಂಡಭೂಮಂಡಲಾಧೀಶನಾದ ಭರತಚಕ್ರವರ್ತಿಯು ವಸಂತನ ಬಲದಿಂದಾದ ವಿಜಯದಿಂದ ದರ್ಪಶಾಲಿಯಾದ ಮನ್ಮಥನ ವಿಲಾಸಕ್ಕೆ ಆಕರನಾದನು.

ವ॥ ಅಂತು ದಿಗ್ವಿಜಯಯಾತ್ರೆಯೆ ವಸಂತೋದ್ಯಾನಯಾತ್ರೆಯನನುಕರಿಸೆ,

ಸಲಿಲಕ್ರೀಡಾಭವೋದ್ಯಜ್ಜಳಕಣನಿಕರಾಕಾರಮತ್ತದ್ವಿಪೇಂದ್ರಾ
ವಲಿಹಸ್ತಾಗ್ರೋಚ್ಚಳಚ್ಛೀಕರಸಮುದಯಮುದ್ಯಾನಕೇಳೀಚಳತ್ಪ
ತ್ರಿಲಶಾಖಾಕಾರಜೈತ್ರದ್ವಿರದಕದಳಿಕಾಡಂಬರಂ ಭೂರಿಕೋಲಾ
ಹಲಸೇನಾಚಕ್ರವಾಳಂ ನಡೆದುದು ವಿಜಯಶ್ರೀವಧೂತ್ಕಂಠೆಯಿಂದಂ ೮

ವ॥ ಅಂತತ್ಯಂತಪ್ರವರ್ಧಮಾನವಿಜಯೋದ್ಯೋಗದಿಂ ವಿಜಯಾರ್ಧಾಚಳೋಪಾಂತ ಮನೊಯ್ಯನೊಯ್ಯನೆಯ್ದಿವರ್ಪಾಗಳ್,

ಚಿರವಿಕ್ಷೋಭಿತ ಸಿಂಧುತೋಯಶಿಶಿರಂ ತತ್ತೀರನಾನಾಲತೋ
ತ್ಕರಸಂಘಟ್ಟನಮಂಥರಂ ಮದಪಯಃಕಂಡೂಳಗಂಡಸ್ಥಳಂ
ದ್ವಿರದೋದ್ಘೃಷ್ಟಘನಸ್ರವತ್ಸರಳಸಾರಾಮೋದಮುದ್ದಾಮಭೃಂ
ಗರವಂ ಚಕ್ರಿಯನಾಜಿಸಿತ್ತು ವಿಜಯಾರ್ಧೋಪಾಂತಮಂದಾನಿಳಂ ೯

ವ॥ ಮತ್ತಮಂತಂತೆ ಬರೆವರೆ,

ಪರಿಮಳಭರಿತವಾದ ನಾನಾವಿಧ ಕುಸುಮರಸದ ಪಾನದಿಂದ ಆನಂದಿಸುವ ದುಂಬಿಗಳ ಧ್ವನಿಯೇ ಹೆಣ್ಣಾನೆಗಳ ಗುಂಪಿನೊಡನೆ ಸಾಗಿಬರುವ ಗಾಯಕರ ಕರ್ಣಾಮೃತಸ್ಯಂದಿಯಾದ ಹಿಂದೋಳಧ್ವನಿಯಾಯಿತು. ವ॥ ಹಾಗೆ ದಿಗ್ವಿಜಯಯಾತ್ರೆಯು ವಸಂತೋದ್ಯಾನಯಾತ್ರೆಯನ್ನು ಅನುಕರಿಸಿತು. ೮. ವಿಜಯಲಕ್ಷ್ಮಿಯೆಂಬ ವಧುವಿನ ಮೇಲಿದ್ದ ಉತ್ಕಟೇಚ್ಛೆಯಿಂದ ಸೇನೆಯು ಕೋಲಾಹಲಮಾಡುತ್ತ ಮುಂದೆ ನಡೆಯಿತು. ಜಲಕ್ರೀಡೆಯಲ್ಲಿ ಮೇಲೆ ಚಿಮ್ಮುವ ಜಲಬಿಂದುಗಳಂತೆ ಮದ್ದಾನೆಗಳ ಸೊಂಡಿಲಿನಿಂದ ಚಿಮ್ಮುವ ನೀರುಹನಿಗಳು ಕಾಣಿಸಿದವು. ಉದ್ಯಾನಕೇಳಿಯಲ್ಲಿ ಅಲ್ಲಾಡುವ ವೃಕ್ಷಶಾಖೆಗಳಂತೆ ಜಯಶಾಲಿಗಜಗಳ ಮೇಲೆ ಇದ್ದ ಪತಾಕೆಗಳು ಕಂಗೊಳಿಸಿದವು. ವ॥ ಹಾಗೆ ಅತಿಯಾಗಿ ಬೆಳೆಯುತ್ತಿರುವ ವಿಜಯೋದ್ಯಮದಿಂದ ವಿಜಯಾರ್ಧಾಚಲದ ಸಮೀಪವನ್ನು ಬೇಗ ಬೇಗನೆ ಮುಟ್ಟುತ್ತಿರಲು; ೯. ವಿಜಯಾರ್ಧಪರ್ವತದ ಸನಿಹದ ಗಾಳಿಯು ಭರತನನ್ನು ಸಮಾಶ್ವಾಸನೆಗೊಳಿಸಿತು. ಅದು ಕ್ಷೋಭಿತವಾದ ಸಮುದ್ರದ ನೀರಿನಿಂದ ಶೀತಲವಾದದ್ದು. ಅದರ ದಡದಲ್ಲಿ ಬೆಳೆದ ನಾನಾಲತೆಗಳ ಸಂಘಟ್ಟನೆಯಿಂದ ಮೆಲ್ಲಮೆಲ್ಲನೆ ಚಲನೆಯುಳ್ಳದ್ದು. ಮದೋದಕದಿಂದ ನವೆವಡೆದ ಗಂಡಸ್ಥಳವುಳ್ಳ ಆನೆಗಳ ತಿಕ್ಕಾಟದಿಂದ ಸಾಂದ್ರವಾಗಿ ಸ್ರವಿಸುತ್ತಿದ್ದ ಸರಲವೃಕ್ಷದ ರಸದಿಂದ ಸುವಾಸನೆಗೊಂಡದ್ದು. ದುಂಬಿವಿಂಡಿನ ಝೇಂಕಾರದಿಂದ ಕೂಡಿದ್ದು, ವ॥ ಮತ್ತು ಅಂತಂತೆಯೆ ಬರುತ್ತಿರಲು,

[ಗಗನಾಭೋಗ][1]ಮನೆಯ್ದೆ ನೀಳ್ದ ಮಣಿಕೂಟಾಟೋಪಮೆಂಬಂತೆ ದಿ
ಟ್ಟಿಗೆ ಮುನ್ನಂ ಬರೆ ಸಾರೆ ಸಾರೆ ತನುವಂ ತತ್ಕುಂಜಸಂಜಾತಭೂ
ಜಗಳತ್ಪುಷ್ಪಪರಾಗಸೌರಭವಹನ್ಮಂದಾನಿಲಂ ಸೋಂಕೆ ತೊ
ಟ್ಟಗೆ ಕಣ್ಗೊಂಡುದು ಪೌರವಂಗೆ ವಿಜಯಾರ್ಧಾದ್ರೀಂದ್ರಶೋಭೋದಯಂ ೧೦

ವ|| ಆ ವಿಜಯಾರ್ಧದ ಕಡೆವಿಡಿದು ಮೇಗೆ ನೆಗೆದ ವನವೇದಿಕಾಪ್ರದೇಶಮನೆಯ್ದಿದಾಗಳ್,

ಅದಱೊಳಗೆ ಪುದಿದ ಸಪ್ತ
ಚ್ಛದಚಂಪಕನಾಗಪೂಗಪುನ್ನಾಗವನಂ
ಪುದಿದ ಪೊಸಗಂಪಿನೊಳ್ ಬಳ
ಸಿದುದಾಗಳ್ ಪುಗುವ ಭರತನಂತಃಪುರಮಂ ೧೧

ವ|| ಅಂತು ಸೊಗಯಿಸುವ ವನವೇದಿಕೆಯ ನಾನಾಮಣಿಮಯೂಖಮಾಲಾವಿರಾಜಿತೋತ್ತುಂಗ ತೋರಣದ್ವಾರದಿಂದಂ ನುಗುಳ್ದು ವನವೀಥಿವಿಡಿದು ಬಂದು ವಿಜಯಾರ್ಧಮಧ್ಯಮಕೂಟಾಸನ್ನಪ್ರದೇಶನಿವೇಶಿತಶಿಬಿರನಾಗಿ ನಿಯಮದೊಳಿರ್ದ ಭರತೇಶ್ವರಚಕ್ರವರ್ತಿಯಿರವನಱಿದು,

ಸಿತಕುಸುಮಶೇಖರಂ ಚ
ರ್ಚಿತಚಂದನನತಿವಿಳಾಸವಿಧೃತದುಕೂಲಂ
ಧೃತರತ್ನಾರ್ಘ್ಯಂ ಬಂದಂ
ಪತಿಗಿದಿರಂ ಶಂಖನಿಧಿಯೆ ಬರ್ಪಂತಾಗಳ್ ೧೨

೧೦. ಗಗನವಿಸ್ತಾರವನ್ನಾಕ್ರಮಿಸಿ ಉನ್ನತವಾಗಿ ಬೆಳೆದ ಮಣಿಶಿಖರದ ಆಟೋಪದಂತೆ ಮೊದಲು ಆ ಪರ್ವತವು ದೃಷ್ಟಿಗೆ ಗೋಚರಿಸಿತು. ಬಳಿಕ ಹತ್ತಿರಕ್ಕೆ ಬರಲು ವಿಜಯಾರ್ಧ ಪರ್ವತದ ಮರಗಳಿಂದ ಉದುರುತ್ತಿರುವ ಹೂಗಳ ಸುವಾಸನೆಯನ್ನು ಹೊತ್ತು ತಂದ ಮೆಲುಗಾಳಿಯು ದೇಹವನ್ನು ಸೋಂಕಿತು. ಆಗ ಭರತಚಕ್ರವರ್ತಿಗೆ ವಿಜಯಾರ್ಧಪರ್ವತದ ಶೋಭೋದಯವು ಗೋಚರಿಸಿತು. ವ|| ವಿಜಯಾರ್ಧಪರ್ವತದ ಬಳಿವಿಡಿದು ಎತ್ತರವಾಗಿ ಬೆಳೆದ ವನವೇದಿಕಾಪ್ರದೇಶವನ್ನು ಸೇರಿದನು. ಆಗ ೧೧. ಅಲ್ಲಿನ ಏಳೆಲೆ ಬಾಳೆ, ಸಂಪಿಗೆ, ನಾಗಪುಷ್ಪ, ಅಡಕೆ ಮತ್ತು ಪುನ್ನಾಗಗಳ ಕಾಡಿನ ಹೊಸ ಸುವಾಸನೆಯು ಭರತಚಕ್ರವರ್ತಿಯ ಅಂತಃಪುರಸ್ತ್ರೀಯರನ್ನು ಬಳಸಿತು. ವ|| ಹಾಗೆ ಸೊಗಯಿಸುವ ವನವೇದಿಕೆಯ ವಿವಿಧ ಮಣಿಕಿರಣಗಳ ಮಾಲೆಯಿಂದ ವ್ಯಾಪ್ತನಾಗಿ ವಿರಾಜಿತವೂ ಉನ್ನತವೂ ಆದ ತೋರಣದ್ವಾರದಿಂದ ನುಸುಳಿ ವನವೀಥಿಗೆ ಬಂದನು. ವಿಜಯಾರ್ಧ ಪರ್ವತದ ನಡುವಣ ಶಿಖರಕ್ಕೆ ಸಮೀಪದಲ್ಲಿ ಶಿಬಿರವನ್ನು ಬಿಟ್ಟನು. ಆಗ ನಿಯಮದಲ್ಲಿದ್ದ ಭರತೇಶ್ವರ ಚಕ್ರವರ್ತಿಯ ಇರವನ್ನರಿತು, ೧೨. ವಿಜಯಾರ್ಧದೇವನು ಶ್ವೇತಪುಷ್ಪಗಳನ್ನು ಮುಡಿದು ಕೊಂಡು ಚಂದನದಿಂದ ಲಿಪ್ತನಾಗಿ ರತ್ನಾರ್ಘ್ಯವನ್ನು ಹಿಡಿದುಕೊಂಡು ದುಕೂಲಧಾರಿಯಾಗಿ ಶಂಖನಿಧಿಯು ಬರುವ ಹಾಗೆ ಭರತಚಕ್ರವರ್ತಿಗೆದುರಾಗಿ ಬಂದನು.

---

೧ ಗಗನಾಭಾಗ (ಅನ್ಯತ್ರ) ಆಭೋಗ = ವಿಸ್ತಾರ.

ಮಣಿಮಕುಟಂ ಶಿಖರಂ ಲಂ
ಬಣಿಗೆಯ ಪೊಸಮುತ್ತು ನಿರ್ಝರಂ ಮಣಿಕಟಕಂ
ಮಣಿಕಟಕಮಾಗೆ ತದ್ಗಿರಿ
ಗೆಣೆಯಾದಂ ತನ್ನ ಪೆಸರೊಳಂ ವಿಜಯಾರ್ಧಂ ೧೩

ಬಂದು ಮಣಿಮಕುಟನಸವಸ
ದಿಂದಂ ಚಕ್ರಿಯ ಪೊದಳ್ದ ತೇಜಕ್ಕೆ ಮಸು
ಳ್ದಂದೆಱಗಿ ಮುಂದೆ ನಿಲ್ವುದು
ಮೊಂದವಯವದಿಂದೆ ಸಾರೆ ಕರೆದು ನೃಪೇಂದ್ರಂ ೧೪

ವ॥ ಭದ್ರಾಸನಮನಿಕ್ಕವೇೞೆ ಕುಳ್ಳಿರ್ದು ವಿಜಯಾರ್ಧಕುಮಾರಂ,

ಇದು ವಿಜಯಾರ್ಧಮೆನ್ನ ಪೆಸರುಂ ವಿಜಯಾರ್ಧಮಲಂಘ್ಯಮೆಂದುಮಿಂ
ತಿದು ಪೆಱರ್ಗಾನುಮಿನ್ನೆಗಮಲಂಘ್ಯನೆನಿಂ ನಿನಗಾಳೆನಾಳ ಲೆ
ಕ್ಕದೊಳಿದು ಚಕ್ರವರ್ತಿಗಳ ದಿಗ್ವಿಜಯಾರ್ಧದೊಳೊಂದಿ ನಿಂದುದ
ಪ್ಪುದಱಿಂದಾಳ್ ಸಂದುದೀ ಗಿರಿಯುಮೀ ಜಗದೊಳ್ ವಿಜಯಾರ್ಧನಾಮದಿಂ ೧೫

ಇದಱೊಳ್ ಮಧ್ಯಮಕೂಟದೊಳ್ ವಸಿಯಿಪೆಂ[1] ನಿನ್ನಾಜ್ಞೆ ಪೂಮಾಲೆಯಂ
ದದೆ ನಿಂತಿರ್ಪುದು ಮತ್ಕಿರೀಟತಟದೊಳ್ ಚಕ್ರೇಶರಾರ್ ಬಂದೊಡಂ
ಮೊದಲೊಳ್ ಮಾಳ್ಪ ನಿಯೋಗಮಿಂತಿದೆನಗೆಂದಾನಂದದಿಂ ತಾನೆ ಮಾ
ಡಿದನಾ ಚಕ್ರಿಗೆ ನಾಡೆಯುಂ ವಿಭವದಿಂ ಪುಣ್ಯೋದಕಸ್ನಾನಮಂ ೧೬

೧೩. ಮಣಿಮುಕುಟವೇ ಶಿಖರ. ಜೋಲಾಡುತ್ತಿದ್ದ ಹೊಸಮುತ್ತಿನ ಸರವು ಗಿರಿನದಿ. ರತ್ನಖಚಿತವಾದ ಬಳೆಯು ರತ್ನಖಚಿತವಾದ ಸಾನುಪ್ರದೇಶ. ಅವನ ಹೆಸರೂ ವಿಜಯಾರ್ಧವೆಂದೇ. ಹೀಗೆ ಅವನು ವಿಜಯಾರ್ಧಪರ್ವತಕ್ಕೆಣೆಯಾದನು. ೧೪. ಮಣಿಮಯವಾದ ಕಿರೀಟವನ್ನು ಧರಿಸಿದ್ದ ಆ ವಿಜಯಾರ್ಧದೇವನು ತ್ವರೆಯಿಂದ ಬಂದು ಭರತೇಶ್ವರನ ಅಪ್ರತಿಹತವಾದ ತೇಜಸ್ಸಿಗೆ ಕಾಂತಿಗುಂದಿ ನಮಸ್ಕರಿಸಿ ಮುಂದೆ ನಿಂತನು. ಆಗ ಭರತೇಶ್ವರನು ಅವನನ್ನು ಹತ್ತಿರಕ್ಕೆ ಕರೆದನು. ವ॥ ಮತ್ತು ಭದ್ರಾಸನವನ್ನು ಇಡಲು ಹೇಳಿದನು. ವಿಜಯಾರ್ಧಕುಮಾರನು ಅದರ ಮೇಲೆ ಕುಳಿತನು. ೧೫. "ಇದು ವಿಜಯಾರ್ಧಪರ್ವತ. ನನ್ನ ಹೆಸರೂ ವಿಜಯಾರ್ಧನೆಂದೇ. ಅದು ಅಲಂಘ್ಯವಾಗಿರುವಂತೆ ನಾನೂ ಇತರರಿಗೆ ಇದುವರೆಗೆ ಅಲಂಘ್ಯನೇ! ಇನ್ನು ನಿನಗೆ ಆಳಾಗಿರುವೆನು. ನಮ್ಮನ್ನು ನೀನು ಆಳು. ಇದು ಚಕ್ರವರ್ತಿಯ ದಿಗ್ವಿಜಯವನ್ನು ಅರ್ಧವಾಗಿ ವಿಭಾಗಿಸುವುದರಿಂದ ವಿಜಯಾರ್ಧಗಿರಿಯೆಂದು ಪ್ರಸಿದ್ಧಿಗೊಂಡಿದೆ. ೧೬. ಇದರ ನಡುವಣ ಶಿಖರದಲ್ಲಿ ವಾಸಿಸುತ್ತಿದ್ದೇನೆ. ನಿನ್ನಾಜ್ಞೆಯು ಹೂಮಾಲೆಯಂತೆ ನನ್ನ ಕಿರೀಟತಲದ ಮೇಲೆ ನಿಂತಿದೆ. ಚಕ್ರೇಶ್ವರರಾರು ಬಂದರೂ ನಾನೆಸಗುವ ಮೊದಲ ಉದ್ಯೋಗವಿದು" ಎಂದು ಹೇಳುತ್ತಾ

---

೧ ವಸಿಯಿಪೆಂ = ವಸಿಸಿಪೆಂ?

ವ|| ಅಂತು ವಿಜಯಾಭಿಷೇಕಂಗೆಯ್ದು,

ಸಾರಮಿದು ರತ್ನಮಯಭೃಂ
ಗಾರಂ ಹರಿಪೀಠಮಿದು ಜಗತ್ತ್ರಿತಯಾಳಂ
ಕಾರಮಿದು ದಿವ್ಯಮಾತಪ
ವಾರಣಮಮೃತಾಂಶುಬಿಂಬಧವಳವಿಳಾಸಂ ೧೭

ಇವು ಚಮರೀಜಾತಂ ದು
ಗ್ಧವಾರ್ಧಿಫೇನೋಪಮಾನಮಿವು ನಿನಗೆಯೆ ತ
ಕ್ಕುವು ನಿನ್ನ ಜಸದ ರೂಪಿನೊ
ಳಿವೆ ಮೆಱೆವುವು ಸಕಳಚಕ್ರವರ್ತಿಶ್ರೀಯಂ ೧೮

ವ|| ಎಂದು ವಿಜಯಾರ್ಧಕುಮಾರಂ ಸಾರವಸ್ತುಗಳನೋಲಗಿಸಿ ತನಗಾಜ್ಞಾವಿಧೇಯನಾಗಿ ಪೋದಂ, ಅನ್ನೆಗಂ ಭರತೇಶ್ವರಚಕ್ರವರ್ತಿಯುಮಲ್ಲಿ ಚಕ್ರರತ್ನಮಂ ಪೂಜಿಸಿ,

ವಿಜಯಾರ್ಧಜಯಮಿದೆನಗಾ
ವ ಜಯಂ ನೆಗಟ್ದುತ್ತರಾರ್ಧಜಯಮೆ ಜಯಂ ದಿ
ಗ್ವಿಜಯದೊಳೆಂದೂರ್ಜಿತಭುಜ
ವಿಜಯಂ ದಿಗ್ವಿಜಯಚಿಂತೆಯಿಂ ತೊಡರ್ದಾಗಳ್ ೧೯

ವ|| ಅಂತು ತನ್ನ ಮುನ್ನೆ ಬಂದ ವನವೀಧಿಯೊಳಗನೆ ಮಗುಳ್ದು ಪೋಗಿ ವೇದಿಕಾದ್ವಾರದಿಂ ಪೊಱಮಟ್ಟು ವಿಜಯಾರ್ಧವನವೇದಿಕಾಸನ್ನವಿಶಾಲಪ್ರದೇಶದೊಳ್,

ಆನಂದದಿಂದ ವೈಭವೋಪೇತನಾಗಿ ಚಕ್ರಿಗೆ ಪುಣ್ಯೋದಕಸ್ನಾನವನ್ನು ಮಾಡಿಸಿದನು. ವ|| ಹಾಗೆ ವಿಜಯಾಭಿಷೇಕವನ್ನು ಮಾಡಿ ೧೭. "ಇದು ಸಾರವೂ ರತ್ನಮಯವೂ ಆದ ಚಿನ್ನದ ಕಲಶ. ಇದು ಮೂರು ಜಗತ್ತಿಗೂ ಅಲಂಕಾರಪ್ರಾಯವಾದ ಸಿಂಹಾಸನ. ಇದು ಚಂದ್ರಬಿಂಬದಂತೆ ಬೆಳ್ಳಗಿರುವ ದಿವ್ಯವಾದ ಶ್ವೇತಚ್ಛತ್ರ. ೧೮. ಕ್ಷೀರಸಮುದ್ರದ ನೊರೆಯಂತೆ ಬೆಳ್ಳಗಿರುವ ಚಾಮರಗಳಿವು. ನಿನ್ನ ಯಶಸ್ಸಿನ ರೂಪಿನಿಂದ ಇವು ನಿಖಿಲಚಕ್ರವರ್ತಿಗಳ ಶ್ರೀಯನ್ನೂ ಮೆರೆಯುವುವು. ಇವೆಲ್ಲ ನಿನಗೇ ತಕ್ಕುವು." ವ|| ಎಂದು ವಿಜಯಾರ್ಧ ಕುಮಾರನು ಸಾರ ವಸ್ತುಗಳನ್ನು ಸಮರ್ಪಿಸಿ ಭರತೇಶ್ವರನ ಆಜ್ಞಾವಿಧೇಯನಾಗಿ ತೆರಳಿದನು. ಆಗ ಭರತೇಶ್ವರಚಕ್ರವರ್ತಿಯು ಚಕ್ರಪೂಜೆಯನ್ನು ಸಲ್ಲಿಸಿದನು. ೧೯. "ವಿಜಯಾರ್ಧದ (ದಕ್ಷಿಣದೇಶದ) ಜಯವು ನನಗೆ ಜಯವೇನಲ್ಲ; ಉತ್ತರಾರ್ಧದ ಜಯವೇ ನನಗೆ ಜಯ" ಎಂದು ದಿಗ್ವಿಜಯಕಾರ್ಯದಲ್ಲಿ ಎಂದೂ ಧೃತಿಗೆಡದ ತೋಳ್ಬಲವುಳ್ಳ ಚಕ್ರಿಯು ದಿಗ್ವಿಜಯ ಚಿಂತೆಯಿಂದ ಪ್ರಯಾಣ ಬೆಳಸಿದನು. ವ|| ಅಂತು ತಾನು ಮುನ್ನ ಬಂದ ವನವೀಧಿಯಿಂದಲೇ ಮತ್ತೆ ಹೋಗಿ ವೇದೀದ್ವಾರದಿಂದ ಹೊರಬಿದ್ದು ವಿಜಯಾರ್ಧವನದ ವೇದಿಕೆಯ ಮಧ್ಯದ ವಿಶಾಲವಾದ ಪ್ರದೇಶದಲ್ಲಿ

ನೆಲೆವೀಡಂ ಬೀಡುಮಾಡಲ್ ಕೆಲವುದಿವಸಮಂ ಮಾಳ್ಪುದಿನ್ನಿಲ್ಲಿ ರೂಪ್ಯಾ
ಚಲಮಂ ಪಾಯ್ದುತ್ತರಾರ್ಧಕ್ಕೆಮಗೆ ನಡೆವ ಸಾಮಗ್ರಿಯಂ ಮಾಡಲೀಗಳ್
ನೆಲೆ ಗಂಗಾಸಿಂಧುಮಧ್ಯಕ್ಷಿತಿಪತಿಗಳುಮೀ ತಾಣದೊಳ್ ಬಂದು ಕಾಣ್ಬರ್
ಪಲರೆಂದಂತಲ್ಲಿ ಚೆಲ್ವಾಗಿರೆ ಬಿಡಿಸಿದನುರ್ವೀಶ್ವರಂ ತನ್ನ ಬೀಡಂ ೨೦

ವ॥ ಅಂತು ಬೀಡಂ ಬಿಟ್ಟಿರ್ಪನ್ನೆಗಂ ಗಂಗಾಸಿಂಧುಗಳೆರಡಱಿಡೆಯ ಭೂಪಾಳರಿಂದೆ[೧] ಮುನ್ನ ವೃಷಭನಾಥಂ ನಡಪಿದುದುಮಂ ತಮ್ಮ ನಣ್ಪುಮಂ ಬಗೆದು ಕುರುರಾಜಾದಿ[೨]ಮೂರ್ಧಾಭಿಷಿಕ್ತ ಪಾರ್ಥಿವರ್ ಸನ್ನದ್ಧಬಲಪರಿವೃತರಾಗಿ ಭರತೇಶ್ವರಚಕ್ರವರ್ತಿಯನಾಸ್ಥಾನದೊಳ್ ಬಂದು ಕಂಡು,

ಒಡೆವುದೆ ವಜ್ರಕವಾಟಮ
ನಡರ್ವುದೆ ವಿಜಯಾರ್ಧಗಿರಿಯನಿಂತೀಗಳೆ ಪೂ
ಣ್ದೆಡೆಗಿಡುವುದೆ ಸಿಂಧುವನಿಂ
ತಡೆವಂದಮಿದಾವುದೆಮ್ಮನೆಮ್ಮನೆ ಬೆಸಸಾ . ೨೧

ನಿನಗುತ್ತರಾರ್ಧಮೊಂದ
ರ್ಧನಿಮೇಷಮುಹೂರ್ತಮಾತ್ರದಿಂ ಬಾರದೆ ಕೈ
ಗಿನಿತುವರಂ ದೇವರ್ ನಡೆ
ವನಿತುಂ ಮಾಣ್ಬನಿತುಮಂತದಾವುದು ಗಹನಂ ೨೨

೨೦. "ಕೆಲವು ದಿನಗಳ ಕಾಲ ಇಲ್ಲಿ ನಾವು ಬೀಡನ್ನು ಬಿಡೋಣ. ಬಳಿಕ ರೂಪ್ಯಾಚಲವನ್ನು ದಾಟಿ ಉತ್ತರಾರ್ಧಕ್ಕೆ ಹೋಗಲು ಸಾಮಗ್ರಿಗಳನ್ನು ಸಿದ್ಧಪಡಿಸಿಕೊಳ್ಳಲು ಇದು ಸರಿಯಾದ ನೆಲೆ. ಇಲ್ಲಿಗೆ ಗಂಗಾಸಿಂಧುನದಿಗಳ ನಡುವಣ ಕೆಲವರು ರಾಜರು ಬಂದು ನಮ್ಮನ್ನು ಕಾಣುವರು" ಎಂದುಕೊಂಡು ಚೆಲ್ವಾದ ಪ್ರದೇಶದಲ್ಲಿ ಭರತೇಶ್ವರನು ಬೀಡನ್ನು ಬಿಡಿಸಿದನು. ವ॥ ಹಾಗೆ ಬೀಡನ್ನು ಬಿಟ್ಟಿರುವಾಗ ಗಂಗಾಸಿಂಧುಗಳ ಪ್ರದೇಶದ ರಾಜರೂ, ಹಿಂದೆ ವೃಷಭನಾಥನು ತಮ್ಮನ್ನು ನಡೆಸಿಕೊಂಡ ಬಗೆಯನ್ನೂ ತಮ್ಮ ಪ್ರೀತಿಯನ್ನೂ ಬಗೆದು ಕುರುರಾಜನಾದ ಸೋಮಪ್ರಭನ ಮಗನೇ ಮೊದಲಾದ ಪಟ್ಟಾಭಿಷಿಕ್ತರಾದ ರಾಜರೂ ಸೈನ್ಯಸಮೇತರಾಗಿ ಭರತಚಕ್ರವರ್ತಿಯನ್ನು ಆಸ್ಥಾನಕ್ಕೆ ಬಂದು ಕಂಡರು. ೨೧. ಅವರು "ವಜ್ರದ ಬಾಗಿಲನ್ನು ಒಡೆಯೋಣವೆ? ವಿಜಯಾರ್ಧಪರ್ವತವನ್ನು ಏರೋಣವೆ? ಈಗಲೇ ನೀನು ಪ್ರತಿಜ್ಞೆಮಾಡಿದೆಡೆಯಲ್ಲಿ ಸಮುದ್ರವನ್ನು ತಂದು ಇಡೋಣವೆ? ನಮ್ಮನ್ನು ತಡೆಯುವುದೇಕೆ? ನಮಗೆ ಆಜ್ಞೆಯನ್ನು ಕೊಡು. ೨೨. ನಿನಗೆ ಉತ್ತರಾರ್ಧವು (ಉತ್ತರ ಭರತಖಂಡ) ರೆಪ್ಪೆತೆರೆದು ಬಿಡುವಷ್ಟರಲ್ಲಿ ಕೈವಶವಾಗದಿರುತ್ತದೆಯೆ? ಸ್ವಾಮಿಯು

---

೧ ತೃತೀಯಾ ವಿಭಕ್ತಿ ಅನ್ವಯವಾಗಿದೆ. 'ಭೂಪಾಳರುಂ.... ಪಾರ್ಥಿವರುಂ' ಎಂದು ಶುದ್ಧ ಪಾಠವಿರಬಹುದು.

೨ ಕುರುರಾಜನೆಂದರೆ ಶ್ರೇಯಾಂಸನ ಅಣ್ಣನಾದ ಸೋಮಪ್ರಭನ ಮಗ (ನೋಡಿ ಪೂ. ಪು. ೩೧-೬೪. ಕುರುರಾಜಾದ್ಯಾ : = ಸೋಮಪ್ರಭಪುತ್ರಾದ್ಯಾ: (ವ್ಯಾಖ್ಯೆ) ಅವನ ಹೆಸರು ಜಯಕುಮಾರ (ನೋಡಿ, ಆದಿ ೧೩-೬೦ವ.)

ಎಂಬನ್ನೆಗಮಂಬರದೊಳ
ಳುಂಬಂ ಬೆಳಗೆನಿಸಿ ಮಕುಟಮಣಿಕುಂಡಲದಿ
ವ್ಯಾಂಬರಭೂಷಿತನಮರಕ
ದಂಬಕವೃತನೊರ್ವನಮರನಾ ಗಿರಿವರದಿಂ ೨೩

ಅವತರಿಸಿ ಚಕ್ರಿಯಂ ಕಂ
ಡವನತಮಣಿಮಕುಟನುಚಿತಪೀಠನಿವಿಷ್ಟಂ
ಭುವನೇಶಂ ಬೆಸಗೊಳೆ ವಿನ
ಯವಚಃಪ್ರಸರಂಗಳೆಸೆದೊಡಂಬಡೆ ನುಡಿದಂ ೨೪

ಭುವನಕ್ಕೆ ಕುಶಲಮಂ ಮಾ
ಡುವ ನಿನಗೇನೆಂದು ಕುಶಲಮೇ ಎಂಬೆಂ ಪೇಟ್
ಭುವನನುತ ಮಾಣದರಿನೃಪ
ಭುವನಕ್ಕಪ್ಪಳಿಪ ತೋಳ್ಗೆ ಕುಶಲಮೆ ನಿನ್ನಾ ೨೫

ದೇವರ ಕುಲದೊಳ್ ಪುಟ್ಟಿಯೆ
ದೇವವೆಸರ್ ನೆಗಟ್ದುದೆಮಗೆ ಕಾರಣಮದನಾ
ಮೇವೆ[ವೊ][1] ವಿಜಿಗೀಷುತೆಯಿಂ
ದೇವನೆನಲ್ ದೇವ ನೀನೆ ದೇವನೆ ಅಲ್ತೇ ೨೬

ಇದು ನೃಪತೇಜಶ್ಚಕ್ರದ
ಪೊದಟ್ಕೆ ತಾನಲ್ತೆ ಚಕ್ರರೂಪದಿನಿರ್ದ
ಪ್ಪುದು ನಿನ್ನ ದಂಡನೀತಿಯ
ಪುದುವೆ ವಲಂ ದಂಡರತ್ನಮೆಂಬುದು ಪೆಱತೇ ೨೭

ಇಷ್ಟುದೂರ ನಡೆದು ಬಂದು ಸ್ವತಃ ಯುದ್ಧ ಮಾಡುವಷ್ಟು ಕಠಿಣವಾದ ಕೆಲಸವೆ?" ಎಂದರು. ೨೩. ಅಷ್ಟರಲ್ಲಿ ಆಕಾಶವನ್ನೆಲ್ಲ ಬೆಳಗುತ್ತ ಕಿರೀಟ, ಮಣಿಕುಂಡಲ, ದಿವ್ಯಾಂಬರ ಇವುಗಳಿಂದ ಭೂಷಿತನಾಗಿ ಅಮರಸಮೂಹದಿಂದ ಪರಿವೃತನಾಗಿ ಒಬ್ಬ ಅಮರನು ಆ ಬೆಟ್ಟದಿಂದ ಇಳಿದು ಬಂದನು. ೨೪. ಇಳಿದು ಬಂದು, ಚಕ್ರಿಯನ್ನು ನೋಡಿ ಮಣಿಮುಕುಟ ವನ್ನು ಬಗ್ಗಿಸಿ ನಮಸ್ಕರಿಸಿದನು. ಆತನು ಉಚಿತ ಪೀಠದಲ್ಲಿ ಕುಳಿತುಕೊಳ್ಳಲಾಗಿ, ಚಕ್ರಿಯು ಪ್ರಶ್ನಿಸಲು ಅವನು ವಿಸ್ಮಯಜನಕವಾದ ಮಾತುಗಳಿಂದ ಕಾಲೋಚಿತವಾಗಿ ನುಡಿದನು. ೨೫. "ಪ್ರಪಂಚಕ್ಕೇ ಕುಶಲವನ್ನುಂಟುಮಾಡುವ ನಿನ್ನನ್ನು ಕುಶಲವೆಂದು ಕೇಳಬಹುದೆ? ಹೇಳು! ಭುವನನುತ! ಶತ್ರುರಾಜರ ರಾಜ್ಯವನ್ನು ಅಪ್ಪಳಿಸುವ ನಿನ್ನ ತೋಳುಗಳಿಗೆ ಕುಶಲವೆ? ೨೬. ದೇವಕುಲದಲ್ಲಿ ಜನಿಸಿದುದರಿಂದಾಗಿ ನಮಗೆ ದೇವ ಎಂಬ ಹೆಸರು ಬರಲು ಕಾರಣವಾಯಿತು. ಅದಕ್ಕೆ ನಾವು ಏನು ಮಾಡೋಣ! ವಾಸ್ತವಿಕವಾಗಿ ವಿಜಿಗೀಷುತೆ ಯಿಂದ ದೇವನೆನ್ನಬೇಕಾದರೆ, ಹೇ ದೇವ, ನೀನೇ ದೇವನಾಗಿರುವೆ ೨೭. ಮಹಾರಾಜ, ಈ ಚಕ್ರರತ್ನವು ನಿನ್ನ ತೇಜಶ್ಚಕ್ರದ ಒಂದು ವಿಜೃಂಭಣೆಯಷ್ಟೆ. ದಂಡರತ್ನವೆಂಬುದು ನಿನ್ನ

---

೧ ಮೊ (ಅನ್ಯತ್ರ)

ಭವದೀಯಬಳವಿಜೃಂಭಿತ
ರವದಿಂ ತ್ರಸ್ತನೆನಧೀಶ ಬಂದೆಂ ಕಾಣಲ್
ಭವದಂಘ್ರಿಸರೋಜಮನಾ
ನವಧೂತಾರಾತಿನೃಪ ಭವತ್ಕಿಂಕರನೆಂ ೨೮

ಕೃತಮಾಲಾಮರನೆನಿಳಾ
ಪ್ರತೀತನೆಂ ಗಿರಿತಟಂಗಳೆನ್ನಱಿಯದುವಿ
ಲ್ಲ ತಮಿಸ್ರಗುಹಾಕೂಟ
ಸ್ಥಿತನೆಂ ನೀನೆನ್ನನಾಳ್ವುದಾಳ್ವಸಗೆಯ್ವಂ ೨೯

ವ॥ ಎಂದು ತನ್ನಂ ಮುನ್ನಮಱಪಿ,

ಬೆಲೆಯಿಡಲಱಿವೊಡೆ ಮಂಡಲಿ
ಬೆಲೆಯಿಡುಗೆಮ ನೋೞ್ಪೊಡಿವಱ ತೇಜದ ಮೇಲು
ಜ್ಜ್ವಲತೇಜ ನಿನ್ನ ತೇಜಂ
ನೆಲಸಿದುದೆನೆ ಪೇೞಿವರ್ಕೆ ಬೆಲೆಗಳುಮೊಳವೇ ೩೦

ಒಂದೊಂದಱಿನೀ ತುಡುಗೆಗ
ಳೊಂದೊಂದಗ್ಗಳಮಿವೆಂದು ಪದಿನಾಲ್ಕುಮನೋ
ರೊಂದನೆ ತೋಱಿ ನಿಜಾದರ
ದಿಂದಂ ಭರತೇಶ್ವರಂಗೆ ದಿವಿಜಂ ಕೊಟ್ಟಂ ೩೧

ವ॥ ಅಂತು ಕೊಟ್ಟು ತಾನುಂ ಚಕ್ರವರ್ತಿಯ ಮನ್ನಣೆಯೊಳ್ ಸಂತಸಂಬಟ್ಟು ವಿಜಯಾರ್ಧ ಗುಹಾದ್ವಾರಪ್ರವೇಶೋಪಾಯಮನೆಲ್ಲಮಱಿಯೆ ಬಿನ್ನಪಂಗೆಯ್ದು ವ್ಯಂತರಾಮರಂ ಪೋಗಲೊಡಂ

ರಾಜನೀತಿಯ ತಿರುಳೇ ಹೊರತು ಬೇರೆಯಲ್ಲ. ೨೮. ನಿನ್ನ ಸೈನ್ಯದ ಆರ್ಭಟವನ್ನು ಕೇಳಿ ತ್ರಸ್ತನಾಗಿ ನಿನ್ನ ಪಾದಕಮಲವನ್ನು ಕಾಣಲು ಬಂದೆನು. ಒಡೆಯ, ಶತ್ರುರಾಜಸಮೂಹವನ್ನು ಗೆದ್ದ ನಿನ್ನ ಕಿಂಕರನು ನಾನು. ೨೯. ನಾನು ಕೃತಮಾಲನೆಂಬ ವ್ಯಂತರದೇವನೆಂದು ಲೋಕದಲ್ಲಿ ವಿದಿತನಾಗಿದ್ದೇನೆ. ನಾನರಿಯದ ಗಿರಿತಟದ ಎಡೆಯಿಲ್ಲ, ತಮಿಸ್ರಗುಹಾಕೂಟ ಸ್ಥಿತನು ನಾನು. ನೀನು ನನ್ನೊಡೆಯ, ನನ್ನನ್ನು ಕಾಪಾಡಬೇಕು". ವ॥ ಎಂದು ತನ್ನ ವಿಷಯವನ್ನು ಮೊದಲೆ ಬಿನ್ನವಿಸಿಕೊಂಡನು. ೩೦. "ಬೆಲೆ ಕಟ್ಟಲು ಗೊತ್ತಿದ್ದರೆ ಜನಸಮೂಹವು ಇದಕ್ಕೆ ಬೆಲೆ ಕಟ್ಟಲಿ ಉಜ್ವಲತೇಜ! ಇವುಗಳ ತೇಜಸ್ಸಿನ ಮೇಲೆ ನಿನ್ನ ತೇಜವು ನೆಲಸಿದ ಮೇಲೆ ಇವಕ್ಕೆ ಬೆಲೆಗಳು ಇವೆಯೇ? ೩೧. ಒಂದೊಂದು ಆಭರಣಕ್ಕಿಂತಲೂ ಮತ್ತೊಂದು ಆಭರಣವು ಶ್ರೇಷ್ಠವಾದುದು". ಎಂದು ನುಡಿದು ಹದಿನಾಲ್ಕು ಆಭರಣಗಳಲ್ಲಿ ಒಂದೊಂದನ್ನೂ ಅತ್ಯಾದರದಿಂದ ಕಾಣಿಸಿ ಅವನ್ನು ಭರತೇಶ್ವರನಿಗೆ ಆ ದಿವಿಜನು ಕೊಟ್ಟನು. ವ॥ ಹಾಗೆ ಕೊಟ್ಟು ಕೃತಮಾಲನು ಚಕ್ರವರ್ತಿಯು ಮಾಡಿದ ಮಾನಮನ್ನಣೆಗಳಿಗೆ ಸಂತೋಷಪಟ್ಟನು. ವಿಜಯಾರ್ಧಗುಹಾ ದ್ವಾರಪ್ರವೇಶೋಪಾಯಗಳನ್ನೆಲ್ಲ ತಿಳಿಯುವಂತೆ ವಿಜ್ಞಾಪಿಸಿ ಆ ವ್ಯಂತರಾಮರನು

ಮನುವಂಶಧ್ವಜಂ ಸೇನಾನಾಯಕಂಗೆ ಬೞೆಯನಟ್ಟಿದಾಗಳಾತಂ ಬಂದು ಮುನ್ನಮೆ ಬಂದಿರ್ದ ಕುರುರಾಜಾದಿ ಪಾರ್ಥಿವರಂ ನೋಡಿ,

ಅವನೀಶಾದೇಶಮಂ ದಾಂಟಿದರೆನಿಪ ಜಗದ್ದುರ್ಯಶೋಧೂಳಿಯುಂ ಪಾ
ರ್ಥಿವಸೇನಾಧೂಳಿಯುಂ ಮುಟ್ಟದು ದಲಿವರನೆಂಬಂತೆ ಮುಂದಿಟ್ಟು ಬಂದಿ
ರ್ಪವರುದ್ಘುಷ್ಟಕ್ಷತ್ರಕಂಠೀರವರಿವರಧಿಪರ್ ಚಂಡದೋರ್ದಂಡಜೈತ್ರೋ
ತ್ಸವಸೌಧೋದಗ್ರಕೀರ್ತಿಧ್ವಜರಿವರೆ ಪತಿಶ್ರೀಲತೋದ್ಯಾನಪಾಳರ್ ೩೨

ವ|| ಎಂಬುದುಂ ತದುಕ್ತಿಸುಧಾಸಾರವಾರಿಧಾರೆಯಿಂದಂ ಕೊನರ್ತ ರಾಜಪುತ್ರರ ಮಾರ್ಗಶ್ರಮಾತಪಾಕ್ರಾಂತಮಪ್ಪ ಮನಮೆಂಬ ಲತೆಯನನೇಕಕುಶಲಾಲಾಪಪ್ರಶ್ನೆಯಿಂದಂ ಕುಸುಮಿತಮುಮಂ ಸ್ವಹಸ್ತತಾಂಬೂಲದಾನದಿಂದಂ ಫಲಿತಮುಮಂ ಮಾಡಿ ತಮ್ಮ ತಮ್ಮ ಬೀಡುಗಳ್ಗವರಂ ಪೋಗಲ್ವೇೞ್ದು ಸೇನಾನಾಯಕನ ಮೊಗಮಂ ನೋಡಿ ಕೃತಮಾಳಾಮರೋದ್ದಿಷ್ಟೋಪಾಯನಮನೆಲ್ಲಮಂ ಪೇೞ್ದು,

ತೆಱೆವ ತೆಱನಿಂತುಟಿಂತೀ
ತೆಱದಿಂದೆ ತಮಿಸ್ರಗುಹೆಯ ವಜ್ರದ ಪಡಿಯಂ
ತೆಱೆದದಱ ಬೆಂಕೆ ಪೋಪಿನ
ಮೆಱಗಿಸು ನೀಂ ಮ್ಲೇಚ್ಛಖಂಡಮಂ ಪಡುವಣದಂ ೩೩

ಹೊರಟುಹೋದನು. ಮನುವಂಶಧ್ವಜನಾದ ಭರತೇಶನು ಸೇನಾಪತಿಗೆ ಹೇಳಿ ಕಳುಹಿಸಿದನು. ಆಗ ಸೇನಾಪತಿಯು ಬಂದು ತನಗಿಂತ ಮುನ್ನವೇ ಬಂದಿದ್ದ ಕುರುರಾಜನೇ ಮೊದಲಾದ ಪಾರ್ಥಿವರನ್ನು ನೋಡಿ, ೩೨. "ರಾಜಾಜ್ಞೆಯನ್ನು ಮೀರಿದರೆಂಬ ದುಷ್ಕೀರ್ತಿಧೂಳಿಯೂ ರಾಜಸೇನಾಧೂಳಿಯೂ ಇವರನ್ನು ಮುಟ್ಟುವುದಿಲ್ಲ ಎಂಬಂತೆ ಮುಂದೆ ಬಂದಿವರು ಕ್ಷತ್ರಿಯಸಿಂಹರೆಂದು ಹೊಗಳಲ್ಪಟ್ಟವರು ಭಯಂಕರವಾದ ದೋರ್ದಂಡವೆಂಬ ವಿಜಯೋತ್ಸವ ಸೌಧದ ಮೇಲೆ ಕೀರ್ತಿಧ್ವಜವನ್ನು ಹಾರಿಸಿದವರು. ಒಡೆಯನ ಶ್ರೀಯೆಂಬ ಲತೋದ್ಯಾನದ ಸಂರಕ್ಷಕರು" ಎಂದು ಹೇಳಿದನು. ವ|| ಮಾರ್ಗಶ್ರಮವೆಂಬ ಬಿಸಿಲಿನಿಂದ ವ್ಯಾಪ್ತವಾದ ರಾಜಪುತ್ರರ ಮನಸ್ಸೆಂಬ ಲತೆಯು, ಸೇನಾಪತಿಯ ಮಾತುಗಳೆಂಬ ಅಮೃತದ ಮಳೆಯಿಂದ ಚಿಗುರಲಾಗಿ, ಅದನ್ನು ಅನೇಕ ಕುಶಲಪ್ರಶ್ನೆಗಳಿಂದ ಹೂವಿಟ್ಟುದನ್ನಾಗಿಯೂ, ಸ್ವಹಸ್ತ ತಾಂಬೂಲದಾನದಿಂದ ಫಲವುಳ್ಳುದನ್ನಾಗಿಯೂ ಮಾಡಿ, ಅವರನ್ನು ತಮ್ಮ ತಮ್ಮ ಬೀಡುಗಳಿಗೆ ಹೋಗಿ ವಿಶ್ರಮಿಸುವಂತೆ ಭರತೇಶ್ವರನು ಹೇಳಿದನು. ಬಳಿಕ ಸೇನಾಪತಿಯ ಮುಖವನ್ನು ನೋಡಿ ಅವನಿಗೆ ಕೃತಮಾಲಾಮರನು ಹೇಳಿದ ಉಪಾಯಗಳನ್ನೆಲ್ಲ ತಿಳಿಸಿಕೊಟ್ಟನು. ೩೩. "ವಜ್ರದ ಬಾಗಿಲನ್ನು ತೆರೆಯುವ ವಿಧಾನವಿದು. ಈ ವಿಧಾನದಿಂದ ಆ ಕತ್ತಲೆಗುಹೆಯ ವಜ್ರದ ಬಾಗಿಲನ್ನು ತೆರೆ. ಅಲ್ಲಿನ ಬೆಂಕಿಯು ಆರಿಹೋದ ಮೇಲೆ ಪಶ್ಚಿಮ ಮ್ಲೇಚ್ಛಖಂಡವನ್ನು ತಲೆಬಾಗುವಂತೆಸಗು"

ಎನೆ ರಥಿನೀಪತಿ ಚಕ್ರೇ
ಶನ ಬೆಸನಂ ಪೊಣ್ಮು ರಾಗದಿಂದೇಱಿ ಜಗ
ದ್ವಿನುತಾಶ್ವರತ್ನಮಂ ಪಿರಿ
ದು ನಚ್ಚಿನೊಳ್ ಪಿಡಿದು ದಂಡರತ್ನಮನಾಗಳ್ ೩೪

ಕತಿಪಯತುರಂಗಬಲಪರಿ
ವೃತನೊಳಪೊಕ್ಕೊಗೆದ ಸಿಂಧುವನವೇದಿಕೆಯಿಂ
ಸತತಗತಿವೇಗದಿಂದೂ
ರ್ಜಿತಭುಜಬಳನೆಯ್ದಿ ನಗದ ವನವೇದಿಕೆಯಂ ೩೫

ವ॥ ಆ ವೇದಿಕೆಯ ಮೂಡಣ ಮಣಿಮಯಸೋಪಾನಂಗಳಿಂದಂ ರಜತಾಚಳಜಗತೀತಳಮ ನೇಱಿ ತನ್ನೊಡನೆಯ ಬಲಮೆಲ್ಲಮಂ ಪಡುವಣ ಸೋಪಾನಂಗಳಿಂದಂ ಬೆಂಕೆ ಭೋಂಕೆನಲುರದಂತು ಬೇಗಂ ಮ್ಲೇಚ್ಛಖಂಡಾಂತರ್ವರ್ತಿಯಾಗೆ ಮುನ್ನಂ ಕಳಿಪಿ ಗುಹೋತ್ಸಂಗಮಂ ತಾನೊರ್ಬನೆಯ್ದೆವಂದು ತುರಗರತ್ನಮನೇಱಿ ಪಶ್ಚಿಮಾಭಿಮುಖನಾಗಿ ನಿಂದು ಭರತೇಶ್ವರಚಕ್ರವರ್ತಿ ಗೆಲ್ಗೆಂದು ಸಾತಿರೇಕಂ ದ್ವಾದಶಯೋಜನವಿಸ್ತಾರಾಷ್ಟಯೋಜನೋತ್ಸೇಧವಜ್ರಕವಾಟಪುಟಂಗಳಂ,

ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್
ಬಿರಿದತ್ತೆಂಬಂತುಮಾ ಪರ್ವತಮಳಱಿದುದೆಂಬಂತುಮಾಕಾಶಮಾಶಾಂ
ತರದಿಂದಂ ಪತ್ತುವಿಟ್ಟೀ ಧರೆಗೆ ಕೆಡೆದುದೆಂಬಂತುಮಾಶಂಕೆ ಪೊಣ್ಮು
ತ್ತಿರೆ ಪೆರ್ಚಿತ್ತುಗ್ರಘೋಷಂ ಪ್ರಳಯಘನಘಟಾಟೋಪಗಂಭೀರಘೋಷಂ ೩೬

೩೪. ಎಂದು ಭರತೇಶನು ಆಜ್ಞಾಪಿಸಿದನು. ಸೇನಾಪತಿಯು ಅದನ್ನು ನಿರ್ವಹಿಸುವಂತೆ ಪ್ರೀತಿಯಿಂದ ಪ್ರತಿಜ್ಞೆಮಾಡಿದನು. ಅವನು ಲೋಕಸಂಸ್ತುತವಾದ ಅಶ್ವರತ್ನವನ್ನೇರಿಕೊಂಡು ದಂಡರತ್ನವನ್ನು ಹಿಡಿದನು. ೩೫. ಕೆಲವಾರು ಅಶ್ವಸೈನ್ಯಗಳಿಂದ ಕೂಡಿದವನಾಗಿ ಸಿಂಧುವನವೇದಿಕೆಯನ್ನು ಹೊಕ್ಕನು. ಬಳಿಕ ಸತತಗಮನದಿಂದ ಭುಜಬಲವಿಕ್ರಾಂತನಾದ ಸೇನಾಪತಿಯು ಪರ್ವತದ ವನವೇದಿಕೆಯನ್ನು ಸೇರಿದನು, ವ॥ ಆ ವೇದಿಕೆಯ ಪೂರ್ವದಿಕ್ಕಿನ ಮಣಿಮಯವಾದ ಸೋಪಾನಗಳಿಂದ ರಜತಾಚಲ(ಕೈಲಾಸ)ದ ಭೂತಲವನ್ನೇರಿದನು. ಪಶ್ಚಿಮದ ಸೋಪಾನದಿಂದ ಬೆಂಕಿಯು ಭೇಗನೆ ವ್ಯಾಪಿಸಿದಂತೆ ಒಡನೆಯೆ ತನ್ನ ಸೈನ್ಯವೆಲ್ಲವನ್ನೂ ಮೊದಲೇ ಮ್ಲೇಚ್ಛಖಂಡದೊಳಕ್ಕೆ ಕಳುಹಿಸಿದನು. ತಾನೊಬ್ಬನೇ ಆ ಗುಹೆಯ ಮಧ್ಯಕ್ಕೆ ಬಂದನು. ಬಳಿಕ ತುರಗರತ್ನವನ್ನು ಹತ್ತಿಕೊಂಡು ಪಶ್ಚಿಮಾಭಿಮುಖನಾಗಿ ನಿಂತು ಭರತೇಶ್ವರನಿಗೆ ಗೆಲುವುಂಟಾಗಲಿ ಎಂದು ಪ್ರಾರ್ಥಿಸಿ ಹನ್ನೆರಡು ಯೋಜನದ ವಿಸ್ತಾರವೂ ಎಂಟು ಯೋಜನದೆತ್ತರವೂ ಇರುವ ವಜ್ರಮಯವಾದ ಬಾಗಿಲುಗಳನ್ನು ೩೬. ದಂಡದಿಂದ ವೇಗವಾಗಿ ಹೊಡೆದನು. ಆಗ ವಿಜಯಾರ್ಧಾಚಲವು ಇದ್ದಕ್ಕಿದ್ದಂತೆ ಬಿರಿಯಿತೋ, ಆ ಪರ್ವತವು ಅಂಜಿತೋ, ಆಕಾಶವು ದಿಗಂತರದಿಂದ ಹರಿದು ನೆಲದ ಮೇಲೆ ಬಿದ್ದಿತೋ ಎಂಬಂತೆ ಸಂದೇಹವನ್ನುಂಟುಮಾಡುತ್ತಾ ಪ್ರಳಯ ಕಾಲದ ಮೇಘಧ್ವನಿಯಂತೆ ಭಯಂಕರವಾದ ಧ್ವನಿಯೊಂದುಂಟಾಯಿತು.

ಅರರೀಪುಟಮೆರಡುಂ ಜೀ
ರ್ಗರೆದು ಮರಲ್ದಂದಮೆಂತುಟಾಯ್ತೆನ್ನ ಭಯಂ
ಕರದಂಡರತ್ನಹತಿಯಿಂ
ಗಿರಿ ನೊಂದು ನರಳ್ವ ಮಾಟ್ಕೆಯಂತಾಯ್ತಾಗಳ್ ೩೭

ತೆಱೆಯಲೊಡಮಲ್ಲಿ ಬೆಂಕೆಯ
ಪೊಱಮಡುವೊಂದಂದಮನಿತುಕಾಲದೊಳೆಂದುಂ
ಪೊಱಮಡದೆ ಭೋಂಕೆನಾಗಳ್
ಪೊಱಮಟ್ಟವೊಲಾದುದುಷ್ಣದೀರ್ಘೋಚ್ಛ್ವಾಸಂ ೩೮

ವ|| ಅಂತಭೇದ್ಯವಜ್ರಕವಾಟಪುಟಂಗಳಾ ಪರ್ವತದೆರ್ದೆದೆಱೆವಂತೆ ತೆಱೆಯೆ ಭೋಂಕೆನಲುರ್ವ ಬೆಂಕಿಯಂ ಸೋಂಕಲೀಯದೆ,

ಕಸೆಯನಿನಿಸಱೆಪಿ ಕುಡೆ ಲಂ
ಘಿಸಿದುದು ಪನ್ನೆರಡುಯೋಜನಂಬರಮಿನ್ನೇ
ವೆಸಗೊಳ್ವುದೊ ಕಡುವೇಗದಿ
ನಸಕಳಿದುದು ಮನಮುಮಂ ತುರಂಗಮರತ್ನಂ ೩೯

ವ|| ಅಂತು ತುರಂಗರತ್ನದ ಜವದೊಳೊಡಂಬಟ್ಟಂತೆ ಸಕಳಚಮೂಪತಿಯುಮನಶ್ವ ರತ್ನಮುಮಂ ದಂಡರತ್ನಮುಮಂ ಮೆಯ್ಮೆಯ್ಯೊಳೆ ಕಾವ ದೇವತೆಗಳ್ ವಿಜಯಾರ್ಧತಟವೇದಿಕೆಯಿಂ ತಗುಳ್ದು ಸಿಂಧುವಿನ ಪಶ್ಚಿಮದಿಗ್ಭಾಗವನವೇದಿಕೆಯ ತೋರಣದ್ವಾರದಿಂದಂ ಮ್ಲೇಚ್ಛಖಂಡದೊಳಗಣ ವಿವಿಧಾಕಾರ ಗ್ರಾಮಸೀಮಾಭಿರಾಮಭೂಮಿಭಾಗಮಂ ಪುಗಿಸಿದಾಗಳ್ ಸೇನಾನಾಯಕಂ

೩೭. ಬಾಗಿಲ ಕದಗಳೆರಡೂ ಜೀರ್ಗರೆಯುತ್ತಾ ಹಿಂದಕ್ಕೆ ಸರಿದ ರೀತಿಯು ಭಯಂಕರವಾದ ದಂಡರತ್ನದ ಹೊಡೆತದಿಂದ ಆ ಬೆಟ್ಟವು ನೊಂದು ನರಳುತ್ತಿರುವಂತೆ ತೋರಿತು. ೩೮. ಬಾಗಿಲನ್ನು ತೆರೆಯಲಾಗಿ ಬೆಂಕಿಯು ಹೊರಹೊರಟಿತು. ಅಂದಿನವರೆಗೆಂದೂ ಹೊರಬೀಳದ ಉಷ್ಣವಾದ ದೀರ್ಘೋಚ್ಛ್ವಾಸವೊಂದು ಭೋಂಕನೆ ಹೊರಬಿದ್ದಂತಾಯಿತು. ವ|| ಅಂತು ಅಭೇದ್ಯವಾದ ವಜ್ರದ ಬಾಗಿಲ ಕದಗಳು ಪರ್ವತದೆದೆಯು ತೆರೆದಂತೆ ತೆರೆದುವು. ಆಗ ವ್ಯಾಪಿಸಿದ ಬೆಂಕಿಯನ್ನು ಸೋಂಕಲವಕಾಶ ಕೊಡದೆಯೆ, ೩೯. ಚಾವಟಿಯಿಂದ ಸ್ವಲ್ಪ ಹೊಡೆಯಲು ಹನ್ನೆರಡು ಯೋಜನದವರೆಗೆ ಕುದುರೆಯು ನೆಗೆಯಿತು. ಏನು ಹೇಳೋಣ! ಆ ತುರಗರತ್ನವು ತನ್ನ ವೇಗದಿಂದ ಮನಸ್ಸಿನ ವೇಗವನ್ನು ಮೀರಿಸಿತು. ವ|| ಆ ಶ್ರೇಷ್ಠವಾದ ಕುದುರೆಯ ವೇಗಕ್ಕನುಗುಣವಾಗಿ ಸೇನಾಪತಿಯನ್ನೂ ಶ್ರೇಷ್ಠವಾದ ಕುದುರೆಯನ್ನೂ ದಂಡರತ್ನವನ್ನೂ ಕಾಯುವ ದೇವತೆಗಳು ವಿಜಯಾರ್ಧ ತಟವೇದಿಕೆಯಿಂದ ಹೊರಟು ಪಶ್ಚಿಮ ದಿಗ್ಭಾಗದ ವನವೇದಿಕೆಯ ಹೆಬ್ಬಾಗಿಲಿನಿಂದ ಮ್ಲೇಚ್ಛಖಂಡದೊಳಗೆ ವಿವಿಧಾಕೃತಿಯಲ್ಲಿರುವ ಪುರ, ಗ್ರಾಮ, ಸೀಮೆ, ಉದ್ಯಾನಗಳಿಂದ ಸುಂದರವಾದ ಭೂಭಾಗಗಳಿಗೆ ಪ್ರವೇಶಗೊಳಿಸಿದರು. ಆಗ ಸೇನಾಪತಿಯು ಮ್ಲೇಚ್ಛಖಂಡವನ್ನು ಪ್ರದಕ್ಷಿಣೆಮಾಡಿ ವಶಪಡಿಸಿಕೊಂಡನು. ಆಗ ಮ್ಲೇಚ್ಛರಾಜರು ಜೀವ

ಮ್ಲೇಚ್ಛಖಂಡಮಮಂ ತ್ರಿಃಪ್ರದಕ್ಷಿಣಂಗೆಯ್ದು ಬಾಯ್ಕೇಳಿಸಿ ಪಲಂಬರ್ ಮ್ಲೇಚ್ಛರಾಜರನವರವರ ಜೀವಧನ ಕುಲಧನಂಗಳ್‌ವೆರಸು ಮುಂದಿಟ್ಟು ತೋರಣದ್ವಾರದಿಂದಂ ಸಿಂಧುವನವೇದಿಕೆಯೊಳಗನೆ ಬಂದು ಸೋಪಾನಾಂತರದೊಳೀ ವಿಜಯಾರ್ಧತಟವೇದಿಕೆಯಂ ಕಳಿದು ಜಗತೀತಳಮನೇಱಿ ಬರ್ಪನ್ನೆಗಂ,

ಒಳಗಣ ಬೆಂಕೆಯನಱುದಿಂ
ಗಳಂತು ನಗಮುಗುಟ್ಟು ಶಾಂತರೂಪದಿನಿರ್ದ
ತ್ತಳುರುತ್ತಮಿರ್ದ ಕೋಪಾ
ನಳನಿಂದುಪಶಾಂತನಾದ ಭೂಭೃತ್ಪತಿವೋಲ್ ೪೦

ವ॥ ಆಗಳಾ ಗುಹಾದ್ವಾರಮಂ ಪತಾಕಿನೀಪತಿ ಪಡೆಗೆ ನಡೆಯಲಿಂಬಪ್ಪಂತು ಶೋಧಿಸಿ ಕಾಪಂ ಪೇಟ್ಟು ನಿಜವಿಜಯಶಿಬಿರಮಂ ಪೊಕ್ಕು ಚಕ್ರವಲ್ಲಭನಾಸ್ಥಾನಮಂಟಪದೊಳ್ ದೂರಾವನತಮಣಿ ಮಕುಟನಾಗಿ ಕಂಡು ವಸ್ತುವಾಹನಪುರಸ್ಸರಂ ಮ್ಲೇಚ್ಛರಾಜರಂ ಲಲಾಟಸ್ಪೃಷ್ಟಭೂತಳರಂ ಮಾಡಿ ಕಾಣಿಸಿ,

ಹರಿಕರಿಕನ್ಯಾರತ್ನಾ
ಭರಣಂಗಳ್ ದೇವಕುಲಧನಾದಿಗಳಿವು ದೇ
ವರದೊಂದಾಜ್ಞೆಯನಾಂಪರ್
ಕಿರೀಟದಿಂದಿವರ್ಗಳಿನಿಬರುಂ ಭೂಪತಿಗಳ್ ೪೧

ವ॥ ಎಂದವರ ದೇಶನಾಮಕುಲಗೋತ್ರಂಗಳಂ ನೆಱೆಯೆ ತಿಳಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ ಸನ್ಮಾನದಾನಂಗಳೊಳ್ ಸಂತಸಂಬಡಿಸಿ ತಂತಮ್ಮ ನೆಲೆಗಳ್ಗೆ ಪೋಗಲ್ವೇಟ್ಟು

ಧನ, ಕುಲ ಧನಗಳನ್ನು ಮುಂದಿಟ್ಟುಕೊಂಡು ತೋರಣದ್ವಾರದಿಂದ ಸಿಂಧುವನ ವೇದಿಕೆಯೊಳಗಿನ ಪ್ರದೇಶದಿಂದಲೇ ಬಂದು ಮತ್ತೊಂದು ಸೋಪಾನದ ಮೂಲಕ ವಿಜಯಾರ್ಧತಟದ ವೇದಿಕೆಯನ್ನು ಕಳೆದು ಜಗತೀತಲದ ವೇದಿಕೆಯನ್ನೇರಿ ಬಂದರು. ೪೦. ವ್ಯಾಪಿಸಿದ ಕೋಪವೆಂಬ ಬೆಂಕಿಯಿಂದ ಉಪಶಾಂತನಾದ ರಾಜನಂತೆ, ಒಳಗಣ ಬೆಂಕಿಯನ್ನು ಆರು ತಿಂಗಳ ಕಾಲ ಹೊರಹಾಕಿ ಆ ಪರ್ವತವು ಉಪಶಾಂತವಾಯಿತು. ವ॥ ಆಗ ಸೇನಾಪತಿಯು ತನ್ನ ಸೈನ್ಯಕ್ಕೆ ನಡೆದೇ ಹೋಗಲನುಕೂಲಿಸುವಂತೆ ಗುಹಾ ದ್ವಾರವನ್ನು ಶೋಧಿಸಿಕೊಂಡು ಕಾವಲಿರುವಂತೆ ಆಜ್ಞಾಪಿಸಿ ತನ್ನ ವಿಜಯಶಿಬಿರವನ್ನು ಹೊಕ್ಕನು. ಬಳಿಕ ಚಕ್ರದೊಡೆಯನಾದ ಭರತೇಶ್ವರನ ಆಸ್ಥಾನದಲ್ಲಿ ರಾಜನಿಗೆ ದೂರದಿಂದಲೇ ಮಣಿಮುಕುಟದೊಡನೆರಗಿದನು. ವಸ್ತುವಾಹನಗಳೊಡನೆ ಮ್ಲೇಚ್ಛರಾಜರನ್ನು ಹಣೆಯುಜ್ಜಿ ನಮಸ್ಕರಿಸುವಂತೆ ಮಾಡಿದನು. ೪೧. "ಇವು ಶ್ರೇಷ್ಠವಾದ ಕುದುರೆ, ಆನೆ ಮತ್ತು ಕನ್ನೆಯರ ಗುಂಪು, ಇವು ಕುಲಧನಾದಿಗಳು, ದೇವ! ಈ ಎಲ್ಲ ರಾಜರು ನಿನ್ನ ಆಜ್ಞೆಯನ್ನು ತಮ್ಮ ಕಿರೀಟಗಳ ಮೇಲೆ ಹೊತ್ತು ಪಾಲಿಸುವರು". ವ॥ ಎಂದು ಅವರ ದೇಶ, ಹೆಸರು, ಗೋತ್ರ ಮತ್ತು ಕುಲಗಳನ್ನು ವಿವರವಾಗಿ ವಿಜ್ಞಾಪಿಸಿದನು, ರಾಜನ ಸನ್ನಿಧಿಯಲ್ಲಿ ಅವರು ಭೃತ್ಯಭಾವದಿಂದಿರುವಂತೆ ಪ್ರತಿಜ್ಞೆಮಾಡಿಸಿದನು, ಸನ್ಮಾನ ದಾನಾದಿಗಳಿಂದ ಅವರನ್ನು ಸಂತೋಷಪಡಿಸಿ ತಮ್ಮ ತಮ್ಮ ನೆಲೆಗಳನ್ನು ಕುರಿತು ಹೋಗುವಂತೆ ಆಜ್ಞಾಪಿಸಿದನು.

ಶುಭದಿನಮುಹೂರ್ತದೊಳ್ ಉತ್ತರಭರತವಿಜಯೋದ್ಯೋಗಮಂ ಭರತರಾಜನಱಿಪಲೆಂದು ವಿಜಯಭೇರಿಯಂ ಪೊಯಿಸಿದಾಗಳ್,

ದೆಸೆಗಳ ಸಂದಂ ಪಱಿದಾ
ಗಸದಿಂದಂ ಪತ್ತುವಿಡಿಸುವಂತೆವೊಲಿಳೆಯಂ
ಮಸಕದೊಳೆ ಪೊತ್ತು ನೆಗೆವವೊ
ಲೆಸೆದುದು ದಿಗ್ವಿಜಯಭೂರಿಭೇರೀನಿನದಂ ೪೨

ವ|| ಆ ವಿಜಯಪ್ರಯಾಣಭೇರೀನಿನಾದಮಂಭೋಭಾರಗಂಭೀರಾಂಭೋಧರಸ್ತನಿತ ಬಹಳಸ್ನಿಗ್ಧಂಗಳಪ್ಪ ಮದಸ್ತಂಬೇರಮಬೃಂಹಿತಂಗಳಿಂದಮಸಕೃದಾಸ್ಫಾಲಿತಾನೇಕ ದುಂದುಭಿ ಧ್ವನಿಮಧುರಗಂಭೀರಂಗಳಪ್ಪ ಹಯಹೇಷಿತಂಗಳಿಂದಮುದಗ್ರಕುಂಜರಕುಂಭಜರ್ಜರಣಜನಿತೋತ್ಕಂಠ ಕಂಠೀರವರವೋದ್ಭಟಭೈರವಂಗಳಪ್ಪ ಸುಭಟಪಟುಕ್ಷೋಭಿತಂಗಳಿಂದಂ[೧] ಸಂದಣಿಸಿ ಘೂರ್ಣಮಾನಾರ್ಣವ ಘೋಷಮಂ ಗೆಲ್ದ ಹರ್ಷದಿಂ ಪೆರ್ಚುವಂತೆ ಪೆರ್ಚೆ,

ವೀರಶ್ರೀಸ್ನಾನಕುಂಭದ್ವಯಮೆನಿಪ ಕಟದ್ವಂದ್ವದಿಂ ದಾನಧಾರಾ
ಸಾರಂ ಕೈಗಣ್ಮೆ ಕಣ್ಗೊಪ್ಪುವ ಜಯಗಜಮಂ ಲೀಲೆಯಿಂದೇಱೆ ವಾದಿ
ತ್ರಾರಾವಂ ವಂದಿವೃಂದಧ್ವನಿ ಜಯಜಯಕೋಳಾಹಳಂ ಮಂಗಳಾಳಂ
ಕಾರಂ ಯಾತ್ರೋತ್ಸವಪ್ರಸ್ತುತಮೆನೆ ತಳರ್ದ ರಾಗದಿಂ ರಾಜರಾಜಂ ೪೩

ಬಳಿಕೊಂದು ಶುಭದಿನ ಮುಹೂರ್ತದಲ್ಲಿ ಭರತಚಕ್ರವರ್ತಿಯು ಉತ್ತರಭಾರತದಲ್ಲಿ ವಿಜಯೋದ್ಯೋಗವನ್ನು ನಡೆಸಲಿರುವನೆಂದು ತಿಳಿಸಲು ಸೇನಾಪತಿಯು ವಿಜಯ ಭೇರಿಯನ್ನು ಹೊಯಿಸಿದನು. ೪೨. ದಿಕ್ಕುಗಳ ಸಂದನ್ನು ಹರಿದು ಆಗಸದಿಂದ ಬೇರ್ಪಡಿಸಿ ಭೂಮಿಯನ್ನು ಸಾಹಸದಿಂದ ಹೊತ್ತು ನೆಗೆವುವೋ ಎಂಬಂತೆ ದಿಗ್ವಿಜಯದ ಭೇರೀಶಬ್ದವು ಬಹಳವಾಗಿ ಎಸೆಯಿತು. ವ|| ಆ ವಿಜಯಪ್ರಯಾಣದ ದುಂದುಭಿಧ್ವನಿಯು, ನೀರಿನ ಭಾರದಿಂದ ಗಂಭೀರವಾದ ಮೇಘದ ಗುಡುಗಿನಂತೆ ಸ್ನಿಗ್ಧವೆನಿಸಿದ ಮದ್ದಾನೆಗಳ ಘೀಂಕಾರದಿಂದಲೂ ಬಾರಿಬಾರಿಗೂ ಬಾರಿಸಲಾಗುತ್ತಿರುವ ಭೇರೀಧ್ವನಿಗಳಂತೆ ಮಧುರವೂ ಗಂಭೀರವೂ ಎನಿಸಿದ ಕುದುರೆಗಳ ಕೆನೆತದಿಂದಲೂ, ಶ್ರೇಷ್ಠವಾದ ಆನೆಗಳ ಕುಂಭಪ್ರದೇಶವನ್ನು ನುಚ್ಚುನುರಿಗೊಳಿಸುವುದರಲ್ಲಿ ಉತ್ಸುಕಗೊಂಡ ಸಿಂಹಗಳ ಧ್ವನಿಗಳಂತೆ ಭಯಂಕರಗಳಾದ ಸುಭಟರ ಆರ್ಭಟಶಬ್ದಗಳಿಂದಲೂ ಸಂದಣಿಗೊಂಡು ಮೊರೆಯುತ್ತಿರುವ ಸಮುದ್ರದ ಘೋಷವನ್ನು ಗೆದ್ದ ಹರ್ಷದಿಂದ ಹೆಚ್ಚುವಂತೆ ಹೆಚ್ಚಿತು. ೪೩. ವೀರಲಕ್ಷ್ಮಿಯ ಸ್ನಾನಾರ್ಥವಾದ ಕಲಶಗಳೆರಡೋ ಎಂಬಂತಿರುವ ಗಂಡಸ್ಥಳಗಳೆರಡರಿಂದ ಮದೋದಕದ ಸತತ ಪ್ರವಾಹವಿರುವ ಸುಂದರವೆನಿಸಿದ ಜಯಗಜವನ್ನು ಭರತಚಕ್ರವರ್ತಿಯು ಲೀಲೆಯಿಂದೇರಿದನು. ವಾದ್ಯಗಳ ಮೊಳಗಾಟವೂ, ವಂದಿಮಾಗಧರ ಹೊಗಳಾಟವೂ, ಜಯಜಯ ಕೋಲಾಹಲಗಳೂ, ಮಂಗಳಾಲಂಕಾರಗಳೂ ಯಾತ್ರೋತ್ಸವದ ನಿಮಿತ್ತವಾಗಿ

೧ 'ಪಟುಕ್ಷ್ವೇಡಿತಂಗಳಿಂದಂ' ಎಂದು ಶುದ್ಧಪಾಠವಿರಬಹುದು. ಕ್ಷ್ವೇಡಿತ = ಗರ್ಜನೆ, ಸಿಂಹನಾದ.

ವ|| ಅಂತು ತಳರ್ದು ರಾಜಮಂದಿರಮಂ ಪೊಱಮಡುವಾಗಳ್,

ಜಳಧಿದ್ವೀಪಾಂತರಾಳಂಗಳನಿರದೆ ಪುಗಿಂ ಪೋಗಿಮುಗ್ರಾರಿಗಳ್ ಮಾ
ರ್ಕೊಳಲಾಜಿರ್ ಚಕ್ರನಾಥಪ್ರಬಳಬಳಮನೆಂಬಂತೆವೊಲ್ ಸಾನುಕೂಲಾ
ನಿಳನಿಂದಂ ಕೇತುಹಸ್ತಾವಳಿ ಮಿಳಿರ್ವಿನೆಗಂ ಬಂದವುತ್ತುಂಗಭೂಭೃ
ತ್ಕುಳಸಂಕಾಶಂಗಳಾಕಾಶದ ನೆಲದೆಡೆಯಂ ಪರ್ವೆ ಗಂಧದ್ವಿಪಂಗಳ್ ೪೪

ವ|| ಅಂತು ಪೊಱಮಟ್ಟುತ್ತರಭರತದ ವಿಜಯಶ್ರೀವಿವಾಹಮಹೋತ್ಸವ ಪ್ರಾರಂಭದೊಳ್ ದಿಕ್ಪಾಲಕರ ಕೆದಱುವ ಪಿಷ್ಟಾತಚೂರ್ಣಮೆನಿಸುವ ರಜಃಪುಂಜಮುಮಂ ದಿಕ್ಕನ್ಯಕೆಯರ ಸೂಸುವ ಲಾಜಾಂಜಳಿನಿಚಯಮೆನಿಸುವ ಮದಕರಿಕರಶೀಕರನಿಕರಮುಮಂ ಅಂಬರದೊಳಮರವೃಂದಂಗಳ್ ಬಿತ್ತರಿಸುವ ಪತಾಕೆಗಳೆನಿಸುವ ಕರಿಕದಳಿಕೆಗಳುಮಂ ಮುಂದೆ ಮುಂದನಿಲದೇವನ ತಳಿವ ಕುಸುಮಪ್ರಸರಮೆನಿಸುವ ತುರಂಗಮುಖಫೇನಪಲ್ಲವಸ್ತಬಕಮುಮಂ ನೋಡುತ್ತುಂ ನಡೆಯೆ,

ಬಳವತ್ತತ್ಸ್ಯಂತಭೂಪಾಳಕನಿಕರಮಹಾವಾಹಿನೀವಾಹಿನೀಸಂ
ಕುಳಮತ್ಯುತ್ಸಾಹದಿಂದಂ ಪುಗೆ ದೆಸೆದೆಸೆಯಿಂ ಬಂದು ಚಕ್ರೇಶಭೂಭೃ
ದ್ಬಲಚಕ್ರಾವಾರಪಾರಂ ಸುಭಟಜನಚಮತ್ಕಾರಿ ತೇಜೋಮಹೋರ್ವಾ
ನಳಮುಗ್ರಾರಾತಿವರ್ಗಪ್ರಳಯಕರಮದೊಂದೆಯ್ದೆ ತಾಳ್ದಿತ್ತಗುರ್ವಂ ೪೫

ವ|| ಆಗಳ್ ಸೈನ್ಯಾಧಿನಾಥನಧಿನಾಥನ ಕೆಲದೊಳ್ ಪಕ್ಕಗಜಾಧಿರೂಢನಾಗಿ ದೇವ ನೋಡೀ ತೋರ್ಪುದು ದವದಹನಧೂಮಾಧಿಕಶ್ಯಾಮಳಿತೋತ್ತಾಳತಾಳಕಾಯಮತಿವಿಚಿತ್ರತ್ರಪುಮಯಪತ್ರ

ಜರುಗುತ್ತಿರಲು ರಾಜರಾಜನು ಪ್ರೀತಿಯಿಂದ ಹೊರಟನು. ವ|| ಹಾಗೆ ರಾಜಮಂದಿರವನ್ನು ಬಿಟ್ಟು ಹೊರಟಾಗ, ೪೪. "ಸಮುದ್ರದ್ವೀಪಗಳ ಅಂತರಾಳವನ್ನು ಹೊಗಿರಿ; ಚಕ್ರನಾಥನ ಪ್ರಬಲಬಲವನ್ನು ಉಗ್ರಾರಿಗಳಾದರೂ ನೀವು ಎದುರಿಸಲಾರಿರಿ, ಹೋಗಿರಿ" ಎಂಬಂತೆ, ಉನ್ನತಪರ್ವತಸಮೂಹಕ್ಕೆಣೆಯಾದ ಮತ್ತಗಜಗಳು, ಆಕಾಶಪ್ರದೇಶವನ್ನು ಆಕ್ರಮಿಸಿ ಅನುಕೂಲಪವನನಿಂದ ಅಲುಗಿಸಲ್ಪಟ್ಟ ಬಾವುಟಗಳನ್ನು ಸೊಂಡಿಲುಗಳಲ್ಲಿ ಹಿಡಿದು ಬಂದವು. ವ|| ಹಾಗೆ ಹೊರಬಿದ್ದು ಉತ್ತರಭಾರತದ ವಿಜಯಲಕ್ಷ್ಮಿಯ ವಿವಾಹಮಹೋತ್ಸವದ ಆರಂಭದಲ್ಲಿ ದಿಕ್ಪಾಲಕರೆರಚಿದ ಬುಕ್ಕಿಹಿಟ್ಟೋ ಎಂಬಂತಿರುವ ಧೂಳಿಯ ಸಮೂಹವನ್ನೂ, ದಿಕ್ಕನ್ನಿಕೆಯರು ಸೂಸಿದ ಅರಳುಗಳ ಬೊಗಸೆಯೋ ಎಂಬಂತಿರುವ ಮದ್ದಾನೆಗಳ ಸೊಂಡಿಲಿನ ನೀರುಹನಿಗಳನ್ನೂ, ಆಕಾಶದಲ್ಲಿ ದೇವ ಸಮೂಹವು ಬಿತ್ತರಿಸಿದ ಪತಾಕೆಗಳೋ ಎಂಬಂತಿರುವ ಗಜಪತಾಕೆಗಳನ್ನೂ, ಮುಂದೆ ಮುಂದೆ ವಾಯುದೇವನಿಂದುದುರಿಸಲ್ಪಟ್ಟ ಪುಷ್ಪಸಮೂಹವೋ ಎಂಬಂತಿರುವ ಕುದುರೆಗಳ ಬಾಯಿನೊರೆಯೆಂಬ ಚಿಗುರುಗಳ ಗೊಂಚಲನ್ನೂ ನೋಡುತ್ತ ನಡೆಯಲು; ೪೫. ಸುತ್ತಮುತ್ತಲಿನ ಬಲಾಢ್ಯರಾದ ರಾಜರ ಸೇನೆಗಳೆಂಬ ನದಿಗಳು ದಿಕ್ಕುದಿಕ್ಕುಗಳಿಂದ ಬಂದು ಸೇರಲಾಗಿ ಚಕ್ರವರ್ತಿಯ ಸೇನಾಸಮುದ್ರವು ಸುಭಟರ ಚಮತ್ಕಾರಿಯಾದ ತೇಜಸ್ಸೆಂಬ ಬಡಬಾಗ್ನಿಯಿಂದ ಕೂಡಿ ಉಗ್ರವೈರಿಗಳಿಗೆ ಪ್ರಳಯವನ್ನುಂಟುಮಾಡತಕ್ಕುದಾಗಿ ಅತಿಶಯವನ್ನು ಪಡೆಯಿತು. ವ|| ಸೇನಾಪತಿಯು ಚಕ್ರೇಶ್ವರನ ಸಮೀಪದಲ್ಲಿ ಪಕ್ಕದ

**ಖಚಿತೋಚ್ಚಂಡತಾಳಚಾಪದಂಡಮನೇಕವರ್ಣಾಕೀರ್ಣ ತ್ರಿಸರವೇಣಿಕಾಗಾಢಗ್ರಥಿತತ್ರಪುಷಕೋಶ ಗುಪ್ತಗುಲ್ಫಾಂತರಪ್ರಾಪ್ತಖಡ್ಗಧೇನುಕಮಾಂಧ್ರಧಾನುಷ್ಕಬಳಂ, ಮತ್ತಿತ್ತ ಕೋಮಳಶ್ಯಾಮಳಚ್ಛಾಯಾ ಕಾಯಮುಂ ಉಪನಿಟಲಘಟಿತಕುಟಿಲಜೂಟಬಂಧಮುಮಾಕೂರ್ಪರರಚಿತಕಾಳಾಯಸವಳಯ ಭಯಂಕರಕರ ದ್ವಯಮುಮ ಭಿನವಶುಂಭತ್ಕೌಸುಂಭವೇಣಿಕಾಬಂಧೋಲ್ಲಸನ್ಮಲ್ಲಿಕಾಮುಕುಳಾಕಾರವಿತಸ್ತಿ ಮಾತ್ರಾಸಿಧೇನುಕೋಶ ಮುಮನೇಕರುಚಿ ವಿಚಿತ್ರವೇತ್ರವಿಶಿಖಾತಿರುಚಿರಪ್ರಾಂತಕುಂತಮುಮನುತ್ತರೀಯ ಕಂಟಕಮ(?) ತಿಸುಭಟಮದೋತ್ಕಟಮಿದು ಕರ್ಣಾಟಬಲಂ. ಮತ್ತೀ ಭಾಗದೊಳ್ ಅಭಿನವಪ್ರಿಯಂಗು ಶ್ಯಾಮಾಂಗ ಮರ್ಧಚಂದ್ರಬುದ್ಬುದ (?) ವ್ಯಾಕೀರ್ಣತ್ರಿಶೂಲಕರವಾಳವಿಶಾಳ ವೇತ್ರಖೇಟಕಮುದ್ಘೃಷ್ಟ ಪಾಂಡುರಪಾಳಿ ಮಂಡಿತಕರವಾಳಾರ್ಧಾಯುಧಮಿಕ್ಷುದಂಡಪ್ರಣೀತಕ್ರೀಡಾವಖಂಡಿತೋಚ್ಚಂಡ ಶುಂಡಾಳಗಾತ್ರಾಪರ ಮತಿಬಾಳಕದಳಿಕಾಕಾಂಡಲೀಲಾಚ್ಛಿನ್ನಸಿಂಧುರಮಧ್ಯ ಹಸ್ತಮತ್ಯಂತಮೃದು ಮೃಣಾಳದಂಡಹೇಳಾದಳಿತ ದಂತಿದಶನಮುಸಳಮುತ್ಕವಾಟಲಾಘವ ಲಂಘಿತಪರಪುರಪರಿ ಖಾವಳಯಮನೇಕಾಹವ ದೃಷ್ಟದೋಸ್ಸಾಹಸಮಿದು ಮರಾಟಸುಭಟಬಲಂ, ಮತ್ತಿತ್ತ ಸರ್ವಾಂಗೀಣ ಸಾಂದ್ರಹರಿದ್ರವಿಲೇಪನವಿಲಿಪ್ತ ಹರಿತಾಳಪಿಂಗಳವಿಲಂಘಿತಶಿಲಾಸ್ತಂಭವಿಭ್ರಮನಿತಂಬ ಶಿಖರತರಂಗಿತ ಚತುರಂಗುಳಾಗ್ರಪಲ್ಲವನಿವಸನಮತಿ ಮಸೃಣ ವರ್ಣವ್ಯತಿಕರೋದೀರ್ಣಶೋಭಾಪುಂಜರಂಜಾ**

ಆನೆಯನ್ನು ಹತ್ತಿಕೊಂಡು "ದೇವ! ಇದು ಆಂಧ್ರ ಬಿಲ್ಲುಗಾರರ ಪಡೆ, ಇದು ಕಾಳ್ಗಿಚ್ಚಿನ ಹೊಗೆಗಿಂತ ಹೆಚ್ಚು ಕಪ್ಪಾಗಿದೆ, ತಾಲವೃಕ್ಷದಂತೆ ಉನ್ನತವಾಗಿದೆ. ಅತಿವಿಚಿತ್ರವೂ ಸೀಸನಿರ್ಮಿತವೂ ಆದ ಗರಿಗಳಿಂದ ಸಮೇತವಾದ ದಂಡದಂತೆ ಉದ್ದವಾಗಿರುವ ತಾಲಧನುಸ್ಸನ್ನು ಪಡೆದಿದೆ. ನಾನಾ ಬಣ್ಣಗಳಿಂದ ಕೂಡಿ ಮೂರೆಳೆಯ ಹುರಿಗಳಿಂದ ಗ್ರಥಿತವಾಗಿ ಸೀಸದ ಒರೆಯಿಂದ ರಕ್ಷಿತವಾದ ಗುಲ್ಫಾಂತದವರೆಗೆ ಬಂದಿರುವ ಕಠಾರಿಗಳನ್ನು ಪಡೆದಿದೆ. ಇದು ಕರ್ಣಾಟಕದ ಬಲ. ಕೋಮಲವೂ ಶ್ಯಾಮಲವೂ ಆದ ಕಾಂತಿಯುಳ್ಳದು ಇದರ ದೇಹ. ಹಣೆಯ ಸಮೀಪದಲ್ಲಿ ವಕ್ರತೆಯಿಂದ ಕೂಡಿದ ಜುಟ್ಟುಗಂಟುಳ್ಳುದು. ಮೊಳಕೈವರಗೆ ಕಬ್ಬಿಣದ ಬಳೆಗಳಿಂದ ಕೂಡಿ ಭೀಕರವಾದ ಕೈಗಳೆರಡುಳ್ಳುದು. ನೂತನವಾದ ರಕ್ತವರ್ಣದ ವೇಣಿಕಾಬಂಧದಿಂದ ಪ್ರಕಾಶವಾದ ಮಲ್ಲಿಗೆಯ ಮೊಗ್ಗಿನಾಕೃತಿಯಲ್ಲಿರುವ ಹನ್ನೆರಡು ಅಂಗುಲವುಳ್ಳ ಕಠಾರಿಯೊರೆಯುಳ್ಳುದು. ವಿವಿಧ ಕಾಂತಿಗಳಿಂದಾಗಿ ವಿಚಿತ್ರ ವಾಗಿರುವ ಬೆತ್ತದ ಬಾಣಗಳಿಂದ ಅತಿಸುಂದರವಾದ ತುದಿಯುಳ್ಳ ಕುಂತಾಯುಧಗಳಿಂದ ಕೂಡಿದುದು. ಉತ್ತರೀಯವೆಂಬ ತೊಂದರೆಯನ್ನು ನೀಗಿಕೊಂಡಿದೆ (?) ಸುಯೋಧರ ಮತ್ತಿನಿಂದ ಸೊಕ್ಕಿದುದು. ಇತ್ತ ಮರಾಟಸುಭಟರ ಸೈನ್ಯ. ಹೊಸ ಪ್ರಿಯಂಗುವಿನಂತೆ ಶ್ಯಾಮಲಾಂಗ, ಅರ್ಧಚಂದ್ರಾಯುಧ, ತ್ರಿಶೂಲ, ಕತ್ತಿ ಮತ್ತು ಬೆತ್ತದ ಗುರಾಣಿಯುಳ್ಳದ್ದು. ಮಸೆದದ್ದರಿಂದ ಶುಭ್ರವಾದ ಅಂಚುಳ್ಳ ಕೈಗತ್ತಿಯುಳ್ಳದ್ದು. ಕಬ್ಬಿನ ಜಲ್ಲೆಯೋ ಎಂಬಂತೆ ನಿಜಭುಜ ದಂಡಪ್ರಹಾರಲೀಲೆಯಿಂದ ಮದ್ದಾನೆಗಳ ಒಂದು ಪಾರ್ಶ್ವವನ್ನು ಕತ್ತರಿಸಿಹಾಕ ಬಲ್ಲುದು. ಎಳಬಾಳೆಯ ದಿಂಡೋ ಎಂಬಂತೆ ಲೀಲೆಯಿಂದ ಆನೆಗಳ ಸೊಂಡಿಲಿನ ಮಧ್ಯಭಾಗವನ್ನು ಕತ್ತರಿಸಿ ಹಾಕಿದ್ದು. ತಾವರೆಯ ದಂಟಿನಂತೆ ಒನಕೆಯಂತಹ ಗಜದಂತ ಗಳನ್ನು ಲೀಲೆಯಿಂದ ಕಡಿಯಬಲ್ಲುದು. ಶತ್ರುಗಳ ನಗರದ ಕಂದಕಗಳನ್ನು ಲಾಘವದಿಂದ ಹಾರಿ ದಾಟಬಲ್ಲುದು. ವಿವಿಧ ಯುದ್ಧಗಳಲ್ಲಿ ತನ್ನ ಬಾಹುಬಲವನ್ನು ಈ ಮರಾಟಸೈನ್ಯವು

**ಪುರಪಟ್ಟಿಕಾನಂದಕನಕಪತ್ರಾಂಕಿತಯೋಗ ಖಡ್ಗ ಪುತ್ರಿಕೋದ್ಭಾಸಮಾನಸುವರ್ಣಕೋಶಮನತಿಜರಠ ಕರ್ಣಿಕಾರಮುಕುಳಸ್ಥೂಳತ್ರಿಚತುರಸುವರ್ಣ ಕಂದೋದರಕಂಧರಮುತ್ಕಟಹಾಟಕಪದಕಮಣಿ ತ್ರಿಖಂಡಕರ್ಣಾಭರಣಮುದ್ಬದ್ಧ ಜೂಟಮತ್ಯಂತಶೌರ್ಯ ಸೌಂದರ್ಯಪ್ರಕಾಶನಪರಿತ್ಯಕ್ತತನುಚ್ಛದಮುತ್ತಪ್ತ ರಜತಾವದಾತಲೋಹಪುತ್ರಿಕಾನಂದಲಾಕ್ಷಾಹಿಂಗುಲಿಕ ಪಾಟಲಕಮೂರ್ಧಕರವಾಳಚಾಳನಪ್ರಕಟಿತ ಭಟಬಿಭೀಷಿಕಾಡಂಬರಮತಿಸ್ಫುಟವೀರ ಶೃಂಗಾರನಾಟಕಾಭಿನಯ ನಟವೃಂದಮಿದು ಮಹಾನಾಟಕಬಲಂ, ಮತ್ತಿತ್ತ ಕಾರ್ತಸ್ವರಸ್ತಂಭಸಂಚಾರಣಭಾಸ್ವರಮಾಸ್ಕಂದ ಪ್ರಲಂಬಸುಭಟಕರ್ಣಾಭರಣ ಕರ್ಣಪಾಶಮಾಬಳ ಶಾರ್ದೂಲಮುಖರೋಮಕರಾಳಸೃಕ್ವೋಪಾಂತ ಪ್ರರೂಢಶ್ಮಶ್ರುಜಾಳಮಾಹವ ಮಹಾಹುಂಕಾರ ಕಾಳಕೂಟವಿಟಪಿಪ್ರರೋಹಶಂಕಾವಹನಾಭಿಕೂಪಾವಲಂಬಿ ಕೂರ್ಚಕಳಾಪಂ ಲಲಾಟನಿಹಿತ ಕೌಸುಂಭಾಂಶುಕಪಟ್ಟಿಕಾಪ್ರಾಂತನಿಬಿಡನಿಬದ್ಧ ಕೇಶಬಂಧಮಾ ಚೂಳ ಸ್ವಸ್ತಿಕ ಬದ್ಧವಿಚಿತ್ರವಸ್ತ್ರದ್ವಯೋದ್ದಾಮ ಧಾನುಷ್ಕಮುದ್ವೀಚಿಮರುಮರೀಚನಿಚಯಚಂಚಳೋದ್ದಾಮ ಬಳಬಹಳನಿಷ್ಕವಚಪ್ರಾಸಪಾಣಿ ಪಾರಾಶಿಕಮುಗ್ರಪುಂಖಪ್ರೇಂಖೋಳಾನೇಕ ನೇತ್ರಪಟ್ಟಿಕಾಸಟಾಳಸರಳಕುಂತಹಸ್ತಮಹಾಹಯಾ**

ಪ್ರದರ್ಶಿಸಿದೆ. ಇದು ಮಹಾನಾಟಕ ಬಲ(?), ಸರ್ವಾಂಗಗಳಲ್ಲಿಯೂ ಅರಿಸಿಣವನ್ನು ಬಳಿದುಕೊಂಡಿದೆ. ಶಿಲಾಸ್ತಂಭಗಳಂತಿರುವ ಪೃಷ್ಠಭಾಗಗಳಿಗೆ ಅರಿದಳವನ್ನು ಲೇಪಿಸಿಕೊಂಡಿದೆ. ನಾಲ್ಕು ಅಂಗುಲ ವಿಸ್ತೃತವಾದ ನೆರಿಗೆಯುಳ್ಳ ವಸ್ತ್ರವನ್ನು ಸೊಂಟಕ್ಕೆ ಕಟ್ಟಿಕೊಂಡಿದೆ. (ಅತಿಮಸೃಣವರ್ಣ.... (ಇಲ್ಲಿ ಪಾಠಭ್ರಂಶವಿದೆ).... ಮಿರುಗುವ ಸೊಂಟದ ಪಟ್ಟಿಯಲ್ಲಿ ಕಠಾರಿಯನ್ನು ಸುವರ್ಣದ ಒರೆಯಲ್ಲಿಟ್ಟು ಸಿಕ್ಕಿಸಿಕೊಂಡಿದೆ ಎಂದು ಊಹಿಸಬಹುದಾದ ಅರ್ಥ). ಅರಳದ ಬೆಟ್ಟದಾವರೆಯ ಮೊಗ್ಗಿನಷ್ಟು ದಪ್ಪವಾದ ಮೂರು ನಾಲ್ಕು ಚಿನ್ನದ ಮಣಿಗಳಿಂದ ಅಲಂಕೃತವಾದ ಕಂಠವುಳ್ಳದ್ದು. ಬಂಗಾರದ ಪದಕವನ್ನು ಧರಿಸಿದೆ. ಮಣಿಖಚಿತವಾದ ತ್ರಿಖಂಡ ಕರ್ಣಾಭರಣವನ್ನು ಹೊಂದಿದೆ. ಜುಟ್ಟನ್ನು ಮೇಲಕ್ಕೆ ಎತ್ತಿ ಕಟ್ಟಿದೆ. ತಮ್ಮ ಶೌರ್ಯ ಸೌಂದರ್ಯಗಳನ್ನು ತೋರ್ಪಡಿಸುವುದಕ್ಕಾಗಿ ಅಂಗಿಯನ್ನು ತೆಗೆದುಹಾಕಿದೆ. ಕಾಯಿಸಿದ ಬೆಳ್ಳಿಯಂತೆ ಸ್ವಚ್ಛವಾದ ಲೋಹಮಯ ಖಡ್ಗದ ಅಲಗಿಗೆ ಲಾಕ್ಷಾ ಮತ್ತು ಇಂಗಳೀಕವನ್ನು ಬಳಿದು ಕೆಂಪಾಗಿ ಮಾಡಿಕೊಂಡಿದೆ. ಕೈಗತ್ತಿಯನ್ನು ಅಲ್ಲಾಡಿಸುತ್ತ ಭೀಕರವಾಗಿದೆ. ಸ್ಫುಟವಾದ ವೀರಶೃಂಗಾರನಾಟಕವನ್ನಾಡುವ ನಟವೃಂದ ವಾಗಿದೆ. ಇದೋ, ಈ ಕಡೆ ಇರುವುದೇ ಲಾಟಸೇನೆ. ಚಿನ್ನದ ಕಂಭಗಳಂತೆ ಚಲಿಸುವ ಯೋಧರಿಂದ ಭಾಸ್ವರವಾದುದು. ಆಕ್ರಮಣಶೀಲರಾದ ಸುಭಟರ ಕಥೆಗಳನ್ನಾಲಿಸುವುದೇ ಈ ಸೇನೆಗೆ ಕರ್ಣಾಭರಣ. ಬೆಳೆದ ಹುಲಿಯ ಮುಖರೋಮಗಳಂತೆ ಕರಾಳವಾಗಿ ಕಟಬಾಯಿಯ ಬಳಿ ಬೆಳೆದ ಮೀಸೆಯುಳ್ಳದು. ಯುದ್ಧಕಾಲದಲ್ಲಿ ಹುಂಕಾರ ಮಾಡುವ ಕಾಲಕೂಟವೃಕ್ಷದ ಬಿಳಿಲೋ ಎಂಬಂತೆ ಹೊಕ್ಕಳಿನವರೆಗೆ ಇಳಿದು ಬಂದ ಗಡ್ಡವುಳ್ಳದು! ಹಣೆಯವರೆಗೆ ಕಟ್ಟಿದ ಕುಸುಬೆಬಣ್ಣದ ರುಮಾಲಿನ ಪಕ್ಕದಲ್ಲಿ ಕಟ್ಟಿದ ನಿಬಿಡಕೇಶಬಂಧ ವುಳ್ಳದ್ದು. ಶಿರಸ್ಸಿನವರೆಗೆ ಸ್ವಸ್ತಿಕಾಕೃತಿಯಲ್ಲಿ ಬಿಗಿದು ಕಟ್ಟಿದ ವಿಚಿತ್ರವಾದ ವಸ್ತ್ರದ್ವಯವುಳ್ಳ ಬಿಲ್ಲಾಳುಗಳಿಂದ ಕೂಡಿದ್ದು. ಅಲೆಗಳಂತೆಯೂ ಮರುಮರೀಚಿಕೆಗಳಂತೆಯೂ ಚಂಚಲವಾಗಿ ಹೊಳೆಯುತ್ತ ಉದ್ದಾಮಬಲಯುಕ್ತವಾಗಿ ಹೊರಸೆಳೆದ ಪ್ರಾಸಾಯುಧಗಳನ್ನು ಕೈಯಲ್ಲಿ ಹಿಡಿದು ಸಮುದ್ರದಂತೆ ವಿಶಾಲವಾಗಿದೆ. (ಉಗ್ರಪುಂಖ.... ಅರ್ಥ ಅಸ್ಫುಟವಾಗಿದೆ.)

ರೋಹಣಮಸಿತಭುಜಗಶಿಶುತರಳತರವಾರಿಖಡ್ಗಖೇಟಕವ್ಯಗ್ರಕರದ್ವಯೋದ್ದಾಮ ಪದಾತಿಬಹಳಮಿದು ಲಾಟಬಲಂ, ಎಂದನೇಕದೇಶಾಧೀಶಬಲಂಗಳಂ ಬೇಱಿವೇಱಿ ತೋಱುತ್ತುಂ ಬರ್ಪನ್ನೆಗಂ ಮುಂದೆ,

ಇಭಖಡ್ಗಿವ್ರಾತ ನಾನಾಹರಿಮಯಕಟಕಭ್ರಾಜಿತಂ ತುಂಗವಂಶ
ಪ್ರಭವಂ ಸಿಂಹಾಸನಶ್ರೀಸಮುಚಿತಮಮೃತಾಂಭೋಧಿಕಲ್ಲೋಲಮಾಳಾ
ನಿಭಲೀಲಾಸಂಚಳಚ್ಚಾಮರರುಚಿರಮಿಳಾಚಕ್ರವಿಖ್ಯಾತಭೂಭೃ
ತ್ಪ್ರಭು ಚಕ್ರಾಧೀಶನೊಳ್ ಮಚ್ಚರಿಪವೊಲೆಸದಿರ್ದತ್ತು ರೌಪ್ಯಾಚಳೇಂದ್ರಂ ೪೬

ವ|| ಅಂತು ವಿಜಯಾರ್ಧಾಚಳಕಟಕಾಭಿಮುಖೀಕೃತನಿಜವಿಜಯಕಟಕನಾಗಿ ಬಡಗಮೊಗದೆ ನಡೆದು ತನ್ಮಹೀಧರದ ಜಗತೀತಳ ಮಣಿಮಯಸೋಪಾನಮನೇಱುವಲ್ಲಿ ಪಶ್ಚಿಮಾಭಿಮುಖನಾಗಿ ಪೋಗಿ ಪಂಚಾಶದ್ಯೋಜನಾ[೧]ಯಾಮದೊಳಂ ದ್ವಾದಶಯೋಜನವಿಸ್ತಾರಾಷ್ಟಯೋಜನೋತ್ಸೇಧವಜ್ರ ಕವಾಟಪುಟಮುಂ ವಿಚಿತ್ರಮಣಿಯೂಖಚಿತ್ರಿತದ್ವಾರಬಂಧಬಂಧುರಮುಮಧಸ್ಸ್ಥಳಪ್ರಸರ್ಪತ್ಸಿಂಧು ವಾಹಪ್ರವಾಹವಿರಾಜಿತಮುಂ ಪ್ರಸವಾಗಾರದಂತೆ ನಿಷಿದ್ಧಾನ್ಯಪ್ರವೇಶಮುಂ ರಾಜಭವನದಂತೆ ಕೃತರಕ್ಷಾ ವಿಧಿಯುಂ ವಿವಾಹಗೇಹದಂತೆ ಸಂಗತಮಂಗಳಪರಿಕರಮುಂ ಜೀವಿತಾಶಯದಂತೆ ಅತ್ಯಾಯಾಮಮುಂ ಮುಕ್ತಜ್ವರದಂತೆ ನಿರ್ಮುಕ್ತೋಷ್ಮಮುಂ ಮೂರ್ಛಾಪ್ರಾಪ್ತನಂತೆ ತಮೋಮಯಮುಮಪ್ಪ ತಮಿಸ್ರಗುಹೆಯನೆಯ್ದಿದಾಗಳ್,

ಕೃಷ್ಣಸರ್ಪದ ಮರಿಯಂತೆ ಮಿಳಿರುವ ಚೂರಿ ಮತ್ತು ಕತ್ತಿ, ಗುರಾಣಿಗಳನ್ನು ಎರಡು ಕೈಗಳಲ್ಲಿ ಹಿಡಿದ ಪದಾತಿಯುಳ್ಳದ್ದು." ಹೀಗೆ ವಿವಿಧ ದೇಶಾಧೀಶರ ಸೇನೆಯನ್ನು ಬೇರೆಬೇರೆಯಾಗಿ ತೋರಿಸುತ್ತ ಬಂದನು. ಆಗ, ೪೬. ಎದುರಿಗೆ ರಜತಾಚಲವು ಕಾಣಿಸಿತು. (ಪರ್ವತದ ಪರವಾದ ಅರ್ಥ) ಆ ಪರ್ವತವು ಆನೆ, ಖಡ್ಗಮೃಗ, ಅನೇಕ ಶುಕವಾನರಾದಿ ಗಳಿಂದ ಕೂಡಿದ ತಪ್ಪಲಿನಿಂದ ಶೋಭಿಸುತ್ತಿತ್ತು. ಉನ್ನತವಾದ ಬಿದುರಿಗೆ ಜನ್ಮಭೂಮಿ. ಸಿಂಹಗಳು ಇರಲು ಯೋಗ್ಯವಾದ ಸಂಪತ್ತಿನಿಂದ ಯುಕ್ತ. ಕ್ಷೀರಸಾಗರದ ಅಲೆಗಳಂತೆ ಸಂಚರಿಸುವ ಚಮರೀಮೃಗಗಳಿಂದ ಶೋಭಿತ. ಭೂಮಿಯಲ್ಲಿ ವಿಖ್ಯಾತವಾದ ಪರ್ವತರಾಜ (ಭರತೇಶನ ಪರವಾದ ಅರ್ಥ) ಆನೆ, ಖಡ್ಗಧಾರಿಯೋಧರು, ವಿವಿಧ ಕುದುರೆಗಳು ಇವುಗಳಿಂದ ಕೂಡಿದ ಸೇನೆಯಿಂದ ವಿರಾಜಿತ. ಶ್ರೇಷ್ಠವಂಶದಲ್ಲಿ ಜನಿಸಿದವನು, ಸಿಂಹಾಸನದ ಸಂಪತ್ತಿಗೆ ಅನುಗುಣ. ಕ್ಷೀರಸಾಗರದ ಅಲೆಗಳಂತೆ ಚಲಿಸುವ ಚಾಮರಗಳಿಂದ ಶೋಭಿತ, ಭೂಮಿಯಲ್ಲಿ ವಿಖ್ಯಾತ. ರಾಜರಿಗೆ ಪ್ರಭು. ಆದ್ದರಿಂದ ಆ ಪರ್ವತವು ಭರತೇಶ ನನ್ನು ಸ್ಪರ್ಧಿಸುವಂತೆ ಇತ್ತು. ವ|| ಅಂತು ವಿಜಯಾರ್ಧಪರ್ವತದ ತಪ್ಪಲುಪ್ರದೇಶಕ್ಕೆದುರಾಗಿ ತನ್ನ ವಿಜಯಸೈನ್ಯವನ್ನು ನಿಲ್ಲಿಸಿ ಉತ್ತರಾಭಿಮುಖವಾಗಿ ನಡೆದನು. ಪುನಃ ಆ ಬೆಟ್ಟದ ಜಗತೀತಲವೆಂಬ ಮಣಿಮಯಸೋಪಾನವನ್ನೇರಲು ಪಶ್ಚಿಮಾಭಿ ಮುಖನಾಗಿ ಹೊರಟನು. ಐವತ್ತು ಯೋಜನದುದ್ದವಿರುವ, ಹನ್ನೆರಡು ಯೋಜನದಗಲದ, ಎಂಟು ಯೋಜನ ದೆತ್ತರದ ವಜ್ರಕವಾಟಪುಟವು ಆ ತಮಿಸ್ರ ಗುಹೆಗಿತ್ತು. ಅದು ಚಿತ್ರವಿಚಿತ್ರವಾದ

---

೧ 'ಪಂಚಷಷ್ಟ್ಯೋಜನ' ಎಂಬುದನ್ನು 'ಪಂಚಾಶದ್ಯೋಜನ' ಎಂದು ತಿದ್ದಿದೆ. (ಆಧಾರ: ತತ್ತ್ವಾರ್ಥ ರಾಜವಾರ್ತಿಕ ೩-೧೦ರ ವ್ಯಾಖ್ಯಾನ)

ಅದಱೊಳಗೆ ಪುದಿದು ಮಂದೈ
ಸಿದ ಕೞ್ತಲೆಗಗಿದು ಸುಗಿವ ಪೆರ್ಬಡೆಯಂ ಕಂ
ಡಿದು ನಡೆಯದೆ ಸೆಡೆದಿಂದಿ
ರ್ದುದೆಂದು ಬೆಸಸಿದೊಡೆ ಚಕ್ರಿ ಸೇನಾಪತಿಯಂ ೪೭

ಆತಂ ಪುರೋಹಿತಂ ಬೆರ
ಸಾತತತಿಮಿರಪ್ರಭೇದನೋಪಾಯಮಿದೆಂ
ದಾ ತಮಮಂ ಕಿಡಿಸಲ್ ಸಂ
ಜಾತನಯಂ ಬಗೆದು ತದ್ಗುಹಾಭಿತ್ತಿಗಳೊಳ್ ೪೮

ಎರಡಱೊಳಂ ಚಂದ್ರಾದಿ
ತ್ಯರನಾಗಳ್ ಬರೆದು ಕಾಕಿಣೀರತ್ನದೊಳಂ
ಸ್ಫುರಿತಮಣಿರತ್ನದೊಳಮಂ
ತರಿಸುತ್ತುಂ ಯೋಜನಕ್ಕೆ ಬರೆದೊಂದೊಂದಂ ೪೯

ಬಿಸಿಲಂ ಬೆಳ್ದಿಂಗಳುಮಂ
ಪಸರಿಸೆ ಕೞ್ತಲೆ ತೆರಳ್ಪು ತೂಳ್ದೊಡೆ ರಾಗಂ
ಪಸರಿಸೆ ನಡೆದತ್ತು ಬಲಂ
ಪಸರಿಸಿ ನದ್ಯುಭಯತಟದೊಳೊಡನೊಡನಾಗಳ್ ೫೦

ವ|| ಅಂತು ಕಾಕಿಣೀಮಣಿರತ್ನಂಗಳೊಳ್ ಬರೆದ ಚಂದ್ರಾದಿತ್ಯರ ಬೆಳಗುಗಳೊಳಂ ಮುಂದೆ

ಮಣಿಕಾಂತಿಗಳಿಂದ ಶೋಭಿತವಾದ ದ್ವಾರಬಂಧದಿಂದ ಸುಂದರವಾಗಿತ್ತು. ಅದರ ಕೆಳಗೆ ಸಿಂಧೂನದಿಯು ಹರಡಿ ಹರಿಯುತ್ತಿತ್ತು. ಬಾಣಂತಿಯ ಮನೆಯಂತೆ ಇತರರ ಪ್ರವೇಶಕ್ಕನರ್ಹವಾಗಿಯೂ, ರಾಜಭವನದಂತೆ ರಕ್ಷಣಾವಿಧಿಯಿಂದ ಸಜ್ಜುಗೊಂಡುದಾಗಿಯೂ, ವಿವಾಹದ ಮನೆಯಂತೆ ಮಂಗಳವಸ್ತುಗಳಿಂದ ಕೂಡಿದು ದಾಗಿಯೂ, ಜೀವಿತಾಸೆಯಂತೆ ಅತ್ಯಾಯತವೂ, ಜ್ವರ ಬಿಟ್ಟವನಂತೆ ಕಾವಿಲ್ಲದುದೂ, ಮೂರ್ಛಿತನಂತೆ ತಮೋಮಯವೂ (ಕತ್ತಲೆಯೂ) ಆಗಿದ್ದಿತು. ೪೭. ಅದರಲ್ಲಿ ಗಾಢವಾಗಿ ಕವಿದಿದ್ದ ಕತ್ತಲೆಗೆ ಹೆದರಿ ಆ ದೊಡ್ಡ ಸೈನ್ಯವು ಮುನ್ನಡೆಯದೆ ನಿಲ್ಲಲು, ಅದೇಕೆಂದು ಚಕ್ರೇಶ್ವರನು ಸೇನಾಪತಿಯನ್ನು ಕೇಳಿದನು. ೪೮. ಅವನು ಪುರೋಹಿತಸಮೇತನಾಗಿ ಆ ವ್ಯಾಪ್ತವಾದ ಕತ್ತಲೆಯನ್ನು ನಾಶಗೊಳಿಸುವ ವಿಧಾನವನ್ನು ಚಿಂತಿಸಿ. ಅದನ್ನು ನಾಶಪಡಿಸಲು ಉಪಾಯವುಳ್ಳವನಾಗಿ, ೪೯. ಆ ಗುಹೆಯ ಎರಡೂ ಗೋಡೆಗಳ ಮೇಲೆ ಒಂದೊಂದು ಯೋಜನ ದೂರಕ್ಕೆ ಸೂರ್ಯ ಚಂದ್ರರನ್ನು ಕಾಕಿಣೀರತ್ನದಿಂದಲೂ, ಸ್ಫುರಿತವಾದ ಮಣಿರತ್ನದಿಂದಲೂ ಬರೆಯಿಸಿದನು. ೫೦. ಬಿಸಿಲೂ ಬೆಳ್ದಿಂಗಳೂ ವ್ಯಾಪ್ತವಾಗಲು ಕತ್ತಲೆಯು ತಾನೇತಾನಾಗಿ ತೆರಳಿತು. ಪ್ರಕಾಶವು ಹರಡಲು ಸೈನ್ಯವು ನದಿಯ ಎರಡೂ ದಂಡೆಗಳಲ್ಲಿ ಒಡನೆಯೇ ನಡೆಯಿತು. ವ|| ಅಂತು ಕಾಕಿಣೀರತ್ನ ಮತ್ತು ಮಣಿರತ್ನಗಳಲ್ಲಿ

ನಡೆವ ಚಕ್ರರತ್ನಪ್ರಭಾಚಕ್ರದೊಳಂ ಆ ಪಡೆ ಕಣ್ಪಡೆದಂತೆ ಸೋಪಾನಾಂತರದೊಳಿೞಿದೆರಙ್ಬಗೆಯಾಗಿ ಸಿಂಧುವಿನೆರಡುಂ ತಡಿಯೊಳಮೆರಡುಯೋಜನದಗಲದೊಳ್ ಸೇನಾನೀನಿಯಮದೊಳ್ ಪ್ರಭೂತಾಯತಸಮಾನಮಾಗೆ ನಡೆದು ಕೆಲವು ಪಯಣಂಗಳಿಂ ಗುಹಾಭಿತ್ತಿಗಳೆರಡುಂ ದೆಸೆಯ ಕುಂಡಂಗಳೊಳ್ ಪುಟ್ಟಿ ಬಂದೆರಡುಂ ದೆಸೆಯೊಳಂ ಸಿಂಧುವಿನೊಳ್ ಕೂಡಿದ ಗುಹಾಮಧ್ಯದೊಳುನ್ಮಗ್ನ ನಿಮಗ್ನಜಲನಿಮ್ನಗಾತಟದೊಳ್ ಬೀಡಂ ಬಿಡಿಸಿ,

ಒಂದಱ ನೀರ್ಮಳಲೊಂದ
ಕೊರ್ಂದಿಸುತುಂ ಮೇಗೆ ಕೊಂಡು ನೆಗೆವುದಿದೇಂ ಮ
ತ್ತೊಂದಱ ನೀರಡಿಗರ್ದುವು
ದೆಂದತಿವಿಸ್ಮಯದೆ ನೋಡಿದಂ ಭರತೇಶಂ ೫೧

ವ|| ಅಂತುಭಯನದಿಯ ವೈಷಮ್ಯಮುಮನಾಶ್ಚರ್ಯಂಬಟ್ಟು ನೋಡಿ ನದ್ಯುತ್ತರಣೋಪಾಯಮಾವುದೆಂದು ಬಗೆದು ಬೇಗಂ ಸ್ಥಪತಿರತ್ನಮಂ ಕರೆದು ತನ್ನಿಪತದುದಕೋಭಯಸರಿತ್ಸ್ವರೂಪಮಂ ತೋಱಿದೊಡೆ,

ಅಡಿಯಿಂ ಮೇಗಣ್ಗೆತ್ತುವ
ಕಡುಗಾಳಿಯ ಪೊಯ್ಲೊಳಿದಱ ನೀರೊಱೆದಪುದ
ರ್ದಡಿಗೆ ಬರೆ ತೆಗೆವ ಗಾಳಿಯಿ
ನಡಿಗಿೞಿದಪುದಿದಱ ನೀರಿದೊಂದಚ್ಚರಿಯೇ ೫೨

ವ|| ಎಂಬು ಬಿನ್ನಪಂಗೆಯ್ದು ದಿವ್ಯಶಕ್ತಿಪ್ರಭಾವದಿಂದಮುಮಾನುಷಾರಣ್ಯಂಗಳ

ಬರೆದ ಚಂದ್ರಸೂರ್ಯರ ಬೆಳಕಿನಿಂದಲೂ ಮುನ್ನಡೆದ ಚಕ್ರರತ್ನಪ್ರಭಾವಲಯದಿಂದಲೂ ಆ ಸೈನ್ಯವು ಕಣ್ಣನ್ನು ಪಡೆದಂತಾಯಿತು. ಆದ್ದರಿಂದ ಸೋಪಾನಾಂತರದಿಂದ ಸೈನ್ಯವು ಇಳಿದು ಇಬ್ಬಗೆಯಾಗಿ ಸಿಂಧುವಿನ ಎರಡೂ ದಡಗಳಲ್ಲಿ ಎರಡು ಯೋಜನ ಅಗಲದ ಅಳವಿ (ವಿಸ್ತಾರ)ಯಲ್ಲಿ ಸೇನಾಧಿಪತಿಯ ಆಜ್ಞೆಯಂತೆ ಉದ್ದ ಅಗಲಗಳಿಗೆ ಸಮಾನವಾಗಿ ನಡೆದು ಕೆಲವಾರು ಪ್ರಯಾಣಗಳಿಂದ ಗುಹಾಮಧ್ಯಕ್ಕೆ ಬಂದಿತು. ಅಲ್ಲಿ ಗಹೆಯ ಎರಡೂ ಕುಂಡಗಳಲ್ಲಿ ಹುಟ್ಟಿ ಎರಡು ದಿಕ್ಕಿನಿಂದಲೂ ಹರಿದುಬಂದು ಸಿಂಧುನದಿಯನ್ನು ಸೇರುವ ನದಿಯ ಸಂಗಮಸ್ಥಳದಲ್ಲಿ ಬಿಡಾರವನ್ನು ಬಿಟ್ಟಿತು. ಸಿಂಧುನದಿಯ ನೀರು ಮೇಲಕ್ಕೆ ಹರಿಯುತ್ತಿತ್ತು. ಇನ್ನೊಂದು ಹರಿದುಬಂದ ನದಿಯ ನೀರು ಕೆಳಕ್ಕೆ ಧುಮುಕುತ್ತಿತ್ತು. ೫೧. "ಇವುಗಳಲ್ಲಿ ಒಂದು ನದಿಯ ನೀರು ಮರಳನ್ನು ತಳ್ಳುತ್ತ ಮೇಲಕ್ಕೆ ಪುಟಿಯುವುದು. ಇನ್ನೊಂದರ ನೀರು ಅದನ್ನು ಕೆಳಕ್ಕೆ ತಳ್ಳುವುದು" ಎಂದು ಭರತೇಶನು ವಿಸ್ಮಯದಿಂದ ಆ ನದೀಸಂಗಮವನ್ನು ನೋಡಿದನು. ವ|| ಹಾಗೆ ಎರಡುನದಿಗಳ ವೈಪರೀತ್ಯವನ್ನು ಅಚ್ಚರಿಯಿಂದ ನೋಡಿ, ನದಿಯನ್ನು ದಾಟುವ ಉಪಾಯವೇನೆಂದು ಚಿಂತಿಸಿ, ಸ್ಥಪತಿಶ್ರೇಷ್ಠನನ್ನು ಒಡನೆ ಬರಮಾಡಿ, ಧುಮುಕುವ ಆ ನದಿಗಳ ಸ್ವರೂಪವನ್ನು ಅವನಿಗೆ ತೋರಿಸಿದನು. ೫೨. ಆಗ "ಕೆಳಗಿನಿಂದ ಬೀಸುವ ದೊಡ್ಡಗಾಳಿಯಿಂದ ಈ ನದಿಯ ನೀರು ಮೇಲಕ್ಕೆ ಚಿಮ್ಮುತ್ತಿದೆ. ಕೆಳಕ್ಕೆ ನುಗ್ಗುವ ಗಾಳಿಯಿಂದ ಇನ್ನೊಂದರ ನೀರು ಕೆಳಕ್ಕೆ ಧುಮುಕುತ್ತದೆ. ಇದೇನು ಅಚ್ಚರಿ?" ವ|| ಎಂದು ಸ್ಥಪತಿರತ್ನನು ಬಿನ್ನಯಿಸಿದನು. ಅನಂತರ

ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರುಗಳನೆಡೆಗಿಱಿದಿರೆ ಪಾಸಿ ಪಸರಿಸಿ ಪಡೆಗೆ ನಡೆಯಲಪ್ಪಂತೆ ಮಾಡಿದಾಗಳ್,

ದಳ್ಳಿಸಿ ಕುಕಿಲುತ್ತಂಬುಧಿ
ಯುಳ್ಳೋಳಂ ನೆಗಟ್ಟೆ ಕವಿದು ನರ್ತಿಸಿ ನಡೆದ
ತ್ತಳ್ಳಾಡೆ ನೆಲಂ ಬಲಮದು
ಕೊಳ್ಳೆಂದು ಮಹಾರವಂ ಪೊದಟ್ಟೆಸೆವಿನೆಗಂ ೫೩

ವ॥ ಅಂತು ಭರತೇಶ್ವರಚಕ್ರವರ್ತಿಯುಮನೇಕಮದಗಜಘಟಾಪರಿವೇಷ್ಟಿತನಾಗಿ ರಾಜಮಾರ್ಗದೊಳ್ ನಡೆವಂತದಱ ಮೇಲೆ ನಡೆದು ಕೆಲವು ಪಯಣಂಗಳಿಂದುತ್ತರಗುಹಾದ್ವಾರಮನನಾಯಾಸದೊಳ್ ತೆಱೆದು ಪೊಱಮಟ್ಟಾಗಳ್,

ಸೆಱೆವನೆಯಿಂದಂ ಭೋಂಕೆನೆ
ಪೊಱಮಟ್ಟವೊಲಂದು ಗರ್ಭಗೃಹದಿಂದಂ ಮೇ
ಣ್ಪೊಱಮಟ್ಟವೊಲಾ ಗುಹೆಯಿಂ
ಪೊಱಮಟ್ಟುದು ಸೈನ್ಯಮಂಬುಧಿಧ್ವನಿಯಿಂದಂ ೫೪

ವ॥ ಅಂತು ತಮಿಸ್ರಗುಹಾದ್ವಾರದಿಂ ಪೊಱಮಟ್ಟಾಗಳ್,

ಸಕಟೋದ್ಘೃಷ್ಟವನೇಭರುಗ್ಣಜರಠಸ್ಥೂಳಾರ್ಗಳಾಕಾರಮಾ
ರ್ಗಕುಜಂ ವಾಜಿಖುರಾಹತಿಸ್ಫುಟಿತಗ್ರಾವಸ್ಥಳಂ ಸೈನ್ಯದಂ
ತಿಕರೋಚ್ಚಾಟಿತಸಲ್ಲಕೀಕಿಸಲಯಂ ಚಕ್ರೇಶ್ವರಂ ಪೆರ್ಚಿದು
ತ್ಸುಕದಿಂ ದಾಂಟಲಳುಂಬಮಪ್ಪ ವಿಜಯಾರ್ಧಾದ್ರೀಂದ್ರಮಂ ದಾಂಟಿದಂ ೫೫

ದಿವ್ಯಶಕ್ತಿಪ್ರಭಾವದಿಂದ ನಿರ್ಮಾನುಷಾರಣ್ಯಗಳ ಮಹಾವೃಕ್ಷಗಳನ್ನು ತರಿಸಿ ನೆಡಿಸಿ, ನೆಟ್ಟ ಕಂಭಗಳ ಮೇಲೆ ಗಟ್ಟಿಯಾದ ಮರದ ದಿಮ್ಮಿಗಳನ್ನು ದಟ್ಟವಾಗಿ ಹಾಸಿ, ಮುಂದೆ ಸಾಗಬೇಕೆಂದು ಸೇನೆಗೆ ಆಜ್ಞೆಯಿತ್ತನು. ೫೩. ಆಗ ಸೇನೆಯು ರಭಸದಿಂದ ಆರ್ಭಟಿಸುತ್ತ ಸಮುದ್ರದ ಅಲೆಯು ಎದ್ದುಬರುವಂತೆ ನಲಿದು ನರ್ತಿಸುತ್ತ ಹೊರಟಿತು. ನೆಲವು ನಡುಗಿತು. ಗುಹಾಧ್ವನಿಯು ಕೊಳ್ಳೆಂದು ಹೊರಸೂಸುವಂತೆ ಕಾಣಿಸಿತು. ವ॥ ಅಂತು ಭರತೇಶ್ವರಚಕ್ರವರ್ತಿಯು ಮದ್ದಾನೆಗಳ ಹಿಂಡಿನಿಂದ ಪರಿವೃತನಾಗಿ, ರಾಜಮಾರ್ಗದಲ್ಲಿ ನಡೆಯುವಂತೆ ಆ ಸೇತುವೆಯ ಮೇಲೆ ನಡೆದು ಕೆಲವೇ ಪ್ರಯಾಣಗಳಿಂದ ಉತ್ತರ ಗುಹಾದ್ವಾರವನ್ನು ಅನಾಯಾಸವಾಗಿ ತೆರೆದು ಹೊರಬಿದ್ದನು. ಆಗ, ೫೪. ಸೆರೆಮನೆಯಿಂದ ತೊಟ್ಟನೆ ಹೊರಬಿದ್ದಂತೆಯೂ, ಗರ್ಭಗೃಹದಿಂದ ಹೊರಬಿದ್ದಂತೆಯೂ ಆ ಗುಹಾದ್ವಾರದಿಂದ ಸಮುದ್ರಘೋಷವನ್ನು ಮಾಡುತ್ತಾ ಸೈನ್ಯವು ಹೊರಬಿದ್ದಿತು. ವ॥ ಹಾಗೆ ತಮಿಸ್ರಗುಹಾದ್ವಾರದಿಂದ ಹೊರಟಾಗ, ೫೫. ಚಕ್ರೇಶ್ವರನು ಅತ್ಯುತ್ಸಾಹದಿಂದ ದಾಟಲಸಾಧ್ಯವಾದ ವಿಜಯಾರ್ಧಾಚಲವನ್ನು ದಾಟಿದನು. ಆತನು ಗಂಡಸ್ಥಳಸಹಿತವಾಗಿ ಕಾಡಾನೆಗಳಿಂದ ತೀಡಲ್ಪಟ್ಟ ದಪ್ಪವೂ ಗಟ್ಟಿಯೂ ಆದ ಅಗುಳಗಳಾಕೃತಿಯಲ್ಲಿರುವ ಮಾರ್ಗವೃಕ್ಷಗಳನ್ನು ಛೇದಿಸಿದನು. ಕುದುರೆ ಗೊರಸುಗಳ ಹೊಡೆತದಿಂದ ಕಲ್ಲುಚಪ್ಪಡಿಗಳು

ವ|| ಅಂತು ವಿಜಯಾರ್ಧಮಹೀಧರೋಪಕಂಠವನನಿಕಟದೊಳ್ ಬೀಡಂ ಬಿಟ್ಟಾಗಳ್,

ಆ ಗುಹೆಯೊಳಗಣ ಶರದ(?)ದೊ
ಳಾಗಳೆ ಬಸವಳಿದ ಬಲಮನಾಱಿಸುವವೊಲಾ
ಯ್ತಾ ಗಿರಿಯ ಕೊಳದ ಮರಗಳ
ಪೂಗಳ ಕಂಪನೆ ತೆರಳ್ಚಿ ಬೀಸುವ ಪವನಂ ೫೬

ವ|| ಅಂತಲ್ಲಿ ಬೀಡಂ ಬಿಟ್ಟು ಮುನ್ನಿನಂತೆ ಪಶ್ಚಿಮಖಂಡಮುಮಂ ಅಖಂಡಪ್ರತಾಪಧ್ವಜಸಂದು ತನ್ನ ಧ್ವಜಿನೀಪತಿಯನಟ್ಟಿ ಬಾಯ್ಕೇಳಿಸಿ ಚಕ್ರರತ್ನಮಂ ಮುಂದಿಟ್ಟು ಮಧ್ಯಖಂಡಮುಮಂ ಔಂಕಿ ಪೂಱೆ ಪೊಕ್ಕವಷ್ಟಂಭಿಸಿ ನಿಂದಾಗಳ್, ಚಿಲಾತಾವರ್ತರೆಂಬಿರ್ವರುಂ ಮ್ಲೇಚ್ಛರಾಜರ್ ಧನುರ್ಧರ ಪ್ರಾಯಮುಂ ಅಶ್ವೀಯಬಹಳಮುಂ ಹಾಸ್ತಿಕಸಾಧನಮುಮಪ್ಪ ತಮ್ಮ ಬಲಮನೊಂದುಮಾಡಿ ಕೂಡಿಕೊಂಡು ಚಕ್ರವರ್ತಿಯೊಳುಚ್ಛವಿಗ್ರಹಂಗೆಯ್ಯಲೆತ್ತಿಕೊಂಡುದಂ ಕಂಡು ಮಂತ್ರಿಗಳ್ ಮಾರ್ಕೊಂಡು,

ವಿಜಯಾರ್ಧಾದ್ರಿಯನುರ್ಚಿ ಬರ್ಪಳವಿದೇಂ ಸಾಮಾನ್ಯಮೇ ದೇಶಮಂ
ಭುಜವಿಕ್ರಾಂತದಿನೊತ್ತಿ ಪೊಕ್ಕಭಟದೇನಾಶ್ಚರ್ಯಮಲ್ತೇ ಮೃಗ
ವ್ರಜದೊಡ್ಡೇಂ ಮೃಗರಾಜನಂ ನೆಱೆವುದೇ ತಾಂಗಲ್ಕೆ ನಮ್ಮೀ ಬೃಹ
ದ್ಧ್ವಜಿನೀಸಂಕುಳಮೀ ಜಿಗೀಷುವನಿದೇಂ ಸಂಗ್ರಾಮದೊಳ್ ಗೆಲ್ವುಮೇ ೫೭

ವ|| ಅದಲ್ಲದೆಯುಂ ಈ ಗಿರಿದುರ್ಗಮಂ ದಾಂಟಿ ಬಂದ ಬಲ್ಲಾಳ್ ದಿವ್ಯಪ್ರಭಾವನಕ್ಕುಮ ಮೋಘನಕ್ಕುಂ; ಅದಱಿಂ ಈತನೊಳ್ ಇದಿರ್ಚಿ ಕಾದುವ ಮರುಳ್ತನಂ ಬೇಡ; ಹಿಮವದ್ವಿಜಯಾರ್ಧ

ಹಳ್ಳತಿಟ್ಟಾಗಿ ಮಾಡಲ್ಪಟ್ಟವು. ಸೈನ್ಯಗಜಗಳು ತಮ್ಮ ಸೊಂಡಿಲಿನಿಂದ ಸಲ್ಲಕೀ ಪಲ್ಲವಗಳನ್ನು ಕಿತ್ತೆಸೆದವು. ವ|| ಹಾಗೆ ಹೋಗಿ ವಿಜಯಾರ್ಧಪರ್ವತದ ಸಮೀಪದ ಕಾಡಿನಲ್ಲಿ ಬೀಡನ್ನು ಬಿಟ್ಟನು. ಆಗ, ೫೬. ಆ ಬೆಟ್ಟದ ಕೊಳಮರಗಳಲ್ಲಿ ಬಿಟ್ಟ ಹೂಗಳ ಮೇಲೆ ಸಂಚರಿಸಿ ಅದರ ಕಂಪನ್ನು ಹರಡುವ ಗಾಳಿಯು ಆ ಗುಹೆಯಲ್ಲಿದ್ದ ಶರತ್ಕಾಲದ ಸೆಕೆಯಲ್ಲಿ ಬಸವಳಿದಿದ್ದ ಬಲವನ್ನು ತಣಿಸುವಂತಾಯಿತು. ವ|| ಅಲ್ಲಿ ಬೀಡನ್ನು ಬಿಟ್ಟು ಹಿಂದಿನಂತೆ ಪಶ್ಚಿಮಖಂಡವನ್ನು ಅಖಂಡಪ್ರತಾಪಧ್ವಜನಾದ ಭರತನು ತನ್ನ ಸೇನಾಪತಿಯ ಮೂಲಕ ಆಜ್ಞಾಧೀನವನ್ನಾಗಿ ಮಾಡಿಕೊಂಡನು. ಪುನಃ ಚಕ್ರರತ್ನವನ್ನು ಮುಂದುಮಾಡಿಕೊಂಡು ಮಧ್ಯಮಖಂಡವನ್ನು ಮರ್ದಿಸಿ ಸ್ಥಿರವಾಗಿ ನಿಂತನು. ಆಗ ಚಿಲಾತ, ಆವರ್ತರೆಂಬ ಇಬ್ಬರು ಮ್ಲೇಚ್ಛರಾಜರು ಆನೆ ಕುದುರೆಗಳಿಂದ ಯುಕ್ತವೂ ಧನುರ್ಧಾರಿಯೂ ಆದ ಸೈನ್ಯವನ್ನು ಕೂಡಿಕೊಂಡು ಬಂದು ಚಕ್ರವರ್ತಿಯೊಡನೆ ಭೀಕರಯುದ್ಧಮಾಡಲು ಸಿದ್ಧರಾದರು. ಅದನ್ನು ಅವರ ಮಂತ್ರಿಗಳು ಕಂಡು ಹೀಗೆಂದರು: ೫೭. "ವಿಜಯಾರ್ಧಪರ್ವತವನ್ನುಲ್ಲಂಘಿಸಿ ಬಂದ ಸಾಮರ್ಥ್ಯವು ಸಾಮಾನ್ಯವಾದುದೇ? ಈ ದೇಶವನ್ನು ಭುಜಪರಾಕ್ರಮದಿಂದೊತ್ತಿ ಹೊಕ್ಕ ಶೂರತನವು ಆಶ್ಚರ್ಯಕರವಲ್ಲವೇ? ಮೃಗಸಮೂಹವು ಸಿಂಹವನ್ನೆದುರಿಸ ಬಲ್ಲುದೆ? ನಮ್ಮ ಈ ದೊಡ್ಡ ಸೈನ್ಯವು ಈ ವಿಜಿಗೀಷುವನ್ನು ರಣಭೂಮಿಯಲ್ಲಿ ಗೆಲ್ಲಬಲ್ಲುದೆ? ವ|| ಅದಲ್ಲದೆ ಈ ಗಿರಿದುರ್ಗವನ್ನು ದಾಟಿ ಬಂದ ಶೂರನು ದಿವ್ಯ ಪುರುಷನಾಗಿರಬೇಕು, ದಿವ್ಯಪ್ರಭಾವವುಳ್ಳವನಾಗಿರಬೇಕು, ಹಿಡಿದ ಕಾರ್ಯವನ್ನು ಕೈಗೂಡಿಸುವವನಾಗಿರಬೇಕು.

ಗಂಗಾಸಿಂಧುತಟಾವಧಿಯಪ್ಪೀ ನಮ್ಮ ಮಧ್ಯಮಖಂಡದೊಳಂ ಅಗಾಧನದೀನದದುಸ್ತರಮಪ್ಪ ಜಲದುರ್ಗದ ಮಹಿಮೆಯುಮಂ ಅಭ್ರಂಕಷಶಿಖರದುರ್ಲ್ಲಂಘ್ಯಮಪ್ಪ ಗಿರಿದುರ್ಗದ ಪೆಂಪುಮಂ ಉದಗ್ರತರು ಗಹನದುಷ್ಪ್ರವೇಶಮಪ್ಪ ವನದುರ್ಗದುನ್ನತಿಯುಮಮಂ ಒಳಕೊಂಡು, ನಿರಂತರಾಟ್ಟಾಳಕಪ್ರತೋಳೀಇಂದ್ರ ಕೋಶ ದೇವಪಥಸನಾಥಂಗಳುಂ ಗಂಡಶೈಳಾಭೀಳಶಿಳಾಯಂತ್ರಭಯಂಕರಂಗಳುಂ ಪ್ರಳಯಕಾಳಾನಳ ವರ್ಷಶಂಕಾಕಾರಿಹುತವಹವರ್ಷಾಗ್ನಿಯಂತ್ರಭಯಾನಕಂಗಳುಂ ಕಂಟಕಗುಲ್ಮವಿಷವಲ್ಲೀಸಂಘಾತ ಭೀಷಣಂಗಳುಂ ಜಾನುಭಂಜನೀಶೂಲಪ್ರಕರಪರಿವೃತಂಗಳುಂ ಕೂಪಕೂಟಾವಪಾಯಲೋಹಕಂಟಕ ಸಂಕಟಂಗಳುಂ ತಾಳಪತ್ರಶೃಂಗಾಟಕನಿಚಿತಂಗಳುಂ ಶ್ವದಂಷ್ಟ್ರಾಗ್ರಳೋಪರಿಸಂಛನ್ನಂಗಳುಂ ಯಂತ್ರಾಯುಧಾವರಣೋಪಕರಣಪರಿಣತಂಗಳಾಗಿರ್ದ ದುರ್ಗಂಗಳೊಳ್,

ಘನದೋರ್ದಂಡಪ್ರಭಾವಾರ್ಜಿತ ಧರಣಿಗುಹಾಸಿಂಹರಿರ್ ನೀಮುಮೀಗಳ್
ವನಸಿಂಹನ್ಯಾಯದಿಂ ದುರ್ಗದೊಳೆ ಬಲಿದು ನಿಂದಲ್ಲಿ ಬಂದೊತ್ತಿ ಚಕ್ರೇ
ಶನ ತಂತ್ರಂ ನಿಲ್ಕುಮಾರ್ತಲ್ಲಿಗೆ ನೆಱೆದು ಭರಂಗೆಯ್ದುದುರ್ಕುಳ್ಳ ಸಾಮಂ
ತನಿಕಾಯಂ ಯಂತ್ರಮುಕ್ತಾನಳಶರದೃಷದಾಸಾರವಿಧ್ವಂಸಮಕ್ಕುಂ ೫೮

ಆದ್ದರಿಂದ ಇವನನ್ನೆದುರಿಸಿ ಕಾದುವ ಮರುಳ್ತನವು ಬೇಡ. ಹಿಮವತ್ಪರ್ವತ, ವಿಜಯಾರ್ಧ, ಗಂಗಾಸಿಂಧುಗಳ ತಟವೇ ಅವಧಿಯಾಗಿರುವ ನಮ್ಮ ಈ ಮಧ್ಯಮಖಂಡದಲ್ಲಿ ಆಳವಾದ ನದೀನದಗಳಿಂದ ದಾಟಲಾಗದ ಜಲದುರ್ಗದ ಮಹಿಮೆಯನ್ನೂ, ಮುಗಿಲನ್ನುಜ್ಜುವ ಬೆಟ್ಟದ ಶಿಖರಗಳಿಂದ ದುರ್ಲ್ಲಂಘ್ಯವಾದ ಗಿರಿದುರ್ಗಗಳ ಹಿರಿಮೆಯನ್ನೂ, ಉನ್ನತವಾದ ಗಿಡಮರಗಳಿಂದ ದುಷ್ಪ್ರವೇಶಗಳಾದ ವನದುರ್ಗಗಳ ಔನ್ನತ್ಯಗಳನ್ನೂ ಒಳಕೊಂಡು ಕೊತ್ತಲ, ರಸ್ತೆ, ಕಟ್ಟೆ, ಇಂದ್ರಕೋಶ, ದೇವಪಥಗಳಿಂದ ಯುಕ್ತವೂ ಗುಂಡುಕಲ್ಲುಗಳನ್ನೆಸೆಯುವ ಶಿಲಾಯಂತ್ರಗಳಿಂದ ಭಯಂಕರಗಳೂ ಪ್ರಳಯಾಗ್ನಿವರ್ಷದ ಶಂಕೆಯನ್ನು ತರುವ ಬೆಂಕಿಯನ್ನುಗುಳುವ ಅಗ್ನಿಯಂತ್ರಗಳಿಂದ ಭೀಕರಗಳೂ, ಮುಳ್ಳು, ಪೊದರು, ವಿಷದ ಬಳ್ಳಿ ಇವುಗಳ ಸಂಘಾತದಿಂದ ಭೀಷಣಗಳೂ, ಜಾನುಭಂಜಿನೀ, ಶೂಲ ಮುಂತಾದವುಗಳಿಂದ ಯುಕ್ತವೂ, ಕೂಪ (ಬಾವಿ) ಕೂಟ (ಶಿಖರ) ಅವಪಾತ (ಕಂದಕ) ಲೋಹಕಂಟಕ ಮೊದಲಾದವುಗಳಿಂದ ಇಕ್ಕಟ್ಟಾದುದೂ, ತಾಳೆಮರ, ಶೃಂಗಾಟಕವೆಂಬ ಮರ ಇವುಗಳ ಸಮೂಹದಿಂದ ಸಮೇತವೂ, ನಾಯಿಯ ಕೋರೆಹಲ್ಲುಗಳಂತಿರುವ ಅಗುಣಿಗಳಿಂದ ಮೇಲ್ಗಡೆ ಸಂಛನ್ನವೂ, ಯಂತ್ರ, ಆಯುಧ, ಆವರಣ ಮುಂತಾದ ಉಪಕರಣಗಳಿಂದ ಕೂಡಿದುದೂ ಆದ ದುರ್ಗಮ ದುರ್ಗಗಳಲ್ಲಿ! ೫೮. ದಂಡದಂತೆ ಬಲಿಷ್ಠವಾದ ತೋಳುಗಳ ಪ್ರಭಾವದಿಂದ ಸಂಪಾದಿಸಲ್ಪಟ್ಟ ಭೂಮಿಯೆಂಬ ಗುಹೆಯ ಸಿಂಹರಾದ ನೀವು ವನಸಿಂಹನ್ಯಾಯ[1]ದಿಂದ ದುರ್ಗದಲ್ಲಿ ಬಲಿತು ನಮಗೇನು ಭಯವೆಂಬ ಬುದ್ಧಿಯಿಂದ ನಿಂತರೆ, ಚಕ್ರೇಶ್ವರನ ತಂತ್ರವು ಸಾಗದೆ ಅಲ್ಲಿಗೆ ನಿಲ್ಲುವುದು. ಹಾಗಲ್ಲದೆ ನೀವು ಉತ್ಸಾಹದಿಂದ ಅಲ್ಲಿಗೆ ಹೋಗಿ ದುಡುಕಿದರೆ ಉರ್ಕುಳ್ಳ ಸಾಮಂತವರ್ಗವೆಲ್ಲ ಯಂತ್ರಮುಕ್ತವಾದ ಬೆಂಕಿ, ಬಾಣ, ಕಲ್ಲು ಇವುಗಳ ಸಂತತವಾದ ಮಳೆಯಿಂದ

1. ಸಿಂಹದಿಂದ ವನಕ್ಕೆ ರಕ್ಷಣೆ, ವನದಿಂದ ಸಿಂಹಕ್ಕೆ ರಕ್ಷಣೆ ಎಂಬುದು ವನಸಿಂಹನ್ಯಾಯ. ಪ್ರಕೃತ, ದುರ್ಗದಿಂದ ನಿಮಗೂ ನಿಮ್ಮಿಂದ ದುರ್ಗಕ್ಕೂ ರಕ್ಷಣೆ.

ವ|| ಅಂತೀತನ ಕಟಕಕ್ಕೆ ನಿತ್ಯಕ್ಷಯವ್ಯಯಪ್ರತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲದಿಂ ತೆರಳ್ಚುವಮಲ್ಲದೊಡಂ ನಮ್ಮ ಕುಲದೇವತೆಗಳಪ್ಪ ಮೇಘಮುಖರೆಂಬ ನಾಗರಾಜರೆಂಬ ನಾಗರಾಜರಿಂದಮೀತನಳುರ್ಕೆಯುಮನುರ್ಕುಮಂ ಕಿಡಿಸಿ ಗೆಲ್ವಮೆಂದು ನುಡಿದ ಮಂತ್ರಿಗಳ ಮಾತಂ ಮನದೆಗೊಂಡು ಬಳಾಕಾವರ್ತರ್ ಪೂಜಾಪುರಸ್ಸರಂ ದರ್ಭಶಯನತಳಗತರ್ ತದುದ್ಯೋಗಪರರಾದಾಗಳಾ ನಾಗರಾಜರ್ ಬಂದು ನಿಮಗಾಮುಳ್ಳಂತೆ ದಂದುಗಮೆಂದುಮೇಕಪ್ಪುದೆಂದು,

ಜಳದಾಕಾರದೊಳೆಯ್ದೆ ಪರ್ಬಿ ಸಕಳಾಶಾಚಕ್ರಮಂ ವ್ಯೋಮಮಂ
ದಳಮಂ ಕರ್ಗಿ ಕಱಂಗಿ ತೋಱೆ ಸಿಡಿಲಿಂ ಮಿಂಚಿಂ ಘನಧ್ವಾನದಿಂ
ದಿಳೆ ಕಂಪಂಗೊಳೆ ಸೋನೆಯಿಂ ಸರಿಗಳಿಂ ತಂದಲ್ಗಳಿಂದಂದು ಭೂ
ತಳಮೇಕಾರ್ಣವಮಾಗೆ ಚಕ್ರಿಯ ಬಲಕ್ಕಾತಂಕಮಂ ಮಾಡಿದರ್ ೫೯

ವ|| ಅಂತು ಪ್ರಳಯಕಾಳಜಳದೋದೀರ್ಣಜಳಮುಮನಿಟೆಸಿ ಜಳಧರ ಜಳಧಿಯ ನಡುವೆ,

ಅಡಿಯೊಳ್ ಪಾಸಿದ ಚರ್ಮರತ್ನಪಟಮಂ ತಚ್ಛತ್ರರತ್ನಂ ಬೆಡಂ
ಗಿಡಿದೋರಂತಿರೆ ಮುಟ್ಟ ಪೊರ್ದೆ ತೆಱದಿಂದಿಂಬಾಗೆ ತನ್ಮಧ್ಯದೊಳ್
ಸೊಡರಿರ್ಪಂತಿರೆ ಚಕ್ರರತ್ನಮದಱೊಳ್ ನಿರ್ಬಾಧಮಿರ್ದತ್ತು ಪೆ
ರ್ವಡೆ ವಾರಾಶಿಯೊಳಿರ್ದ ಬೈತ್ರದೊಳಗಂದೆತ್ತಂ ತೆರಳ್ದಿರ್ದವೊಲ್ ೬೦

ವಿಧ್ವಂಸನಗೊಳ್ಳುವುದು. ವ|| ಹಾಗೆ ಮಾಡಿ ಈ ಭರತೇಶನ ಸೈನ್ಯಕ್ಕೆ ಪ್ರತಿದಿನವೂ ಕ್ಷಯ, ವ್ಯಯ, ಅಡ್ಡಿಗಳನ್ನೊಡ್ಡಿ, ಅವನು ಬೇಸರದಿಂದ ಹೊರಟು ಹೋಗುವಂತೆ ಮಾಡೋಣ. ಅಥವಾ ನಮ್ಮ ಕುಲದೇವತೆಗಳಾದ ಮೇಘಮುಖರೆಂಬ ನಾಗರಾಜರಿಂದ ಈತನ ವ್ಯಾಪ್ತಿಯನ್ನೂ ಕಾರ್ಯವನ್ನೂ ಕೆಡಿಸಿ ಈತನನ್ನು ಗೆಲ್ಲೋಣ" ಎಂದರು. ತಮ್ಮ ಮಂತ್ರಿಗಳ ಮಾತನ್ನು ಮನಸ್ಸಿನಲ್ಲಿ ತಂದುಕೊಂಡು ಬಲಾಕಾವರ್ತರು ಪೂಜಾಪುರಸ್ಸರವಾಗಿ ದರ್ಭಾಸನದಲ್ಲಿ ಮಲಗಿ ನಾಗದೇವತೆಗಳನ್ನು ಒಲಿಸಿಕೊಳ್ಳುವ ವರಾದರು. ನಾಗದೇವತೆಗಳು ಬಂದು "ನಾವಿರಲು ನಿಮಗೆ ಕಷ್ಟವೇಕಾದೀತು?" ಎಂದರು. ೫೯. ಆಮೇಲೆ ನಾಗದೇವತೆಗಳು ಮೇಘರೂಪದಿಂದ ದಿಕ್ಚಕ್ರವೆಲ್ಲವನ್ನೂ ವ್ಯಾಪಿಸಿಕೊಂಡರು. ಆಕಾಶಮಂಡಲವು ಕರಗಿಹೋಗುವಂತೆಸಗಿದರು. ಸಿಡಿಲು, ಮಿಂಚು ಮತ್ತು ಮೋಡಗಳ ಧ್ವನಿಗಳಿಂದ ಭೂಮಿಯು ಕಂಪಗೊಂಡಂತೆಯೂ, ಸೋನೆಮಳೆ ಮತ್ತು ಜಡಿಮಳೆಗಳಿಂದ ಭೂತಳವೆಲ್ಲವೂ ಜಲಮಯವಾಗುವಂತೆಯೂ ಮಾಡಿದರು. ಹೀಗೆ ಚಕ್ರಿಯ ಬಲಕ್ಕೆ ಆತಂಕವನ್ನೊಡ್ಡಿದರು. ವ|| ಪ್ರಳಯಕಾಲದ ಮೋಡದಿಂದ ಸುರಿದ ಜಲವನ್ನೂ ಮೀರಿಸುವ ಆ ಸಮುದ್ರದ ಮಧ್ಯದಲ್ಲಿ ೬೦. ಅಡಿಯಲ್ಲಿ ಚರ್ಮರತ್ನವೆಂಬ ಬಟ್ಟೆಯು ಹಾಸಲ್ಪಟ್ಟಿದ್ದಿತು. ಭರತೇಶನ ಛತ್ರರತ್ನವು ಬೆಡಂಗುವಡೆದು ಒಂದೇ ರೀತಿಯಿಂದ ಹೆಣೆದುಕೊಂಡಂತೆ ಆಶ್ರಯವನ್ನಿತ್ತಿತು. ಅವುಗಳ ಮಧ್ಯೆ ಚಕ್ರರತ್ನವು ಸೊಡರಿನಂತೆ ಬೆಳಗುತ್ತಿತ್ತು. ದೊಡ್ಡಸೈನ್ಯವು ಸಮುದ್ರದಲ್ಲಿರುವ ಹಡಗಿನಲ್ಲಿ ಹೇಗೋ ಹಾಗೆ ನಿರ್ಬಾಧವಾಗಿ ಎತ್ತಲೂ ತೆರಳದೆ ನಿಂತಿತ್ತು.

ವ॥ ಅಂತು ಕೃತಕಚತುರ್ದ್ವಾರದಂತರ್ಭಾಗದೊಳ್ ಸೇನಾಧಿನಾಥರಕ್ಷಿತಮಪ್ಪ ಕಟಕಕ್ಕೆ ವಜ್ರಪ್ರಾಕಾರರೂಪನಾಗಿ ಕುರುಕುಲಾಗ್ರಗಣ್ಯನಪ್ಪ ಸೋಮಪ್ರಭನ ಮಗಂ ಜಯಕುಮಾರಂ ಸ್ಥಪತಿರತ್ನ ವಿರಚಿತಾಂಬರಗೋಚರರಥನಿಕರಂಗಳುಂ ವಜ್ರದ ಗಿಡಿಗೆಗಳುಂ[1] ಬೆರಸು ಮೇಘಮುಖಾಮರರೊಳ್ ಕಾದುವಾಗಳ್,

ತಮದೊಡ್ಡಿರ್ಪವೊಲಿರ್ಪ ಕಾರ್ಮುಗಿಲ ತಳ್ತೊಡ್ಡೆಲ್ಲಮಂ ಮುನ್ನಮ
ಗ್ನಿಮುಖಾಸ್ತ್ರಂಗಳಿನೆಚ್ಚು ತೂಳ್ದು ಬಟೆಯಂ ಮಯ್ಗಂಡು ಪುಂಖಾನುಪುಂ
ಖಮಿಸುತ್ತಿರ್ಪೆಡೆಯೊಳ್ ತೆರಳ್ಚಿದುವಗುರ್ವಿಂ ಪರ್ಬಿ ಬಂದಿರ್ದ ಮೇ
ಘಮುಖಾಹೀಂದ್ರರ ಪೊಂಕಮಂ ಜಯಕುಮಾರೋನ್ಮುಕ್ತಬಾಣಾಳಿಗಳ್ ೬೧

ಸಿಡಿಲಿಂ ಮಿಂಚಿಂ ಮೊಳಗಿಂ
ಪಡೆಗುಳ್ಕಂ ಪಡೆವಹೀಂದ್ರರೆರ್ದೆಗಿಡುವಿನೆಗಂ
ಸಿಡಿಲಂ ಮಿಂಚಂ ಮೊಳಗುಮ
ನೊಡನೆ ತೆರಳ್ಚಿದುವು ಜಯನ ಶರನಿಕರಂಗಳ್ ೬೨

ಸಿಡಿಲಂ ಸಿಡಿಲಟ್ಟುವುದೆನೆ
ಕುಡುಮಿಂಚಂ ಮಿಂಚು ತಳ್ತುದೆನೆ ಗಗನಮನೇ
ಣಡರ್ದುವೊ ಜಯನ ಶರಂಗಳ್
ಸಿಡಿಲುಂ ಮಿಂಚುಂ ಪಳಂಚಿ ಸಂಚಳಿಸುವಿನಂ ೬೩

ವ॥ ನಾಲ್ಕು ಬಾಗಿಲುಗಳುಳ್ಳ ಒಳಭಾಗದಲ್ಲಿ ಸೇನಾಪತಿಯಿಂದ ರಕ್ಷಿತವಾದ ಸೇನಾ ಶಿಬಿರಕ್ಕೆ ವಜ್ರಪ್ರಾಕಾರರೂಪನಾಗಿ ಕುರುಕುಲಶ್ರೇಷ್ಠನಾದ ಸೋಮಪ್ರಭನ ಮಗ ಜಯಕುಮಾರನು ಶಿಲ್ಪಿರತ್ನನಿಂದ ವಿನಿರ್ಮಿತವೂ ಆಕಾಶಗೋಚರವೂ ಆದ ರಥಗಳಿಂದಲೂ ವಜ್ರಮಯವಾದ ಡೇರೆಗಳಿಂದಲೂ ಕೂಡಿ ಮೇಘಮುಖಾಮರ ರೊಡನೆ ಕಾದುತ್ತಿದ್ದನು. ೬೧. ಕತ್ತಲೆಯ ರಾಶಿಯೋ ಎಂಬಂತಿರುವ ಕಾರ್ಮೋಡಗಳ ತಡೆಗಳೆಲ್ಲವನ್ನೂ ಬೆಂಕಿ ಕಾರುವ ಅಸ್ತ್ರಗಳಿಂದ ಹೊಡೆದೋಡಿಸಿದನು. ಆಮೇಲೆ ಜಯಕುಮಾರನು ಮೇಘಮುಖರನ್ನು ನೋಡಿ ಒಂದರ ಹಿಂದೆ ಒಂದೊಂದಾಗಿ ಬಾಣಗಳನ್ನೆಸೆಯುತ್ತಿರಲು, ಜಯಕುಮಾರೋನ್ಮುಕ್ತವಾದ ಬಾಣಗಳು ಭಯಂಕರವಾಗಿ ಹರಡುತ್ತಿದ್ದ ಮೇಘಮುಖರೆಂಬ ಪನ್ನಗಶ್ರೇಷ್ಠರ ಗರ್ವವನ್ನು ಅಡಗಿಸಿದುವು. ೬೨. ಸಿಡಿಲು, ಮಿಂಚು ಮತ್ತು ಆರ್ಭಟ (ಗುಡುಗು)ಗಳಿಂದ ಪ್ರಕಾಶಿತರಾಗುವ ಮೇಘಮುಖಾಮರರು ಎದೆಗೆಡುವ ಹಾಗೆ ಜಯಕುಮಾರನ ಬಾಣಗಳು ಆ ಮಿಂಚನ್ನೂ, ಸಿಡಿಲನ್ನೂ, ಮೊಳಗುಗಳನ್ನೂ ಕೂಡಲೇ ಹೋಗಲಾಡಿಸಿದುವು. ೬೩. ಸಿಡಿಲು ಸಿಡಿಲನ್ನು ಅಟ್ಟಿತೋ, ಕುಡಿಮಿಂಚು ಕುಡಿಮಿಂಚನ್ನು ಅಟ್ಟಿತೋ ಎಂಬಂತೆ ಸಿಡಿಲನ್ನೂ ಮಿಂಚನ್ನೂ ಸಂಘಟ್ಟಿಸಿ ಚಲಿಸುವಂತೆ ಜಯಕುಮಾರನ ಶರಗಳು ಆಕಾಶವನ್ನೇರಿದುವು.

---

೧ ಗಿಡಿಗೆ = ಕೀಟಿಕಾ, ಡೇರೆ (ಪ್ರಾ. ಪು. ೩.೨-೬೫)

ಅಂಬರದಿಂ ಸೂಸುವ ಧಾ
ರಾಂಬುಗಳುಮನೊಡನೆ ಸುರಿವ ಪಲವಂದದ ಕೂ
ರಂಬುಗಳುಮನೊಡನಳುರ್ದುವ
ದೇಂ ಬಿಸಿಯವೊ ಜಯಕುಮಾರನನಲಶರಂಗಳ್ ೬೪

ತಳದಳಿಪ ಮುಗಿಲ್ಗಳ್ಗಳ
ಕುಳಮಪ್ಪಿನಮಳುರ್ದು ಜಯನ ಶರತತಿ ಕೊಳೆ ಜ
ಲ್ಲಳಿಯ ಮಱೆವೊಕ್ಕವೊಲ್ ಕಳ
ಕುಳಮಾದರ್ ನಾಗರಾಜರಪಗತತೇಜರ್ ೬೫

ಕಡುಕೆಯ್ದಾನಿರೆ ಚಕ್ರವರ್ತಿವರೆಗಂ ಮೇಘಾಮರರ್ ಬರ್ಪರೆಂ
ದೊಡಿದರ್ಕಂ ಮಿಗಿಲುಂಟೆ ಬನ್ನಮೆನುತುಂ ಮೇಘೋತ್ಕರಧ್ವಾನದಿಂ
ಕಡುಕೆಯ್ದಾರ್ದು ಜಯಂ ಭುಜಾರ್ಜಿತಜಯಂ ಪೊಕ್ಕೆಚ್ಚನಸ್ತ್ರಾನಳಂ
ಕಿಡಿಯಿಂ ಕೆಂಡದಿನೇಂ ಪೊರಳ್ಚಿದುದೊ ತನ್ಮೇಘಾಮರಾನೀಕಮಂ ೬೬

ವ|| ಆಗಳಾ ನೆಗಟ್ದ ಸಮರಕಳಕಳಮಂ ಕೇಳ್ದಿದೇನೆಂದು ಭರತೇಶ್ವರಚಕ್ರವರ್ತಿ ಖಡ್ಗರತ್ನಕ್ಕೆ ಕೈಯಂ ನೀಡಿದಾಗಳ್,

ಗಣಬದ್ಧಾಮರಹೂಂಕೃತಂ ಜಯಕುಮಾರೋನ್ಮುಕ್ತಮಾನೋಗ್ರಮಾ
ರ್ಗಣಮಾ ವೀರನಿನಾದಸಿಂಹನಿನದಂ ತಮ್ಮಂ ಪಳಂಚಲ್ಕೆ ತ
ತ್ಘಣಿವ್ಯಂದಂ ಮಣಿದೋಡೆ ಮಾಣದೆ ಚಲಾತಾವರ್ತರಳ್ಕುತ್ತೆ ಕೀ
ಟ್ಕಣೆದಿನ್ನೆಂಬುದನೆಂಬೆವೆಂದೆಱಗಿದರ್ ಚಕ್ರೇಶಪಾದಾಬ್ಜದೊಳ್ ೬೭

೬೪. ಆಕಾಶದಿಂದ ಸುರಿಸುವ ಧಾರಾಕಾರದ ಅಂಬು (ನೀರು)ಗಳನ್ನೂ, ಒಡನೆ ಸುರಿವ ಹಲವು ರೀತಿಯ ಹರಿತವಾದ ಅಂಬುಗಳನ್ನೂ (ಬಾಣಗಳನ್ನೂ) ಜಯಕುಮಾರನ ಅಗ್ನಿಬಾಣಗಳು ಅಂಜಿಸಿದುವು. ಅದೆಷ್ಟು ಬಿಸಿಯಾದುವೋ ಅವು! ೬೫. (ಆಕಾಶದಲ್ಲಿ) ಮುಸುಕಿ (ಭರತೇಶನ ಪಡೆಯನ್ನು) ನಾಶಮಾಡಲು ಉದ್ಯುಕ್ತವಾದ ಮೋಡಗಳು ಜಯಕುಮಾರನ ಶರತತಿಗಳಿಂದ ಚೂರು ಚೂರಾಗಲು, ನಾಗದೇವತೆಗಳು ತೂತಿರುವ ಜಲ್ಲರಿಯ ಹಿಂದೆ ನಿಂತವರಂತೆ ಆಗಿ ತೇಜೋಹೀನರಾದರು. ೬೬. "ನಾನು ಯುದ್ಧ ಮಾಡಲು ಉತ್ಸಾಹದಿಂದಿರಲು ಈ ಮೇಘಾಮರರು ನನ್ನನ್ನು ಬಿಟ್ಟು ಚಕ್ರವರ್ತಿಯಲ್ಲಿಗೆ ಯುದ್ಧಕ್ಕಾಗಿ ನುಗ್ಗುತ್ತಿದ್ದಾರೆ. ಎಂದರೆ, ಇದಕ್ಕೂ ಮಿಗಿಲಾದ ಅಪಮಾನವೇನುಂಟೆನಗೆ?" ಎನ್ನುತ್ತಾ ತನ್ನ ತೋಳ್ಬಲದಿಂದ ಗೆದ್ದ ಜಯಕುಮಾರನು ಮೇಘಗಳಂತೆ ಅಬ್ಬರಿಸುತ್ತ ನುಗ್ಗಿ ಬಾಣಗಳನ್ನು ಬಿಟ್ಟನು. ಆ ಬಾಣಾಗ್ನಿಯು ಕಿಡಿಗೆದರಿ ಕೆಂಡವನ್ನುಗುಳಿ ಮೇಘಾಮರಾನೀಕವನ್ನು ಹೊರಳಾಡಿಸಿತು. ವ|| ಆಗ ಯುದ್ಧದ ಕೋಲಾಹಲವನ್ನು ಕೇಳಿ ಇದೇನೆನ್ನುತ್ತಾ ಭರತೇಶ್ವರನು ತನ್ನ ಖಡ್ಗರತ್ನಕ್ಕೆ ಕೈಚಾಚಿದನು. ಆಗ, ೬೭. ಗಣಬದ್ಧಾಮರರ ಹೂಂಕೃತಿಯೂ ಜಯಕುಮಾರೋನ್ಮುಕ್ತವಾದ ಉಗ್ರಬಾಣಗಳೂ ಸಿಂಹಧ್ವನಿಯಂತಿರುವ ವೀರರ ಸಿಂಹನಾದಗಳೂ ಮೇಘಾಮರರನ್ನು ಸಂಘಟ್ಟಿಸಿದುವು.

ವ|| ಆಗಳ್ ಜಯನ ಭುಜವಿಜಯಸೂಚಕಮಾಗೆ ಮೇಘನಾದಸಮಾನಮಾದ ಸಿಂಹನಾದಕ್ಕೆ ಚಕ್ರವರ್ತಿ ಮೆಚ್ಚಿ ಮೇಘಸ್ವರನಾಮಮಂ ವೀರಾಗ್ರಗಣ್ಯಪದವಿಯಂ ದಯೆಗೆಯ್ದು ಚಿಲಾತಾವರ್ತರ ಕುಲಧನಮುಮಂ ಯಶೋಧನಮುಮಂ ಕೈಕೊಂಡು ಅವರಂ ವಿಧೇಯರಂ ಮಾಡಿ ಸಿಂಧುನದೀತೀರಂ ಬಿಡಿದು ಪೋಗಿ ಹಿಮವತ್ಪರ್ವತದ ಸಿಂಧುಪ್ರಪಾತಮನೆಯ್ದಿ ತನ್ನ ಬರವನಱಿದಿದಿರ್ವಂದ ಸಿಂಧುದೇವಿಯಿಂದಂ ಸಿಂಧುಜಳಂಗಳೊಳಭಿಷಿಕ್ತನಾಗಿ ಭದ್ರಾಸನಮಂ ಪಡೆದು ಸಿಂಧುದೇವಿಯನಿರಿಸಿ ಕತಿಪಯಪ್ರಯಾಣಂಗಳಿಂ ಹಿಮವನ್ಮಧ್ಯಕೂಟಾಭಿಮುಖಪ್ರದೇಶದೊಳ್ ಬೀಡಂ ಬಿಟ್ಟು ನಿಯಮಸ್ಥನಾಗಿ ಹಿಮವತ್ಕುಮಾರನುಮಂ ವಿಜಯಾರ್ಧಕುಮಾರನಂದದೊಳೆ ಸಾಧಿಸುವುದಮಾತನಂದೋಲಗಿಸಿದ ಗೋಶೀರ್ಷ ಚಂದನದಿವ್ಯೌಷಧಮಾಳಾದಿ ತದ್ಗಿರಿಸಮುದ್ಭೂತಸಾರವಸ್ತುಗಳಂ ಕೈಕೊಂಡು ಆಜ್ಞಾವಿಧೇಯರಂ ಮಾಡಿ ಸಿಂಧುನದೀತೀರಂಬಿಡಿದು ಪೋಗಿ ಹಿಮವತ್ಪರ್ವತಮಂ ನೋಡಿ,

ಇದು ಹೈಮಾದ್ರೀಂದ್ರಮಾಱುಂ ಕುಲಗಿರಿಗೆ ಮೊದಲ್ ಮೇರುಶೈಲೇಂದ್ರಮಂ ಮೆ
ಚ್ಚದಿದಾಕಾಶಂಬರಂ ಪರ್ಬಿದ ಮಣಿಮಯಕೂಟಂಗಳಿಂದಿಲ್ಲಿ ಮಾದ್ಯ
ದ್ರದನೀಂದ್ರಸ್ಥೂಳದಂತಾಹತಿವಿದಳಿತಗೋಶೀರ್ಷಸಾರದ್ರವಾಮೋ
ದದಿನೆತ್ತಂ ಗಂಧವಾಹಂ ಮಗಮಗಿಸೆ ಬೆಡಂಗೀ ನಗೇಂದ್ರೋಪಕಂಠಂ ೬೮

ತತ್ಫಲವಾಗಿ ನಾಗದೇವತೆಗಳು ಮಣಿದೋಡಿದರು. ಚಿಲಾತಾವರ್ತರೂ ಹೆದರಿ "ಇನ್ನು ಮೇಲೆ ನೀನು ಹೇಳಿದ್ದನ್ನೇ ನಾವು ಹೇಳುವೆವು!" ಎನ್ನುತ್ತ ಭರತೇಶನಿಗೆ ವಂದಿಸಿದರು. ವ|| ಆಗ ಜಯಕುಮಾರನ ಭುಜವಿಜಯಸೂಚಕವಾಗಿ ಗುಡುಗಿನ ಶಬ್ದಕ್ಕೆ ಸಾಟಿಯೆನಿಸಿದ ಸಿಂಹಗರ್ಜನೆಗೆ ಚಕ್ರವರ್ತಿಯು ಮೆಚ್ಚಿ ಅವನಿಗೆ "ಮೇಘಸ್ವರ"ನೆಂಬ ಹೆಸರನ್ನೂ, ವೀರಾಗ್ರಗಣ್ಯಪದವಿಯನ್ನೂ ಅನುಗ್ರಹಿಸಿದನು. ಚಿಲಾತಾವರ್ತರ ಕುಲಧನವನ್ನೂ ಕೀರ್ತಿಧನವನ್ನೂ ವಶಪಡಿಸಿಕೊಂಡು ಅವರನ್ನು ವಶವರ್ತಿಗಳನ್ನಾಗಿ ಮಾಡಿಕೊಂಡನು. ಸಿಂಧೂನದಿಯ ದಡದುದ್ದಕ್ಕೂ ನಡೆದು ಹಿಮವತ್ಪರ್ವತದಲ್ಲಿನ ಸಿಂಧುಪ್ರಪಾತವನ್ನು ಸೇರಿದನು. ಅಷ್ಟರಲ್ಲಿ ತನ್ನ ಆಗಮನವನ್ನು ನಿರೀಕ್ಷಿಸಿಕೊಂಡು ಇದಿರು ಬಂದ ಸಿಂಧುದೇವಿ ಯಿಂದ ಸಿಂಧುಜಲದಿಂದ ಅಭಿಷಿಕ್ತನಾಗಿ ಭದ್ರಾಸನವನ್ನು ಪಡೆದು ಸಿಂಧುದೇವಿಯನ್ನು ಬೀಳ್ಕೊಂಡನು. ಬಳಿಕ ಕೆಲವು ಪ್ರಯಾಣಗಳಿಂದ ಹಿಮವತ್ಪ್ರದೇಶದಲ್ಲಿನ ಮಧ್ಯಮ ಶಿಖರಕ್ಕಭಿಮುಖವಾದೆಡೆಯಲ್ಲಿ ಬೀಡನ್ನು ಬಿಟ್ಟು ನಿಯಮಸ್ಥನಾದನು, ಬಳಿಕ ವಿಜಯಾರ್ಧ ಕುಮಾರನಂತೆಯೇ ಹಿಮವತ್ಕುಮಾರನನ್ನೂ ವಶಪಡಿಸಿಕೊಂಡು, ಆತನು ತಂದೊಪ್ಪಿಸಿದ ಗೋಶೀರ್ಷ, ಚಂದನ, ಮಹೌಷಧಿ ಮತ್ತು ತದ್ಗಿರಿಯಲ್ಲೊಗೆದ ಮತ್ತಿತರ ಸಾರವಸ್ತುಗಳನ್ನೂ ಪರಿಗ್ರಹಿಸಿ ಅವನನ್ನು ಆಜ್ಞಾವಿಧೇಯನನ್ನಾಗಿ ಮಾಡಿಕೊಂಡನು. ಹಿಮವತ್ಪರ್ವತವನ್ನು ನೋಡುತ್ತ ೬೮. "ಇದು ಹಿಮಾಚಲ. ಇದು ಆರು ಕುಲಗಿರಿಗಳಿಗೆ ಮೊದಲಿನದು. ಆಕಾಶದವರೆಗೆ ಹರಡಿದ ಮಣಿಮಯವಾದ ಶಿಖರಗಳಿಂದ ಇದ ಮೇರುವನ್ನೂ ಮೆಚ್ಚದು. ಮತ್ತಗಜೇಂದ್ರಗಳ ದಪ್ಪವಾದ ದಂತಗಳ ಹೊಡೆತದಿಂದುದುರಿದ ಗೋಶೀರ್ಷ[1] ಸಾರದ್ರವಗಳ ಸುವಾಸನೆಯುಳ್ಳ ಗಾಳಿಯು ಬೀಸುತ್ತದೆ. ಅದರಿಂದ ಮಗಮಗಿಸುವ

1 ಸುಗಂಧಿ ವೃಕ್ಷವಿಶೇಷ.

ಇದಱಂ ಮಧ್ಯದ ಪದ್ಮೆಯೆಂಬ ಕೊಳದಿಂದಂ ಗಂಗೆಯುಂ ಸಿಂಧುವುಂ
ಮೊದಲೊಳ್ ಪುಟ್ಟಿ ನೆಗಳ್ತೆವೆತ್ತುವು ನೆಲಕ್ಕೆಮ್ಮಾಳ್ವ ಷಟ್ಖಂಡಮಿಂ
ತಿದಱಂದಿತ್ತೆಯೆ ಮೇಲೆ ನೋಡಿಮೆಮಗೀ ಶೈಲೇಂದ್ರಮೆಂದಂದು ತೋ
ಱದನಾ ತನ್ನೊಡವರ್ಪ ಭೂಪನಿಕರಕ್ಕುತ್ತುಂಗಹೈಮಾದ್ರಿಯಂ ೬೯

ವ|| ಅಂತು ತದ್ಗಿರೀಂದ್ರಮಧ್ಯಮಕೂಟದಿಂದಂ ಸಯ್ತು ತೆಂಕಮೊಗದೆ ಬಂದು ವೃಷಭಾಚಳಮಂ ಕಂಡಂ, ಅದು ಯೋಜನಶತಮೂಲವಿಸ್ತೃತಮುಂ ತಾವತ್ಪ್ರಮಾಣೋತ್ಸೇಧಮುಂ ತದರ್ಧಪ್ರಮಿತೋಪರಿತಳವಿಸ್ತಾರಮುಂ ಪಂಚವಿಂಶತಿಶತಯೋಜನಾವಗಾಹಮುಮಾಗಿ ಸಂದುತ್ತರಭರತ ಮಧ್ಯಮಖಂಡದ ನಟ್ಟನಡುವಣೆಡೆಯೊಳ್ ಅತಿಕ್ರಾಂತಾನೇಕಚಕ್ರವರ್ತಿಗಳ ವಿಶದಯಶಃಪುಂಜಮುಮಂ ವಿಜಯಲಕ್ಷ್ಮೀಮುಖವಿಲೋಕನಮಂಗಳಮಣಿದರ್ಪಣಶ್ರೀಯುಮಂ ತನ್ನೊಳಳವಡಿಸಿ,

ಕುವಲಯಪಾಂಡುರಂ ಕನಕಪಂಕಜಷಂಡವಿರಾಜಿ ಕೇಕಿತಾಂ
ಡವರಮಣೀಯಕಲ್ಪಲತಿಕಾವನಮುನ್ಮದಭೃಂಗಮಾಳಿಕಾ
ರವಮುಖರೀಕೃತಾಮ್ರವನಶೋಭಿತಮಾಶ್ರಿತದಿವ್ಯಸೌಂದರೀ
ನಿವಹನಿಕೀರ್ಣಚಂಪಕವನಂ ಕರಮೊಪ್ಪುಗುಮಾ ಮಹೀಧರಂ ೭೦

ವ|| ಆ ವೃಷಭಾದ್ರಿಯ ಮೇಖಳಾಭಿತ್ತಿಯೊಳ್ ಆತ್ಮೀಯವಿಶ್ವವಿಶ್ವಂಭರಾವಿಜಯಪ್ರಶಸ್ತಿಯ ನಟ್ಟೆಯೊಳ್ ಬರೆಯಿಸುವೆನೆಂದು ಪೋಗಿ ನೋಡುವನ್ನೆಗಂ,

ಈ ಬೆಟ್ಟದ ತಪ್ಪಲುಪ್ರದೇಶವು ಬೆಡಗಿನಿಂದ ಚೆಲ್ವಾಗಿದೆ. ೬೯. ಇದರ ಮಧ್ಯದಲ್ಲಿರುವ ಪದ್ಮೆಯೆಂಬ ಕೊಳದಿಂದ ಗಂಗೆಯೂ ಸಿಂಧುವೂ ಹುಟ್ಟಿ ಪ್ರಸಿದ್ಧಿಗೊಂಡವು. ನಮ್ಮ ಆಳ್ವಿಕೆಗೊಳಪಟ್ಟ ಷಟ್ಖಂಡಮಂಡಲವು ಇದರಿಂದೀಚೆಗೇ ಸರಿ. ನಮಗೆ ಈ ಶೈಲೇಂದ್ರನೇ ಗಡಿ ನೋಡಿರಿ" ಎಂದು ತನ್ನೊಡನೆ ಬಂದ ರಾಜರಿಗೆ ಉನ್ನತಹಿಮಾಚಲವನ್ನು ತೋರಿಸಿದನು. ವ|| ಅಂತು ಹೈಮಾಚಲದ ಮಧ್ಯಮಶಿಖರದಿಂದ ನೇರವಾಗಿ ತೆಂಕಮೊಗದಿಂದ ಬಂದು ವೃಷಭಾಚಲವನ್ನು ಕಂಡನು. ಅದರ ಮೂಲ ವಿಸ್ತಾರವು ಒಂದುನೂರು ಯೋಜನ. ಅದರ ಎತ್ತರವೂ ಅಷ್ಟೇ. ಅದರ ಮೇಲ್ಭಾಗದ ತಳದ ವಿಸ್ತಾರವು ಐವತ್ತುಯೋಜನ. ಅದರ ಹರಹು ಒಂದುನೂರ ಇಪ್ಪತ್ತೈದು ಯೋಜನದಷ್ಟು. ಅದರ ಉತ್ತರಭರತದ ಮಧ್ಯಮಖಂಡದ ಮಧ್ಯಭಾಗದೆಡೆಯಲ್ಲಿ ಅಳಿದ ಹೋದ ಚಕ್ರವರ್ತಿಗಳ ಶುಭ್ರವಾದ ಕೀರ್ತಿರಾಶಿಯನ್ನೂ ವಿಜಯಲಕ್ಷ್ಮಿಯ ಮುಖದರ್ಶನಾರ್ಥವಾದ ಮಂಗಳದರ್ಪಣ (ಕನ್ನಡಿ)ದ ಶ್ರೀಯನ್ನೂ ತನ್ನಲ್ಲಿ ಅಳವಡಿಸಿಕೊಂಡು ೭೦. ಆ ಪರ್ವತವು ಅತಿಶಯವಾಗಿ ಒಪ್ಪುತ್ತಿದೆ. ಅದು ಬೆಳ್ದಾವರೆಯಂತೆ ಪಾಂಡುರವಾಗಿದೆ. ಚಿನ್ನದ ತಾವರೆಗಳ ಸಮೂಹದಿಂದ ವಿರಾಜಿಸುತ್ತಿದೆ. ನವಿಲುಗಳ ಕುಣಿತದಿಂದ ರಮಣೀಯವಾದ ಕಲ್ಪಲತೆಗಳಿಂದ ಕೂಡಿದೆ. ಮತ್ತವಾದ ದುಂಬಿಗಳ ಝೇಂಕಾರಗಳಿಂದ ಶಬ್ದಗೊಳಿಸಲ್ಪಟ್ಟ ಮಾವಿನ ತೋಪುಗಳಿಂದ ಶೋಭಿತವಾಗಿದೆ. ದಿವ್ಯಸುಂದರೀಜನರಿಂದ ಆಶ್ರಯಿಸಲ್ಪಟ್ಟ ಚಂಪಕವನವುಳ್ಳದಾಗಿದೆ. ವ|| ಆ ವೃಷಭಾಚಲದ ಮಧ್ಯಭಾಗದ ಗೋಡೆಗಳ ಮೇಲೆ ಭರತೇಶನು ತನ್ನೆಲ್ಲ ಭೂದಿಗ್ವಿಜಯದ ಪ್ರಶಸ್ತಿಯನ್ನು ಪ್ರೀತಿಯಿಂದ ಬರೆಯಿಸುವೆನೆಂದು

ಅದಱೊಳನೇಕಕಲ್ಪಶತಕೋಟಿಗಳೊಳ್ ಸಲೆ ಸಂದ ಚಕ್ರಿವೃಂ
ದದ ಚಲದಾಯದಾಯತಿಯ ಬೀರದ ಚಾಗದ ಮಾತುಗಳ್ ಪೊದ
ಱೊದವಿರೆ ತತ್ಪ್ರಶಸ್ತಿಗಳೊಳಂತವನೊಯ್ಯನೆ ನೋಡಿ ನೋಡಿ ಸೋ
ರ್ದುದು ಕೊಳಗೊಂಡ ಗರ್ವರಸಮಾ ಭರತೇಶ್ವರಚಕ್ರವರ್ತಿಯಾ ೭೧

ವ॥ ಅಂತು ಗಳಿತಗರ್ವನಾಗಿ ಸಿಗ್ಗಾಗಿ ಪೂರ್ವಾವನಿಪಾಳಪ್ರಶಸ್ತಿಯೊಳೊಂದೊಂದಂ ದಂಡರತ್ನದಿಂ ಸೀಂಟಿ ಕಳೆದು ನಿಜಪ್ರಶಸ್ತಿಗೆಡೆಮಾಡಿ,

ಸ್ವಸ್ತಿಸಮಸ್ತನರೇಶ್ವರ
ಮಸ್ತಕವಿನ್ಯಸ್ತಶಾಸನಂ ಸಕಲಜಗ
ದ್ವಿಸ್ತಾರಿತಯಶನನ್ವಯ
ವಿಸ್ತಾರಕನಾದಿದೇವನಗ್ರತನೂಜಂ ೭೨

ಭುವನವಿಶೇಷಕನಿಕ್ಷ್ವಾ
ಕುವಂಶಗಗನೇಂದು ಚಕ್ರರತ್ನಾಧೀಶಂ
ನವನಿಧಿವಲ್ಲಭನಾನತ
ದಿವಿಜಗಣಂ ನೆಗೞ್ದ ನಾಭಿರಾಜನ ಮೊಮ್ಮಂ ೭೩

ಆವನ ದಿಗ್ವಿಜಯದೊಳೈ
ರಾವತಗಜನಿಭಗಜಂಗಳಿಂ ಭುವನತಳಂ
ತೀವಿದುದಾವನ ಸೈನ್ಯದೊ
ಳಾವರಿಸಿದ ಧೂಳಿ ಪೂೞ್ದುದಂಭೋನಿಧಿಯಂ ೭೪

ಹೋಗಿ ನೋಡಿದನು. ಆಗ, ೭೧. ಅಲ್ಲಿ ಅನೇಕ ಕಲ್ಪಶತಕೋಟಿಗಳಲ್ಲಿ ಪ್ರಖ್ಯಾತರಾದ ಚಕ್ರಿಸಮೂಹದ ಛಲ, ಆಯ, ಆಯತಿ, ಬೀರ ಮತ್ತು ಚಾಗಗಳ ಮಾತುಗಳು ವಿಪುಲವಾಗಿ ಬರೆಯಲ್ಪಟ್ಟಿದ್ದುವು. ಅವುಗಳನ್ನು ನೋಡಿ ನೋಡಿ ಭರತೇಶ್ವರನಲ್ಲಿ ನೆಲಸಿದ ಗರ್ವರಸವು ಸೋರಿಹೋಯಿತು! ವ॥ ಹೀಗೆ ಅಹಂಕಾರವಿರಹಿತನಾಗಿ ಲಜ್ಜೆಗೊಂಡು ಹಿಂದಿನ ರಾಜರ ಪ್ರಶಸ್ತಿಗಳಲ್ಲೊಂದೊಂದನ್ನೂ ತನ್ನ ದಂಡರತ್ನದಿಂದ ಒರೆಸಿಹಾಕಿ ತನ್ನ ಪ್ರಶಸ್ತಿಗಳನ್ನು ಬರೆಯಲು ಎಡೆಮಾಡಿ ೭೨. "ಸ್ವಸ್ತಿ ಆದಿದೇವನ ಅಗ್ರತನೂಜನಾದ ಭರತೇಶ್ವರನು ಎಲ್ಲ ರಾಜರ ತಲೆಯ ಮೇಲೆ ತನ್ನ ಆಜ್ಞೆಗಳನ್ನು ಹೊರಿಸಿದವನು. ಎಲ್ಲ ಜಗತ್ತುಗಳಲ್ಲಿಯೂ ತನ್ನ ಕೀರ್ತಿಯನ್ನು ಹರಡಿದವನು. ತನ್ನ ವಂಶವನ್ನು ಮುಂದುವರಿಸಿದನು. ೭೩. "ಅವನು ಪ್ರಪಂಚದಲ್ಲಿ ತಿಲಕಪ್ರಾಯನು. ಇಕ್ಷ್ವಾಕುವಂಶವೆಂಬ ಆಗಸದ ಚಂದ್ರ, ಚಕ್ರರತ್ನಕ್ಕೊಡೆಯ, ನವನಿಧಿಗಳಿಗಾಶ್ರಯ, ದಿವಿಜರಿಂದ ನಮಸ್ಕೃತನು, ನಾಭಿರಾಜನ ಮೊಮ್ಮಗ, ೭೪. ಯಾವನ ದಿಗ್ವಿಜಯದ ಕಾಲದಲ್ಲಿ ಐರಾವತಕ್ಕೆಣೆಯಾದ ಗಜಗಳಿಂದ ಭೂಮಂಡಲವು ತುಂಬಿದ್ದಿತೋ, ಯಾವನ ಸೈನ್ಯಧೂಳಿಗಳಿಂದ ಸಮುದ್ರವು ಹೂತು ಹೋಯಿತೋ,

ವೇಳಾವನಂಗಳುಂ ಕು
ತ್ಕೀಳಂಗಳುಮಾವ ನೃಪನ ಪಡೆ ನಡೆವೆಡೆ ನಿ
ರ್ಮೂಳಂಗಳಾದುವಾವನ
ತೋಳಿಂ ನಿಮಿರ್ದತ್ತು ಜಳಧಿವರಮವನಿತಳಂ ೭೫

ದೇವಾಂಗನೆಯರ್ ಪಾಡುವ
ರಾವನ ಜಸಮಂ ಕುಳಾಚಳಾವಳಿಯೊಳ್ ಶೌ
ರ್ಯಾವಷ್ಟಂಭದಿನಾಳ್ದವ
ನಾವಂ ಷಟ್ಖಂಡಮಂಡಿತಕ್ಷಿತಿತಳಮಂ ೭೬

ಆತಂ ಭರತೇಶ್ವರನಿಂ
ತೀ ತೆಱದಿಂ ನೆಗಟ್ದಿ ತನ್ನ ಕೀರ್ತಿಯನೀ ವಿ
ಖ್ಯಾತವೃಷಭಾದ್ರಿಯೊಳ್ ಸುರ
ಗೀತಯಶಂ ನಿಱಿಸಿದಂ ನೆಲಂ ನಿಲ್ವಿನೆಗಂ ೭೭

ವ|| ಅಂತಾತ್ಮೀಯವಿಜಯಪ್ರಶಸ್ತಿಯನಾ ವೃಷಭಗಿರಿಯೊಳಾ ವೃಷಭೇಶ್ವರನಂದನಂ ಕಾಕಿಣೀರತ್ನದಿಂ ಬರೆಯಿಸಿ ಬಟೆಕ್ಕದರ್ಕೀಶಾನದೊಳಿರ್ದ ಗಂಗಾಕೂಟಕ್ಕಭಿಮುಖನಾಗಿ ತತ್ಸಮೀಪದೊಳ್ ಆತ್ಮೀಯಮಂಗಳಜಳಂಗಳಿಂದಭಿಷೇಕಂಗೆಯ್ದು ಅನೇಕಾಶೀರ್ವಾದಪುರಸ್ಸರಂ ಸಿಂಹಾಸನಮಂ ಕೊಟ್ಟ ಗಂಗಾದೇವಿಯಂ ವಿಸರ್ಜಿಸಿ ಗಂಗಾತಟಂಬಿಡಿದು, ಚತುರಂಗಚಮೂಚಕ್ರಪಾಂಸುಪಟಲದಿಂದಂ ದಿಙ್ಮುಖಂಗಳುಂ ವಿರೋಧಿನರಪಾಳಪ್ರಿಯಸಖೀಮುಖಂಗಳುಂ ವಿಚ್ಛಾಯಂಗಳಾಗೆಯುಂ, ಮಹಾವಾಹಿನೀ ವಾರಣೇಂದ್ರಘಟಾನ್ಯೋನ್ಯಸಂಘಟ್ಟಘಂಟಾಟಂಕಾರಾಸ್ಫಾಳನದಿಂದಂ ಉದಗ್ರಗಿರಿಗುಹಾಂತರಂಗಳುಂ

೭೫. ವೇಲಾವನಗಳೂ ಪರ್ವತಗಳೂ ಯಾವ ನೃಪಾಲನ ಸೈನ್ಯವು ನಡೆದರೆ ನಿರ್ಮೂಲವಾಗುತ್ತಿದ್ದುವೊ; ಯಾವನ ತೋಳುಗಳಿಂದ ಸಮುದ್ರದವರೆಗೆ ರಾಜ್ಯವು ವಿಸ್ತರಿಸಿತೋ, ೭೬. ಯಾವನ ಕೀರ್ತಿಯನ್ನು ದೇವಾಂಗನೆಯರು ಕುಲಗಿರಿಗಳಲ್ಲಿ ಹಾಡುವರೋ, ಯಾವನು ಷಟ್ಖಂಡಮಂಡಿತವಾದ ಭೂಮಂಡಲವನ್ನು ಶೌರ್ಯಾತಿರೇಕದಿಂದ ಆಳಿದನೋ ೭೭. ಅವನೇ ಭರತೇಶ. ಹೀಗೆ ಪ್ರಸಿದ್ಧವಾದ ತನ್ನ ಕೀರ್ತಿಯನ್ನು ಆತನು ಈ ವೃಷಭಾದ್ರಿಯಲ್ಲಿ ನೆಲವು ನಿಲ್ಲುವನಕ ನೆಲೆಗೊಳಿಸಿದನು" ವ|| ಎಂದು ತನ್ನ ವಿಜಯಪ್ರಶಸ್ತಿಯನ್ನು ವೃಷಭಪರ್ವತದಲ್ಲಿ ವೃಷಭಪುತ್ರನಾದ ಭರತೇಶನು ಕಾಕಿಣೀರತ್ನದಿಂದ ಬರೆಯಿಸಿದನು. ತರುವಾಯ ಅದಕ್ಕೆ ಈಶಾನ್ಯದಿಕ್ಕಿನಲ್ಲಿರುವ ಗಂಗಾಕೂಟಕ್ಕೆ ಎದುರಾಗಿ ಪ್ರಯಾಣ ಬೆಳಸಿದನು. ಅಲ್ಲಿ ತನ್ನ ಪವಿತ್ರವಾದ ನೀರುಗಳಿಂದ ಅಭಿಷೇಕ ಮಾಡಿ ಅನೇಕಾಶೀರ್ವಾದಗಳೊಡನೆ ಸಿಂಹಾಸನವನ್ನಿತ್ತು ಗೌರವಿಸಿದ ಗಂಗಾ ದೇವಿಯಿಂದ ಬೀಳ್ಕೊಂಡನು. ಬಳಿಕ ಗಂಗಾತಟವನ್ನು ಹಿಡಿದು ತನ್ನ ಚತುರಂಗ ಸೈನ್ಯಸಮೂಹದ ಧೂಳಿಯಿಂದ ದಿಕ್ಕುಗಳ ಮುಖಗಳನ್ನೂ ಶತ್ರುರಾಜವನಿತೆಯರ ಮುಖಗಳನ್ನು ಆಚ್ಛಾದಿಸಿ ಕಾಂತಿವಿಹೀನವನ್ನಾಗಿಸಿದನು. ಮಹಾಸೈನ್ಯದ ಬೃಹದ್ಗಜಗಳ ಸಂಘಟ್ಟನದಿಂದಾದ ಗಂಟೆಗಳ ಟಂಕಾರಗಳ ಹೊಡೆತದಿಂದ ಪರ್ವತಗುಹಾಂತರಗಳೂ,

**ಉದಗ್ರವಿಕ್ರಮಾರಾತಿಕರ್ಣಾಂತರಂಗಳುಂ ವಿಕೀರ್ಣಂಗಳಾಗೆಯುಂ, ಅಪರಿಮಿತಸ್ತಂಬೇರಮಾನೀಕಶೀಕರ ನೀಹಾರವರ್ಷದಿಂದಂ ಉಷ್ಣಾಂಶುಪ್ರತಾಪಮುಂ ಊರ್ಜಿತಾರಾತಿರಾಜಪ್ರತಾಪಮುಂ ಅವಿಧೃತೋದ್ರೇಕ ಮಾಗೆಯುಂ, ಸಂಚಾರಿಮೇಚಕಾಚಳಚಕ್ರವಾಳರುಚಿಹರಕರಟಿಘಟಾಪಂಚರಾಗಕೇತನಚಂಚಳಾಂಚಳ ನಿಚಯದಿಂದಂ ಅಂಭೋದಿಪಥಮುಂ ಅತಿಚಕಿತವಿದ್ವಿಷ್ಟದೃಷ್ಟಿಪಥಮುಂ ನಿರವಕಾಶಮಾಗೆಯುಂ, ಉದ್ವೃತ್ತಮತ್ತವಾರಣೇಂದ್ರವಿಷಾಣಕುಲಿಶದಂಡಹತಿಯಿಂ ವನದುರ್ಗಭಂಗಮುಂ ವಿಪಕ್ಷಪಾರ್ಥಿವ ಮನೋರಥಭಂಗಮುಂ ಸಿದ್ಧಮಾಗೆಯುಂ, ದಕ್ಷಿಣಾಭಿಮುಖನಾಗಿ ನಿತ್ಯಪ್ರಯಾಣಂಗಳಿಂ ಬಂದು,**

**ಇಭಕುಂಭೋದ್ಭೂತಮುಕ್ತಾಫಲನಿಕರಮುಮಾನಂದದಿಂ ತಂದು ಕಂಡಿ**
**ರ್ದಭಯಾರ್ಥಿವ್ಯಾಧರಾಜಪ್ರತತಿಗಭಯಮಂ ಕೊಟ್ಟು ಕಲ್ಪಾಂತಕಾಲ**
**ಕ್ಷುಭಿತಾಂಭೋರಾಶಿಶಂಕಾವಹಬಳನಿಕರಂ ರಾಜತಾದ್ರೀಂದ್ರಶೋಭಾ**
**ವಿಭವಕ್ಕಟ್ಕಿರ್ತು ತತ್ಪರ್ವತನಿಕಟವನೋಪಾಂತದೊಳ್ ಬೀಡುವಿಟ್ಟಂ** ೭೮

**ವ|| ಅಂತು ವಿಜಯಾರ್ಧಾಚಳಕಾಂಡಕಪ್ರಪಾತಗುಹಾಸಮೀಪದೊಳ್ ಬೀಡಂ ಬಿಟ್ಟು ಮುನ್ನಿನ ಮಾಟ್ಕೆಯೊಳೆ ವರೂಥಿನೀಪತಿಯಂ ಬೆಸಸಿದೊಡೆ ಆತನಾ ಗುಹಾದ್ವಾರಮಂ ಪೂರ್ವೋಕ್ತಕ್ರಮ ದೊಳೆ ತೆಱೆದದಱ ಬೆಂಕೆಯಾಱುವನ್ನೆಗಂ ಮ್ಲೇಚ್ಛಖಂಡಮುಮಂ ಮೂಡಣ ದೆಸೆಯೊಳಿರ್ದುವುಮಂ ಬಾಯ್ಕೇಳಿಸಲ್ಪೋಗೆ ದಕ್ಷಿಣೋತ್ತರಶ್ರೇಣಿಗಳ ವಿದ್ಯಾಧರರಾಜಾಧಿರಾಜರ್ ನಮಿ ವಿನಮಿಗಳಂ ಮುಂದಿಟ್ಟು ಬಂದು,**

ಶೂರರಾದ ಶತ್ರುಗಳ ಕಿವಿಗಳ ರಂಧ್ರಗಳೂ ವಿಕೀರ್ಣವಾದುವು. ಆನೆಗಳ ಸೈನ್ಯದ ಜಲಕಣಗಳೆಂಬ ಹಿಮವರ್ಷದಿಂದ ಸೂರ್ಯನ ಉಷ್ಣದ ಬೇಗೆಯೂ ಬಲಿಷ್ಠ ಶತ್ರುರಾಜರ ಪ್ರತಾಪವೂ ಉದ್ರೇಕವನ್ನು ಕಳೆದುಕೊಂಡುವು. ಸಂಚಾರಿಯಾದ ನೀಲಪರ್ವತಸಮೂಹದ ಕಾಂತಿಯನ್ನು ಧರಿಸಿದ ಕಾಂತಿಯುಳ್ಳ ಆನೆಗಳ ಹಿಂಡಿನ ಮೇಲೆ ಎತ್ತಿ ಹಿಡಿದ ಐದುಬಣ್ಣದ ಬಾವುಟಗಳ ಬಟ್ಟೆಗಳ ಪತಾಕೆಗಳಿಂದ ಆಕಾಶಮಾರ್ಗವನ್ನೂ ತುಂಬ ಹೆದರಿದ ಶತ್ರುಗಳ ದೃಷ್ಟಿಮಾರ್ಗಗಳನ್ನೂ ನಿರವಕಾಶವನ್ನಾಗಿ ಮಾಡಿದನು. ಉನ್ಮದಗಜೇಂದ್ರದಂತ ವಜ್ರದಂಡದಿಂದ ವನದುರ್ಗಭಂಗವನ್ನೂ ಶತ್ರುರಾಜರ ಮನೋಭಂಗವನ್ನೂ ಉಂಟುಮಾಡಿದನು. ಹೀಗೆ ದಕ್ಷಿಣಾಭಿಮುಖನಾಗಿ ನಿತ್ಯ ಪ್ರಯಾಣಗಳಿಂದ ಬಂದು, ೭೮, ಆನೆಯ ಕುಂಭಪ್ರದೇಶದಲ್ಲೊಗೆದ ಮುತ್ತುಗಳನ್ನು ಆನಂದದಿಂದ ತಂದಿದ್ದ, ಅಭಯಾಭಿಲಾಷುಕರಾದ ವ್ಯಾಧರಾಜರ ಸಮೂಹಕ್ಕೆ ಅಭಯವನ್ನಿತ್ತನು. ಪ್ರಳಯಾಂತ್ಯದಲ್ಲಿ ಕ್ಷೋಭೆಗೊಳ್ಳುವ ಸಮುದ್ರದ ಶಂಕೆಯನ್ನುಂಟುಮಾಡುವ ಬಲಸಮೂಹವುಳ್ಳ ಆತನು ರಜತಪರ್ವತದ ಶೋಭೆಗೆ ಮರುಳಾಗಿ ಅದರ ಸಮೀಪದಲ್ಲಿ ಬೀಡನ್ನು ಬಿಟ್ಟನು. ವ|| ವಿಜಯಾರ್ಧಪರ್ವತದ ಕಾಂಡಕಪ್ರಪಾತಗುಹೆಯ ಬಳಿಯಲ್ಲಿ ಬೀಡನ್ನು ಬಿಟ್ಟನು. ಹಿಂದಿನಂತೆಯೇ ಅವನು ಸೇನಾಪತಿಗೆ ಹೇಳಲು ಅವನು ಪೂರ್ವೋಕ್ತಕ್ರಮದಂತೆ ಗುಹಾದ್ವಾರವನ್ನು ತೆರೆದನು. ಅದರ ಬೆಂಕಿಯಾರುವಷ್ಟರಲ್ಲಿ ಪೂರ್ವದಿಕ್ಕಿನ ಮ್ಲೇಚ್ಛಖಂಡವನ್ನು ಸ್ವಾಧೀನಪಡಿಸಿಕೊಳ್ಳಲು ತೆರಳಿದನು. ದಕ್ಷಿಣೋತ್ತರ ಶ್ರೇಣಿಗಳಲ್ಲಿನ ವಿದ್ಯಾಧರರಾಜರು ನಮಿ ವಿನಮಿಗಳನ್ನು ಮುಂದುಮಾಡಿಕೊಂಡು ಬಂದರು.

ಭರತೇಶ್ವರಪದನಖಮಣಿ
ಮರೀಚಿಗಳ್ ತಮ್ಮ ಮಕುಟಮಣಿದೀಧಿತಿಯೊಳ್
ಬೆರಸಿರೆ ತದಾಜ್ಞೆಯುಂ ನಿಜ
ಕಿರೀಟದಿಂ ತಾಳ್ದಿದಂತೆ ಸೊಗಯಿಸಿದರ್ ೭೯

ನಮಿ ವಿನಮಿಗಳಂತಾ ಕ
ಚ್ಛ ಮಹಾಕಚ್ಛರ್ಕಳಿಂದಮೊದವಿದ ನಣ್ಪಂ
ತಮರ್ದಿರೆ ತಮ್ಮೊಡವುಟ್ಟಿದ
ಕಮಳಾನನೆಯಂ ಸುಭದ್ರೆಯಂ ತಂದಿತ್ತರ್ ೮೦

ವ॥ ಅಂತಾ ಸುಭದ್ರೆಯೆಂಬ ಕನ್ಯಾರತ್ನಮಂ ಅಂಬರಚರೋಚಿತಕಲ್ಯಾಣಂಗಳಿಂದಂ ಆ ಪುರುಷರತ್ನಾಕರನೊಳ್ ನೆಱಪಿ ತಮ್ಮ ಮನೆಯೊಳುಳ್ಳನರ್ಘ್ಯರತ್ನಂಗಳೆಲ್ಲಮಂ ಬಳಿವಳಿಗೊಟ್ಟು ಬೀಳ್ಕೊಂಡು ಪೋದರ್. ಅನ್ನೆಗಂ ಮ್ಲೇಚ್ಛರಾಜಬಲಪರಿವೃತನಾಗಿ ನಿಜಭುಜವಿಜಯಮಂ ಮುಂದಿಟ್ಟು ಬಂದು ಕಂಡ ದಂಡನಾಯಕಂ ತೋಱಿದನೇಕಕ್ಷತ್ರಿಯಪುತ್ರಕುಲಧನಂಗಳಂ ಕೈಕೊಂಡು ಕೋಶಾಧ್ಯಕ್ಷ ಹಸ್ತನ್ಯಸ್ತಂಗಳಾದ್ದಿ ಬೆಸನನಿರ್ಮೆ ಕೇಳದಂತು ಪೂಣಿಸಿ ಕಳುಪಿ ಮುನ್ನಮೆ ತೆಱಿದಱುದಿಂಗಳ್ವೆರ ಮಾಱಿದ ಕಾಂಡಕಪ್ರಪಾತಗುಹೆಯೊಳಗಣಿಂದಂ ಚಕ್ರರತ್ನಂ ಮುಂದೆ ನಡೆಯೆ ಕಾಕಿಣೀರತ್ನರಚಿತ ಸೂರ್ಯಚಂದ್ರಮಂಡಳಂಗಳ ಬೆಳಗಿನೊಳಂ ಗಂಗಾನದ್ಯುಭಯತಟಮಹಾವೀಧಿಗಳೊಳಂ ನಡೆದು

೭೯. ಭರತಪರಮೇಶ್ವರನ ಕಾಲುಗುರುಮಣಿಗಳ ಕಾಂತಿಗಳು ವಿದ್ಯಾಧಿರಾಜರ ಕಿರೀಟಮಣಿಗಳೊಡನೆ ಬೆರೆತುವು. ಅದರಿಂದ ಭರತನಾಜ್ಞೆಯನ್ನು ತಮ್ಮ ಕಿರೀಟಗಳಿಂದ ಅವರು ಹೊತ್ತರೋ ಎಂಬಂತೆ ತೋರಿದರು. ೮೦. ಕಚ್ಛ, ಮಹಾಕಚ್ಛರಿಂದ ಒದಗಿದ ಸ್ನೇಹವನ್ನು ಮುಂದಿಟ್ಟು, ನಮಿ ವಿನಮಿಗಳೆಂಬ ವಿದ್ಯಾಧರಾಧಿಪರು ತಮ್ಮ ಸೋದರಿಯಾದ ಸುಭದ್ರೆಯೆಂಬ ಕಮಲಮುಖಿಯನ್ನು ಭರತರಾಜನಿಗೆ ಮದುವೆಮಾಡಿಕೊಟ್ಟರು. ವ॥ ಅಂತು ಸುಭದ್ರೆಯೆಂಬ ಕನ್ಯಾರತ್ನವನ್ನು ಆಕಾಶಚಾರಿಗಳಾದ ವಿದ್ಯಾಧರರಿಗೆ ಉಚಿತವೆನಿಸಿದ ಕಲ್ಯಾಣವಿಧಿಗಳಿಂದ ಅವರು ಆ ಪುರುಷಶ್ರೇಷ್ಠನೊಡನೆ ಕೂಡಿಸಿದರು. ತಮ್ಮ ಮನೆಯಲ್ಲಿರುವ ಅನರ್ಘ್ಯರತ್ನಗಳೆಲ್ಲವನ್ನೂ ಬಳುವಳಿಯಾಗಿತ್ತು ತೆರಳಿದರು. ಅಷ್ಟರಲ್ಲಿ ಮ್ಲೇಚ್ಛರಾಜರ ಸೈನ್ಯದೊಡಗೂಡಿ ತನ್ನ ತೋಳ್ಬಲದ ವಿಜಯವನ್ನು ಮುಂದಿಟ್ಟುಕೊಂಡು ಬಂದು ದಂಡನಾಯಕನು ಪ್ರದರ್ಶಿಸಿದ ಅನೇಕ ರಾಜಪುತ್ರರ ಕುಲಧನಗಳನ್ನು ಸ್ವೀಕರಿಸಿ ಕೋಶಾಧ್ಯಕ್ಷನ ವಶಕ್ಕೊಪ್ಪಿಸಿದನು. ಎರಡನೆಯ ಬಾರಿ ಆಜ್ಞೆಯನ್ನು ಮಾಡಲು ಅವಕಾಶಕೊಡದಂತೆ ಮಾತು ತೆಗೆದುಕೊಂಡು ಆ ರಾಜಪುತ್ರರನ್ನು ಕಳುಹಿಸಿದನು. ಮೊದಲೇ ತೆರೆದಿದ್ದ ಆರು ತಿಂಗಳೊಳಗೆ ಬೆಂಕಿಯಾರಿದ ಕಾಂಡಕ[1] ಪ್ರಪಾತ ಗುಹೆಯಿಂದ ಚಕ್ರರತ್ನವು ಮುಂದೆ ನಡೆಯಲು, ಕಾಕಿಣೀರತ್ನದಿಂದ ವಿರಚಿತವಾದ ಸೂರ್ಯಚಂದ್ರಮಂಡಲಗಳ ಬೆಳಕಿನಿಂದಲೂ ಮಕುಟಬದ್ಧರ ಕಿರೀಟ ಮಣಿಕಾಂತಿಗಳ ಬೆಳಕಿನಿಂದಲೂ ಗಂಗಾದಿನದಿಗಳ

1 ಕಂಟಕಪ್ರಪಾತವೆಂದು ಪೂರ್ವಪುರಾಣದಲ್ಲಿದೆ. (೩೨-೧೮೮)

ಕತಿಪಯದಿನಂಗಳಿಂ ಗುಹಾದ್ವಾರಮಂ ಪೊಱಮಡುವಾಗಳ್ ತದ್ಗುಹಾಕೂಟನಿವಾಸಿಯಪ್ಪ ನಾಟ್ಯಮಾಲಾಮರಂ ಸುವರ್ಣಪೂರ್ಣಕುಂಭಾದಿ ಮಂಗಳಂಗಳಿನಿದಿರ್ಗೊಳೆ ಗುಹಾದ್ವಾರದಿಂ ಪೊಱಮಟ್ಟಾಗಳ್,

ಧವಳಚಮರೀಜವೀಚೀ
ನಿವಹಂ ಶ್ವೇತಾತಪತ್ರಫೇನಪ್ರಕರಂ
ವಿವಿಧಪ್ರವಾಹಮೆಸೆದುದು
ವಿವಿಧಬಲಂ ಗಂಗೆಯಂತೆ ತದ್ಗಿರಿತಟದೊಳ್ ೮೧

ವ।। ಆಗಳ್ ಪತಾಕಿನೀಪತಿನಿಯಮದಿಂ ಪೂರ್ವದಿಗ್ಭಾಗಸ್ಥಿತಮಂ ಮ್ಲೇಚ್ಛಖಂಡಮನ ಪ್ರತಿಹತಶಾಸನಾಂಕಿತಂ ಮಾಡಿ ಬರೆ ವಿಜಯಸೈನ್ಯವಿನಿರ್ಜಿತ ಭರತಮಂಡಳಂ ಭರತೇಶ್ವರಚಕ್ರವರ್ತಿ ಸಿದ್ಧದಿಗ್ವಿಜಯನಾಗಿ ವಿಜಯಪರ್ವತಗಜಮನೇಱಿ ಗಂಗಾತಟಂಬಿಡಿದು ಪಯಣಂಬಂದು ಕೈಳಾಸಾಚಳ ನಿಕಟದೊಳ್ ಕಟಕಮಂ ನಿಱಿಸಿ ಪರಿಮಿತಪರಿಜನಂಬೆರಸು ತದ್ಗಿರೀಂದ್ರಮನೆಯ್ದೆವಂದು,

ಶರಭಂಗಳ್ಗಿಡೆ ಸಿಂಹದುರ್ವ್ರ ವನಗಂಧೇಭೋತ್ಕರಕ್ಕೆಂದುಮಾ
ಗರಮೀ ಭೂಧರಮೀ ಮಹೋಗ್ರಮೃಗಸಂಘಾತಂಗಳೊಂದೊಂದನಿಂ
ತಿರೆ ಕಂಡೋಡುವುವಲ್ಲದಿಂತಿವೊಡಗೂಡಿರ್ದಪ್ಪುವಿಂತೀ ಜಗ
ದ್ಗುರು ಬಂದಿರ್ದುದಱಿಂದೆ ಶಾಂತರಸಮಂ ಕೈಕೊಂಡುದೀ ಪರ್ವತಂ ೮೨

ವ।। ಎಂದು ಕೈಳಾಸಾಚಳಮನೇಱಿ ಧೂಳೀಶಾಲದಿಂ ತಗುಳ್ದು ಪೂರ್ವೋಕ್ತವರ್ಣನೋಪೇತ

ಉಭಯ ದಡಗಳ ಹೆದ್ದಾರಿಗಳಲ್ಲಿ ನಡೆದು ಕೆಲವು ದಿನಗಳಲ್ಲಿ ಗುಹಾದ್ವಾರದಿಂದ ಹೊರಬಂದರು. ಆಗ ಗುಹಾಕೂಟನಿವಾಸಿಯಾದ ನಾಟ್ಯಮಾಲನೆಂಬ ಅಮರನು ಚಿನ್ನದ ಪೂರ್ಣಕುಂಭಗಳೇ ಮೊದಲಾದ ಮಂಗಳವಸ್ತುಗಳೊಡನೆ ಇದಿರ್ಗೊಂಡನು. ಆಮೇಲೆ ಗುಹಾದ್ವಾರವನ್ನು ಬಿಟ್ಟು ಹೊರಡಲು, ೮೧. ಆ ಬೆಟ್ಟದ ತಪ್ಪಲಲ್ಲಿ ಬಿಳಿಯ ಚಾಮರಗಳೆಂಬ ಅಲೆಗಳ ಗುಂಪುಳ್ಳ, ಬೆಳ್ಗೊಡೆಗಳೆಂಬ ನೊರೆಯ ಸಮೂಹವುಳ್ಳ ವಿವಿಧವಾಗಿ ಚಲಿಸುತ್ತಿರುವ ಚಕ್ರಿಯ ಅನೇಕ ಬಗೆಯ ಸೇನೆಯು ಗಂಗಾಪ್ರವಾಹದಂತೆ ರಂಜಿಸಿತು. ವ।। ಆಗ ಸೇನಾಪತಿಯು ತನ್ನ ಆಜ್ಞೆಯಿಂದ ಪೂರ್ವ ದಿಗ್ಭಾಗದಲ್ಲಿನ ಮ್ಲೇಚ್ಛಖಂಡದ ರಾಜರನ್ನು ಕಟ್ಟಪ್ಪಣೆ ಮೀರದವರನ್ನಾಗಿ ಮಾಡಿ ಬರಲು, ವಿಜಯಸೈನ್ಯಗಳಿಂದ ಭರತಮಂಡಲವನ್ನು ಗೆದ್ದು ಭರತಚಕ್ರವರ್ತಿಯು ಸಿದ್ಧ ದಿಗ್ವಿಜಯನಾದನು. ವಿಜಯಪರ್ವತವೆಂಬ ಗಜವನ್ನೇರಿ ಗಂಗಾತಟದಲ್ಲಿಯೇ ಪ್ರಯಾಣ ಬೆಳಸುತ್ತಾ ಕೈಲಾಸಪರ್ವತದ ಸಮೀಪದಲ್ಲಿ ಸೇನಾಶಿಬಿರವನ್ನು ಸ್ಥಾಪಿಸಿ ಪರಿಮಿತ ಪರಿಜನರೊಡನೆ ಕೈಲಾಸಗಿರಿಗೆ ಬಂದನು. ೮೨. "ಈ ಜಗದ್ಗುರುವು ಇಲ್ಲಿಗೆ ದಯಮಾಡಿಸಿದ್ದರಿಂದಲೇ ಈ ಪರ್ವತವು ಶಾಂತರಸವನ್ನು ಕೈಕೊಂಡಿದೆ. ಈ ಭೂಧರವು ಶರಭಗಳಿಗೆ ಆಶ್ರಯ. ಸಿಂಹಗಳಿಗೆ ಆಶ್ರಯ. ವನಗಂಧೇಭಗಳಿಗೆ ಆಶ್ರಯ. ಮಹೋಗ್ರವಾದ ಮೃಗವ್ರಾತಗಳಲ್ಲೊಂದೊಂದೂ ಮತ್ತೊಂದನ್ನು ಕಂಡು ಓಡವು. ಮೇಲಾಗಿ ಅವು ಕೂಡಿ ಬಾಳುತ್ತಿರುವುವು" ಎಂದನು. ವ।। ಆಮೇಲೆ ಕೈಲಾಸಪರ್ವತವನ್ನೇರಿ ಧೂಳಿಶಾಲವನ್ನು ಸೇರಿ ಪೂರ್ವೋಕ್ತವರ್ಣನೆಯಿಂದ

ಱುಪ್ಪ ವೃಷಭನಾಥನಾಸ್ಥಾನಮಂಟಪಮಮಂ ನೋಡುತ್ತುಂ ಬಂದು ಸಕಳ ಸುರಾಸುರೇಂದ್ರಮುನೀಂದ್ರರುಂದ್ರ ಸಭೆಯ ನಡುವೆ ಸಿಂಹಾಸನಮಸ್ತಕದೊಳಿರ್ದ ಜಗತ್ತ್ರಯತಿಳಕನ ಪಾದಪದ್ಮಂಗಳ್ಗೆ ಭರತೇಶ್ವರ ಚಕ್ರವರ್ತಿ ಮಹೀತಳನಿಹಿತಮಣಿಕಿರೀಟರಶ್ಮಿಸಂದೋಹಸಾಂದ್ರಕುಂಕುಮಪಂಕದಿಂ ವಿಹಿತೋಪಹಾರನಾಗಿ,

॥ ಪೃಥ್ವೀ ॥

ಸಮಸ್ತ ಸುರಕೋಟಿ ಹೇಮಘಟಕೋಟಿಯಿಂ ತೀವಿ ತಂ
ದಮೇಯಭುಜಕೋಟಿಯಿಂ ಮಿಸಿಸೆ ದುಗ್ಧಸಿಂಧುಪ್ಲವಂ
ಶ್ರಮಾಂಬುಲವಮೊಂದುಮಂ ನಿನಗೆ ಪುಟ್ಟಿಸಲ್ಕಾರ್ತುದಿ
ಲ್ಲಮಾನುಷಮನಂತವೀರ್ಯಗುಣಮಾದಿತೀರ್ಥೇಶ್ವರಾ ೮೩

ವಿದಗ್ಧ ಸುರಸೌಂದರೀನಯನಸೌಂದರಂ ನಿನ್ನ ರೂ
ಪಿದೆತ್ತ ಕುಸುಮಾಸ್ತ್ರನಂ ತುಳಿದು ಗೆಲ್ದ ವಿಕ್ರಾಂತಮೆ
ತ್ತಿದಚ್ಚರಿ ದಲೆಂಬಿನಂ ನೆಗಟ್ದೆ ನೀಂ ತ್ರಿಲೋಕಂಗಳೊಳ್
ನ ದೇವಚರಿತಂ ಚರೇದೆನಿಸಿದ್ಯೆ ತ್ರಿಲೋಕೇಶ್ವರಾ ೮೪

ಅತೀಂದ್ರಿಯಸುಖಾಮೃತಾಂಬುಧಿನಿವಾಸಮೊಂದೊಂದನಾ
ತ್ಮತತ್ವವಿದ ಮುಕ್ತಿಮಾರ್ಗಮನೆ ಕೀಱೆ ಕಂಡ್ಯೆ ಪೆಱರ್
ಚತುರ್ಗತಿಯ ಬಟ್ಟೆಯುಂ ನೆಱೆಯೆ ಕಂಡರೆಂತುಂ ಕರ
ಸ್ಥಿತಾಮಳಕಮೆಂಬರಾ ಜಱುಚದೇವುದಿಂದ್ರಾರ್ಚಿತಾ ೮೫

ಕೂಡಿದ ವೃಷಭನಾಥನ ಆಸ್ಥಾನಮಂಟಪವನ್ನು ನೋಡುತ್ತ ಬಂದನು. ಎಲ್ಲ ಸುರಾಸುರೇಂದ್ರರಿಂದಲೂ ಮುನೀಂದ್ರರಿಂದಲೂ ಕೂಡಿದ ಆ ಸಭೆಯ ನಡುವೆ ಉಚ್ಚಸಿಂಹಾಸನದಲ್ಲಿದ್ದ ಜಗತ್ತ್ರಿತಯತಿಲಕನ ಪಾದಪದ್ಮಗಳಿಗೆ ಭರತೇಶ್ವರನು ಮಹೀತಲದ ಮೇಲಿಕ್ಕಿದ ಮಣಿಕಿರೀಟಕಾಂತಿಗಳ ನಿಬಿಡವಾದ ಕುಂಕುಮಪಂಕದಿಂದ ಕಾಣಿಕೆಯನ್ನು ಸಲ್ಲಿಸಿದನು. ೮೩. "ಸಮಸ್ತ ದೇವಸಮೂಹವು ತಮ್ಮ ಅಸಂಖ್ಯಾತವಾದ ತೋಳ್ಗಳಿಂದ ಕೋಟಿಗಟ್ಟಲೆ ಚಿನ್ನದ ಕಲಶಗಳಲ್ಲಿ ಕ್ಷೀರಸಾಗರದ ನೀರನ್ನು ತುಂಬಿ ತಂದು ನಿನಗೆ ಸ್ನಾನ ಮಾಡಿಸಿದರು. ಆದರ ನೀರು ನಿನಗೆ ಒಂದು ತೊಟ್ಟು ಬೆವರಿನ ಹನಿಯನ್ನು ಉಂಟುಮಾಡಲು ಸಮರ್ಥವಾಗಲಿಲ್ಲ! ಎಲೈ ಆದಿತೀರ್ಥೇಶ್ವರನೇ! ನಿನ್ನ ಅನಂತ ವೀರ್ಯಾದಿ ಗುಣಗಳು ಕೇವಲ ಮನುಷ್ಯರಿಂದ ಭರಿಸಲಸಾಧ್ಯವಾದುವು. ೮೪. ವಿದಗ್ಧರಾದ ಸುರಸ್ತ್ರೀಯರ ಕಣ್ಣುಗಳಿಗೆ ಸುಂದರವೆನಿಸಿದ ನಿನ್ನ ರೂಪವೆಲ್ಲಿ? ಕುಸುಮಾಸ್ತ್ರನನ್ನೂ ಮೆಟ್ಟಿ ನಿಂತ ನಿನ್ನ ವಿಕ್ರಾಂತಿಯೆಲ್ಲಿ? ಹೇ ತ್ರಿಲೋಕೇಶ್ವರ, ಇದು ಆಶ್ಚರ್ಯವೇ ಸರಿ ಎಂಬಂತೆ ನೀನು ಮೂರುಲೋಕಗಳಲ್ಲಿ ದೇವಚರಿತದಿಂದೆಂದಿಗೂ ನಡೆಯಲು ಶಕ್ಯವಿಲ್ಲವೆಂದು[1] ತೋರಿಸಿಕೊಟ್ಟು ಪ್ರಖ್ಯಾತನಾಗಿದ್ದೀಯೆ. ೮೫. ಅತೀಂದ್ರಿಯ ಸುಖಾಮೃತದ ಸಮುದ್ರನೆ, ನಿವಾಸ (ಶ್ರೇಣಿ)ವೊಂದೊಂದನ್ನೂ ಆತ್ಮತತ್ತ್ವವಿದನಾದ ನೀನು

---

1. 'ವೃಷಭನಾಥನು ದೇವನಾದ್ದರಿಂದ ಹಾಗೆ ನಡೆಯಲು ಸಾಧ್ಯವಾಯಿತು. ಉಳಿದವರಿಗೆ ಸಾಧ್ಯವಿಲ್ಲ' ಎಂದು ಅಭಿಪ್ರಾಯವಿರಬಹುದು.

ಮರುಸ್ಥಳದ ಮಾಳದೊಳ್ ನಡುಪಗಲ್ವರಂ ಗ್ರೀಷ್ಮದೊಳ್
ಸುರಲ್ವಿನೆಗಮಟ್ಟಿ ಬೇವವರ್ಗೆ ಜೋಂಪಮಿಮ್ಮಾವು ನಿ
ರ್ಝರಾಂಬು ದೊರೆಕೊಳ್ವವೊಲ್ ಭವದವಾಗ್ನಿಯೊಳ್ ಬೇವ ಜೀ
ವರಾಶಿಗೆ ಭವದ್ವಚೋಮೃತಮೆ ಮರ್ದನಂಗಾಂತಕಾ ೮೬

ಭವಂ ತವೆ ಭವತ್ಪದಾಂಬುರುಹಸೇವೆಗೆಯ್ವಾರುಮಂ
ಭವಂಗಿಡಿಪೆಯೇಂ ತ್ರಿಲೋಕಗುರುವೆಂಬ ಪೆಂಪಿಂತುಟೇ
ಭವಂಗಿಡಿಸುವೋಲಗಕ್ಕಭವ ಬೇಸಜೇಂ ಪೋಕೆ ಪೋ[೧]
ಭವಂ ಭವದುಪಾಂತದಲ್ಲಿಯೆ ಮನೋಭವಧ್ವಂಸಕಾ ೮೭

ಜವಂಗಿಡೆ ಮುಟ್ಟೆವರ್ಪ ಜವನಂ ಜವಂಗುಂದಿಸಲ್
ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ ತೀರದಾ
ಜವಂ ಜವಜವಾಗಿ ಮುಟ್ಟುಗಿಡುವನ್ನಮಿನ್ನಾ ಜವಂ
ಜವ ವ್ಯಸನಪುಂಜಮಂ ಕಿಡಿಪುದಾದಿತೀರ್ಥೇಶ್ವರಾ ೮೮

ಅನೇಕಭುಜನೇತ್ರಜಿಹ್ವೆರಸನಾಳಿಗಳ್ ದೇವ ನಿ
ನ್ನನರ್ಚಿಸುವ ನೋೞ್ಪ ಬಣ್ಣಿಸುವ ಪೊತ್ತದೇಕಾಗದಿಂ
ದನಂತೆನಗೆ ಸಾಲವಿನ್ನೆರಡೆ ಕೈಯ್ಯೆರಲ್ಕಣ್ಣಳೊಂ
ದೆ ನಾಲಗೆಯುಮೆಂದೆ ಚಿಂತಿಸುವೆನಾದಿಭಟ್ಟಾರಕಾ ೮೯

ಮುಕ್ತಿಮಾರ್ಗವನ್ನಾಗಿಯೇ ಪರೀಕ್ಷಿಸಿ ಕಂಡಿರುವೆ. ಇತರರು ಮಾತ್ರ ಚತುರ್ಗತಿಪ್ರಾಪಕವಾದ ಮಾರ್ಗವನ್ನೇ ಮೋಕ್ಷಮಾರ್ಗವೆಂದೂ, ಅದು ಅಂಗೈಯಲ್ಲಿನ ನೆಲ್ಲಿಕಾಯಿಯಂತೆ ಕಾಣಲು ಸಾಧ್ಯವೆಂದೂ ಹೇಳುವರು. ಇಂದ್ರಾರ್ಚಿತ! ಆ ವ್ಯಥಾಲಾಪದಿಂದೇನು? ೮೬. ಕಾಮಹರ! ಮರುಸ್ಥಳದ ಬಯಲಿನಲ್ಲಿ ಉರಿಬೇಸಿಗೆಯ ಹಗಲಿನಲ್ಲಿ ಸುತ್ತಾಡಿ, ಬಳಲಿ ಬಂದ ಜೀವಿಗಳಿಗೆ ನೆಳಲೂ, ಇಮ್ಮಾವೂ, ತಂಪಾದ ನೀರಿನ ಪ್ರವಾಹವೂ ಸಿಗುವಂತೆ ಭವದವಾಗ್ನಿಯಲ್ಲಿ ಬೇಯುತ್ತಿರುವ ಜೀವರಾಶಿಗೆ ನಿನ್ನ ಮಾತುಗಳೆಂಬ ಅಮೃತವೇ ಮದ್ದು. ೮೭. ಭವವು ಕ್ಷಯಿಸಲಾಗಿ ನಿನ್ನ ಪಾದಪದ್ಮಗಳ ಸೇವೆಯನ್ನು ಸಲ್ಲಿಸುತ್ತಿರುವರಾರಿಗಾದರೂ ಭವವನ್ನು ನಾಶಪಡಿಸುವೆ. ತ್ರಿಲೋಕಗುರುವೆಂಬ ಹಿರಿಮೆ ಈ ಪ್ರಕಾರವಿದೆ! ಅಭವ! ಭವವಿಧ್ವಂಸಕವಾದ ನಿನ್ನ ಆಸ್ಥಾನಕ್ಕೆ ಬೇಸರೇನು ಬಂದಿತು? ಮನ್ಮಥನ ಮಾರಕ! (ನಮ್ಮ) ಭವವು ನಿನ್ನ ಸಮೀಪದಲ್ಲಿಯೇ ಕಳೆಯಲಿ. ೮೮. ರಭಸಗೆಡದೆ ಹಿಡಿಯಲು ಬರುವ ಯಮನನ್ನು ವೇಗರಹಿತನನ್ನಾಗಿ ಮಾಡುವುದಕ್ಕೂ ಯಮನಿಗೆ ಯಮನಾಗುವುದಕ್ಕೂ ಇನ್ನೊಬ್ಬರಿಗೆ ಸಾಧ್ಯವಾದೀತೆ? ಸಾಧ್ಯವಾಗದು. ಯಮನು ಶಕ್ತಿರಹಿತನಾಗಿ ನಿಷ್ಫಲನಾಗುವಂತೆ, ಹೇ ಆದಿತೀರ್ಥೇಶ್ವರ, ಹುಟ್ಟುಸಾವುಗಳ ಪರಂಪರೆಯಿಂದಾಗುವ ದುಃಖರಾಶಿಯನ್ನು ಶಮನಮಾಡು (ಜವಂಗಿಡದೆ = ರಭಸಗೆಡದೆ, ಜವ = ಯಮ, ಜವಜವಾಗಿ = ಶಕ್ತಿಗುಂದಿ, ಜವಂಜವ = ಹುಟ್ಟುಸಾವುಗಳ ಪರಂಪರೆ) ೮೯. ದೇವ! ನಿನ್ನನ್ನು ಪೂಜಿಸಲು ಅನೇಕ ಭುಜಗಳೂ, ನೋಡಲು ಅನೇಕ ಕಣ್ಣುಗಳೂ, ವರ್ಣಿಸಲು

---

೧ ಪೋಕೆಪೋ = ಕಳೆಯಹೋಗಲಿ (?)

ಫಣಿಪ್ರಭುಗಮೆತ್ತಮತ್ತಳಗಮಲ್ತೆ ರೂಪಸ್ತವಂ
ಗುಣಸ್ತವಮುದಾತ್ತವೃತ್ತ ಭವದೀಯವಸ್ತುಸ್ತವಂ
ಗುಣಾಗುಣವಿವೇಕಮೂಕರತಿಮೂರ್ಖರೆಮ್ಮಂದಿಗರ್
ಪ್ರಣಾಮದೊಳೆ ಪುಣ್ಯಮಂ ಪಡೆವರಾದಿತೀರ್ಥೇಶ್ವರಾ ೯೦

ವ॥ ಎಂದನೇಕಸ್ತವನಂಗಳಿಂ ಸ್ತುತಿಸಿ

ಚತುರಂಭೋರಾಶಿಮಧ್ಯಕ್ಷಿತಿವಲಯದೊಳಂ ತನ್ನುದಗ್ರಪ್ರತಾಪೋ
ನ್ನತಿಯಿಂದಂ ತನ್ನ ರತ್ನಪ್ರತತಿಗಳೊಳಪೂರ್ವಂಗಳಂ ಕೊಂಡುಕೊಂಡೂ
ರ್ಜಿತಪುಣ್ಯಂ ಪೂಜಿಸುತ್ತುಂ ತಣಿಯನೆ ಭಗವತ್ಪಾದಪೀಠೋಪಕಂಠ
ಕ್ಷಿತಿಯಂ ಚಕ್ರಾಧಿನಾಥಂ ಸುಕವಿಜನಮನೋಮಾನಸೋತ್ತಂಸಹಂಸಂ ೯೧

ಸುರಗೀತಂ ಸುರದುಂದುಭಿಧ್ವನಿ ಸುರಸ್ತ್ರೀರಮ್ಯಸಂಗೀತಕಂ
ಸುರಪುಷ್ಪೋತ್ಕರಸೌರಭಂ ಸುರಜಯಸ್ತೋತ್ರಂ ಸುರಾಶೀಸ್ತವಂ
ಸುರರಾಜೇಂದ್ರಮಹಾವಿಭೂತಿ ತರೆ ಚಿತ್ತೋತ್ಸಾಹಮಂ ತಾಳ್ದಿದಂ
ಪರಮಾನಂದಮನಾದಿದೇವಸಭೆಯೊಳ್ ಸಂಸಾರಸಾರೋದಯಂ ೯೨

ಇದು ದೇವೇಂದ್ರಮುನೀಂದ್ರವಂದ್ಯ ಪರಮಜಿನೇಂದ್ರಮುಖಚಂದ್ರವಾಕ್ಚಂದ್ರಿಕಾ
ಪ್ರಸರಪ್ರಸಾದೋದೀರ್ಣ ಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಷಟ್ಖಂಡಮಂಡಳವಿಜಯಂ

## ತ್ರಯೋದಶಾಶ್ವಾಸಂ

ಅನೇಕ ನಾಲಗೆಗಳೂ ಇಂದ್ರನಿಗಿರುವಂತೆ ನನಗೇಕೆ ಅಂಥ ಸಮಯವು ದೊರಕದು! ನನಗಿರುವುದು ಎರಡು ಕೈಗಳು, ಕಂಗಳೆರಡು, ನಾಲಗೆಯೊಂದು. ಇವುಗಳಿಂದ ನಾನು ನಿನ್ನನ್ನು ಹೇಗೆ ತಾನೆ ಅರ್ಚಿಸಲಿ-ಎಂದು ಚಿಂತಿಸುತ್ತಿರುವೆನು. ೯೦. ಆದಿತೀರ್ಥಂಕರ! ನಿನ್ನ ರೂಪಸ್ತವವನ್ನೂ, ಗುಣಸ್ತವವನ್ನೂ, ಉದಾತ್ತವಾದ ವೃತ್ತಸ್ತವವನ್ನೂ, ವಸ್ತುಸ್ತವವನ್ನೂ ಮಾಡಲು ಫಣಿರಾಜನಿಗೂ ಎತ್ತಲೂ ಕಳವಳವಲ್ಲವೆ? ಇದು ಗುಣ, ಇದು ಅವಗುಣ ಎಂದು ವಿವೇಚಿಸಲಾರದ ಮೂಕರೂ ಅತಿಮೂರ್ಖರೂ ಆದ ನಮ್ಮಂಥವರು ನಿನ್ನ ಪ್ರಣಾಮಮಾತ್ರದಿಂದಲೇ ಪುಣ್ಯವನ್ನು ಪಡೆಯುವರು.” ವ॥ ಎಂದು ಅನೇಕ ಸ್ತೋತ್ರಗಳಿಂದ ಸ್ತುತಿಸಿದನು. ೯೧. ನಾಲ್ಕು ಕಡಲುಗಳ ಮಧ್ಯಸ್ಥಿತವಾದ ಭೂವಲಯದಲ್ಲಿ ತನ್ನ ಪ್ರತಾಪದಿಂದ ಸಂಪಾದಿತವಾದ ರತ್ನಗಳಲ್ಲಿ ಅಪೂರ್ವವಾದುವನ್ನು ಪರಿಗ್ರಹಿಸಿ ಊರ್ಜಿತಪುಣ್ಯನೂ ಸುಕವಿಜನಮನೋಮಾನಸೋತ್ತಂಸಹಂಸನೂ ಆದ ಚಕ್ರಾದಿನಾಥನು ಭಗವತ್ಪಾದಪೀಠದ ಸಮೀಪಸ್ಥವಾದ ಭೂಮಿಯನ್ನು ಪೂಜಿಸಿ ತಣಿಯಲಿಲ್ಲ. ೯೨. ಸುರಗೀತವೂ ಸುರದುಂದುಭಿಗಳ ಧ್ವನಿಯೂ ಸುರಸ್ತ್ರೀಯರ ರಮ್ಯವಾದ ಸಂಗೀತವೂ ಕಲ್ಪವೃಕ್ಷಗಳ ಪುಷ್ಪಸೌರಭವೂ ಸುರರ ಆಶೀಸ್ತವವೂ ಸುರರಾಜೇಂದ್ರನ ಮಹಾವಿಭೂತಿಯೂ ಭರತನ ಚಿತ್ತಕ್ಕೆ ಉತ್ಸಾಹವನ್ನು ತಂದುವು. ಹೀಗೆ ಸಂಸಾರಸಾರೋದಯನಾದ ಭರತನು ಆದಿದೇವನ ಸಭೆಯಲ್ಲಿ ಪರಮಾನಂದವನ್ನು ತಾಳಿದನು.

ಇಂತು ಷಟ್ಖಂಡಮಂಡಲವಿಜಯವೆಂಬ
ಹದಿಮೂರನೆಯ ಆಶ್ವಾಸ ಮುಗಿಯಿತು.

# ಚತುರ್ದಶಾಶ್ವಾಸಂ

ಶ್ರೀರಮಣನೆಱಗಿ ಮುಕ್ತಿ
ಶ್ರೀರಮಣನ ಪಾದಪೀಠದೊಳ್ ಸುರಸಭೆ ಕ
ಣ್ಣಾರೆ ನಡೆ ನೋಡೆ ಮದನಾ
ಕಾರಂ ತಳರ್ದಂ ಸರಸ್ವತೀಮಣಿಹಾರಂ ೧

ವ|| ಅಂತು ಸಮವಸರಣಮಂಡಳದಿಂ ಪೊಱಮಟ್ಟು ಲೀಲಾಪ್ರಸಾದಿತ[೧] ಸಕಳದಿಙ್ಮಂಡಳಂ ಕೈಲಾಸಶೈಲಕಟಕನಿಕಟವರ್ತಿಯಾಗಿರ್ದ ನಿಜವಿಜಯಕಟಕಕ್ಕೆವಂದು,

ಅಱುವತ್ತು ಸಾಸಿರಂಗಳ್
ನೆಱೆದುವು ಬರಿಸಂಗಳೆಂದು ದಿಗ್ವಿಜಯದೊಳ
ಲ್ಕಱೆನೊಳಯೋಧ್ಯೆಗೆ ಪೊಗಸಿದ
ನಱೆಕೆಯ ಪಱೆ ಪಲವುಮೆಸೆಯೆ ಭರತಮಹೀಶಂ ೨

ವ|| ಅಂತು ಕೆಲವು ಪಯಣಂಗಳಿಂದಂ ನಿಜಾನ್ವಯರಾಜಧಾನಿಯನಯೋಧ್ಯಾಪುರ ಮನೆಯ್ದಿದಾಗಳ್,

ಹತವೈರಿಕ್ಷತ್ರಚಕ್ರಂ ಭಯಚಕಿತಜಗದ್ವೀರಚಕ್ರಂ ವಿನಮ್ರ
ಕ್ಷಿತಿಚಕ್ರಂ ದೀಪದೀಪ್ತಿಪ್ರತಿಹತದಿನಕೃಚ್ಚಕ್ರತೀವ್ರಾಂಶುಚಕ್ರಂ
ಜಿತದಿಕ್ಚಕ್ರಂ ಪ್ರಭಾಪ್ರಜ್ವಲಿತ ದಶದಿಶಾಚಕ್ರಮುಗ್ರಪ್ರತಾಪೋ
ರ್ಜಿತತೇಜಶ್ಚಕ್ರಮಿರ್ದತ್ತೊಳಪುಗದೆ ಪುರೋಪಾಂತದೊಳ್ ಚಕ್ರಿಚಕ್ರಂ ೩

೧. ರಾಜ್ಯಲಕ್ಷ್ಮೀರಮಣನೂ ಮನ್ಮಥಾಕಾರನೂ ಸರಸ್ವತೀಮಣಿಹಾರನೂ ಎನಿಸಿದ ಭರತೇಶ್ವರನು ಮುಕ್ತಿಶ್ರೀರಮಣನಾದ ಆದಿದೇವನ ಪಾದಕಮಲಗಳಿಗೆ ನಮಸ್ಕರಿಸಿ ಹೊರಟನು. ಸುರಸಮಿತಿಯು ಅದನ್ನು ಕಣ್ಣಾರೆ ನೋಡಿತು. ವ|| ನಿಖಿಲ ದಿಙ್ಮಂಡಲಗಳನ್ನೂ ಲೀಲೆಯಿಂದ ಅನುಗ್ರಹಿಸಿದ ಭರತನು ಅಂತು ಸಮವಸರಣದಿಂದ ಹೊರಟು ಕೈಲಾಸಪರ್ವತದ ಸಮೀಪವರ್ತಿಯಾದ ತನ್ನ ವಿಜಯಸೂಚಕವಾದ ಶಿಬಿರಕ್ಕೆ ಬಂದನು. ೨. ದಿಗ್ವಿಜಯಕಾರ್ಯದಲ್ಲಿಯೇ ಅರವತ್ತು ಸಾವಿರ ವರ್ಷಗಳನ್ನು ಕಳೆದ ಅವನು ಪ್ರೀತಿಯಿಂದ ಅಯೋಧ್ಯೆಗೆ ಹೊರಡಲನುವಾದನು. ಆಗ ಪ್ರಯಾಣಸೂಚಕವಾದ ತಮಟೆಯೇ ಮೊದಲಾದ ಮಂಗಳವಾದ್ಯಗಳು ಮೊಳಗಿದುವು. ವ|| ಕುಲಕ್ರಮವಾಗಿ ರಾಜಧಾನಿಯಾಗಿ ಬಂದ ಅಯೋಧ್ಯಾನಗರವನ್ನು ಹಲವಾರು ಪ್ರಯಾಣಗಳಿಂದ ಸೇರಿದನು. ಆಗ, ೩. ವೈರಿಗಳಾದ ಕ್ಷತ್ರಿಯರನ್ನು ಕೊಂದ, ಜಗತ್ತಿನಲ್ಲಿ ಖ್ಯಾತರಾದ ವೀರರ ಸಮೂಹವನ್ನು ಭಯಭ್ರಾಂತರನ್ನಾಗಿಸಿದ, ಭೂಮಿಯನ್ನೆಲ್ಲ ಆಜ್ಞಾವಿಧೇಯರನ್ನಾಗಿ

---

೧ 'ಲೀಲಾಪ್ರಸಾಧಿತ....' ಎಂದು ಶುದ್ಧಪಾಠವಿರಬಹುದು. ಲೀಲೆಯಿಂದ ಸಕಲ ದಿಙ್ಮಂಡಲಗಳನ್ನೂ ವಶಪಡಿಸಿಕೊಂಡವನಾದ ಎಂದರ್ಥ.

ವ|| ಅಂತು ಚಕ್ರರತ್ನಮಯೋಧ್ಯಾಪುರಮಂ ಪುಗದೆ ತಱುಂಬಿ ನಿಂದುದಂ ಕಂಡುಮದಂ ರಕ್ಷಿಸುವ ಯಕ್ಷಸಹಸ್ರಂಬೆರಸು ಗಣಬದ್ಧದೇವರೆಲ್ಲಂ ನೆರೆದು,

ಪುರಗೋಪುರದೊಳಗಂ ಚ
ಕ್ರರತ್ನಮಿಂತೇಕೆ ಪುಗದೆ ಮಾಣ್ದಿರ್ದುದೊ ಮ
ಚ್ಚರಿಪದಟ[ನಿನ್ನದಾವನೊ][1]
ಭರತೇಶ್ವರಚಕ್ರವರ್ತಿಗಿನ್ನುಂ ಜಗದೊಳ್ ೪

ಆವಂಗಕಾಲಚಕ್ರಮ
ನೋವದೆ ಮಾಡಲ್ಕೆ ಚಕ್ರಮಿದು ಬಗೆದುದೊ ಶೌ
ರ್ಯಾವಿರ್ಭೂತದವಾನಳ
ನಾವನ ಚತುರಂಗಬಲಮನಿಂ ಸುಟ್ಟಪುದೋ ೫

ಆತಂಗೆ ಚಕ್ರಿವೇೞ್ಕುಮೆ
ಪೋ ತಳ್ತಿಱಿದಾಮೆ ಗೆಲ್ವಮೆಂದನಿಬರುಮು
ತ್ಪಾತಮರುದಾಭಿಘಾತೋ
ದ್ಭೂತಪಯೋನಿಧಿಗಳಂತೆ ಮಸಗಿದರಾಗಳ್ ೬

ವ|| ಆ ಪ್ರಸ್ತಾವದೊಳ್ ಚಕ್ರೇಶ್ವರಂಗೆ ಚಕ್ರರತ್ನಸ್ಖಳನಮಂ ಪತಾಕಿನೀಚಕ್ರಪ್ರಧಾನಪ್ರಭುಗಳಱಿಪಿ

ಮಾಡಿಕೊಂಡ, ದೀಪಗಳ ಪ್ರಕಾಶಗಳನ್ನುಡುಗಿಸಿದ, ಸೂರ್ಯಮಂಡಲಕ್ಕಿಂತಲೂ ತೀವ್ರವಾದ ಕಿರಣಮಂಡಲವನ್ನುಳ್ಳ, ದಿಙ್ಮಂಡಲವನ್ನೆಲ್ಲ ಗೆದ್ದ, ತನ್ನಲ್ಲಿರುವ ಪ್ರಭೆಗಳಿಂದ ಹತ್ತು ದಿಕ್ಕುಗಳನ್ನೂ ಪ್ರಜ್ವಲಿಸಿದ, ಭೀಕರವಾದ ಪ್ರತಾಪಾಧಿಕ್ಯದಿಂದ ಬೆಳಗುತ್ತಿರುವ ತೇಜಸ್ಸಮೂಹವುಳ್ಳ ಚಕ್ರರತ್ನವು ಅಯೋಧ್ಯೆಯನ್ನು ಪ್ರವೇಶಿಸದೆಯೆ ನಗರದ ಬಳಿ ಸುಮ್ಮನೆ ನಿಂತಿತು! ವ|| ಹೀಗೆ ಚಕ್ರರತ್ನವು ಅಯೋಧ್ಯಾಪುರವನ್ನು ಒಳಪುಗದೆಯೇ ನಿಂತುದನ್ನು ಕಂಡು ಅದರ (ಚಕ್ರರತ್ನದ) ರಕ್ಷಕರಾದ ಯಕ್ಷಸಹಸ್ರರೊಡನೆ ಗಣಬದ್ಧ ದೇವರೆಲ್ಲ ಅಲ್ಲಿ ನೆರೆದರು. ೪. "ಈ ಚಕ್ರರತ್ನವು ಪಟ್ಟಣದ ಮಹಾದ್ವಾರಪ್ರವೇಶವನ್ನೇಕೆ ಮಾಡದಿದೆ? ಈ ಜಗತ್ತಿನಲ್ಲಿ ಭರತೇಶ್ವರನನ್ನು ಇನ್ನೂ ವಿದ್ವೇಷಿಸುವ ವೀರನಾವನಿರುವನೋ? ೫. "ಯಾವನಿಗೆ ಈ ಚಕ್ರವು ಅಪಮೃತ್ಯುವಾಗಿ ಪರಿಣಮಿಸಲು ಬಗೆದಿದೆಯೊ? ಶೌರ್ಯೋತ್ಪನ್ನವಾದ ಕಾಳ್ಗಿಚ್ಚನ್ನುಳ್ಳ ಇದು ಯಾವನ ಚತುರಂಗಸೈನ್ಯವನ್ನು ಸುಡುತ್ತದೆಯೋ? ೬. "ಆತನನ್ನು ಸದೆಬಡಿಯಲು ಚಕ್ರಿಯೇಕೆ ಬೇಕು? ನಾವೇ ಅವನನ್ನು ನುಗ್ಗಿ ಇರಿದು ಗೆಲ್ಲೋಣ" ಎಂದು ಹೇಳಿಕೊಳ್ಳುತ್ತಾ ಅವರೆಲ್ಲರೂ ಉತ್ಪಾತವನ್ನು ಸೂಚಿಸುವ ಗಾಳಿಯ ಹೊಡೆತದಿಂದೆದ್ದ ಸಮುದ್ರಗಳಂತೆ ಆರ್ಭಟಿಸಿದರು. ವ|| ಆ ಪ್ರಸ್ತಾವದಲ್ಲಿ ಚಕ್ರೇಶ್ವರನ ಚಕ್ರರತ್ನಕ್ಕುಂಟಾದ ಸ್ಖಲನವನ್ನು (ಗತಿಭಂಗವನ್ನು) ಸೈನ್ಯಾಧಿಪತಿಗಳು ಚಕ್ರಿಗೆ ಬಿನ್ನವಿಸಿದರು.

೧ 'ಅದಟನಿನ್ನದಾವನೊ', 'ಅದಟಸನ್ನನಾವನೊ' (ಅನ್ಯತ್ರ)

ಬಿನ್ನಪಂಗೈದೊಡಪ್ಪಲಿತಗತಿಯಪ್ಪ ಚಕ್ರರತ್ನಸ್ಖಳನಕ್ಕೆ ನಾಡೆಯುಂ ಚಕ್ರಿ ಮನಸ್ಖಳನಮಾಗೆ ವಿಸ್ಮಯಂಬಟ್ಟು ಪುರೋಹಿತರತ್ನಮಂ ಬರಿಸಿ,

ಪದಿನಾಲ್ಕುಂ ರತ್ನಕ್ಕಂ
ಮೊದಲೆನಗೀ ಚಕ್ರರತ್ನಮಿದಱಿಂ ಮೇಲಾ
ವುದು ದೈವಮೆನಗಯೋಧ್ಯೆಯ
ನಿದು ಪೊಗದೆ ತುಱುಂಬಿನಿಂದ ಕಾರಣಮೇನೋ ೭

ಆ ಪೂರ್ವದಕ್ಷಿಣಾಪರ
ಕೂಪಾರದ ರಜತಗಿರಿಗುಹಾದ್ವಯದೆಡೆಯೊಳ್
ಪೋಪಂದುಮಣಮೆ ತೊಡಱದು
ದೀ ಪುರಗೋಪುರದೊಳೇಕೆ ತೊಡರ್ದುದೊ ಚಕ್ರಂ ೮

ಎನಗಮರಾತಿಗಳೊಳರೆಂ
ಬಿನಿತು ಪರಾಭವಮನೀಗಳೀಚಕ್ರಂ ಸೂ
ಚನೆಗೈದುದಿನ್ನನಾವಂ
ತನಗಿರಲೆಡೆಮಾಡಿದಪ್ಪನಂತಕಮುಖಮಂ ೯

ವ॥ ಎಂದು ವೀರರಸೋದಾರಗಂಭೀರವಚನರಚನೆಗಳಿನನಿತನೆ ಬೆಸಸಿ ಮಾಣ್ದ ಚಕ್ರವಲ್ಲಭಂಗೆ ಪುರೋಹಿತನಭಿಮುಖನಾಗಿ,

ನೀನಾದಿರಾಜನೈ ನಿನ
ಗಾ ನಾಲ್ಕುಂ ರಾಜವಿದ್ಯೆ ಪುಟ್ಟಿದುದಱಿಂ
ನೀನೆ ಬೆಸಸುವುದು ನಯಮನ
ದೇನೆಂದೆಮ್ಮಂದಿಗರ್ ಜಡರ್ ಬಿನ್ನವಿಪರ್ ೧೦

ಅವನು ಎಂದೂ ಅಡೆತಡೆ ಇಲ್ಲದೆ ಚಲಿಸುವ ಚಕ್ರರತ್ನದ ಸ್ಖಲನಕ್ಕಿಂತ ಹೆಚ್ಚಾಗಿ ಮನಸ್ಖಲನವುಂಟಾಗಲು, ಆಶ್ಚರಿಗೊಂಡು ಪುರೋಹಿತಶ್ರೇಷ್ಠನನ್ನು ಕರೆಯಿಸಿಕೊಂಡನು. ೭. "ಈ ಚಕ್ರರತ್ನವು ನನಗೆ ಹದಿನಾಲ್ಕು ರತ್ನಗಳಲ್ಲಿ ಶ್ರೇಷ್ಠವಾದುದು. ಇದಕ್ಕಿಂತ ಮಿಗಿಲಾದ ದೈವವು ನನಗಿಲ್ಲ. ಇದು ಅಯೋಧ್ಯೆಯನ್ನು ಪ್ರವೇಶಿಸದೆಯೆ ಸುಮ್ಮನೆ ನಿಂತುದಕ್ಕೆ ಕಾರಣವೇನೋ ತಿಳಿಯದು. ೮. "ಪೂರ್ವ, ಪಶ್ಚಿಮ ಮತ್ತು ದಕ್ಷಿಣಗಳ ಸಮುದ್ರಗಳ ಮತ್ತು 'ರಜತಗಿರಿ'ಯ ಗುಹಾದ್ವಯಗಳಲ್ಲಿ ಹೋಗಲು ಸ್ವಲ್ಪವೂ ತೊಡರಿರದ ಈ ಚಕ್ರಕ್ಕೆ ಈ ಪುರಗೋಪುರದ್ವಾರ ಪ್ರವೇಶದ ಕಾಲದಲ್ಲಿ ತೊಡರೇಕುಂಟಾಯಿತು? ೯. ನನಗೂ ಶತ್ರುಗಳಿರುವರೆಂಬ ವಿಷಯವನ್ನು ಈ ಚಕ್ರವು ತಿಳಿಸಿ ತನ್ಮೂಲಕ ನನಗೆ ಪರಾಭವವನ್ನು ಸೂಚಿಸಿದೆ. ಯಮನ ಬಾಯನ್ನು ತನ್ನ ವಾಸಸ್ಥಾನವನ್ನಾಗಿ ಮಾಡಿಕೊಳ್ಳಲು ಆದಾವನು ಬಯಸಿದ್ದಾನೊ?" ವ॥ ಎಂದು ಪರಾಕ್ರಮಪ್ರದರ್ಶಕವೂ ಉದಾರವೂ ಗಂಭೀರವೂ ಆದ ಮಾತುಗಳನ್ನು ಹೇಳಿ ಸುಮ್ಮನಾದನು. ಆಗ ಚಕ್ರವರ್ತಿಯ ಮುಂದೆ ಪುರೋಹಿತನು ಬಂದು ನಿಂತು, ೧೦. "ನೀನು ಆದಿರಾಜ; ನಿನಗೆ (ಸಾಮದಾನಗಳೇ) ಮುಂತಾದ ನಾಲ್ಕು ರಾಜವಿದ್ಯೆಗಳೂ ಕೈಸೇರಿವೆ. ಆದ ಕಾರಣ ನೀನೇ ರಾಜನಯವನ್ನು ತಿಳಿಸುವುದು.

ಫಳದಿಂ ಕಲ್ಪದ್ರುಮಮಂ
ಜಳದಿಂ ಜಳನಿಧಿಯನುಕ್ತಿಯಿಂ ಸುರಗುರುವಂ
ಬೆಳಗಿಂ ದಿನಪನನರ್ಚಿಪ
ಜಡಮತಿಗಳ ತೆಱನನಾಮುಮನುಕರಿಸಿರೆವೇ ೧೧

ನಿನ್ನಯ ಮಾಡಿದ ಗೌರವ
ದುನ್ನತಿ ನುಡಿಯಿಸುವುದೆನ್ನನದಱಿಂ ಕಿಱಿದಂ
ಬಿನ್ನವಿಸಿದಪೆಂ ಜೈತ್ರಾ
ಸ್ತ್ರನ್ನಿನಗೀ ಚಕ್ರರತ್ನದಿಂ ಪೆಱತುಂಟೇ ೧೨

ಇದು ಪಗೆವರುಳ್ಳುದಂ ತೋ
ಱಿದಪುದು ನಿನಗರಿನೃಪರ್ಕಳಿಲ್ಲದಿದಿಂತಿರ್ಪು
ದೆ ದುರ್ನಿರೀಕ್ಷ್ಯಮಿನಬಿಂ
ಬದಂತೆ ಪಜ್ಜಳಿಸಿ ಬಾಗಿಲೊಳ್ ಪುರವರದಾ ೧೩

ದ್ವಾದಶರಾಜಕಮೆಂಬುದ
ನೋದುಗಳೊಳ್ ಕೇಳಲಾದುದಲ್ಲದೆ ಕಾಣ
ಲ್ಕಾದುದೆ ಲವಣೋದಧಿವೃತ
ಮೇದಿನಿಯೊಳ್ ದೇವ ನಿನ್ನ ಪೆಸರೆಸೆವೆಡೆಯೊಳ್ ೧೪

ನಿನಗರಸ ಬಹಿರ್ಮಂಡಳ
ಮನೆ ಸಮಱಿಲ್ಕಿನಿತುಬರಿಸಮುಂ ಪೋದುವು ಕೇ
ಳಿನಿಸಂತರ್ಮಂಡಲಶೋ
ಧನಮುಂಟೆಂದಱಿಪಿದುದುಮನಿನ್ನಱಿಪುವೆವೇ ೧೫

ನಮ್ಮಂಥ ಜಡರು ಏನೆಂದು ತಾನೆ ಹೇಳಬಲ್ಲರು? ೧೧. "ಹಣ್ಣುಗಳಿಂದ ಕಲ್ಪದ್ರುಮವನ್ನೂ ನೀರಿನಿಂದ ಸಮುದ್ರವನ್ನೂ ಮಾತುಗಳಿಂದ ಬೃಹಸ್ಪತಿಯನ್ನೂ ಬೆಳಕಿನಿಂದ ಸೂರ್ಯನನ್ನೂ ಅರ್ಚಿಸುವ ಜಡಮತಿಗಳಂತಿರುವವರು ನಾವು! ೧೨. "ನೀನು ಮಾಡಿದ ವಿಶೇಷವಾದ ಗೌರವವು ನನ್ನನ್ನು ನುಡಿಯಿಸುತ್ತಿದೆ. ಅದರಿಂದ ಕಿರಿದಾದ ವಿಷಯವನ್ನು ಬಿನ್ನವಿಸುತ್ತೇನೆ. ಈ ಚಕ್ರರತ್ನಕ್ಕಿಂತ ಮಿಗಿಲಾದ ಗೆಲವೀಯುವ ಇನ್ನೊಂದಸ್ತ್ರವುಂಟೇ? ೧೩. "ನಿನಗೆ ಶತ್ರುಗಳಿದ್ದಾರೆಂಬುದನ್ನು ಇದು ಸೂಚಿಸುತ್ತದೆ. ನಿನಗೆ ಶತ್ರುಗಳಿಲ್ಲದ ಪಕ್ಷದಲ್ಲಿ ಸೂರ್ಯ ಬಿಂಬದಂತೆ ಪ್ರಜ್ವಲಿಸಿ ದುರ್ನಿರೀಕ್ಷ್ಯವಾದ ಈ ಚಕ್ರರತ್ನವು ಪುರದ ಬಾಗಿಲಿನಲ್ಲಿ ಹೀಗೆ ಸುಮ್ಮನೆ ನಿಲ್ಲಬಹುದೇ? ೧೪. "ಲವಣ ಸಮುದ್ರದಿಂದ ಆವೃತವೂ ನಿನ್ನ ಹೆಸರಿನಿಂದ ಪ್ರಖ್ಯಾತವೂ ಆದ ಭೂಮಿಯಲ್ಲಿ ದ್ವಾದಶರಾಜಕ[1]ವೆಂಬ ಉಕ್ತಿಯನ್ನು ಪುಸ್ತಕಗಳಲ್ಲಿ ಓದಬಹುದೇ ಹೊರತು ಕಣ್ಣುಗಳಿಂದ ನೋಡಲು ಸಾಧ್ಯವೇ? ೧೫. "ಅರಸ! ಪರರಾಜರ ಭೂಮಂಡಲವನ್ನು ವಶಪಡಿಸಿಕೊಳ್ಳುವುದರಲ್ಲಿಯೇ ಇಷ್ಟು ವರ್ಷಗಳು ಸಂದುಹೋದುವು

---

1 ದ್ವಾದಶರಾಜಕ = ಅರಿ, ಮಿತ್ರ, ಅರಿಯಮಿತ್ರ, ಮಿತ್ರನ ಮಿತ್ರ, ಅರಿಯಮಿತ್ರನ ಮಿತ್ರ, ಪಾರ್ಷ್ಣಿಗ್ರಾಹ, ಆಕ್ರಂದ, ಪಾರ್ಷ್ಣಿಗ್ರಾಹಾಸಾರ, ಆಕ್ರಾಂದಾಸಾರ, ಮಧ್ಯಮ, ಉದಾಸೀನ, ವಿಜಿಗೀಷು ಎಂಬ ಹನ್ನೆರಡು ರಾಜರು.

ಪುರುತನಯಂ ತಾನಾಮುಂ
ಪುರುತನಯರೆಮೆಮಗೆ ತಂದೆಯಿತ್ತವನಿತಳಂ
ಪೊರೆಯುಂಟೆ ತಮಗೆ ಭಾಗ್ಯಾ
ನುರೂಪದಿಂ ಬಾೞ್ವೆಮೆಱಗೆವೆಂಬತಿಮದದಿಂ ೧೬

ನಿನ್ನನುಜರನಿಬರುಂ ಮಾ
ನೋನ್ನತರಣಮೆಱಗರವರೊಳಗ್ಗಳದದಟಂ
ತನ್ನಭಿಮಾನದ ಭುಜಬಲ
ದುನ್ನತಿಯನೆ ಮೆಱೆಪ ಬಾಹುಬಲಿ ಮುನ್ನೆಱಗಂ ೧೭

ಆದಿಬ್ರಹ್ಮರ ಕೊಟ್ಟೀ
ಮೇದಿನಿಗಾನೊಡೆಯನಾತನರಸಿನಿಪಿರಿದಿಂ
ದಾದೊಡಮೇನೆನಗೆಂಬ ಮ
ದೋದಯದೊಳ್ ದೇವ ಬಾಹುಬಲಿ ಬಲ್ದಿರ್ದಂ ೧೮

ನಿನಗೇನಂ ಪೇೞ್ವೆನಾತಂ ಸುಭಟಸಮರಸಂಘಟ್ಟದೋರ್ಗರ್ವವಿಧ್ವಂ
ಸನಕೇಳೀದೋಹಳಂ ವಿದ್ವಿಷದಿಭದದನಸ್ತಂಭಲೀಲಾಸಮುತ್ಪಾ
ಟನಕಾಂಕ್ಷಾದುರ್ಮದಂ ದುರ್ಜಯರಿಪುನೃಪಶೌರ್ಯೋನ್ನಮನ್ಮಸ್ತಕಾವ
ರ್ಜನವಾಂಛಾದುರ್ಧರಂ ದುರ್ಲಲಿತಚರಿತಸಂಕೇತಗೋಷ್ಠೀನಿಕೇತಂ ೧೯

ನಿನಗೆ! ಇನ್ನು ಅಂತರ್ಮಂಡಲವನ್ನು ಶೋಧಿಸಬೇಕಾಗಿದೆ. ಅದನ್ನು ಮಾಡದೆ ತಿಳಿಸಬೇಕಾಗಿದೆಯೆ! ೧೬. "ಅವನು ಪುರುರಾಜನ ಮಗ. ನಾವೂ ಪುರುರಾಜನ ಮಕ್ಕಳೇ. ತಂದೆ ಕೊಟ್ಟ ಭೂತಳವು ನಮಗೆ ಹೊರೆಯೆ? ಭಾಗ್ಯಾನುಗುಣವಾಗಿ ನಾವು ಬಾಳುವೆವು. ನಾವಾರಿಗೂ ತಲೆಬಾಗೆವು" ಎಂಬ ಅತಿಮದದಿಂದ, ೧೭. "ನಿನ್ನ ತಮ್ಮಂದಿರೆಲ್ಲರೂ ಮಾನೋನ್ನತರಾಗಿದ್ದಾರೆ. ಅವರು ಯಾರಿಗೂ ಸ್ವಲ್ಪವೂ ಜಗ್ಗರು, ಅವರಲ್ಲಿ ಅತಿಶೂರನೂ ತನ್ನ ಅಭಿಮಾನಾಶ್ರಯವಾದ ಭುಜಬಲದ ಉನ್ನತಿಯಿಂದಲೇ ಮೆರೆಯುತ್ತಿರುವವನೂ ಆದ ಬಾಹುಬಲಿಯು ಮೊದಲು ತಲೆಬಾಗನು. ೧೮. "ಆದಿಬ್ರಹ್ಮರು ಕೊಟ್ಟಿರುವ ಈ ಮೇದಿನಿಗೆ ನಾನು ಒಡೆಯ. ಭರತರಾಜನ ಅರಸುತನ ಎಷ್ಟೇ ದೊಡ್ಡದಾಗಿದ್ದರೂ ನನಗೇನು?' ಎಂಬ ಮದದಿಂದ ಬಾಹುಬಲಿ ಬಲಿತಿರುವನು. ೧೯. "ನಿನಗೇನೆಂದು ಹೇಳಲಿ! ಬಾಹುಬಲಿಯು ಸಮರದಲ್ಲಿ ಸಂಘಟಿಸುವ ಸುಭಟರ ತೋಳ್ಬಲಗಳ ಗರ್ವವಿಧ್ವಂಸನಕ್ರೀಡೆಯಲ್ಲಿ ಆಸಕ್ತನು. ಶತ್ರುರಾಜರ ಮದ್ದಾನೆಗಳ ಕಂಬಗಳಂತಿರುವ ದಂತಗಳನ್ನು ಸರಾಗವಾಗಿ ಕಿತ್ತೊಗೆಯಲು ಹೆಮ್ಮೆಯುಳ್ಳವನು. ಅಜೇಯರಾದ ಶತ್ರುರಾಜರ ಶೌರ್ಯದಿಂದೆತ್ತಿದ ತಲೆಗಳನ್ನು ಬಗ್ಗಿಸುವ ಆಸೆಯಿಂದ ಕೂಡಿದವನು. ಶೂರರ ಚರಿತೆಯನ್ನು ಪ್ರಶಂಸಿಸುವ ಗೋಷ್ಠಿಗೆ ಆಶ್ರಯನಾದವನು.

ರಾಜವತಿಯಕ್ಕುಮಲ್ಲದೆ
ರಾಜನ್ವತಿಯಾಗದಲ್ತೆ ಧರೆ ಮತ್ತೊರ್ವಂ
ತೇಜಸ್ವಿ ಪೊಡವ್ರೊಡದಜೆಂ
ರಾಜನ್ವತಿ ಮಾಡು ಧರಣಿಯಂ ಧರಣಿಪತೀ ೨೦

ಭರತೇಶ್ವರ ನಿನ್ನ ಪದಾಂ
ಬುರುಹಕ್ಕವರೆಱಗಿ ಸುಖಮನನುಭವಿಸುಗೆ ಮೇಣ್
ಪುರುಪರಮೇಶ್ವರನ ಪದಾಂ
ಬುರುಹಕ್ಕವರೆಱಗಿ ತಪಮನನುಭವಿಸುಗೆ ಮೇಣ್ ೨೧

ಬಗೆಯೊಳಗೆ ಬಳೆದ ಭೀತಿಯೆ
ಮಿಗೆ ಭವದಾಸ್ಥಾನಭೂಮಿಯಂ ಪುಗುಗೆ ವನಂ
ಬುಗುಗಲ್ಲದಂದು ಪೇೞ್ತೆಡೆ
ಪುಗುವೆಡೆಯಿಲ್ಲವರ್ಗೆ ಬೆಸಸು ಶಾಸನಹರರಂ ೨೨

ಎನೆ ಬಳೆದ ಮುನಿಸಿನೊಳ್ ಕೆ
ಚ್ಚನಾದ ಕಣ್ ದೆಸೆಗೆ ಕೆಂಪನೊದವಿಸಿದುದು ದಿ
ಗ್ವನಿತೆಯರ್ಗೆ ರಕ್ತಬಲಿಯಂ
ಮನಕ್ಕವರೆ ಬಳೆದ ಮುನಿಸೆ ಕುಡುವಂತಾಗಳ್ ೨೩

ವಿಕಸಿತನಾಸಾಪುಟನತಿ
ವಿಕಂಪಿತಾ ತಾಮ್ರದಶನವಸನಂ ಬದ್ಧ
ಭ್ರುಕುಟಿಪುಟಂ ಭರತೇಶ್ವರ
ನಕಾಲಯಮರಾಜಲೀಲೆಯಂ ಕೈಕೊಂಡಂ ೨೪

೨೦. "ಧರಣಿಪತಿಯೇ! ಆ ಮತ್ತೊಬ್ಬ ತೇಜಸ್ವಿಯು ಈ ಭೂಮಿಯನ್ನು ಆಳುವುದಾದರೆ ಆದು ಕುತ್ಸಿತರಾಜನುಳ್ಳುದಾಗಬಹುದೆ ಹೊರತು ಪ್ರಶಸ್ತ ರಾಜನುಳ್ಳುದಾಗದು. ಆ ಕಾರಣ ಈ ಭೂಮಿಯನ್ನು ಪ್ರಶಸ್ತನಾದ ರಾಜನುಳ್ಳುದನ್ನಾಗಿ ಮಾಡು. ೨೧. "ಭರತೇಶ್ವರ! ನಿನ್ನ ಈ ಕಾಲ್ದಾವರೆಗಳಿಗೆರಗಿ ನಿನ್ನ ತಮ್ಮಂದಿರು ಸುಖವನ್ನನುಭವಿಸಲಿ; ಇಲ್ಲವೆ ಪುರುಪರಮೇಶ್ವರನ ಕಾಲ್ದಾವರೆಗಳಿಗೆ ಬಿದ್ದು ತಪಸ್ಸನ್ನು ಕೈಗೊಳ್ಳಲಿ! ೨೨. ಅವರು ತಮ್ಮ ಮನದಲ್ಲುಂಟಾದ ಅತಿಭೀತಿಯಿಂದ ನಿನ್ನ ಆಸ್ಥಾನವನ್ನು ಹೊಗಬೇಕು. ಇಲ್ಲವೆ ವನವನ್ನು ಹೊಗಬೇಕು! ಮತ್ತೊಂದೆಡೆಯು ಹೊಗಲವರಿಗಿಲ್ಲ. ದೂತರ ಮೂಲಕ ಅವರಿಗೆ ಹೀಗೆ ಹೇಳಿ ಕಳುಹಿಸು" ಎಂದು ನುಡಿದನು. ೨೩. ಆಗ ಕೋಪಾಧಿಕ್ಯದಿಂದಾದ ಭರತೇಶ್ವರನ ಕೆಂಗಣ್ಣು ದಿಕ್ಕುಗಳನ್ನು ಕೆಂಪುಗೊಳಿಸಿತು! ಆದು ದಿಗ್ವನಿತೆಯರಿಗೆ ಅವನ ಕೋಪವೇ ರಕ್ತಬಲಿಯನ್ನು ಕೊಡುವಂತಿತ್ತು. ೨೪. ಅವನ ಮೂಗಿನ ಸೊಳ್ಳೆಗಳು ವಿಕಸಿತವಾದುವು. ಕೆಂಪಾದ ತುಟಿಗಳು ವಿಕಂಪಿತವಾದುವು. ಹುಬ್ಬು ಗಂಟಿಕ್ಕಿದುವು. ಆಗ ಭರತೇಶ್ವರನು ಅಕಾಲ ಯಮರಾಜನ ಲೀಲೆಯನ್ನು ಕೈಗೊಂಡನು.

ಏನೇನೋ ಮದನುಜರೆನ
ಗಾನತರಣಮಾಗದಿರ್ದರಾ ಮದಮವರ್ಗೇ
ನೇನೇತಱಿಂದಾದುದನಿನಿ
ಸಾನುಂ ಬೇಗದೊಳೆ ಕಳೆದು ತೋಱೆನೆ ರಣದೊಳ್ ೨೫

ವೀರಭಟರುದ್ಭಟಾರಭ
ಟೀರಸರಿವರವರದೆನ್ನರುಂ ಸೆಣಸುವೊಡೇ
ಕಾರಣಮೊ ಚಕ್ರಮೇವುದೊ
ವಾರಣಘಟೆ ದಂಡರತ್ನಮೇಗೆಯ್ವುದೋ ೨೬

ಕೊಲೆಗೆಯ್ದೆವೆಂತುಮೆಂಬೀ
ಬಲಮಕ್ಕುಮವಂದಿರಂ ಪಳಂಚಲೆದಪುದಿಂ
ಕೊಲೆಗೆಯ್ದದೊಡೇನೆಯ್ದರೆ
ಕಲಹದೊಳೆನ್ನಿಂ ಪರಾಭವಂಗಳನವರ್ಗಳ್ ೨೭

ಎನಿಬರರಸುಗಳುಮೆಱಗಿದೊ
ಡೆನಗೇವಂದಪುದೊ ಬಾಹುಬಲಿ ಪೊಱಗೆನೆ ಪೇ
ಟೆನಿತುಂ ಪುರಮೇವುದೊ ಪೌ
ದನಪುರಮೆನ್ನಾಳ್ಕೆಗಿಂತು ಪೊಱಗೆನಿಪಾಗಳ್ ೨೮

ಏವನೆಮಗೆಂಬ ಶೌರ್ಯಮ
ದಾವಷ್ಟಂಭದೊಳವಂದಿರಿಂತುಱದಿರೆ ಪೇ
ಟಾವುದೊ ಬಾಯ್ಕೇಳಿಸಿಯುಮಿ
ದೇವುದೊ ಷಟ್ಖಂಡಮಂಡಿತಂ ಭೂವಳಯಂ ೨೯

೨೫. ಏನು ಹೇಳುವಿರಿ? ನನ್ನ ತಮ್ಮಂದಿರು ನನಗೆ ಸ್ವಲ್ಪವೂ ತಲೆಬಾಗದಿದ್ದರೆ ಆ ಮದವು ಅವರಿಗೆ ಏತರಿಂದುಂಟಾಯಿತೋ? ಅದನ್ನು "ಯುದ್ಧದಲ್ಲಿ ಬೇಗ ಹೋಗಲಾಡಿಸದಿರುವೆನೆ? ೨೬. "ಅವರು ನನ್ನೊಡನೆ ಸೆಣಸುವುದಾದರೆ, ಉದ್ಭಟಾರಭಟೀರಸರಾದ ಈ ವೀರಭಟರು ಏನು ಮಾಡುವರು? ಈ ಚಕ್ರವಾದರೂ ಯಾವ ಕಾರಣವಿರಬೇಕು? ಈ ಗಜಸೇನೆ ಏನು ಮಾಡುವುದು? ಈ ದಂಡರತ್ನವೇನನ್ನೆಸಗುವುದು? ೨೭. "ಹೇಗೂ ನಾವು (ಸೋದರರಾದ್ದರಿಂದ) ಕೊಲೆಗೆ ಪಾತ್ರರಾಗುವುದಿಲ್ಲವೆಂಬ ಮನೋಬಲವಿರಬಹುದು. ಆದರೆ ಅವರನ್ನು ಹೊರಗಟ್ಟಲು ಸಾಧ್ಯ. ಕೊಲೆಗೆ ಈಡಾಗದಿದ್ದರೇನು? ಯುದ್ಧದಲ್ಲಿ ನನ್ನಿಂದ ಸೋಲನ್ನು ಪಡೆಯದಿರುವರೆ? ೨೮. "ಮತ್ತೆಲ್ಲ ಅರಸುಗಳೆರಗಿದರೂ ನನಗೆ ಬಂದ ಭಾಗ್ಯವೇನು? ಬಾಹುಬಲಿ ಇದಕ್ಕೆ ಹೊರತೆ? ಪೌದನಪುರವು ನನ್ನಾಳ್ವಿಕೆಗೊಳಪಡದೆಯೆ ಮತ್ತಿತರ ಪಟ್ಟಣಗಳೆಲ್ಲ ನನ್ನ ವಶಕ್ಕೆ ಬಂದರೇನುಪಯೋಗ? ೨೯. "ನಮಗೆ ಏನು ಮಾಡುವನು? ಎಂದು ಶೌರ್ಯಗರ್ವದಿಂದ ಬಾಹುಬಲಿ ಮುಂತಾದವರು ನನ್ನನ್ನು ಅಲಕ್ಷಿಸಿದಾಗ, ಯಾವುದನ್ನು ಸೋಲಿಸಿದರೆ ಏನು?

ಎಂದೊಡೆ ಪುರೋಹಿತಂ ನಿನ
ತೊಂದೋಲೆಗೆ ತೀರ್ವುದೊಂದು ಮನೆವಾರ್ತೆಗಿದೇ
ನೆಂದರಸ ಬಳೆಯೆ ನುಡಿದಪೆ
ಯೆಂದಟ್ಟಲೆವೇಳ್ದನವರ್ಗೆ ಶಾಸನಹರರಂ ೩೦

ವ|| ಆಗಳ್ ಭರತೇಶ್ವರಚಕ್ರವರ್ತಿಯಟ್ಟಿದ ದೂತರ್ ಪುರುಪರಮೇಶ್ವರತನೂಜರಲ್ಲಿಗೆ ಪೋಗಿ,

ಎನಗೊರ್ವಂಗುಪಭೋಗ್ಯಮಲ್ತು ವಸುಧಾಸಾಮ್ರಾಜ್ಯಮೋರಂತೆ ನಿ
ಮ್ಮನಿಬರ್ಗಂ ಪಿರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ
ವಿನಯಂ ಸಲ್ವುದು ತಾಮುಮಾಮುಮೊಡನಿರ್ಪಂ ಬರ್ಪುದೆಂಬೀಶಶಾ
ಸನಮಂ ನೆತ್ತಿಯೊಳಾಂತು ಬನ್ನಿಮೆಱಗಿಂ ಚಕ್ರೇಶಪಾದಾಬ್ಜದೊಳ್ ೩೧

ವ|| ಎಂದು ನುಡಿದ ದೂತನ ನುಡಿಯುಮಂ ರಾಜಾದೇಶಮುಮನವಧಾರಿಸಿ ಬಂದ ದೂತನಂ ಮನ್ನಿಸಿ ಸಂತೋಷಂಬಡಿಸಿ ಪೋಗಲ್ವೇಳ್ದು,

ಪಿರಿಯಣ್ಣಂ ಗುರು ತಂದೆಯೆಂದೆಱಗುವಂ ಮುನ್ನೆಲ್ಲಮಿಂತೀಗಳಾ
ಳರಸೆಂಬೊಂದು ವಿಭೇದಮಾದೊಡೆಱಕಂ ಚೀ ಕಷ್ಟಮಲ್ತೇ ವಸುಂ
ಧರೆಗಯ್ಯಂ ದಯೆಗೆಯ್ಯೆ ಮುಂ ಪಡೆದುದರ್ಕಿಂತೀತನೊಳ್ ತೊಟ್ಟ ಕಿಂ
ಕರಭಾವಂ ನಮಗಕ್ಕಿಗೊಟ್ಟು ಮಡಗೂಟುಣ್ಬಂದಮಂ ಪೋಲದೇ ೩೨

ಷಟ್ಖಂಡಮಂಡಿತವಾದ ಭೂಮಂಡಲವು ನನ್ನ ಆಜ್ಞಾಧೀನವಾಗಿದ್ದರೂ ಏನು ಉಪಯೋಗ?" ಎಂದನು. ೩೦. ಆಗ ಪುರೋಹಿತನು "ಅರಸ, ನಿನ್ನ ಒಂದು ಪತ್ರದಿಂದ ಎಲ್ಲವೂ ಬಗೆಹರಿಯುವುದು, ನಿನ್ನ ಮನೆಯ ಕೆಲಸಕ್ಕಾಗಿ ಇಷ್ಟೊಂದು ಬೆಳೆಸಿ ಮಾತಾಡುವೆಯಲ್ಲ" ಎಂದು ನುಡಿದು, ಕೂಡಲೇ ದೂತರನ್ನು ಕಳಿಸುವಂತೆ ತಿಳಿಸಿದನು. ವ|| ಆಗ ಭರತೇಶ್ವರಚಕ್ರವರ್ತಿಯು ಕಳುಹಿಸಿಕೊಟ್ಟ ದೂತರು ಪುರುರಾಜನ ಮಕ್ಕಳ ಬಳಿಗೆ ಹೋಗಿ ಹೀಗೆ ಸಂದೇಶವನ್ನು ತಿಳಿಸಿದರು: ೩೧. "ನನಗೊಬ್ಬನಿಗೇ ಈ ಭೂಸಾಮ್ರಾಜ್ಯವು ಉಪಭೋಗಾರ್ಹವಲ್ಲ. ಇದು ನಿಮಗೂ ಸಂಬಂಧಪಟ್ಟುದೇ. ಹಿರಿಯಣ್ಣನೇನು, ತಂದೆಯೇನು-ಇಬ್ಬರೂ ಸಮಾನರು ಎಂಬ ಸದ್ಬುದ್ಧಿಯಿಂದ ಅವನಲ್ಲಿ ವಿನಯವನ್ನು ತಳೆಯಿರಿ. ನಾನೂ ನೀವೂ ಒಡನಿದ್ದುಕೊಂಡು ಬಾಳೋಣ" ಎಂಬ ರಾಜನ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಚಕ್ರೇಶನಾದ ಭರತನ ಪಾದಪದ್ಮಗಳಿಗೆರಗಲು ಬನ್ನಿರಿ". ವ|| ಎಂದು ನುಡಿದ ದೂತನ ಮಾತುಗಳನ್ನೂ ರಾಜಾದೇಶವನ್ನೂ ಕೇಳಿ ಅವರು ದೂತನನ್ನು ಗೌರವಿಸಿ ಸಂತೋಷಪಡಿಸಿ ಹೋಗಲನುಮತಿಕೊಟ್ಟರು. ೩೨. "ಹಿರಿಯಣ್ಣನು ಗುರು, ತಂದೆ ಎಂದು ತಿಳಿದು ಮೊದಲು ನಮಸ್ಕರಿಸುವುದು ಯುಕ್ತ. ಆದರೆ ಈಗ ಆಳು-ಅರಸ ಎಂಬ ಭೇದಭಾವವುಂಟಾದುದರಿಂದ ಸ್ನೇಹ ತೋರಿಸುವುದು ಕಷ್ಟವಲ್ಲವೆ? ಭೂಮಿಯನ್ನು ತಂದೆಯು ದಯೆಮಾಡಿಕೊಟ್ಟ ಕಾರಣ ನಾವು ಅದನ್ನು ಹಿಂದೆ ಪಡೆದೆವು. ಈಗ ನಾವು ಭರತನಲ್ಲಿ ಕಿಂಕರಭಾವವನ್ನು ತೋರಿಸಿದರೆ ನಾವೇ ಅಕ್ಕಿ ಕೊಟ್ಟು, ಅವನು ತಿಂದು ಮಿಕ್ಕ

ವ|| ಎಂದು ತಮ್ಮೊಳನಿಬರುಂ ಪರಿಚ್ಛೇದಿಸಿ,

ಕುಳಿಶಾಸ್ತ್ರೋತ್ತಂಸಿತಪದ
ನಳಿನಂಗೆ ತನೂಜರಾಗಿ ಪುರುಷಾರ್ಥಮನು
ಜ್ವಳಿಸದೆ ಮಾಣ್ಬಮೆ ನಮಗಿದು
ಪಳಾಳಭಾರಂಬೊಲೀ ಮಹೀತಳಭಾರಂ ೩೩

ವ|| ಎಂದು ಪರಿತ್ಯಕ್ತನಿಜರಾಜ್ಯಪರಿಚ್ಛೇದರಾಗಿ,

ತಳರ್ದಪುವು ರತ್ನಶಿಖರಾ
ವಳಿವಿಳಸಿತ ಕನಕಗಿರಿಗಳೆನೆ ತನುರುಚಿಗಳ್
ಬೆಳಗೆ ಕುಮಾರರ್ ನೂರ್ವರು
ಮೊಳಪೊಕ್ಕರ್ ಸಮವಸರಣಭೂಮಂಡಲಮಂ ೩೪

ಒಳಪುಗುವುದುಮಖಿಳಜಗ
ತ್ತಿಳಕನ ಮುಖಚಂದ್ರಕಿರಣದಿಂ ಕರಕಮಳಾ
ವಳಿಯುಂ ತದೀಯನಯನೋ
ತ್ಪಳವನಮುಂ ಮುಗಿದುವಲರ್ದುವೊಡನೊಡನಾಗಳ್ ೩೫

ವ|| ಅಂತು,

ಪೊಡೆವಟ್ಟು ದೇವ ನೀಂ ಕುಡೆ
ಪಡೆದೆವಿಳಾತಳಮನೊಡನೆ ಪುಟ್ಟಿದ ಮೇಳ
ಕ್ಕಡಿಗೆಱಗಿಮೆಂದು ಭರತಂ
ಜಡಿವಂ ನಿನಗೆಱಗಿ ಪರಮ ಪೆಱರ್ಗೆಱಗುವೆವೇ ೩೬

ಎಂಜಲುಂಡಂತಾಗುವುದಿಲ್ಲವೆ?" ವ|| ಎಂದು ತಮ್ಮತಮ್ಮಲ್ಲಿಯೇ ಎಲ್ಲರೂ ಆಲೋಚಿಸಿ, ೩೩. "ಇಂದ್ರನಿಂದ ನಮಸ್ಕೃತವಾದ ಪಾದಕಮಲಗಳುಳ್ಳ ಪುರುರಾಜನ ಮಕ್ಕಳು ನಾವು. ಪುರುಷಾರ್ಥವನ್ನು ಉಜ್ವಲಗೊಳಿಸದೆ ಬಿಡೆವು. ಈ ಭೂಭಾರವು ನಮಗೆ ಹೊಟ್ಟಿನ ಹೊರೆಗೆ ಎಣೆ" ವ|| ಎಂದು ರಾಜ್ಯವನ್ನು ವೃಷಭನಾಥಪುತ್ರರು ತ್ಯಾಗಮಾಡಲು ನಿಶ್ಚಯಿಸಿದರು. ೩೪. ರತ್ನಶಿಖರಗಳಿಂದ ವಿಭೂಷಿತವಾದ ಸುವರ್ಣದ ಪರ್ವತಗಳೇ ಚಲಿಸುತ್ತಿರುವುವೋ ಎಂಬಂತೆ ದೇಹಕಾಂತಿಗಳು ಬೆಳಗುತ್ತಿರಲು ಆ ನೂರುಜನ ಕುಮಾರರು ಸಮವಸರಣವನ್ನು ಹೊಕ್ಕರು. ೩೫. ಒಳಗೆ ಪ್ರವೇಶಿಸಿದಾಗ, ನಿಖಿಲ ಜಗತ್ತಿಗೆ ತಿಲಕಪ್ರಾಯನಾದ ವೃಷಭತೀರ್ಥಂಕರನ ಮುಖವೆಂಬ ಚಂದ್ರಕಿರಣಗಳಿಂದ ಅವರ ಹಸ್ತಕಮಲಗಳ ಸಾಲು ಮುಚ್ಚಿಕೊಂಡಿತು. ಒಡನೆ ಅವರ ಕಣ್ಣುಗಳೆಂಬ ಉತ್ಪಲವನವು ಅರಳಿತು.[1] ವ|| ಹಾಗೆ, ೩೬. "ಆ ಕುಮಾರರು ನಮಸ್ಕರಿಸಿ" ದೇವ, ನೀನು ಕೊಡಲು ಈ ಭೂಮಂಡಲವನ್ನು ನಾವು ಪಡೆದೆವು. ಜೊತೆಯಲ್ಲಿ ಹುಟ್ಟಿದ್ದಕ್ಕಾಗಿ ಭರತನು ನಮ್ಮನ್ನು 'ಅಡಿಗೆರಗಿ' ಎಂದು ಬೆದರಿಸುತ್ತಿದ್ದಾನೆ, ಪರಮ! ನಿನ್ನ ಕಾಲುಗಳಿಗೆರಗಿದ ಮೇಲೆ

1 ರಾಜಕುವರರು ಕೈಮುಗಿದರು, ಅವರ ಕಣ್ಣುಗಳು ಅರಳಿದುವು- ಎಂದು ಅಭಿಪ್ರಾಯ.

ಭವದಂಘ್ರಿಕಮಳರಜದಿಂ
ಪವಿತ್ರಮಾದೆಮ್ಮ ಮಕುಟಮೆಱಗದು ಪೆಱರ್ಗಂ
ಭವಭಯಹರ ಭರತಸನೆಮ
ಗವಯವದೆಱಗಿಸುವ ತಪಮನೀಗಳೆ ದಯೆಗೈ ೩೭

ದುರಿತಘನತಿಮಿರದಶಶತ
ಕಿರಣಮತಿಪ್ರೀತಿಕರಣಮಖಿಳವಿನೇಯೋ
ದ್ಧರಣಮೆಮಗಭವ ಭವಭಯ
ಹರಣಂ ಭವದೀಯಸಮವಸರಣಂ ಶರಣಂ ೩೮

ವ॥ ಎಂದು ಪರಮನಿರ್ವೇಗಪರಾಯಣರಾಗಿ,

ಭರತಂಗೆಱಗುವರೆಂಬಿದೆ
ಪರಿಭವಮೆಮಗಿಂತು ಮಾನಭಂಗಂ ಬರೆ ಬ
ರ್ಪರಸೇವುದೆಂದು ಪೂಣ್ದರ್
ಪರಮತಪೋಭರಮನನಿಬರುಂ ಪುರುತನಯರ್ ೩೯

ವ॥ ಅಂತಾ ಕುಮಾರರನಿಬರುಮಾದಿತೀರ್ಥಂಕರಸಮವಸರಣಸರೋವರ ರಾಜಹಂಸವೃತ್ತಿಕರಮಂ ಭರತೇಶ್ವರಂ ಕೇಳ್ದು

ಅವಳಂಬಿಸಿ ನೆಗಟ್ದಿಕ್ಷ್ವಾ
ಕುವಂಶಮೊಂದನೆ ಪುರಾಣಪುರುಷರವೋಲಿಂ
ತವಿಹತಗತಿಯಿಂ ಮುನ್ನ
ನ್ನವಾಯಭೂಧರದ ಶಿಖರಮಂ ಮುಟ್ಟಿದರಾರ್ ೪೦

ಮತ್ತೊಬ್ಬರ ಕಾಲುಗಳಿಗೆರಗಲು ಸಾಧ್ಯವೆ? ೩೭. "ನಿನ್ನ ಕಾಲ್ದಾವರೆಗಳ ಧೂಳಿಯಿಂದ ಪವಿತ್ರವಾದ ನಮ್ಮ ಕಿರೀಟಗಳು ಮತ್ತಿತರರಿಗೆ ಎರಗವು. ಭವಭಯವನ್ನು ಹೋಗಲಾಡಿಸುವ ಪರಮನೆ, ಭರತನು ನಮ್ಮ ಕಾಲುಗಳ ಮೇಲೆ ಬೀಳುವಂತಾಗಲು ಯೋಗ್ಯವೆನಿಸಿದ ತಪವನ್ನು ಅನುಗ್ರಹಿಸು. ೩೮. "ನಿನ್ನ ಸಮವಸರಣವು ನಮಗೆ ಶರಣು. ಅದು ಪಾಪವೆಂಬ ದಟ್ಟವಾದ ಕತ್ತಲನ್ನು ಹೋಗಲಾಡಿಸುವ ಸೂರ್ಯ. ಪ್ರೀತಿಯನ್ನುಂಟುಮಾಡತಕ್ಕುದು. ಭಕ್ತರಾದ ಜನರನ್ನುದ್ಧರಿಸಬಲ್ಲುದು. ಅದು ನಮಗೆ ಸಂಸಾರದ ಭಯವನ್ನು ಪರಿಹರಿಸಬಲ್ಲುದು". ವ॥ ಎಂದು ಅತಿನಿರ್ವೇದಸಂಪನ್ನರಾಗಿ ೩೯. "ನಾವೆಲ್ಲರೂ ಭರತನಿಗೆ ಎರಗುವುದೆಂಬುದೇ ಒಂದು ಪರಾಭವ. ಮಾನಭಂಗವಾದ ಮೇಲೆ ಬರುವ ಅರಸುತನದಿಂದ ಏನಾಗಬೇಕು?" ಎಂದುಕೊಂಡು ಅಷ್ಟುಜನ ಪುರುತನಯರೂ ಶ್ರೇಷ್ಠವಾದ ತಪೋಭರವನ್ನು ಕೈಗೊಳ್ಳುವುದಾಗಿ ಪ್ರತಿಜ್ಞೆಮಾಡಿದರು. ವ॥ ಹಾಗೆ ಆ ಕುಮಾರರೆಲ್ಲರೂ ಆದಿತೀರ್ಥಂಕರನ ಸಮವಸರಣವೆಂಬ ಸರೋವರದ ರಾಜಹಂಸರಾದುದನ್ನು ಕೇಳಿ ಭರತನು, ೪೦. "ಪ್ರಸಿದ್ಧವಾದ ಇಕ್ಷ್ವಾಕುವಂಶ[1]ವೊಂದನ್ನೇ ಅವಲಂಬಿಸಿ, ಪುರಾಣ ಪುರುಷರಂತೆ ಅಪ್ರತಿಹತವಾದ ಗತಿಯಿಂದ ಕುಲಪರ್ವತದ

1. ವಂಶ = ಬಿದಿರು, ಬಿದಿರನ್ನವಲಂಬಿಸಿ ಪರ್ವತಶಿಖರವನ್ನೇರುವುದು ಕಠಿಣ ಎಂಬ ಸೂಚ್ಯಾರ್ಥ.

ವ|| ಎಂದು ವಿಸ್ಮಿತಾಂತಃಕರಣನಾಗಿ ಮನದೊಳೆ ಮೆಚ್ಚಿ

ಎನಗನುಜರಾಗಿಯುಂ ಚಲ
ದೆನಗೆಱಗದೆ ಪೋಗಿ ಭುವನಗುರುಗೆಱಗಿದರಂ
ತನಿಬರುಮವಱಿಂದಗ್ಗಳ
ಮೆನೆ ನೆಗೞ್ದ ಬಾಹುಬಲಿಯನೆಂತೆಱಗಿಸುವೆಂ ೪೧

ಖರಕಿರಣಸ್ಫುರಿತಕ್ಕಿದಿ
ರುರಿವಂತಿರೆ ಸೂರ್ಯಕಾಂತಮೆನ್ನೀತೇಜ
ಸ್ಫುರಿತಕ್ಕೆ ಸೆಣಸಿನೊಳ್ ಮಾ
ಱುರಿಗುಂ ಸೈರಿಸದು ತೇಜಮಾ ಭುಜಬಲಿಯಾ ೪೨

ಅದಱಿಂದಮಾತನಂ ಸಾ
ಮದಿಂದಮಳವಡಿಸಿ ನೋಡುವೆಂ ಸಾಮದೊಳಂ
ಪದವಡದೊಡೆ ಬಟಿಕಿರ್ದ
ಪ್ಪುದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ ೪೩

ವ|| ಎಂದು ಮಂತ್ರಿವರ್ಗದೊಡನೆ ನಿರಾಕುಳಿತಕಾರ್ಯಪರ್ಯವಸಾನನಾಗಿ ಬಾಹುಬಲಿಕುಮಾರಂಗೆ ಲೇಖನಮನುನ್ಮಯೂಖರತ್ನಾಭರಣಪ್ರಭೂತಸಮೇತಮನಟ್ಟುವಂತು ಮಹಾಸಂಧಿವಿಗ್ರಹಿಂಗೆ ಬೆಸಸಿದೊಡಾತಂ ಜನಪದಸಮಭಿಜಾತನುಮನ್ವಯಾಗತನುಮಭಿರೂಪನುಂ ಪ್ರತ್ಯುತ್ಪನ್ನಪ್ರತಿಭನುಂ ವಕ್ರೋಕ್ತಿನಿಪುಣನುಮಾಧೇಯವಚನನುಮನುದ್ಧತವೇಷನುಂ ಪರಿಚಿತಾಶೇಷದೇಶಭಾಷನುಂ ವಯೋವೃದ್ಧನುಂ ಪ್ರಸಿದ್ಧನುಮಪ್ಪ ಮಹತ್ತರನ ಕೈಯೊಳ್ ಸನ್ಮಾನದಾನಪುರಸ್ಸರಮಾಗೆ ಕೊಟ್ಟು

ಶಿಖರವನ್ನು ಇವರಂತೆ ಮುಟ್ಟಿದವರಾರು?" ವ|| ಎಂದು ಆಶ್ಚರ್ಯಗೊಂಡವನಾಗಿ ಮನದಲ್ಲಿ ಮೆಚ್ಚಿಕೊಂಡನು. ೪೧. "ನನಗೆ ತಮ್ಮಂದಿರಾಗಿದ್ದರೂ ಅವರೆಲ್ಲರೂ ಛಲದಿಂದ ನನಗೆರಗದೆಯೆ ಲೋಕಗುರುವಾದ ಪರಮನಿಗೆರಗಿದರು. ಅವರಿಗಿಂತಲೂ ಅತಿಪ್ರಬಲನಾಗಿರುವ ಬಾಹುಬಲಿಯನ್ನು ನಾನೆಂತೆರಗಿಸುವೆನು? ೪೨. "ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯನ ಪ್ರಕಾಶಕ್ಕೆ ಸೂರ್ಯಕಾಂತಶಿಲೆಯು ಇದಿರಾಗಿ ಉರಿಯುವಂತೆ, ನನ್ನೀ ತೇಜಸ್ಫುರಿತಕ್ಕೆ ಸ್ಪರ್ಧಿಸಿ ಆ ಭುಜಬಲಿಯ ತೇಜಸ್ಸು ಸೈರಿಸದೆಯೆ ಪ್ರತಿಜ್ವಲಿಸುವುದು. ೪೩. ಆ ಕಾರಣ ಬಾಹುಬಲಿಯನ್ನು ಸಾಮದಿಂದ ಸಂತಯಿಸಲು ಪ್ರಯತ್ನಿಸುವೆನು. ಅದಕ್ಕೂ ಶರಣಾಗದಿದ್ದರೆ ಅವನನ್ನು ತಲೆಬಾಗಿಸಲು ದಂಡರತ್ನವಿದ್ದೇ ಇದೆ" ವ|| ಎಂದು ಮಂತ್ರಿವರ್ಗದೊಡನೆ ನಿರಾಕುಲನಾಗಿ ಕಾರ್ಯಸಮಾಪ್ತಿಯನ್ನು ಸಮಾಲೋಚಿಸಿದನು. ಬಳಿಕ ಬಾಹುಬಲಿಕುಮಾರನಿಗೆ ಫಳಫಳನೆ ಹೊಳೆಯುತ್ತಿರುವ ರತ್ನಾಭರಣದ ಉಡುಗೊರೆಗಳೊಡನೆ ಪತ್ರವನ್ನು ಕಳುಹುವಂತೆ ಮಹಾಸಂಧಿವಿಗ್ರಹಿಗೆ ಆಜ್ಞೆಮಾಡಿದನು. ಆಗ ಅವನು ಸತ್ಕುಲಪ್ರಸೂತನೂ ವಂಶಪಾರಂಪರ್ಯದಿಂದ ಬಂದವನೂ ರೂಪಶಾಲಿಯೂ ಪ್ರತಿಕ್ಷಣದಲ್ಲಿಯೂ ಹೊಳೆಯುತ್ತಿರುವ ಪ್ರತಿಭೆಯುಳ್ಳವನೂ

**ವಿಜಯಕಾರ್ಯಸಿದ್ಧಿಯಕ್ಕೆಂದು ಪೋಗಲ್ವೇೞ್ದುದುಮಾತನುಂ ಕತಿಪಯಪ್ರಯಾಣಂಗಳಿಂದಂ ಪೌದನಪುರಮನೆಯ್ದಿ ಪುರಶ್ರೀಯನರ್ಥಿವಟ್ಟುನೋಡಿ ಮೆಚ್ಚುತುಂ ಬಂದು ಲೀಲೋತ್ತಾರಿತರಿಪುನೃಪಾಲ ಸಾಮಂತಸೀಮಂತಿನೀಸೀಮಂತರಪ್ಪ ಮಹಾಸಾಮಂತರಿಂದಮಧರಿತಾನೇಕರಿಪುನೃಪಾನೇಕರಣಂಗಳಪ್ಪ ವಾರಣಂಗಳಿಂದಂ ಹೇಲೋಲ್ಲಂಘಿತಮಹಾವಾಹಿನೀಭೂರಿಭೈರವಾಜಿಗಳಪ್ಪ ವಾಜಿಗಳಿಂದಮಪಹೃತ ವಿಕ್ರಾಂತ ವಿದ್ವಿಷ್ಟವಿಕ್ರಮಸಂಪತ್ತಿಗಳಪ್ಪ ಪತ್ತಿಗಳಿಂದಂ ವಿರಾಜಮಾನಮಪ್ಪ ರಾಜಮಂದಿರಮನೆಯ್ದಿ ದೌವಾರಿಕ ನಿವೇದಿಕಾತ್ಮೀಯವೃತ್ತಾಂತನಾಸ್ಥಾನಮಂಡಪಮುಂ ಪೊಕ್ಕು ಲಲಾಟತಟಸಂಘಟ್ಟಿತ ಸಭಾಕುಟ್ಟಿಮನಾಗಿ,**

॥ ಹರಿಣೀ ॥

ಮರಕತನಗಂ ದಿವ್ಯಂ ಮರ್ತ್ಯೋತ್ತಮಾಕೃತಿಯೆಂಬಿನಂ
ಎರಚಿಸಿದನಿಂತಾದಿಬ್ರಹ್ಮಂ ಹರಿನ್ಮಣಿವರ್ಣಸಂ
ನೆರೆದುದಿದು ಮೇಣ್ ಕ್ಷಾತ್ರಂ ತೇಜಂ ಧರಾಧಿಪರೂಪದಿಂ
ಧರೆಗೆನುತುಮಾದೂತಂ ಕಣ್ಬುಳ್ಕೆ ನೋಡಿ ಕುಮಾರನಂ ೪೪

ಕೊಂಕುನುಡಿಯಲ್ಲಿ ನುರಿತವನೂ ನಂಬಲು ಯೋಗ್ಯವಾದ ಮಾತುಳ್ಳವನೂ ಉದ್ಧತವೇಷವಿರಹಿತನೂ ಎಲ್ಲ ದೇಶಭಾಷೆಗಳಲ್ಲಿ ಪರಿಚಯವುಳ್ಳವನೂ ವಯೋಬುದ್ಧಿಗಳಲ್ಲಿ ವೃದ್ಧನೂ ಪ್ರಸಿದ್ಧನೂ ಆದ ಮಹತ್ತರನ ಕೈಯಲ್ಲಿ ಪತ್ರವನ್ನು ಸನ್ಮಾನದಾನಪುರಸ್ಸರವಾಗಿ ಕೊಟ್ಟು 'ವಿಜಯಿಭವ' ಎಂದು ಆಶೀರ್ವದಿಸಿ ಬೀಳ್ಕೊಟ್ಟನು. ಆವನು ಕೆಲವಾರು ಪಯಣಗಳಿಂದ ಪೌದನಪುರಿಯನ್ನು ಮುಟ್ಟಿದನು. ಆ ಪಟ್ಟಣದ ಶೋಭೆಯನ್ನು ಉತ್ಸುಕತೆಯಿಂದ ಕಂಡು ಮೆಚ್ಚಿದನು. ಶತ್ರುರಾಜರನ್ನು ಲೀಲೆಯಿಂದ ಗೆದ್ದ ಸಾಮಂತ ರಾಜರ ಸೀಮಂತಿನೀ ಸೀಮಂತರಾದ ಮಹಾಸಾಮಂತರಿಂದಲೂ ಶತ್ರುರಾಜರ ಗಜಸೈನ್ಯವನ್ನು ಯುದ್ಧಾಂಗಣದಲ್ಲಿ ಹೊಡೆದುರುಳಿಸಿದ ಆನೆಗಳಿಂದಲೂ ಮಹಾಸೈನ್ಯಗಳಿಂದ ಸರಾಗವಾಗಿ ದಾಟಿಸಲ್ಪಟ್ಟ ಯುದ್ಧಾಂಗಣಗಳುಳ್ಳ ಕುದುರೆಗಳಿಂದಲೂ ಶೂರರಾದ ಶತ್ರುರಾಜರ ವಿಕ್ರಮಸಂಪತ್ತನ್ನಪಹರಿಸಿದ ಕಾಲುದಳಗಳಿಂದಲೂ ಬೆಳಗುತ್ತಿರುವ ರಾಜಮಂದಿರವನ್ನು ಹೊಕ್ಕನು. ದ್ವಾರಪಾಲಕನಿಂದ ತಾನು ಬಂದಿರುವ ವೃತ್ತಾಂತವನ್ನು (ಬಾಹುಬಲಿಗೆ) ತಿಳಿಸಿ ಆಸ್ಥಾನಮಂಟಪಕ್ಕೆ ಹೋಗಿ ನೆಲಕ್ಕೆ ಹಣೆಯಿಟ್ಟು ನಮಸ್ಕರಿಸಿದನು.

೪೪. ಆದಿಬ್ರಹ್ಮನು ದಿವ್ಯವಾದ ಮರಕತಪರ್ವತವನ್ನು ಉತ್ತಮವಾದ ಮಾನವಾಕೃತಿಯಿಂದ ನಿರ್ಮಿಸಿದನೋ ಎಂಬಂತೆ ಪಚ್ಚೆರತ್ನದಂತೆ ಬಣ್ಣವುಳ್ಳವನಾಗಿಯೂ ಕ್ಷಾತ್ರತೇಜವೇ ರಾಜನ ರೂಪದಿಂದ ಧರೆಗಿಳಿದಂತೆಯೂ ಇರುವ ರಾಜಕುಮಾರನನ್ನು ದೂತನು ನೋಡಿದನು.

೪೫. "ಇವನು ಪುರುಪರಮೇಶ್ವರನ ಪುತ್ರ, ಭರತಚಕ್ರವರ್ತಿಯ ತಮ್ಮ. ಸುಂದರವಾದ ರೂಪವನ್ನು ತಳೆದ ಈ ಕುಮಾರನೇ ಆತನಿಗೆ ಸಮ. ಭರತನಿಗೂ ಈ ತೇಜಸ್ಸ್ಫುರಣೆಯಿಲ್ಲ."

---

೧. ವಂಶ = ಬಿದಿರು. 'ಬಿದಿರನ್ನವಲಂಬಿಸಿ ಪರ್ವತಶಿಖರವನ್ನೇರುವುದು ಕಠಿಣ' ಎಂದು ಸೂಚ್ಯಾರ್ಥ.

ಪುರುಪರಮೇಶ್ವರಪುತ್ರಂ
ಭರತೇಶ್ವರಚಕ್ರವರ್ತಿಗಸುಜನೆನಲ್ ಸುಂ
ದರರೂಪನೀಕುಮಾರನೆ
ದೊರೆ ಚಕ್ರಿಗಮೆಸೆಯದಿನಿತು ತೇಜಸ್ಸ್ಫುರಿತಂ ೪೫

ವ|| ಎಂದು ಮನದೊಳೆ ಬಗೆದು ವಿಸ್ಮಯಂಬಟ್ಟು ಭರತನಾಥದೂತನಾತ್ಮಪಾರ್ಶ್ವಚರಕರತಳದಿನುಪಾಯನರತ್ನಕರಂಡಕಮಂ ಕೊಂಡು ದೇವ ಭವದೀಯಾಗ್ರಜಂ ರಾಜಾಧಿರಾಜಂ ನಿಮಗಟ್ಟಿದ ಮಹಾಪ್ರಸಾದಂ ಬಿನ್ನಪಮೆಂದು ಮುಂದಿಟ್ಟು ಮಹತ್ತರಂ ಮಹತ್ತರಯೋಗ್ಯಮಹೀನಿಹಿತಾಸನದೊಳಿರ್ಪುದುಂ; ಅದಂ ಮಹಾಸಂಧಿವಿಗ್ರಹಿ ಕೊಂಡು ಅಪನೀತಮುದ್ರೆಯಂ ಮಾಡಿ ತದಂತಸ್ಸ್ಥಿತಂಗಳಪ್ಪ ರತ್ನಾಭರಣಂಗಳಂ ತೋಱಿ ಕೋಶಾಧ್ಯಕ್ಷಹಸ್ತನ್ಯಸ್ತಂಗಳ್ಮಾಡಿ ದೇವ ಲೇಖಮಿದೆಂದು,

ಭೂವಲ್ಲಭಸೋತ್ಕ್ಷೇಪ
ಭ್ರೂವಿಲಸಿತದತ್ತವಾಚನಾದೇಶಮಿದಂ
ಭಾವಿಸಿಮೆಂದತಿಮಧುರೋ
ದ್ಭಾವಿತಗಂಭೀರನಾದದಿಂ ಬಾಜಿಸಿದಂ ೪೬

ವ|| ಸ್ವಸ್ತಿಸಮಸ್ತವಿಶ್ವಪಾಧೀಶ್ವರಪುರುಪರಮೇಶ್ವರಚರಣಸರಸಿಜರಜೋರಂಜಿತಮಣಿಕಿರೀಟಮಕರಿಕಾಚಕ್ರಂ ಚಕ್ರರತ್ನಪ್ರಭಾಪ್ರಸಾದಿತನಿಖಿಲದಿಕ್ಚಕ್ರಂ ಭರತೇಶ್ವರಚಕ್ರವರ್ತಿ ನಿಜಪ್ರಿಯಾನುಜಬಾಹುಬಲಿಕುಮಾರನಂ ಪರಮಾಶೀರ್ವಾದದಿಂ ಪರಸಿ ಕನಕಪತ್ರಾಂಕಿತಕಾರ್ಮುಕಲತಾಲಂಬನಂಗಳುಂ ವಿಜಯೋತ್ಸವತೋರಣಸ್ತಂಭಂಗಳುಂ ವೀರಶ್ರೀಭುಜಂಗೀಸಮಾಶ್ರಯಶ್ರೀಖಂಡಕಾಂಡಂಗಳುಮಪ್ಪ ದೋರ್ದಂಡಂಗಳಿಂದಮತಿನಿಬಿಡಾಲಿಂಗನಂಗೆಯ್ದು ಕಾರ್ಯಮಂ ಬೆಸಸಿರ್ಕುಂ,

ವ|| ಎಂದಾಲೋಚಿಸಿ ಆಶ್ಚರ್ಯಗೊಂಡು ಭರತನ ದೂತನು ತನ್ನ ಪಕ್ಕದಲ್ಲಿರುವವನ ಕೈಗಳಿಂದ ಉಪಾಯನರೂಪವಾದ ರತ್ನಕರಂಡಕವನ್ನು ಕೈಗೆತ್ತಿಕೊಂಡನು. "ದೇವ! ನಿನ್ನ ಅಣ್ಣನೂ ರಾಜಾಧಿರಾಜನೂ ಆದ ಭರತನು ನಿನಗೆ ಕಳುಹಿದ ಮಹಾನುಗ್ರಹರೂಪವಾದ ಬಿನ್ನಪ" ಎಂದು ಅದನ್ನು ಮುಂದಿಟ್ಟನು. ಆಮೇಲೆ ಆ ಮಹತ್ತರನು ಮಹತ್ತರರಿಗೆ ಯೋಗ್ಯವೂ ಭೂತಲನಿಕ್ಷಿಪ್ತವೂ ಆದ ಪೀಠದಲ್ಲಿ ಕುಳಿತನು. ಮಹಾಸಂಧಿವಿಗ್ರಹಿಯು ಅದನ್ನು ಸ್ವೀಕರಿಸಿ ಮುದ್ರೆಯನ್ನೊಡೆದನು. ಅದರೊಳಗಿನ ರತ್ನಾಭರಣಗಳನ್ನು ಪ್ರದರ್ಶಿಸಿ ಅವನ್ನು ಕೋಶಾಧ್ಯಕ್ಷನ ವಶಕ್ಕೊಪ್ಪಿಸಿ "ದೇವ! ಇಲ್ಲಿ ಪತ್ರವೊಂದಿದೆ" ಎಂದನು. ೪೬. ಭೂಪತಿಯಾದ ಬಾಹುಬಲಿಯು ಹುಬ್ಬುಗಳನ್ನು ಹಾರಿಸುವುದರ ಮೂಲಕ ಪತ್ರವೋದಲಾಜ್ಞೆಯನ್ನು ಕೊಡಲಾಗಿ, ಸಂಧಿವಿಗ್ರಹಿಯು ಮಧುರವೂ ಗಂಭೀರವೂ ಆದ ನಾದದಿಂದ ಅದನ್ನು ವಾಚಿಸಿದನು. ವ|| ಸ್ವಸ್ತಿ (ಮಂಗಳ), ಸಮಸ್ತ ಜಗತ್ತಿಗೂ ಒಡೆಯನಾದ ಪುರುಪರಮೇಶ್ವರನ ಪಾದಕಮಲಗಳ ಧೂಳಿಗಳಿಂದ ಬಣ್ಣವಡೆದ ಮಣಿಕಿರೀಟಗಳ ಮೇಲೆ ಬಿಡಿಸಿದ ಮಕರಿಕಾಚಕ್ರವುಳ್ಳ, ಚಕ್ರರತ್ನಪ್ರಭೆಯಿಂದ ಪ್ರಸನ್ನವಾದ ದಿಙ್ಮಂಡಲವುಳ್ಳ ಭರತಚಕ್ರವರ್ತಿಯು ತನ್ನ ಪ್ರೀತಿಯ ತಮ್ಮನಾದ ಬಾಹುಬಲಿಕುಮಾರನನ್ನು ಆಶೀರ್ವದಿಸಿ, ಚಿನ್ನದ ತಗಡು ಬಡಿದ, ಬಿಲ್ಲೆಂಬ ಬಳ್ಳಿಗೆ ಆಶ್ರಯವಾದ, ವಿಜಯೋತ್ಸವದ ಹೆಬ್ಬಾಗಿಲಿನ

ಮತ್ತಪ್ಪುದೆನಲೊಡಂ ಮಾಣ್
ಮತ್ತತ್ತಣ ಕಾರ್ಯಮಱಿಯಲಾದುದು ಪೇೞ್ ಭೂ
ಪೋತ್ತಮನಿರ್ದನೆ ಸುಖದಿನು
ದಾತ್ತಯಶಂ ನೆಗೞ್ ನೆಗೞ್ದಯೋಧ್ಯಾಪುರದೊಳ್ ೪೭

ಎಂತಾನುಂ ನೆನೆದಂ ಬಹು
ಚಿಂತಂ ಚಕ್ರೇಶನೆಮ್ಮ ದಿಗ್ವಿಜಯಮುಮಾ
ದಂತೆಡಱದೆಯ್ದೆ ನಡೆದುದೆ
ಸಂತಮೆ ದಕ್ಷಿಣಭುಜಕ್ಕೆ ಭೂವಲ್ಲಭನಾ ೪೮

ಅರಸುಗಳೆಲ್ಲಂ ಬಾಯ್ಕೇ
ಳ್ದರೆಂದುಮಾಶಾಂತರಂಗಳಳ್ಕಿದುವೆಂದುಂ
ಧರಣಿತಳಂ ಕೀರ್ತಿಸೆ ಕೇ
ಳ್ದು ರಾಗಿಸುತ್ತಿರ್ಪೆವಿನ್ನುಮೇಂ ತೊದಳುಂಟೇ ೪೯

ಇಲ್ಲೆಯೊ ಪೇೞೆಂದು ಮಹೀ
ವಲ್ಲಭದೂತಂಗೆ ನುಡಿದು ದಶನಾಂಶುಗಳಂ
ಮೆಲ್ಲನೆ ದಶನಚ್ಛದಮೃದು
ಪಲ್ಲವದಿಂ ಮಱಿಸಿ ಮಾಣೆ ದೂತಂ ನುಡಿದಂ ೫೦

ಕಂಭಗಳಾದ, ವೀರಲಕ್ಷ್ಮಿಯೆಂಬ ಸರ್ಪಿಣಿಯಿಂದ ಸುತ್ತುವರಿದ ಶ್ರೀಗಂಧವೃಕ್ಷದ ಕಾಂಡಗಳೋ ಎಂಬಂತಿರುವ ದಂಡಗಳಂತುದ್ದವಾದ ಬಾಹುಗಳಿಂದ ದಟ್ಟವಾಗಪ್ಪಿಕೊಂಡು ಕಾರ್ಯವನ್ನು ಆಜ್ಞಾಪಿಸಿರುವನು. ೪೭. "ಪತ್ರದಲ್ಲಿ ಇನ್ನೂ ಇದೆ" ಎಂದು ಸಂಧಿವಿಗ್ರಹಿಯು ನುಡಿದನು. ಅದಕ್ಕೆ ಬಾಹುಬಲಿಯು, 'ಇರಲಿ, ನಿಲ್ಲಿಸು. ಮುಂದಿನ ಕಾರ್ಯವು ಗೊತ್ತೇ ಇದೆ' ಎಂದು ಹೇಳಿ ಇಂತೆಂದನು: "ಅಯ್ಯಾ ಮಹತ್ತರ, ಕೀರ್ತಿಶಾಲಿಯಾದ ಭರತಭೂಪಾಲನು ಕುಶಲದಿಂದ ಅಯೋಧ್ಯೆಯಲ್ಲಿ ಇರುವನೆ? ೪೮. "ನಾನಾ ವಿಧವಾದ ಚಿಂತೆಗಳಲ್ಲಿ ಮುಳುಗಿದ ಚಕ್ರೇಶನು ನಮ್ಮನ್ನು ಹೇಗೊ ಸ್ಮರಣೆಗೆ ತಂದುಕೊಂಡನಲ್ಲಾ? ಅವನ ದಿಗ್ವಿಜಯವು ಯಾವೊಂದೂ ಎಡರಿಲ್ಲದೆ ಜರುಗಿತೆ? ಅವನ ದಕ್ಷಿಣಭುಜಕ್ಕೆ ಕ್ಷೇಮವೆ? ೪೯. "ಅರಸುಗಳೆಲ್ಲರೂ ಆಜ್ಞಾಧೀನರಾದರೆಂದೂ, ದಿಕ್ಕುಗಳೆಲ್ಲವೂ ಕಂಪಿಸುತ್ತಿರುವುವೆಂದೂ ಧರಣೀತಳವೆಲ್ಲ ಹೊಗಳುತ್ತಿರುವುದೆಂದೂ ಕೇಳಿ ಸಂತುಷ್ಟರಾಗಿದ್ದೇವೆ. ಇನ್ನೂ ಏನಾದರೂ ಕೊರತೆಯುಂಟೇ? ೫೦. ಅಥವಾ ಇಲ್ಲವೇ? ಹೇಳು" ಎಂದು ಭರತನ ದೂತನಿಗೆ ಹೇಳಿ ತನ್ನ ಹಲ್ಲುಗಳ ಕಿರಣಗಳನ್ನು ಚಿಗುರಿನಂತೆ ಕೋಮಲವಾದ ತುಟಿಗಳಿಂದ ಮರಸಿಕೊಂಡು ಸುಮ್ಮನಾದನು. ಆಗ ದೂತನು ಹೇಳಿದನು.

ಭವದಗ್ರಜದಿಗ್ವಿಜಯೋ
ತ್ಸವಮಧಿಕಮಹೋತ್ಸವಂ ವಲಂ ನಿನಗಾದಂ
ಶ್ರವಣಸುಖಮೆಂದೆ ದಿಜ್ಮಾ
ತ್ರವರ್ಣನಂಗೆಯ್ವೆನುಂತದೇನೆನ್ನಳವೇ ೫೧

ವ।। ಅದೆಂತೆಂದೊಡೆ ಮುನ್ನಂ ತ್ರೈಲೋಕ್ಯಸಾಮ್ರಾಜ್ಯಹೇತುಭೂತಮೆನಿಸಿದ ಪುರುಪರಮೇಶ್ವರನ ಕೇವಲಜ್ಞಾನಪೂಜೆಯುಮಂ ಪ್ರಾಜ್ಯಸಾಮ್ರಾಜ್ಯಪ್ರಕಾಶನಕರಮಪ್ಪ ಚಕ್ರಪೂಜೆಯುಮಂ ನಿರ್ವರ್ತಿಸಿ,

ನೆಗಟ್ದಿಕ್ಷ್ವಾಕುಕುಲಾಂಬರೇಂದು ಭರತಂ ನಿನ್ನಗ್ರಜಂ ಸಾಹಸಂ
ಮುಗಿಲಂ ಮುಟ್ಟೆ ನಿಜಪ್ರತಾಪದಳವಂ ತೋಱಲ್ಕೆ ಮಾಱಾಂಪ ಜ
ಟ್ಟಿಗರಾರಪ್ಪೊಡಮಿಲ್ಲದಂತು ಸಕಳಾಶಾಚಕ್ರಮಂ ಚಕ್ರಮೊಂ
ದೆ ಗೆಲಲ್ಸಾಲ್ದಿರೆ ದಿಗ್ಜಯಕ್ಕೆ ಪೊಱಮಟ್ಟಾ ಪೆಂಪು ಸಾಮಾನ್ಯಮೇ ೫೨

ವ।। ಅಂತು ಪೊಱಮಟ್ಟನೇಕಕರಟಿಕಟಕಷೀಕರಣನಿಶ್ಶೇಷಿತಾರಾತಿವನದುರ್ಗನುಂ, ಉದಗ್ರ ಮದಾಂಧಸಿಂಧುರಪ್ರತಿಗಜಶಂಕಾಸ್ಖಾಲಿತಗಂಡಶೈಲವಿಘಟಿತಗಿರಿದುರ್ಗನುಂ, ಅಂತಸ್ಸ್ಫುರದತಿಸ್ಫಾರಸಮಯೋಷ್ಮಸಂತಪ್ತಜಲಪ್ರತ್ಯೇಕಚುಳಕಪಾನಮಾತ್ರಜಾನುದಘ್ನಜಲದುರ್ಗನುಮಾಗಿ ನಡೆದು,

೫೧. ನಿನ್ನಣ್ಣನ ದಿಗ್ವಿಜಯೋತ್ಸವವು ನಿನಗೆ ಅಧಿಕ ಸಂತೋಷವನ್ನುಂಟುಮಾಡುವುದು, ಕೇಳಲಿಕ್ಕೆ ಸುಖ ಕೊಡುವುದು ಎಂದೇ ದಿಙ್ಮಾತ್ರವರ್ಣನೆಯನ್ನು ಮಾಡುವೆನು. ಅದನ್ನು ಹೆಚ್ಚು ಬಣ್ಣಿಸಲು ನನಗೆ ಶಕ್ತಿಯುಂಟೇ? ವ।। ಆತನು ಮೊದಲು ತ್ರೈಲೋಕ್ಯ ಸಾಮ್ರಾಜ್ಯ ಪ್ರಾಪ್ತಿಗೆ ಕಾರಣವಾದ ಪುರುಪರಮೇಶ್ವರನ ಕೇವಲ ಜ್ಞಾನಪೂಜೆಯನ್ನು, ಸಾಮ್ರಾಜ್ಯ ವಿಸ್ತಾರಕ್ಕೆ ಸಹಾಯಕವಾದ ಚಕ್ರದ ಪೂಜೆಯನ್ನೂ ನೆರವೇರಿಸಿದನು. ೫೨. ಪ್ರಸಿದ್ಧವಾದ ಇಕ್ಷ್ವಾಕುಕುಲವೆಂಬ ಆಕಾಶಕ್ಕೆ ಚಂದ್ರನಾದ ನಿನ್ನಣ್ಣ ಭರತನ ಸಾಹಸವು ಮುಗಿಲನ್ನು ಮುಟ್ಟಿತು. ತನ್ನ ಪ್ರತಾಪದ ಆಳವನ್ನು (ಸಾಮರ್ಥ್ಯವನ್ನು) ತೋರಿಸುವುದಕ್ಕಾಗಿ, ಅವನನ್ನು ಎದುರಿಸುವ ಶೂರರಾರೂ ಇಲ್ಲದಂತೆ ಮಾಡಲೂ ಅವನ ಚಕ್ರವೊಂದೇ ದಿಕ್ಚಕ್ರವೆಲ್ಲವನ್ನೂ ಗೆಲ್ಲಲೂ ಸಮರ್ಥವಾಗಿದ್ದರೂ ಸಹ, ತಾನು ದಿಗ್ವಿಜಯಕ್ಕೆ ಹೊರಟ ಅವನ ಹಿರಿಮೆಯು ಸಾಮಾನ್ಯವೇ? ವ।। ಅಂತು ಹೊರಬಿದ್ದ ಅವನ ಅನೇಕ ಗಜಗಳ ಗಂಡಸ್ಥಳಗಳ ಮಸೆತದಿಂದ ಶತ್ರುಗಳ ವನದುರ್ಗಗಳು ನಿಶ್ಶೇಷವಾಗಿ ನಾಶಗೊಂಡುವು. ಅವನ ಅತಿಮದಾಂಧವಾದ ಆನೆಗಳು, ಶತ್ರುರಾಜರ ಆನೆಗಳನ್ನಾಗಿ ಸಂದೇಹಿಸಿ ಅಪ್ಪಳಿಸಿದ ಗಂಡಶೈಲಗಳಿಂದ ಗಿರಿದುರ್ಗಗಳು ವಿನಾಶಿತವಾದುವು. ಒಳಗೊಳಗೆ ಉರಿಯುತ್ತಿರುವ ಪ್ರತಾಪಾತಿಶಯೋಷ್ಣತೆಯಿಂದ ಕುದಿದು ಶತ್ರುಗಳ ಜಲದುರ್ಗಗಳ ಜಲವು ಪ್ರತ್ಯೇಕವಾಗಿ ಬೊಗಸೆಯಿಂದ ಕುಡಿಯುವಷ್ಟು ಪ್ರಮಾಣವುಳ್ಳದ್ದೂ ಮೊಳಕಾಲಿನವರೆಗೆ ಮಾತ್ರ

ಬಳಸಂಪನ್ನಕ್ಷಿತೀಶಪ್ರಕರಕರಿಕುಳಗ್ರೀವಸಂಘಟ್ಟಭಂಗಂ
ಗಳನೆಂದುಂ ಕಾಣದೆತ್ತಂ ಬಳೆಯೆ ಕಟೆದ ವೇಳಾವನಸ್ಥೂಳಶಾಳಂ
ಗಳೊಳಾದಿಬ್ರಹ್ಮಪುತ್ರಂ ನಿಜವಿಜಯಗಜೇಂದ್ರಂಗಳಂ ಕಟ್ಟೆ ನೀಳಾ
ಚಳಸಂಘಾತಂಗಳಿಂ ಸುತ್ತಿಱಿದವೊಲೆಸೆದತ್ತಾ ಸಮುದ್ರೋಪಕಂಠಂ ೫೩

ವ|| ಅಂತು ಪೂರ್ವದಕ್ಷಿಣಾಪರಪಾರಾವಾರತೀರವರ್ತಿಗಳಪ್ಪ ಭೂಪಾಳರನೆಱಗಿಸಿ ಗಂಗಾ ವೈಜಯಂತೀಸಿಂಧುದ್ವಾರಂಗಳಂ ನಿಜವಿಜಯವರೂಥಮೊಂದಱೊಳೆ ನುಗುಳ್ದು ಲವಣಜಲಧಿಯಂ ಪೊಕ್ಕು,

ಕರಿಮಕರಂ ಪರಿವಂತಿರೆ
ಪರಿವ ರಥಂ ಜಳಧಿಯೊಳಗೆ ಮಾಕೊಡೆ ಶರದಿಂ
ದುರಿಪಿದನಲ್ಲವೆ ತದ್ವ್ಯಂ
ತರಾಮರಾವಾಸಮನಿತುಮಂ ಭರತೇಶಂ ೫೪

ಶರಪಾತಮೆ ದೂತನವೋಲ್
ತರೆ ಮಾಗಧವರತನುಪ್ರಭಾಸಾಮರರಂ
ಕರುಣಿಸಿ ಬಿಟ್ಟಂ ಕುಲಧನ
ಪರಿಕರಮಂ ಕಯ್ಗೆ ಮಾಡಿ ಮನುಕುಲತಿಲಕಂ ೫೫

ವಿಜಯಾರ್ಧಾದ್ರೀಂದ್ರದೊಳಂ
ವಿಜಯಾರ್ಧಕುಮಾರನೆಂಬ ನೆಗಳ್ದಮರನುಮಂ
ವಿಜಯಶರಮೊಂದೆ ತಂದುದು
ವಿಜಯೋದ್ಘೋಷಣೆಗಳಮರರಿಂ ನೆಗಳ್ವಿನೆಗಂ ೫೬

ಇರತಕ್ಕದ್ದೂ ಆಯಿತು! ೫೩. "ಸೇನಾಸಮೇತವಾದ ರಾಜಸಮೂಹದ ಆನೆಹಿಂಡುಗಳ ಕೊರಳ ಸರಪಣಿಗಳ ಸಂಘಟ್ಟದಿಂದ, ಭಂಗಗಳನ್ನೆಂದೂ ಕಾಣದೆ ಬೆಳೆದ ವೇಲಾವನಗಳಲ್ಲಿನ ಸ್ಥೂಲಶಾಲವೃಕ್ಷಗಳಲ್ಲಿ ಆದಿರಾಜನ ಪುತ್ರನಾದ ಭರತೇಶ್ವರನು ತನ್ನ ವಿಜಯಗಜಗಳನ್ನು ಕಟ್ಟಿಸಿದನು. ಆಗ ಸಮುದ್ರಸಮೀಪವು ನೀಲಪರ್ವತಗಳ ಸಮೂಹದಿಂದ ಸುತ್ತಿರಿದಂತೆ ಪ್ರಕಾಶಿಸಿತು. ವ|| ಪೂರ್ವ ದಕ್ಷಿಣ ಮತ್ತು ಪಶ್ಚಿಮ ಸಮುದ್ರಗಳ ತೀರವಾಸಿಗಳಾದ ರಾಜರನ್ನು ತಲೆಬಾಗುವಂತೆ ಮಾಡಿದನು. ಗಂಗಾ- ವೈಜಯಂತೀ ಸಿಂಧುದ್ವಾರಗಳನ್ನು ತನ್ನ ವಿಜಯರಥದಿಂದ ದಾಟಿ ಲವಣಸಮುದ್ರವನ್ನು ಹೊಕ್ಕನು". ೫೪. ಮೊಸಳೆಯು ಸಮುದ್ರದಲ್ಲಿ ಸರಾಗವಾಗಿ ಹೋಗುವಂತೆ ಹರಿದುಹೋಗುತ್ತಿದ್ದ ರಥವನ್ನು ತಡೆಗಟ್ಟಿದ ವ್ಯಂತರಾಮರರ ಆವಾಸಸ್ಥಾನಗಳನ್ನೆಲ್ಲ ಭರತೇಶನು ಬಾಣಪಾತದಿಂದ ಉರಿಸಿದನು. ೫೫. ಶರಪಾತವೇ ದೂತನ ಹಾಗೆ ಮಾಗಧ, ವರತನು ಮತ್ತು ಪ್ರಭಾಸಾಮರರನ್ನು ಸಮೀಪಕ್ಕೆ ಕರೆತಂದಿತು. ಅವರಿಂದ ಅವರ ಕುಲಧನವನ್ನು ವಶಪಡಿಸಿಕೊಂಡು ಮನುಕುಲ ತಿಲಕನಾದ ಭರತೇಶನು ಅವರನ್ನು ಕರುಣಿಸಿ ಬಿಟ್ಟುಬಿಟ್ಟನು. ೫೬. ವಿಜಯಾರ್ಧ ಪರ್ವತದಲ್ಲಿ ವಿಜಯಾರ್ಧಕುಮಾರನೆಂದು ಖ್ಯಾತಿಗೊಂಡ ಅಮರನನ್ನು ಭರತೇಶನ

ಕೃತಮಾಳಾಮರನಗಿದಾ
ನತನಾಗೆ ತಮಿಸ್ರಗುಹೆಯ ವಜ್ರದ ಪದಿ ತ
ತ್ಕ್ಷಿತಿಧರದೆರ್ದೆಯಂತೆ ಚಮೂ
ಪತಿಯಿಂ ತೆಱೆದತ್ತು ಚಕ್ರಿಗರಿಯವುಮೊಳವೇ ೫೭

ವ|| ಅಂತು ತಮಿಸ್ರಗುಹೆಯೊಳಗನೆ ಕಾಕಿಣೀರತ್ನದೊಳ್ ಬರೆದ ಚಂದ್ರಾದಿತ್ಯರ ಬೆಳಗುಗಳೊಳ್ ನಿಜವಿಜಯಕಟಕಂ ನಡೆಯೆ ವಿಜಯಾರ್ಧಾಚಳಮಂ ಪೆಱಗಿಕ್ಕಿ ಶಬರಖಂಡಂಗಳಂ ಸೇನಾನಾಯಕನೆ ಬಾಯ್ಕೇಳಿಸಿ ಬರೆ,

ಮಸಗಿ ಚಿಲಾತಾವರ್ತರ
ಬೆಸದಿಂದಂ ಬಂದ ಮೇಘಮುಖರಂ ತೂಳ್ದೋ
ಡಿಸೆ ಜಯನೊರ್ವನೆ ಚಕ್ರಿಗೆ
ಬೆಸಕೆಯ್ದತ್ತುತ್ತರಾರ್ಧಮಧ್ಯಮಖಂಡಂ ೫೮

ವ|| ಮತ್ತಂ ಸಿಂಧುಪ್ರಪಾತ ಸಿಂಧುದೇವಿಯಿಂದಮಭಿಷಿಕ್ತನಾಗಿ ಪೋಗಿ,

ಹಿಮಗಿರಿಯ ಮಧ್ಯಕೂಟದ
ಹಿಮವದ್ದಿವಿಜನುಮನೊತ್ತಿ ಕಪ್ಪಂಗೊಂಡಾ
ಹಿಮಶೈಳದೊಳಮಲಂಪಿಂ
ಹಿಮವತ್ತೇಜಮನುದಾತ್ತತೇಜಂ ಮೆಱೆದಂ ೫೯

ಜಯತರುವ ಬಾಣವೊಂದೇ ವಶಕ್ಕೆ ತಂದಿತು". ಆಗ ವಿಜಯಪ್ರಯುಕ್ತವಾದ ಉದ್ಘೋಷಣೆಗಳು ಅಮರರಿಂದ ಭರತೇಶನಿಗೆ ಸಂದುವು. ೫೭. ಕೃತಮಾಲನೆಂಬ ಅಮರನು ಹೆದರಿಕೊಂಡು ಭರತೇಶನಿಗೆ ತಲೆಬಾಗಿದನು. ತಮಿಸ್ರಗುಹೆಯ ವಜ್ರದ ಬಾಗಿಲು ಪರ್ವತದ ಎದೆಯಂತೆ ಸೇನಾಪತಿಯಿಂದ ತೆರೆಯಲ್ಪಟ್ಟಿತು. ಚಕ್ರಿಗೆ ಅಸಾಧ್ಯವಾದುದು ಇದೆಯೆ? ವ|| ಅಂತು ಆ ಕತ್ತಲೆಯ ಗವಿಯೊಳಗೆ ಕಾಕಿಣೀರತ್ನದಲ್ಲಿ ಬರೆದ ಚಂದ್ರಾದಿತ್ಯರ ಬೆಳಕಿನಲ್ಲಿ ವಿಜಯವನ್ನು ಸಾಧಿಸಿದ ತನ್ನ ಸೈನ್ಯವನ್ನು ನಡೆಯಿಸಿದನು. ಅಷ್ಟರಲ್ಲಿ ವಿಜಯಾರ್ಧಾಚಲದ ಹಿಂಭಾಗದಲ್ಲಿರುವ ಶಬರಖಂಡವನ್ನೆಲ್ಲ ಸೇನಾನಾಯಕನೇ ಸ್ವಾಧೀನ ಮಾಡಿಕೊಂಡು ಬಂದನು. ೫೮. ಚಿಲಾತಾವರ್ತರ ಸಹಾಯಕ್ಕಾಗಿ ಬಂದ ಮೇಘಮುಖರನ್ನು ಜಯಕುಮಾರನೊಬ್ಬನೇ ಅಟ್ಟೋಡಿಸಿದನು. ಚಕ್ರಿಯಾದ ಭರತೇಶನಿಗೆ ಉತ್ತರಾರ್ಧದಲ್ಲಿರುವ ಮಧ್ಯಮಖಂಡವು ಅಧೀನವಾಯಿತು. ವ|| ಸಿಂಧುಪ್ರಪಾತದಲ್ಲಿ ಸಿಂಧೂದೇವಿಯಿಂದ ಅಭಿಷಿಕ್ತನಾಗಿ ಮುಂದೆ ನಡೆದನು. ೫೯. ಹಿಮವತ್ಪರ್ವತದ ಮಧ್ಯಶಿಖರದಲ್ಲಿ ನೆಲಸಿದ್ದ ಹಿಮವತ್ಕುಮಾರನೆಂಬ ದಿವಿಜನನ್ನು ಸದೆಬಡಿದು ಕಪ್ಪವನ್ನು ಅವನಿಂದ ಸ್ವೀಕರಿಸಿದನು. ಅಲ್ಲಿ ಉದಾತ್ತತೇಜಸ್ಕನಾದ ಚಕ್ರಿಯು ಸಂತೋಷಪೂರ್ವಕವಾಗಿ

ವ॥ ಅಂತು ಬಂದು ವೃಷಭಾಚಳನಿಕಟಂಗಳೊಳಂ ಅಪ್ರತಿಹತದಿಗ್ವಿಜಯಪ್ರಶಸ್ತಿಯಂ ಟಂಕೋತ್ಕೀರ್ಣಂ ಮಾಡಿ ಗಂಗಾದೇವಿಯೋಲಗಿಸಿದನರ್ಘ್ಯರತ್ನಂಗಳಂ ಕೈಗೆ ಮಾಡಿ ನಮಿ ವಿನಮಿಗಳೊಡಲಾಗೆ ದಕ್ಷಿಣೋತ್ತರಶ್ರೇಣಿಗಳ ವಿದ್ಯಾಧರರಾಜರನಾಜ್ಞಾವಿಧೇಯರ್ಮಾಡಿ, ಕಾಂಡಕಪ್ರಪಾತಗುಹೆಯ ವಜ್ರಕವಾಟಂಗಳಂ ತೆಱೆದು ಪೊಱಮಟ್ಟು ಸಿದ್ಧದಿಗ್ವಿಜಯನಾದನಿಂತು,

ಆ ರಜತಾದ್ರಿಮುದ್ರಿತಮಹೀತಳಮಂ ಬೆಸಕೆಯ್ಸಿ ತದ್ಗುಹಾ
ದ್ವಾರಮನುರ್ಚಿಪೋಗಿ ವಿಜಿತೋತ್ತರಭೂತಳನಾದನಲ್ತೆ ಢ
ಕ್ಕಾರವರಮ್ಯದಿಗ್ವಳಯಕುಂಜರಕುಂಭವಿಲಗ್ನಸಾಂದ್ರಸಿಂ
ದೂರರಜಃಪಟಾವೃತ ದಿಶಾವಳಯಂ ಭರತಕ್ಷಿತೀಶ್ವರಂ ೬೦

ನೃಸುರಾಸುರಖೇಚರರಂ
ಬೆಸಕೆಯ್ಸಿದನೆಡಱುವಹಿತರಂ ಚಕ್ರಮೆ ಸಾ
ಧಿಸಿದಪ್ಪುದು ನವನಿಧಿಗಳ್
ಪೊಸಯಿಸಿದಪ್ಪುವು ವಿಭೂತಿಯಂ ಪುರುಸುತನಾ ೬೧

ಎನ್ನಣುಗದಮ್ಮನಿಲ್ಲದೆ
ಬಿನ್ನನೆ ಸಾಮ್ರಾಜ್ಯಮಿನಿತುಮಾರೆಱಕಮುಮ
ತ್ಯುನ್ನತಿಯಲ್ತೆನಗಾತಂ
ಮುನ್ನೆಱಗದೊಡೆಂದು ಬೆಸಸಿಯಟ್ಟಿದನೆನ್ನಂ ೬೨

ಹಿಮವತ್ತೇಜವನ್ನು (ಹಿಮಕರನಾದ ಚಂದ್ರನ ಅಥವಾ ಹಿಮವಂತನ ತೇಜಸ್ಸನ್ನು) ಪ್ರಕಾಶಪಡಿಸಿದನು. ವ॥ ಬಳಿಕ ವೃಷಭಾಚಲದ ಸಮೀಪ ಪ್ರದೇಶಗಳಲ್ಲಿ ತನ್ನ ಎಡೆತಡೆಯಿಲ್ಲದ ದಿಗ್ವಿಜಯದ ಪ್ರಶಸ್ತಿಯನ್ನು ಕಲ್ಲುಗಳ ಮೇಲೆ ಉಳಿಗಳಿಂದ ಕೆತ್ತಿಸಿದನು. ಗಂಗಾದೇವಿಯತ್ತ ಅನರ್ಘ್ಯರತ್ನಗಳನ್ನು ಸ್ವೀಕರಿಸಿ ನಮಿ ವಿನಮಿಗಳೇ ಮೊದಲಾದ ದಕ್ಷಿಣೋತ್ತರ ಪಂಕ್ತಿಗಳಲ್ಲಿ ನೆಲಸಿರುವ ವಿದ್ಯಾಧರರಾಜರನ್ನು ಆಜ್ಞಾವಿಧೇಯರನ್ನಾಗಿ ಮಾಡಿಕೊಂಡನು. ಕಾಂಡಕಪ್ರಪಾತವೆಂಬ ಗುಹೆಯ ವಜ್ರಕವಾಟಗಳನ್ನು ತೆರೆಯಿಸಿದನು. ಪುನಃ ಅಲ್ಲಿಂದ ಹೊರಹೊರಟು ದಿಕ್ಕುಗಳೆಲ್ಲವನ್ನೂ ಗೆದ್ದನು. ೬೦. ಭರತೇಶ್ವರನು ಕೈಲಾಸಪರ್ವತದವರೆಗಿನ ಭೂಭಾಗವನ್ನು ವಶಪಡಿಸಿ ಕೊಂಡನು. ಅಲ್ಲಿನ ಗುಹಾದ್ವಾರವನ್ನು ತೆರೆದು ಪ್ರವೇಶಿಸಿ ಉತ್ತರ ಭೂಭಾಗವನ್ನು ಗೆದ್ದನು. ಭೇರೀಶಬ್ದಗಳಿಂದ ರಮ್ಯವಾದ, ದಿಗ್ಗಜಗಳ ಕುಂಭಪ್ರದೇಶಗಳಲ್ಲಿ ದಟ್ಟವಾಗಿ ಸೇರಿಕೊಂಡ ಕೆಂಧೂಳಿಯೆಂಬ ಬಟ್ಟೆಯಿಂದ ದಿಙ್ಮಂಡಲವನ್ನು ಮುಚ್ಚಿಸಿದನು. ೬೧. ಅವನು ಮಾನವರನ್ನೂ ಸುರಾಸುರರನ್ನೂ ಖೇಚರರನ್ನೂ ವಶಪಡಿಸಿಕೊಂಡನು. ಅವನ ಚಕ್ರವು ತಪ್ಪುದಾರಿ ಹಿಡಿದ ಶತ್ರುಗಳನ್ನು ದಾರಿಗೆ ತಂದಿತು. ನವನಿಧಿಗಳೇ ಪುರುಸುತನ ಐಶ್ವರ್ಯವನ್ನು ಪೊಸೆಯಿಸಿದುವು. ೬೨. ನನ್ನ ಪ್ರೀತಿಯ ತಮ್ಮನಿಲ್ಲದೆ ನನ್ನೆಲ್ಲ ಸಾಮ್ರಾಜ್ಯವೂ ವ್ಯರ್ಥವೇ. ಅವನು ತನಗೆ ಮೊದಲು ಬಂದೆರಗದಿದ್ದರೆ, ಯಾರು ನನಗೆ ನಮಸ್ಕರಿಸಿದರೂ ಅದು ಅತಿಶಯವಾದ ಉನ್ನತಿಯನ್ನು

ವಿನಯಂ ಸಹಜಂ ಕೃತ್ರಿಮ
ವೆನಿಸಿದುವವು ಬೇಱವೇಱ ವಿದ್ವಜ್ಜನಮಂ
ಮನದೆಗೊಳಿಸುವುವಿವೆರಡುಂ
ನಿನಗೊಳವಾರಾರ ಮನಮುಮಂ ರಂಜಿಸವೇ ೬೩

ವ॥ ಎಂಬುದುಂ ಬಾಹುಬಲಿಕುಮಾರಂ ದೂತವಚನಾಕರ್ಣನೋದೀರ್ಣಕ್ರೋಧೋದ್ಗಚ್ಛದಚ್ಛೇದಜಳಧಾರಾಸಾರಭೀಕರಾಲೋಹಿತಕಪೋಳತಳಮುದ್ದೀಪನಪಿಂಡಪ್ರದೀಪ್ತಕಪೋಲೋಚ್ಛಳದತುಚ್ಛಮದಜಳಚ್ಛಟಾಟೋಪಭೀಷಣಾರುಣಗಂಡಸ್ಥಳಮಪ್ಪ ಗಂಧಸಿಂಧುರೇಂದ್ರಮನನುಕರಿಸಿ ಕೋಪಗರ್ಭಸ್ಮಿತಂ ಬೆರಸು,

ಮುನ್ನಂ ಸಾಮಮನೆಮ್ಮಮ
ನನ್ನೋಡಲ್ ನುಡಿದು ಭೇದಮಂ ದಂಡಮುಮಂ
ನಿನ್ನಱಿವನಿತಂ ನುಡಿದೆಯಿ
ದೇನ್ನುಡಿಗಳೊ ಸಮಱಕೊಂಡ ನುಡಿಗಳ್ ನಿನ್ನಾ ೬೪

ಇನಿತೊಂದು ನುಡಿದ ಬಲ್ಮೆಯೆ
ನಿನಗಿಲ್ಲದೊಡೇಕೆ ನಿನ್ನನಾಳ್ದಂ ನಿನ್ನಂ
ಮನಮೊಲ್ದು ನಚ್ಚಿಯಟ್ಟಿದ
ನನಾಕುಳಂ ದೂತನಿಂತು ನುಡಿಯಲ್ಬೇೞ್ಕುಂ ೬೫

ನನಗೆ ತಾರಮು'' ಎಂದು ನನ್ನನ್ನು ಕಳುಹಿಸಿದ್ದಾನೆ. ೬೩. ವಿನಯವು ಸ್ವಾಭಾವಿಕ ಮತ್ತು ಕಾರಣಾಂತರದಿಂದ ಉಂಟಾದದ್ದು ಎಂದು ಎರಡು ವಿಧ. ಅವು ಪ್ರತ್ಯೇಕವಾಗಿ ವಿದ್ವಜ್ಜನವನ್ನು ತೋಷಗೊಳಿಸುವುವು. ಇವೆರಡೂ ನಿನ್ನಲ್ಲುಂಟು. ಅವು ಯಾರ ಯಾರ ಮನವನ್ನು ತಾನೆ ರಂಜಿಸವು?'' ಎಂದು ದೂತನು ಹೇಳಿದನು. ವ॥ ದೂತನ ವಚನವನ್ನಾಲಿಸಿದ ಬಾಹುಬಲಿಯು ಕ್ರೋಧೋದ್ರಿಕ್ತನಾದನು. ನಿರಂತರವಾಗಿ ಹೊರಬಂದ ಬೆವರುನೀರಿನ ಪ್ರವಾಹದಿಂದ ಅವನ ಕಪೋಲತಲವು ಕೆಂಪಾಗಿ ಭೀಕರವಾಯಿತು. ಆಗ ಅವನು ಉರಿಯುತ್ತಿರುವ ಬೆಂಕಿಯುಂಡೆಯಂತೆ ದೀಪ್ತವಾದ ಕಪೋಲದಲ್ಲಿ ಉಕ್ಕಿಹರಿದ ಮದಜಲಾಟೋಪದಿಂದ ಭೀಷಣವೂ ಅರುಣವೂ ಆದ ಗಂಡಪ್ರದೇಶವುಳ್ಳ ಮದ್ದಾನೆಯನ್ನು ಅನುಕರಿಸಿದನು. ತರುವಾಯ ಕೋಪದಿಂದ ಮುಗುಳುನಗೆ ನಕ್ಕು ಹೀಗೆಂದನು. ೬೪. "ಮೊದಲು ಸಾಮೋಪಾಯವನ್ನು ಬಳಸಿ ನಮ್ಮ ಮನವನ್ನು ಪರೀಕ್ಷಿಸಲಾಶಿಸಿದೆ. ಬಳಿಕ ಭೇದ ದಂಡಗಳನ್ನು ಬಳಸಿಕೊಂಡು ನಿನ್ನ ಪ್ರಜ್ಞಾಪರಿಣತಿಯನ್ನು ತೋರಿಸಿಕೊಂಡಿರುವೆ. ಓರಣಗೊಳಿಸಿದ ನಿನ್ನ ಈ ನುಡಿಗಳು ಎಂಥ ಮಾತುಗಳು? ೬೫. ಇಷ್ಟೊಂದು ಹೇಳುವ ಎದೆಗಾರಿಕೆಯಿರುವುದರಿಂದಲ್ಲವೆ ನಿನ್ನನ್ನು ಈ ಕಾರ್ಯದಲ್ಲಿ ನಿನ್ನ ಪ್ರಭುವು ಮನಃಪ್ರಸನ್ನತೆಯಿಂದಲೂ ನಚ್ಚಿಕೆಯಿಂದಲೂ ಕಳುಹಿಸಿದ್ದಾನೆ? ನಿಯುಕ್ತನಾದ ದೂತನು

ನೀನ್ನಿನ್ನ ನೃಪನ ದಿಗ್ವಿಜ
ಯೋನ್ನತಿಯಂ ಪೊಗೞ್ದು ಮೂರ್ಛೆವೋದೈ ಪೆಱತೇಂ
ನೀನ್ನಿನ್ನ ಮನದೊಳಿಂತಿದು
ಬನ್ನಮನೆತ್ತುವವೊಲಾಯ್ತು ನಿನ್ನವನಿಪನಾ ೬೬

ಮುಂದಿಟ್ಟು ಚಕ್ರಮಂ ತಿರಿ
ತಂದುದುಮಂ ಪಾಳಮಿರ್ದು ಬೈಕಂಗೊಳ್ವಂ
ದಂದದೆ ಕೊಂಡುದುಮನದೇ
ನೆಂದುನ್ನತಿಮಾಡಿ ಪೊಗೞ್ವೆಯೊಳಗಱಿಯದುದೇ ೬೭

ಪಸಿದುಣ್ಣಪಟ್ಟು ಬರ್ದಿ
ರ್ದು ಸಮುದ್ರದ ತಡಿಯೊಳುದಕಮಂತ್ರದ ಬಲದಿಂ
ನುಸುಳ್ದೊಡೆ ಜಳನಿಧಿಯಂ ಕರು
ಣಿಸಿ ಕೊಟ್ಟರ್ ಧನಮನಂಜಿ ಕೊಟ್ಟರೆ ದಿವಿಜರ್ ೬೮

ಧರೆಯೊಳ್ ಕುಲಾಲಚಕ್ರಂ
ತಿರಿವಂತಿರೆ ತಿರಿಯೆ ಚಕ್ರಮದಱಿಯೆ ಬೞಯಿಂ
ತಿರಿತಿರಿದು ಮಾಡಿದಂ ಕುಲ
ಧರಕುಲದೊಳ್ ಪಿರಿದುಮಯಶಮಂ ನಿಮ್ಮರಸಂ ೬೯

ಉತ್ತರಭರತದೊಳಾದಾ
ಪತ್ತಂ ನೀನಱಿಯೆಯಕ್ಕುಮನಿತುಂ ಬಲಮಂ
ಮುತ್ತಿ ಚಿಲಾಕಾವರ್ತರ್
ಸುತ್ತಲುಮೇಸಾಡಿ ಪಿರಿದು ತಿಣಿಕಂ ತಂದರ್ ೭೦

ಹೀಗೆ ಧೈರ್ಯದಿಂದ ನುಡಿಯಲೇಬೇಕು! ೬೬. ನೀನು ನಿನ್ನ ಪ್ರಭುವಿನ ದಿಗ್ವಿಜಯದುನ್ನತಿಯನ್ನು ಹೊಗಳಿ ಹೊಗಳಿ ಮೈ ಮರೆತೆ, ಇನ್ನೇನು? ನಿನ್ನ ಮನಸ್ಸಿನಲ್ಲಿರುವ ಈ ವಿಷಯವು ನಿನ್ನ ರಾಜನ ಭಂಗವನ್ನೇ ಎತ್ತಿ ಹೇಳಿದಂತಾಗಿದೆ. ೬೭. ಚಕ್ರವನ್ನು ಮುಂದಿಟ್ಟುಕೊಂಡು ತಿರಿದು ತಂದುದನ್ನು (ಮನೆಯಲ್ಲಿ) ಇದ್ದರೂ ಹಾಳುವಸ್ತುವನ್ನು ಭಿಕ್ಷೆಬೇಡಿ ತಂದಂತೆ ಕೂಡಿಸಿಕೊಂಡುದನ್ನೂ (?) ಕುರಿತು ಏನು ಉನ್ನತಿಯೆಂದು ಹೊಗಳುವೆ? ಒಳಗಿನ ಗುಟ್ಟೇನು ನಮಗೆ ತಿಳಿಯದುದೆ? ('ಪಾಳಮಿರ್ದು ಬೈಕಂಗೊಳ್ವ' ಎಂಬ ಸ್ಥಳದಲ್ಲಿ 'ಪೂಱದಿರ್ದು ಬಯ್ತಂ ಗೊಳ್ವ' ಎಂಬ ಪಾಠಾಂತರ ದೊರೆಯುತ್ತದೆ. ಈ ಎರಡು ಪಾಠಗಳ ಅರ್ಥವೂ ಅಸ್ಫುಟ) ೬೮. ಹಸಿದರೂ ಉಣ್ಣದೆ ಮಲಗಿದ್ದು, ಸಮುದ್ರದ ದಡದಲ್ಲಿ ಬಿದ್ದಿದ್ದು ಜಲಸ್ತಂಭನವಿದ್ಯೆಯಿಂದ ಸಮುದ್ರದಲ್ಲಿ ನುಸುಳಿ ಹೋದಾಗ ದೇವತೆಗಳು ಮರುಕದಿಂದ ಧನವನ್ನು ಕೊಟ್ಟರು. ಭರತನಿಗೆ ಹೆದರಿ ಅವರು ಕೊಟ್ಟರೆ? ೬೯. ಭೂಮಿಯಲ್ಲಿ ಕುಂಬಾರನ ಚಕ್ರವು ತಿರುಗುವಂತೆ ಚಕ್ರವು ತಿರುಗಿತು. ಅದರ ಹಿಂದುಗಡೆ ನಿಮ್ಮರಸನು ತಿರಿತಿರಿದು ಕುಲಧರಪರ್ವತಗಳಲ್ಲಿ (ಉತ್ತಮ ವಂಶದಲ್ಲಿ) ಹಿರಿದಾದ ಕೆಟ್ಟ ಹೆಸರನ್ನು ಸಂಪಾದಿಸಿದನು. ೭೦. ಎಲೈ ದೂತ, ಉತ್ತರಭಾರತದಲ್ಲಿ ಜರುಗಿದ ಆಪತ್ತನ್ನು ಪ್ರಾಯಃ ನೀನರಿಯೆ. ಅಲ್ಲಿ ಚಿಲಾಕಾವರ್ತರು ಆ ಸೈನ್ಯವನ್ನೆಲ್ಲ

ಮೇಘಮುಖರೆನಿಸಿ ಸಂದುರ
ಘೌಘದಿನಂದೋಘಮೇಘಮಾದೊಡೆ ಮಱೆ ಶೌ
ರ್ಯಾಘಾತಂ ನೆಗೞೆ ಬಳ
ವ್ಯಾಘಾತಂ ನಿನ್ನ ಪತಿಗದಾದುದು ಪುಸಿಯೇ ೭೧

ಬೇಡವಡೆ ಮುಸುಱಿಕೊಂಡೇ
ಸಾಡೆ ಸುರುಳ್ದಿರ್ದು ಕೊಡೆಯ ಚರ್ಮದ ಮಱೆಯೊಳ್
ಗೂಡುಗೊಳುತಿರ್ದ ಶೌರ್ಯ
ಕ್ರೀಡೆಯ ದಿಗ್ವಿಜಯಮೆಸೆದುದೆಮ್ಮಗ್ರಜನಾ ೭೨

ಬರೆಯಿಸಿದಂ ಪೂರ್ವಮಹೀ
ಶ್ವರನಾಮಮನೆಯ್ದೆ ಕಳೆದು ವೃಷಭಾಚಲದೊಳ್
ಭರತಂ ನಿಜನಾಮಮನೆನೆ
ಪರಿಹಸಿತಂ ಬುಧಜನಕ್ಕದಲ್ಲದೆ ಪೆಱತೇಂ ೭೩

ಧನಮೆಂಬುದು ವಿಭುಗೆ ಯಶೋ
ಧನಮದನಿಂತಳಿಪಿ ಕಳಿಪಿ ಕಿಡೆ ಮಾಡಿರ್ದಾ
ತನ ಪಡೆದ ಧನಮದೇತಱ
ಧನಮದಱಿಂ ನಿಧನಮೆಯ್ದಿದರ್ ಪಲರರಸರ್ ೭೪

ಪಿರಿಯಣ್ಣಂಗೆಱಗುವುದೇಂ
ಪರಿಭವಮೇ ಕೀಱೆ ನೆತ್ತಿಯೊಳ್ ಬಾಳಂ ನಿ
ರ್ನೆರಮೂಱೆ ಚಲದಿನೆಱಗಿಸ
ಲಿರೆ ಭರತಂಗೆಱಗುವೆಱಕಮಂಜಮೆಯಲ್ತೇ ೭೫

ಮುತ್ತಿ ಸುತ್ತಲೂ ಪರದಾಡಿಸಿ ಅದಕ್ಕೆ ಪೇಚನ್ನೊಡ್ಡಿದರು. ೭೧. ಮೇಘಮುಖರೆಂಬ ನಾಗದೇವತೆಗಳಿಂದ ಅಂದು ಮಳೆಯು ಧಾರಾಕಾರವಾಗಿ ಸುರಿಯಲಾಗಿ, ನಿನ್ನ ರಾಜನ ಶೌರ್ಯಕ್ಕೆ ಆಘಾತವಾಯಿತು. ಸೇನೆಯು ದಿಕ್ಕುಗೆಟ್ಟಿತು, ಇದು ಸುಳ್ಳೆ? ೭೨. ಬೇಡರ ಸೈನ್ಯವು ಮೇಲೆಬಿದ್ದು ಚೆಲ್ಲಾಪಿಲ್ಲಿಗೊಳಿಸಿತು. ಆಗ ಹೆದರಿಕೆಯಿಂದ ದೇಹವನ್ನು ಮುದುಡಿಕೊಂಡು ಕೊಡೆ ಚರ್ಮಗಳ ಮರೆಯಲ್ಲಿ ಆಶ್ರಯಗೊಂಡು, ನನ್ನ ಅಣ್ಣನ ಶೌರ್ಯಕ್ರೀಡೆಯ ದಿಗ್ವಿಜಯವು ಮೆರೆಯಿತು! ೭೩. ಪೂರ್ವರಾಜರ ಹೆಸರುಗಳನ್ನು ಅಳಿಸಿಹಾಕಿಸಿ ವೃಷಭಾಚಲದಲ್ಲಿ ತನ್ನ ಹೆಸರನ್ನು ಬರೆಯಿಸಿಕೊಂಡನು. ಅದು ಬುಧಜನರ ಪರಿಹಾಸಕ್ಕೆ ಕಾರಣವಾಗಿದೆ, ಅಷ್ಟಲ್ಲದೆ ಮತ್ತೇನು? ೭೪. ಅರಸನಿಗೆ ಯಶಸ್ಸೆಂಬುದೇ ಧನ. ಈ ಪರಿಯಲ್ಲಿ ಅದನ್ನಳಿಯಿಸಿ ಸಂಪಾದಿಸಿದ ಧನವು ಎಂತಹ ಧನ? ಆ ಧನದಿಂದ ಅನೇಕ ರಾಜರು ನಿಧನಹೊಂದಿದರು! ೭೫. ಹಿರಿಯಣ್ಣನಿಗೆ ತಲೆಬಾಗುವುದು ಅವಮಾನವೇನಲ್ಲ. ಆದರೆ ಅವನು ನೆತ್ತಿಯ ಮೇಲೆ ಕತ್ತಿಯಿಂದ ಗೀರಿ ಅಕಾರಣವಾಗಿ ಛಲದಿಂದ ತಲೆಬಾಗಿಸ ಹೊರಟಿರುವನು. ಅಂಥವನಿಗೆ ಎರಗುವುದು

ವಿನಯಮುಮೊಲ್ಮೆಯುಮಪ್ಪುದು
ಸನಾಭಿಗಳ್ ಸಂಗತರ್ಕಳಪ್ಪೊಡೆ ಪೆಸರ್ಗೊಂ
ಡನಿತಱೊಳೆನ್ನಂ ಸೈರಿಸ
ನೆನೆ ಭರತಂಗೆಱಗಿ ಲೋಕದಿಂ ನಗಿಸುವೆನೇ ೭೬

ಭರತಂ ಷಟ್ಖಂಡಭೂವಲ್ಲಭನೆನೆ ಸಿರಿಯಂ ಗೆಂಟಱೊಳ್ ಕೇಳ್ದು ರಾಗಂ
ಬೆರಸಿರ್ಪೀ ನಣ್ಪೆ ಸಾಲ್ಗುಂ ಕರೆದೊಡೆ ಬೆಸನೇನೆಂಬ ಜೀಯೆಂಬ ದೇವೆಂ
ಬರಸೆಂಬಾಳೆಂಬ ದೈನ್ಯಕ್ಕೆಲವೊ ತನುವನಾನೊಡ್ಡುವಂತಾ[೧]ದಿದೇವಂ
ಪುರುದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾರೊಳಂ ಪಂಥಮುಂಟೇ ೭೭

ಧರೆಯಂ ಕುಡುವಂದೆನಗಂ
ಗುರು ತನಗಂ ರಾಜನಾಮಮಂ ಕೊಟ್ಟೊಡೆ ನೋ
ಡಿರೆ ತನಗೀಗಳ್ ರಾಜಾ
ಧಿರಾಜನೆಂದಿಟ್ಟುಕೊಂಡನಡಕಿಲ್ಪೆಸರಂ ೭೮

ಚಕ್ರಂ ಪುಟ್ಟಿದೊಡೀಗಳ್
ಚಕ್ರೇಶ್ವರನೆಂಬ ಪೆಸರುಮಾಯ್ತಕ್ಕೆಮ ತಾಂ
ಚಕ್ರೇಶನಾದೊಡಂ, ತ
ನ್ನಾಕ್ರಮಣಮನೆನ್ನೊಳೇಕೆ ಕೆಮ್ಮನೆ ತೋರ್ಪಂ ೭೯

ಅಂಜುಬುರುಕತನವಲ್ಲವೆ? ೭೬. ದಾಯಾದಿಗಳು ಸಂಗತರಾಗಿ ಸ್ನೇಹದಿಂದಿದ್ದರೆ ಅವರಲ್ಲಿ ವಿನಯವೂ ಪ್ರೀತಿಯೂ ಯೋಗ್ಯವಾಗುತ್ತವೆ. ಆದರೆ ಭರತನು ನನ್ನ ಹೆಸರನ್ನು ಹೇಳಿದರೆ ಸಾಕು, ಸಹಿಸನು. ಆದ ಕಾರಣ ಅವನಿಗೆ ತಲೆಬಾಗಿ ನಾನು (ಬಾಹುಬಲಿ) ಜನರು ನಗುವಂತೆ ಮಾಡಲೆ? ೭೭. ಷಟ್ಖಂಡಮಂಡಿತವಾದ ಭೂಮಿಗೊಡೆಯನು ಭರತ ಎಂಬ ಹೆಮ್ಮೆಯ ಮಾತನ್ನು ದೂರದಿಂದಲೇ ಕೇಳಿ ಸಂತೋಷಿಸುವ ನಂಟೇ ಸಾಕು. ಕರೆದೊಡನೆ 'ಕಾರ್ಯವೇನು ಜೀಯ, ಅರಸ, ದೇವ ಎನ್ನಲಿಕ್ಕೂ ಆಳೆಂಬ ದೈನ್ಯಕ್ಕೂ, ಎಲೈ ದೂತನೆ, ನಾನೇಕೆ ತನುವನ್ನೊಡ್ಡಬೇಕು? ಹಾಗೆ ತನುವನ್ನೊಡ್ಡದಂತೆ ದೇವದೇವನೂ ಪುರುದೇವನೂ ಎನಿಸಿದ ಆದಿದೇವನು ದಯಪಾಲಿಸಿದ ನೆಲಕ್ಕಾಗಿ ಯಾರೊಡನೆಯೂ ಸ್ಪರ್ಧೆಬೇಕಿಲ್ಲ. ೭೮. ಧರೆಯನ್ನು ಕೊಡುವಾಗ ಗುರು (ತಂದೆ)ವು ನನಗೂ ಅವನಿಗೂ ರಾಜನೆಂಬ ಹೆಸರನ್ನು ಕೊಟ್ಟನು. ಆದರೆ ಅವನೀಗ ತನಗೆ ರಾಜಾಧಿರಾಜನೆಂಬ ಹೆಸರನ್ನು ಪೇರಿಸಿಕೊಂಡಿದ್ದಾನೆ ನೋಡಿ! ೭೯. "ಚಕ್ರವು ಹುಟ್ಟಿದ್ದರಿಂದ ಅವನಿಗೆ ಚಕ್ರೇಶ್ವರನೆಂದು ಹೆಸರು ಬಂದಿರಬಹುದು. ಆಗಲಿ, ತಾನು ಚಕ್ರೇಶ್ವರನಾದ ಮಾತ್ರಕ್ಕೆ ನನ್ನ ಮೇಲೇಕೆ ತನ್ನ ಆಕ್ರಮಣವನ್ನು ವ್ಯರ್ಥವಾಗಿ ತೋರಿಸಬೇಕು?

---

೧ 'ತನುವನಾನೊಡ್ಡದಂತೆ' ಎಂದು ಶುದ್ಧ ಪಾಠವಿರಬೇಕು.

ದೊರೆಯಲ್ಲದಂಗೆ ನುಡಿವುದು
ಪುರುಳಿಲ್ಲದ ಮಾತನೆಮ್ಮೊಳಂ ನುಡಿವುದೆ ಪೇೞ್
ಎರಲೆಗೆ ಪಾಡುವ ಗೋರಿಯ
ನರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ ೮೦

ಪುರುತನಯರ್ ಭುಜಬಲಿಯುಂ
ಭರತನುಮೆನೆ ದೊರೆಗೆವಂದೊಡಾರಳವುಮನೀ
ಧರೆಯಱಿಯಲೊಡಂ ತೂಗಲ್
ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ ೮೧

ವ।। ಅದಲ್ಲದೆಯುಮುದಾರವೀರಚರಿತನಿರತಕದನಕರ್ಕಶಕ್ಷತ್ರಿಯಂಗೆ ವಿಪಕ್ಷಕ್ಷತ್ರಿಯಪರಾಕ್ರಮಾಕರ್ಣನೋದೀರ್ಣಕ್ರೋಧದೊಳ್ ಅಳೀಕಭ್ರುಕುಟಿಯುಂ ಅನರ್ಥಕಲಲಾಟತ್ರಿಪತಾಕೆಯುಂ ಅಪಾರ್ಥವಿಲೋಹಿತವಿಲೋಚನರುಚಿಯುಂ ನಿರರ್ಥಕನಿಷ್ಠುರೋಷ್ಠಪುಟಸಂದಂಶಮುಂ ನಿಷ್ಪ್ರಯೋಜನಸ್ವೇದಜಳೋದ್ಗಮಮುಂ ನಿಷ್ಪಂದನಾಸಾಸ್ಫುರಿತಮುಂ ನಿಷ್ಕಾರಣಕಾಯಕಂಪನಮುಂ ನಿರಾಲಂಬನವಾಗಾಡಂಬರಮುಂ ತಕ್ಕುದಲ್ತು,

ನೆಗೞ್ದೀ ಷಟ್ಖಂಡಭೂಮಂಡಲಮನನಿತುಮಂ ಗೆಲ್ದಖಂಡಪ್ರತಾಪಂ
ನೆಗೞ್ದಿಂತಾಱುಂ ಬಲಗಳ್ವೆರಸೊಡವಿದ ಸಂಗ್ರಾಮಸಂರಂಭದಿಂದಂ
ಬಗೆಯಂ ಪ್ರಾಣಪ್ರಿಯಸ್ತ್ರೀಜನತನಯಧನವ್ರಾತದೊಳ್ ಮಾಡದಾರ್ತಾ
ಜಿಗೆ ಬಂದೊಡ್ಡಲ್ಕೆ ಪೇೞ್ಸಿಂಗರನಿಕಷದೊಳೆಮ್ಮಂದಮಂ ನೀನೆ ಕಾಣ್ಬೈ ೮೨

೮೦. ಸಮರ್ಥನಲ್ಲದವನೊಡನೆ ಅರ್ಥವಿಲ್ಲದ ಮಾತನ್ನು ಆಡಲಿ. ನಮ್ಮೊಡನೆಯೂ ಹಾಗೆ ಮಾತನಾಡಬಹುದೆ? ಜಿಂಕೆಯನ್ನು ಹಿಡಿಯುವುದಕ್ಕಾಗಿ ಹಾಡುವ ಗಾನವನ್ನು ಸಿಂಹದ ಎದುರಿಗೆ ಹಾಡಬಹುದೆ? ೮೧. ಭುಜಬಲಿಯೂ ಭರತನೂ ಪುರುತನಯರು. ಹೀಗಿರುವಾಗ ಹೋಲಿಕೆಗೆ ಬಂದರೆ ಯಾರ ಶಕ್ತಿಯು ಈ ಭೂಮಿಯಲ್ಲಿ ಅಧಿಕವಾದುದೆಂದು ನಿಶ್ಚಯಿಸಲು ಭುಜಬಲಿಯ ಬಾಹುದಂಡವು ತಕ್ಕಡಿಯಾಗಿ ನಿಲ್ಲುವುದು! ವ।। ಅಲ್ಲದೆ ವೀರೋಚಿತವಾದ ಕಾರ್ಯ ಕ್ಷತ್ರಿಯನ ಪರಾಕ್ರಮವನ್ನು ಕೇಳಿದ ಮಾತ್ರದಿಂದಲೇ ಹುಟ್ಟಿಕೊಳ್ಳುವ ಕೋಪೋದ್ರೇಕದಲ್ಲಿ ವ್ಯರ್ಥವಾದ ಹುಬ್ಬುಗಳ ಗಂಟಿಕ್ಕುವಿಕೆಯೂ ವ್ಯರ್ಥವಾದ ಹಣೆಯಲ್ಲೆದ್ದ ಮೂರು ಗೆರೆಗಳೂ ಅರ್ಥವಿಲ್ಲದ ಕೆಂಪಾದ ಕಣ್ಣಿನ ಕಾಂತಿಯೂ ನಿರರ್ಥಕವಾದ ಹಲ್ಲುಗಳ ಕಚ್ಚಾಟವೂ ನಿಷ್ಪ್ರಯೋಜನವಾದ ಬೆವರಾಟವೂ ವ್ಯರ್ಥವಾದ ಮೂಗಿನ ಹೊಳ್ಳೆಯಲುಗಾಟವೂ ಅಕಾರಣವಾದ ಕಾಯಕಂಪನವೂ ನಿರರ್ಥಕವಾದ ವಾಗಾಡಂಬರವೂ ಸಲ್ಲದು. ೮೨. ಎಲೈ ದೂತನೆ, ಈ ಪ್ರಸಿದ್ಧ ಷಟ್ಖಂಡಮಂಡಿತವಾದ ಭೂಮಂಡಲವನ್ನೆಲ್ಲ ಗೆದ್ದು ಅತಿಪ್ರತಾಪಶಾಲಿಯೆಂದು ಪ್ರಸಿದ್ಧನಾದ ಭರತನು ತನ್ನ ಪ್ರಾಣಪ್ರಿಯರಾದ ಸ್ತ್ರೀಜನರ ಮೇಲೂ ಮಕ್ಕಳ ಮೇಲೂ

**ವ॥ ಎಂದು ಮನುನರೇಂದ್ರವೃಂದಾರಕಶಿಖಂಡಮಂಡನಮಣಿಯೆನಿಸಿದ ಬಾಹುಬಲಿಕುಮಾರಂ ಭರತೇಶ್ವರಚಕ್ರವರ್ತಿಯ ದೂತನಂ ಪೋಗಲ್ವೇೞ್ವಾಗಳನೇಕರಾಜನ್ಯಕಮಕುಟಸಂಘಟ್ಟೋಚ್ಚಳಿತೋನ್ನಣಿಮರೀಚಿಗಳ್ ಪ್ರಳಯಾನಳವಿಸ್ಫುಲಿಂಗಂಗಳಂತೆ ದೆಸೆದೆಸೆಗೆ ಕೆದಱೆ,**

**ಕಿಸುಸಂಜೆವೆರಸು ಕಟ್ಟಲೆ**
**ಪಸರಿಸಿದಪುದೆನಿಸಿ ಕಣ್ಣ ಕೆಂಪುಂ ಭ್ರುಕುಟಿ**
**ಪ್ರಸರಾಂಧಕಾರಮುಂ ದೆಸೆ**
**ದೆಸೆಗೆಸೆದುವು ಬಾಹುಬಲಿನೃಪಾಸ್ಥಾಯಿಕೆಯೊಳ್ ೮೩**

**ವ॥ ಅನ್ನೆಗಂ ಚಕ್ರವರ್ತಿಯ ದೂತಂ ಸಾಕೇತಪುರಮನೆಯ್ದಿವಂದಾಸ್ಥಾನಮಂಟಪದೊಳ್ ಇರ್ದ ಚಕ್ರವರ್ತಿಯಂ ಕಂಡು ಪೊಡೆಮಟ್ಟು,**

ನಿನಗೀ ಷಟ್ಖಂಡಭೂಮಂಡಲಮೆಱಗಿದುದೇಂ ಸಾಲದೇ ಬೇಡದುರ್ವೃ
ತ್ತನೊಳಿನ್ನೇನೆಂದು ದೇವರ್ಕಡೆಗಣಿಸಿರೆ[ಸೌದರ್ಯಮಂ]ಕಾದ ಪೆಂಪೀ
ವನಧಿದ್ವೀಪಾಂತರಾಳಕ್ಷಿತಿಯೊಳೆಸೆಗುಮಾಕ್ಷೇಪಮಂ ಮಾಣ ನೀಂ ಕ್ರೋ
ಧನನಾಗಲ್ ನಿನ್ನ ತಮ್ಮಂ ನಿನಗೆಱಗನಿದಂ ನಂಬು ರಾಜಾಧಿರಾಜಾ ೮೪

**ವ॥ ಅದಲ್ಲದೆಯುಂ ವಿಜಗೀಷುಬಳಾನಕಾನೀಕನಿನದಮನೆ ನಿಜಭುಜ ವಿಕ್ರಮೋತ್ಸವಕೋಳಾಹಳಮೆಂದುಂ ವಿದ್ವಿಷ್ಟಚಮೂಚಕ್ರಪಾಂಶುಪಟಳಮನೆ ನಿಜವಿಜಯಲಕ್ಷ್ಮೀಪರಿಣಯನೋತ್ಸವಪ್ರಾರಂಭ**

ಹಣದ ಮೇಲೂ ಆಸೆದೊರೆದು ಷಡ್ಬಲಸಮೇತನಾಗಿ ಸಂಗರದ ಒರೆಗಲ್ಲಿನಲ್ಲಿ ನನ್ನನ್ನು ಎದುರಿಸುವಂತೆ ಹೇಳು, ನನ್ನೀ ಪರಾಕ್ರಮದ ಅಂದವನ್ನು ನೀನೇ ಕಾಣುವೆ" ಎಂದನು. ವ॥ ಮನುವಂಶೋತ್ಪನ್ನರಾದ ರಾಜರ ಮುಡಿಗೆ ಅಲಂಕಾರ ಮಣಿಯೆನಿಸಿದ ಬಾಹುಬಲಿಕುಮಾರನು ಭರತೇಶ್ವರ ಚಕ್ರವರ್ತಿಯ ದೂತನನ್ನು ಕುರಿತು ಹೋಗುವಂತೆ ಹೇಳಿದನು. ಆಗ ನಾನಾ ರಾಜರ ಕಿರೀಟಗಳ ಸಂಘಟ್ಟನೆಯಿಂದೆದ್ದ ಮಣಿಗಳ ಕಾಂತಿಗಳು ಪ್ರಳಯಾಗ್ನಿಯ ಕೆಂಡಗಳಂತೆ ದಿಕ್ಕು ದಿಕ್ಕುಗಳಿಗೆ ಹರಡಿದುವು. ೮೩. ಬಾಹುಬಲಿರಾಜನ ಆಸ್ಥಾನದಲ್ಲಿ ಕೆಂಪಾದ ಸಂಧ್ಯಾಕಾಲದಿಂದ ಕೂಡಿದ ಕತ್ತಲೆಯು ಹರಡಿತೋ ಎಂಬಂತೆ, (ರಾಜರ) ಕಣ್ಣ ಕೆಂಪೂ ಹುಬ್ಬುಗಳಲ್ಲಿ ಹರಡಿದ ಅಂಧಕಾರವೂ ಎಲ್ಲ ದಿಕ್ಕುಗಳಲ್ಲಿಯೂ ಹರಡಿದವು. ವ॥ ಅಷ್ಟರಲ್ಲಿ ಭರತಚಕ್ರವರ್ತಿಯ ದೂತನು ಸಾಕೇತಪುರವನ್ನು ಸೇರಿ ಆಸ್ಥಾನಮಂಟಪದಲ್ಲಿದ್ದ ಚಕ್ರವರ್ತಿಯನ್ನು ಕಂಡು ನಮಸ್ಕರಿಸಿ, ೮೪. "ರಾಜಾಧಿರಾಜ, ನಿನಗೆ ಷಟ್ಖಂಡಭೂಮಂಡಲವು ಎರಗಿದುದು ಸಾಲದೆ? ಅವಿನೀತನಾದ ತಮ್ಮನಿಂದ ಆಗಬೇಕಾದುದೇನೆಂದು ಅವನನ್ನು ಕಡೆಗಣಿಸು. ಒಳ್ಳೆಯ ಸೋದರತನವನ್ನು ಕಾಯ್ದುಕೊಂಡ ನಿನ್ನ ಹಿರಿಮೆಯು ಸಮುದ್ರಪರಿವೃತವಾದ ದ್ವೀಪಗಳೊಳಗಣ ಭೂಮಿಯಲ್ಲಿ ಪ್ರಸಿದ್ಧವಾಗುವುದು. ನಿಂದೋಕ್ತಿಯನ್ನು ತಪ್ಪಿಸಿಕೊ. ನೀನು ಕೋಪಿಸಿಕೊಂಡರೆ ನಿನ್ನ ತಮ್ಮನು ನಿನಗೆರಗನು. ನನ್ನ ಈ ಮಾತನ್ನು ನಂಬು." ವ॥ ಎಂದು ಬಿನ್ನಯಿಸಿದನು. ಆಗ, ಟಿಪ್ಪಣಿ: ೮೪ನೆಯ ಪದ್ಯದ ಮುಂದಿರುವ ಈ ವಚನ ಭಾಗವು ಸಂಪೂರ್ಣವಾಗಿ ಅನನ್ವಿತವಾಗಿದೆ.

ಪಿಷ್ಟಾತಕಚೂರ್ಣಮೆಂದುಂ ವಿರೋಧಿಸಿಂಧುರಧ್ವಜಪಟಚ್ಛಾಯಾಪ್ರತಾನಮನೆ ನಿಜವೀರಪಟ್ಟಬಂಧೋತ್ಸವ ಸಮುಚ್ಛ್ರಿತಚ್ಛತ್ರಚ್ಛಾಯಾಮಂಡಳಮೆಂದುಂ ವಿಪಕ್ಷವಿಶಿಖಮೋಕ್ಷಹೂಂಕಾರಮನೆ ನಿಜವಿಜಯ ಲಕ್ಷ್ಮೀಯುದಗ್ರವೀರಗ್ರಹಸ್ತೋಭನಾಕ್ಷರಮೆಂದುಂ ಬಗೆವ ಬಾಹುಬಲಿಕುಮಾರಂ ವಿಜಗೀಷುವಿಜಯ ಯಾತ್ರಾಪಟಹರವಾಟೋಪನಿರ್ಭರಚರಿತಶ್ರವಣವಿವರನಾಗಿ ವಿಕ್ರಾಂತಕ್ಷತ್ರಚರಿತ್ರಂಗಳಂ ಕೇಳದವರ ಗಣನೆಯೊಳಂ ವಿರೋಧಿಧ್ವಜಿನೀಧೂಳೀಪಟಲಪಿಹಿತದೃಷ್ಟಿಗಳಾಗಿ ವೀರನರೇಂದ್ರಮಾರ್ಗಮಂ ಕಾಣದ ವಿದ್ವಿಷ್ಟರ ಸಭಾವನಿಯೊಳಂ ಅಹಿತಮತಂಗಜವಿಜಯಕದಳೀಕಾನನಬಹುಳಚ್ಛಾಯಾಚ್ಛನ್ನರಾಗಿ ಕುಳಕ್ರಮಾಯಾತಪ್ರತಾಪೋಷ್ಮಮಂ ಪತ್ತುವಿಡುವರಾತಿಗಳ ಸಂಖ್ಯೆಯೊಳಂ ವಿಪಕ್ಷಶರಾಸಾರಮೋಕ್ಷ ಹೂಂಕಾರ ಸ್ತಂಭನಾಕ್ಷರಸ್ತಂಭಿತಹೃದಯರಾಗಿ ರಾಜಪ್ರಸೂತವಿಜಯಯಶಶ್ಶರೀರಮಂ ಮೆಱೆವ ರಿಪುಗಳ ರೇಖೆಯೊಳಂ ಬಗೆಯದೆ ನಿಮ್ಮ ಬಗೆವ ಕಾರ್ಯಮಂ ಬಗೆಯಿಮೆಂದು ಬಿನ್ನಪಂಗೆಯ್ವಾಗಳ್,

ತುದಿಯೆಯ್ದಿತ್ತೆಮ್ಮ ವಿಶ್ವಕ್ಷಿತಿತಳಜಯಮಿಂತೆಮ್ಮ ದಾಯಾದನುಂ ಕೋ
ಪದಿನೆನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮಾ
ಣ್ಬುದು ಸೂಟಲ್ತೆಮ್ಮಸಾಪತ್ನನ ಭುಜಬಲಮಂ ನೋೞ್ಪಮೆಂದಾಗಳಾಸ್ಥಾ
ನದಿನೆರ್ದಂ ಚಕ್ರಿ ರಾಜನ್ಯಕಮಕುಟಮಣಿಪ್ರೋಜ್ಜ್ವಳದ್ವ್ಯೋಮಚಕ್ರಂ ೮೫

ವ|| ಆಗಳ್ ದೂತಾಳಾಪವಿಳಯಸಮೀರಪ್ರೇರಿತಪ್ರಳಯಜಳನಿಧಿಪ್ರಧ್ವಾನಾನುಕಾರಿಯಾಗಿ

ಆದ್ದರಿಂದ ಅರ್ಥವನ್ನು ಬರೆದಿಲ್ಲ. ದೂತನ ಹೇಳಿಕೆ ಈ ಬಗೆಯಲ್ಲಿ ಬೆಳೆದಿರುವುದು ಅನುಚಿತ. ಈ ಸ್ಥಳದಲ್ಲಿ 'ಎಂದು ಬಿನ್ನಪಂಗೆಯ್ದಾಗಳ್' ಎಂದು ಮಾತ್ರವೇ ವಚನವಿರಬೇಕು. ದೀರ್ಘವಾದ ಈ ವಚನ ಭಾಗವು ಇದೇ ಆಶ್ವಾಸದ ೬೮ನೆಯ ಪದ್ಯದ ಮುಂದಿರುವ ವಚನಗಳಿಗೆ ಹೋಲುತ್ತದೆ. ವಾಸ್ತವವಾಗಿ ಇದು ಅಲ್ಲಿಯೇ ಇರಬೇಕಾದದ್ದು. ಲೇಖಕಪ್ರಮಾದದಿಂದ ಸ್ಥಾನಪಲ್ಲಟಗೊಂಡು ಸಂಮಿಶ್ರವೂ ಪುನರುಕ್ತವೂ ಆಗಿದೆ. ಈ ಭಾಗವು ಲೇಖಕಪ್ರಮಾದ ಭೂಯಿಷ್ಠವಾಗಿದೆ. ೮೫. ಹಾಗಾದರೆ ವಿಶ್ವದ ಎಲ್ಲ ಭೂಮಿಯನ್ನೂ ಗೆದ್ದುಕೊಳ್ಳಬೇಕೆಂಬ ಹಂಬಲವು ಕೊನೆಮುಟ್ಟಿತು! ಈಗ ನಮ್ಮ ದಾಯಹರನಾದ ಬಾಹುಬಲಿಯು ಕೋಪದಿಂದಲೂ ಯುದ್ಧಮದದಿಂದಲೂ ಕಾದಲು ಅಬ್ಬರಿಸಿ ನಿಂತಿರುವನು. ಪ್ರತಿಯುದ್ಧ ಮಾಡದಿರುವುದು ಕ್ರಮವಲ್ಲ. ಯುದ್ಧದಲ್ಲಿನ ನಮ್ಮ ಶತ್ರುವಿನ ತೋಳ್ಬಲವನ್ನು ಕಾಣೋಣ ಎಂದು ಹೇಳುತ್ತ ಭರತನು ಆಸ್ಥಾನದಿಂದ ಮೇಲಕ್ಕೆದ್ದನು. ಆಗ ಎದ್ದ ರಾಜರ ಕಿರೀಟಗಳ ಮಣಿಕಾಂತಿಗಳಿಂದ ಆಕಾಶವೆಲ್ಲ ಬೆಳಗಿತು. ವ|| ಆಗ ದೂತನ ಮಾತುಗಳೆಂಬ ಪ್ರಳಯಾನಿಲದಿಂದ ಉಬ್ಬಿಸಲ್ಪಟ್ಟ ಸಮುದ್ರದ ಆರ್ಭಟವನ್ನು ಅನುಕರಿಸುವವನಾಗಿ

ಭುವನೇಶಕ್ಷತ್ರಪುತ್ರಾಗ್ರಣಿಯ ಭರತನಕ್ಷೋಹಿಣೀವೀರಕಂಠೀ
ರವಸಂದೋಹಕ್ಕೆ ರೋಮಾಂಚಮನೆ ಕವಚಮಂ ಮಾಡುತುಂ ವೀರಪತ್ನೀ
ನಿವಹಕ್ಕಾನಂದಬಾಷ್ಪಾವಳಿಯನೆ ಕುಚದೊಳ್ ಹಾರಮಂ ಮಾಡುತುಂ ಭೂ
ಭುವನಾಂತರ್ಭಾಗಮಂ ಪರ್ಬಿದುದು ಸಮರಸನ್ನಾಹಭೇರೀನಿನಾದಂ ೮೬

ವ॥ ಆ ಸಮರಸನ್ನಾಹಭೇರೀನಿನಾದಮಂಭೋಭಾರಗಂಭೀರಾಂಭೋಧರಸ್ತನಿತಬಹುಸ್ನಿಗ್ಧಂಗಳಪ್ಪ ಮದಸ್ತಂಬೇರಮಬೃಂಹಿತಂಗಳಿಂದಂ ಯುಗಪದಾಸ್ಫಾಲಿತಾನೇಕದುಂದುಭಿಧ್ವನಿಮಧುರಗೀತಂಗಳಪ್ಪ ಹಯಹೇಷಿತಂಗಳಿಂದಂ ಸಂದಣಿಸಿ ಪೂರ್ಣಮಾನೈಕಾರ್ಣವಘೋಷಮಂ ಗೆಲ್ದು ಪೆರ್ಚುವಂತೆ ಪೆರ್ಚೆ ವಿಜಯಪರ್ವತಗಜೇಂದ್ರದ ಬೆಂಗೆ ವಂದು,

ಗಿರಿರಾಜೋದಗ್ರಸಿಂದೂರಿತಕರಟಿಘಟಾಟೋಪಮಂ ಕುಂಕುಮಾಂಭಃ
ಸ್ಫುರಿತಾಂಗೋತ್ತುಂಗವಲ್ಗತ್ತುರಗಬಲಮದೋದ್ದಾಮಮಂ ಚಿತ್ರಾನೇತ್ರಾಂ
ಬರನಾನಾಹೇತಿಹಸ್ತೋದ್ಭಟಭಟಪೃತನಾಜಾಳಮಂ ಚಿತ್ತದೊಳ್ ವೀ
ರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ ೮೭

ವ॥ ಅಂತು ನೋಡಿ ಪೌದನಪುರಾಭಿಮುಖನಾಗಿ ನಡೆವಲ್ಲಿ,

ಪದಧೂಳೀಕ್ಷೋಭದಿಂ ದಿಗ್ಯುವತಿವದನಮಂ ಶ್ಯಾಮಳಂಮಾಡಿ ಮಾಣ್ದೆ
ರ್ದುದೆ ಕೋಪೋದ್ಭಿನ್ನಗಂಡಸ್ಥಳಕರಟಿಘಟಾವ್ಯೂಹನೀಲಾಂಬುದಾಟೋ
ಪದಿನತ್ಯುಗ್ರಾಸ್ತ್ರಶಸ್ತ್ರಪ್ರಕರಕಿರಣಸಂಘಾತತೀವ್ರಾತಪೋದ್ಯೋ
ತದಿನರ್ಧಶ್ಯಾಮಳಂ ಮಾಡಿದುದು ದಿನಮುಮಂ ಕೂಡೆ ರಾಜೇಂದ್ರಸೈನ್ಯಂ ೮೮

೮೬. ರಾಜನೂ ಕ್ಷತ್ರಿಯಪುತ್ರಶ್ರೇಷ್ಠನೂ ಆದ ಭರತನ ಸೈನ್ಯದ ಸಿಂಹಸದೃಶರಾದ ವೀರರ ಸಮೂಹಕ್ಕೆ ರೋಮಾಂಚನಗಳನ್ನೇ ಕವಚಗಳನ್ನಾಗಿ ಮಾಡುತ್ತಾ, ವೀರಪತ್ನಿಯರ ಸಮೂಹಕ್ಕೆ ಆನಂದಪ್ರಯುಕ್ತವಾದ ಕಣ್ಣೀರನ್ನೇ ಸ್ತನಗಳ ಹಾರವನ್ನಾಗಿ ಮಾಡುತ್ತಾ ಯುದ್ಧ ಸನ್ನಾಹದ ಭೇರೀಶಬ್ದವು ಭೂಮ್ಯಂತರ್ಭಾಗವನ್ನು ವ್ಯಾಪಿಸಿತು. ವ॥ ಆ ರಣಭೇರೀಶಬ್ದವು ನೀರಿನ ಭಾರದಿಂದ ಪೂರ್ಣತೆಗೊಂಡ ಮೋಡಗಳ ಗುಡುಗಿನಂತೆ ಸ್ನಿಗ್ಧಗಳಾದ ಮದ್ದಾನೆಗಳ ಘೀಂಕಾರಗಳಿಂದಲೂ ಒಟ್ಟಿಗೆ ಬಾರಿಸಲ್ಪಟ್ಟ ನಗಾರಿಶಬ್ದಗಳೆಂಬ ಮಧುರಗೀತಗಳಂತಿರುವ ಕುದುರೆಗಳ ಕೆನೆತಗಳಿಂದಲೂ ಒಟ್ಟೈಸಿ ಭೋರ್ಗರೆವ ಅನೇಕ ಸಮುದ್ರಗಳ ಘೋಷವನ್ನು ಗೆದ್ದು ಹೆಚ್ಚುವಂತೆ ಹೆಚ್ಚಲಾಗಿ, ಭರತನು ವಿಜಯಪರ್ವತವೆಂಬ ಗಜೇಂದ್ರನನ್ನೇರಿದನು. ೮೭. ಭರತಚಕ್ರವರ್ತಿಯು ತನ್ನ ಚಿತ್ತದಿಂದ ವೀರರಸವು ಮಿತಿಮೀರಿ ಉಕ್ಕಿ ಹರಿಯುವಂತೆ ಸೈನ್ಯವನ್ನು ನೋಡಿದನು. ಸೇನೆಯು ಗಿರಿರಾಜನಂತೆ ಉನ್ನತವೂ ಕುಂಕುಮಯುಕ್ತವೂ ಆದ ಆನೆಗಳ ಹಿಂಡಿನ ಆಟೋಪವುಳ್ಳುದಾಗಿತ್ತು. ಕುಂಕುಮದ ನೀರಿನಿಂದ ವ್ಯಾಪ್ತ ವಾಗಿವೆಯೋ ಎಂಬಂತಿರುವ ಅವಯವಗಳಿಂದ ಉನ್ನತವೂ ಕುಪ್ಪಳಿಸುವ ಶೀಲವುಳ್ಳುದೂ ಆದ ಕುದುರೆ ಸೈನ್ಯಗಳ ಮದದಿಂದ ಉದ್ದಾಮವೂ ಚಿತ್ರವಿಚಿತ್ರವಾದ ರೇಷ್ಮೆಬಟ್ಟೆಯನ್ನು ಧರಿಸಿ ವಿವಿಧ ಆಯುಧಗಳನ್ನು ಕೈಯಲ್ಲಿ ಹಿಡಿದ ಭಟರಿಂದ ಪರಿವೃತವಾಗಿಯೂ ಇದ್ದಿತು. ವ॥ ಹಾಗೆ ನೋಡಿ ಪೌದನಪುರಕ್ಕೆ ಎದುರಾಗಿ ನಡೆಯುವಲ್ಲಿ, ೮೮. ರಾಜೇಂದ್ರನ ಸೈನ್ಯವು ತನ್ನ ಕಾಲ್ತುಳಿತದಿಂದೆದ್ದ ಧೂಳಿಗಳಿಂದ ದಿಗ್ಯುವತಿಯರ ಮುಖವನ್ನು ಕಪ್ಪುಗೊಳಿಸಿತು.

ವ|| ಅಂತು ಬಂದು,

ರಜಮುಂ ದಿಗ್ಧೂಮಮುಂ ಸಂದಣಿಸೆ ಪರುಷವಾತಾಹತಿಪ್ರೋಚ್ಛಳತ್ಸಾ
ಮಜಸೇನಾಕುಂಭಸಿಂಧೂರಮುಮೊದವಿದ ದಿಗ್ದಾಹಮುಂ ಕೂಡೆ ಭೂರಿ
ಧ್ವಜಿನೀಸಂಕ್ಷೋಭಮಾಕಂಪಮುಮಶುಭಮಹೀಕಂಪಮುಂ ತನ್ನೊಳೊಂದಾ
ಗೆ ಜಗಕ್ಕೇನಿಲ್ಲಿ ಪೇೞಾದಪುದೆನೆ ದೆಸೆ ಬರ್ಪಂತೆ ಬಂದೊಡ್ಡಿ ನಿಂದಂ ೮೯

ವ|| ಅನ್ನೆಗಮಿತ್ತ ಬಾಹುಬಲಿಕುಮಾರನ ವಿಜಯಸೈನ್ಯದೊಳ್,

ಮಸೆಯಿಪ ಶಸ್ತ್ರಕೋಟಿ ಸಮಕಟ್ಟುವ ಸನ್ನಣಮಟ್ಟೆಯಿಂದಮ
ರ್ಚಿಸುವ ತುರಂಗದಂತಿರಥಸಂಕುಳಮೇಱುವ (?) ದರ್ಭಶಯ್ಯೆ ಪೂ
ಜಿಸುವ ಜಿನೇಂದ್ರಬಿಂಬಮೆಸೆವುಗ್ರರಣಾನಕರೌದ್ರಘೋಷಮೇ
ರ್ವಸಕಮನುಂಟುಮಾಡಿದುದು ಪಂದೆಗಮಂದಿನ ವೀರಗೋಷ್ಠಿಯೊಳ್ ೯೦

ವ|| ಆಗಳಾ ಬಾಹುಬಲಿಕುಮಾರನುಂ ಸಂಗ್ರಾಮರಂಗಾಗ್ರೇಸರನಾಗಲ್ಬಗೆದು ವಿಜಯಕನ್ಯಕಾಸ್ವಯಂವರೋತ್ಪಳಮಾಲಾನುಕಾರಿನಾರಾಚಂಗಳಿಂದಂ ವಿಜಯರಾಜಮಹಿಷೀಮಯೂರಾತಪತ್ರಶಂಕಾವಹಸಂಕುಳಂಗಳಿಂದಂ ವಿಜಯಲಕ್ಷ್ಮೀಕರವಳಯವಿಭ್ರಮಕರಚಕ್ರಂಗಳಿಂದಂ ತೀವಿದ

ಅಷ್ಟಕ್ಕೆ ನಿಲ್ಲಿಸಿತೆ? ಬಳಿಕ ಕೋಪೋದ್ಭಿನ್ನವಾದ ಗಂಡಸ್ಥಳಗಳುಳ್ಳ ಆನೆಗಳ ಹಿಂಡೆಂಬ ಕಪ್ಪುಮೋಡದ ಆಟೋಪಗಳಿಂದಲೂ ಭಯಂಕರವಾದ ಅಸ್ತ್ರ ಶಸ್ತ್ರಗಳ ಕಿರಣ ಸಮೂಹಗಳೆಂಬ ಉರಿಬಿಸಿಲಿನ ಪ್ರಕಾಶದಿಂದಲೂ ದಿವಸವನ್ನು (ಹಗಲನ್ನೂ ರಾತ್ರಿಯನ್ನೂ ಸಹ) ಅರ್ಧ[1] ಕಪ್ಪುಗೊಳಿಸಿತು. ವ|| ಅಂತು ಬಂದು, ೮೯. ಧೂಳಿಯೂ ದಿಗಂತದಲ್ಲಿ ಹೊಗೆಯೂ ಸಂದಣಿಸಿದುವು. ಬಿರುಸಾದ ಗಾಳಿಯ ಹೊಡೆತದಿಂದ ಮೇಲಕ್ಕೆದ್ದ ಗಜಸೈನ್ಯದ ಕುಂಭಸ್ಥಲದ ಸಿಂಧೂರವೂ ದಿಗಂತದಲ್ಲಿ ಬೆಂಕಿಯೂ ಒಟ್ಟಾದುವು. ಸೇನೆಯ ಸಂಕ್ಷೋಭದಿಂದಾದ ಭೂಕಂಪವೂ ಅದರೊಡನೆ ಅಶುಭವಾದ ಭೂಕಂಪವೂ ಕೂಡಿದುವು. ಆಗ ಜಗಕ್ಕೇನಾಯಿತೆಂಬುದನ್ನು ನೋಡಲು ದಿಕ್ಕುಗಳೆಲ್ಲ ಒಟ್ಟಾಗಿ ಬಂದುವೋ ಎಂಬಂತೆ ಭರತೇಶನು ಬಂದು ಎದುರಿಸಿ ನಿಂತನು. ವ|| ಅಷ್ಟರಲ್ಲಿ ಈ ಕಡೆ ಬಾಹುಬಲಿಕುಮಾರನ ವಿಜಯಸೈನ್ಯದಲ್ಲಿ ೯೦. ಹರಿತಗೊಳಿಸಲು ಉಜ್ಜುತ್ತಿರುವ ಶಸ್ತ್ರಗಳ ಸಮೂಹವೂ ಬಿಗಿದುಕಟ್ಟುವ ಕವಚವೂ ಪ್ರೀತಿಯಿಂದ ಪೂಜಿಸಲಾದ ಕುದುರೆ, ಆನೆ, ರಥಗಳ ಗುಂಪೂ ಹತ್ತಲಾಶಿಸಿದ ದರ್ಭೆಯ ಹಾಸಿಗೆಯೂ (?) ಪೂಜಿಸುವ ಜಿನೇಂದ್ರಬಿಂಬವೂ ವೀರಗೋಷ್ಠಿಯಲ್ಲಿನ ಭಯಂಕರವಾದ ರಣಭೇರಿಯ ಶಬ್ದವೂ ಎಂತಹ ಹೇಡಿಗೂ ಕದನದಲ್ಲಿ ಕಾದುವ ಹುಮ್ಮಸ್ಸನ್ನು ತಂದುಕೊಟ್ಟವು. ವ|| ಆಗ ಬಾಹುಬಲಿಕುಮಾರನು ಸಂಗ್ರಾಮವೆಂಬ ರಂಗದಲ್ಲಿ ಮುಂದಾಳಾಗಲಿಚ್ಛಿಸಿ ವಿಜಯಕನ್ಯೆಯ ಸ್ವಯಂವರಕ್ಕಾಗಿ ತಂದ ಕನ್ನೈದಿಲೆಯ ಮಾಲೆಯನ್ನು ಅನುಕರಿಸುವ ಬಾಣಗಳಿಂದಲೂ ವಿಜಯವೆಂಬ

1 ಆನೆಹಿಂಡು ಕತ್ತಲೆಯನ್ನೂ ಅಸ್ತ್ರಶಸ್ತ್ರಗಳ ಕಾಂತಿ ಬೆಳಕನ್ನೂ ಉಂಟುಮಾಡಿದ್ದರಿಂದ ಹಗಲು ರಾತ್ರಿಗಳು ಒಂದೇ ರೀತಿ ಕಾಣಿಸಿದುವೆಂದು ಧ್ವನಿತಾರ್ಥ.

**ಬಸುಗೆಯೊಳಿಸೆದು ವಿಜಯಾಂಗನಾಚರ್ಚನೋಚಿತಮೃಗಮದಮದಮುಂ ನಿಜಭುಜವಿಜಯಲಕ್ಷ್ಮೀ ಪರಿರಂಭಣ ಪ್ರಕಟನದಕ್ಷದಕ್ಷಿಣವಿಷಾಣವಿನ್ಯಸ್ತಹಸ್ತಮುಂ ದಾನಪ್ರಮೋದವಾಚಾಳಷಟ್ಚರಣಚಾರಣ ಗಣೋಚ್ಚಾರ ಝುಂಕಾರಜಯಾಶೀರ್ಘೋಷಮುಮಪ್ಪ ವಿಜಯಗಜದ ಬೆಂಗೆ ವಂದು,**

**ಇರದೆಂಟುಂ ದಿಗ್ಗಜಂಗಳ್ ನೆಱೆದಿದಿರಿದಿರೊಳ್ ತಾಗೆಯುಂ ಮಂದರಕ್ಷ್ಮಾ**
**ಧರದೊಳ್ ಕಯ್ಗೂಡಿ ಗೋತ್ರಾದ್ರಿಗಳೆ ಗಜಘಟಾರೂಪದಿಂ ತಾಗೆಯುಂ ಮ**
**ತ್ಕರಿ ತಾಂಗಲ್ ತಾನೆ ಸಾಲ್ಗುಂ ವನಜಗಜಘಟಾಬಂಧಮೇ ಬಂಧಮೆಂಬೊಂ**
**ದು ರಣೋತ್ಸಾಹಂ ಮನೆಕ್ಕುಬ್ಬರಿಸಿರೆ ಸಮರೋತ್ಸಾಹಸಂಪನ್ನನಾದಂ ೯೧**

**ವ|| ಅಂತು ಕದನಲಕ್ಷ್ಮೀಕನ್ಯಕಾಪ್ರದಾನಪ್ರಥಮಪ್ರಸರದೋಂಕಾರಶಂಕಾಕರ ವಿಜಯಪ್ರಸ್ಥಾನ ನಾಂದೀಸಮಯನಿನದಾನಂದಿತ ದಿಕ್ಪಾಳಚಕ್ರನುಂ ನಿಜವಿಜಯಶ್ರೀಪರಿವಾರಪರಿಣಯನೋತ್ಸವಾಲೋಕನ ಕುತೂಹಲಪ್ರಚಲಿತಸಮಸ್ತಸಾಮಂತಚಕ್ರನುಂ, ನಿಷ್ಕಂಟಕೀಕೃತಾಶೇಷಜಗದ ಕಾಂಡೋತ್ಥಿತಪ್ರಚಣ್ಡ ವಿಪಕ್ಷೋತ್ಪಾತಪ್ರಶಮನಶಾನ್ತ್ಯುದಕಧಾರಾಕಾರ ತತ್ಕ್ಷಣಕ್ಷರದಜಸ್ರದಾನ ಪ್ರಮೋದಜಳಧಾರಾಭಿರಾಮ ಕರಟಿಘಟಾಚಕ್ರನುಂ ನಿಜವಿಜಯಪ್ರಯಾಣಪ್ರಾರಂಭಸಂಭೂತೋತ್ಸವ ಭೂದೇವತಾಶ್ಚರ್ಯವಿಕೀರ್ಯ ಮಾಣಪಿಷ್ಟಾತಕಪಾಂಶುಪಟಲವಿಭ್ರಮನುಂ ಕರಿತುರಗಖುರ ಶಿಖರೋತ್ಖಾತ ಧೂಳೀಸ್ಥಳೀಕೃತಗಗನ ಚಕ್ರನುಂ, ಜಗತ್ಕಂಪನಕರಾರಾತಿದರ್ಪತ್ವರಿತವಿಧ್ವಂಸನೋದ್ಭೂತ ಭಟಾನೀಕಾರಾತಿಭೂಕಂಪಶಂಕಾವಹ ಮಹಾಪದಾತಿಪಾದಕ್ಷೋಭಾಂದೋಳಿತ ಮೇದಿನೀಚಕ್ರನುಮಾಗಿ ಚಕ್ರವರ್ತಿಯ ಬಲಮನಿದಿರ್ಚಲೆಂದು ಮೇಲೆತ್ತಿ ಬರ್ಪಾಗಳ್,**

ರಾಜಭಾರ್ಯೆಗೆ ಹಿಡಿದ ಮಯೂರಚ್ಛತ್ರಗಳ ಸಂದೇಹವನ್ನು ತರುವ ಶಂಕುವೆಂಬ[1] ಆಯುಧಗಳಿಂದಲೂ ವಿಜಯಲಕ್ಷ್ಮಿಯ ಕೈಬಳೆಗಳ ಭ್ರಾಂತಿಯನ್ನುಂಟುಮಾಡುವ ಚಕ್ರಗಳಿಂದಲೂ ತುಂಬಿದ ಅಂಬಾರಿಯಲ್ಲಿ ಕುಳಿತು ವಿಜಯಲಕ್ಷ್ಮಿಯ ಪೂಜೋಚಿತವಾದ ಕಸ್ತೂರಿಯಂತಿರುವ ಮದೋದಕವುಳ್ಳುದೂ ವಿಜಯಲಕ್ಷ್ಮಿಯು ಬಾಹುಬಲಿಯ ಭುಜವನ್ನಪ್ಪುವಳೆಂಬುದನ್ನು ಸೂಚಿಸುತ್ತ ಬಲಕೋರೆಯ ಮೇಲಿಟ್ಟ ಸೊಂಡಿಲನ್ನುಳ್ಳುದೂ ಮದೋದಕದಿಂದಾದ ಸಂತೋಷದಿಂದ ಝೇಂಕರಿಸುವ ದುಂಬಿಗಳೆಂಬ ಚರಣರ ಜಯಾಶೀರ್ವಾದ ಘೋಷವುಳ್ಳುದೂ ಆದ ವಿಜಯಗಜೇಂದ್ರನ ಬೆನ್ನಮೇಲೇರಿದನು. ೯೧. ದಿಗ್ಗಜಗಳೆಂಟೂ ನೆರೆದು ಇದಿರಿದಿರಾಗಿ ನಿಲ್ಲಲಿ, ಮಂದರಪರ್ವತದೊಡನೆ ಸೇರಿ ಕುಲಪರ್ವತಗಳೇ ಆನೆಗಳ ಹಿಂಡಿನ ರೂಪದಿಂದ ಮೇಲೆ ಬೀಳಲಿ, ನನ್ನಾನೆಯೊಂದೇ ಅವುಗಳ ಮೇಲೆರಗಿ ಗೆಲ್ಲಲು ಸಮರ್ಥವಾಗಿದೆ. ಕಾಡಿನಲ್ಲಿ ಹುಟ್ಟಿದ ಗಜಸಮುದಾಯದ ಬಂಧವು ಬಂಧನವೇ ಎಂದು ರಣೋತ್ಸಾಹವು ಮನಸ್ಸಿನಲ್ಲಿ ಉಕ್ಕುತ್ತಿರಲು ಸಮರದಲ್ಲಿ ಉತ್ಸುಕನಾದನು. ವ|| ಯುದ್ಧಲಕ್ಷ್ಮಿಯೆಂಬ ಕನ್ಯೆಯ ದಾನಕಾಲದಲ್ಲಿ ಉಚ್ಚರಿತವಾದ ಓಂಕಾರವೆಂಬ ಶಂಕೆಯನ್ನುಂಟುಮಾಡುವ ವಿಜಯಪ್ರಯಾಣದ ಶುಭಾಶಂಸನೆಗಳಿಂದ ದಿಕ್ಪಾಲ ಮಂಡಲವು ಸಂತುಷ್ಟವಾಯಿತು. ಪತಿಯನ್ನು ವರಿಸಬಯಸುವ ವಿಜಯಲಕ್ಷ್ಮಿಯ

1 ಶಂಕು = ಈಟಿ ಎಂದು ಸಾಮಾನ್ಯವಾದ ಅರ್ಥ.

ನರಪಾಳವ್ರಜವರ್ಮಜಾಳವಿಳಸನ್ಮಾಣಿಕ್ಯಮಾಳಾಂಶುಪಿಂ
ಜರಿತಂ ಪ್ರೇಂಖದಸಂಖ್ಯವಾಜಿವಿಳಸದ್ವೀಚೀಚಯಂ ಮತ್ತಕುಂ
ಜರಕುಂಭೀರಕುಳಂ ಚಳತ್ಕದಳಿಕಾಮಾಲಾಝುಷಾನೀಕಮ
ಚ್ಚರಿಯಂ ಬಾಹುಬಲೀಶ್ವರಂಗೆ ಪಡೆದತ್ತಾತ್ಮೀಯಸೈನ್ಯಾರ್ಣವಂ ೯೨

ವ|| ಅಂತು ಯುದ್ಧಭೂಮಿಗಭಿಮುಖನಾಗಿ ಬರ್ಪಾಗಳ್,

ಕದನಕ್ರೀಡಾರಸಪ್ರಸ್ಫುಟಮುದಿತಭಟಾವಿರ್ಭವತ್ಸಿಂಹನಾದೋ
ನ್ಮದಮುದ್ದಾಮಾಶ್ವಹೇಷಾವಿಗಳಿತನಿಗಳಂ ದಂತಿಸಂಘಟ್ಟಘಂಟಾ
ನದಿತಸ್ವಚ್ಛಂದಮಾಯೋಧನಪಟಹರವೋಜ್ಜೃಂಭಿತಂ ಶ್ರೋತ್ರಮಂ ಮು
ಟ್ಟಿದುದೆತ್ತಂ ರಾಜರಾಜಪ್ರಬಳಬಲಪಯೋರಾಶಿಗಂಭೀರನಾದಂ ೯೩

ವ|| ಆಗಳಿದು ವಿಪಕ್ಷಬಲಮೆಂದಱಿದು ಕ್ಷುಭಿತಚಿತ್ತನಾಗಿ ಬಾಹುಬಲಿಕುಮಾರನುಭಯ

ವಿವಾಹೋತ್ಸವವನ್ನು ಕಾಣುವ ಕುತೂಹಲದಿಂದ ಅವನ ಎಲ್ಲ ಸಾಮಂತರಾಜರ ಸಮೂಹವೂ ಹೊರಟಿತು. ಅವನ ನಿಷ್ಕಂಟಕವಾದ ಜಗತ್ತಿನಲ್ಲಿ ಅಸಮಯಾವಿರ್ಭೂತವೂ ಭಯಂಕರವೂ ಆದ ಶತ್ರುಪಕ್ಷವೆಂಬ ಉತ್ಪಾತವನ್ನು ಅಡಗಿಸಲಿಕ್ಕಾಗಿ ಮಾಡಿದ ಶಾಂತ್ಯುದಕದ ಧಾರೆಯಂತಿರುವ ತಕ್ಷಣದಲ್ಲಿ ನಿರಂತರವಾಗಿ ಸ್ರವಿಸುತ್ತಿರುವ ಮದೋದಕಧಾರೆಯಿಂದ ಆನೆಗಳ ಹಿಂಡು ಅಭಿರಾಮವಾಗಿತ್ತು. ಅವನ ವಿಜಯ ಪ್ರಯಾಣದ ಪ್ರಾರಂಭೋತ್ಸವಕಾಲದಲ್ಲಿ ಭೂದೇವತೆಯು ವಿಸ್ಮಯದಿಂದೆರಚಿದ ಬುಕ್ಕಿಹಿಟ್ಟೆಂಬ ಧೂಳೀಸಮೂಹವು ಶೋಭಿಸಿತು. ಅವನ ಕುದುರೆಗಳ ಗೊರಸುಗಳ ತುಳಿತದಿಂದೆದ್ದ ಧೂಳಿಗಳಿಂದ ಆಕಾಶಮಂಡಲವು ಭೂತಳವೆನಿಸಿತು. ಜಗತ್ತನ್ನು ನಡುಗಿಸಿದ ಶತ್ರುದರ್ಪವನ್ನು ಒಡನೆಯೇ ವಿಧ್ವಂಸಗೊಳಿಸಲು ಹುಟ್ಟಿದ ಭೂಕಂಪವೆಂಬ ಶಂಕೆಯನ್ನು ತರುವ ಕಾಲಾಳುಗಳ ಕಾಲುಗಳ ತುಳಿತದಿಂದ ಭೂಮಂಡಲವು ಅಲುಗಾಡಿತು. ೯೨. ಆ ಸೇನಾಸಮುದ್ರವು ರಾಜರ ಕವಚಗಳಲ್ಲಿನ ಮಾಣಿಕ್ಯಮಾಲೆಗಳ ಕಾಂತಿಗಳಿಂದ ಹೊಂಬಣ್ಣಪಡೆದಿತ್ತು. ಒಲೆದಾಡುತ್ತಾ ಅಡಿಗಳನ್ನಿಡುವ ಅನೇಕ ಕುದುರೆಗಳೆಂಬ ಅಲೆಗಳ ಗುಂಪಿನಿಂದ ಶೋಭಿಸುತ್ತಿತ್ತು. ಮದ್ದಾನೆಗಳೆಂಬ ಮೊಸಳೆಗಳಿಂದ ಪ್ರಕಾಶಿಸುತ್ತಿತ್ತು. ಅಲುಗುತ್ತಿರುವ ಬಾವುಟಗಳೆಂಬ ಮೀನುಗಳ ಗುಂಪಿನಿಂದ ರಾರಾಜಿಸುತ್ತಿತ್ತು. ತನ್ನ ಸೇನೆಯೇ ಬಾಹುಬಲಿಗೆ ಅಚ್ಚರಿಯನ್ನುಂಟುಮಾಡಿತು. ವ|| ಹಾಗೆ ಯುದ್ಧಭೂಮಿಗೆ ಎದುರಾಗಿ ಬಾಹುಬಲಿಯು ಬರುತ್ತಿರಲು ೯೩. ಚಕ್ರನಾಥನಾದ ಭರತನ ಸೈನ್ಯಸಮುದ್ರದ ಗಂಭೀರಶಬ್ದವು ಎಲ್ಲ ಕಡೆಗಳಿಂದಲೂ ಕಿವಿಗಳನ್ನು ಮುಟ್ಟಿತು. ಅದು ಯುದ್ಧಕ್ರೀಡೆಯ ರಸಾಸ್ವಾದನೆಯಲ್ಲಿ ಸಂತೋಷವುಳ್ಳ ಭಟರ ಸಿಂಹನಾದಗಳಿಂದ ಉನ್ಮದವಾಗಿತ್ತು. ಕುದುರೆಗಳ ಉದ್ದಾಮ ಹೇಷಾರವದಿಂದ ಕತ್ತಿನಪಟ್ಟಿಯು ಕಳಚಿದ್ದಿತು. ಆನೆಗಳ ಸಮ್ಮರ್ದದಿಂದಾದ ಘಂಟಾನಾದವು ತಾನತಾನಾಗಿತ್ತು. ಅದು ಯುದ್ಧದ ಭೇರೀನಾದದಿಂದ ವಿಜೃಂಭಿತವಾಗಿತ್ತು. ವ|| ಆಗ ಶತ್ರುಪಕ್ಷದ ಸೇನೆಯಿಂದೆಂದರಿತು ಬಾಹುಬಲಿಯು ಕ್ಷುಭಿತ

ಶಾರ್ಙ್ಗಾಸನದ್ವಶರಧಿ(ಸಾರಿಕಾಮಾದ್ಯೋತ ?)ಬದ್ಧ ಗೋಧಾಂಗುಳಿತ್ರಾಣಾಯೋಧಸಿಂಧುರಘಟಾ ಸಂಘಟ್ಟಮುಂ ನಿಬಿಡನಿಪೀಡಿತಪ್ರಾಸಮುಷ್ಟಿದುರ್ಧರಾಶ್ವಾಸಮುಷ್ಟಿದುರ್ಧರಾಶ್ವಾರೋಹಕತುರಂಗಬಲಾವ ಗಾಢಮುಂ ವಿವಿಧಾಯುಧಕರಾರಭಟೀರಭಸೋದ್ಭಟಸುಭಟವ್ಯಾಕೀರ್ಣಮುಮುದ್ಘೂರ್ಣಮಾನಪ್ರಕೀರ್ಣ ಚಾಪಲಕ್ಷಿತ ಕ್ಷತ್ರಪುತ್ರನಿರಂತರಮುಮಪ್ಪ ನಿಜಬಲಂಬೆರಸು ಭರತೇಶ್ವರಚಕ್ರವರ್ತಿಯ ಸೈನ್ಯಕ್ಕೆ ಮುಟ್ಟವರೆ,

ಕಿವಿಯಂ ಮುಟ್ಟಿತ್ತು ಮುನ್ನಂ ವಿವಿಧಲಯಗತಿಪ್ರೋಚ್ಚಳತ್ಕಾಹಳೌಘಾ
ರವಮಲ್ಲಿಂ ಪಿಂದೆ ಧೂಳೀಪಟಲಪಿಹಿತಕೇತುದ್ವಿಪಾನೀಕಘಂಟಾ
ನಿವಹವ್ಯಾಪಾರಮಲ್ಲಿಂ ಬಳಿಕ ಹಯಖುರಧ್ವಾನಮಲ್ಲಿಂ ಬಳಿಕ್ಕಾ
ಹವರಾಗೋತ್ಸಾಹಚಂಚದ್ಭಟಚಯಚರಣಾಸ್ಫಾಲಿತಂ ಕ್ಷೋಣಿಘೋಷಂ ೯೪

ವ॥ ಅಂತುಭಯಬಲದ ಸೆರೆಗೋಲ್ಗಳೊಂದೊಂದಂ ಮುಟ್ಟುವಿನಮತ್ತ ರಾಜಾಧಿರಾಜನುಮಿತ್ತ ಯುವರಾಜನುಂ ನಿಂದಾಗಳ್,

ರಸೆ ಪತ್ತಿತ್ತೆತ್ತಮಾಕಾಶದೊಳನಿಲಪಥಂ ಧಾರಿಣೀಚಕ್ರದೊಳ್ ಕಾ
ಳಸೆಗೊಂಡತ್ತೆಂಬಿನಂ ಮಂದಯಿಸಿ ನಿಜಪರಾಲೋಕನವ್ಯಗ್ರದೃಷ್ಟಿ
ಪ್ರಸರಕ್ಕೆಲ್ಲಿತ್ತೊ ಮಾರ್ಗಂ ಕುಲಿಶನಿಭಶಿಖಾಭೇದಿಬಾಣಂಗಳುಂ ಭೇ
ದಿಸವೆಂಬಂತಾಯ್ತತಿಕ್ಷೋಭದಿನುಭಯಬಲಕ್ಷೋಭಧೂಳೀಪ್ರತಾನಂ ೯೫

ಮನಸ್ಕನಾದನು. ಮತ್ತು ಉಭಯಪಾರ್ಶ್ವಗಳಲ್ಲಿಯೂ ಬತ್ತಳಿಕೆಗಳನ್ನು ಕಟ್ಟಿಕೊಂಡ (ಶಾರಿಕೆಯಂತಿರುವ ಮೌರ್ವೀಸಹಿತ ಚಾಪವುಳ್ಳ) (?)[1] ಉಡದ ಅಂಗುಲಿತ್ರಾಣವನ್ನು ತೊಟ್ಟ ಸುಭಟರು ಏರಿಕೊಂಡ ಆನೆಗಳ ಹಿಂಡಿನಿಂದ ಇಕ್ಕಟ್ಟಾಯಿತು. ಪ್ರಾಸಾಯುಧಗಳನ್ನು ಮುಷ್ಟಿಗಳಿಂದ ಗಟ್ಟಿಯಾಗಿ ಹಿಡಿದು ಸವಾರರು ಕುದುರೆಗಳನ್ನೇರಿದರು. ವಿವಿಧಾಯುಧಗಳನ್ನು ಕೈಗಳಲ್ಲಿ ಹಿಡಿದು ಶೌರ್ಯೋನ್ಮತ್ತರಾದ ಸುಭಟರು ತುಂಬಿದರು. ಕೋಪಾತಿರೇಕದಿಂದ ಕೂಡಿದವನಾಗಿ ಕ್ಷತ್ರಿಯಕುಮಾರರ ಸಮೇತ ಈ ಬಗೆಯ ನಿಜಸೈನ್ಯದೊಡನೆ ಬಾಹುಬಲಿಯು ಭರತೇಶ್ವರನ ಸೈನ್ಯವನ್ನು ಸಮೀಪಿಸಿದನು. ೯೪. ನಾನಾವಿಧಗಳಾದ ಲಯಗತಿಗಳೊಡನೆ ಮೇಲಕ್ಕೆದ್ದ ಕಹಳೆಗಳ ಶಬ್ದವು ಮೊದಲು ಕಿವಿಯನ್ನು ಮುಟ್ಟಿತು. ಬಳಿಕ ಧೂಳಿಸಮೂಹದಿಂದ ಮುಚ್ಚಿದ ಬಾವುಟಗಳುಳ್ಳ ಆನೆಗಳ ಹಿಂಡಿನ ಘಂಟಾನಾದವು ಕೇಳಿಸಿತು. ಬಳಿಕ ಕುದುರೆಗಳ ಗೊರಸಿನ ಶಬ್ದವೂ ಅನಂತರ ಆಹವೋನ್ಮತ್ತರಾದ ಸುಭಟರ ಕಾಲ್ತುಳಿತಗಳಿಂದೆದ್ದ ನೆಲದ ಶಬ್ದವೂ ಕೇಳಿಬಂದುವು. ವ॥ ಎರಡೂ ಸೈನ್ಯದ ಸೈನಿಕರು ಪರಸ್ಪರವಾಗಿ ಬಿಟ್ಟ ಬಾಣಗಳು ಒಂದಕ್ಕೊಂದು ತಾಕುವಂತೆ ಅತ್ತ ರಾಜಾಧಿರಾಜನೂ ಇತ್ತ ಯುವರಾಜನೂ ನಿಂತರು. ೯೫. ಭೂಮಿಯು ಆಕಾಶದಲ್ಲೆಲ್ಲಾ ಹರಡಿಕೊಂಡಿತೊ ಅಂತೆಯೇ ಆಕಾಶವೂ ಭೂಮಿಯೊಳಕ್ಕೆ ಬಂದು

1. ಸಾರಿಕಾಮೋದ್ಯೋತ, ಸಾರಿಕಾಮಧ್ಯೋರ್ವೀಭೂತ, ಸಾರಿಕಾಮಧ್ಯಸ್ಥೀಭೂತ ಎಂದು ಅನ್ಯಪಾಠಗಳಿವೆ. ಇವೆಲ್ಲವುಗಳ ಸಮನ್ವಯದಿಂದ ಊಹಿಸಬಹುದಾದ ಪಾಠ "ಶಾರಿಕೀಭೂತ ಮಧ್ಯೋದ್ಯೋತಿ ಮೌರ್ವೀಕಚಾಪ" ಎಂದು. ಶಾರಿಕಾ – A bow or stick for playing any stringed instrument. 'ಚಾಪವು ಮೌರ್ವಿಗೆ ಶಾರಿಕೆಯಂತೆ ಇದ್ದಿತು.'

ವ|| ಅಂತು ನೆಗೆದ ಧೂಳೀಪ್ರತಾನಮನ್ಯೋನ್ಯಘಂಟಾಟಂಕಾರಶ್ರವಣ ದ್ವಿಗುಣಿತರಣರಭಸ ಕ್ಷೋಭಮಹಾಹವಸಂಭೂತಭೂರಿಮದಾಂಭಃಪ್ರವಾಹ ಸಹಸ್ರಂಗಳಿಂದಮಿತರೇತರಹೇಷಾರವಾಕರ್ಣ ನೋದೀರ್ಣರೋಷಹಯಹೂಂಕಾರನಿಷ್ಠುರದಶನಾಗ್ರಾಹಖಣಖಣಾಯಿತಖಲೀನಸಂಘಟ್ಟಸ್ಯಂದಮಾನಫೇನಸಲಿಲ ಸ್ರೋತಶ್ಶತಂಗಳಿಂದಮಾಕುಳಾಕುಳನಯನರಾಜತನೂಜಸಮಾಜವದನಾಭಿಮುಖಚಟುಳಸಂಚಾರ್ಯಮಾಣ ಚಾರುಚಾಮರನಿಚಯವಿಚಳದವಿರಳಾನಿಳಂಗಳಿಂದಂ ವಿರಳವಿರಳಮಾದಾಗಳ್,

ಬಲಧೂಳೀವ್ರಾತಮೇಘಪ್ರಕರತಿಮಿರದೊಳ್ ಶಸ್ತ್ರಜಾಳಾಂಶುವಿದ್ಯು
ತ್ಕುಳವಿದ್ಯೋತಂಗಳಿಂದಂ ಬಲನಿವಹರಜಸ್ಸಂತತಿಧ್ವಾನ್ತದೊಳ್ ಭೂ
ತಳನಾಥಾನೀಕವರ್ಮೋತ್ಕರಖಚಿತಮಣಿಶ್ರೇಣಿರತ್ನಪ್ರದೀಪಾ
ವಳಿದೀಪ್ತಿವ್ರಾತದಿಂದಂ ದಿಟಮುಭಯಬಲಂ ಕಂಡುದೊಂದೊಂದನಾಗಳ್ ೯೬

ರೋದೋಂತಂ ಕೂಡೆ ರತ್ನೋಜ್ವಳಗಿರಿಕುಳದಿಂ ತೂಂತನಿಟ್ಟಂತೆ ನೀಲಾಂ
ಭೋದಂಗಳ್ ಕೂಡೆ ವಿದ್ಯುದ್ವಳಯಮನೊಳಕೊಂಡಂತೆ ಪಾಠೀನಚಕ್ರ
ಕ್ಷೋದಪ್ರಕ್ಷೋಭಿತಂ ವಾರಿಧಿಯೆ ಗಗನಮಂ ಮುಟ್ಟಿ ನಿಂದಂತಗುರ್ವಿಂ
ದಾದಂ ಚೆಲ್ವಾಯ್ತು ಚಕ್ರಿದ್ವಿಪಘಟೆ ನಿಶಿತಾಸ್ತ್ರಾಂಶುಜಾಳಾವಲೀಢಂ ೯೭

ಬೆಸೆದುಕೊಂಡಿತೊ ಎಂಬಂತೆ ದಟ್ಟವಾಗಿ ಧೂಳಿ ಹರಡಿಕೊಂಡು, ಇವರು ತನ್ನವರು ಇವರು ಪರರು ಎಂದು ಗುರುತಿಸಲು ದೃಷ್ಟಿಪ್ರಸರಕ್ಕೆ ಅವಕಾಶವೇ ಆಗಲಿಲ್ಲ. ಹೀಗೆ ಅತಿಕ್ಷೋಭೆಯಿಂದ ಎರಡು ಸೈನ್ಯಗಳ ಚಲನೆಯಿಂದೆದ್ದ ಧೂಳೀಸಮೂಹವು ವಜ್ರಾಯುಧದಂತೆ ಶಿಲಾಭೇದಿಗಳಾದ ಬಾಣಗಳಿಂದಲೂ ಭೇದಿಸಲಾರದೆಂಬಂತಾಯಿತು. ವ|| ಹಾಗೆ ಮೇಲಕ್ಕೆದ್ದ ಧೂಳೀಸಮೂಹವು ಪರಸ್ಪರವಾಗಿ ಗಂಟೆಗಳ ಶಬ್ದಗಳನ್ನು ಕೇಳಿ ಎರಡರಷ್ಟಾದ ಯುದ್ಧರಭಸಪ್ರಯುಕ್ತವಾಗಿ ಕ್ಷೋಭೆಗೊಂಡ ಮದ್ದಾನೆಗಳ ಮದೋದಕದ ಸಾವಿರಾರು ಪ್ರವಾಹಗಳಿಂದಲೂ ಪರಸ್ಪರವಾಗಿ ಕೆನೆಯುವ ಶಬ್ದಗಳನ್ನು ಕೇಳಿ ಕೋಪಗೊಂಡ ಕುದುರೆಗಳ ಹೂಂಕಾರಗಳಿಂದ ಕೂಡಿದ, ನಿರ್ದಯವಾಗಿ ಹಲ್ಲುಗಳನ್ನು ಹಿಡಿದುಕೊಂಡು ಖಣ್‌ಖಣ್ ಎಂದು ಧ್ವನಿಗೊಡುತ್ತಿರುವ ಕಡಿವಾಣಗಳ ಸಂಘರ್ಷದಿಂದ ಸುರಿಯುತ್ತಿರುವ ನೊರೆನೀರುಗಳ ನೂರಾರು ಪ್ರವಾಹಗಳಿಂದಲೂ ಆಕುಲಾಕುಲವಾದ ಕಣ್ಣುಗಳುಳ್ಳ ರಾಜಕುಮಾರರ ಮುಖಕ್ಕೆದುರಾಗಿ ಬೀಸುವ ಸುಂದರವಾದ ಚಾಮರಗಳ ಸಮೂಹದಿಂದ ಚಲಿಸುವ ದಟ್ಟವಾದ ಗಾಳಿಗಳಿಂದಲೂ ವಿರಳ ವಿರಳವಾಯಿತು! ೯೬. ಸೈನ್ಯದ ಧೂಳೀಸಮೂಹವೆಂಬ ಮೇಘಮಂಡಲದ ಕತ್ತಲೆಯಲ್ಲಿ, ಶಸ್ತ್ರಸಮೂಹದ ಕಾಂತಿಗಳೆಂಬ ವಿದ್ಯುತ್ತಿನ ಪ್ರಕಾಶಗಳಿಂದಲೂ ಸೈನ್ಯಸಮೂಹದಿಂದೆದ್ದ ಧೂಳೀವ್ರಜವೆಂಬ ಕತ್ತಲಲ್ಲಿ ರಾಜಸೈನ್ಯದ ಕವಚಗಳಲ್ಲಿ ಮೆಟ್ಟಿದ ಮಣಿಗಳ ಸಾಲುಗಳೆಂಬ ರತ್ನಪ್ರದೀಪಗಳ ಕಾಂತಿಸಮೂಹದಿಂದಲೂ ಆ ಎರಡು ಸೈನ್ಯಗಳೂ ಒಂದು ಮತ್ತೊಂದನ್ನು ಗುರುತಿಸಿದವು; ವ|| ೯೭. ಹರಿತವಾದ ಅಸ್ತ್ರಗಳ ಕಾಂತಿಜಾಲದಿಂದ ವ್ಯಾಪ್ತವಾದ ಚಕ್ರವರ್ತಿಯ ಗಜಸೇನೆಯು ತನ್ನ ಭೀಕರತೆಯಿಂದಲೇ ಚೆಲುವಾಯಿತು. (ಆನೆಗಳು ಅಸ್ತ್ರಕಾಂತಿಯಿಂದ ವ್ಯಾಪ್ತವಾದ ಕಾರಣ) ಭೂಮ್ಯಾಕಾಶಗಳು ಒಂದಾಗಲು ರತ್ನೋಜ್ವಲಗಿರಿಗಳಿಂದ ನಡುವೆ

ವ|| ಅಂತೊಡ್ಡಿದ ಗಜಘಟಾಟೋಪದ ನಡುವೆ,

ಘನಮಾರ್ಗವ್ಯಾಪಿ ಜೈತ್ರಧ್ವಜವಿಜಯಗಜಾರೂಢನುಗ್ರಾರಿವಿತ್ರಾ
ಸನಸಂಗ್ರಾಮಾನಕೌಘಧ್ವನಿಬಧಿರಿತದಿಕ್ಚಕ್ರನುದ್ವಂಶವಿಂಧ್ಯಾ
ವನಿಭೃನ್ಮೂರ್ಧಾಧಿರೂಢದ್ವಿಪಭಯದ ರವಂ ರಾಜಕಂಠೀರವಂ ತಾ
ನೆನೆ ವೀರಕ್ಷತ್ರಚೂಡಾಮಣಿ ಭರತನೃಪಂ ನೂಂಕಲುದ್ಯುಕ್ತನಾದಂ ೯೮

ವ|| ಅನ್ನೆಗಮಿತ್ತಂ ಯುವರಾಜನಾ ವಿಜಿಗೀಷುಬಲಾನಕಾನೀಕನಿನದಮನೆ ನಿಜಭುಜ ವಿಕ್ರಮೋತ್ಸವಕೋಳಾಹಳಮೆಂದುಂ, (ವಿದ್ವಿಷ್ಟಚಮೂ)[೧] ಚಕ್ರಪಾಂಶುಪಟಲಮನೆ ನಿಜವಿಜಯ ಲಕ್ಷ್ಮೀಪರಿಣಯನೋತ್ಸವಪ್ರಾರಂಭಪಿಷ್ಟಾತಕಚೂರ್ಣಮೆಂದುಂ, ವಿರೋಧಿಸಿಂಧುರ ಧ್ವಜಪಟಲಚ್ಛಾಯಾ ಪ್ರತಾನಮನೆ ನಿಜವೀರಪಟ್ಟಬದ್ಧೋತ್ಸವಸಮುಚ್ಛ್ರಿತಚ್ಛತ್ರಚ್ಛಾಯಾಮಂಡಳಮೆಂದುಂ, ವಿಪಕ್ಷವಿಶಿಖ ಮೋಕ್ಷಟಂಕಾರಮನೆ ಜಗದುದಗ್ರನಿಜವೀರಗ್ರಹಸ್ತೋಭನಾಕ್ಷರಮೆಂದುಂ, ಬಗೆದಭಿನಿಷಾದಿಯುಮಂ ಪಶ್ಚಿಮನಿಷಾದಿಯುಮಂ ನಿಜವಿಜಯಸಿಂಧುರಮುಮಂ ತಿಣ್ಣಂ ನೂಂಕುಲಮವುಂಕಲುಂ ಬೆಸಸಿ ವಿಜಯಲಕ್ಷ್ಮೀವಿಲಾಸನೀಭ್ರೂಲತಾವಿಭ್ರಮಾನುಕಾರಿಯೆನಿಪುದಂ ಮಧ್ಯಮನಿಷಾದಿಯ ಕೈಯಿಂ ಕೊಂಡು,

ತೂತುಮಾಡಿ ಅವನ್ನು ವಿಭಾಗಿಸಿದಂತೆಯೂ ಕಪ್ಪುಮೋಡಗಳು ಮಿಂಚುಗಳಿಂದ ಸಹಿತವಾದಂತೆಯೂ ತಿಮಿಂಗಲ ಸಮೂಹದ ಹೊಡೆತದಿಂದ ಉಕ್ಕಿದ ಸಮುದ್ರವೇ ಗಗನವನ್ನು ಮುಟ್ಟಿ ನಿಂತಂತೆಯೂ ಕಾಣಿಸಿತು. ವ|| ಅಂತು ಪ್ರತಿಭಟಿಸಿದ ಆನೆಹಿಂಡುಗಳ ಆಟೋಪದ ನಡುವೆ ೯೮. ವೀರಕ್ಷತ್ರಿಯರ ಶಿರೋಭೂಷಣನಾದ ಭರತನು ಮೇಘಮಾರ್ಗವನ್ನು ಮುಟ್ಟಿದ ಜೈತ್ರಧ್ವಜಗಳಿಂದ ಮಂಡಿತವಾದ ವಿಜಯಗಜವನ್ನು ಹತ್ತಿ, ಭಯಂಕರರಾದ ಶತ್ರುಗಳನ್ನು ಬೆದರಿಸುವ ಯುದ್ಧದ ಭೇರೀಧ್ವನಿಗಳಿಂದ ದಿಕ್ಚಕ್ರವನ್ನು ಕಿವುಡುಗೊಳಿಸುತ್ತ, ಬಿದಿರುಮೆಳೆಗಳಿಂದ ವಿಭೂಷಿತವಾದ ವಿಂಧ್ಯಾಚಲದ ಶಿಖರದಲ್ಲಿ ಆನೆಗಳನ್ನು ಬೆದರಿಸುವ ಸಿಂಹನಾದವನ್ನು ಗೈಯುವ ರಾಜಕಂಠೀರವನೆನಿಸಿ ಸೈನ್ಯವನ್ನು ಮುಂದೂಡಲು ಉದ್ಯುಕ್ತನಾದನು.[1] ವ|| ಅಷ್ಟರಲ್ಲಿ ಇತ್ತ ಯುವರಾಜನು (ಬಾಹುಬಲಿ) ವಿಜಿಗೀಷುಗಳ ಸೈನ್ಯಸಮೂಹದ ಭೇರೀಧ್ವನಿಗಳನ್ನೇ ತಮ್ಮ ತೋಳ್ಗಳ ಪರಾಕ್ರಮೋತ್ಸವದ ಕೋಲಾಹಲವೆಂದೂ ಶತ್ರುಸೈನ್ಯಮಂಡಲದ ಧೂಳೀಸಮೂಹವನ್ನೇ ಸ್ವವಿಜಯ ಲಕ್ಷ್ಮೀವಿವಾಹೋತ್ಸವದ ಪ್ರಾರಂಭದಲ್ಲೆರಚಿದ ಬುಕ್ಕಿಹಿಟ್ಟೆಂದೂ ಶತ್ರುರಾಜರ ಆನೆಗಳ ಧ್ವಜಸಮೂಹದ ಛಾಯಾಪ್ರತಾನವನ್ನೇ ವೀರಪಟ್ಟಗಟ್ಟುವ ಉತ್ಸವಕಾಲದಲ್ಲಿ ಎತ್ತಿಹಿಡಿದ ಛತ್ರಚ್ಛಾಯಾಮಂಡಲವೆಂದೂ ಶತ್ರುಗಳು ಬಾಣಗಳನ್ನು ಬಿಡುವ ಕಾಲದಲ್ಲೆಸಗಿದ

---

೧ ವಿದ್ಯುಚ್ಚಮೂ (ಅನ್ಯತ್ರ).

ಟಿಪ್ಪಣಿ : ಆನೆಗೂ ಪರ್ವತ, ಮೋಡ, ಸಮುದ್ರಗಳಿಗೂ ಹೋಲಿಕೆ. ಅಸ್ತ್ರಕಾಂತಿಗೂ ರತ್ನ, ಮಿಂಚು, ಹೊಳೆಯುವ ತಿಮಿಂಗಿಲಗಳಿಗೂ ಹೋಲಿಕೆ.

1 ಆನೆಗೂ ವಿಂಧ್ಯಪರ್ವತಕ್ಕೂ ಜೈತ್ರಧ್ವಜಗಳಿಗೂ ಬಿದಿರುಗಳಿಗೂ ಭೇರೀಧ್ವನಿಗೂ ಸಿಂಹಗರ್ಜನೆಗೂ ಭರತನಿಗೂ ಸಿಂಹಕ್ಕೂ ಹೋಲಿಕೆ. ಆದ್ದರಿಂದ ಭರತನು ರಾಜಕಂಠೀರವ.

ವನಧಿದ್ವೀಪಸಮೀಪವರ್ತಿವಸುಧಾಂತರ್ವರ್ತಿಯಾಗಿರ್ದರಾ
ತಿನಿಕಾಯಕ್ಕಿದು ಯಾಮಿನೀಸಮುದಿತಂ ದೇವೇಂದ್ರಚಾಪಂ ದಲೆಂ
ಬಿನೆಗಂ ಬಾಹುಬಲೀಶನೇಱಿಸಿದನಾನಮ್ರಾಟನೀನಾದಸಂ
ಜನಿತಾರಾತಿಕುಲಾಂಗನಾಜನಮನಸ್ಸಂತಾಪಮಂ ಚಾಪಮಂ ೯೯

ವ॥ ಆ ಪ್ರಸ್ತಾವದೊಳ್,

ಇಸಲೆಂದಿರ್ದ ಧನುರ್ಬಲಂ ಪೊಳೆವ ಬಾಳುಳ್ಳಂಗಳಂ ಪೋಲೆ ಪಾ
ಯಿಸಲೆಂದಿರ್ದ ದಳಂ ಪೊದಟ್ಟಿಸೆವ ಚಕ್ರಾರಾವಮೋರಂತೆ ಚೋ
ದಿಸಲೆಂದಿರ್ದ ರಥಂ ಕನಲ್ದು ಮುಳಿಸಿಂ ಮಾರಾನಲೆಂದಿರ್ದ ಖ
ಡ್ಗಿ ಸಮಂತೊರ್ಮೆಯೆ ನೂಂಕಲಿರ್ದ ಘಟೆ ನೋಟಕ್ಕೇನಗುರ್ವಾದುದೋ ೧೦೦

**ವ॥ ಆಗಳುಭಯಬಲಮಂತ್ರಿಮುಖ್ಯರಿವರಿರ್ಬರಂರಸುಗಳಪ್ಪೊಡೆ ಚರಮದೇಹಧಾರಿಗಳಿವರ ಯುದ್ಧಮೆಂಬುದತಿಕ್ರೂರಗ್ರಹಯುದ್ಧದಂತೆ ಸಕಳಪ್ರಜಾವಿನಾಶಕರಮಲ್ಲದೆ ಪೆಱತಲ್ತು ; ಚತುರಂಗ ಬಲಯುದ್ಧದೊಳಲ್ಲದೆ ಗೆಲ್ಲ ಸೋಲಮೆಂಬುದಿಲ್ಲ; ಸಮಸ್ತಜನಸಂಹರಣಕಾರಣಮಪ್ಪ ರಣದೊಳೇವಂ ದಪ್ಪುದೆಂದು ಧರ್ಮಯುದ್ಧಮನೆ ತಮ್ಮೊಳ್ ಸಮಕಟ್ಟಿ ಮುನ್ನಂ ಭರತೇಶ್ವರಚಕ್ರವರ್ತಿಯಲ್ಲಿಗೆವಂದು.**

ಟಂಕಾರವನ್ನೇ ಲೋಕವಿಖ್ಯಾತರಾದ ವೀರರೆಂಬ ಗ್ರಹಗಳನ್ನು ಸ್ತಂಭಿಸುವ ಮಂತ್ರಾಕ್ಷರಗಳೆಂದೂ ತಿಳಿದು ಪಕ್ಕದ ಮಾವಟಿಗನನ್ನೂ ಹಿಂದಿರುವ ಮಾವಟಿಗನನ್ನೂ ಕುರಿತು ತನ್ನ ವಿಜಯಗಜವನ್ನು ಚೆನ್ನಾಗಿ ನೂಕಲೂ ಅಪ್ಪಂಕಲೂ ಹೇಳಿ ವಿಜಯಲಕ್ಷ್ಮಿಯೆಂಬ ಸ್ತ್ರೀಯ ಭ್ರೂಲತೆಯ ವಿಲಾಸಾನುಕಾರಿಯಾದ ಧನುಸ್ಸನ್ನು ಮಧ್ಯಮನಿಷಾದಿ (ಮಾವಟಿಗ)ಯ ಕೈಯಿಂದ ತೆಗೆದುಕೊಂಡು, ೯೯. "ಸಮುದ್ರದ್ವೀಪಗಳ ಸಮೀಪವರ್ತಿಯೂ ಭೂಮ್ಯಂತರ್ವರ್ತಿಯೂ ಆದ ಶತ್ರುಸಮೂಹಕ್ಕೆ ಇದು ರಾತ್ರಿಯಲ್ಲೊಗೆದ ದೇವೇಂದ್ರನ ಬಿಲ್ಲೇ ಸರಿ"[1] ಎನ್ನುವಂತೆ ಬಾಹುಬಲೀಶನು, ಎಳೆದುಕಟ್ಟಿದ ಹೆದೆಯ ಶಬ್ದದಿಂದ ಶತ್ರುಕುಲಾಂಗನೆಯರ ಮನಸ್ಸಿಗೆ ಸಂತಾಪವನ್ನುಂಟು ಮಾಡುವ ಬಿಲ್ಲನ್ನು ಏರಿಸಿದನು. ವ॥ ಆ ಪ್ರಸ್ತಾವದಲ್ಲಿ, ೧೦೦. ಬಾಣಗಳನ್ನು ಪ್ರಯೋಗಿಸಲಿರುವ ಬಿಲ್ಲುಗಾರರ ಸೈನ್ಯವೂ ಉಲ್ಕೆಗಳಿಗೆಣೆಯಾದ ಹೊಳೆಯುವ ಕತ್ತಿಗಳನ್ನು ಹಿಡಿದು ಹೊಡೆಯಲು ಸಜ್ಜಾದ ಕಾಲ್ದಳವೂ ಶಕ್ತಿಸಂಪನ್ನವಾದ ಚಕ್ರಧ್ವನಿಯು ಕಿರ್ರೆನ್ನುತ್ತಿರಲು ಚೋದಿಸಲೆಂದಿರುವ ರಥವೂ ಕೋಪದಿಂದ ಎದುರಿಸಲಿರುವ ಖಡ್ಗಧಾರಿಗಳೂ ನುಗ್ಗಿಸಲಿರುವ ಆನೆಗಳ ಹಿಂಡೂ ನೋಟಕ್ಕೆ ಭಯಂಕರವಾಗಿದ್ದುವು. ವ॥ ಆಗ ಉಭಯ ಪಕ್ಷಗಳ ಮಂತ್ರಿಮುಖ್ಯರು "ಈ ಅರಸುಗಳಿಬ್ಬರೂ ಚರಮದೇಹಧಾರಿಗಳು. ಇವರ ಯುದ್ಧವೆಂಬುದು ಅತಿಕ್ರೂರ ಗ್ರಹಗಳ ಯುದ್ಧದಂತೆ ಪ್ರಜಾವಿನಾಶಕ್ಕೆ ಕಾರಣವಾದುದು, ಚತುರಂಗ ಯುದ್ಧವನ್ನು ಬಿಟ್ಟು ಗೆಲುವು ಸೋಲುಗಳಿಲ್ಲ. ಎಲ್ಲ ಜನರನ್ನು ಕೊಂದಿಕ್ಕುವ

---

1. ರಾತ್ರಿಯಲ್ಲಿ ದೇವೇಂದ್ರಚಾಪ (ಕಾಮನಬಿಲ್ಲು) ಕಾಣಿಸುವುದು ಉತ್ಪಾತಸೂಚಕ.

ಜಯಮಂ ಕೈಕೊಳ್ವುದು ದೃ
ಷ್ಟಿಯುದ್ಧ ಜಳಯುದ್ಧ ಮಲ್ಲಯುದ್ಧದೊಳೆ ಜನ
ಕ್ಷಯಕರಣದೊಳೇಂ ಪಾಪಮು
ಮಯಶಮುಮಪ್ಪನಿತೆ ದೇವ ಕಡೆಗಣಿಪುದಿದಂ ೧೦೧

ಉಱಿವುದು ಭುಜಬಲದಳವಂ
ಘಱಿಲನೆ ಕೊಳೆ ಹೀನಬಲನನಧಿಕಬಲಂ ತೊ
ತ್ತಳಿದುಱಿದನೆಂಬ ಲೋಕದ
ಪಱಿ ಪೊರ್ದದೆ ಮಾಣ್ಗೆ ಧರ್ಮಯುದ್ಧದೊಳೆಸಗಿಂ ೧೦೨

ವ॥ ಎನೆ ಭರತೇಶ್ವರಚಕ್ರವರ್ತಿಯಿಂತಾದೊಡೆಮಗೆ ಬಾಹುಬಲಿಯ ಸಮರಸಂಘಟ್ಟದೋಹಳಮಿದು ದರಿದ್ರಗೇಹಿನೀಗರ್ಭದೋಹಳದಂತಾದುದೆಂದು ರಾಜ್ಯಲಕ್ಷ್ಮೀಲೀಲಾಲಂಬನಮೆನಿಸಿದ ಬಿಸುಗೆಯ ಮತ್ತಾಲಂಬನಮನವಳಂಬಿಸಿ ಸಿಂಧುರಸ್ಕಂಧಪೀಠದೊಳ್ ಸುಖಾಸೀನನಾಗಿರ್ದಾಗಳ್, ಬಾಹುಬಲಿಕುಮಾರನಲ್ಲಿಗೆ ಮನ್ತ್ರಿಗಳ್ ಬಂದು ಪೂರ್ವೋಕ್ತಕ್ರಮದೊಳೆ ಧರ್ಮಯುದ್ಧವ್ಯತಿಕರಮಂ ಬಿನ್ನಪಂಗೆಯ್ದಾಗಳ್,

ಎನ್ನ ಚತುರಂಗಬಲಮನಿ
ದನ್ನರರಾರಾಂಪರೆಂಬ ನಿಷ್ಠುರಸನ ಗ
ರ್ವೋನ್ನತಿಯುಡುಕಮನಿನಿಸಾ
ನುಂ ನೋಡಿಂ ಧರ್ಮಯುದ್ಧಮಕ್ಕಿಮ ಬಱಿಯಂ ೧೦೩

ಯುದ್ಧದಿಂದೇನು ಪ್ರಯೋಜನ?'' ಎಂದಾಲೋಚಿಸಿ ಧರ್ಮಯುದ್ಧವನ್ನೇ ಮಾಡಲೊಪ್ಪಿಸಲು ಅವರು ನಿಶ್ಚಯಿಸಿದರು. ಮೊದಲು ಭರತಚಕ್ರವರ್ತಿಯ ಬಳಿಗೆ ಬಂದು, ೧೦೧. "ಭರತೇಶ್ವರ! ದೃಷ್ಟಿಯುದ್ಧ, ಜಲಯುದ್ಧ ಮತ್ತು ಮಲ್ಲಯುದ್ಧಗಳಿಂದಲೇ ಜಯವನ್ನು ಸಂಪಾದಿಸಬಹುದು. ಜನವಿನಾಶವನ್ನು ಮಾಡುವುದರಿಂದ ಪಾಪವೂ ಅಪಯಶಸ್ಸೂ ಸಂಘಟಿಸುವುವು. ಆದ್ದರಿಂದ ದೇವ! ಈ ಯುದ್ಧವನ್ನು ಕಡೆಗಣಿಸು. ೧೦೨. "ತೋಳ್ಬಲದ ಬಲುಮೆಯನ್ನು ಬಿಟ್ಟುಬಿಡು, ತೋಳ್ಬಲವನ್ನು ತೋರಿಸಿದರೆ ಹೀನಬಲನನ್ನು ಅಧಿಕಬಲನು ಹೊಸಕಿಹಾಕಿದನೆಂಬ ಲೋಕನಿಂದೆಯು ಬರದೆ ಇರುವುದಿಲ್ಲ. ಆದ್ದರಿಂದ ಧರ್ಮಯುದ್ಧವನ್ನು ಮಾಡು'' ಎಂದರು. ವ॥ ಭರತೇಶ್ವರನು "ಹೀಗಾದರೆ ನಮಗೆ ಬಾಹುಬಲಿಯೊಡನೆ ಯುದ್ಧಸಂಘರ್ಷವೊದಗಲೆಂಬ ಬಯಕೆಯು ಗರ್ಭಿಣಿಯಾದ ದರಿದ್ರ ಕುಟುಂಬಿನಿಯ ಬಯಕೆಯಂತಾಯಿತು'' ಎಂದು ಹೇಳಿ ರಾಜಲಕ್ಷ್ಮಿಯ ಲೀಲೆಗೆ ಆಶ್ರಯವೆನಿಸಿದ ಅಂಬಾರಿಯನ್ನೊರಗಿಕೊಂಡು ಆನೆಯ ಹೆಗಲಿನ ಮೇಲೆ ಸುಖಾಸೀನನಾದನು. ಆಗ ಬಾಹುಬಲಿಯ ಬಳಿಗೆ ಮಂತ್ರಿಗಳು ಬಂದು ಪೂರ್ವೋಕ್ತ ಕ್ರಮದಿಂದ ಧರ್ಮಯುದ್ಧಕಾರ್ಯವನ್ನು ಬಿನ್ನವಿಸಿದರು. ೧೦೩. ಆತನು "ನನ್ನ ಚತುರಂಗ ಬಲದ ಬಲುಹನ್ನು ನರರಲ್ಲಿ ಯಾರು ತಾಳಲು ಸಮರ್ಥರು'' ಎಂಬ ನಿಷ್ಠುರಸನ ಗರ್ವೋನ್ನತಿಯ ಕ್ಷಯವನ್ನು ಸ್ವಲ್ಪವಾದರೂ ನೋಡಿರಿ! ಬಳಿಕ ಧರ್ಮಯುದ್ಧವೇ ಜರುಗಲಿ

ವ॥ ಎಂದು ನಿಜಭುಜದಂಡೋಚ್ಚಂಡಚಾಪಟಂಕಾರಮಂ ಭರತರಾಜಸೈನ್ಯಕ್ಕೆ ಕುಪಿತಕೃತಾಂತ ಹೂಂಕಾರಶಂಕಾವಹಂ ಮಾಡಲ್ಪಡೆಯದೆಯುಂ ಅನ್ಯದುರ್ಧರನಿಜಧನುರ್ದಂಡಮಂ ತದ್ಧ್ವಜಿನಿಗೆ ಕೋಪಕುಟಿಲ ದಕ್ಷಿಣದಿಕ್ಪಾಲಭ್ರುಕುಟೀವಿಭ್ರಮಮಂ ಮಾಡಲ್ಪಡೆಯದೆಯುಂ ಅನವರತಪ್ರಮುಚ್ಯಮಾನ ಪ್ರಚುರನಿಜನಾರಾಚರಾಜಿಯಿಂದಮವಿರಳಮದಜಳತೈಲಪಾಕ ದುರಾಲೋಕಂಗಳಪ್ಪ ತದ್ಬಲಕರಟ ಘಟಂಗಳನಲ್ಪತುಚ್ಛಚ್ಛಿದ್ರಂಗಳ್ಮಾಡಲ್ಪಡೆಯದೆಯುಂ, ಆಕರ್ಣಾಕೃಷ್ಟೋತ್ಸೃಷ್ಟನಿಜವಿಕೀರ್ಣಟಂಕಂಗಳಿಂದಂ ತತ್ಪತಾಕಿನೀಕುಂಜರಶಿರಶ್ಶಿಳಾಪಟ್ಟಕಂಗಳನಿರ್ಬಗಿಮಾಡಲ್ಪಡೆಯದೆಯುಂ, ನಿಜವಿಜಯಗಜಕರೋನ್ಮುಕ್ತಂಗಳಪ್ಪ ವಿನಿರ್ದಳಿತ ವೀರಯೋಧರ ರುಧಿರವಾರಾಶಿಶೀಕರಂಗಳಿನುದಗ್ರ ಕೋಪಾನಳನನಾಱಿಸಲ್ಪಡೆಯದೆಯುಂ, ಈಷದ್ವಿಷಣ್ಣವದನನಾಗಿರ್ದ ಬಾಹುಬಲಿಕುಮಾರನಂ ಮನ್ತ್ರಿಪುಂಗವರ್ ನೋಡಿ,

ಬಿಸುಡುವುದಸದಾಗ್ರಹಮಂ
ಪ್ರಸನ್ನಗಂಭೀರಚಿತ್ತದಿಂದಿದನವಧಾ
ರಿಸುವುದು ಯುವರಾಜ ಮನಂ
ಬೆಸೆದೊರ್ಮೆಗೆ ಸಲಿಪುದೆಮ್ಮ ಮುದುಗಣ್ತನಮಂ ೧೦೪

ವ॥ ಎಂದು ನುಡಿದೊಡಂಬಡಿಸಿ ಧರ್ಮಯುದ್ಧಮನುಭಯಬಲಂಗಳೊಳಮಾನಂದ ಭೇರಿಯಂ ಪೊಯಿಸಿ ಘೋಷಿಸಲ್ವೇೞ್ದು ಬಾಹುಬಲಿಕುಮಾರನ ಭರತೇಶ್ವರನ ಪಕ್ಷದ ರಾಜಲೋಕಮನೆರಡುಂ ದೆಸೆಯೊಳಂ ಮಧ್ಯಸ್ಥರಾಗಿ ಮಿಡುಕದೆ ನೋಡುತ್ತಿರ್ಪಂತು ನಿಯಮಿಸಿದಾಗಳಿರ್ವರುಂ ನೀಲನಿಷಧಗಿರಿಗಳೊಂದೊಂದಱೊಳ್ ಬಂದು ಪೊಣರ್ದು ನಿಲ್ವಂತೆ ನಿಂದೊರ್ವರೊರ್ವರೆಮೆ ಯಿಕ್ಕದೆ ನೋಡುವಲ್ಲಿ,

ಎಂದನು. ವ॥ ತನ್ನ (ಬಾಹುಬಲಿಯ) ಭುಜದಂಡದಲ್ಲಿನ ಚಾಪದಂಡದ ಟಂಕಾರವು ಭರತರಾಜನ ಸೈನ್ಯಕ್ಕೆ ಕೋಪಗೊಂಡ ಯಮನ ಹುಂಕಾರದ ಶಂಕೆಯನ್ನುಂಟುಮಾಡದೆ, ಶತ್ರುಗಳಿಂದ ಸಹಿಸಲಾಗದ ತನ್ನ ಧನುರ್ದಂಡವು ಭರತರಾಜನ ಸೈನ್ಯಕ್ಕೆ ಕೋಪದಿಂದ ಕುಟಿಲವಾದ ಯಮನ ಹುಬ್ಬಿನ ವಿಲಾಸವನ್ನು ಧರಿಸಲು ಸಮರ್ಥವಾಗದೆಯೂ ನಿರಂತರವಾಗಿ ಬಿಡಲಾಗುತ್ತಿದ್ದ ಬಾಣಗಳ ಸಾಲುಗಳಿಂದ ಸತತವಾಗಿ ಸುರಿಯುತ್ತಿರುವ ಮದಜಲವೆಂಬ ತೈಲಪಾಕಗಳಿಂದ ನೋಡಲಾಗದ ಭರತನ ಸೇನೆಯ ಆನೆಗಳೆಂಬ ಮಡಕೆಗಳನ್ನು ಚಿಕ್ಕಚಿಕ್ಕ ತೂತುಳ್ಳುದನ್ನಾಗಿ ಮಾಡದೆಯೂ ಕಿವಿಗಳವರೆಗೆಳೆದು ಬಿಡಲ್ಪಟ್ಟ ಬಾಣಗಳೆಂಬ ಉಳಿಗಳು ಅವನ ಸೈನ್ಯಗಜಗಳ ತಲೆಗಳೆಂಬ ಕಲ್ಚಪ್ಪಡಿಗಳನ್ನು ಸೀಳದೆಯೂ ತನ್ನ ವಿಜಯಗಜಗಳ ಸೊಂಡಿಲಿನಿಂದ ಹೊರಚೆಲ್ಲಲ್ಪಟ್ಟ, ಸೀಳಿಹೋದ ವೀರಸೈನಿಕರ ರಕ್ತಜಲಕಣಗಳಿಂದ ಕೋಪಾಗ್ನಿಯನ್ನು ಆರಿಸಿಕೊಳ್ಳದೆಯೂ ಆದ್ದರಿಂದ ಸ್ವಲ್ಪವಿಷಣ್ಣವದನನಾದ ಬಾಹುಬಲಿಯನ್ನು ಮಂತ್ರಿಮುಖ್ಯರು ಕಂಡು ೧೦೪. "ದುಷ್ಟವಾದ ಆಗ್ರಹವನ್ನು ತೊರೆ; ಪ್ರಶಾಂತವೂ ಗಂಭೀರವೂ ಆದ ಮನಸ್ಸಿನಿಂದ ಗಮನಿಸು. ಯುವರಾಜ, ಮನವನ್ನು ಹತೋಟಿಯಲ್ಲಿಟ್ಟುಕೊಂಡು ನಮ್ಮ ವಾರ್ಧಕ್ಯದ ಅನುಭವವನ್ನು ಒಂದುಸಲ ನಡೆಸಿಕೊಡು" ವ॥ ಎಂದು ನುಡಿದು ಧರ್ಮಯುದ್ಧಕ್ಕೆ ಒಪ್ಪಿಸಿದರು. ಎರಡು ಸೈನ್ಯಗಳಲ್ಲಿಯೂ ಆನಂದಭೇರಿಯನ್ನು ಹೊಯ್ಸಿ ಧರ್ಮಯುದ್ಧವನ್ನು ಘೋಷಿಸಿದರು. ಬಾಹುಬಲಿ ಭರತೇಶ್ವರರ ಪಕ್ಷದ ರಾಜತಂಡವೆರಡೂ ಪಕ್ಕಗಳಲ್ಲಿ ಮಿಡುಕದೆ ಮಧ್ಯಸ್ಥರಾಗಿ ನಿಂತು

ಲಲಿತಮುಖಸರಸಿಜಂ ನಿ
ಶ್ಚಳಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕ
ಣ್ಗೊಳೆ ತವೆ ಪೀರ್ವವೊಲೇ ನಿ
ಶ್ಚಳತನು ನಡೆನೋಡೆ ಭರತರಾಜಂ ಸೋಲ್ತಂ ೧೦೫

ವ॥ ಅಂತು ಬಾಹುಬಲಿತೇಜಃಪುಂಜಮ ಕಣ್ಗೊಳುಳ್ಕುವಂತೆ ಸೈರಿಸದೆಮೆಯಿಕ್ಕಿ ದೃಷ್ಟಿಯುದ್ಧದೊಳ್ ಸೋಲೆ ಮತ್ತಮಿರ್ವರುಂ ಬಂದು,

ಕರಿಯೂಥಪತಿಗಳೆರಡುಂ
ಸರಸೀಜಳಮಂ ವಿಳಾಸದಿಂ ಪುಗುವವೊಲಾ
ದರದಿಂದೆ ಪೊಕ್ಕು ತುಳುಕಿದ
ರರವಿಂದರಜಃಪಿಶಂಗಿತಾಚ್ಛೋದಕಮಂ ೧೦೬

ಭರತನ ಮುಖದೊಳ್ ಪರ್ವಿದ
ಖರಕೋಪಾನಳನನೆಯ್ದೆ ನಂದಿಸುವವೊಲಾ
ಮರಕತವರ್ಣಂ ಕರಿಕರ
ಪರಿಘದಿನೊಡನೊಡನೆ ತುಳುಕಿದಂ ತಿಳಿನೀರಂ ೧೦೭

ವ॥ ಭರತೇಶ್ವರಂ ಪಂಚಶತಶರಾಸನೋತ್ಸೇಧನಪ್ಪುದರಿಂ ಪಂಚವಿಂಶತ್ಯುತ್ತರಪಂಚಶತ ಶರಾಸನೋತ್ಸೇಧನಪ್ಪ ಬಾಹುಬಲಿಕುಮಾರನ ಮೇಗೆ

ನೋಡುತ್ತಿರುವಂತೆ ಆಜ್ಞಾಪಿಸಿದರು. ಆಗ ಭರತ ಬಾಹುಬಲಿಗಳು ನೀಲ ನಿಷಧಾಚಲಗಳು ಪರಸ್ಪರವಾಗಿ ಯುದ್ಧಗೈಯ್ಯುವಂತೆ ಬಂದು ನಿಂತು ಒಬ್ಬರನ್ನೊಬ್ಬರು ಮೈಯಿಕ್ಕದೆ ನೋಡಿದರು. ಆಗ ೧೦೫. ಸುಂದರವಾದ ಮುಖಕಮಲವುಳ್ಳ ಭುಜಬಲಿಯು ರೆಪ್ಪೆಯಾಡಿಸದೆಯೆ ಕಣ್ಣುಗಳ ಗುಡ್ಡೆಗಳನ್ನಲುಗಿಸದೆಯೆ ಕಣ್ಣುಗಳಿಂದಲೇ ಹೀರುವಂತೆ ದೇಹವನ್ನಲುಗಿಸದೆಯೆ ಭರತನನ್ನು ದಿಟ್ಟಿಸಿ ನೋಡಿದನು. ಆದರಿಂದ ಅವನು (ಭರತರಾಜನು) ಸೋತುಹೋದನು. ವ॥ ಆಗ ಬಾಹುಬಲಿಯ ತೇಜೋರಾಶಿಯೇ ಕಣ್ಣುಗಳಲ್ಲಿ ಉಕ್ಕುವಂತೆ (ಆಗಲೂ) ಸೈರಿಸದೆಯೆ ರೆಪ್ಪೆಮುಚ್ಚಿಕೊಂಡು ಭರತನು ದೃಷ್ಟಿಯುದ್ಧದಲ್ಲಿ ಸೋತನು. ಮತ್ತೆ ಭರತ ಬಾಹುಬಲಿಗಳಿಬ್ಬರೂ ೧೦೬. ಸಲಗಗಳೆರಡು ಸರೋವರದ ನೀರನ್ನು ವಿಲಾಸದಿಂದ ಹೊಗುವಂತೆ, ಕಮಲದ ಕೇಸರಗಳ ಧೂಳಿಗಳಿಂದ ಹೊಂಬಣ್ಣದ ಸ್ವಚ್ಛವಾದ ನೀರನ್ನು ಆದರದಿಂದ ಹೊಕ್ಕು ಎರಚಾಡಿದರು. ೧೦೭. ಭರತನ ಮುಖದಲ್ಲಿ ಕಾಣಿಸಿಕೊಂಡ ಉಗ್ರವಾದ ಕೋಪಾಗ್ನಿಯನ್ನು ನಂದಿಸಲೋ ಎಂಬಂತೆ ಮರಕತಮಣಿವರ್ಣದ ಬಾಹುಬಲಿಯು ಪರಿಘದಂತಿದ್ದ ಕರದಿಂದ ತಿಳಿನೀರನ್ನು ಮತ್ತೆ ಮತ್ತೆ ಎರಚಿದನು. ವ॥ ಭರತೇಶ್ವರನು ಐದುನೂರು ಬಿಲ್ಲುಗಳಷ್ಟು ಎತ್ತರವುಳ್ಳವನಾದ್ದರಿಂದ ಐದುನೂರ ಇಪ್ಪತ್ತೈದು ಬಿಲ್ಲುಗಳಷ್ಟು ಎತ್ತರವಿರುವ ಬಾಹುಬಲಿಯ ಮೇಲೆ,

ಭರದಿಂದಂ ತುಳುಕಿದ ನೀ
ರುರದೊಳ್ ಹಾರಾಂಶುರುಚಿಯನಿರ್ಕುಟಿಗೊಳೆ ದು
ರ್ಧರಜಳಯುದ್ಧಮುಮಾದಮೆ
ಪರಿಭವಮಂ ಚಕ್ರವರ್ತಿಗಿತ್ತತ್ತಾಗಳ್ ೧೦೮

ವ॥ ಅಂತು ಬಾಹುಬಲಿಯ ಸುರಕರಿಕರಾನುಕಾರಿಯಪ್ಪ ಬಾಹುಗಳಿಂದಂ ತುಳ್ಕಿದ ನೀರ್ಗೆ ಮೊಗಮನೊಡ್ಡಿ ಮೊಗಂ ಸೋಲ್ತುದುಂ, ಕುಮಾರಂಗೆ ಘೋಷಿಸುವ ಜಯಘೋಷಣೆಯಂ ಕೇಳಲಾಱದೆ ಮಣಿಮಯಕಿರೀಟೋದಗ್ರವಿಸ್ಫುರಿತಸಂಚೂಳಿಕಾಕನಕಾಚಳಮನೆ ಪೋಲ್ತು ಮಲ್ಲಯುದ್ಧದೊಳ್ ಬಂದು ಪೊಣರ್ದು,

ಮರಕತಮಣಿಶೈಲಮನನು
ಕರಿಸುವ ಭುಜಬಲಿಯೊಳಿರದೆ ಪೊಣರ್ವುದುಮಾಗಳ್
ಸುರವಿದ್ಯಾಧರನರಬಲ
ಮೆರಡುಂ ದೆಸೆಯೊಳ್ ತೆರಳ್ದು ನೋಡುತ್ತಿರ್ದತ್ತಂ ೧೦೯

ಕರಣಂಗಳ ದಾಯಂಗಳ
ಪರಿಣತಿಯಂ ಮೆಱೆದು ಪೊಣರ್ದು ಸಂದೊಂದೆಡೆಯೊಳ್
ಭರತನನವಯವದೊಳೆ ಮಣಿ
ಕಿರೀಟರುಚಿ ಬೆಳಗೆ ದೆಸೆಗೆ ಬೀಸಿದನಾಗಳ್ ೧೧೦

ಕನಕಾಚಳಮಂ ಪೊತ್ತುದು
ಘನಮರಕತಶೈಲಮೆನಿಸಿ ಭುಜಬಲಿ ಸಕಳಾ
ವನಿತಳವಲ್ಲಭನಂ ಭೋಂ
ಕೆನೆತ್ತಿ ಪೊತ್ತಿರ್ದನಿಕ್ಕಲೊಲ್ಲದೆ ನೆಲದೊಳ್ ೧೧೧

೧೦೮. ವೇಗದಿಂದ ತುಳುಕಿದ ನೀರು, ಬಾಹುಬಲಿಯ ಎದೆಯ ಮೇಲೆ ಮುತ್ತಿನಹಾರದ ಕಿರಣಗಳ ಕಾಂತಿಯನ್ನು ವಹಿಸಿತು. ದುರ್ಧರವಾದ ಜಲಯುದ್ಧವೂ ಭರತಚಕ್ರವರ್ತಿಗೆ ವಿಶೇಷವಾಗಿ ಪರಿಭವವನ್ನು ತಂದಿತು. ವ॥ ಹೀಗೆ ಬಾಹುಬಲಿಯು ಆನೆಯ ಸೊಂಡಿಲನ್ನು ಹೋಲುವ ತನ್ನ ತೋಳುಗಳಿಂದ ಚೆಲ್ಲಿದ ನೀರಿಗೆ ಭರತನು ಮುಖವನ್ನು ಓರೆಯಾಗಿ ಮಾಡಿ ಮುಖಕ್ಕೆ ಸೋಲನ್ನು ತಂದುಕೊಂಡನು. ಆಗ ಕುಮಾರನಾದ ಬಾಹುಬಲಿಗಾಗಿ ಘೋಷಿಸುವ ಹೊಗಳಿಕೆಯ ಮಾತುಗಳು ಭರತನಿಗೆ ಸಹಿಸದಾದುವು. ಅವನು ತನ್ನ ಮಣಿಮಯವಾದ ಕಿರೀಟದಿಂದ, ಹೊಳೆಯುವ ಶಿಖರವುಳ್ಳ ಕನಕಾಚಲವನ್ನು ಹೋಲುತ್ತಾ ಬಂದು, ಮಲ್ಲಯುದ್ಧಕ್ಕೆ ತೊಡಗಿದನು. ೧೦೯. ಮರಕತಮಣಿಶೈಲದಂತಿದ್ದ (ಶ್ಯಾಮವರ್ಣದ) ಬಾಹುಬಲಿಯೊಡನೆ ಯುದ್ಧಕ್ಕೆ ತೊಡಗಲು ಸುರವಿದ್ಯಾಧರ ನರರ ಸೈನ್ಯಗಳು ಎರಡೂ ಕಡೆಗೆ ಹೋಗಿ ನಿಂತು ನೋಡಲಾರಂಭಿಸಿದುವು. ೧೧೦. ಮಲ್ಲವಿದ್ಯೆಯ ಕೈಚಳಕ ಮತ್ತು ಪಟ್ಟುಗಳ ಪರಿಣತಿಯನ್ನು ಮೆರೆದು ಯುದ್ಧಮಾಡುತ್ತ ಬಾಹುಬಲಿಯು ಭರತನನ್ನು ಸುಲಭವಾಗಿ ಎತ್ತಿಕೊಂಡು ಅವನ ಮಣಿಕಿರೀಟಗಳ ಕಾಂತಿಗಳು ಬೆಳಗುತ್ತಿರಲು ಅವನನ್ನು ದಿಕ್ಕಿಗೆ ಬೀಸಿದನು. ೧೧೧. ಸಾಂದ್ರವಾದ ಮರಕತಶೈಲವು ಕನಕಾಚಲವನ್ನು ಹೊತ್ತಿತ್ತೋ ಎಂಬಂತೆ ಬಾಹುಬಲಿಯು ಸಕಲಭೂಮಿಗೊಡೆಯನಾದ ಭರತೇಶ್ವರ

ಭರತಾವನೀಶ್ವರಂ ಗುರು
ಪಿರಿಯಣ್ಣಂ ಚಕ್ರವರ್ತಿ ಮಹಿಮಾಕರನೀ
ದೊರೆಯನುಮಳವಟೆಯೆ ವಸುಂ
ಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ ೧೧೨

ಎಂದೊಯ್ಯನಿಟಿಪೆ ನೆಲದೊಳ್
ದುಂದುಭಿರವಮೊಡನೆ ವಿಜಯಘೋಷಣೆ ನೆಗಟ್ದ
ತ್ತಂದು ಭುಜಬಲಿಯ ಬಲದೊಳ್
ಕುಂದು ಕರಂ ಪಿರಿದುಮಾಯ್ತು ಭರತನ ಬಲದೊಳ್ ೧೧೩

ಚರಮತನುಸಾರ್ವಭೌಮಂ
ಪುರುಪರಮೇಶ್ವರತನೂಜನಂತತಿಭಂಗಂ
ದೊರೆಕೊಂಡುದಿಂದು ಭರತೇ
ಶ್ವರಂಗೆ ಹುಂಡಾವಸರ್ಪಿಣೀವಿಳಸನದಿಂ ೧೧೪

ನೆರೆದೆರಡುಂ ಬಲದರಸುಗ
ಳಿರೆ ಪರಿಭವಮಂತು ತನಗೆ ಬರೆ ಮುಳಿಸಿನ ದ
ಳ್ಳುರಿಗಳನುಗುಱುತ್ತುಂ ಚ
ಕ್ರರತ್ನಮಂ ಬಗೆದು ಬೆಸಸಿದಂ ಭರತೇಶಂ ೧೧೫

ವ|| ಆಗಳಾ ಪುರುಪರಮೇಶ್ವರತನೂಭವರ ಯುದ್ಧಾಡಂಬರೋಪಸರ್ಗದೊಳಮಾಕುಳ ವ್ಯಾಕುಳರಾಗಿ ತತ್ಪ್ರಶಮನಪ್ರತೀಕಾರಮಾಗೆ ನಾಕಲೋಕಸೌಂದರಿಯರೊಡನೆ,

ಚಕ್ರವರ್ತಿಯನ್ನು ಭೋಂಕನೆತ್ತಿ ಹಿಡಿದರೂ ನೆಲದ ಮೇಲೆ ಎಸೆಯಲು ಇಷ್ಟಪಡದೆ ಹೊತ್ತೇ ನಿಂತನು. ೧೧೨. "ಭರತನು ನನ್ನ ದೊಡ್ಡಣ್ಣ, ಗುರುಸ್ಥಾನೀಯ, ಚಕ್ರವರ್ತಿ, ಮಹಿಮೆಗೆ ಆಗರ. ಶಕ್ತಿಯಳಿದ ಈ ರಾಜನನ್ನು ಭೂಮಿಯ ಮೇಲೆ ಎಸೆದು ಅದೇಕೆ ಅವಮಾನವನ್ನು ಮಾಡಲಿ?" ೧೧೩. ಎಂದು ಆಲೋಚಿಸಿ ಬಾಹುಬಲಿಯು ಭರತನನ್ನು ಮೆಲ್ಲಗೆ ನೆಲದ ಮೇಲಿಳಿಸಿದನು. ಆಗ ಬಾಹುಬಲಿಯ ಸೈನ್ಯದಲ್ಲಿ ದುಂದುಭಿಧ್ವನಿಯೊಡನೆ ವಿಜಯಘೋಷಣೆ ಜರುಗಿತು. ಭರತೇಶ್ವರನ ಸೈನ್ಯಕ್ಕೆ ದೈನ್ಯವುಂಟಾಯಿತು. ೧೧೪. ಕೊನೆಯ ಜನ್ಮವುಳ್ಳವನೂ ಸಾರ್ವಭೌಮನೂ ಪುರುಪರಮೇಶ್ವರನ ಮಗನೂ ಆದ ಭರತೇಶನಿಗೆ "ಹುಂಡಾವಸರ್ಪಿಣಿ[1]"ಯ ವಶದಿಂದ ಸೋಲು ಒದಗಿತು. ೧೧೫. ಆ ಎರಡೂ ಸೈನ್ಯದ ಅರಸರ ಎದುರಿನಲ್ಲಿ ಪರಿಭವವು ಭರತನಿಗುಂಟಾಯಿತು. ಇದರಿಂದ ಅವನು ಕೋಪದ ದಳ್ಳುರಿಗಳನ್ನು ಚೆಲ್ಲುತ್ತ ಚಕ್ರರತ್ನವನ್ನು ಸ್ಮರಿಸಿ ಆಜ್ಞೆಮಾಡಿದನು. ವ|| ಆಗ ಪುರುಪರಮೇಶ್ವರನ ಮಕ್ಕಳ ಯುದ್ಧಾಡಂಬರಪ್ರಯುಕ್ತವಾದ ಉತ್ಪಾತಗಳಿಂದ ಚಿಂತಾಕ್ರಾಂತರಾಗಿ ಅವುಗಳ ಪ್ರಶಮನ ಪ್ರತೀಕಾರಕ್ಕಾಗಿಯೆ ನಾಗಲೋಕದ ಸುಂದರಿಯರೊಡನೆ,

---

1. ಹುಂಡಾವಸರ್ಪಿಣೀ = ಶರೀರದ ಅಂಗೋಪಾಂಗಗಳನ್ನು ಕುರೂಪಗೊಳಿಸುವ ಕರ್ಮಗಳ ಉದಯ.

ಅನಿಮೇಷರ್ ನೂತನಪ್ರಸ್ತುತ ಸುರಭಿಸುಧಾಕ್ಷೀರಧಾರಾಭಿಷೇಕಾ
ರ್ಚನೆಯಂ ಸದ್ಯಸ್ತನಾಖಂಡಳವನಸುಮನೋಮಾಲಿಕಾಲಂಬಲೀಲಾ
ರ್ಚನೆಯಂ ಪ್ರತ್ಯಗ್ರಚಿಂತಾಮಣಿಮಯರಚನಾಶ್ಚರ್ಯನಿಶ್ಶೇಷಭೂಷಾ
ರ್ಚನೆಯಂ ಸರ್ವಜ್ಞಬಿಂಬಾವಳಿಗೆ ಪರಸಿದರ್ ಮಸ್ತಕನ್ಯಸ್ತಹಸ್ತರ್ ೧೧೬

ವ॥ ಆ ಪ್ರಸ್ತಾವದೊಳ್,

ಬೆಸಸಿದೊಡದು ಮಾರ್ಕೊಳ್ಳದೆ
ಬೆಸನಂ ಬಲವಂದು ಬಾಹುಬಲಿಯನಣಂ ಭೇ
ದಿಸಲಾಱದುದಱಿನಿರ್ದುದು
ಮುಸುಳ್ದೆಸಕಂಗೆಟ್ಟು ಬಲದ ಮುಯ್ಯಿನ ಕೆಲದೊಳ್ ೧೧೭

ವ॥ ಆಗಳ್,

ಧರೆಯಂ ಪರ್ಬಿರ್ದುದೀ ಬಾಹುಬಲಿನೃಪಯಶೋದುಂದುಭಿಧ್ವಾನವೆಂಬಂ
ತಿರೆ ದೇವಾನೀಕನೀದುಂದುಭಿರವಮುಮರೀವೃಂದಮಾಂಗಲ್ಯಗೇಯ
ಸ್ವರದೊಳ್ ಕೈಗೂಡಿ ಪೊಣ್ಮುತ್ತಿರೆಮುದಿತಸುರಾನಂದಬಾಷ್ಪೋದಬಿಂದೂ
ತ್ಕರಮೆಂಬಂತಾಗೆ ತಂದತ್ತಲರ ಮಱೆಗಳಂ ಪುಷ್ಪಮೇಘಪ್ರತಾನಂ ೧೧೮

ತನಗಲ್ಲದುದಂ ಮಾಡಿದ
ನಿನಿಸಂ ಚಕ್ರೇಶನೆಂಬ ಕುಲವೃದ್ಧರ ಭೂ
ವನಿತಾಧೀಶರ ನುಡಿಗ
ಳ್ಗೆ ನಾಣ್ಚಿದಂ ಭರತರಾಜನವನತಮಕುಟಂ ೧೧೯

೧೧೬. ದೇವತೆಗಳು 'ಸರ್ವಜ್ಞಬಿಂಬಾವಳಿ'ಗೆ (ತೀರ್ಥಂಕರ ಮೂರ್ತಿಗಳಿಗೆ) ಆಗತಾನೆ ಕರೆದ ಕಾಮಧೇನುವಿನ ಅಮೃತದಂತಿರುವ ಕ್ಷೀರಧಾರೆಯಿಂದ ಅಭಿಷೇಕಮಾಡಿ ಪೂಜಿಸಿದರು. ಆಗತಾನೆ ಅರಳಿದ ಇಂದ್ರನ ಉದ್ಯಾನದ ಹೂವಿನ ಹಾರಗಳಿಂದ ಅರ್ಚಿಸಿದರು. ನೂತನ ಚಿಂತಾಮಣಿರತ್ನಗಳಿಂದ ನಿರ್ಮಿತವಾದ ಆಶ್ಚರ್ಯಕರಾಭರಣಗಳಿಂದ ಅರ್ಚನೆಯನ್ನು ಮಾಡಿ ಕೈಮುಗಿದರು. ವ॥ ಆ ಪ್ರಸ್ತಾವದಲ್ಲಿ ೧೧೭. ಭರತನು ಅಪ್ಪಣೆ ಮಾಡಲು ಆ ಚಕ್ರರತ್ನವು ಅಪ್ಪಣೆಯನ್ನು ವಿರೋಧಿಸದೆ ಹೋಗಿ ಬಾಹುಬಲಿಯನ್ನು ಪ್ರದಕ್ಷಿಣೆಮಾಡಿ ಅವನನ್ನು ಸ್ವಲ್ಪವೂ ಭೇದಿಸಲಾರದೆಯೆ ಬಾಹುಬಲಿಯ ಬಲಭುಜದ ಪಕ್ಕದಲ್ಲಿ ಪ್ರತಾಪಹೀನವಾಗಿ ನಿಂತಿತು. ವ॥ ಆಗ ೧೧೮. ಬಾಹುಬಲಿರಾಜನ ಯಶೋದುಂದುಭಿಶಬ್ದವು ಭೂಮಿಯನ್ನೆಲ್ಲಾ ವ್ಯಾಪಿಸಿಕೊಂಡಿತೋ ಎಂಬಂತೆ ದೇವಸೇನೆಯ ನಗಾರಿ ಶಬ್ದವು ದೇವಸ್ತ್ರೀಯರ ಮಾಂಗಲ್ಯಗೇಯ ಸ್ವರದೊಡನೆ ಮಿಲಿತವಾಗಿ ಹರಡಿತು. ಹೂವುಗಳೆಂಬ ಮೋಡದ ಸಮೂಹವು ಸಂತುಷ್ಟರಾದ ದೇವತೆಗಳ ಆನಂದಬಾಷ್ಪಜಲವೋ ಎಂಬಂತೆ ಅರಳಮಳೆಯನ್ನು ತಂದಿತು. ೧೧೯. ತನ್ನ ಅಂತಸ್ತಿಗೆ ತಕ್ಕುದಲ್ಲದ್ದನ್ನು ಭರತೇಶನು ಮಾಡಿದನೆಂಬ ಕುಲವೃದ್ಧರಾದ ರಾಜರ ಮಾತುಗಳಿಗೆ ನಾಚಿಕೊಂಡು ಭರತರಾಜನು

ಬಾಹುಬಲಿ ತನ್ನ ದಕ್ಷಿಣ
ಬಾಹುವ ಕೆಲದಲ್ಲಿ ನಿಂದ ಚಕ್ರಮನಾಗಳ್
ಸಾಹಸರಸಿಕಂ ಕಂಡೀ
ಸಾಹಸಮಂ ನೆಗಳ್ದನೆನ್ನೊಳಂ ಭರತೇಶಂ ೧೨೦

ಕಳೆದಿಡುವುದೆ ಕಷ್ಟಂ ಭೂ
ತಳರಾಜ್ಯವಿಮೋಹಮಚಿರರುಚಿಸಂಚಳಮಿಂ
ತಳವುಗಿಡಿಸಿದುದು ಮನುಕುಲ
ತಿಳಕನುಮಂ ಖಳಮಹೀಶರುಳಿದವರಳವೇ ೧೨೧

ಸೋದರರೊಳ್ ಸೋದರರಂ
ಕಾದಿಸುವುದು ಸುತನ ತಂದೆಯೆಡೆಯೊಳ್ ಬಡದು
ತ್ಪಾದಿಸುವುದು ಕೋಪಮನಳ
ವೀ ದೊರೆತೆನೆ ತೊಡರ್ವುದೆಂತು ರಾಜ್ಯಶ್ರೀಯೊಳ್ ೧೨೨

ವ॥ ಅದಲ್ಲದೆಯುಮಶೇಷವಿದ್ಯಾನದೀಶೋಷಣಗ್ರೀಷ್ಮಾಂಶುಮಾಲಿಮಯೂಖಮಾಲೆಯುಮುಪಶಮಾಂಭೋರಾಶಿಪ್ರಳಯಬಾಡಬಾನಳಜ್ವಾಲೆಯುಂ ವಿನಯಾಮೃತಮರೀಚಿಸಂಛಾದನಾಂಭೋದಸಂತತಿಯುಮುಭಯಲೋಕವಿವೇಕವಿರೋಚನಾಸ್ತಮಯವೇಲೆಯುಂ ಧರ್ಮದ್ರುಮಚ್ಛೇದಪರಶುಧಾರೆಯುಂ ವಿಷಯವಿಷದ್ರುಮಕಂದಳಿಯುಮಿಂದ್ರಿಯಲುಬ್ಧಕಸ್ವಚ್ಛಂದವಿಹಾರಗಹನಭೂಮಿಯುಂ ದುರ್ಯಶಃಪಾಂಶುಪ್ರಸರಮಹಾವಾತ್ಯೆಯುಮಪ್ಪ

ತಲೆಬಾಗಿ ನಿಂತನು. ೧೨೦. ಬಾಹುಬಲಿಯು ತನ್ನ ಬಲಭುಜದ ಬಳಿಯಲ್ಲಿ ಬಂದು ನಿಂತ ಚಕ್ರವನ್ನು ವೀಕ್ಷಿಸಿದನು. ಈ ಸಾಹಸವನ್ನು ಭರತೇಶನು ನನ್ನ ಮೇಲೂ ಪ್ರಯೋಗಿಸಿದನು ಎಂದು ಸಾಹಸರಸಿಕನಾದ ಬಾಹುಬಲಿಯು ತನ್ನಲ್ಲಿ ಹೀಗೆ ಹೇಳಿಕೊಂಡನು. ೧೨೧. "ಮಿಂಚಿನ ಕಾಂತಿಯಂತೆ ಚಂಚಲವಾದ ರಾಜ್ಯವಿಮೋಹವನ್ನು ಕಳಚಿಡುವುದು ಬಹುಕಷ್ಟ, ಮನುಕುಲತಿಲಕನಾದ ಭರತೇಶನಿಗೂ ಈ ವ್ಯಾಮೋಹವು ತಪ್ಪಲಿಲ್ಲ. ಅಂದಮೇಲೆ ಇತರ ಖಳರಾಜರಿಗೆ ವ್ಯಾಮೋಹತ್ಯಾಗವು ಸಾಧ್ಯವೆ? ೧೨೨. ಅಣ್ಣತಮ್ಮಂದಿರ ಮೇಲೆ ಅಣ್ಣತಮ್ಮಂದಿರನ್ನು ಕಾದಿಸುವುದು. ತಂದೆ ಮಕ್ಕಳಿಗೂ ಕೋಪವನ್ನು ತಂದಿಡುವುದು. ಅದರ ಸಾಮರ್ಥ್ಯ ಈ ಪರಿಯದೆಂದ ಮೇಲೆ ರಾಜ್ಯಶ್ರೀಯ ವಿಷಯದಲ್ಲಿ ಪ್ರವರ್ತಿಸುವುದೆಂತು? ವ॥ ಅದಲ್ಲದೆ ಎಲ್ಲ ವಿದ್ಯೆಗಳೆಂಬ ನದಿಗಳನ್ನೊಣಗಿಸತಕ್ಕದ್ದೂ ಬೇಸಿಗೆಯ ಸೂರ್ಯನ ಕಿರಣಮಾಲೆಯೂ ಉಪಶಮವೆಂಬ ಸಮುದ್ರಕ್ಕೆ ಪ್ರಳಯಕಾಲದ ಕಡಲ್ಗಿಚ್ಚಿನ ಜ್ವಾಲೆಯೂ ವಿನಯವೆಂಬ ಅಮೃತಮರೀಚಿಯುಳ್ಳ ಚಂದ್ರನನ್ನು ಮರೆಮಾಚುವ ಮೋಡದ ಸಂತತಿಯೂ ಇಹಪರಲೋಕ ವಿವೇಕವೆಂಬ ಸೂರ್ಯನು ಮುಳುಗುವ ಸಮುದ್ರದ ಎಲ್ಲೆಯೂ ಧರ್ಮವೆಂಬ ವೃಕ್ಷವನ್ನು ಕಡಿಯಲು ಸಹಾಯಕವಾದ ಪರಶುಧಾರೆಯೂ ಇಂದ್ರಿಯವಿಷಯಗಳೆಂಬ ವಿಷವೃಕ್ಷದ ಚಿಗುರೂ ಇಂದ್ರಿಯಗಳೆಂಬ ಬೇಡರ ಸ್ವಚ್ಛಂದ ವಿಹಾರಕ್ಕನುಕೂಲವೂ ದಟ್ಟವೂ ಆದ ಕಾಡೂ ದುಷ್ಕೀರ್ತಿಯೆಂಬ ಧೂಳಿಯ ಹರಡುವಿಕೆಗೆ ಸಹಾಯಕವಾದ ಬಿರುಗಾಳಿಯೂ ಆದವಳು

ಪಾತಕಿಯೊಳ್ ಲಕ್ಷ್ಮಿಯೊಳತಿ
ಕಾತರಕಾಪುರುಷಗಣನೆಯೊಳ್ ನೆರೆಯಲ್ಕಿಂ
ತೀತನೆ ಬಗೆಗಾಂ ಪುರುತನು
ಜಾತರ ಬಗೆದುದನೆ ಬಗೆವೆನಳಿಪಂ ಬಗೆಯೆಂ ೧೨೩

ವಿಷಧಿಗಳೊಳಗೊಯ್ದುರ್ವ
ವಿಷಮರಣಾಂಗಣಮನಿರದೆ ಪುಗಿಸುವ ನಾನಾ
ವಿಷಯಂಗಳಂ ತೊಡರ್ಚುವ
ವಿಷಯಸುಖಂಗಳೊಳೆ ತೊಡರ್ದು ಬಿರ್ದಪುದು ಜಗಂ ೧೨೪

ಇನಿಯವು ಮೊದಲೊಳ್ ನಂಜಿನ
ಪನಿವೊಲ್ ಬಳಿಕೆಯ್ದೆ ಮುಳಿದು ಕೊಂದಿಕ್ಕುವುವಿಂ
ತೆನೆಯೆನೆ ವಿಷಯಸುಖಾಸ್ವಾ
ದನದೊಳ್ ಲಂಪಟರಿದೇಕೆಯೋ ನರಪಶುಗಳ್ ೧೨೫

ಕಿವಿ ಮೆಯ್ ಕಣ್ ನಾಲಗೆ ಮೂ
ಗಿವು ಶಬ್ದಸ್ಪರ್ಶರೂಪರಸಗಂಧಸಮು
ದ್ಭವಸುಖದೊಳ್ ತೊಡರ್ವುದೆ ಸುಖ
ಮವಿಲ್ಲದಂದಿಲ್ಲದರ್ಕತೀಂದ್ರಿಯಮೆ ಸುಖಂ ೧೨೬

ಕಿಡುವೊಡಲ ಕಿಡುವ ರಾಜ್ಯದ
ಪಡೆಮಾತುಗೊಳಲ್ಕಮೆನ್ನ ಮೆಯ್ನಡುಗಿದಪುದೀ
ಗಡೆ ಜೈನದೀಕ್ಷೆಯಂ ಕೊಂ
ಡಡಿಗೆಱಗಿಸುವೆಂ ಸಮಸ್ತಸುರಸಮುದಯಮಂ ೧೨೭

ಲಕ್ಷ್ಮಿ ೧೨೩. ಪಾತಕಿಯಾದ ಈ ಲಕ್ಷ್ಮಿಯೊಡನೆ ಕಾತರನಾದ ಕಾಪುರುಷನಂತೆ ಈತನೇ ನೆರೆಯಲಿ! ನಾನು ಪುರುರಾಜನ ಮಕ್ಕಳು ಆಲೋಚಿಸುವಂತೆ ಆಲೋಚಿಸುವೆನು. ಕೆಟ್ಟದ್ದನ್ನು ಆಲೋಚಿಸೆನು. ೧೨೪. (ನರಕವೆಂಬ) ವಿಷಸಮುದ್ರಗಳಲ್ಲಿ ಅದ್ದುವ, ವಿಷಮ ರಣಾಂಗಣವನ್ನು ಹೊಗಿಸುವ, ವಿಷಯವಸ್ತುಗಳಲ್ಲಿ ತೊಡರಿಸುವ ವಿಷಯ ಸುಖಗಳಲ್ಲಿಯೇ ಈ ಜಗತ್ತು ಬಿದ್ದು ಒದ್ದಾಡುತ್ತಿದೆ. ೧೨೫. ಪ್ರಾರಂಭದಲ್ಲಿ ವಿಷಯ ವಸ್ತುಗಳು ಸಿಹಿಯಾಗಿರುವುವು. ಬಳಿಕ ವಿಷದ ಹನಿಯಂತೆ ಮುಳಿದು ಕೊಲ್ಲುವುವು. ಹೀಗಿದ್ದರೂ ನರಪಶುಗಳು ವಿಷಯಸುಖಾಸ್ವಾದನದಲ್ಲಿಯೇ ಲಂಪಟರಾಗಿರುವುದೇಕೆ? ೧೨೬. ಕಿವಿ, ಮೈ, ಕಣ್ಣು, ನಾಲಗೆ ಮತ್ತು ಮೂಗುಗಳು ಕ್ರಮವಾಗಿ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳಿಂದುಂಟಾಗುವ ಸುಖದಲ್ಲಿಯೇ ಪ್ರವೃತ್ತವಾಗುವುದೇ ಸುಖವೆನಿಸುವುದು. ಶಬ್ದಾದಿ ವಿಷಯಗಳಿಲ್ಲದಾಗ ಸುಖವೆಂಬುದೇ ಇಲ್ಲ. ಆದ್ದರಿಂದ ಅತೀಂದ್ರಿಯಸುಖವೇ ನಿಜವಾದ ಸುಖ. ೧೨೭. ನಾಶವಾಗುವ ಈ ದೇಹ, ನಾಶವಾಗುವ ಈ ರಾಜ್ಯ ಇವುಗಳ ವಿಷಯವಾದ ಸುದ್ದಿಯನ್ನು ಹೇಳಲಿಕ್ಕೆ ಸಹ ನನ್ನ ಮೈ ನಡುಗುತ್ತದೆ. ಆದಕಾರಣ ಈಗಲೇ ಜೈನದೀಕ್ಷೆಯನ್ನು ಪರಿಗ್ರಹಿಸಿ ಎಲ್ಲ ಸುರಸಮೂಹವನ್ನೂ ಕಾಲಿಗೆ

ಎಂದಿಂತು ಬಗೆದು ಭರತನ
ನೆಂದಂ ಚಕ್ರೇಶ ಸಿಗ್ಗನುಟೆ ಮುಳಿಸಂ ನೀ
ನೆಂದಿಂಗಂ ಬಿಸುಡೀ ತ
ಮ್ಮಂದಿರೊಳಿಂತಿನಿತು ಕಟ್ಟುವರ್ಪುದು ಪೆಂಪೇ ೧೨೮

ನಿನ್ನೀ ಬೆಸಸಿದ ಚಕ್ರಮ
ದೆನ್ನೀ ದೇಹಾದ್ರಿಯಂ ಗೆಲಲ್ ನೆಱೆಯದು ನೀಂ
ಬನ್ನನಿದೇಕಿರ್ಪೆಯದೆಂ
ತೆನ್ನ ಗೆಲಲ್ ವಜ್ರಗಿರಿಯನಾರ್ಕುಮೆ ವಜ್ರಂ ೧೨೯

ನೆಲಸುಗೆ ನಿನ್ನ ವಕ್ಷದೊಳೆ ನಿಚ್ಚಳಮಿಾಭಟಖಡ್ಗಮಂಡಲೋ
ತ್ಪಲವನವಿಭ್ರಮಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ
ವಲಯಮನಯ್ಯನಿತ್ತುದುಮನಾಂ ನಿನಗಿತ್ತೆನಿದೇವುದಣ್ಣ ನೀ
ನೊಲಿದ ಲತಾಂಗಿಗಂ ಧರೆಗಮಾಟಿಸಿದಂದು ನೆಗಟ್ತೆ ಮಾಸದೇ ೧೩೦

ಅವಧರಿಸದೆ ನಿನ್ನೊಳ್ ಪಿರಿ
ದವಿನಯಮಂ ನೆಗಟ್ದ ದೋಷಮಂ ತಪದೊಳ್ ನೀ
ಗುವೆನಸದಾಗ್ರಹಮಂ ಬಿಸು
ಡುವುದೊರ್ಮೆಗೆ ಮಱೆವುದೆನ್ನ ದುರ್ವಿಳಸನಮಂ ೧೩೧

ವ॥ ಎಂದು ಬಾಹುಬಲಿಕುಮಾರಂ ತಪಶ್ಚರಣನಿಶ್ಚಳನಿಶ್ಚಯಮನನಾದಾಗಳ್,

ಬೀಳುವಂತೆ ಮಾಡಿಸುವೆನು" ೧೨೮. ಎಂದುಕೊಂಡು ಬಾಹುಬಲಿಯು "ಚಕ್ರೇಶ್ವರ ಲಜ್ಜೆಯನ್ನು ಬಿಡು, ಸಿಟ್ಟನ್ನು ಎಂದಿಗೂ ಮಾಡದಿರು. ತಮ್ಮಂದಿರ ವಿಷಯದಲ್ಲಿ ಹೀಗೆ ಇಷ್ಟು ನಿಗ್ರಹಬುದ್ಧಿಯನ್ನಿರಿಸುವುದು ಹಿರಿಮೆಯೆ? ೧೨೯. "ನಿನ್ನ ಆಜ್ಞಾಧೀನವಾದ ಚಕ್ರವು ನನ್ನ ದೇಹವೆಂಬ ಬೆಟ್ಟವನ್ನು ಗೆಲ್ಲಲು ಸಮರ್ಥವಾಗುವುದಿಲ್ಲ. ಆದೇಕೆ ಸುಮ್ಮನೆ ಮಾತನಾಡದಿರುವೆ? ಅದು ನನ್ನನ್ನು ಹೇಗೆ ಗೆದ್ದೀತು? ವಜ್ರಗಿರಿಯನ್ನು ವಜ್ರವು ನಾಶಪಡಿಸಲು ಸಾಧ್ಯವೇ? ೧೩೦. ಯೋಧಖಡ್ಗಳೆಂಬ ಉತ್ಪಲವನದಲ್ಲಿ ಸೊಗಸಿನಿಂದ ನಲಿಯುವ ದುಂಬಿಯಂತಿರುವವಳೂ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವವಳೂ ಆದ ರಾಜ್ಯಲಕ್ಷ್ಮಿಯು ನಿನ್ನ ಎದೆಯ ಮೇಲೆ ನಿಶ್ಚಲವಾಗಿ ನೆಲಸಿರಲಿ! ನನ್ನಯ್ಯನಿತ್ತ ರಾಜ್ಯವನ್ನು ನಿನಗೆ ಸಮರ್ಪಿಸುವೆನು. ನೀನು ಬಯಸಿರುವ ಹೆಣ್ಣನ್ನೂ ಭೂಮಿಯನ್ನೂ ನಾನು ಬಯಸಿದರೆ, ನನ್ನ ಕೀರ್ತಿಯು ಮಾಸದೆ? ೧೩೧. ನಾನು ನಿನ್ನ ವಿಷಯದಲ್ಲಿ ತೋರಿಸಿದ ಅವಿನಯ ಪ್ರಯುಕ್ತವಾದ ದೋಷವನ್ನು, ತಪಸ್ಸನ್ನು ಕೈಗೊಳ್ಳುವುದರ ಮೂಲಕ ಕಳೆದುಕೊಳ್ಳುವೆನು. ಮನಃಕಷಾಯವನ್ನು ತೊರೆ, ನನ್ನ ದುಶ್ಚೇಷ್ಟೆಯನ್ನು ಕ್ಷಮಿಸು" ವ॥ ಎಂದನು. ಹೀಗೆ ನುಡಿದು ಬಾಹುಬಲಿ ಕುಮಾರನು ತಪಶ್ಚರಣಕಾರ್ಯದಲ್ಲಿ ನಿಶ್ಚಲವಾದ ಮನಸ್ಸುಳ್ಳವನಾದನು. ಆಗ,

ಮನದೊಳ್ ಮುಂ ಪುದಿದಿರ್ದ ಕೋಪಮನಿತುಂ ತೂಳ್ದಾಗಳೆತ್ತೆತ್ತ ಗೆ
ಯ್ದೆನಿದಂ ತಮ್ಮನೊಳೆಂಬುದೊಂದುಪಶಮಂ ಕೈಗಣ್ಮೆ ನೀನೊರ್ಬನ್ನೆ
ಮನುವಂಶಕ್ಕೆ ಲಲಾಮನಪ್ಪನುಜನ್ನೆ ಬೇಡಮ್ಮ ನೀನುಂ ತಪೋ
ವನಮಂ ಸಾರ್ವುದುಮಾನದಾರ್ಗೆ ಮೆಱೆವೆಂ ಮತ್ತಾಜ್ಯಸಾಮ್ರಾಜ್ಯಮಂ ೧೩೨

ವ॥ ಎಂದು,

ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವ
ಗ್ರಜನತ್ಯುನ್ನತಮಪ್ಪ ಮಸ್ತಕದ ಮೇಗೋರಂತೆ ಪಾಯ್ವಾತ್ಮಬಾ
ಷ್ಪಜಳೌಘಂಗಳಿನಂದು ಬಾಹುಬಲಿ ತನ್ನಿಂದಂ ನಿಧೀಶಂಗೆ ವಂ
ಶಜರಾಜ್ಯಾಭಿಷವೋತ್ಸವಂ ನೆಗೞ್ದುದೆಂಬಾಶಂಕೆಯಂ ಮಾಡಿದಂ ೧೩೩

ವ॥ ಅಂತು ಭರತೇಶ್ವರನಂ ಬಾಹುಬಲಿಕುಮಾರನೆಂತಾನುಮೊಡಂಬಡಿಸಿ ಮಹಾಬಲಿಯೆಂಬ ನಿಜತನೂಜನನಾತ್ಮೀಯಪದವಿಯೊಳ್ ನಿಱಿಸಿ,

ಕ್ಷಿತಿತಳದೊಳ್ ನೆಗೞ್ದಿರ್ದ
ಪ್ರತಿಮಲ್ಲನನಿಕ್ಕಿ ಮುಯ್ವನಣಮಾನದೆ ದ
ರ್ಪಿತದುರಿತಮಲ್ಲನುಮನುಡಿ
ವ ತಕ್ಕಿನಿಂ ಸಭೆಗೆ ನಡೆದನಿಂದ್ರಾರ್ಚಿತನಾ ೧೩೪

ವ॥ ಅಂತು, ನಡೆಯೆ,

೧೩೨. ಭರತನು ಮನದಲ್ಲಿ ಮೊದಲು ವ್ಯಾಪಿಸಿದ್ದ ಕೋಪವೆಲ್ಲವನ್ನೂ ಬಿಸುಟನು. ಒಡಮೂಡಿದ ತಮ್ಮನ ಬಗೆಗೆ ಏನು ಮಾಡಿದೆನು ಎಂದು ಪಶ್ಚಾತ್ತಾಪದಿಂದ ಉಪಶಾಂತನಾಗಿ "ನೀನೊಬ್ಬನೇ ಮನುವಂಶಕ್ಕೆ ತಿಲಕಪ್ರಾಯನಾದ ತಮ್ಮ ನೀನೂ ತಪೋವನವನ್ನು ಹೊಗಬೇಡ. ಯಾರಿಗಾಗಿ ಈ ದೊಡ್ಡ ಸಾಮ್ರಾಜ್ಯವನ್ನು ಮೆರೆಯಿಸಲಿ ?" ವ॥ ಎಂದು ಹೇಳಿದನು. ೧೩೩. ಆಮೇಲೆ ಬಾಹುಬಲಿಯ ಪಾದಕಮಲಗಳಿಗೆ ಪಾದ್ಯವಿಧಿಯನ್ನು ಭರತನು ತನ್ನ ಕಣ್ಣೀರುಗಳಿಂದ ಸಲ್ಲಿಸಿದನು. ಆಗ (ಅತ್ಯುನ್ನತನಾದ) ಬಾಹುಬಲಿಯು ತನ್ನ ಅಣ್ಣನಾದ ಭರತನ ಉನ್ನತವಾದ ತಲೆಯ ಮೇಲೆ ಅವಿಶ್ರಾಂತವಾಗಿ ಸುರಿಯುತ್ತಿರುವ ತನ್ನ ಕಣ್ಣೀರುಗಳಿಂದ ಭರತನಿಗೆ ವಂಶಪರಂಪರಾಪ್ರಾಪ್ತವಾದ ರಾಜ್ಯಾಭಿಷೇಕೋತ್ಸವವನ್ನು ನಿರ್ವರ್ತಿಸಿದನೋ ಎಂಬ ಶಂಕೆಯುಂಟುಮಾಡಿದನು. ವ॥ ಹೀಗೆ ಭರತೇಶ್ವರನನ್ನು ಬಾಹುಬಲಿಯು ಹೇಗೋ ಒಪ್ಪಿಸಿ ತನ್ನ ಮಗನಾದ ಮಹಾಬಲಿಯನ್ನು ತನ್ನ ಸ್ಥಾನದಲ್ಲಿ ಕುಳ್ಳಿರಿಸಿದನು. ೧೩೪. ಬಾಹುಬಲಿಯು, ಭೂಮಂಡಲವನ್ನು ಗೆದ್ದು ಅಪ್ರತಿಮಶೂರನೆಂದು ಹೆಸರಾಂತ ಭರತನನ್ನು ಸೋಲಿಸಿದರೂ ಸ್ವಲ್ಪವೂ ಸೇಡಿನ ಮನೋಭಾವವನ್ನು ತಳೆಯದೆ, ಗರ್ವಿತನಾದ ದುರಿತನೆಂಬ ಮಲ್ಲನನ್ನೂ ಸೋಲಿಸುವ ರೀತಿಯಿಂದ ಇಂದ್ರಾರ್ಚಿತನಾದ ಆದಿದೇವನ ಸಭೆಗೆ ಹೋದನು. ವ॥ ಹಾಗೆ ನಡೆದು

ಮಂದಾರವರ್ಷ ನವಮಕ
ರಂದರಜೋಗಂಧಬಂಧು ವಿವಿಧಪತಾಕಾ
ಸಂದೋಹಾಂದೋಳನಪಟು
ಬಂದಾಜೆಸಿದತ್ತು ಸಮವಸರಣಸಮೀರಂ ೧೩೫

ದಿವಿಜನಿಕಾಯದ ಜಯಜಯ
ರವದಿಂದಂ ದುರಿತವಿಜಯಮಂ ತನಗೆ ಮಹೋ
ತ್ಸವದಿನಜೆಪುತ್ತುಮಿದಿರ್ಗೊ
ಳ್ವವೊಲೆಸೆದುದು ಸಮವಸರಣದುಂದುಭಿನಿನದಂ ೧೩೬

ವ।। ಅಂತು ಭಗವದಾಸ್ಥಾನಾರವಿಂದಿನಿಯಂ ರಾಜಹಂಸನಂತಳಂಕರಿಸುತ್ತುಂ ಬಂದು ಭಗವತ್ಪಾದ ಪೀಠೋಪಕಂಠದೊಳ್ ಸರ್ವಾಂಗೋಪನತನಾಗಿ ನಿಂದಾಗಳ್,

ಪುರುಪರಮೇಶ್ವರಮುಖಚಂ
ದ್ರರಶ್ಮಿಯಿಂ ಚೋದ್ಯಮಿನ್ನವಿಲ್ಲೆಂಬಿನೆಗಂ
ಕರವದನಹೃದಯಕಮಳದೊ
ಳೆರಡಲರ್ದುವದೊಂದು ಮುಗಿದುದಾ ಭುಜಬಲಿಯಾ ೧೩೭

ವ।। ಅಂತು ನಿಟಲತಟಘಟಿತಕರಕುಶೇಶಯಕುಟ್ಮಲನಾಗಿ,

ಮೊದಲೊಳ್ ದೇವರ ದಯೆಗೆ
ಯ್ದುದಲ್ತೆ ಯುವರಾಜಪದವಿಯೆನಗೀಗಳುಮ
ಭ್ಯುದಯಕರಪ್ರವ್ರಜ್ಯದ
ಪದವಿಯ ಯುವರಾಜಪದವಿಯಂ ದಯೆಗೆಯಿಸಿಂ ೧೩೮

ಹೋದಾಗ ೧೩೫. ಮಂದಾರಪುಷ್ಪಗಳನ್ನು ಸುರಿಸಿ ಹೊಸತಾದ ಮಕರಂದದ ಧೂಳಿಯ ಗಂಧದಿಂದ ಸಮೇತವಾದ, ನಾನಾವಿಧವಾದ ಬಾವುಟಗಳನ್ನಲುಗಿಸಲು ಸಮರ್ಥವಾದ ಸಮವಸರಣದ ಗಾಳಿಯು ಬೀಸಿ ತಣಿಸಿತು. ೧೩೬. ಸಮವಸರಣದ ನಗಾರಿಯ ಶಬ್ದವು ದಿವಿಜಸಮೂಹದ ಜಯಕಾರಧ್ವನಿಯ ಮೂಲಕ ದುರಿತದ ಜಯವು ತನಗುಂಟಾಗುವುದೆಂಬುದನ್ನು ಸಂತೋಷದಿಂದ ತಿಳಿಸಿ ಎದುರುಗೊಳ್ಳುತ್ತಿದೆಯೋ ಎಂಬಂತೆ ಎಸೆಯಿತು. ವ।। ಹೀಗೆ ಬಾಹುಬಲಿಯು ಪುರುಪರಮೇಶ್ವರನ ಆಸ್ಥಾನಭೂಮಿಯೆಂಬ ಸರೋವರದಲ್ಲಿ ರಾಜಹಂಸನಂತೆ ಅಲಂಕರಿಸುತ್ತಾ ಬಂದು ಭಗವಾನ್ ಪುರುಪರಮೇಶ್ವರನ ಪಾದಪೀಠದ ಬಳಿಯಲ್ಲಿ ಸಾಷ್ಟಾಂಗವೆರಗಿ ನಿಂತನು. ಆಗ, ೧೩೭. ಪುರುಪರಮೇಶ್ವರನ ಮುಖವೆಂಬ ಚಂದ್ರನ ಕಿರಣಗಳಿಂದ ಬಾಹುಬಲಿಯ ಕರಕಮಲ ಮುಖಕಮಲ ಹೃದಯಕಮಲಗಳಲ್ಲಿ, ಮುಖಕಮಲ ಹೃದಯಕಮಲವೆಂಬೆರಡು ಅರಳಿದುವು! ಕರಕಮಲವು ಮಾತ್ರ ಮುಚ್ಚಿಕೊಂಡಿತು! ಇದಕ್ಕಿಂತ ಮತ್ತೇನು ಆಶ್ಚರ್ಯವುಂಟು? ವ।। ಹಾಗೆ ಹಣೆಯ ಮೇಲೆ ಕರಕಮಲಗಳನ್ನು ಮೊಗ್ಗಿನಂತೆ ಜೋಡಿಸಿಕೊಂಡು ೧೩೮. "ನನಗೆ ಮಹಾಸ್ವಾಮಿಗಳು ಯುವರಾಜಪದವಿಯನ್ನು ಮೊದಲು ಅನುಗ್ರಹಿಸಿ ದಂತೆ, ಈಗ ಅಭ್ಯುದಯಸಾಧಕವಾದ ಸಂನ್ಯಾಸದ ಯುವರಾಜಪದವಿಯನ್ನು

ಗುರುಪದಪದ್ಮಾಂತಿಕದೊಳ್
ಪರಮೇಶ್ವರದೀಕ್ಷೆಯಂ ಮನಂಬಿಡೆ ಕೊಂಡೀ
ಧರೆಯಂ ಪೊಗೞಿಸಿದನಿದೇಂ
ಪುರುಪರಮೇಶ್ವರಸುತರ್ ಪರಿಚ್ಛೇದಿಗಳೋ ೧೩೯

ವ॥ ಅಂತು ಜೈನದೀಕ್ಷೆಯಂ ಕೈಕೊಂಡು ಗುರುವಿನನುಮತದಿಂ ದ್ವಾದಶಾಂಗಚತುರ್ದಶ ಪೂರ್ವಂಗಳಂ ಕಲ್ತು ತದನುಮತದೊಳ್ ಬೞಿಯುಮೇಕವಿಹಾರಿಯಾಗಿ ಸಂವತ್ಸರಾವಧಿವರಂ ಪ್ರತಿಮಾಯೋಗದೊಳ್ ನಿಲೆ,

ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗ
ಳ್ವಿಡಿದು ವಿಷೋರಗಪ್ರತತಿ ನೋೞ್ಪೊಡಗುರ್ವಿಸೆ ಸುಯ್ವ ಸುಯ್ಗಳಿಂ
ಕಿಡಿ ಪೊಱಪೊಣ್ಮೆ ಬಾಹುಬಲಿಯೋಗಿಯ ಘೋರತಪೋಮಹಾಗ್ನಿಯಿಂ
ಸಿಡಿಸಿಡಿದುಣ್ಮುತಿರ್ಪ ಕಿಡಿಗಳ್ಗೆಣೆಯಾದುವು ತತ್ಪ್ರದೇಶದೊಳ್ ೧೪೦

ವಿಜಯಶರಾಸನಗುಣಘಾ
ತಜಾತಕಾಳಿಕೆಯನೆತ್ತಮುಗ್ಗಳಿಸಿದುದಾ
ಭುಜಬಲಿಯ ಭುಜದ್ವಯದೊಳ್
ಭುಜಂಗನಿಶ್ವಾಸಧೂಮವೇಣೀನಿಕರಂ ೧೪೧

ಬಳೆದ ಜಡೆ ನಿಮಿರ್ದ ಬಳ್ಳಿಗ
ಳೊಳ್ ಪೆಣೆದು ವಿಷೋರಗಾಸಳಾರ್ಚಿಗಳಿಂದಂ
ಮಿಳಿರ್ದುವು ಮುನಿಪಧ್ಯಾನಾ
ನಳನಿರ್ಧೂಮವೇಣಿಕಾನಿಕರದವೊಲ್ ೧೪೨

ದಯೆಗೈಯಿರಿ" ಎಂದು ಅರಿಕೆಮಾಡಿದನು. ೧೩೯. ಗುರುವಿನ ಕಾಲ್ದಾವರೆಗಳ ಸಮೀಪದಲ್ಲಿ ಪರಮೇಶ್ವರದೀಕ್ಷೆಯನ್ನು ಮನಸ್ಸಂತೋಷದಿಂದ ಸ್ವೀಕರಿಸಿ ಜಗತ್ತಿನ ಶ್ಲಾಘನೆಗೆ ಪಾತ್ರನಾದನು. ಆಹಾ! ಪುರುಪರಮೇಶ್ವರನ ಮಕ್ಕಳು ಅದಾವ ಬಗೆಯ ಸ್ಥಿತಪ್ರಜ್ಞರೊ! ವ॥ ಹೀಗೆ ಬಾಹುಬಲಿಯು ಗುರುವಿನ ಅನುಮತದಿಂದ ಜೈನದೀಕ್ಷೆಯನ್ನು ಪರಿಗ್ರಹಿಸಿದನು. ಗುರುವಿನ ಅಭೀಷ್ಟದಂತೆ ದ್ವಾದಶಾಂಗಗಳನ್ನೂ ಚತುರ್ದಶಪೂರ್ವಗಳನ್ನೂ ಕಲಿತನು. ಏಕವಿಹಾರಿಯಾಗಿ[1] ಒಂದು ವರ್ಷಕಾಲ ಪ್ರತಿಮಾಯೋಗ[2]ದಿಂದ ನಿಂತನು. ೧೪೦. ಅಲ್ಲಿ ಅವನ ಮೇಲೆ ಅಡಿಗಳಿಂದ ಹಿಡಿದು (ತಲೆಯವರೆಗೆ) ಹುತ್ತಗಳೆದ್ದುವು. ಅವುಗಳ ನೆತ್ತಿಗಳಿಂದ ಹಬ್ಬಿಕೊಂಡಿದ್ದ ಬಳ್ಳಿಗಳಲ್ಲಿ ನೆಲಸಿದ್ದ ವಿಷಸರ್ಪಗಳು ನೋಡಲು ಭಯಂಕರವಾಗಿದ್ದುವಲ್ಲದೆ ತಮ್ಮ ನಿಟ್ಟುಸಿರುಗಳೊಡನೆ ಕಿಡಿಕಾರುತ್ತಿದ್ದುವು. ಅವು ಬಾಹುಬಲಿಯ ಘೋರ ತಪೋಗ್ನಿಯಿಂದ ಸಿಡಿದೆದ್ದ ಕಿಡಿಗಳಿಗೆಣೆಯಾದುವು. ೧೪೧. ಬಾಹುಬಲಿಯ ಭುಜದ್ವಯದಲ್ಲಿ ವಿಜಯಸೂಚಕವಾದ ಬಿಲ್ಲಿನ ಹೊಡೆತದಿಂದುಂಟಾದ ಕಪ್ಪುಚಿಹ್ನೆಯನ್ನು, ಬಾಹುಬಲಿಯ ಭುಜದ್ವಯವನ್ನು ಸುತ್ತುಹಾಕಿದ್ದ ಭುಜಂಗಗಳ ಉಸಿರಿನ ಧೂಮವೇಣಿಯು ಹೆಚ್ಚಿಸಿತು. ೧೪೨. ಬಳೆದ ಆ ಜಡೆಯು ನೆಟ್ಟನೆ ನಿಂತ ಬಳ್ಳಿಗಳೊಡನೆ ಹೆಣೆದುಕೊಂಡು ವಿಷಸರ್ಪಗಳ ಮುಖವಾಯುವಿನಿಂದ ಚಲಿಸುತ್ತಿದ್ದಿತು. ಅದು ಆ

---

1 ಒಬ್ಬನೇ ಸಂಚರಿಸತಕ್ಕವನು. 2 ಒಂದೇ ಸ್ಥಳದಲ್ಲಿದ್ದು ತಪಸ್ಸನ್ನಾಚರಿಸುವುದು.

ಪರಮಮುನಿತನುವನಡರ್ವುದೆ
ಸುರದ್ರುಮಂಗೆತ್ತು ಯುವತಿರೂಪದಿನೆಂದಾ
ದರದಿಂ ಬಿಡಿಸಿದರನಘನ
ನಿರದಡರ್ವ ಲತಾಪ್ರತಾನಮಂ ಖೇಚರಿಯರ್ ೧೪೩

ವ॥ ಅಂತುಗ್ರೋಗ್ರತಪದೊಳಮಾ ಬಾಹುಬಲಿಮುನೀಂದ್ರಂಗೆ ಕೇವಲಜ್ಞಾನಾಪ್ರಾಪ್ತಿಯಾಗದುದರ್ಕೆ ಭರತೇಶ್ವರಂ ವಿಸ್ಮಯಮುತ್ತು ಪೋಗಿ ವೃಷಭನಾಥನಂ ಬೆಸಗೊಳೆ ತಪದೊಳ್ ನಿಂದುಂ ನಿನ್ನ ನೆಲದೊಳ್ ನಿಂದೆವೆಂಬ ಮಾನಕಷಾಯಮವರ್ಗಿನ್ನುಂ ಪತ್ತುವಿಟ್ಟುದಲ್ತದಱಂ ಕೇವಲಜ್ಞಾನೋತ್ಪತ್ತಿಯಾಗದಿರ್ದುದು, ನೀಂ ಪೋಗಿ ಕಾಲ್ಗೆಱಗಲೊಡಂ ಕೇವಲಜ್ಞಾನಮಕ್ಕುಮೆಂದು ಬೆಸಸಿದೊಡೆ ಲಬ್ಧೋಪದೇಶನಾಗಿ ವಿವಿಧಾರ್ಚನಾಸಮಗ್ರಪರಿಜನಪರಿವೃತಂ ರಾಜರಾಜಂ ಮುನಿರಾಜಚರಣಾಂಭೋಜದೊಳ್ ಬಂದೆಱಗಿ ವಿವಿಧಾರ್ಚನೆಗಳಿಂದಮರ್ಚಿಸಿ,

ನಿನ್ನ ಮಡಗೂಟ್ಟಿಲಂ ಮಾ
ನೋನ್ನತ ನೀನೀಯೆ ಬಂದುದೆನಗಿದನೆನತೆಂ
ದೇನ್ನಿನಗೆ ಬಗೆಯಲಪ್ಪುದೆ
ನಿನ್ನನೆ ನೀಂ ಬಗೆಯ ಬಗೆಯದಿರ್ ಪೆಱಪೆಱತಂ ೧೪೪

ಎನಲೊಡಮಂತಃಕರಣದೊ
ಳಿನಿಸಾನುಂ ನಿಂದುದೊಂದು ಮಾನಕಷಾಯಂ
ಮುನಿಪತಿಗೆ ಪೋಗೆ ಪುಟ್ಟಿದು
ದನಂತವಸ್ತುಪ್ರಕಾಶಿಕೇವಳಬೋಧಂ ೧೪೫

ಮುನಿಶ್ರೇಷ್ಠನ ಧ್ಯಾನಾಗ್ನಿಯಿಂದ ಹೊರಬಂದ ಧೂಮವೇಣಿಕೆಯ ಸಮೂಹದಂತೆ ಕಾಣಿಸಿತು. ೧೪೩. ಶ್ರೇಷ್ಠನಾದ ಮುನಿಯ ಆ ದೇಹವನ್ನು ಸುರದ್ರುಮವೆಂದು ಭಾವಿಸಿ (ಬಳ್ಳಿಗಳು) ಯುವತಿರೂಪದಿಂದ ಹತ್ತಬಹುದೇ ಎಂದು ಖೇಚರಿಯರು ಪಾಪ ವಿದೂರನಾದ ಮುನಿಯ ಮೇಲೆ ಹಬ್ಬುತ್ತಿರುವ ಬಳ್ಳಿಗಳನ್ನು ಆದರದಿಂದ ಬಿಡಿಸಿದರು. ವ॥ ಅಂತು ಅತ್ಯುಗ್ರವಾದ ತಪಸ್ಸಿನಲ್ಲಿದ್ದರೂ ಬಾಹುಬಲಿಮುನಿಗೆ ಕೇವಲಜ್ಞಾನವು ಹುಟ್ಟದಿರುವುದನ್ನು ಕಂಡು ಭರತೇಶ್ವರನು ಆಶ್ಚರ್ಯಗೊಂಡು ವೃಷಭೇಶ್ವರನನ್ನು ಕೇಳಿದನು. ಆಗ "ಬಾಹುಬಲಿಯು ತಪೋನಿರತನಾಗಿದ್ದರೂ ನಿನ್ನ ನೆಲದಲ್ಲಿದ್ದೇನೆಂಬ ಅಭಿಮಾನ ಕಷಾಯವಿರುವುದರಿಂದ ಅವನಿಗೆ ಕೇವಲಬೋಧೆಯಾಗಿಲ್ಲ. ನೀನು ಹೋಗಿ ಅವನ ಕಾಲುಗಳಿಗೆರಗಿದರೆ ಕೇವಲಬೋಧೆಯೊದಗುವುದೆಂದು ವೃಷಭದೇವನು ಹೇಳಿದನು. ಒಡನೆ ಅವನು ನಾನಾವಿಧವಾದ ಪೂಜಾದ್ರವ್ಯಗಳನ್ನು ಹಿಡಿದ ಪರಿಜನರಿಂದ ಕೂಡಿ ಮುನಿಪಾದಾಂಬುಜಗಳಲ್ಲಿ ನಮಸ್ಕರಿಸಿ ವಿವಿಧಾರ್ಚನೆಗಳಿಂದ ಅರ್ಚಿಸಿದನು. (ಭರತನು ಬಾಹುಬಲಿಯನ್ನುದ್ದೇಶಿಸಿ) ೧೪೪. "ಮಾನೋನ್ನತ! ಈ ನೆಲವು ನಿನ್ನ ಎಂಜಲು, ನೀನು ಕೊಡಲು ಅದು ನನಗೆ ಬಂದಿತು. ಇದನ್ನು ನನ್ನದೆಂದು ನೀನು ಬಗೆಯಬಹುದೇ? ನಿನ್ನನ್ನೇ ನೀನು ಧ್ಯಾನಿಸು. ಬೇರೆ ವಿಷಯಗಳನ್ನು ಬಗೆಯಬೇಡ." ೧೪೫. ಎನ್ನಲು ಚಿತ್ತದಲ್ಲಿ ನೆಲಸಿದ್ದ ಮಾನಕಷಾಯವೆಲ್ಲವೂ ಮುನಿಪತಿಗೆ ಹೊರಟು ಹೋಯಿತು.

ಆಗಳ್ ದೊರೆಕೊಂಡಿರೆ ದೇ
ವಾಗಮಮೇಕಾತಪತ್ರಮೆಸೆದಿರೆ ಕರಮಿಂ
ಬಾಗಿರೆ ಚಾಮರಯುಗ್ಮಮ
ದಾಗಳೆ ನಿಲೆ ದಿವ್ಯವಿಷ್ಟರಂ ಮಣಿಖಚಿತಂ ೧೪೬

ಜಯನಿನದಂ ಸುರದುಂದುಭಿ
ಚಯನಿನದಂ ಪುಷ್ಪವರ್ಷಮೊರ್ಮೆಯೆ ಸಕಲೋ
ರ್ವಿಯನೆಯ್ದೆ ಪರ್ವುತಿರೆ ಚಿ
ತ್ತೆಯ ಸರಿಯಂತೆಱಗಿ ಪೋದುದಮರಸಮಾಜಂ ೧೪೭

ವ|| ಅಂತು ಬಾಹುಬಲಿಕೇವಳಿಯುಂ ನಾನಾದೇಶವಿಹಾರದೊಳ್ ವಿಶ್ವಜನಮಂ ನಿಜವಚೋಮೃತದಿಂ ಭವ್ಯಜನಸಾರ್ಥಮಂ ತಣಿಪಿ ಬಂದು ಕೈಲಾಸಶೈಲದೊಳಾದಿದೇವರ ಸನ್ನಿಧಿಯೊಳಿರ್ದಂ, ಇಂತು ಭರತೇಶ್ವರನುಮಾ ಮುನೀಶ್ವರನಂ ಪೂಜಿಸಿ,

ಪೆಸರ್ಗಂ ತೇಜಕ್ಕಮೊಂದೋಜೆಗಮಹಿತಮಹೀಪಾಳಕರ್ಬೆಚ್ಚೆ ಬಾಯ್ಕೇ
ಳಿಸಿ ಹೈಮಕ್ಷ್ಮಾಟಳೇಂದ್ರಂಬರೆಗಮಖಿಳಷಟ್ಖಂಡಭೂಭಾಗಮಂ ಷ
ಷ್ಟಿಸಹಸ್ರಾಬ್ದಂಗಳಿಂ ದಿಗ್ವಿಜಯದೊಳೊಗೆದಾನಂದಭೇರೀರವಂ ಘೂ
ರ್ಣಿಸೆ ಸಾಕೇತಕ್ಕೆ ವಂದಂ ಸುಕವಿಜನಮನೋಮಾನಸೋತ್ತಂಸಹಂಸಂ ೧೪೮

ಅನಂತವಸ್ತುಪ್ರಕಾಶಕವಾದ ಕೇವಲಬೋಧವು ಅವನಿಗೆ ಮೂಡಿತು. ೧೪೬. ಆಗ ದೇವತೆಗಳು ಬಂದರು. ಏಕಾತಪತ್ರವು ಎತ್ತಿಹಿಡಿಯಲ್ಪಟ್ಟಿತು. ಚಾಮರಗಳೆರಡು ವೀಜಿತವಾದುವು. ಮಣಿಖಚಿತವಾದ ಸಿಂಹಾಸನವು ದೊರಕಿತು. ೧೪೭. ಜಯಶಬ್ದವೂ ದೇವನಗಾರಿಯ ಶಬ್ದವೂ ಹೂಮಳೆಯೂ ಒಮ್ಮೆಗೇ ಉಂಟಾದುವು. ಚಿತ್ತೆಯ ಜಡಿಮಳೆಯಂತೆ ಅಮರಸಂಘವು ಅವನಿಗೆ ನಮಸ್ಕರಿಸಿ ತೆರಳಿತು. ವ|| ಹೀಗೆ ಬಾಹುಬಲಿ ಕೇವಲಿಯೂ ಸಹ ವಿವಿಧದೇಶಗಳಲ್ಲಿ ಸಂಚರಿಸಿ ಭವ್ಯರಾದ ಸಮಸ್ತಜನರನ್ನೂ ತನ್ನ ಮಾತುಗಳೆಂಬ ಅಮೃತದಿಂದ ತಣಿಸಿ ಬಂದು ಕೈಲಾಸಶಿಖರದಲ್ಲಿ ಆದಿದೇವರ ಸನ್ನಿಧಿಯಲ್ಲಿ ಸುಖವಾಗಿ ನೆಲಸಿದನು. ಭರತೇಶ್ವರನೂ ಆ ಮುನೀಶ್ವರನನ್ನು ಭಕ್ತಿಯಿಂದ ಪೂಜಿಸಿದನು. ೧೪೮. ಸುಕವಿಜನಮನೋಮಾನಸೋತ್ತಂಸಹಂಸನಾದ ಭರತೇಶ್ವರನು ಸಮಸ್ತ ದಿಕ್ಕುಗಳನ್ನೂ ಗೆದ್ದು ಸಾಕೇತನಗರಿಗೆ ಬಂದನು. ಅವನ ಹೆಸರಿಗೂ ತೇಜಸ್ಸಿಗೂ ಪ್ರೌಢಿಗೂ ಎಲ್ಲ ಶತ್ರುರಾಜರು ಬೆಚ್ಚಿಬಿದ್ದು ಅಧೀನರಾದರು. ಹಿಮವತ್ಪರ್ವತದವರೆಗೆ ಷಟ್ಖಂಡಮಂಡಿತವಾದ ಭೂಭಾಗವನ್ನು ಅರವತ್ತುಸಾವಿರ ವರ್ಷಗಳಿಂದ ವಶಪಡಿಸಿಕೊಂಡ ಕಾರಣದಿಂದ ದಿಗ್ವಿಜಯದ ಆನಂದಭೇರಿನಾದವು ವಿಜೃಂಭಿಸಿತು. ವ|| ಸಮಸ್ತ ದಿಕ್ಕುಗಳನ್ನೂ ಗೆದ್ದುಬಂದ ಭರತೇಶ್ವರ ಚಕ್ರವರ್ತಿಯ ಪರಾಕ್ರಮವನ್ನು ಕಾಣುವುದರಲ್ಲಿ ಕುತೂಹಲಿಗಳಾದ ಪಟ್ಟಣಿಗರ ಆಶೀರ್ವಾದಪೂರ್ವಕವಾದ ಶೇಷಾಕ್ಷತೆಗಳನ್ನು ಆತನು ಸ್ವೀಕರಿಸಿದನು.

ವ॥ ಅಂತು ನಿರ್ವರ್ತಿತಾಶೇಷದಿಗ್ವಿಜಯಸಾಹಸಾಶ್ಚರ್ಯಾವಲೋಕನನಿರತ ಪುರಜನಾಶೀರ್ವಾದ ಶೇಷಾಕ್ಷತಂಗಳನಾಂತುಕೊಂಡು,

ವನಧಿಧ್ವಾನಮನೊಡ್ಡಿಸುತ್ತಿರೆ ನದದ್ಗಂಭೀರಭೇರೀಬೃಹ
ದ್ಧ್ವನಿ ನಾನಾವಿಧಮಂಗಳಾನಕರವಂ ಕೈಗಣ್ಮೆ ಸಂಛನ್ನವಂ
ದನಮಾಳಾಲಲಿತಾಂಶುಕಧ್ವಜವಿಳಾಸಾಕೀರ್ಣಮಂ ಮೆಚ್ಚಿ ಪೊ
ಕ್ಕನಯೋಧ್ಯಾಪುರಮಂ ಮಹಾವಿಭವದಿಂ ಸಂಸಾರಸಾರೋದಯಂ ೧೪೯

ಗದ್ಯ॥ ಇದು ದೇವೇಂದ್ರಮುನೀಂದ್ರವಂದ್ಯ ಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾ
ಪ್ರಸರಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ದಿಗ್ವಿಜಯ ಧ್ವಜಾರೋಹಣಂ
ಚತುರ್ದಶಾಶ್ವಾಸಂ

೧೪೯. ಸದ್ದುಮಾಡುತ್ತಿದ್ದ ಗಂಭೀರವಾದ ವಾದ್ಯಧ್ವನಿಗಳು ಸಮುದ್ರಘೋಷಗಳನ್ನು ಮೀರಿಸುತ್ತಿದ್ದುವು. ನಾನಾವಿಧವಾಗಿ ಮಂಗಳವಾದ್ಯಗಳು ವಿಶೇಷವಾಗಿ ಮೊಳಗುತ್ತಿದ್ದುವು. ಇದನ್ನು ಮೆಚ್ಚಿ ಸಂಸಾರಸಾರೋದಯನಾದ ಭರತ ಚಕ್ರವರ್ತಿಯು ಮಹಾವೈಭವದಿಂದ ವಂದನಮಾಲೆಗಳಿಂದ ಆಚ್ಛಾದಿತವಾದ, ಸುಂದರವಾದ ಧ್ವಜಪಟಗಳಿಂದ ಆವೃತವಾದ ಅಯೋಧ್ಯಾನಗರಿಯನ್ನು ಪ್ರವೇಶಿಸಿದನು.

ಇಂತು ದಿಗ್ವಿಜಯಧ್ವಜಾರೋಹಣವೆಂಬ
ಹದಿನಾಲ್ಕನೆಯ ಆಶ್ವಾಸ ಮುಗಿಯಿತು

# ಪಂಚದಶಾಶ್ವಾಸಂ

ಶ್ರೀದಯಿತಂ ಮನುಕುಲಗಗ
ನಾದಿತ್ಯಂ ಹಿಮಮನೆಯ್ದೆ ಷಟ್ಖಂಡಮುಮಂ
ಸಾಧಿಸಿ ಜಿತದಿಙ್ಮಂಡಲ
ನಾದ ಮಹಾತ್ಮಂ ಸರಸ್ವತೀಮಣಿಹಾರಂ ೧

ವ॥ ತದನಂತರಮೆ ಮಾಗಧವರತನುಪ್ರಭಾಸಾಮರವಿಜಯಾರ್ಧಕುಮಾರಕೃತಮಾಲನಾಟ್ಯಮಾಲಹಿಮವತ್ಕುಮಾರಾದಿ ದಿವಿಜರಿಂದಂ ಗಂಗಾಸಿಂಧುದೇವೀಪ್ರಮುಖದೇವೀನಿವಹದಿಂ ಲವಣಜಲಧಿ ಗಂಗಾಸಿಂಧುನದ್ಯಾದಿ ತೀರ್ಥಜಲಪರಿಪೂರಿತ ವಿವಿಧೌಷಧಿರತ್ನಗರ್ಭಮಂಗಳಭೃಂಗಾರುಜಳಂಗಳೊಳಭಿಷಿಕ್ತನಾದಾಗಳ್,

ಗಣಬದ್ಧಾಮರಖೇಚರ
ಗಣಭೂಚರನಿಕರಮಾಗಧಾದ್ಯಮರಶಿರೋ
ಮಣಿರುಚಿ ಪುದಿಯೆಯುಮಿನಿಸುಂ
ಮಣಿಯದೆ ಬೆಳಗಿದುವು ಭರತನೃಪನಖರುಚಿಗಳ್ ೨

ವ॥ ಅಂತು ಚಕ್ರಾಭಿಷೇಕೋತ್ಸವಾನಂತರಂ,

ಮನುಕುಳತಿಳಕಂ ವೃಷಭಾ
ಗ್ರನಂದನಂ ರಾಜರಾಜನಧಿರಾಜಂ ಚ
ಕ್ರನಿಧೀಶನಾದಿಭೂಭುಜ
ನೆನೆ ನೆಗಟ್ದಂ ಭರತಚಕ್ರಿ ವಿಶ್ವಂಭರೆಯೊಳ್ ೩

೧. ಮನುಕುಲವೆಂಬ ಆಕಾಶಕ್ಕೆ ಸೂರ್ಯನೂ ರಾಜ್ಯಲಕ್ಷ್ಮಿಗೊಡೆಯನೂ ಸರಸ್ವತೀಮಣಿಹಾರನೂ ಆದ ಭರತನು ಹಿಮವತ್ಪರ್ವತದವರೆಗಿನ ಷಟ್ಖಂಡಮಂಡಿತವಾದ ಭೂಮಂಡಲವನ್ನು ವಶಪಡಿಸಿಕೊಂಡು ದಿಙ್ಮಂಡಲವನ್ನು ಗೆದ್ದು ಮಹಾತ್ಮನೆನಿಸಿಕೊಂಡವನು. ವ॥ ಬಳಿಕ ಮಾಗಧ, ವರತನು, ಪ್ರಭಾಸಾಮರ, ವಿಜಯಾರ್ಧಕುಮಾರ, ಕೃತಮಾಲ, ನಾಟ್ಯಮಾಲ, ಹಿಮವತ್ಕುಮಾರರೇ ಮೊದಲಾದ ದಿವಿಜರಿಂದಲೂ ಗಂಗಾಸಿಂಧುದೇವಿಯರೇ ಮೊದಲಾದ ದೇವಿಯರ ಗುಂಪಿನಿಂದಲೂ ಸಮುದ್ರ ಮತ್ತು ಗಂಗಾಸಿಂಧುಗಳೇ ಮೊದಲಾದ ತೀರ್ಥಜಲಗಳಿಂದ ತುಂಬಿದ, ಬಗೆಬಗೆಯ ಓಷಧಿರತ್ನಗಳಿಂದ ಯುಕ್ತವಾದ, ಮಂಗಳಕಲಶಗಳ ನೀರುಗಳಿಂದ ಅಭಿಷಿಕ್ತನಾದನು. ೨. ಗಣಬದ್ಧರಾದ ದೇವತೆಗಳ, ಖೇಚರಸಮೂಹದ, ಮನುಷ್ಯಸಂದಣಿಯ ಮತ್ತು ಮಾಗಧಾದ್ಯಮರರ ಶಿರೋಮಣಿಗಳ ಕಾಂತಿಗಳು ವ್ಯಾಪಿಸಿದ್ದರೂ ಭರತರಾಜನ ಕಾಲುಗುರುಗಳ ಕಾಂತಿಗಳು ಸ್ವಲ್ಪವೂ ಸೋಲದೆ ಅವನ್ನು ಮೀರಿಸಿ ಬೆಳಗಿದುವು. ವ॥ ಹಾಗೆ ಚಕ್ರಾಭಿಷೇಕೋತ್ಸವವು ಜರುಗಿದ ಮೇಲೆ ೩. ಮನುಕುಲಕ್ಕೆ ತಿಲಕಪ್ರಾಯನೂ ವೃಷಭರಾಜನ ಜ್ಯೇಷ್ಠಪುತ್ರನೂ ರಾಜರಿಗೆಲ್ಲ ರಾಜನೂ ಚಕ್ರವರ್ತಿಯೂ ಚಕ್ರಕ್ಕೂ ನಿಧಿಗಳಿಗೂ ಒಡೆಯನೂ

ವ|| ಅಂತು ಷಟ್ಖಂಡಭರತಮಂಡಳಮನುಂಡಿಗೆಸಾಧ್ಯಂ ಮಾಡಿ ಪದಿನೆಂಟುಕೋಟಿ ಜಾತ್ಯಶ್ವಂಗಳುಮೆಂಭತ್ತುನಾಲ್ಕುಲಕ್ಕೆ ಗಂಧಸಿಂಧುರಂಗಳಪ್ಪ ಭದ್ರಹಸ್ತಿಗಳುಮೆಂಭತ್ತುನಾಲ್ಕುಲಕ್ಕೆ ಸಮರ ಸನ್ನಾಹಯೋಗ್ಯಂಗಳಪ್ಪ ರಥಂಗಳುಮೆಂಭತ್ತುನಾಲ್ಕುಕೋಟಿ ವೀರಭಟನಿಕರಮುಂ ಮೂವತ್ತಿರ್ಛಾಸಿರ ಮಕುಟಬದ್ಧರುಂ ಮೂವತ್ತಿರ್ಛಾಸಿರ್ವರ್[1] ಮೆಯ್ಗಾಪಿನ ಗಣಬದ್ಧದೇವರುಂ ಮೂವತ್ತಿರ್ಛಾಸಿರ್ವರುಭಯಕುಲವಿಶುದ್ಧಮಕುಟಬದ್ಧರ ತನೂಜೆಯರಪ್ಪ ಕುಲಲಲನೆಯರುಂ ಮೂವತ್ತಿರ್ಛಾಸಿರ್ವರ್ ಪ್ರತ್ಯಂತರಾಜತನೂಜೆಯರುಂ ಮೂವತ್ತಿರ್ಛಾಸಿರ್ವರವರೋಧವಧೂನಿವಹಮುಂ ಅಂತು ತೊಂಬತ್ತಾಱುಸಾಸಿರಮಂತಃಪುರಮುಂ ಮೂಱುಕೋಟಿ ಯುವತಿಬಂಧುವರ್ಗಮುಮಂ ಮೂವತ್ತಿರ್ಛಾಸಿರ ಸಂಗೀತಕಸಂಗತನಾಟ್ಯಶಾಲೆಗಳುಂ ಮತ್ತಂ ಲೌಕಿಕಶಾಸ್ತ್ರನಿವರ್ತನಂಬೆಱಸು ಪಲವುಂ ತೆಱದ ಪಱೆಗಳುಂ ಷಟ್ಕರ್ಮಸಾಧನದ್ರವ್ಯಂಗಳುಂ ದಿವ್ಯಶಯ್ಯಾಸನ ನಾನಾಸದನಂಗಳುಂ ಶಾಲಿ ವ್ರೀಹಿ ಯವ ಗೋಧೂಮಾದಿ ಧಾನ್ಯನಿಚಯದೊಡನನೇಕಧಾನ್ಯಸದನಂಗಳುಂ ಕ್ಷೌಮದುಕೂಲಾದಿ ದಿವ್ಯವಸನವಿವಿಧಪ್ರಾವರಣವಿಶೇಷಂಗಳುಂ ನೀತಿಶಾಸ್ತ್ರಂಗಳೊಡನನೇಕಶಾಸ್ತ್ರಂಗಳುಂ ಸ್ತ್ರೀಪುರುಷಯೋಗ್ಯಮಣಿಮುಕ್ತಾಭರಣಂಗಳುಂ ಚಕ್ರವರ್ತಿಯಾಜ್ಞೆಯಿಂದಂ ನೆಲನೆಲ್ಲಂ ಬಂದು ಕೊಟ್ಟೊಪಂತವದ ಕನಕರಾಶಿಯುಂ ಮರಕತಪದ್ಮರಾಜವಜ್ರವೈಡೂರ್ಯಮುಕ್ತಾಫಳಾದಿ ನವರತ್ನಂಗಳುಮನು

ಆದ ಭರತಚಕ್ರಿಯು ಈ ಭೂಮಂಡಲದಲ್ಲಿ 'ಆದಿರಾಜ'ನೆಂದು ಖ್ಯಾತಿಗೊಂಡನು.
ವ|| ಹೀಗೆ ಷಟ್ಖಂಡಮಂಡಲಗಳಿಂದ ಸಮೇತವಾದ ಭೂಮಂಡಲವನ್ನು ಏಕಮುದ್ರಾಮುದ್ರಿತವನ್ನಾಗಿ ಮಾಡಿಕೊಂಡನು. ಅವನಲ್ಲಿ ಹದಿನೆಂಟು ಕೋಟಿ ಜಾತ್ಯಶ್ವಗಳೂ ಎಂಬತ್ನಾಲ್ಕು ಲಕ್ಷ ಮದಗಂಧವನ್ನು ಸ್ರವಿಸುವ ಮದ್ದಾನೆಗಳೂ ಎಂಬತ್ನಾಲ್ಕು ಲಕ್ಷ ಸಮರಯೋಗ್ಯವಾದ ರಥಗಳೂ ಎಂಬತ್ನಾಲ್ಕುಕೋಟಿ ವೀರರಾದ ಸೈನಿಕರೂ ಮೂವತ್ತೆರಡು ಸಾವಿರ ಕಿರೀಟಧಾರಿಗಳೂ ಮೂವತ್ತೆರಡು ಸಾವಿರ[1] ಅಂಗರಕ್ಷಕರಾದ ಗಣಬದ್ಧದೇವರುಗಳೂ ಮೂವತ್ತೆರಡು ಸಾವಿರ ಉಭಯಕುಲಪರಿಶುದ್ಧರಾದ ಮಕುಟಬದ್ಧರ ಪುತ್ರಿಯರಾದ ಕುಲಸ್ತ್ರೀಯರೂ ಮೂವತ್ತೆರಡು ಸಾವಿರ ಪ್ರತ್ಯಂತರಾಜರ ಪುತ್ರಿಯರೂ ಮೂವತ್ತೆರಡು ಸಾವಿರ ಅಂತಃಪುರಸ್ತ್ರೀಯರ ಸಮೂಹವೂ ಹೀಗೆ ತೊಂಬತ್ತಾರು ಸಾವಿರ ಅಂತಃಪುರಸ್ತ್ರೀಯರಿದ್ದರು. ಮೂವತ್ತೆರಡು ಸಾವಿರ ಯಾವಾಗಲೂ ಸಂಗೀತವನ್ನು ಹಾಡುವುದರಲ್ಲಿ ಸಂಗತವಾದ ನಾಟ್ಯಶಾಲೆಗಳೂ ಲೌಕಿಕವಾದ ಶಸ್ತ್ರಾಭ್ಯಾಸೋತ್ತೇಜಕವಾದ ಡೋಲು ಮದ್ದಲೆ ಮೊದಲಾದ ಹಲವು ಬಗೆಯ ವಾದ್ಯಗಳೂ ಷಟ್ಕರ್ಮಸಾಧಕವಾದ ದ್ರವ್ಯಗಳೂ ಶ್ರೇಷ್ಠವಾದ ಹಾಸಿಗೆ ಪೀಠೋಪಕರಣಗಳಿಂದ ಸಜ್ಜುಗೊಂಡ ಭವನಗಳೂ ಶಾಲಿ (ಭತ್ತ) ವ್ರೀಹಿ (ಒಂದು ಬಗೆಯ ಭತ್ತ) ಯವ (ಗೋಧಿ) ಗೋಧೂಮ (ಜವೆ ಗೋಧಿ) ಮೊದಲಾದ ಅನೇಕ ಬಗೆಯ ಧಾನ್ಯದ್ರವ್ಯಗಳೂ ಕ್ಷೌಮ

1. ಪೂ.ಪು.ದಲ್ಲಿ (೩೭-೧೪೫) ಗಣಬದ್ಧದೇವರ ಸಂಖ್ಯೆ ಹದಿನಾರು ಸಾವಿರ ಎಂದಿದೆ.

ಕ್ರಮದಿಂದಂ ಶ್ರೀಗೃಹದೊಳ್ ಪುಟ್ಟಿದ ಕಾಳಮಹಾಕಾಳನೈಸರ್ಪಪಾಂಡುಕಪದ್ಮಪಿಂಗಳ ಮಾಣವಕಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ ಆಯುಧಾಗಾರದೊಳ್ ಪುಟ್ಟಿದ ಚಕ್ರಾಸಿದಂಡಚ್ಛತ್ರರತ್ನಂಗಳುಂ ಶ್ರೀಗೃಹದೊಳ್ ಪುಟ್ಟಿದ ಮಣಿಚರ್ಮ ಕಾಕಿಣೀರತ್ನಂಗಳುಂ, ವಿಜಯಾರ್ಧಪರ್ವತದೊಳ್ ಪುಟ್ಟಿದ ಗಜಾಶ್ವಸ್ತ್ರೀರತ್ನಂಗಳುಂ, ಸಾಕೇತನಗರದೊಳ್ ಪುಟ್ಟಿದ ಸೇನಾನಾಯಕಪುರೋಹಿತಗೃಹಪತಿತಕ್ಷಕರತ್ನಂಗಳುಂ ಅಂತು ಪದಿನಾಲ್ಕು ತೆಱದ ಜೀವಾಜೀವರತ್ನಂಗಳುಂ ಕ್ಷಿತಿಸಾಗರವೆಂಬ ಪ್ರಾಕಾರದೊಳಂ ಸರ್ವತೋಭದ್ರವೆಂಬ ಗೋಪುರದೊಳಂ ಕೂಡಿದ ವೈಜಯಂತಿಯೆಂಬ ದಿವ್ಯಪ್ರಾಸಾದಮುಂ ದಿಕ್ಸ್ವಸ್ತಿಕಮೆಂಬ ಸಭಾಭೂಮಿಯುಂ ನಂದ್ಯಾವರ್ತಮೆಂಬ ಶಿಬಿರನಿವೇಶಮುಂ ಗಿರಿಕೂಟಮೆಂಬ ದಿಗವಲೋಕನಗೃಹಮುಂ ವರ್ಧಮಾನಮೆಂಬೀಕ್ಷಣಪ್ರಿಯಪ್ರೇಕ್ಷಾಗೃಹಮುಂ ಮಹಾಘರ್ಮಾಂತಮೆಂಬ ಧಾರಾಗೃಹಮುಂ ಗೃಹಕೂಟಮೆಂಬ ವರ್ಷಾವಾಸಮುಂ ಪುಷ್ಕರಾವತಿಯೆಂಬ ಶಯನಸದನಮುಂ ಕುಬೇರಕಾಂತಮೆಂಬ ತವದ ಭಂಡಾರಮುಂ ವಸುಧಾರಕಮೆಂಬ ಕೋಶಾಗಾರಮುಂ ಜೀಮೂತಮೆಂಬ ಮಜ್ಜನಗೃಹಮುಂ ಅವತಂಸಿಕೆಯೆಂಬ ರತ್ನಮಾಲೆಯುಂ ದೇವರಮ್ಯಮೆಂಬ ಪಟಕುಟಿಯುಂ ಸಿಂಹವಿಧೃತಮಪ್ಪ ಸಿಂಹವಾಹಿನಿಯೆಂಬ ಮೃದುಶಯ್ಯೆಯುಂ ಅನುತ್ತರಮೆಂಬ ಸಿಂಹಾಸನಮುಂ, ಯಕ್ಷಕರವಿಧೂಯಮಾನಮಪ್ಪನುಪಮಂಗಳವೆಂಬ ಮೂವತ್ತೆರಡು ಚಾಮರಂಗಳುಂ ಸೂರ್ಯಪ್ರಭಮೆಂಬಾತಪತ್ರಮುಂ ವಿದ್ಯುತ್ಪ್ರಭಮೆಂಬ ಮಣಿಕುಂಡಲಯುಗಳಂಗಳುಂ ವಿಷಮೋಚಿಕೆಗಳೆಂಬ ಪಾವುಗೆಗಳುಂ ಅಭೇದ್ಯಮೆಂಬ ಕವಚಮುಂ ಅಜಿತಂಜಯಮೆಂಬ ರತ್ನರಥಮುಂ ವಜ್ರಕಾಂಡಮೆಂಬ ಬಿಲ್ಲುಂ ಅಮೋಘಮೆಂಬ ಶರನಿಕರಮುಂ ವಜ್ರತುಂಡಮೆಂಬ ಶಕ್ತಿಯುಂ ಸಿಂಹಾಟಕಮೆಂಬ ಕುಂತಮುಂ

(ನಾರಿನಬಟ್ಟೆ)ದುಕೂಲ (ರೇಷ್ಮೆಬಟ್ಟೆ) ಮೊದಲಾದ ಶ್ರೇಷ್ಠ ವಸ್ತ್ರೋತ್ತರೀಯಗಳೂ, ನೀತಿ ಶಾಸ್ತ್ರಗಳೇ ಮೊದಲಾದ ಅನೇಕ ಶಾಸ್ತ್ರಗಳೂ, ಸ್ತ್ರೀ ಪುರುಷರಿಗೆ ಧರಿಸಲು ಯೋಗ್ಯವಾದ ಮಣಿಮುಕ್ತಾಭರಣಗಳೂ ಚಕ್ರವರ್ತಿಯಾಜ್ಞೆಯಿಂದ ಲೋಕವೆಲ್ಲ ಬಂದು ತೆಗೆದು ಕೊಂಡರೂ ಮುಗಿಯದಿರುವ ಸುವರ್ಣರಾಶಿಯೂ ಮರಕತ, ಪದ್ಮರಾಗ, ವಜ್ರ, ವೈಡೂರ್ಯ, ಮುತ್ತುಗಳೇ ಮೊದಲಾದ ನವರತ್ನಗಳೂ ಶ್ರೀಗೃಹದಲ್ಲಿ ಅನುಕ್ರಮವಾಗಿ ಹುಟ್ಟಿದ ಕಾಳ, ಮಹಾಕಾಳ, ನೈಸರ್ಪ, ಪಾಂಡುಕ, ಪದ್ಮ, ಪಿಂಗಳ, ಮಾಣವಕ, ಶಂಖ, ಸರ್ವರತ್ನಗಳೆಂಬ ಒಂಬತ್ತು ನಿಧಿಗಳೂ ಆಯುಧಾಗಾರದಲ್ಲೊಗೆದ ಚಕ್ರರತ್ನ, ಖಡ್ಗರತ್ನ, ದಂಡರತ್ನ, ಛತ್ರರತ್ನಗಳೂ ಶ್ರೀಗೃಹದಲ್ಲಿ ಜನ್ಮದಳೆದ ಮಣಿರತ್ನ, ಚರ್ಮರತ್ನ, ಕಾಕಿಣೀರತ್ನಗಳೂ ವಿಜಯಾರ್ಧಪರ್ವತದಲ್ಲಿ ಹುಟ್ಟಿದ ಗಜರತ್ನ. ಅಶ್ವರತ್ನ, ಸ್ತ್ರೀರತ್ನಗಳೂ ಸಾಕೇತಪುರಿಯಲ್ಲಿ ಹುಟ್ಟಿದ ಸೇನಾನಾಯಕ, ಪುರೋಹಿತ-ಗೃಹಪತಿ-ತಕ್ಷಕರೆಂಬ ರತ್ನಗಳೂ ಈ ಬಗೆಯಲ್ಲಿ ಒಟ್ಟು ಹದಿನಾಲ್ಕು ವಿಧಗಳಾದ ಜೀವಾಜೀವ ರತ್ನಗಳೂ ಕ್ಷಿತಿಸಾಗರವೆಂಬ ಪ್ರಾಕಾರದಿಂದಲೂ ಸರ್ವತೋಭದ್ರವೆಂಬ ಗೋಪುರದಿಂದಲೂ ಸಮೇತವಾದ ವೈಜಯಂತಿ ಎಂಬ ಶ್ರೇಷ್ಠಪ್ರಾಸಾದವೂ ದಿಕ್ಸ್ವಸ್ತಿಕವೆಂಬ ಸಭಾಭವನವೂ ನಂದ್ಯಾವರ್ತವೆಂಬ ಶಿಬಿರನಿವೇಶವೂ ಗಿರಿಕೂಟವೆಂಬ ದಿಗ್ದರ್ಶನಾರ್ಥವಾದ ಗೃಹವೂ ವರ್ಧಮಾನವೆಂಬ ನೋಡಲು ಸುಂದರವಾದ ಪ್ರೇಕ್ಷಾಗೃಹವೂ ಮಹಾಘರ್ಮಾಂತವೆಂಬ ಧಾರಾಗೃಹವೂ (ಕಾರಂಜಿ), ಗೃಹಕೂಟವೆಂಬ ವರ್ಷಾವಾಸವೂ (ಮಳೆಗಾಲದಲ್ಲಿ ವಾಸಿಸುವ ಮನೆ)

ಲೋಹವಾಹಿನಿಯೆಂಬ ಸುರಿಗೆಯುಂ ಮನೋವೇಗಮೆಂಬ ಕಣೆಯುಂ ಸೌನಂದಕಮೆಂಬ ಬಾಳುಂ ಭೂತಮುಖಮೆಂಬ ಖೇಟಕಮುಂ ಸುದರ್ಶನಮೆಂಬ ಚಕ್ರರತ್ನಮುಂ ಚೂಡಾಮಣಿಯೆಂಬ ಮಣಿರತ್ನಮುಂ ಚಿಂತಾಜನನಿಯೆಂಬ ಕಾಕಿಣೀರತ್ನಮುಂ ಅಯೋಧ್ಯನೆಂಬ ದಂಡನಾಯಕನುಂ ಬುದ್ಧಿಸಾಗರನೆಂಬ ಪುರೋಹಿತನುಂ ಕಾಮವೃಷ್ಟಿಯೆಂಬ ಭಂಡಾರಿಗನುಂ ಭದ್ರಮುಖನೆಂಬ ತಕ್ಷಕಪತಿಯುಂ ವಿಜಯಾರ್ಧಪರ್ವತಮೆಂಬ ಯಾನಹಸ್ತಿಯುಂ ಪವನಂಜಯಮೆಂಬ ತುರಗರತ್ನಮುಂ ಸುಭದ್ರೆಯೆಂಬ ಸ್ತ್ರೀರತ್ನಮುಂ ದ್ವಾದಶಯೋಜನಸಂಸರ್ಪನ್ನಿನಾದಂಗಳಪ್ಪಾನಂದಿಗಳೆಂಬ ಪನ್ನೆರಡುಂ ಮಹಾಭೇರಿಗಳುಂ ವಿಜಯಘೋಷಂಗಳೆಂಬ ಪನ್ನೆರಡು ಪಟಹಂಗಳುಂ ಪುಣ್ಯಾಬ್ಧಿ ಸಂಭವಂಗಳಾಗಿ ಗಂಭೀರಾವರ್ತಂಗಳೆಂಬಿರ್ಪತ್ತುನಾಲ್ಕುಂ ಶಂಖಂಗಳುಂ ನಾಲ್ವತ್ತೆಂಟು ಕೋಟಿ ಪತಾಕೆಗಳುಂ ತಟಿದ್ವಿಳಯ ವಿಳಸಿತಂಗಳಾಗಿ ನಿಜಪ್ರಕೋಷ್ಠನಿಷ್ಠಿತಂಗಳಪ್ಪ ವೀರಾಂಗದಂಗಳೆಂಬ ಕಟಕಂಗಳುಂ ಮಹಾಕಲ್ಯಾಣಕಾರ ಮೆಂಬ ದಿವ್ಯಾಹಾರಮುಂ ಅಮೃತಗರ್ಭಂಗಳೆಂಬ ಭಕ್ಷ್ಯರೂಪಂಗಳುಂ ಅಮೃತಕಲ್ಪಮೆಂಬ ಸ್ವಾದ್ಯಮುಂ ಅಮೃತರಸಾಯನಮೆಂಬ ಪಾನಮುಂ ಮತ್ತಂ ಮೂವತ್ತಿರ್ಛಾಸಿರವಿಷಯಂಗಳುಂ, ಎಪ್ಪತ್ತಿರ್ಛಾಸಿರ ಪೊಲಲ್ಗಳುಂ ತೊಂಭತ್ತಾಱುಕೋಟಿ ಗ್ರಾಮಂಗಳುಂ ತೊಂಭತ್ತೆಯ್ಸಾಸಿರ ದ್ರೋಣಾಮುಖಂಗಳುಂ ನಾಲ್ವೆತ್ತೆಣ್ಸಾಸಿರ ಪಟ್ಟಣಂಗಳುಂ ಪದಿನಾಱುಸಾಸಿರ ಖೇಡಂಗಳುಂ ಪದಿನಾಱುಸಾಸಿರ ಸಂವಾಹನಂಗಳುಂ ಐವತ್ತಾಱಂತರದ್ವೀಪಂಗಳುಂ ಏಕಕೋಟಿಪ್ರಮಾಣಸ್ಥಾಲಿಗಳುಂ ಶತಸಹಸ್ರಕೋಟಿ ಹಲಂಗಳುಂ

ಪುಷ್ಕರಾವತಿಯೆಂಬ ಶಯನಗೃಹವೂ ಕುಬೇರಕಾಂತವೆಂಬ ಎಂದೂ ಬರಿದಾಗದ ಭಂಡಾರವೂ ವಸುಧಾರಕವೆಂಬ ಉಗ್ರಾಣವೂ ಜೀಮೂತವೆಂಬ ಸ್ನಾನಗೃಹವೂ ಅವತಂಸಿಕೆಯೆಂಬ ರತ್ನಹಾರವೂ ದೇವರಮ್ಯವೆಂಬ ಪಟಗೃಹವೂ (ಡೇರ) ಸಿಂಹಗಳು ಹೊತ್ತ ಸಿಂಹವಾಹಿನಿಯೆಂಬ ಮೃದುಶಯ್ಯೆಯೂ ಅನುತ್ತರವೆಂಬ ಸಿಂಹಾಸನವೂ ಯಕ್ಷರ ಕೈಗಳಿಂದ ಬೀಸಲ್ಪಡುತ್ತಿರುವ ಅನುಪಮ ಮಂಗಳವೆಂಬ ಮೂವತ್ತೆರಡು ಚಾಮರಗಳೂ ಸೂರ್ಯಪ್ರಭ ಎಂಬ ಛತ್ರಿಯೂ ವಿದ್ಯುತ್ಪ್ರಭಗಳೆಂಬ ಮಣಿಕುಂಡಲಗಳೂ ವಿಷಮೋಚಿಕೆ ಯೆಂಬ (ವಿಷಸಂಬಂಧವನ್ನು ಹೋಗಲಾಡಿಸುವುದು) ಪಾದುಕೆಗಳೂ ಅಭೇದ್ಯವೆಂಬ ಕವಚವೂ ಅಜಿತಂಜಯವೆಂಬ ರತ್ನರಥವೂ ವಜ್ರಕಾಂಡವೆಂಬ ಬಿಲ್ಲೂ ಅಮೋಘವೆಂಬ ಬಾಣಗಳ ಸಮೂಹವೂ ವಜ್ರತುಂಡವೆಂಬ ಶಕ್ತಿಯೂ ಸಿಂಹಾಟಕವೆಂಬ ಕೊಂತವೂ ಲೋಹವಾಹಿನಿಯೆಂಬ ಕಠಾರಿಯೂ ಮನೋವೇಗವೆಂಬ ಕಣೆಯೂ ಮುಷ್ಟ್ಯಾಯುಧ ಸೌನಂದಕವೆಂಬ ಕತ್ತಿಯೂ ಭೂತಮುಖವೆಂಬ ಗುರಾಣಿಯೂ ಸುದರ್ಶನವೆಂಬ ಚಕ್ರರತ್ನವೂ ಚೂಡಾಮಣಿಯೆಂಬ ಮಣಿರತ್ನವೂ ಚಿಂತಾಜನನಿಯೆಂಬ ಕಾಕಿಣೀ ರತ್ನವೂ ಅಯೋಧ್ಯನೆಂಬ ದಂಡನಾಯಕನೂ ಬುದ್ಧಿಸಾಗರನೆಂಬ ಪುರೋಹಿತನೂ ಕಾಮವೃಷ್ಟಿಯೆಂಬ ಭಾಂಡಾರಿಕನೂ ಭದ್ರಮುಖನೆಂಬ ತಕ್ಷಕಪತಿಯೂ ವಿಜಯಾರ್ಧಪರ್ವತವೆಂಬ ಸವಾರಿಗೈಯುವ ಆನೆಯೂ ಪವನಂಜಯವೆಂಬ ಅಶ್ವರತ್ನವೂ ಸುಭದ್ರೆಯೆಂಬ ಸ್ತ್ರೀರತ್ನವೂ ಹನ್ನೆರಡು ಯೋಜನದಷ್ಟು ದೂರ ಕೇಳಿಸಬಲ್ಲ ಶಬ್ದವುಳ್ಳ ಆನಂದಿಗಳೆಂಬ ಹನ್ನೆರಡು ಮಹಾಭೇರಿಗಳೂ ವಿಜಯ ಘೋಷಗಳೆಂಬ ಹನ್ನೆರಡು ಪಟಹಗಳೂ (ತಮ್ಮಟೆಗಳೂ) ಪುಣ್ಯಸಾಗರದಲ್ಲೊಗೆದ ಗಂಭೀರಾವರ್ತಗಳೆಂಬ ಇಪ್ಪತ್ನಾಲ್ಕು ಶಂಖಗಳೂ ನಲವತ್ತೆಂಟು ಕೋಟಿ ಬಾವುಟಗಳೂ

**ಮೂಱುಕೋಟಿ ಗೋಮಂಡಳಮುಂ ಪ್ರತ್ಯಂತನಿವಾಸಿಗಳಪ್ಪೇೞ್ನೂಱು ಕುಕ್ಷಿವಾಸಂಗಳುಂ ಎಪ್ಪತ್ತೆರ್ಛಾಸಿರದುರ್ಗಾಟವಿಗಳುಂ ಪದಿನೆಣ್ಛಾಸಿರ ಮ್ಲೇಚ್ಛರಾಜರುಂ ಆತ್ಮೀಯ ಸಾಮ್ರಾಜ್ಯಪರಿಚ್ಛೇದಮಾಗೆ ವಜ್ರವೃಷಭನಾರಾಚಶರೀರಸಂಹನನಸೌಮ್ಯನುಂ ಸಮಚತುರಶ್ರಸಂಸ್ಥಾನನುಂ ನಿಷ್ಟಪ್ತಕನಕವರ್ಣನುಂ ಸ್ವಸ್ತಿಕನಂದ್ಯಾವರ್ತಾದಿ ಚತುಷ್ಷಷ್ಟಿಲಕ್ಷಣಧರನುಂ ತಿಳಮಸೂರಿಕಾದ್ಯನೇಕ ವ್ಯಂಜನನಿಧಿಯುಂ ಅಪಾರವೀರ್ಯನುಂ ಪಂಚಶತಚಾಪೋತ್ಸೇಧನುಂ ಚತುರಶೀತಿಲಕ್ಷಪೂರ್ವಾನಪವರ್ತ್ಯಾಯುಷ್ಯನುಂ ಅಪ್ರತಿಹತಶಾಸನನುಮಾಗಿ,**

ವಿದ್ಯುಜ್ಜ್ವಲಿಯದಂತೆ ಪ್ರಕಾಶಿಸುವ ತನ್ನ ಮುಂಗೈಯಲ್ಲಿ ಧರಿಸಿದ ವೀರಾಂಗದವೆಂಬ ಬಳೆಗಳೂ ಮಹಾಕಲ್ಯಾಣಕಾರವೆಂಬ ದಿವ್ಯಹಾರವೂ ಅಮೃತಗರ್ಭಗಳೆನಿಸಿದ ತಿಂಡಿತಿನಿಸುಗಳೂ ಅಮೃತಕಲ್ಪವೆಂಬ ಸ್ವಾದ್ಯವೂ ಅಮೃತರಸಾಯನವೆಂಬ ಪಾನವೂ ಮತ್ತು ಮೂವತ್ತೆರಡು ಸಾವಿರ ದೇಶಗಳೂ (ವಿಷಯ), ಎಪ್ಪತ್ತೆರಡು ಸಾವಿರ ನಗರಗಳೂ ತೊಂಬತ್ತಾರು ಕೋಟಿ ಗ್ರಾಮಗಳೂ ತೊಂಬತ್ತೈದು ಸಾವಿರ (?) ದ್ರೋಣಾಮುಖಗಳೂ[1] ನಲವತ್ತೆಂಟು ಸಾವಿರ ಪಟ್ಟಣಗಳೂ ಹದಿನಾರು ಸಾವಿರ ಖೇಡಗಳೂ ಹದಿನಾರು ಸಾವಿರ ಸಂವಾಹನಗಳೂ (ಭಾರವನ್ನು ಹೊರುವ ಪ್ರಾಣಿಗಳು) ಐವತ್ತಾರು ಅಂತರದ್ವೀಪಗಳೂ ಒಂದುಕೋಟಿ ಪ್ರಮಾಣದ ಪಾತ್ರೆಗಳೂ, ಒಂದುನೂರು ಸಹಸ್ರ ಕೋಟಿ ನೇಗಿಲುಗಳೂ, ಮೂರು ಕೋಟಿ ಗೋಮಂಡಲಗಳೂ (ಕೊಟ್ಟಿಗೆಗಳೂ) ಮ್ಲೇಚ್ಛದೇಶನಿವಾಸಿಗಳಿರುವ ಏಳುನೂರು ಕುಕ್ಷಿವಾಸಗಳೂ (ರತ್ನವಿಕ್ರಯ ಸ್ಥಾನಗಳು) ಎಪ್ಪತ್ತೆರಡು ಸಾವಿರ ದುರ್ಗಾಟವಿಗಳೂ ಹದಿನೆಂಟು ಸಾವಿರ ಮ್ಲೇಚ್ಛರಾಜರೂ ಹೀಗೆ ಆತನ ಸಾಮ್ರಾಜ್ಯಕ್ಕೆ ಪರಿಚ್ಛೇದವಿತ್ತು. ವಜ್ರಮಯವಾದ ಕೀಲುಗಳಿಂದ ಕೀಲಿಸಲ್ಪಟ್ಟ ಭರತೇಶ್ವರನ ಶರೀರವು ದೃಢವಾಗಿತ್ತು. ಅವನ ಮೈಕಟ್ಟು ಸಮವಾಗಿಯೂ ಚತುರಸ್ರವಾಗಿಯೂ ಇತ್ತು. ಅವನ ಮೈಬಣ್ಣವು ಕಾಸಿದ ಚಿನ್ನದಂತೆ ಹೊಳೆಯುತ್ತಿತ್ತು. ಅವನು ಸ್ವಸ್ತಿಕ ನಂದ್ಯಾವರ್ತಾದಿ ಅರವತ್ನಾಲ್ಕು ಲಕ್ಷಣಗಳಿಂದ ಕೂಡಿದ್ದನು. ತಿಲ (ಸಣ್ಣಕಲೆ), ಮಸೂರಿಕೆ (ಒಂದು ದೇಹಲಕ್ಷಣ) ಮುಂತಾದ ಮಂಗಳಸೂಚಕ ಚಿಹ್ನೆಗಳಿಗೆ ಆಶ್ರಯಸ್ಥಾನವಾಗಿದ್ದನು. ಅವನು ಅಪಾರ ಪರಾಕ್ರಮಿಯೂ ಐದುನೂರು ಧನುಸ್ಸುಗಳಷ್ಟು ಉನ್ನತನೂ ಆಗಿದ್ದನು. ಎಂಬತ್ನಾಲ್ಕು ಲಕ್ಷ ಪೂರ್ವಾನಪವರ್ತ್ಯಾಯುಷ್ಯವುಳ್ಳವನಾಗಿದ್ದನು. ಅವನ ಆಜ್ಞೆಯು ಅಡೆತಡೆಯಿಲ್ಲದೆ ನಡೆದು ಹೋಗುತ್ತಿತ್ತು.

---

1. ದ್ರೋಣಾಮುಖ = ಸುತ್ತಲೂ ನದಿಯಿಂದ ಸುತ್ತಲ್ಪಟ್ಟ ಗ್ರಾಮ. ಇವು ೪೯೦೦೦ ಇದ್ದವೆಂದು ಪೂ. ಪ. ದಲ್ಲಿದೆ (೩೭-೬೨) ಅಂತರದ್ವೀಪ, ನಗರ, ಪಟ್ಟಣ, ಖೇಡ, ಗ್ರಾಮ ಇವುಗಳಿಗೆ ಭಿನ್ನಲಕ್ಷಣಗಳಿವೆ.

ಹಿಮದಿಂಗಂ ಲವಣಾಂಬುರಾಶಿವರೆಗಂ ಷಟ್ಖಂಡಭೂಮಂಡಳಂ
ನಿಮಿರ್ದಾಜ್ಞಾಪ್ರಸರಕ್ಕಗುರ್ವುಗೊಳೆಯುಂ ವಿದ್ಯಾಧರರ್ ಮಾಗಧಾ
ದ್ಯಮರರ್ ತನ್ನನೆ ನಿಚ್ಚಮೋಲಗಿಸೆಯುಂ ಚಕ್ರೇಶ್ವರಂ ಕೀರ್ತಿವಿ
ಭ್ರಮದಿಂ ಪಜ್ಜಳಿಪನ್ನಮುಜ್ಜಳಿಸಿದಂ ವ್ಯೋಮಾವನೀಭಾಗಮಂ ೪

ವ|| ಅಂತು ಭರತಂ ಭರತಮಂಡಳಮನೇಕಚ್ಛತ್ರಚ್ಛಾಯೆಯಿಂ ಪ್ರತಿಪಾಲಿಸುತ್ತುಮಿರೆಯುರೆ,

ಪುರನಿಧಿಶಯ್ಯಾಸನಭೋ
ಜ್ಯರತ್ನವಾಹನವರೂಥಿನೀನಾಟ್ಯಸಭಾ
ಪರಿಕರಸಹಿತಂ ಭರತೇ
ಶ್ವರಂಗೆ ಸಮಸಂದುದೀ ದಶಾಂಗಂ ಭೋಗಂ ೫

ವ|| ಇಂತಯೋಧ್ಯಾಸಿಂಹಾಸನಾಸೀನನುಮುದಿತೋದಿತಸಾಮ್ರಾಜ್ಯಸುಖಾನುಭವನುಂ ಕೃತಕೃತ್ಯನುಮಪ್ಪ ಸಕಲಚಕ್ರವರ್ತಿ,

ಜಿನಪೂಜೋತ್ಸವಮಂ ಮಹಾಮಹಮುಮಂ ತಾಂ ಮಾಡಿ ಸಲ್ವನ್ನೆಗಂ
ಧನಮಂ ತಕ್ಕವರ್ಗೀಯವೇಳ್ಪುದದನಂತೇಗೆಯ್ದುಮೊಲ್ಲರ್ ತಪೋ
ಧನರಾರಾಧ್ಯಗೃಹಸ್ಥರಾದರೊಳಮಿನ್ನಾರ್ ತಕ್ಕರಾರ್ಕೆವೆನೊ
ಯ್ಯನುಪಾಯಾಂತರದಿಂದಮೆಂದೊಸಗೆಯಂ ತದ್ವ್ಯಾಜದಿಂ ಮಾಡಿದಂ ೬

ವ|| ಅಂತು ಮಾಡಿ,

೪. ಹಿಮವತ್ಪರ್ವತದಿಂದ ಹಿಡಿದು ಉಪ್ಪಿನ ಕಡಲವರೆಗಿದ್ದ ಷಟ್ಖಂಡಮಂಡಿತವಾದ ಭೂಭಾಗದಲ್ಲಿ ಭರತೇಶನ ಆಜ್ಞೆಯು ಅಪ್ರತಿಹತವಾಗಿ ಹರಡಿತ್ತು. ಅಲ್ಲಿ ನೆಲಸಿದ್ದ ವಿದ್ಯಾಧರ ಮಾಗಧರೇ ಮೊದಲಾದ ಸುರರು ಭಯಗೊಂಡು ಭರತೇಶ್ವರನನ್ನು ನಿತ್ಯವಾಗಿ ಓಲಗಿಸಿದ್ದರು. ಹೀಗೆ ಅವನ ಕೀರ್ತಿವಿಲಾಸವು ಪ್ರಜ್ವಲಿಸುತ್ತಿರಲು ಅದರಿಂದ ಭೂಮ್ಯಾಕಾಶ ಭಾಗಗಳನ್ನು ಬೆಳಗಿಸಿದನು. ವ|| ಭರತನು ಭೂಮಂಡಲವನ್ನು ಹೀಗೆ ಏಕಚ್ಛತ್ರದ ನೆಳಲಲ್ಲಿ ಪಾಲಿಸುತ್ತಿರಲು ೫. ಪುರ, ನಿಧಿ, ಹಾಸಿಗೆ, ಆಸನ, ಭೋಜ್ಯ, ರತ್ನ, ವಾಹನ, ಸೈನ್ಯ, ನಾಟ್ಯಸಭೆ ಮತ್ತು ಪರಿಕರ (ಭಾಜನ-ಪಾತ್ರೆ) ಎಂಬ ದಶಾಂಗರೂಪವಾದ ಭೋಗವು ಭರತೇಶ್ವರನಿಗೆ ಪ್ರಾಪ್ತವಾಯಿತು. ವ|| ಹೀಗೆ ಅಯೋಧ್ಯೆಯ ಸಿಂಹಾಸನದಲ್ಲಿ ಕುಳಿತವನಾಗಿ ಭರತೇಶಚಕ್ರವರ್ತಿಯು ಉದಯಗೊಂಡ ಸಾಮ್ರಾಜ್ಯದ ಸುಖವನ್ನುಣ್ಣುತ್ತಾ ಕೃತಕೃತ್ಯನಾಗಿ ೬. ಇನ್ನು ಜಿನಪೂಜೋತ್ಸವವೆಂಬ ಮಹಾಮಹವನ್ನು[1] ಭಕ್ತಿಶ್ರದ್ಧೆಗಳಿಂದ ನಾನು ಮಾಡಿ ಧನವನ್ನು ತಕ್ಕವರಿಗೆ ದಾನಮಾಡಬೇಕು. ತಕ್ಕವರಾದ ತಪೋಧನರು ಅದನ್ನು ಪ್ರತಿಗ್ರಹಿಸ ಲೊಲ್ಲದೆ ಇದ್ದಾರೆ ಎಂದಾಲೋಚಿಸಿ ಗೃಹಸ್ಥರಲ್ಲಿ ತಕ್ಕವರಾರೆಂಬುದನ್ನು ಗುರುತಿಸಿ ತಿಳಿಯ ಲಿಕ್ಕಾಗಿ "ಒಸಗೆ"ಯೊಂದನ್ನು ಉಪಾಯಾಂತರದಿಂದ ಏರ್ಪಡಿಸಿದನು. ವ|| ಹಾಗೆ

---

1. ಅಷ್ಟಪೂಜಾಪ್ರಕಾರಗಳಿಂದ ಕೂಡಿದ ಮಹಾಪೂಜೆ.

ಹರಿತಾಂಕುರಫಳಪುಷ್ಪೋ
ತ಼್ರಂಗಳಂ ಪೊಸತೆ ಮೊಳೆತ ಧಾನ್ಯಂಗಳನಾ
ಧರಣೀಶಂ ಕೆದಱಿಸಿದಂ
ನಿರಂತರಂ ರಾಜಗೇಹದೊಳಗಂ ಪೊಱಗಂ ೭

ಕೆದಱಿಸಿ ಬಱಿಯಂ ಬರವೇ
ಳ್ಪುದುಮಲ್ಲಿ ಕೆಲರ್ ವಿವೇಕರಹಿತರ್ ಬಂದರ್
ಮೊದಲೊಳೆ ಪೊಕ್ಕರ್ ಬ್ರತಮಿ
ಲ್ಲದವರ್ ತುಳಿಯುತ್ತುಮಂಕುರಂಗಳನಾಗಳ್ ೮

ಸಾವದ್ಯಭೀರುಗಳ್ ಕೆಲ
ರಾ ವಿವಿಧಫಲಪ್ರಸೂನಪಲ್ಲವತತಿಯಿಂ
ತೀವಿದ ರಾಜಾಂಗಣಮನಿ
ಳಾವಂದ್ಯರ್ ಮೆಟ್ಟಲೊಲ್ಲದಲ್ಲಿಯೆ ನಿಂದರ್ ೯

ನಿಲಲೊಡಮನಿಬರುಮಂ ಭೂ
ತಲಪತಿ ಬಱಿಯಟ್ಟಿ ಬರಿಸೆ ಪೆಱತೊಂದೆಡೆಯೊಳ್
ಮಲರಹಿತರ್ ಬಂದು ಧರಾ
ಲಲನಾಧೀಶಂಗೆ ವಿನತಮಸ್ತಕರಾದರ್ ೧೦

ವ|| ಆಗಳ್ ಭರತೇಶ್ವರಚಕ್ರವರ್ತಿ ನೀಮಿನಿಬರುಮಿವರ್ ಬಂದ ಮಾರ್ಗದೊಳ್ ಬಾರದೆ ಪೆಱತೊಂದು ಮಾರ್ಗದೊಳೇಕೆ ಬಂದಿರೆಂದು ಬೆಸಗೊಳೆ

ಉತ್ಸವವನ್ನು ನೆರವೇರಿಸಿ ೭. ಹಸುರಾದ ಅಂಕುರಗಳನ್ನೂ ಹಣ್ಣುಗಳನ್ನೂ ಹೂವುಗಳನ್ನೂ ಆಗ ತಾನೆ ಮೊಳೆತಿರುವ ಧಾನ್ಯಗಳನ್ನೂ ಅರಮನೆಯ ಒಳಗೂ ಹೊರಗೂ ನಿರಂತರವಾಗಿ ರಾಜನು ಹರಡಿಸಿದನು. ೮. ಅನಂತರ ಜನರನ್ನು ಅರಮನೆಗೆ ದಯಮಾಡಿಸುವಂತೆ ರಾಜನು ಕೇಳಿಕೊಂಡನು. ತತ್ಫಲವಾಗಿ ವಿವೇಕವಿರಹಿತರೂ ವ್ರತವಿಹೀನರೂ ಎನಿಸಿದ ಕೆಲವು ಜನರು ಆ ಅಂಕುರಾದಿಗಳನ್ನು ಕಾಲುಗಳಿಂದ ತುಳಿಯುತ್ತಲೇ ಅರಮನೆಯನ್ನು ಹೊಕ್ಕರು. ೯. ಪಾಪಭೀರುಗಳೂ ಭೂವಂದ್ಯರೂ ಆದ ಕೆಲವರು ಜನರು, ಫಲ ಪುಷ್ಪಾಂಕುರಗಳಿಂದ ವ್ಯಾಪ್ತವಾದ ರಾಜಾಂಗಣವನ್ನು ಮೆಟ್ಟಲಾಶಿಸದೆಯೆ ಅಲ್ಲಿಯೇ ನಿಂತರು. ೧೦. ರಾಜನು ತನ್ನ ಸೇವಕರನ್ನು ಕಳಿಸಿ ಒಳಗೆ ಬರುವಂತೆ ಅವರನ್ನು ಬರಮಾಡಿಕೊಂಡನು. ಆಗ ಪಾಪಶೂನ್ಯರಾದ ಆ ಜನರು ಮತ್ತೊಂದೆಡೆಯಿಂದ ಬಂದು ಭಕ್ತಿಯಿಂದ ರಾಜನಿಗೆ ತಲೆಬಾಗಿದರು. ವ|| ಆಗ ರಾಜನು "ಜನರು ಬಂದ ಮಾರ್ಗವನ್ನು ತೊರೆದು ನೀವೇಕೆ ಬೇರೊಂದು ಮಾರ್ಗದಿಂದ ರಾಜಾಂಗಣವನ್ನು ಹೊಕ್ಕಿರಿ?" ಎಂದು ಕೇಳಿದನು. ೧೧. "ಫಲ, ಪುಷ್ಪ, ಚಿಗುರು, ಹಸುರು ಮೊಳಕೆ ಇವುಗಳಲ್ಲಿ "ಜೀವ ಸಂಕುಲ"ಗಳು ಅಪಾರವಾಗಿ ನೆಲಸಿವೆ. ಆದ್ದರಿಂದ ಪರ್ವದಿನಗಳಲ್ಲಿ ವ್ರತತೊಟ್ಟು (?)ನಿಂದ ನಮಗೆ ಅವನ್ನು ಮೆಟ್ಟಲಾಗದು. ಇದನ್ನು ನಾವು ಜಿನೇಂದ್ರ ಸಭಾಂತರಾಳದಲ್ಲಿ ಗಣಧರರು ಹೇಳಲು ಕೇಳಿದೆವು. ವ|| ಆ ಕಾರಣ ಚಿಗುರುಗಳಿಂದಲೂ ಪತ್ರಪುಷ್ಪಗಳಿಂದಲೂ

ಫಳಕುಸುಮಪ್ರವಾಳಹರಿತಾಂಕುರರಾಜಿಯೊಳಲ್ಲಿ ಜೀವಸಂ
ಕುಳಮಳವಲ್ಲದುಂಟದಱಿನಾಗದು ಪರ್ವದಿನಂಗಳೊಳ್ ವ್ರತಂ
ಗಳನೊಡಗೂಡಿ ನಿಂದೆಮಗೆ ಮೆಟ್ಟಲಿಳೇಶ್ವರ ಕೇಳ್ದಿವಾವಿದಂ
ತಿಳಿಯೆ ಗಣಾಧಿಪರ್ ಬೆಸಸೆ ರುಂದ್ರಜಿನೇಂದ್ರಸಭಾಂತರಾಳದೊಳ್ ೧೧

ವ॥ ಅದಱಿಂ ಪ್ರವಾಳಪತ್ರಪುಷ್ಪಾಂಕುರಂಗಳಿಂದಂ ಸಂಕೀರ್ಣಮಪ್ಪ ರಾಜಾಂಗಣಮಂ ಮೆಟ್ಟದೆ ಪೆಱತೊಂದು ಬಟ್ಟೆಯೊಳ್ ಬಂದೆವೆಂಬುದುಂ ನಾಭಿನಂದನನಂದನನವರ ದೃಢವ್ರತಕ್ಕೆ ಮೆಚ್ಚಿ ದಾನಸನ್ಮಾನಯೋಗ್ಯರಪ್ಪರೆಂದು ಪದ್ಮನಿಧಿಯೆಂಬ[ನಿಧಿಯಿಂ][೧] ತರಿಸಿ ತಪನೀಯಸೂತ್ರದೊಳೇಕಾದ್ಯೇಕೋತ್ತರ ದಶಾಂತಂಬರಮವರವರ ನೆಲೆಗಳೊಳ್ ಬ್ರಹ್ಮಸೂತ್ರಾಭಿಧಾನಯಜ್ಞೋಪವೀತದಿಂ ಪವಿತ್ರಗಾತ್ರರ್ಮಾಡಿ,

ಏನಭಿಮತಮವರ್ಗವರ್ಗದ
ನೇನುಂ ತೊದಳಿಲ್ಲದಿತ್ತು ಮನ್ನಿಸಿದಂ ಸ
ನ್ಮಾನಪುರಸ್ಸರಮಂತುಟೆ
ನಾನಾವ್ರತಯುತರನಾರುಮೇಂ ಮನ್ನಿಸರೇ ೧೨

ವ್ರತಹೀನರನನಿಬರುಮಮಂ
ಕ್ಷಿತಿಪತಿ ಬೇಱಿರಿಸಿ ಮಾನ್ಯರಂ ಮನ್ನಿಸೆ ತ
ದ್ವ್ರತಹೀನರುಮಂದಖಿಳ
ವ್ರತಮಂ ಕೈಕೊಳ್ವ ಬಗೆಗೆ ಬಗೆಯಂ ತಂದರ್ ೧೩

ಅಂಕುರಗಳಿಂದಲೂ ಸಂಕೀರ್ಣವಾದ ರಾಜಾಂಗಣವನ್ನು ತುಳಿಯದೆ ನಿಂತು ಬೇರೊಂದು ಮಾರ್ಗದಲ್ಲಿ ಬಂದೆವು ಎಂದರು. ಆಗ ಭರತೇಶ್ವರನು ಅವರ ಈ ದೃಢನಿಶ್ಚಯಕ್ಕೆ ಮೆಚ್ಚಿಕೊಂಡು ಇವರೇ ದಾನ ಸನ್ಮಾನಗಳಿಗೆ ತಕ್ಕವರೆಂದು ಭಾವಿಸಿದನು. ಪದ್ಮನಿಧಿಯೆಂಬ ನಿಧಿಯಿಂದ ತೆಗೆದ ಚಿನ್ನದ ಸೂತ್ರದಲ್ಲಿ ಒಂದರಿಂದ ಹನ್ನೊಂದರವರೆಗಿರುವ ಬ್ರಹ್ಮಸೂತ್ರವೆಂಬ ಯಜ್ಞೋಪವೀತದಿಂದ (ದರ್ಶನಿಕಾದಿ) ನೆಲೆಗಳಲ್ಲಿ[1] ಅವರ ದೇಹವನ್ನು ಪವಿತ್ರಗೊಳಿಸಿದನು. ೧೨. ಅವರವರಿಗೆ ಯಾವುದು ಇಷ್ಟವಾದುವೋ ಅವೆಲ್ಲವನ್ನೂ ತಡವರಿಸದೆ ಇತ್ತು ಅವರನ್ನು ಮನ್ನಿಸಿದನು. ಯಾರುತಾನೆ ವ್ರತನಿಷ್ಠರನ್ನು ಗೌರವಿಸರು? ೧೩. ವ್ರತಹೀನರಾದ ಜನರೆಲ್ಲರನ್ನೂ ಆ ರಾಜನು ಬೇರಿರಿಸಿದನು. ಗೌರವಾರ್ಹರನ್ನು ಗೌರವಿಸಿದನು. ತತ್ಫಲವಾಗಿ ವ್ರತವಿಹೀನರೂ ಕೂಡ ವ್ರತತೊಡಲು ನಿಶ್ಚಯಿಸಿದರು.

---

೧ ನಿಧಿಯಂ (ಅನ್ಯತ್ರ). ಪೂ. ಪು.ದಲ್ಲಿ 'ಸೂತ್ರಂ ಪದ್ಮಾಹ್ವಯಾನಿಧೇಃ' ಎಂದು ಪಂಚಮಂತ್ರವಿದೆ. (೩೮-೨೧)

1. ದರ್ಶನಿಕ, ವ್ರತಿಕ ಇತ್ಯಾದಿ ಹನ್ನೊಂದು ಗೃಹಸ್ಥಶ್ರಾವಕರ ನೆಲೆಗಳಿವೆ. ಆಯಾ ನೆಲೆಯಲ್ಲಿರತಕ್ಕವರಿಗೆ ಅನುಗುಣವಾಗಿ ಅಷ್ಟು ಸಂಖ್ಯೆಯ ಯಜ್ಞೋಪವೀತಗಳಿರುತ್ತವೆ. ನೆಲೆ = ಗುಣನಿಲಯ; ಪ್ರತಿಮಾ.

ವ॥ ಭರತೇಶ್ವರಂ ತಾನುಂ ಮುನ್ನೆ ಭಟ್ಟಾರಕರ ಸಮಕ್ಷದೊಳ್ ಸಮಾಕರ್ಣಿತೋಪಾಸಕಾಧ್ಯಯನನಪ್ಪುದಱಿಂದಮಾರೇನಂ ಬೇಡಿದರವರ್ಗದನೆ ಕೊಟ್ಟು ಚಕ್ರವರ್ತಿಗಳ್ ಮಾಳ್ಪ ಕಲ್ಪದ್ರುಮಮುಂ ಮಹಾಮಂಡಳಿಕಪ್ರಮುಖಮಕುಟಬದ್ಧರ್ ಮಾಳ್ಪ ಚತುರ್ಮುಖಮುಂ ಅರ್ಧಮಂಡಳಿಕರ್ ಮಾಳ್ಪ ಸರ್ವತೋಭದ್ರಮೆಂಬ ಪೆಸರನೊಡನೆಯ ಮಹಾಮಹಮುಂ ಇಂದ್ರರ್ ಮಾಳ್ಪ ಇಂದ್ರಧ್ವಜಮುಂ ಸಮಸ್ತಭವ್ಯಜನನಿರ್ವರ್ತ್ಯಮಾನಾಷ್ಟಾಹ್ನಿಕಮುಂ ಚೈತ್ಯಾಲಯನಿರ್ಮಾಣನಿರ್ಮಾಪಣಶಾಸನಾರೋಪಿತ ಗ್ರಾಮಕ್ಷೇತ್ರವಿತರಣಮುಂ ಮುನಿಜನಪೂಜಾನ್ನದಾನಾದಿಕರಣ ಜಿನಗೃಹಜನಸತತೋಪನೀಯಮಾನ ಪಾದ್ಯಗಂಧಾಕ್ಷತಕುಸುಮಚರುಧೂಪದೀಪಫಲಾದ್ಯರ್ಚನಾತ್ಮಕಮಪ್ಪ ನಿತ್ಯಮಹಮುಂ ಶಾಂತಿಕಪೌಷ್ಟಿಕಾದಿಗಳುಮಂ ಬಗೆದು ಮಾಳ್ಪ ಬಲಿಯುಂ ಘೃತಕ್ಷೀರದಧಿನಾಳಿಕೇರತೋಯಾಮ್ರರಸೇಕ್ಷುರಸಗಂಧೋದಕಾದಿಗಳುಮಂ ಮಾಡುವ ಸವನಮುಂ ಮೂಱುಂ ಪೊತ್ತುಮರ್ಚನಾಪುರಸ್ಸರಂ ಧೂಪೋದ್ಧಾರಂಗೆಯ್ವ ನಿರಂತರತ್ರಿಸಂಧ್ಯಾಸೇವೆಯುಮೆಂದೆಂಟುಂ ತೆಱದ ಪೂಜೆಯುಂ ಅಸಿಮಷಿಕೃಷಿವಣಿಗ್ವಿದ್ಯಾಶಿಲ್ಪಕರ್ಮಂಗಳಿಂ ಶುದ್ಧವೃತ್ತಿಯಿಂದರ್ಥೋಪಾರ್ಜನಂಗೆಯ್ವ ವಾರ್ತೆಯುಂ ತ್ರಿಶುದ್ಧಿಯಿನನುಕಂಪೆವೆರಸು ಸಮಸ್ತಪ್ರಾಣಿಗಳ್ಗಭಯಂಗುಡುವ ದಯಾದತ್ತಿಯುಂ ಕ್ರಿಯಾಮಂತ್ರಂಗಳಿಂದಮಾತ್ಮಸಮಾನ ಶ್ರಾವಕಾಗ್ರಣಿಗಳ್ಗೆ ಕನ್ಯಾಭೂಮಿಸುವರ್ಣಹಸ್ತ್ಯಶ್ವರಥರತ್ನಾದಿಗಳಂ ಕುಡುವ ಸಮದತ್ತಿಯುಂ ಪರಮತಪಶ್ಚರಣನಿರತಯತಿ

ವ॥ ಭರತೇಶ್ವರನು ಮೊದಲೇ ಭಟ್ಟಾರಕರ ಎದುರಿನಲ್ಲಿ ಉಪಾಸಕಾಧ್ಯಯನವನ್ನು ಕೇಳಿದ್ದನಾದ್ದರಿಂದ, ಯಾರು ಏನನ್ನೇ ಕೇಳಲಿ ಅವರಿಗೆ ಅದನ್ನು ಸಂತೋಷದಿಂದ ಕೊಟ್ಟನು. ಚಕ್ರವರ್ತಿಗಳು ಮಾಡುವ ಕಲ್ಪದ್ರುಮವೆಂಬ ಮಹವನ್ನೂ ಮಹಾಮಾಂಡಲಿಕ ಪ್ರಮುಖರಾದ ಮಕುಟಬದ್ಧರು ಮಾಡುವ ಚತುರ್ಮುಖಮಹವನ್ನೂ ಅರ್ಧಮಂಡಲಿಕರು ಮಾಡುವ ಸರ್ವತೋಭದ್ರವೆಂಬ ಹೆಸರಿನ ಮಹಾಮಹವನ್ನೂ ಇಂದ್ರರು ಮಾಡುವ ಐಂದ್ರಧ್ವಜವನ್ನೂ ಎಲ್ಲ ಭವ್ಯ ಜನರಿಂದಲೂ ನೆರವೇರಿಸಲ್ಪಡುವ ಅಷ್ಟಾಹ್ನಿಕಮಹವನ್ನೂ ಮತ್ತು ಚೈತ್ಯಾಲಯಗಳನ್ನೂ ನಿರ್ಮಿಸುವುದು. ನಿರ್ಮಾಣಗೊಳಿಸುವುದು. ಶಾಸನಗಳಲ್ಲಿ ಬರೆಯಲ್ಪಟ್ಟ ಗ್ರಾಮಕ್ಷೇತ್ರಗಳ ದಾನ, ಮುನಿಜನರಿಗೆ ಪೂಜೆ, ಅನ್ನದಾನಾದಿಗಳು, ಜಿನಗೃಹಗಳಿಗೆ ಸತತವಾಗಿ ಒಯ್ದು ಪಾದ್ಯ, ಗಂಧ, ಅಕ್ಷತೆ, ಹೂವು, ಅನ್ನ, ಧೂಪ, ದೀಪ ಮತ್ತು ಫಲಾದಿಗಳಿಂದ ಅರ್ಚನೆ-ಈ ಪ್ರಕಾರವಾದ ನಿತ್ಯಮಹವನ್ನೂ ಶಾಂತಿಪೌಷ್ಟಿಕಾದಿ ಕರ್ಮಗಳನ್ನು ನಡೆಸುವ ಬಲಿಯನ್ನೂ, ತುಪ್ಪ, ಹಾಲು, ಮೊಸರು, ಎಳನೀರು, ಮಾವಿನಹಣ್ಣಿನ ರಸ, ಕಬ್ಬಿನ ರಸ ಮತ್ತು ಗಂಧೋದಕಗಳಿಂದ ಸಲ್ಲಿಸುವ ಸವನವನ್ನೂ (ಸ್ನಪನವನ್ನೂ) ಪ್ರಾತರ್ಮಧ್ಯಸಾಯಂಕಾಲಗಳಲ್ಲಿ ಅರ್ಚನೆಯೊಡನೆ ಧೂಪೋದ್ಧಾರವನ್ನು ಸದಾ ಸಲ್ಲಿಸುವ ತ್ರಿಸಂಧ್ಯಾಸೇವೆ ಎಂಬ ಒಟ್ಟು ಎಂಟು ವಿಧವಾದ[1] ಪೂಜೆ (ಇಜ್ಯೆ)ಯನ್ನೂ ನೆರವೇರಿಸಿದನು. ಅಸಿ, ಮಷಿ, ಕೃಷಿ, ವಣಿಗ್ವಿದ್ಯೆ ಮತ್ತು

---

1 ಕಲ್ಪದ್ರುಮ, ಚತುರ್ಮುಖ, ಸರ್ವತೋಭದ್ರ, ಐಂದ್ರಧ್ವಜ, ಅಷ್ಟಾಹ್ನಿಕ, ಬಲಿ, ಸವನ, ತ್ರಿಸಂಧ್ಯಾಸೇವೆ-ಇವು ಎಂಟು ಬಗೆಯ ಪೂಜೆಗಳು. ಇವನ್ನು ನಾಲ್ಕುವಿಧ ಪೂಜೆಗಳಲ್ಲಿ ಅಂತರ್ಭಾವ ಮಾಡಲಾಗಿದೆ (ಪೂ. ಪು. ೩೮-೨೬ ರಿಂದ ೩೩). ಇವೆಲ್ಲವೂ ಸೇರಿದ ಪೂಜೆ ಮಹಾಪೂಜೆ-ಮಹಾಮಹ (ಆದಿ. ಪು. ೧೫-೬)

ಸಮಿತಿಗೆಲ್ಲಂ ಪ್ರತಿಗ್ರಹಾದಿಪುರಸ್ಸರಂ ನಿರವದ್ಯಾಹಾರಾದಿವಿತರಣರೂಪ ಪಾತ್ರದತ್ತಿಯುಂ ನಿಜಾನ್ವಯೋದ್ಧರಣಸಮರ್ಥನಪ್ಪಗ್ರತನೂಭವಂಗಾತ್ಮೀಯಧರ್ಮಧನಬಂಧುಗಳಂ ಸಮರ್ಪಿಪ ಸಕಳದತ್ತಿಯುಂ ಬೆರಸು ಚತುರ್ವಿಧಮಪ್ಪ ದತ್ತಿಯುಂ ಉಪಾಸಕಾಧ್ಯಯನಾಧ್ಯಾಪನಾ ನಂತರಂ ಸಕಳಶಾಸ್ತ್ರಂಗಳನೋದು ವೋದಿಸುವ ನೆನೆವ ಬರೆವ ಪರಮಸ್ವಾಧ್ಯಾಯಮುಂ ಪಂಚಾಣುವ್ರತಾದಿ ಪ್ರವರ್ತನ ಸ್ವಭಾವ ಸಂಯಮಮುಂ ಅನಶನವೃತ್ಯಾದಿ ತಪೋನುಷ್ಠಾನಮುಂಬೆರಸಾರ್ಯಷಟ್ಕರ್ಮಂಗಳಂ ನಿಮಗಿವು ಕುಲಾಚಾರಂಗಳೆಂದಱಿಯೆ ಪೇಳ್ದು ಕೈಕೊಳಿಸಿ.

ಆಱುಂ ವೃತ್ತಿಗಳನಿವಂ
ಮೀಱದರಲ್ಲರ್ ದ್ವಿಜನ್ಮರೀ ವೃತ್ತಿಗಳಿಂ
ಬೇಱಾದರ್ ದ್ವಿಜರುಂತೇಂ
ಬೇಱುಂಟೆ ಮನುಷ್ಯಜಾತಿ ತಾನೊಂದೆ ವಲಂ ೧೪

ವ್ರತಸಂಸ್ಕಾರದಿನಾದರ್
ವಿತತಗುಣರ್ ಬ್ರಾಹ್ಮಣರ್ ಕ್ರಿಯಾಸಂತತಿಸಂ
ಯುತರುಚಿತಸತ್ಕ್ರಿಯಾವಿರ
ಹಿತನಾತಂ ನಾಮಧಾರಕಂ ದ್ವಿಜನಲ್ಲಂ ೧೫

ಶಿಲ್ಪಕಾರ್ಯಗಳೆಂಬ ಶುದ್ಧವೃತ್ತಿಗಳಿಂದ ಧನಸಂಪಾದನೆಯನ್ನು ಮಾಡುವ ವಾರ್ತೆಯನ್ನೂ ತ್ರಿಕರಣಶುದ್ಧಿಯಿಂದ ದಯಾವಂತನಾಗಿ ಎಲ್ಲ ಪ್ರಾಣಿಗಳಿಗೂ ಅಭಯಕೊಡುವ ದಯಾದತ್ತಿ, ಕ್ರಿಯಾಮಂತ್ರಗಳಿಂದ ತನಗೆ ಸಮಾನರೆನಿಸಿದ ಶ್ರಾವಕಶ್ರೇಷ್ಠರಿಗೆ ಕನ್ಯೆಯನ್ನೂ ಭೂಮಿಯನ್ನೂ ಚಿನ್ನವನ್ನೂ ಆನೆ, ಕುದುರೆ, ರಥ, ರತ್ನಾದಿಗಳನ್ನೂ ಸಲ್ಲಿಸುವ ಸಮದತ್ತಿ, ತಪಃಪ್ರಧಾನರಾದ ತಪೋಧನರ ಸಮಿತಿಗೆ ಪ್ರತಿಗ್ರಹಾದಿ ಪುರಸ್ಸರವಾಗಿ ನಿರ್ದುಷ್ಟಾಹಾರಾದಿ ದಾನರೂಪವಾದ ಪಾತ್ರದತ್ತಿ, ತನ್ನ ವಂಶೋದ್ಧಾರಕನಾದ ಜ್ಯೇಷ್ಠಪುತ್ರನಿಗೆ ತನ್ನ ಧರ್ಮ, ಧನ ಮತ್ತು ಬಂಧುಗಳನ್ನು ಸಮರ್ಪಿಸುವ ಸಕಲದತ್ತಿ ಈ ಪ್ರಕಾರವಾದ ನಾಲ್ಕು ಬಗೆಯ ದತ್ತಿಗಳನ್ನೂ ಉಪಾಸಕಜನರಿಗೆ ಅಧ್ಯಯನ, ಅಧ್ಯಾಪನೆಗಳನ್ನು ಮಾಡಿಸುವುದಲ್ಲದೆ ಸಕಲಶಾಸ್ತ್ರಗಳನ್ನು ಓದುವ ಓದಿಸುವ ಚಿಂತಿಸುವ ಬರೆಯುವ ಪರಮ ಸ್ವಾಧ್ಯಾಯವನ್ನು ಪಂಚಾಣುವ್ರತಗಳೇ ಮುಂತಾದುವನ್ನು ಸ್ಥಿರತೆಯಿಂದ ನಡೆಸುವ ಸಂಯಮವನ್ನೂ ಉಪವಾಸಾದಿ ಪ್ರಧಾನವಾದ ತಪೋನುಷ್ಠಾನವನ್ನೂ-ಇವುಗಳೆಲ್ಲ ಸೇರಿ ಒಟ್ಟು ಆರ್ಯಷಟ್ಕರ್ಮಗಳನ್ನು[1] (ಉಪಾಸಕರಿಗೆ) ಉಪದೇಶಿಸಿ, ನಿಮಗಿವು ಕುಲಾಚಾರಗಳೆಂದು ತಿಳಿಯಿಸಿ ಅವನ್ನು ಕೈಕೊಳ್ಳುವಂತೆ ಮಾಡಿದನು. ೧೪. ಈ ಷಟ್ಕರ್ಮಗಳ[2] ಆಚರಣೆಯನ್ನು ಮೀರದವರು ದ್ವಿಜನ್ಮರು. ಅವುಗಳಿಂದ ವಿರಹಿತರಾದವರು ವ್ಯರ್ಥವಾಗಿ ನಾಮಧಾರಕರಾದ ದ್ವಿಜರು. ೧೫. ವ್ರತಸಂಸ್ಕಾರಗಳಿಂದಲೂ ಗುಣಭೂಯಿಷ್ಠತೆಯಿಂದಲೂ ಕ್ರಿಯಾಸಂತತಿಯಿಂದಲೂ

1 ಆರ್ಯಷಟ್ಕರ್ಮಗಳು : ಇಜ್ಯಾ (ಪೂಜೆ), ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ, ತಪಸ್ಸು.

2 ಪೂಜೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ ಮತ್ತು ತಪಸ್ಸು.

ವ|| ಎಂದವರನಾತ್ಮೀಯಾನ್ವಯೋಚಿತವ್ರತಂಗಳೊಳ್ ದೃಢವ್ರತರಂ ಮಾಡಿ ಮತ್ತಂ ದ್ವಾದಶಾಂಗಂಗಳೊಳ್ ಪೇಟ್ದ ಆಧಾನಪ್ರೀತಿಸುಪ್ರೀತಿಧೃತಿಮೋದಪ್ರಿಯೋದ್ಭವನಾಮಕರ್ಮಬಹಿರ್ಯಾನ ನಿಷದ್ಯಾನ್ನಪ್ರಾಶನವ್ಯುಷ್ಟಿಕೇಶವಾಪಲಿಪಿಸಂಖ್ಯಾನಸಂಗ್ರಹೋಪನಯನವ್ರತಚರ್ಯಾವ್ರತಾವತರಣವಿವಾಹ ಲಾಭಕುಲಚರ್ಯಾಗೃಹೀಶಿತ್ವಪ್ರಶಾಂತಿಗೃಹತ್ಯಾಗದೀಕ್ಷಾದ್ಯ ಜಿನರೂಪತಾಮೌನಾಧ್ಯಯನ ವೃತ್ತಿತೀರ್ಥಕೃತ್ತ್ವಭಾವನಾಗುರುಸ್ಥಾನಾಭ್ಯುಪಗಮಗಣೋಪಗ್ರಹಣ ಸ್ವಗುಣಸ್ಥಾನಸಂಕ್ರಾಂತಿನಿಸ್ಸಂಗತ್ವಾತ್ಮಭಾವನಾ ಯೋಗನಿರ್ವಾಣಸಂಪ್ರಾಪ್ತಿಯೋಗನಿರ್ವಾಣಸಾಧನೇಂದ್ರೋಪಪಾದಾಭಿಷೇಕವಿಧಿಸುಖೋದಯೇಂದ್ರ ತ್ಯಾಗಾವತಾರಹಿರಣ್ಯಗರ್ಭೋತ್ಕೃಷ್ಟಜನ್ಮತಾಮಂದರೇಂದ್ರಾಭಿಷೇಕಗುರುಪೂಜೋಪಲಂಭನ ಯೌವರಾಜ್ಯಸ್ವರಾಜ್ಯಚಕ್ರಲಾಭದಿಗ್ವಿಜಯಚಕ್ರಾಭಿಷೇಕಸಾಮ್ರಾಜ್ಯಪರಿನಿಷ್ಕ್ರಮಣಯೋಗಸಮ್ಮಹಾರ್ಹತ್ಯ ವಿಹಾರಯೋಗತ್ಯಾಗಾಗ್ರನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ,

ಮೊದಲಿಂ ತಗುಳ್ದು ತುದಿವರ<br>
ಮಿದರ್ಕಿದಾಚರಣಮಿದಱ ವಿಧಿಯಿಂತುಟು ತ<br>
ಪ್ಪದೆ ಮನ್ತ್ರಪೂರ್ವಕಂ ನೆಗ<br>
ೞ್ವುದೆಂದು ಚಕ್ರಾಧಿಪಂ ಮನಂಗೊಳೆ ಪೇೞ್ದಂ ೧೬

ವ|| ಮತ್ತಮವತಾರವೃತ್ತಲಾಭಸ್ಥಾನಲಾಭಗಣಗ್ರಹಪೂಜಾರಾಧ್ಯಪುಣ್ಯಯಜ್ಞದೃಢ

ಬ್ರಾಹ್ಮಣರೆನಿಸುವರು. ಉಚಿತವಾದ ಸತ್ಕ್ರಿಯಾವಿರಹಿತನು ಹೆಸರಿಗೆ ಮಾತ್ರ ಬ್ರಾಹ್ಮಣ. ಅವನು ದ್ವಿಜನಲ್ಲ. ವ|| ಎಂದು ಅವರನ್ನು ಅವರವರ ವಂಶೋಚಿತವಾದ ವ್ರತಗಳಲ್ಲಿ ದೃಢವ್ರತರನ್ನಾಗಿ ಮಾಡಿದನು. ದ್ವಾದಶಾಂಗೋಕ್ತ ದಾನ, ಆಧಾನ, ಪ್ರೀತಿ, ಸುಪ್ರೀತಿ, ಧೃತಿ, ಮೋದ, ಪ್ರಿಯೋದ್ಭವ, ನಾಮಕರ್ಮ, ಬಹಿರ್ಯಾನ, ನಿಷದ್ಯಾ, ಅನ್ನಪ್ರಾಶನ, ವ್ಯುಷ್ಟಿ, ಕೇಶವಾಪ, ಲಿಪಿ ಸಂಖ್ಯಾನ ಸಂಗ್ರಹ, ಉಪನಯನ, ವ್ರತಚರ್ಯಾ, ವ್ರತಾವತರಣ, ವಿವಾಹ, ವರ್ಣಲಾಭ, ಕುಲಚರ್ಯಾ, ಗೃಹೀಶಿತ್ವ, ಪ್ರಶಾಂತಿ, ಗೃಹತ್ಯಾಗ, ದೀಕ್ಷಾದ್ಯ, ಜಿನರೂಪತಾ, ಮೌನಾಧ್ಯಯನವೃತ್ತಿ, ತೀರ್ಥಕೃತ್ತ್ವಭಾವನಾ, ಗುರುಸ್ಥಾನಾ ಭ್ಯುಪಗಮ, ಗಣೋಪಗ್ರಹಣ, ಸ್ವಗುರುಸ್ಥಾನ ಸಂಕ್ರಾಂತಿ, ನಿಸ್ಸಂಗತ್ವಾತ್ಮಭಾವನಾ, ಯೋಗನಿರ್ವಾಣ ಸಂಪ್ರಾಪ್ತಿ, ಯೋಗನಿರ್ವಾಣ ಸಾಧನ, ಇಂದ್ರೋಪಪಾದ (ಇಂದ್ರಾ), ಅಭಿಷೇಕ, ವಿಧಿದಾನಸುಖೋದಯ, ಇಂದ್ರತ್ಯಾಗ (ಇಂದ್ರಾ) ಅವತಾರ, ಹಿರಣ್ಯ ಗರ್ಭೋತ್ಕೃಷ್ಟಜನ್ಮತಾ, ಮಂದರೇಂದ್ರಾಭಿಷೇಕ, ಗುರುಪೂಜೋಪಲಂಭನ, ಯೌವರಾಜ್ಯ, ಸ್ವರಾಜ್ಯ, ಚಕ್ರಲಾಭ, ದಿಗ್ವಿಜಯ, ಚಕ್ರಾಭಿಷೇಕ, ಸಾಮ್ರಾಜ್ಯ, ಪರಿನಿಷ್ಕ್ರಮಣ, ಯೋಗಸಮ್ಮಹ, ಆರ್ಹಂತ್ಯ, ವಿಹಾರಯೋಗತ್ಯಾಗ, ಅಗ್ರನಿರ್ವೃತಿಗಳೆಂಬ ಗರ್ಭಾದಾನ ಮೊದಲಾಗಿ ನಿರ್ವಾಣಪರ್ಯಂತವಾದ ಐವತ್ಮೂರು ಗರ್ಭಾನ್ವಯಕ್ರಿಯೆಗಳನ್ನು ಕುರಿತು, ೧೬. "ಮೊದಲಿಂದ ಹಿಡಿದು ಕೊನೆಯುವರೆಗೂ ಇದಕ್ಕೆ ಇದು ಆಚರಣೆ, ಇದರ ವಿಧಿ ಹೀಗೆ; ತಪ್ಪದೆ ಮಂತ್ರಪೂರ್ವಕವಾಗಿ ಅವನ್ನು ನಡೆಸುವುದು" ಎಂದು ಚಕ್ರಾಧಿಪನು ಮನಮುಟ್ಟುವಂತೆ ವಿವರಿಸಿದನು. ವ|| ಅವತಾರ, ವೃತ್ತಲಾಭ, ಸ್ಥಾನಲಾಭ, ಗಣಗ್ರಹ,

**ಚರ್ಯೋಪಯೋಗಿತ್ವಮೆಂಬೆಂಟುಂ ಬೆರಸುಂ ಪೂರ್ವೋಕ್ತೋಪನಯನಾದಿ ಚತ್ವಾರಿಂಶತ್ಕ್ರಿಯೆಗಳೊಡನೆ ನಾಲ್ವತ್ತೆಂಟುಂ ದೀಕ್ಷಾನ್ವಯಕ್ರಿಯೆಗಳುಮಂ ಸಜ್ಜಾತಿಸದ್ಗೃಹಿತ್ವ ಪಾರಿವ್ರಾಜ್ಯಸುರೇಂದ್ರತ್ವಸಾಮ್ರಾಜ್ಯ ಪರಮಾರ್ಹಂತ್ಯಪರಿನಿರ್ವಾಣಮೆಂಬೇಳುಂ ಪರಮಸ್ಥಾನನಾಮಕರ್ತ್ರನ್ವಯಕ್ರಿಯೆಗಳನತಿಬಾಲವಿದ್ಯಾಕುಲಾವಧಿ ವರ್ಣೋತ್ತಮತ್ವಪಾತ್ರತ್ವಸೃಷ್ಟ್ಯಾಧಿಕಾರವ್ಯವಹಾರೇಶಿತ್ವಾವಧ್ಯತ್ವಾದಂಡ್ಯತ್ವಮಾನಾರ್ಹತ್ವಪ್ರಜಾ ಸಂಬಂಧಾಂತರಮೆಂಬ ಪತ್ತುಮಧಿಕಾರಂಗಳುಮನಱಿಪಿ, ಮತ್ತಂ ಗರ್ಭಾನ್ವಯಾದಿಕ್ರಿಯೆಗಳನನುಷ್ಠಿಸು ವಾಗಳ್ ವಿನೇಯಜನತಾಸತತಾರ್ಚಿತ ಜಿನಭವನದೊಳಮಾತ್ಮೀಯಗೃಹಾಭ್ಯಂತರ ಪ್ರಶಸ್ತಪ್ರದೇಶಂ ಗಳೊಳಂ ಪ್ರಶಸ್ತಮೃತ್ತಿಕಾವಿರಚಿತೋನ್ನತವೇದಿತಳಾಷ್ಟಮಹಾಪ್ರಾತಿಹಾರ್ಯ ಸಮನ್ವಿತ[೧]ಜಗತ್ಪೂಜ್ಯ ಪೂಜಿತಾರ್ಹತ್ಪ್ರತಿಮೆಗಳನಿಱಿಸಿ ಯಥಾಶಕ್ತಿಸ್ನಪನಪೂಜಾಪುರಸ್ಸರಂ ಬಹುವಿಧಾರ್ಚನೆಗಳಿಂದರ್ಚಿಸಿ ಧರ್ಮಚಕ್ರಚ್ಛತ್ರತ್ರಿತಯಂಗಳಂ ಬಳಸಿಯುಮುಪಾಶ್ರಯಂಬಡೆಯೆ ನಿಱಿಸಿ ತೀರ್ಥಕರಗಣಧರಾನಗಾರಕೇವಳಿಗಳ ಪರಿನಿರ್ವಾಣಕ್ಷೇತ್ರದೊಳ್ ಶರೀರಸಂಸ್ಕಾರದಿಂ[೨] ಗಾರ್ಹಪತ್ಯದಕ್ಷಿಣಾಗ್ನ್ಯಾಹವನೀಯಮೆಂಬ ಪೆಸರಂ ಪಡೆದಗ್ನಿತ್ರಯಂಗಳೊಳಗರ್ಹದರ್ಚನಾಶೇಷ ಘೃತತಿಳಾಹುತಿಗಳಿನುಪಾಸಕಾಧ್ಯಯನಸ್ವಗದಿತ ಸಮಸ್ತಪ್ರಕಾರ ಪೀಠಿಕಾಜಾತ್ಯಾದಿಮಂತ್ರಂಗಳಿಂ ಕ್ರಿಯಾನುಯುಕ್ತಮಾಗೆ ಬೇೞ್ಪುದು ಪೂರ್ವಾಪರವಿದೇಹಂಗಳೊಳ್ ಅವ್ಯವಚ್ಛಿನ್ನರೂಪದಿಂ ಭರತೈರಾವತಂಗ ಳೊಳ್ ನಿಜೋಚಿತ(ಕಾಲ)[೨] ಕಾಲಾರಂಭಾವಸಾನರೂಪದಿಂ ನೆಗೞ್ದ ಕ್ರಿಯಾವಿಶೇಷಂಗಳನಿಲ್ಲಿಂದಿತ್ತಡೆಯುಡುಗದೆ ನಡೆಯಿಸುವುದು ಈ ಕ್ರಿಯೆಗಳನುಷ್ಠಾನಮಂತ್ರ ಶೂನ್ಯಂಗಳಾಗದಂತು**

ಪೂಜಾರಾಧ್ಯ, ಪುಣ್ಯಯಜ್ಞ, ದೃಢಚರ್ಯಾ, ಉಪಯೋಗಿತ್ವಗಳೆಂಬೆಂಟು ಕ್ರಿಯೆಗಳಿಂದಲೂ, ಹಿಂದೆ ನುಡಿದ ಉಪನಯನಾದಿ ನಲವತ್ತು ಕ್ರಿಯೆಗಳಿಂದಲೂ ಕೂಡಿದ ನಲವತ್ತೆಂಟು ದೀಕ್ಷಾನ್ವಯಕ್ರಿಯೆಗಳನ್ನೂ ಸಜ್ಜಾತಿ, ಸದ್ಗೃಹಿತ್ವ, ಪರಿವ್ರಾಜ್ಯ, ಸುರೇಂದ್ರತ್ವ, ಸಾಮ್ರಾಜ್ಯ, ಪರಮಾರ್ಹಂತ್ಯ, ಪರಿನಿರ್ವಾಣವೆಂಬ ಏಳು ಪರಮಸ್ಥಾನ ನಾಮ ಕಕರ್ತ್ರನ್ವಯಕ್ರಿಯೆಗಳನ್ನು ಅತಿಬಾಲವಿದ್ಯಾ, ಕುಲಾವಧಿ, ವರ್ಣೋತ್ತಮತ್ವ, ಪಾತ್ರತ್ವ, ಸೃಷ್ಟ್ಯಧಿಕಾರ, ವ್ಯವಹಾರೇಶಿತ್ವ, ಅವಧ್ಯತ್ವ, ಅದಂಡ್ಯತ್ವ, ಮಾನಾರ್ಹತ್ವ, ಪ್ರಜಾಸಂಬಂಧಾಕರವೆಂಬ ಹತ್ತು ಅಧಿಕಾರಗಳನ್ನೂ ತಿಳಿಸಿಕೊಟ್ಟನು. "ಗರ್ಭಾನ್ವಯ ಕ್ರಿಯೆಗಳನ್ನು ಅನುಷ್ಠಿಸುವಾಗ ಶಿಷ್ಯಜನಪರಂಪರೆಯು ಸತತವಾಗಿ ಅರ್ಚಿಸುತ್ತಿರುವ ಜಿನಗೃಹದಲ್ಲಿಯೂ ತನ್ನ ಮನೆಯೊಳಗಣ ಪ್ರಶಸ್ತವಾದ ಪ್ರದೇಶಗಳಲ್ಲಿಯೂ ಉತ್ಕೃಷ್ಟವಾದ ಮಣ್ಣಿನಿಂದ ಮಾಡಿದ ಎತ್ತರವಾದ ಜಗುಲಿಯ ಮೇಲೆ ಸ್ಥಾಪಿತವಾದುವೂ ಅಷ್ಟಮಹಾಪ್ರಾತಿಹಾರ್ಯ[1]ಸಮನ್ವಿತಗಳೂ ಆದ ಜಗತ್ಪೂಜ್ಯಗಳಾದ (ಪೂರ್ವಜರಿಂದ) ಪೂಜಿತಗಳಾದ ಜಿನಬಿಂಬ (ಪ್ರತಿಮೆ)ಗಳನ್ನು ಇರಿಸಬೇಕು. ಶಕ್ತ್ಯನುಸಾರವಾಗಿ ಅಭಿಷೇಕ, ಪೂಜೆ ಮುಂತಾದ ವಿವಿಧಾರ್ಚನೆಗಳಿಂದ ಅರ್ಚಿಸಬೇಕು. ಧರ್ಮಚಕ್ರತ್ರಯವನ್ನೂ ಛತ್ರತ್ರಯವನ್ನೂ ಪ್ರದಕ್ಷಿಣೆಮಾಡಿ ಹೊಂದಿಕೊಂಡಿರುವಂತಿರಿಸಬೇಕು. ತೀರ್ಥಂಕರ, ಗಣಧರ, ಅನಗಾರಕೇವಲಿಗಳ ಪರಿನಿರ್ವಾಣಕ್ಷೇತ್ರದಲ್ಲಿ ಶರೀರಸಂಸ್ಕಾರದಿಂದ ಪ್ರಸಿದ್ಧವಾದ ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯವೆಂಬ ಮೂರು ಅಗ್ನಿಗಳಲ್ಲಿ

---

[1] ೧. ಅಶೋಕವೃಕ್ಷ ೨. ಸುರಪುಷ್ಪವೃಷ್ಟಿ ೩. ದಿವ್ಯಧ್ವನಿ ೪. ಚಾಮರ ೫. ಸಿಂಹಾಸನ ೬. ಪ್ರಭಾವಲಯ ೭. ದೇವದುಂದುಭಿ ೮. ಛತ್ರತ್ರಯ.

ದೊರೆಕೊಳಿಪುವು ಶತ್ರುಯೆಯೊಳ್
ಪರಿಣಮಿಸುವ ಫಳಮನಸ್ತ್ರಶಸ್ತ್ರತನುತ್ರೋ
ತ್ಕರರಹಿತಂಗಸಹಾಯಂ
ಗರಾತಿಬಳಜಯಮನಳವು ದೊರೆಕೊಳಿಸುವವೋಲ್ ೧೭

ಆದಱಿಂದಂ ಸಕಳಾಗಮ
ವಿದರಿವನಿಂ ತಪ್ಪದಂತೆ ನೆಗಟಿಂ ನೆಗಟ್ದಿಂ
ದುದಿತ ಪರಮಸುಖಾ
ಸ್ಪದಕ್ಕೆ ಬಗೆದಂತೆ ನೀಮೆ ಮೊದಲಿಗರಪ್ಪಿರ್ ೧೮

ಇದನಾದಿಪ್ರಭವಂ ಭವಭ್ರಮಣದುಃಖೋಗ್ರಾಗ್ನಿಯೊಳ್ ಮಗ್ಗಿದ
ಪ್ಪುದು ಜೀವಂಗಳನೆಂಬಿನಂ ಬಳಸಿದೀ ಮಿಥ್ಯಾತ್ವಬಂಧಂ ಕಳೆ
ಲ್ವುದಿರುತ್ತಿರ್ಪಿನೆಗಂ ಚತುರ್ದಶಗುಣಸ್ಥಾನಂಗಳಂ ನಂಬಿ ಪೊ
ರ್ದಿದವರ್ ಪೊರ್ದಿದರಲ್ತೆ ಮುಕ್ತಿವನಿತಾಕಾಂಚೀಗುಣಸ್ಥಾನಮಂ ೧೯

ಅರ್ಹಂತನ ಅರ್ಚನಾಶಿಷ್ಟವಾದ ತುಪ್ಪ, ಎಳ್ಳು ಇವುಗಳ ಆಹುತಿಗಳಿಂದ, ಉಪಾಸಕಾಧ್ಯಯನದಲ್ಲಿ ಹೇಳಲಾದ ಸಮಸ್ತಪ್ರಕಾರವಾದ ಪೀಠಿಕಾಜಾತ್ಯಾದಿಮಂತ್ರಗಳಿಂದ ಕ್ರಿಯಾನುಯುಕ್ತವಾಗಿ ಹವನಮಾಡಬೇಕು. ಪೂರ್ವಾಪರ ವಿದೇಹ ದೇಶಗಳಲ್ಲಿ ಅವ್ಯವಚ್ಛಿನ್ನ (ಸತತವಾಗಿ) ರೂಪದಿಂದಲೂ ಭರತೈರಾವತ ದೇಶಗಳಲ್ಲಿ ಸ್ವೋಚಿತಕಾಲ, ಕಾಲಾರಂಭ ಮತ್ತು ಅವಸಾನ ರೂಪದಿಂದಲೂ[1] ಇರುವ ಈ ಕ್ರಿಯಾ ವಿಶೇಷಗಳನ್ನು ಅನುಷ್ಠಾನ ಮಂತ್ರಶೂನ್ಯಗಳಾಗದಂತೆ ಸತತವಾಗಿ ನಡೆಯಿಸಬೇಕು. ೧೭. ಅಸ್ತ್ರ, ಶಸ್ತ್ರ ಕವಚ ಗಳೊಂದೂ ಇಲ್ಲದ ಅಸಹಾಯಕನಿಗೆ ಅವನ ಪರಾಕ್ರಮವೇ ಶತ್ರುಸೈನ್ಯ ಜಯವನ್ನು ತಂದೊದಗಿಸುವಂತೆ. ಈ ಕ್ರಿಯಾವಿಶೇಷಗಳು ಆ ಕ್ರಿಯೆಗಳ ಫಲವನ್ನು ತಂದೊದಗಿಸುವುವು. ೧೮. ಆದ್ದರಿಂದ ಸಮಸ್ತ ಆಗಮವಿದರು ಹೇಳುವಂತೆ ತಪ್ಪದೆ ಕ್ರಿಯಾನುಷ್ಠಾನಗಳನ್ನು ಮಾಡಿರಿ. ಆಗ ನೀವೇ ಪರಮಸುಖಾಸ್ಪದಕ್ಕೆ ಪ್ರಪ್ರಥಮವಾಗಿ ಪಾತ್ರರಾಗುವಿರಿ. ೧೯. ಈ ಮಿಥ್ಯಾತ್ವಬಂಧವು ಅನಾದಿಯಾಗಿದ್ದು ಜೀವಗಳನ್ನು ಸುತ್ತುವರಿದಿದೆ. ಸಂಸಾರಭ್ರಮಣವೆಂಬ ದುಃಖದ ಉಗ್ರಾಗ್ನಿಯಲ್ಲಿ ಜೀವರನ್ನು ಬೀಳಿಸಿ ಹಾಳುಮಾಡುತ್ತಿದೆ. ಆದ್ದರಿಂದ ಈ ಚತುರ್ದಶಗುಣಸ್ಥಾನಗಳನ್ನು ನಂಬಿ ಆಚರಿಸತಕ್ಕ ಭವ್ಯರು ಮಿಥ್ಯಾತ್ವಬಂಧವನ್ನು ಕಳಚಿಕೊಂಡು ಮುಕ್ತಿವನಿತೆಯ ಕಾಂಚೀಗುಣಸ್ಥಾನವನ್ನು ಪಡೆದಿದ್ದಾರೆ

---

1 'ಕಾಲಕಾಲಾರಂಭ....' ಇಲ್ಲಿ ಒಂದು ಕಾಲ ಶಬ್ದವು ಅಧಿಕವೆಂದು ತೋರುತ್ತದೆ. ನಿಜೋಚಿತ ಕಾಲದಲ್ಲಿ ಆರಂಭವಾಗಿ ಅವಸಾನವನ್ನು ಈ ಕ್ರಿಯಾವಿಶೇಷಗಳು ಭರತೈರಾವತಕ್ಷೇತ್ರಗಳಲ್ಲಿ ಪಡೆಯುತ್ತವೆ' ಎಂದು ತಾತ್ಪರ್ಯ.

ಎಂದಿಂತು ನಾಭಿನಂದನ
ನಂದನನಾನಂದದಿಂದಮಂದವರಂ ತ
ನ್ನೆಂದುಂದದಿಂದೆ ನಡೆಯಿಸಿ
ದಂ ದಾನಂಗುಡುವದೊಂದಲಂಪಿನ ಪೆಂಪಿಂ ೨೦

ಪರಬ್ರಹ್ಮತನೂಭವರ್ ದ್ವಿಜವರರ್ ವರ್ಣೋತ್ತಮರ್ ಲೋಕಪೂ
ಜ್ಯರಿಳಾವಲ್ಲಭಮಾನ್ಯರುನ್ನತಗುಣರ್ ಚಾರಿತ್ರಶುದ್ಧರ್ ಧರಾ
ಮರರೀಬ್ರಾಹ್ಮಣರೆಂದು ಕೊಂಡುಕೊನೆದಾಷಟ್ಖಂಡಭೂಮಂಡಲೇ
ಶ್ವರನೋರಂತೆ ನೆಗಟ್ಚಿ ಕೂಡೆ ನೆಗಟ್ದತ್ತೆತ್ತಂ ದ್ವಿಜನಾನ್ವಯಂ ೨೧

ವ॥ ಅಂತು ಭರತೇಶ್ವರಂ ಭರತಕ್ಷೇತ್ರದೊಳ್ ತಾನೆ ಮಾಡಿದ ತನ್ನ ಕೊಂಡಾಟದಿನತಿ ಪ್ರಸಿದ್ಧಮಾದ ವಿಪ್ರಸಂತತಿ ಕೆಲವುಕಾಲಂ ನಡೆವನ್ನೆಗಮೊಂದುದಿವಸಂ ತ್ರಿಯಾಮಾವಿರಾಮದೊಳ್ ಆಶ್ಚರ್ಯಭೂತಂಗಳುಂ ದೂರಾರಿಷ್ಟಫಲಸೂಚಕಂಗಳುಮಪ್ಪ ಸ್ವಪ್ನಂಗಳಂ ಕಂಡು ಬೆರ್ಚಿದಂತೆರ್ದುಮೀಗಳೆನ್ನ ಕಂಡ ಕನಸುಗಳೀಯುಗದ ಕಡೆಯೊಳ್ ಪ್ರಜೆಗಳ್ಗೆ ವಿವಿಧೋಪದ್ರವಸೂಚಕಂಗಳಾಗಿ ತೋರ್ಕುಮೆಂದನು ಮಾನದಿನಸ್ಪಷ್ಟರೂಪದಿನಱಿದು ಭಗವದರ್ಹತ್ಸಮೀಪಕ್ಕೆ ಪೋಗಿ ಯುಗಪತ್ಸಕಳಪದಾರ್ಥ ಯಾಥಾರ್ಥ್ಯಾವಭಾಸಿಯಪ್ಪ ಕೇವಲಜ್ಞಾನದಿಂ ವಿಶೇಷನಿಶ್ಚಯಮಂ ಮಾಡುವೆನೆಂದು ಸಕಳಪ್ರಾಭಾತಿಕಕ್ರಿಯೆಯಂ ನಿರ್ವರ್ತಿಸಿ ಮಕುಟಬದ್ಧಪರಿವೃತನಾಗಿ ಬಂದು ಕೈಳಾಸಗಿರೀಂದ್ರಸ್ಥಿತ ಮಬಸ್ಸೃತಿಯಂ ಸಂಸೃತಿಲತಾವಿಚ್ಛೇದಿಯಂ ಪೊಕ್ಕು ಗಂಧಕುಟಿಯಂ ಮೂಱುಸೂೞಲವಂದು

(ಮುಕ್ತರಾಗಿದ್ದಾರೆ)". ೨೦. ಹೀಗೆ ನಾಭಿಪೌತ್ರನಾದ ಭರತನು ಅವರಿಗೆ ಉಪದೇಶಿಸಿ ತನ್ನ ಉಪದೇಶದಂತೆ ತಾನೂ ಆನಂದದಿಂದ ನಡೆದನು. ದಾನವನ್ನು ಮಾಡುವ ಒಂದು ಹಿರಿಮೆಯನ್ನು ಪ್ರಕಟಿಸಿದನು. ೨೧. ಪರಮಬ್ರಹ್ಮನ ದೇಹದಲ್ಲೊಗೆದ ದ್ವಿಜಶ್ರೇಷ್ಠರು ವರ್ಣೋತ್ತಮರು, ಲೋಕಪೂಜ್ಯರು ಮತ್ತು ಭೂಮಿಯಲ್ಲಿ ವಂದಿತರು, ಉನ್ನತಗುಣರು, ಚಾರಿತ್ರಶುದ್ಧರು. ಇವರೇ ಧರಾಮರರು. ಇವರೇ ಬ್ರಾಹ್ಮಣರು ಎಂದು ಷಟ್ಖಂಡ ಭೂಮಂಡಲೇಶ್ವರನಾದ ಭರತೇಶ್ವರನು ಅವರನ್ನು ಹೊಗಳಿದನು. ತತ್ಫಲವಾಗಿ ದ್ವಿಜನ್ಮವಂಶವು ಎಲ್ಲೆಡೆಗಳಲ್ಲಿ ಪ್ರಖ್ಯಾತಿಗೊಂಡಿತು. ವ॥ ಹಾಗೆ ಭರತೇಶ್ವರನು ಭರತಕ್ಷೇತ್ರದಲ್ಲಿ ತಾನೆ ಮಾಡಿದ ಕೊಂಡಾಟದಿಂದ ಪ್ರಸಿದ್ಧವಾದ ವಿಪ್ರಸಂತತಿಯು ಕೆಲವು ಕಾಲ ನಡೆಯಿತು. ಅಷ್ಟರಲ್ಲಿ ಒಂದು ದಿವಸ ಬೆಳಗಿನ ಜಾವದಲ್ಲಿ ವಿಸ್ಮಯಕಾರಗಳೂ ದೂರಾನಿಷ್ಟಫಲಕೂಚಕಗಳೂ ಆದ ಸ್ವಪ್ನಗಳನ್ನು ಕಂಡು ಭರತಚಕ್ರೇಶ್ವರನು ಬೆಚ್ಚಿ ಬಿದ್ದಿದ್ದನು. ಈಗ ನಾನು ಕಂಡೀ ಕನಸುಗಳು ಈ ಯುಗದ ಕೊನೆಯಲ್ಲಿ ಪ್ರಜೆಗಳಿಗೆ ವಿವಿಧೋಪಪ್ಲವ ಸೂಚಕಗಳೆಂದು ಭಾವಿಸಿದನು. ಭಗವದರ್ಹತ್ಸಮೀಪವನ್ನು ಸೇರಿ ಒಟ್ಟಿಗೆ ಎಲ್ಲ ಪದಾರ್ಥಗಳ ಯಥಾರ್ಥತೆಯನ್ನು ಕಾಣಿಸಿಕೊಡುವ ಕೇವಲಜ್ಞಾನದಿಂದ ವಿಶೇಷ ನಿಶ್ಚಯವನ್ನು ಮಾಡುವೆನೆಂದುಕೊಂಡನು. ಬಳಿಕ ಪ್ರಾತಃಕಾಲದ ವಿಧಿಗಳನ್ನು ನೆರವೇರಿಸಿ ಮಕುಟಬದ್ಧ ರಾಜಪರಿವೃತನಾಗಿ ಕೈಲಾಸ ಪರ್ವತದ ಬಳಿಗೆ ಹೋದನು. ಅಲ್ಲಿರುವ ಸಂಸಾರವೆಂಬ ಬಳ್ಳಿಯನ್ನು ಕಡಿಯಬಲ್ಲ ಸಮವಸರಣವನ್ನು ಹೊಕ್ಕನು. ಗಂಧಕುಟಿಗೆ

ದೇವದಾನವಗಂಧರ್ವವಿದ್ಯಾಧರಾಧ್ಯನಂ ವೃಷಭನಾಥನನರ್ಥಾನುಗತಾಷ್ಟೋತ್ತರಸಹಸ್ರನಾಮಾಂಕಿತ ಸ್ತುತಿಗಳಿಂ ಸ್ತುತಿಯಿಸಿ ದಿವ್ಯಾರ್ಚನೆಗಳಿಂದರ್ಚಿಸಿ ಗಣಧರಾದಿ ಯತಿಸಮಿತಿಗೆಱಗಿ ನಿಜೋಚಿತಸ್ಥಾನದೊಳ್ ಕುಳ್ಳಿರ್ದಾಗಳ್,

ಪರಿಣಾಮಶುದ್ಧಿ ದೊರೆಕೊಳೆ
ಪುರುಪರಮೇಶ್ವರಪದಾಬ್ಜಭಕ್ತಿಯ ಭರದಿಂ
ಭರತಂಗೆ ಶಾಸ್ತ್ರಲಕ್ಷಣ
ಪರಿಕಲಿತಂ ತೊಟ್ಟನವಧಿ ಪುಟ್ಟಿತ್ತಾಗಳ್ ೨೨

ವ॥ ಅಂತುತ್ಪನ್ನಾವಧಿಬೋಧಂ, ಧರ್ಮಾಮೃತಾಸ್ವಾದನಪರನಾಗಿ ಕಿಱಿದು ಪೊತ್ತನಿರ್ದು ನಿಜಮನೋಗತಕಾರ್ಯವಿಜ್ಞಾಪನಮುಖರಮುಖನಾಗಿ,

ಆದಿಬ್ರಹ್ಮನೆನಲ್ ಮೊದ
ಲಾದುದಱಿಂ ದೇವ ಮಾಟ್ಟಿ ನೀನಿರ್ದಂತಾ
ನಾದ ಮರುಳ್ತನದಿಂದು
ತ್ಪಾದಿಸಿದೆಂ ವ್ರತಸಮೇತವಿಪ್ರಾನ್ವಯಮಂ ೨೩

ಗುಣಭೂಮಿವಿಭಾಗದೊಳಾ
ದೆಣಿಕೆಯೊಳೊಂದಾದಿಯಾಗೆ ಪನ್ನೊಂದುವರಂ
ಗುಣವದ್ವ್ರತಚಿಹ್ನಂ ಗುಣ
ಮಣಿಭೂಷಣಸೂತ್ರಮಮರ್ದುದವರ್ಗೆನ್ನಿಂದಂ ೨೪

ಮೂರು ಬಾರಿ ಬಲವಂದನು. ದೇವ, ದಾನವ, ಗಂಧರ್ವ ಮತ್ತು ವಿದ್ಯಾಧರರಿಂದ ಸಂಸೇವ್ಯನಾದ ವೃಷಭನಾಥನನ್ನು ಒಂದು ಸಾವಿರದ ಎಂಟು ನಾಮಗಳಿಂದ ಸ್ತುತಿಸಿ, ದಿವ್ಯಾರ್ಚನೆಗಳಿಂದ ಅರ್ಚಿಸಿ, ಗಣಧರಾದಿ ಯತಿಸಮಿತಿಗೆರಗಿ, ತನಗೆ ಯೋಗ್ಯವಾದ ಸ್ಥಾನದಲ್ಲಿ ಕುಳಿತನು. ಆಗ, ೨೨. ಪುರುಪರಮೇಶ್ವರನ ಕಾಲ್ದಾವರೆಯ ಮೇಲಿನ ಭಕ್ತಿಭರದಿಂದಾಗಿ ಪರಿಣಾಮ ಶುದ್ಧಿಯು ದೊರೆಕೊಂಡಿತು. ಅದರಿಂದ ಭರತನಿಗೆ ಜಿನಶಾಸ್ತ್ರಲಕ್ಷಿತವಾದ ಅವಧಿಜ್ಞಾನವು ಹುಟ್ಟಿತು. ವ॥ ಹೀಗೆ ಅವಧಿಜ್ಞಾನವನ್ನು ಪಡೆದ ಭರತನು ಸ್ವಲ್ಪ ಕಾಲ ಧರ್ಮಾಮೃತವನ್ನು ಆಸ್ವಾದಿಸಿದನು. ಬಳಿಕ ತನ್ನ ಹೃದ್ಗತವಾದ ಕಾರ್ಯವನ್ನು ವಿಜ್ಞಾಪಿಸುವುದರಲ್ಲಿ ತ್ವರೆಯುಳ್ಳವನಾದನು. ೨೩. ಅತನು ವೃಷಭತೀರ್ಥಂಕರನನ್ನು ಕುರಿತು “ಆದಿಬ್ರಹ್ಮನಾಗಿ ಕರ್ತನಾದ ನೀನು ಇದ್ದಂತೆಯೆ ನಾನು (ಭರತ) ಮರುಳ್ತನದಿಂದ ವ್ರತಸಮೇತವಾದ ‘ವಿಪ್ರಾನ್ವಯ’ವನ್ನು ಉತ್ಪಾದಿಸಿದೆನು. ೨೪. ಹೇ ಗುಣಮಣಿಭೂಷಣ, ಗುಣಭೂಮಿ ವಿಭಾಗದಿಂದ ಒಂದರಿಂದ ಹನ್ನೊಂದರವರೆಗೆ ಗುಣದ ವ್ರತಗಳಿಗೆ ಚಿಹ್ನವಾದ ಬ್ರಹ್ಮಸೂತ್ರವು ಅವರಿಗೆ (ಬ್ರಾಹ್ಮಣರಿಗೆ)

ಇದಱೊಳ್ ಗುಣಮೋ ದೋಷಮೊ
ಪೊದಟ್ದು ನಿಂದಪುದಯುಕ್ತಮೋ ಯುಕ್ತಮೊ ಪೇ
ೞೆದು ಹಾನಿಯೊ ವೃದ್ಧಿಯೊ ತಾ
ನದಾವುದಂ ಪೊರ್ದಿ ನಿಲ್ಕುಮಘವಿಘಟಪಟೂ ೨೫

ವ॥ ಆದಲ್ಲದೆಯುಮಿಂದಿನ ದಿನಂ ಬೆಳಗಪ್ಪ ಜಾವದೊಳ್ ಪದಿನಾಱು ಕನಸುಗಳಂ ಕಂಡೆನಾ ಕನಸುಗಳನಿಷ್ಟಫಲಸೂಚಕಂಗಳೆಂಬುದಂ ಸಾಮಾನ್ಯದಿನುಪಲಕ್ಷಿಸಿದೆನವಱ ಫಲಮುಮನೆನಗಱಿಯೆ ಬೆಸಸಿಮೆಂದವಧಿಜ್ಞಾನದಿಂ ತಾನಾ ಕನಸುಗಳನಱಿವನಾಗಿಯುಂ ಸಭಾಜನಕ್ಕಮಱಿಪಲೆಂದು ಬೆಸಗೊಳ್ವುದುಂ ಪ್ರಶ್ನಾನುಕ್ರಮದಿಂ ತ್ರಿಲೋಕಗುರುವಿಂತೆಂದು ಬೆಸಸಿದಂ ನೀನಾ ದ್ವಿಜನ್ಮಜಾತಿಯಂ ಒಳ್ಳಿತು ಮಾಡಿದೆಯಾದೊಡಂ,

ಧರೆಯೊಳ್ ಧರ್ಮಾರ್ಥದಿಂ ನೀಂ ಸೃಜಿಯಿಸಿ ನೆಗಟ್ದೀವಿಪ್ರಸಂತಾನದೊಂದಾ
ಚರಣಂ ನೀನೆಂದ ಪಾಂಗಿಂ ಕೃತಯುಗದೊಳೆ ದಲ್ಸಲ್ಗುಮಿನ್ನತ್ತ ನಷ್ಟಾ
ಚರಣಂ ಸನ್ಮಾರ್ಗದೊಳ್ ಮಚ್ಚರಿಸಿ ಕಲಿಯುಗಾಭ್ಯರ್ಣದೊಳ್ ದ್ರವ್ಯಲೋಭಾ
ತುರರುನ್ಮಾರ್ಗೋಪದೇಶೋದ್ಯತಮತಿಗಳತಿಕ್ರೂರರಪ್ಪರ್ ದ್ವಿಜನ್ಮರ್ ೨೬

ಮಧುಮದ್ಯಮಾಂಸಲೋಲುಪ
ರಧಾರ್ಮಿಕರ್ ಪರವಧೂರತಿಪ್ರಿಯರಧಮರ್
ವಧನಿರತರ್ ಪಾಪಿಗಳನ್ನ
ತಧನರ್ ದ್ವಿಜರಿನ್ನರಪ್ಪರಾ ಕಲಿಯುಗದೊಳ್ ೨೭

ನನ್ನಿಂದೊದಗಿತು. ೨೫. ಪಾಪವಿಧ್ವಂಸನ ಸಮರ್ಥನೇ! ಇದರಲ್ಲಿ ಗುಣವುಂಟೋ ದೋಷವುಂಟೋ? ಇದು ಸರಿಯೋ ತಪ್ಪೋ? ಇದರಿಂದ ಹಾನಿಯೋ ಲಾಭವೋ? ಇದು ಯಾವುದನ್ನು ಆಶ್ರಯಿಸಿ ನಿಲ್ಲಬಲ್ಲುದು? ಹೇಳು. ವ॥ ಅಲ್ಲದೆ ಇಂದು ಬೆಳಗಿನ ಜಾವದಲ್ಲಿ ಹದಿನಾರು ಕನಸುಗಳನ್ನು ಕಂಡೆನು. ಅವು ಅನಿಷ್ಟಫಲಸೂಚಕಗಳೆಂಬುದು ಸಾಮಾನ್ಯವಾಗಿ ನನಗೆ ಗೊತ್ತು. ಅವನ್ನು ನನಗೆ ತಿಳಿಯುವಂತೆ ಹೇಳು" ಎಂದನು. ಅವಧಿಜ್ಞಾನದಿಂದ ಭರತನಿಗೆ ಫಲಗಳು ತಿಳಿದಿದ್ದರೂ ಸಭಾಜನರಿಗೆ ತಿಳಿಯಲೆಂದು ಹಾಗೆ ಕೇಳಿದನು. ತ್ರಿಲೋಕಗುರುವೆನಿಸಿದ ಪುರುಪರಮೇಶ್ವರನು ಅವನ್ನು ತಿಳಿದು, ಪ್ರಶ್ನಾನುಕ್ರಮದಿಂದ ಉತ್ತರಗೊಟ್ಟನು. "ನೀನಾ ದ್ವಿಜಾತಿಯನ್ನು ಹುಟ್ಟಿಸಿದುದು ಒಳ್ಳೆಯದೇ ಆಯಿತು. ಆದರೂ, ೨೬. ಧರ್ಮೋದ್ದೇಶದಿಂದ ನೀನು ನಿರ್ಮಿಸಿದ ವಿಪ್ರಸಂತತಿಯ ಆಚರಣೆಯು ನೀನೆಂದಂತೆ ಕೃತಯುಗದ ಪರ್ಯಂತವಾಗಿ ಈ ಭೂಮಿಯಲ್ಲಿ ಸರಿಯಾಗಿ ನಡೆಯುವುದು. ಕಲಿಯುಗದಲ್ಲದು ಸದಾಚರಣೆಗಳಿಂದ ಭ್ರಷ್ಟವಾಗುವುದು. ಸನ್ಮಾರ್ಗವನ್ನು ಮಚ್ಚರಿಸುತ್ತಾ ದ್ರವ್ಯಾಶೆಯಿಂದ ದ್ವಿಜರು ಉನ್ಮಾರ್ಗವನ್ನು ಉಪದೇಶಿಸುತ್ತಾ ಅತಿಕ್ರೂರವಾಗಿ ನಡೆದುಕೊಳ್ಳುವರು. ೨೭. ಕಲಿಯುಗದಲ್ಲಿ ದ್ವಿಜರು ಮಧು ಮದ್ಯ ಮಾಂಸಗಳನ್ನು ಸೇವಿಸುವರು, ಅಧರ್ಮಕಾರ್ಯಗಳಲ್ಲಿ ತೊಡಗುವರು, ಪರಸ್ತ್ರೀಯರಲ್ಲಿ ಆಸಕ್ತರಾಗುವರು, ಅಧಮರಾಗುವರು, ಕೊಲೆಗೈಯುವರು, ಪಾಪ-ಕಾರ್ಯಗಳಲ್ಲಿ ನಿರತರಾಗುವರು. ಸುಳ್ಳು

ವ॥ ಆದೊಡಮೀಗಳವರ್ ಸದಾಚಾರರಪ್ಪುದಱಿಂ ಅವರನಾ ಮಾೞ್ಕೆಯೊಳೆ ನಡೆಯಲೀವುದು ಮಾಡಿ ಕಿಡಿಸಿದೊಡೆ ನಿನಗೆ ಪಿರಿದುಂ ದೂಱಕ್ಕುಮೆಂದು ಪೇೞ್ದು ಮತ್ತಮಾತನ ಕಂಡ ಷೋಡಶ ಸ್ವಪ್ನಸೂಚಿತಫಲಂಗಳನಿಂತೆಂದು ಬೆಸಸಿದರ್,

ಭರತಮಹೀತಳಮನಳಂ
ಕರಿಸಿರ್ದಿರ್ಪತ್ತುಮೂಱು ಕೇಸರಿಗಳನಾ
ದರದಿಂ ಕಂಡುದಱಿಂದನಿ
ಬರೆ ತೀರ್ಥಕರರ್ಕಳಪ್ಪರವರ ವಿಹಾರಂ ೨೮

ಧರೆಯೊಳ್ ಸಲೆ ಪಾಷಂಡಿಗ
ಳಿರೆಬರ್ ಪುಟ್ಟಿಯುಮಡಂಗುವರ್ ಮತ್ತಂ ಕೇ
ಸರಿಗಳ ಬಳಸಿಯುಮನುಕೂ
ಲರೂಪದಾಡುವ ಮೃಗಂಗಳಂ ಕಂಡುದಱಿಂ ೨೯

ಪರಮಜಿನತೀರ್ಥದೊಳ್ ಪಲ
ಬರುಮಾಗಿಯುಮೇಂ ಕುಲಿಂಗಿಗಳ್ ವಿಕೃತಿಗಳಿಂ
ವಿರಹಿತರಪ್ಪರ್ ಮದಸಿಂ
ಧುರಭಾರಮನಾನಲಾಱದಳಿಪಿಂಬೆನ್ನಂ ೩೦

ನಳಿದಳಿದು ನಡೆವ ಹಯದಳಿ
ಯುಳವಂ ಕಂಡುದಱಿನಧಿಕಬಲಮುನಿಪಧೃತಾ
ತುಳಗುಣಭಾರಮನಾಂಪನಿ
ತಳವಿಲ್ಲದೆ ಕಿಡುವರಲ್ತೆ ದುಷ್ಷಮಯತಿಗಳ್ ೩೧

ಹೇಳುವರು. ವ॥ ಆದರೂ ಈಗ ದ್ವಿಜರಾದವರು ಸದಾಚಾರಸಂಪನ್ನರಾಗಿರುವುದರಿಂದ ಅವರನ್ನು ಅದೇ ರೀತಿಯಿಂದ ನಡೆಯಲೀಯಬೇಕು. ಹಾಗಲ್ಲದೆ ಈ ಪದ್ಧತಿಯನ್ನು ಕೆಡಿಸಿದರೆ ಹಿರಿದಾದೊಂದು ದೂರು ನಿನಗೆ ಸಂಘಟಿಸುವುದು" ಎಂದು ಹೇಳಿದನು. ಅಲ್ಲದೆ ಆತನು ಕಂಡ ಹದಿನಾರು ಸ್ವಪ್ನಗಳ ಫಲಗಳನ್ನು ಹೀಗೆ ಸೂಚಿಸಿದನು. ೨೮. "ಭರತಭೂಮಿಯನ್ನು ಅಲಂಕರಿಸಿದ ಇಪ್ಪತ್ತೂಮ್ರು ಸಿಂಹಗಳನ್ನು ಕನಸಿನಲ್ಲಿ ಕಂಡೆಯಾದ್ದರಿಂದ ಮುಂದೆ ಇಪ್ಪತ್ತೂಮ್ರು ಜನ ತೀರ್ಥಂಕರರು ಹುಟ್ಟುವರು. ಮತ್ತು ಅವರ ವಿಹಾರವು ೨೯. ಭೂಮಿಯಲ್ಲಿ ನಡೆಯುವುದು. ಕೆಲವರು ಪಾಷಂಡಿಗಳು ಹುಟ್ಟಿದರೂ ಹಾಗೆಯೇ ನಾಶವಾಗುವರು. ಮತ್ತು ಸಿಂಹಗಳ ಸುತ್ತಲೂ ಯಥೇಚ್ಛವಾಗಿ ತಿರುಗುವ ಮೃಗಗಳನ್ನು ಕಂಡದ್ದರಿಂದ ೩೦. ಜಿನಧರ್ಮಪ್ರಚಾರಕಾರ್ಯದಲ್ಲಿ ಹುಟ್ಟಿದರೂ ಕೆಲವು ಕುಲಿಂಗಿಗಳು ವಿಕಾರವಶರಾಗಿ ಧರ್ಮವಿರಹಿತರಾಗುವರು. ಮದ್ದಾನೆಯ ಭಾರವನ್ನು ಆನಲಾರದೆ ಬೆನ್ನನ್ನು ೩೧. ಬಾಗಿಸಿ ನಡೆವ ಕುದುರೆಯ ಹೀನಸ್ಥಿತಿಯನ್ನು ಕಂಡುದರಿಂದ ದುಃಷಮವೆಂಬ ಪಂಚಮಕಾಲದಲ್ಲಿ ಜನಿಸಿದ ಯತಿಗಳು ಬಲಾಧಿಕರಾದ ಮುನಿಪತಿಗಳು

ನೆರೆದೊಂದಿ ನಿಂದ ಶಾಕ್ವರ
ವರಯೂಥಮನವನಿನಾಥ ಕಂಡುದಱಿಂದೊ
ರ್ವರೆ ವಿಹರಿಪುದಂ ಬಸಟಂ
ಬರಾಂಬರರ್ ತಮ್ಮ ಸಮುದಯಂ ಬೆರಸಿರ್ಪರ್ ೩೨

ಮುಸುಕಿದ ಮುಗಿಲ್ಗಳಿಂದಣ
ಮೆಸೆಯದೆ ನಿಂದರ್ಕಬಿಂಬಮಂ ಕಂಡುದಱಿಂ
[ಎ][೧]ಸೆಯದು ದುಷ್ಷಮಕಾಲದೊ
ಳಸದೃಶಕೈವಲ್ಯಬೋಧದಿನಕರಬಿಂಬಂ ೩೩

ಕಳಿಕಾಂಕುರ ಕುಸುಮೋತ್ಕರ
ಫಳಪಲ್ಲವರಹಿತಮಹಿಜಮಂ ಕಂಡುದಱಿಂ
ದಳವಿಲ್ಲದ ನರನಾರೀ
ಕುಳಮನುಪಮ ಸತ್ಯಶೌಚವಿರಹಿತಮಕ್ಕುಂ ೩೪

ಹರಿತಾಂಕುರಪಲ್ಲವಪ
ತ್ರರಾಜಿಯಂ ಬಿಸುಟು ಶುಷ್ಕಪತ್ರಂಗಳನಾ
ದರದಿಂ ಮೇವಜಕುಳಮಂ
ದೊರೆಕೊಳೆ ನೀಂ ಸ್ವಪ್ನಕಾಲದೊಳ್ ಕಂಡುದಱಿಂ ೩೫

ಸಮಯಿಗಳುಂ ಚಾತುರ್ವ
ರ್ಣ್ಯಮುಮುಚಿತಚರಿತ್ರಮಂ ಬಿಸುಟ್ಟಾದಂ ಪೊ
ಲ್ಲಮೆಯೊಳ್ ಸಲೆ ನಡೆವರ್ ದು
ಷ್ಷಮಮೆಂಬಯ್ದನೆಯ ಕಾಲದೊಳ್ ಭರತನೃಪಾ ೩೬

ಧರಿಸಿದ ಗುಣಭಾರವನ್ನು ಹೊರುವ ಶಕ್ತಿಯಿಲ್ಲದೆ ಕೆಡುವರು. ೩೨. ರಾಜ, ಗುಂಪುಗುಂಪಾಗಿ ಸೇರಿದ ಎತ್ತುಗಳನ್ನು ನೀನು ಕಂಡುದರಿಂದ, ದಿಗಂಬರರು ಏಕಾಂಗಿಗಳಾಗಿ ವಿಹರಿಸುವುದನ್ನು ಬಿಟ್ಟು ಗುಂಪು ಗುಂಪಾಗಿ ಸಂಚರಿಸತೊಡಗುವರು. ೩೩. ಮೋಡಗಳಿಂದ ಕವಿದುಕೊಂಡು ಕಾಂತಿವಿಹೀನವಾಗಿದ್ದ ಸೂರ್ಯಬಿಂಬವನ್ನು ಕಂಡುದರಿಂದ, ದುಷ್ಷಮವೆಂಬ ಐದನೆಯ ಕಾಲದಲ್ಲಿ ಕೈವಲ್ಯಬೋಧವೆಂಬ ಸೂರ್ಯಬಿಂಬವು ಬೆಳಗದು, ೩೪. ಮೊಗ್ಗು, ಮೊಳಕೆ, ಹೂವು, ಹಣ್ಣು, ಚಿಗುರು-ಇವೊಂದೂ ಇಲ್ಲದ ಮರವನ್ನು ಕಂಡುದರಿಂದ ಸಾಮರ್ಥ್ಯರಹಿತವಾದ ಸ್ತ್ರೀಪುರುಷರು ಶ್ರೇಷ್ಠವೆನಿಸಿದ ಸತ್ಯಶೌಚಗಳಿಂದ ವಿರಹಿತರಾಗುವರು. ೩೫. ಹಸುರು ಮೊಳಕೆಗಳನ್ನೂ ಚಿಗುರುಗಳನ್ನೂ ಎಲೆಗಳ ಸಮೂಹವನ್ನೂ ತೊರೆದು ಒಣಗಿದೆಲೆಗಳನ್ನು ತಿನ್ನುತ್ತಿರುವ ಆಡುಗಳನ್ನು ಕನಸಿನಲ್ಲಿ ನೀನು ಕಂಡೆಯಾದ ಕಾರಣ, ೩೬. ಭರತನೇ! ಜೈನಸಿದ್ಧಾಂತವನ್ನರಿತವರೂ ಸಹ ಚಾತುರ್ವರ್ಣ್ಯಕ್ಕೆ ಉಚಿತವಾದ ಆಚಾರಗಳನ್ನು ಬಿಟ್ಟು ದುಷ್ಷಮವೆಂಬ ಐದನೆಯ ಕಾಲದಲ್ಲಿ ದುರಾಚಾರಗಳಲ್ಲಿ ತೊಡಗುವರು.

---

೧ ದೆ (ಅನ್ಯತ್ರ)

ಕರಿಪತಿಯನೇಱೆ ಕೋಡಗ
ಮಿರೆ ಕಂಡುದಱಿಂದಮಾದಿಭೂಪರ್ ಕಿಡೆ ಬೇ
ಡರುಮಕುಲೀನರುಮತಿದು
ಶ್ಚರಿತ್ರರುಂ ಭೂಪರಪ್ಪರನ್ಯಾಯಪರರ್ ೩೭

ಕಾಗೆಗಳಿಂದಂ ಬಳಸಿದ
ಗೂಗೆಗಳಂ ಕಂಡೆಯಪ್ಪ ಕಾರಣದಿಂ ಜೈ
ನಾಗಮವಿದರಂ ಸಾರದೆ
ಪೋಗಿ ಕುಲಿಂಗಿಗಳನೀ ಜನಂ ಸೇವಿಸುಗುಂ ೩೮

ಆಡುವ ಮರುಳ್ಗಳಂ ನಡೆ
ನೋಡಿದುದಱಿನಿಂತು ಕನಸಿನೊಳ್ ಮಕ್ಕಳ್ಗಂ
ಕೂಡೆ ಪೆಸರಿಟ್ಟು ಸಲೆ ಕೊಂ
ಡಾಡಿದಪರ್ ವ್ಯಂತರರ್ಕಳಂ ಜಡಮತಿಗಳ್ ೩೯

ಕಡೆವಿಡಿದು ಬಳಸಿ ನೀರಿರೆ
ನಡುಬತ್ತಿದ ಕೆಱೆಯನಿಂತು ಕಂಡುದಱಿಂದಂ
ನಡುನಾಡೊಳಱಂ ನೆಲಸದೆ
ಕಡೆಯೊಳ್ ನೆಲೆಗೊಳ್ಗುಮಿಲ್ಲಿ ಸಂದೆಯಮುಂಟೇ ೪೦

ಧೂಳೀಧೂಸರವರರ
ತ್ನಾಳಿಗಳಂ ಕಂಡ ದೂಸಱಿಂದಂ ಧರಣೀ
ಪಾಳಕಮುನಿಪರ್ ಪಂಚಮ
ಕಾಳದೊಳಣಮಾಗರಲ್ತೆ ಋದ್ಧಿಪ್ರಾಪ್ತರ್ ೪೧

೩೭. ಸಲಗವನ್ನೇರಿದ ಕಪಿಯನ್ನು ನೋಡಿದ ಕಾರಣ, ಪುರಾತನ ರಾಜವಂಶವು ನಾಶವಾಗಿ ಬೇಡರೂ ಅಕುಲೀನರೂ ದುಶ್ಚರಿತ್ರರೂ ರಾಜರಾಗುವರು. ಅವರು ಅನ್ಯಾಯಪರರಾಗುವರು. ೩೮. ಕಾಗೆಗಳಿಂದ ಬಳಸಲ್ಪಟ್ಟ ಗೂಬೆಗಳನ್ನು ಕಂಡ ಕಾರಣ ಜೈನಮುನಿಗಳನ್ನು ಬಿಟ್ಟು ಜನರು ಪಾಷಂಡಿಗಳನ್ನು ಸೇವಿಸುವರು. ೩೯. ಆಡುತ್ತಿರುವ ಪಿಶಾಚಗಳನ್ನು ಕನಸಿನಲ್ಲಿ ಕಂಡ ಕಾರಣ, ಜಡಬುದ್ಧಿಯುಳ್ಳ ಜನರು ಮಕ್ಕಳುಗಳಿಗೆ ವ್ಯಂತರ (ನೀಚ) ದೇವತೆಗಳ ಹೆಸರನ್ನಿಟ್ಟು ಅವರನ್ನು ಕೊಂಡಾಡುವರು. ೪೦. ಕೊನೆಯಲ್ಲಿ ಮಾತ್ರ ನೀರಿದ್ದು ಮಧ್ಯದಲ್ಲಿ ಬತ್ತಿದ ಕೆರೆಯನ್ನು ಕಂಡ ಕಾರಣ, ನಡುನಾಡಿನಲ್ಲಿ ಧರ್ಮವು ಚ್ಯುತಿಹೊಂದಿ ಕಡೆಯಲ್ಲಿ (ಸೀಮಾಪ್ರಾಂತಗಳಲ್ಲಿ) ಮಾತ್ರ ನೆಲಸಿರುವುದು. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ೪೧. ಧೂಳಿಗಳಿಂದ ವ್ಯಾಪ್ತವಾದ ರತ್ನಗಳ ಸಮೂಹವನ್ನು ಕಂಡುದರಿಂದ ಅವನಿಪಾಲಕರೂ ಮುನಿಪತಿಗಳೂ ಪಂಚಮ ಕಾಲದಲ್ಲಿ (ಮುಂದಿನ ದುಷ್ಷಮ ಕಾಲದಲ್ಲಿ) ತಪೋಮಹಿಮೆಯುಳ್ಳವರಾಗರು.

ಕೊರಲೊಳ್ ಕಟ್ಟಿದ ಮಾಲೆಯ
ಸಿರಿಖಂಡದ ತಕ್ಕುವೆರಸು ಬಿಡುನಾಯ್ವೆಸೆದಾ
ದರದಿಂದನರ್ಘ್ಯಮಣಿವಿ
ಷ್ಟರದೊಳ್ ಕುಳ್ಳಿರ್ದು ಸರುಗನುಣೆ ಕಂಡುದಱಿಂ ೪೨

ವ್ರತಹೀನರ್ ಸನ್ಮಾರ್ಗ
ಪ್ರತಿಕೂಲರ್ ವ್ಯಸನವಶಗತರ್ ಪಾಪಿಗಳಿಂ
ತತಿಕಷ್ಟರಪ್ಪರವನಿಯೊ
ಳತಿಥಿಗಳಿನ್ನನ್ನದಾನಮಂ ಕುಡುವೆಡೆಯೊಳ್ ೪೩

ತರುಣವೃಷಂ ಕೆಲೆದು ತೊಳ
ಲ್ತರೆ ಕಂಡುದಱಿಂದೆ ಜೈನದೀಕ್ಷೆಗೆ ಮೆಯ್ಯಂ
ತರುಣಜನಂಗಳೆ ತರ್ಪರ್
ಪರಿಣತವಯಸರ್ಕಳಪ್ಪವರ್ ಮೆಯ್ವಾರರ್ ೪೪

ಪರಿವೇಷಂಗೊಂಡ ನಿಶಾ
ಕರನಂ ಕಂಡುದಱಿನಂದು ಮುನಿನಿಕರಕ್ಕಾ
ದರದವಧಿಮನಃಪರ್ಯಯ
ಮೆರಡುಮಣಂ ಪುಟ್ಟವೆಂದು ನಂಬು ನರೇಂದ್ರಾ ೪೫

ಪುದಿದ ತಱಗೆಲೆಗಳಂ ಕಂ
ಡುದಱಿಂದಂ ಧಾನ್ಯಸಮಿತಿ ನೀರಸಮಕ್ಕುಂ
ತುದಿಯೊಳ್ ಮನುಜಪ್ರತತಿಗ
ಮದೆ ದಲ್ ಭೋಗೋಪಭೋಗಕಾರಣಮಕ್ಕುಂ ೪೬

೪೨. ಕೊರಳಲ್ಲಿ ಮಾಲೆಯನ್ನು ಕಟ್ಟಿಕೊಂಡು, ಶ್ರೀಗಂಧದ ಲೇಪನವನ್ನು ಪಡೆದ ನಿಂದ್ಯವಾದ ನಾಯಿಯು ಶ್ರೇಷ್ಠವೂ ಮಣಿಮಯವೂ ಆದ ಆಸನದಲ್ಲಿ ಕುಳಿತುಕೊಂಡು ಚರುವನ್ನು ತಿನ್ನುವುದನ್ನು ಕಂಡುದರಿಂದ, ೪೩. ಅತಿಥಿಗಳಿಗೆ ಅನ್ನದಾನವನ್ನು ಮಾಡುವೆಡೆಯಲ್ಲಿ ವ್ರತಹೀನರೂ, ಸನ್ಮಾರ್ಗಚ್ಯುತರೂ ವ್ಯಸನಕ್ಕೆ ತುತ್ತಾದವರೂ ಪಾಪಿಗಳೂ ಕ್ಲೇಶಕ್ಕೆ ಸಿಕ್ಕಿದವರೂ ಆದ ಜನರು ಲೋಕದಲ್ಲಿ ಅತಿಥಿಗಳಾಗುತ್ತಾರೆ. ೪೪. ಯೌವನಕ್ಕೆ ಬಂದ ಹೋರಿಯು ಗುಟುರು ಹಾಕುತ್ತ ಸಂಚರಿಸುತ್ತಿರುವುದನ್ನು ಕಂಡುದರಿಂದ ತರುಣ ಜನರು ಜೈನದೀಕ್ಷೆಗೆ ಮೈಯನ್ನೊಡ್ಡುವರೆ ಹೊರತು ಪರಿಣತವಯಸ್ಕರೊಡ್ಡರು. ೪೫. ಪರಿವೇಷಯುಕ್ತನಾದ ಚಂದ್ರನನ್ನು ಕಂಡುದರಿಂದ ಮುನಿಗಳ ತಂಡಕ್ಕೆ ಆಗ ಅವಧಿ ಜ್ಞಾನವೂ ಮನಃಪರ್ಯಯಜ್ಞಾನವೂ ಹುಟ್ಟುವುದಿಲ್ಲವೆಂಬುದನ್ನರಿ. ಎಲೆ ನರೇಂದ್ರ, ೪೬. ಹರಡಿದ ತರಗೆಲೆಗಳನ್ನು ಕಂಡ ಕಾರಣ ಧಾನ್ಯಸಮೂಹವು ನೀರಸಗೊಳ್ಳುವುದು. ಕೊನೆಯಲ್ಲಿ ತರಗೆಲೆಯೇ ಜನರ ಭೋಗೋಪಭೋಗಗಳಿಗೂ ಕಾರಣವಾಗುವುದು.

ಇವು ದೂರಫಲಂಗಳ್ ಸ್ವ
ಪ್ನವಿಶೇಷಂಗಳ್ ತನೂಜ ಕೊಕ್ಕರಿಸದಿರಿ
ನ್ನಿವಱಿಂದೆಗೆ ನಿನಗೆ ಸಲೆ ಮಾ
ಟ್ಕೆ ವಿಶ್ವವಿಘ್ನೋಪಶಾಂತಿಯಂ ಜಿನಧರ್ಮಂ ೪೭

ವ|| ಎಂಬುದುಂ ಭರತೇಶ್ವರಂ ಪ್ರಸನ್ನಮನನಾಗಿ ವೃಷಭಸೇನಾದ್ಯನುಪಮಪರ್ಯಂತಗಣಧರದೇವಚರಿತ್ರಾಕರ್ಣನಮನೆ ತನಗೆ ಕರ್ಣಪೂರಂ ಮಾಡಿ ಭಗವತ್ಸಿಂಹಾಸನರತ್ನರಶ್ಮಿಚ್ಛಟಾತಿಪೂತಭೂತಳಕ್ಕೆ

ಕುಸುಮೋಪಹಾರಮೆಸೆವಂ
ತೆಸೆದಿನಸಮಾನಮಾನ್ಯಮೌಳಿಶೇಖರವಿಗಳ
ತ್ಕುಸುಮೋತ್ಕರಮರ್ಘ್ಯಯಶಃ
ಕುಸುಮಿತದಿಗ್ಲತಿಕನೆಱಗಿದಂ ಭರತೇಶಂ ೪೮

ವ|| ಅಂತು ಪುರುಪರಮೇಶ್ವರಂಗೆಱಗಿ ಬಂದಯೋಧ್ಯಾಪುರಮಂ ಪೊಕ್ಕು ದುಸ್ಸ್ವಪ್ನದರ್ಶನಶಮನಾರ್ಥಮಾಗಿ ಕಲ್ಪವೃಕ್ಷ[ಮಹಾಮಹ][1] ಪುರಸ್ಸರಂ ಭಗವದರ್ಹದಭಿಷೇಕಮುನಿಪೂಜನಸತ್ಪಾತ್ರದಾನಬಂಧುಪ್ರೀಣನ ಮಹಾದಾನವಿತರಣ ಗೋದೋಹಪ್ಲಾವನೀತಳಸಂತರ್ಪಣಾದಿ ಶಾಂತಿಕಕ್ರಿಯೆಗಳಂ ನೆಗಳ್ದು

೪೭. ಈ ಸ್ವಪ್ನ ವಿಶೇಷಗಳು ಬಹು ನಿಧಾನವಾಗಿ ಫಲಕೊಡತಕ್ಕುವು. ಎಲೆ ಮಗನೆ! ಅವುಗಳಿಗಾಗಿ ನೀನು ಜುಗುಪ್ಸೆಪಡಬೇಡ. ನಿನಗೆ ಜಿನಧರ್ಮವು ಸಮಸ್ತ ವಿಘ್ನಗಳ ಉಪಶಾಂತಿಯನ್ನುಂಟುಮಾಡಲಿ!" ವ|| ಎಂದು ಹೇಳಲು ಭರತೇಶ್ವರನು ಪ್ರಸನ್ನಚಿತ್ತನಾಗಿ ವೃಷಭಸೇನನೇ ಮೊದಲಾಗಿ ಅನುಪಮ ಪರ್ಯಂತರಾದ ಗಣಧರದೇವರ ಚರಿತ್ರೆಯನ್ನು ಕರ್ಣಪೂರವನ್ನಾಗಿ ಮಾಡಿಕೊಂಡು (ಅವರ ಚರಿತ್ರೆಯನ್ನು ಕೇಳಿ), ಭಗವತ್ಸಿಂಹಾಸನದ ರತ್ನಗಳ ಕಾಂತಿಗಳಿಂದ ಪವಿತ್ರವಾದ ಭೂತಲಕ್ಕೆ ೪೮. ಸಂಮಾನ್ಯವಾದ ಯಶಸ್ಸಿನಿಂದ ದಿಗ್ವಲ್ಲಿಗಳನ್ನು ಕುಸುಮಿತವಾಗಿ ಮಾಡಿದ ಭರತೇಶನು ವಂದಿಸಿದನು. ಆಗ ಆತನ ಅಸದೃಶವೂ ಬಾಗಿದುದೂ ಆದ ಶಿರಸ್ಸಿನ ಅಲಂಕಾರದಿಂದ ಉದುರಿದ ಪುಷ್ಪರಾಶಿಯು ವೃಷಭನಾಥನ ಪದತಳದಲ್ಲಿ ಪುಷ್ಪೋಪಹಾರದಂತೆ ಶೋಭಿಸಿತು. ವ|| ಅಂತು ಪುರುಪರಮೇಶ್ವರನಿಗೆ ಭಕ್ತಿಯಿಂದೆರಗಿ ಅಯೋಧ್ಯಾಪುರವನ್ನು ಹೊಕ್ಕನು. ದುಸ್ಸ್ವಪ್ನ ದರ್ಶನದ ದುಷ್ಟಫಲ ನಿವಾರಣಾರ್ಥವಾಗಿ ಕಲ್ಪವೃಕ್ಷವೆಂಬ ಮಹಾಪೂಜಾಪುರಃಸರವಾಗಿ ಅರ್ಹಂತನಿಗೆ ಅಭಿಷೇಕವನ್ನೂ ಮುನಿಪೂಜೆಯನ್ನೂ ಬಂಧುಜನಪ್ರೀಣನವನ್ನೂ,

---

೧ ಮಹಾಮಹಿಮಾ (ಅನ್ಯತ್ರ) ನೋಡಿ (ಪೂ. ಪು. ೪೧-೧೦೮)

ವಿವಿಧದ್ವೀಪಂಗಳೊಳ್ ಮಂದರಗಿರಿತಟದೊಳ್ ಜ್ಯೋತಿರಾವಾಸದೊಳ್ ದೇ
ವವಿಮಾನಾನೀಕದೊಳ್ ಶೋಭಿಸುವ ಜಿನಗೃಹವ್ರಾತಮಂ ಗೆಲ್ದು ರತ್ನ
ಚ್ಛವಿಯಿಂ ದಿಗ್ಭಿತ್ತಿಯಂ ಚಿತ್ರಿಸುವ ಜಿನನಿಕೇತಂಗಳಂ ಮಾಡಿಸುತ್ತುಂ
ದಿವಿಜೇಂದ್ರಸ್ತುತ್ಯನಾದಂ ಸುಕವಿಜನಮನೋಮಾನಸೋತ್ತಂಸಹಂಸಂ ೪೯

ವ॥ ಅಂತಯೋಧ್ಯಾಪುರೋಪಾಂತಕಾಂತಪ್ರದೇಶಂಗಳೊಳಂ ಕೈಲಾಸೋದಗ್ರಕೂಟಂಗಳೊಳಂ ಷಟ್ಖಂಡಮಂಡಳಪ್ರಸಿದ್ಧರಾಜಧಾನಿಗಳೊಳಂ,

ದೆಸೆಗಳ್ ಪೆರ್ಚದೆ ಮೊಟ್ಟನಾದುವಗಲಕ್ಕೆಂಬನ್ನೆಗಂ ನೀಳಮಾ
ಗಸದೊಳ್ ಕಾಳಸೆಗೊಂಡುದೆಂಬಿನೆಗಮದ್ರೀಂದ್ರಂಗಳಂ ತಂದು ಕೀ
ಲಿಸಿದಂ ನಿಶ್ಚಳಮಪ್ಪಿನಂ ವಸುಧೆಗಾಕಲ್ಪಾಂತಮೆಂಬಂತು ಮಾ
ಡಿಸಿದಂ ಜೈನಗೃಹಂಗಳಂ ಪಲವುಮಂ ಸಂಸಾರಸಾರೋದಯಂ ೫೦

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾ
ಪ್ರಸರಪ್ರಸಾದೋದೀರ್ಣಸೂಕ್ತಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಉಪಾಸಕಾಧ್ಯಯನವರ್ಣನಂ ನಾಮ
ಪಂಚದಶಾಶ್ವಾಸಂ

ಮಹಾದಾನವಿತರಣ ವನ್ನೂ ಮತ್ತು ಗೋಕ್ಷೀರದಿಂದ ಭೂಮಿಯನ್ನು ನೆನೆಸುವುದೇ ಮುಂತಾದ ಶಾಂತಿಕ ಕ್ರಿಯೆಗಳನ್ನೂ ನಡೆಯಿಸಿದನು. ೪೯. ವಿವಿಧ ದ್ವೀಪಗಳಲ್ಲಿಯೂ ಮಂದರಗಿರಿಯ ತಟದಲ್ಲಿಯೂ ಜ್ಯೋತಿರಾವಾಸದಲ್ಲಿಯೂ ದೇವವಿಮಾನಾನೀಕದಲ್ಲಿಯೂ ಶೋಭಿಸುತ್ತಿರುವ ಜಿನಗೃಹಸಮೂಹವನ್ನು ಮೀರಿಸುವಂತೆ ದಿಗ್ಭಿತ್ತಿಯನ್ನು ರತ್ನಕಾಂತಿಯುಕ್ತವನ್ನಾಗಿ ಚಿತ್ರಿಸುವ ಜಿನಾಲಯಗಳನ್ನು ನಿರ್ಮಿಸಿದನು. ಹೀಗೆ ಸುಕವಿಜಮನೋಮಾನಸೋತ್ತಂಸಹಂಸನಾದ ಭರತನು ದಿವಿಜೇಂದ್ರನಿಂದ ಸ್ತುತ್ಯನಾದನು. ವ॥ ಹಾಗೆ ಅಯೋಧ್ಯೆಯ ಹೊರಭಾಗದ ಸುಂದರ ಪ್ರದೇಶಗಳಲ್ಲಿಯೂ ಕೈಲಾಸ ಪರ್ವತದ ಶಿಖರಗಳ ಮೇಲೂ ಷಟ್ಖಂಡಮಂಡಲದ ಪ್ರಸಿದ್ಧವಾದ ರಾಜಧಾನಿಗಳಲ್ಲಿಯೂ ೫೦. ಸಂಸಾರಸಾರೋದಯನಾದ ಭರತ ಚಕ್ರವರ್ತಿಯು (ಎಲ್ಲ ದಿಕ್ಕುಗಳಲ್ಲಿ ಉನ್ನತವೂ ಬೃಹದಾಕಾರವೂ ಆದ) ಜಿನಾಲಯಗಳನ್ನು ನಿರ್ಮಿಸಿದನು. ಅವುಗಳಿಂದಾಗಿ ದಿಕ್ಕುಗಳ ಅಗಲವು ಹೆಚ್ಚದೆ ಅಷ್ಟಕ್ಕೇ ಮಟ್ಟವಾದುವು. ಆಕಾಶದಲ್ಲಿ ಕಪ್ಪುಬಣ್ಣವು ಗಾಢವಾಗಿ ಬೆಸುಗೆಗೊಂಡಂತೆಯೂ ಭೂಮಿಯು ನಿಶ್ಚಲವಾಗಿ ನಿಲ್ಲಲೆಂದು ಪರ್ವತಗಳನ್ನು ತಂದು ಕೀಲಿಸಿದಂತೆಯೂ ಕಾಣುತ್ತಿತ್ತು.

ಇಂತು ಉಪಾಸಕಾಧ್ಯಯನವರ್ಣನೆ ಎಂಬ
ಹದಿನೈದನೆಯ ಆಶ್ವಾಸ ಮುಗಿಯಿತು.

# ಷೋಡಶಾಶ್ವಾಸಂ

ಶ್ರೀರಮಣೀನಿಳಯಜಿನಾ
ಗಾರಂಗಳ್ ತನ್ನ ಜಸದವೊಲ್ ವಸುಧೆಗಳಂ
ಕಾರಂಗಳಾಗೆ ಪೂರ್ಣಮ
ನೋರಥನಾದಂ ಸರಸ್ವತೀಮಣಿಹಾರಂ ೧

ವ॥ ಅಂತು ತನ್ನ ಮಾಡಿಸಿದ ಚೈತ್ಯಾಲಯಂಗಳೊಳ್ ಆದಿಭಟ್ಟಾರಕಾದಿಯಾಗೆ ಭವಿಷ್ಯತ್ತೀರ್ಥಕರ ಪ್ರತಿಕೃತಿಗಳಂ ಪಂಚರತ್ನಮಯಂಗಳಂ ಮಾಡಿಸಿ ಮಾಣಿಕ್ಯದೇವರೆಂದು ಕೊಂಡಾಡಿ ತತ್ಪೂಜಾಕರಣಪುಣ್ಯವಾಸರಂಗಳೊಳ್ ಉಪವಾಸನಿರತನಪರಿಮಿತಾಜ್ಯಕ್ಷೀರದಧಿನಾಳಿಕೇರಸಹಕಾರ ಪೂಗೀಫಲ ಪುಂಡ್ರೇಕ್ಷುರಸಂಗಳಿಂದಂ ಗೋಶೀರ್ಷಚಂದನಕರ್ಪೂರಪರಿಮಳಸುರಭಿಗಂಧೋದಕಗಳಿಂದ ಮಭಿಷೇಕಂಗೆಯ್ದು,

ಫಳದೊಳ್ ದೇವೇಂದ್ರನುದ್ಯಾನದ ವಿವಿಧಫಲಂ ಪೂಗಳೊಳ್ ಕಲ್ಪವೃಕ್ಷಂ
ಗಳ ಪೂಗಳ್ ದೀಪದೊಳ್ ಪನ್ನಗಪತಿಯ ಫಣಾರತ್ನದೀಪಂ ವಿತಾನಾ
ವಳಿಯೊಳ್ ದಿವ್ಯಂ ವಿತಾನಂ ತುಱುಗಿದುವಮರೇಂದ್ರಾರ್ಚನಕ್ಕಿಂತಿದೊಂದ
ಗ್ಗಳಮೆಂಬಂತಾಗೆ ದಿವ್ಯಾರ್ಚನೆಯೊಳ ಮೆಱೆದಂ ಭಕ್ತಿಯಂ ಚಕ್ರನಾಥಂ ೨

ವ॥ ಅಂತರ್ಚಿಸಿ ನಿರ್ಭರಪ್ರಣಾಮಾಂಜಲಿಪ್ರಣಯೀಕೃತೋತ್ತಮಾಂಗನಾಗಿ,

೧. ಶ್ರೀವನಿತೆಯ ಆವಾಸಸ್ಥಾನವಾದ ಜಿನಾಲಯಗಳು ಭರತನ ಕೀರ್ತಿಯಂತೆ ವಸುಧೆಗೆ ಅಲಂಕಾರಗಳಾಗಲು, ಸರಸ್ವತೀಮಣಿಹಾರನಾದ ಭರತನು ಪೂರ್ಣಮನೋರಥನಾದನು. ವ॥ ತಾನು ನಿರ್ಮಿಸಿದ ಆ ಚೈತ್ಯಾಲಯಗಳಲ್ಲಿ ಆದಿಭಟ್ಟಾರಕರಿಂದ ಆರಂಭಿಸಿ ಭವಿಷ್ಯತ್ತೀರ್ಥಂಕರರ ಪ್ರತಿಮೆಗಳನ್ನು ಪಂಚರತ್ನಗಳಿಂದ ಮಾಡಿಸಿ ಮಾಣಿಕ್ಯದೇವರೆಂದು ಅವನ್ನು ಕೊಂಡಾಡಿದನು. ಅವುಗಳ ಪೂಜೆಗಳನ್ನು ಸಲ್ಲಿಸಬಹುದಾದ ಪುಣ್ಯದಿನಗಳಲ್ಲಿ ಉಪವಾಸನಿರತನಾಗಿ, ಅಧಿಕವಾದ ತುಪ್ಪ, ಹಾಲು, ಮೊಸರು, ಎಳನೀರು, ಮಾವು, ಅಡಕೆಕಾಯಿ ಮತ್ತು ಕಬ್ಬಿನರಸ ಇವುಗಳಿಂದಲೂ ಗೋಶೀರ್ಷ (ಒಂದು ಸುಗಂಧದ್ರವ್ಯ), ಚಂದನ, ಕರ್ಪೂರ ಮುಂತಾದ ಸುವಾಸನಾಭೂಯಿಷ್ಠವಾದ ಗಂಧೋದಕಗಳಿಂದಲೂ ಅವುಗಳಿಗೆ ಅಭಿಷೇಕಮಾಡಿದನು. ೨. ಫಲಗಳಲ್ಲಿ ದೇವೇಂದ್ರನ ಉದ್ಯಾನದಲ್ಲಿರುವ ವಿವಿಧ ಫಲಗಳಿಂದಲೂ ಹೂವುಗಳ ಮಧ್ಯದಲ್ಲಿ ಕಲ್ಪವೃಕ್ಷದ ಹೂವುಗಳಿಂದಲೂ ದೀಪಗಳ ಮಧ್ಯದಲ್ಲಿ ಆದಿಶೇಷನ ಹೆಡೆಗಳಲ್ಲಿನ ರತ್ನದೀಪಗಳಿಂದಲೂ, ಮೇಲ್ಕಟ್ಟುಗಳ ಮಧ್ಯದಲ್ಲಿ ದಿವ್ಯವಾದ ಮೇಲ್ಕಟ್ಟುಗಳಿಂದಲೂ ಕೂಡಿದ ದಿವ್ಯಾರ್ಚನೆಯಲ್ಲಿ ದೇವೇಂದ್ರನ ಅರ್ಚನೆಗಿಂತಲೂ ಮಿಗಿಲೆಂಬಂತೆ ನಡೆದು ಭರತೇಶ್ವರನು (ಜಿನೇಶ್ವರರಲ್ಲಿ) ತನಗಿದ್ದ ಭಕ್ತಿಯನ್ನು ಮೆರೆಸಿದನು. ವ॥ ಅಂತು ಅರ್ಚಿಸಿ ತನ್ನ ತಲೆಯ ಮೇಲೆ ಎರಡೂ ಕೈಗಳನ್ನು ಜೋಡಿಸಿಟ್ಟುಕೊಂಡು ಸ್ತೋತ್ರ ಮಾಡಿದನು.

ಕಮಳಾಳಂಕೃತಮಪ್ಪ ಹೇಮಕಮಳಂ ಮಾಣಿಕ್ಯಭಟ್ಟಾರಕ
ದ್ಯುಮಣಿಜ್ಯೋತಿಯಿನೊಯ್ಯನುಳ್ಳಲರ್ದವೊಲ್ ಚೆಲ್ವೆಂಬಿನಂ ಭವ್ಯಹೃ
ತ್ಕಮಳಕ್ಕಂ ಮುದಮಂ ಜಪಾಪ್ರಸವರಕ್ತಾಶೋಕಬಂಧೂಕಶೋ
ಣಮಣಿದ್ಯೋತಿಗಳೆಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ ೩

ಕಣಿ ರತ್ನತ್ರಿತಯಕ್ಕಿದೇಂ ಪಿರಿದೆನಲ್ ರತ್ನಾಕರಂ ರತ್ನತೋ
ರಣ ರತ್ನಾಸನ ರತ್ನವಿಭ್ರಮಣ ರತ್ನಾಶೋಕ ರತ್ನಪ್ರಭಾ
ಮಣಿ ರತ್ನಾತಪವಾರಣತ್ರಿತಯದಿಂ ತ್ರೈಲೋಕ್ಯಸಾಮ್ರಾಜ್ಯಭೂ
ಷಣಮಾಣಿಕ್ಯಜಿನೇಂದ್ರಬಿಂಬಮೆ ಜಯಂ ಭದ್ರಂ ಶುಭಂ ಮಂಗಳಂ ೪

ಪರಿಪೂರ್ಣೋಜ್ವಲಚಂದ್ರಬಿಂಬರುಚಿಯಿಂ ಚಂದ್ರಪ್ರಭಂ ಪುಷ್ಪದಂ
ತರೆನಲ್ ಗಾರುಡನೀಲಶೋಣಮಣಿಹೇಮಚ್ಛಾಯೆಯಿಂದಿರ್ಪತ್ತಿ
ರ್ವರೆನಲ್ ಸಂದೊಡಮೇಕರೂಪಮೆ ಜಗಕ್ಕಾಶ್ಚರ್ಯಮಂ ಪುಟ್ಟಿಸು
ತ್ತಿರೆ ಮಾಣಿಕ್ಯಜಿನೇಂದ್ರಬಿಂಬಮೆ ಜಯಂ ಭದ್ರಂ ಶುಭಂ ಮಂಗಳಂ ೫

ಸ್ಫುರಿತೋದ್ಯತ್ಕನಕಪ್ರಭಾಪ್ರಸರದಿಂ ಪೀತಾಂಬರಂ ಪದ್ಮವಿ
ಷ್ಟರದಿಂ ಪಂಕಜವಿಷ್ಟರಂ ನತವಿನೇಯವ್ರಾತಚೇತಸ್ತಮೋ
ಹರನಾಗಿರ್ದುದಜಿಂ ಹರಂ ಭವಹರಂ ಮಾಣಿಕ್ಯದೇವಂ ವಸುಂ
ಧರೆಗಿಂತೊರ್ಬನೆ ದೇವನಾಗಿರೆ ಜಯಂ ಭದ್ರಂ ಶುಭಂ ಮಂಗಳಂ ೬

ಅವನ ಪ್ರಣಾಮಾಂಜಲಿಯು, ೩. ಮಾಣಿಕ್ಯಭಟ್ಟಾರಕರೆಂಬ ಸೂರ್ಯನ ಕಾಂತಿಯಿಂದ ಲಕ್ಷ್ಮೀವಿಭೂಷಿತವಾದ ಹೇಮಕಮಲವು ಅರಳಿ ಚೆಲ್ವಾದಂತೆ ಕಂಡಿತು. ಭವ್ಯಜನರ ಹೃತ್ಕಮಲಕ್ಕೆ ಜಪಾಕುಸುಮ, ರಕ್ತಾಶೋಕ, ಬಂಧೂಕ ಮತ್ತು ಶೋಣಮಣಿಗಳಂತೆ ಬೆಳಗುವ ಭಟ್ಟಾರಕರು ಮೇಲೆ ಮೇಲೆ ಸಂತೋಷವನ್ನು ಕೊಡಲಿ. ಜಯವೂ ಭದ್ರವೂ ಮಂಗಳವೂ ಶುಭವೂ ಉಂಟಾಗಲಿ. ೪. "ಜಿನೇಂದ್ರಬಿಂಬವು ರತ್ನತ್ರಯಕ್ಕೆ ಆಕರ, ರತ್ನಾಕರನಾದ ಸಮುದ್ರನು ಇದಕ್ಕಿಂತ ಅಧಿಕವೆ? ಎಂಬಂತೆ ರತ್ನತೋರಣ, ರತ್ನಾಸನ, ರತ್ನವಿಭ್ರಮಣ, ರತ್ನಾಶೋಕ, ರತ್ನಪ್ರಭಾಮಣಿ, ರತ್ನಚ್ಛತ್ರತ್ರಯಗಳಿಂದ ವಿರಾಜಿಸತಕ್ಕ ತ್ರೈಲೋಕ್ಯಸಾಮ್ರಾಜ್ಯಭೂಷಣವಾದ ಮಾಣಿಕ್ಯಜಿನೇಂದ್ರಬಿಂಬವೆ! ಜಯವಾಗಲಿ ಭದ್ರ ಶುಭ ಮಂಗಳಗಳಾಗಲಿ! ೫. ಪೂರ್ಣವೂ ಉಜ್ವಲವೂ ಆದ ಚಂದ್ರಬಿಂಬದ ಕಾಂತಿಯಿಂದ ಚಂದ್ರಪ್ರಭನೂ ಪುಷ್ಪದಂತನೂ (ಸುವಿಧಿನಾಥ) ಪ್ರಸಿದ್ಧರಾಗಿಯೂ ಗಾರುಡ, ನೀಲ, ಶೋಣಮಣಿ, ಸುವರ್ಣಚ್ಛಾಯೆಗಳಿಂದ ಕೂಡಿರುವ ಉಳಿದ ಇಪ್ಪತ್ತೆರಡು ತೀರ್ಥಂಕರರೂ ಇದ್ದರೂ ನಿನ್ನ ಒಂದು ಮೂರ್ತಿಯೇ ಜಗತ್ತಿಗೆ ಆಶ್ಚರ್ಯವನ್ನುತ್ಪಾದಿಸುತ್ತಿದೆ. ಮಾಣಿಕ್ಯ ಜಿನೇಂದ್ರಬಿಂಬವೇ! ಜಯುವೂ ಭದ್ರವೂ ಶುಭವೂ ಮಂಗಳವೂ ಉಂಟಾಗಲಿ. ೬. ಥಳಥಳಿಸಿ ಹೊಳೆಯುವ ಸುವರ್ಣದ ಕಾಂತಿಪ್ರಸರದಿಂದ ಪೀತಾಂಬರನಾದ ವಿಷ್ಣುವೂ ಪದ್ಮಾಸನದಿಂದ ಬ್ರಹ್ಮನೂ ತಲೆಬಾಗಿದ ಶಿಷ್ಯರ ಮನಸ್ಸಿನಲ್ಲಿನ ಅಜ್ಞಾನವನ್ನು

ವಿಪಿನೋಲ್ಲಂಘನಸಿಂಧುಯಾನನಗಕೂಟಾರೋಹಣಕ್ಲೇಶಮಂ
ತ್ರಪದಧ್ಯಾನಬಿಲಪ್ರವೇಶರಸವಾದಾಯಾಸದೊಳ್ ಬರ್ದು ತೀ
ರ್ದಪುದೇ ಪೊರ್ದಲೊಡಂ ವಿನೇಯಜನಸಂಘಾತಕ್ಕೆ ಮಾಣಿಕ್ಯದೇ
ವಪದಾಂಭೋಜವರಪ್ರಸಾದಮೆ ಜಯಂ ಭದ್ರಂ ಶುಭಂ ಮಂಗಳಂ ೭

ಸಕಳಕ್ಷ್ಮಾಚರಖೇಚರಾಂಚಿತಮಹಾಮಾಣಿಕ್ಯಗಾಣಿಕ್ಯಹಾ
ಸ್ತಿಕರತ್ನೋರ್ಜಿತಚಕ್ರವರ್ತಿವಿಭವಂ ಮುನ್ನಂ ಬಳಿಕ್ಕೈಂದ್ರಮೈ
ಹಿಕಪಾರತ್ರಿಕಭೋಗಮಂ ಕುಡುವಿನಂ ಮಾಣಿಕ್ಯಭಟ್ಟಾರಕಾಂ
ತಿಕಮಂ ಸಾರೆ ವಿನೇಯರಾಜಿಗೆ ಜಯಂ ಭದ್ರಂ ಶುಭಂ ಮಂಗಳಂ ೮

ಕುಪಿತಾನೇಕಪ ದಂದಶೂಕದವದೈತ್ಯಾರಾತಿಚೋರಾಂಧಕಾ
ರಪತದ್ವಜ್ರವಿಷಾಭಿಚಾರಿಕಜರಾತಂಕಾದಿಭೇದಂಗಳ
ಪ್ಪುಪಸರ್ಗಂಗಳ ನೋವನಾವೆಡೆಯೊಳಂ ಕೈಗಾವ ಮಾಣಿಕ್ಯದೇ
ವಪದಾಂಭೋಜಮೆ ಭವ್ಯಕೋಟಿಗೆ ಜಯಂ ಭದ್ರಂ ಶುಭಂ ಮಂಗಳಂ ೯

ಸಿತದೂರ್ವಾಂಕುರಮಾತುಲುಂಗನಳಿನೀಭೃಂಗಾರಗೋರೋಚನಾ
ಕ್ಷತದಧ್ಯಾದಿವಿಡಂಬಮಂಗಳದೊಳೇಂ ಸಂಸಾರಮಂ ದಾಂಟುವೂ
ರ್ಜಿತಪುಣ್ಯಾಂಗಪವರ್ಗಲಕ್ಷ್ಮಿ ವರೆಗಂ ಸಂಸಾರಸಾರೋದಯೋ
ದಿತಮಾಣಿಕ್ಯಜಿನಸ್ತವಾವಳಿ ಜಯಂ ಭದ್ರಂ ಶುಭಂ ಮಂಗಳಂ ೧೦

ಹೋಗಲಾಡಿಸಿದ್ದರಿಂದ ಹರನೂ ಆಗಿ ಭವಹರನಾದ ಮಾಣಿಕ್ಯದೇವನು ಒಬ್ಬನೇ ಜಗತ್ತಿಗೆ ದೇವನೆನಿಸಿಕೊಂಡನು. ಜಯವೂ ಭದ್ರವೂ ಶುಭವೂ ಮಂಗಳವೂ ಉಂಟಾಗಲಿ. ೭. ಕಾಡನ್ನು ದಾಟುವುದು, ಸಮುದ್ರಸಂಚಾರ, ಪರ್ವತಾರೋಹಣ ಕ್ಲೇಶ, ಮಂತ್ರಪದಧ್ಯಾನ, ಬಿಲಪ್ರವೇಶ, ರಸವಾದ-ಮುಂತಾದ ಪ್ರಯಾಸಗಳಲ್ಲಿ ಸಿಕ್ಕಿಕೊಂಡರೆ ಸಂಸಾರದ ಜಂಜಾಟವು ತೀರುವುದೆ? ವಿನೇಯಜನಕ್ಕೆ ಮಾಣಿಕ್ಯದೇವರ ಪಾದಕಮಲದ ಪ್ರಸಾದವೇ ಜಯಕರ, ಭದ್ರ, ಶುಭ, ಮಂಗಳ. ೮. ಮೊದಲು ಭೂಚರ, ಖೇಚರರಿಂದ ಪೂಜ್ಯವೂ ಮಾಣಿಕ್ಯ ಗಾಣಿಕ್ಯ ಹಾಸ್ತಿಕ ರತ್ನಗಳಿಂದ ಸಮೃದ್ಧಗೊಂಡುದೂ ಆದ ಚಕ್ರವರ್ತಿವಿಭವವನ್ನೂ ಬಳಿಕ ಇಂದ್ರಪದವಿಯನ್ನೂ ಐಹಿಕ ಪಾರತ್ರಿಕ ಭೋಗಗಳನ್ನೂ ಕೊಡುವ ಮಾಣಿಕ್ಯಭಟ್ಟಾರಕರ ಸಮೀಪಕ್ಕೆ ಹೋಗಲು ಶಿಷ್ಯಸಮೂಹಕ್ಕೆ ಜಯವೂ ಭದ್ರವೂ ಶುಭವೂ ಮಂಗಳವೂ ಉಂಟಾಗುವುದು. ೯. ಕೋಪಗೊಂಡ ಆನೆ, ಹಾವು, ಕಾಳ್ಗಿಚ್ಚು, ರಾಕ್ಷಸ, ಶತ್ರು, ಕಳ್ಳ, ಕತ್ತಲು, ಸಿಡಿವ ಸಿಡಿಲು, ವಿಷ, ಅಭಿಚಾರಿಕ, ಮುಪ್ಪು - ಇವೇ ಮೊದಲಾದ ಬಾಧೆಗಳಿಂದುಂಟಾಗುವ ನೋವುಗಳಿಂದ ರಕ್ಷಿಸುವ ಮಾಣಿಕ್ಯದೇವರ ಪಾದಾಂಬುಜವೇ! ಭವ್ಯಕೋಟಿಗೆ ಜಯವು ಶುಭವು ಭದ್ರವು ಮಂಗಳವೂ ಆಗಲಿ. ೧೦. ಬಿಳಿಗರಿಕೆ, ಮಾದಲಹಣ್ಣು, ಕಮಲ, ಭೃಂಗಾರ, ಗೋರೋಚನ, ಅಕ್ಷತೆ, ಮೊಸರು ಮುಂತಾದ ಅಣಕು ಮಂಗಳದ್ರವ್ಯಗಳಿಂದ ಏನು? ಸಂಸಾರವನ್ನು ದಾಟಲು ಊರ್ಜಿತಪುಣ್ಯನಾದ ಸಜ್ಜನನಿಗೆ ಸಂಸಾರಸಾರೋದಯನಿಂದ ಕೀರ್ತಿತವಾದ

ನಮೋ ವೃಷಭನಾಥಾಯ ತಸ್ಮೈ ವಿಸ್ಮಯಕಾರಿಣೇ
ಪುರಾಣೋಽಪ್ಯದ್ವಿತೀಯಸ್ಸನ್ ಯುಗಭಾರಂ ಬಭಾರಂ ಯಃ[1] ೧೧

ನಮೋಽಜಿತಾಯ ನಾಕಸ್ತ್ರೀನೇತ್ರೋತ್ಪಲವನೇಂದುನಾ
ದೂರೀಕೃತಸ್ಸ್ಮರೋ ಯೇನ ವ ದೇವಚರಿತಂ ಚರೇತ್ ೧೨

ನಮೋಽಪುನರ್ಭವಪ್ಲುಷ್ಟ ಕಂದರ್ಪಾಯ ತಪೋಗ್ನಿನಾ
ಬೋಧದೃಕ್ಪ್ರಭುವಾಽಽಶ್ಚರ್ಯಧಾಮ್ನಾಸಂಭವಶಂಭವೇ ೧೩

ನಮಸ್ಸಮಸ್ತಜಗತಾಮತ್ಯಂತಸ್ವಾಸ್ಥ್ಯಹೇತವೇ
ಧರ್ಮಚಕ್ರಪವಿತ್ರಾರ್ಚಿರಭಿನಂದನವಿಷ್ಣವೇ ೧೪

ನಮಸ್ಸುಮತಿನಾಥಾಯ ವಿದ್ಯಾನಾಮಾದ್ಯವೇಧಸೇ
ಸ್ವಾತ್ಮೋಪಲಬ್ಧಮಾರ್ಗಸ್ಯ ಸ್ವಯಂಬೋಧಾತ್ ಸ್ವಯಂಭುವೇ ೧೫

ಮಾಣಿಕ್ಯಜಿನೇಂದ್ರಸ್ತವಾವಳಿಯು ಜಯವನ್ನೂ ಭದ್ರವನ್ನೂ ಶಿವವನ್ನೂ ಮಂಗಳವನ್ನೂ ಮೋಕ್ಷಲಕ್ಷ್ಮೀಪ್ರಾಪ್ತಿಯವರೆಗೆ ಉಂಟುಮಾಡಬಲ್ಲುದು. ೧೧. ಅತಿಪುರಾತನನಾಗಿದ್ದರೂ ತನ್ನ ಮಹಿಮೆಯಿಂದ ಅದ್ವಿತೀಯನಾಗಿ ಆದಿಯುಗಭಾರವನ್ನು ಯಾವನು ಹೊತ್ತನೋ ಅಂಥ ವಿಸ್ಮಯಜನಕವಾದ ವೃಷಭನಾಥನಿಗೆ ನಮಸ್ಕಾರ. ೧೨. ಸ್ವರ್ಗಸ್ತ್ರೀಯರ ಕಣ್ಣುಗಳೆಂಬ ಉತ್ಪಲವನಕ್ಕೆ ಚಂದ್ರಪ್ರಾಯನೂ ಮನ್ಮಥನನ್ನು ಕಡೆಗಣಿಸಿದವನೂ ಆದ ಅಜಿತನಾಥನಿಗೆ ನಮಸ್ಕಾರ. ಆ ದೇವಚರಿತವನ್ನು ಇನ್ನೊಬ್ಬನು ನಡೆಸಲಾರನು. ೧೩. ವಿಸ್ಮಯಕರವಾದ ತೇಜಸ್ಸುಳ್ಳ ಬೋಧವೆಂಬ ಕಣ್ಣಿನಲ್ಲಿ ಹುಟ್ಟಿದ ತಪೋಗ್ನಿಯಿಂದ ಪುನಃ ಹುಟ್ಟದಂತೆ ಕಂದರ್ಪನನ್ನು ಸುಟ್ಟ ಸಂಭವನಾಥನೆಂಬ ಶಿವನಿಗೆ ನಮಸ್ಕಾರ. (ಶಿವನಿಂದ ದಗ್ಧನಾದ ಕಂದರ್ಪನು ಮತ್ತೆ ಹುಟ್ಟಿ ಶಿವನು ಪಾರ್ವತಿಯನ್ನು ಮದುವೆಯಾಗುವಂತೆ ಮಾಡಿದನು. ಆದರೆ ಸಂಭವನಾಥನಿಂದ ದಗ್ಧನಾದವನು ಮತ್ತೆ ಹುಟ್ಟಲಿಲ್ಲ ಎಂದು ವ್ಯತಿರೇಕ). ೧೪. ಸಮಸ್ತ ಜಗತ್ತಿನ ಸ್ವಾಸ್ಥ್ಯಕ್ಕೆ ಕಾರಣನೂ ಧರ್ಮಚಕ್ರದ ಪವಿತ್ರಜ್ವಾಲೆಯುಳ್ಳವನೂ ಆದ ಅಭಿನಂದನನಾಥನೆಂಬ ವಿಷ್ಣುವಿಗೆ ನಮಸ್ಕಾರ (ವಿಷ್ಣುವಿಗೆ ಸುದರ್ಶನಚಕ್ರವಿದ್ದರೆ ಈತನಿಗೆ ಧರ್ಮಚಕ್ರವಿದೆ). ೧೫. ವಿದ್ಯೆಗಳಿಗೆ ಆದ್ಯ ಪ್ರವರ್ತಕನಾದ ಬ್ರಹ್ಮನೂ ತನ್ನ ಆತ್ಮನಿರ್ವೃತಿಗೆ ಸಾಧಕವೆನಿಸಿದ ಮಾರ್ಗವನ್ನು ತಾನೇ ಕಂಡುಕೊಂಡವನೂ ಆಗಿ ಸ್ವಯಂಭುವೆನಿಸಿದ ಸುಮತಿನಾಥನಿಗೆ ನಮಸ್ಕಾರ. (ಬ್ರಹ್ಮನೂ ವಿದ್ಯೆಗಳ ಪ್ರವರ್ತಕ ಮತ್ತು ಸ್ವಯಂಭೂ).

---

೧ ಪುರಾಣ = ಮುದಿ, ಅದ್ವಿತೀಯ = ಏಕಾಕಿ, ಯುಗಭಾರ = ನೊಗದ ಭಾರ, ವೃಷಭ = ಎತ್ತು. ಈ ಅರ್ಥಾಂತರಗಳಿಂದ 'ಮುದಿಯಾದ ಎತ್ತು ಒಂಟಿಯಾದರೂ ನೊಗದ ಭಾರವನ್ನು ಭರಿಸಿತು' ಎಂಬ ಅರ್ಥಾಂತರವು ತೋರಿ ವಿರೋಧಾಭಾಸಾಲಂಕಾರವಾಗುತ್ತದೆ.'

ನಮಃ ಪದ್ಮಪ್ರಭೇಶಾಯ ತಸ್ಮೈ ಪದ್ಮ [ಪ್ರಭಾಸಿನೇ][1]
ಜಗನ್ನಮತಿ ಕಿಂ ಚಿತ್ರಂ ಮನೋಜಾತೇ ವಿರಜ್ಯತೇ ೧೬

ನಮಃ ಸುಪಾರ್ಶ್ವನಾಥಾಯ ಯಃ ಪಾರ್ಶ್ವದ್ವಯಚಾಮರೈಃ
ಮುಕ್ತಿಲಕ್ಷ್ಮೀಕಟಾಕ್ಷೈರ್ವಾ ರೇಜೇ ದುಗ್ಧಚ್ಛಟೋಜ್ಜ್ವಲೈಃ ೧೭

ನಮಃ ಪ್ರಕ್ಷೀಣರಾಗಾಯ ಲಬ್ಧಾತಿಶಯ ಶುದ್ಧಯೇ
ಸತ್ಪಥೋದ್ದ್ಯೋತಿನೇ ನಿತ್ಯಂ ಚಂದ್ರಪ್ರಭಜಿನೇಂದವೇ ೧೮

ನಮಸ್ಸುವಿಧಯೇ ಯಸ್ಯ ಜಗದ್ಗಹನಜೃಂಭಿತಃ
ಸ್ಯಾದ್ವಾದಸಿಂಹನಾದೋಭೂತ್ ಸಂಕುಚದ್ವಾದಿಕುಂಜರಃ ೧೯

ನಮಶ್ಶೀತಳನಾಥಾಯ ಯತ್ಸೂಕ್ತಾಮೃತಪಾಯಿನಾಂ
ಪ್ರಾಣಿನಾಂ ವಿಪ್ರಲಂಭಾಯ ನ ಭೋಗಮೃಗತೃಷ್ಣಿಕಾ ೨೦

೧೬. ಪದ್ಮದಂತೆ ಪ್ರಕಾಶಿಸುವ ಪದ್ಮಪ್ರಭನಾಥನಿಗೆ ನಮಸ್ಕಾರ. ಮನ್ಮಥನಲ್ಲಿ ವಿರಕ್ತನಾದ ನಿನಗೆ ಜಗತ್ತು ನಮಸ್ಕರಿಸುವುದರಲ್ಲಿ ಆಶ್ಚರ್ಯವೇನು? ೧೭. ಹಾಲಿನ ಪ್ರವಾಹದಂತೆ ಬೆಳ್ಳಗಿರುವ, ಎರಡೂ ಪಾರ್ಶ್ವಗಳಲ್ಲಿ ಮುಕ್ತಿಲಕ್ಷ್ಮಿಯ ಕಟಾಕ್ಷಗಳಂತಿರುವ ಚಾಮರಗಳಿಂದ ಬೆಳಗಿದ ಸುಪಾರ್ಶ್ವನಾಥನಿಗೆ ನಮಸ್ಕಾರ. (ಇಲ್ಲಿರುವ 'ವಾ' ಶಬ್ದವು ಇವಾರ್ಥಕ). ೧೮. ರಾಗವನ್ನು ಲಯಗೊಳಿಸಿದವನೂ ಅತಿಶಯ ಶುದ್ಧಿಯನ್ನು ಪಡೆದವನೂ ಸದಾ ಸನ್ಮಾರ್ಗಪ್ರಕಾಶಕನೂ ಆದ ಚಂದ್ರಪ್ರಭನಾಥನೆಂಬ ಚಂದ್ರನಿಗೆ ನಮಸ್ಕಾರ. (ಆಕಾಶದಲ್ಲಿರುವ ಚಂದ್ರನು ಉದಯಕಾಲದಲ್ಲಿ ರಾಗದಿಂದ (ಕೆಂಪುಬಣ್ಣದಿಂದ) ಕೂಡಿರುತ್ತಾನೆ. ಅವನು ಪ್ರಕ್ಷೀಣರಾಗನಲ್ಲ, ಕಳಂಕವಿರುವುದರಿಂದ ಅವನಲ್ಲಿ ಅತಿಶಯಶುದ್ಧಿ ಇಲ್ಲ, ಅವನು ಕೃಷ್ಣಪಕ್ಷದಲ್ಲಿ ಕ್ಷೀಣನಾದಾಗ ಸರಿಯಾದ ಮಾರ್ಗವನ್ನು ಸದಾ ಬೆಳಗಿಸಲಾರ. ಆದ್ದರಿಂದ ಪ್ರಸಿದ್ಧ ಚಂದ್ರನಿಗಿಂತ ಈ ಜಿನಚಂದ್ರನು ಹೆಚ್ಚಿನವನು-(ಎಂಬ ವ್ಯತಿರೇಕಾಲಂಕಾರ ಧ್ವನಿತವಾಗುತ್ತದೆ). ೧೯. ಜಗತ್ತೆಂಬ ಕಾಡಿನಲ್ಲಿ ವಿಜೃಂಭಣೆಯಿಂದ ಮೆರೆಯುತ್ತಿರುವ, ವಾದಿಗಳೆಂಬ ಆನೆಗಳನ್ನು ಮುದುಡಿಕೊಳ್ಳುವಂತೆಸಗಿದ ಸ್ಯಾದ್ವಾದವೆಂಬ ಸಿಂಹನಾದವನ್ನು ಯಾರು ಮಾಡಿದರೋ ಅಂಥ ಸುವಿಧಿನಾಥನಿಗೆ ನಮಸ್ಕಾರ. ೨೦. ಯಾವನ ಸೂಕ್ತಿಗಳೆಂಬ ಅಮೃತವನ್ನು ಕುಡಿದ ಪ್ರಾಣಿಗಳಿಗೆ ಭೋಗವೆಂಬ ಬಿಸಿಲುಗುದುರೆಯು ವಂಚನೆಮಾಡಲು ಕಾರಣವಾಗದೋ ಅಂಥ ಶೀತಲನಾಥನಿಗೆ ನಮಸ್ಕಾರ. (ಬಾಯಾರಿಕೆ ಇಲ್ಲವಾಗ ಬಿಸಿಲುಗುದುರೆಗಾಗಿ ಯಾರು ಧಾವಿಸುವುದಿಲ್ಲ.)

---

[1] ಪ್ರದಾಯಿನೇ (ಅನ್ಯತ್ರ). ಶುದ್ಧಪಾಠದ ವಿಷಯವಾಗಿ ನೋಡಿ : ರಕ್ತಾಂಭೋಜದ ಲಬ್ಧವಿ: (ಬು. ಪ್ರ. ೫೨-೨೧)

ನಮಶ್ಶ್ರೀಯೋಜಿನೇಂದ್ರಾಯ ಯತ್ಪಾದಾಶ್ರಯವರ್ತಿನಾಂ
ಶ್ರೇಯಾಂಸಿ ಬಹುವಿಘ್ನಾನೀತ್ಯುಕ್ತೇರರ್ಥೋ ನಿರಾಶ್ರಯಃ ೨೧

ನಮಃ ಶ್ರೀವಾಸುಪೂಜ್ಯಾಯ ಭಜತಾಂ ಭಾವಪೂಜಯಾ
ಯೋ ಭವೇದ್ವರದಸ್ಸತ್ಯಂ ಭಕ್ತ್ಯಾತುಷ್ಯಂತಿ ದೇವತಾಃ ೨೨

ನಮೋ ವಿಮಲನಾಥಾಯ ಯದ್ಬೋಧಸ್ಯ ಸಮಂ ಕೃತಂ
ಸಾಕ್ಷಾದ್ವಿಭಾಸಿಭಾವಸ್ಯ ದರ್ಪಣಪ್ರತಿಮಾರ್ಪಣಂ ೨೩

ನಮೋಽನಂತಜಿತೇಽನಂತಜನ್ಮಕಾಂತಾರಭಾರಜಂ
ರಜೋ ಯೇನ ಕ್ಷಣಾದ್ಧೌತ ಮಧ್ಯಾತ್ಮಧ್ಯಾನವಾರಿಣಾ ೨೪

ನಮೋ ಧರ್ಮಾಯ ಯೇನೋಚ್ಚೈರ್ಜಿತದುರ್ಜಯಕರ್ಮಣಾ
ಧರ್ಮೋ ಜಯತಿ ನಾಧರ್ಮ ಇತ್ಯಮೋಘೀಕೃತಂ ವಚಃ ೨೫

ನಮಃ ಶ್ರೀಶಾಂತಯೇ ತಸ್ಯ ಮೋಹಶಾಂತಿಃ ಕಿಮುಚ್ಯತೇ
ಷಟ್ಖಂಡರಾಜ್ಯಮತ್ಯಾಕ್ಷೀದ್ಯೋಽನಂತೈಶ್ವರ್ಯಕಾಂಕ್ಷಯಾ ೨೬

ನಮಶ್ಶ್ರೀಕುಂಥವೇ ಯೇನ ಮಹಾರಾಜ್ಯಂ ಮಹಾತ್ಮನಾ
ತ್ಯಕ್ತಂ ಮಹಾಮಹಾರ್ಹೇಣ ಸರ್ವಂ ಹಿ ಮಹತಾಂ ಮಹತ್ ೨೭

೨೧. ಯಾವ ಜಿನೇಂದ್ರನ ಪಾದಗಳನ್ನು ಮರೆಹೊಕ್ಕವರಿಗೆ "ಶ್ರೇಯಾಂಸಿ ಬಹುವಿಘ್ನಾನಿ" ಎಂಬ ಗಾಥಾರ್ಥವು ಅನ್ವಯಿಸುವುದಿಲ್ಲವೋ ಅಂಥ ಶ್ರೇಯೋಜಿನೇಂದ್ರನಿಗೆ ನಮಸ್ಕಾರ. (ಈ ಜಿನೇಂದ್ರನ ಭಕ್ತರಿಗೆ ಶ್ರೇಯಸ್ಸಿನಲ್ಲಿ ವಿಘ್ನ ಒದಗುವುದಿಲ್ಲ). ೨೨. ಭಾವಪೂಜೆಯಿಂದ ಭಜಿಸಿದವರಿಗೆ ಸತ್ಯವರದನಾದ ಶ್ರೀವಾಸುಪೂಜ್ಯನಾಥನಿಗೆ ನಮಸ್ಕಾರ. ಭಕ್ತಿಯಿಂದ ದೇವತೆಗಳು ತುಷ್ಟರಾಗುತ್ತಾರೆಂಬುದು ಸತ್ಯ. ೨೩. ಸಾಕ್ಷಾತ್ತಾಗಿ ಪ್ರಕಾಶಿಸುವ ಪದಾರ್ಥಗಳುಳ್ಳ ಯಾರ ಜ್ಞಾನಕ್ಕೆ ಕನ್ನಡಿಯಲ್ಲಿ ಪ್ರತಿಬಿಂಬಗಳ ಅರ್ಪಣವು ಸಮಾನವಾಯಿತೋ-ಎಂದರೆ ಕನ್ನಡಿಯಲ್ಲಿ ವಸ್ತುಗಳು ಪ್ರತಿಬಿಂಬಿಸುವಂತೆ ಯಾರ ಜ್ಞಾನದಲ್ಲಿ ಸಕಲಪದಾರ್ಥಗಳೂ ವಿಷಯವಾಗುತ್ತವೆಯೋ (ಯಾರು ಸರ್ವಜ್ಞನೋ) ಅಂತಹ ವಿಮಲನಾಥನಿಗೆ ನಮಸ್ಕಾರ. ೨೪. ಅನೇಕ ಜನ್ಮಗಳೆಂಬ ಅಡವಿಯ ಹೊರೆಯಿಂದುಂಟಾದ ಧೂಳಿಯನ್ನು (ಪಾಪವನ್ನು) ಅಧ್ಯಾತ್ಮಧ್ಯಾನವೆಂಬ ನೀರಿನಿಂದ ಕ್ಷಣಕಾಲದಲ್ಲಿ ತೊಳೆದುಹಾಕಿದ ಅನಂತಜಿನೇಂದ್ರನಿಗೆ ನಮಸ್ಕಾರ. (ಜಿತ್ ಎಂಬ ಶಬ್ದ ಜಿನ ಎಂಬ ಅರ್ಥದಲ್ಲಿದೆ). ೨೫. ದುರ್ಜಯವಾದ ಕರ್ಮವನ್ನು ಜಯಿಸಿದ ಯಾವಾತನು 'ಧರ್ಮವೇ ಗೆಲ್ಲುತ್ತದೆ, ಅಧರ್ಮವಲ್ಲ' ಎಂಬ ಮಾತನ್ನು ಸಾರ್ಥಕಗೊಳಿಸಿದನೋ ಅಂತಹ ಧರ್ಮನಾಥನಿಗೆ ನಮಸ್ಕಾರ. ೨೬. ಅನಂತೈಶ್ವರ್ಯವನ್ನು (ಮೋಕ್ಷವನ್ನು) ಬಯಸಿ, ಷಟ್ಖಂಡಮಂಡಿತವಾದ ರಾಜ್ಯವನ್ನು ಯಾರು ತೊರೆದರೋ ಆ ಶಾಂತಿನಾಥನಿಗೆ ನಮಸ್ಕಾರ. ಆತನ ಮೋಹಶಾಂತಿಯನ್ನು ಏನೆಂದು ಹೇಳುವುದು! ೨೭. ಮಹಾಮಹವೆಂಬ ಪೂಜೆಗೆ ಅರ್ಹನೂ ಮಹಾತ್ಮನೂ ಆದ ಕುಂಥುನಾಥನು ಮಹಾರಾಜ್ಯವನ್ನೇ ತೊರೆದನು. ಅವನಿಗೆ

ನಮೋಽಸ್ತ್ವರಾಯ ಸಂಪ್ರಾಪ್ತಮುಕ್ತಿಸಾಮ್ರಾಜ್ಯಸಂಪದೇ
ರಾಜಾ ಸನ್ನದ್ಭುತಂ ಚಕ್ರೇ ಚಕ್ರಾಂಕಕಮಲೋತ್ಸವಂ ೨೮

ನಮೋ ನಿರ್ಮಲನಿಷ್ಪ್ರಷ್ಟಕರ್ಮಮಲ್ಲಾಯ ಮಲ್ಲಯೇ
ಬಂಧಮೋಕ್ಷವಿಧಿಜ್ಞಾಯ ದದತೇಽನಂತವೀರ್ಯತಾಂ ೨೯

ನಮಸ್ಸುವ್ರತನಾಥಾಯ ಯೋಽಭೂದ್ವ್ರತಗುಣೈರ್ಭವಾತ್
ಉದ್ಧರ್ತಾ ಜಗತಾಂ ತ್ಯಕ್ತ್ವಾಕಾ ನೋಹಾನಿರಿತಿ ಸ್ಥಿತಿಂ ೩೦

ನಮೋ ನಮಿಜಿನೇಂದ್ರಾಯ ಯತ್ಪದಾಂಬುರುಹದ್ವಯಂ
ಉತ್ತಂಸಿತಂ ಮಹೇಂದ್ರೇಣ ಮಂದಾರಗಲಿತಾದರಂ ೩೧

ನಮಶ್ಶ್ರೀ ನೇಮಯೇ ಯೇನ ಹರಿತಲ್ಪಾಹಿಭೋಗವತ್
ಶ್ರೀಭುಜಂಗೀ ಮಹಾಭೋಗೋ ನ ತೃಣಾಯಾಪ್ಯಮನ್ಯತ ೩೨

ನಮಸ್ಕಾರ. ದೊಡ್ಡವರ ಕೆಲಸಗಳೆಲ್ಲವೂ ದೊಡ್ಡವೇ. (ತಾನು ಮಾಡಿದ ಮಹಾಮಹವೆಂಬ ಅರ್ಹದ (ಪೂಜೆಯ) ಮೂಲಕ ಯಾವಾತನು ಮಹಾರಾಜ್ಯವನ್ನು ತೊರೆದನೋ -ಎಂಬ ಅರ್ಥವೂ ಸಾಧ್ಯ). ೨೮. ಯಾವಾತನು ರಾಜನಾಗಿದ್ದೂ ಧರ್ಮಚಕ್ರವೆಂಬ ಸಂಪತ್ತಿನಲ್ಲಿ ಅದ್ಭುತವಾದ ಆನಂದವನ್ನು ವ್ಯಕ್ತಪಡಿಸಿದನೋ, ಮುಕ್ತಿಸಾಮ್ರಾಜ್ಯಸಂಪತ್ತನ್ನು ಗಳಿಸಿದ ಆ ಅರನಾಥನಿಗೆ ನಮಸ್ಕಾರ. ಟಿಪ್ಪಣಿ : ಅರನಾಥನು ಚಕ್ರರತ್ನವನ್ನು ಪಡೆದ ರಾಜನಾಗಿದ್ದರೂ 'ಪರಮ ಶ್ರೀಧರ್ಮಚಕ್ರೇಪ್ಸೆ'ಯಿಂದ ಚಕ್ರರತ್ನವನ್ನು ಕುಂಬಾರನ ಚಕ್ರವೆಂದು ಭಾವಿಸಿ ತೊರೆದನು ಎಂದು ಉತ್ತರಪುರಾಣದಲ್ಲಿ ವರ್ಣಿಸಿದೆ. (ನೋಡಿ: ೬೫-೪೮). ರಾಜ = ಚಂದ್ರ, ಚಕ್ರಾಂಕಕಮಲ = ಚಕ್ರವಾಕಪಕ್ಷಿಗೆ ಆಶ್ರಯವನ್ನಿತ್ತ ಕಮಲ. ಈ ಅರ್ಥಾಂತರದಿಂದ 'ಚಂದ್ರನಾದರೂ ಕಮಲಕ್ಕೆ ಆನಂದವನ್ನುಂಟುಮಾಡಿದನೆ'ಂಬ ವಿರೋಧಾಭಾಸ ತೋರುತ್ತದೆ. ಆದ್ದರಿಂದಲೇ ಇದು 'ಅದ್ಭುತ'. ೨೯. ನಿರ್ಮಲನೂ ನಿರ್ಲೇಪನೂ ಕರ್ಮಗಳನ್ನು ಘಾತಿಸುವುದರಲ್ಲಿ ಮಲ್ಲನೂ ಬಂಧ ಮೋಕ್ಷಗಳ ವಿಧಾನವನ್ನು ಬಲ್ಲವನೂ ಅನಂತವೀರ್ಯವನ್ನು ಧರಿಸಿದವನೂ ಆದ ಮಲ್ಲಿನಾಥನಿಗೆ ನಮಸ್ಕಾರ. ಟಿಪ್ಪಣಿ : ಮಲ್ಲನು (ಜಟ್ಟಿ) ಬಂಧ (ಪಟ್ಟು) ಮೋಕ್ಷ (ಎದುರಾಳಿಯಿಂದ ತಪ್ಪಿಸಿಕೊಳ್ಳುವುದು-ಇವುಗಳ ವಿಧಾನವನ್ನು ತಿಳಿದಿರುತ್ತಾನೆ. ಅಲ್ಲದೆ ಮಹಾವೀರನಾಗಿರುತ್ತಾನೆ-ಈ ಸಾದೃಶ್ಯದಿಂದ ಮಲ್ಲಿನಾಥಸ್ವಾಮಿಯನ್ನು ಮಲ್ಲನೆಂದು ಕರೆಯಲಾಗಿದೆ. ಉ. ಪುರಾಣದಲ್ಲಿ 'ಮೋಹಮಲ್ಲ' ಎಂದು ವರ್ಣಿಸಿದೆ. ೬೬-೧). ೩೦. ಜಗತ್ತು ಸಂಸಾರದಲ್ಲಿದ್ದರೆ ನಮಗಾಗುವ ಹಾನಿ ಏನು?- ಎಂಬ ಭಾವನೆಯನ್ನು ತೊರೆದು ವ್ರತಗುಣಗಳಿಂದ ಜಗತ್ತನ್ನು ಸಂಸಾರದಿಂದ ಉದ್ಧರಿಸಿದವನಾದ ಸುವ್ರತನಾಥನಿಗೆ ನಮಸ್ಕಾರ. ೩೧. ಯಾವಾತನ ಪಾದಕಮಲದ್ವಯವನ್ನು ದೇವೇಂದ್ರನು ಮಂದಾರ ಪುಷ್ಪದಲ್ಲಿಯೂ ಆದರವನ್ನು ವರ್ಜಿಸಿ ತನ್ನ ತಲೆಯ ಮೇಲೆ ಧರಿಸಿದನೋ ಆ ನಮಿನಾಥನಿಗೆ ನಮಸ್ಕಾರ. ೩೨. ಶ್ರೀವಿಷ್ಣುವಿನ ಹಾಸಿಗೆಯಾದ ಸರ್ಪದ (ವಾಸುಕಿಯ) ಭೋಗದಂತೆ (ದೇಹದಂತೆ), ಶ್ರೀಯೆಂಬ

ನಮಸ್ತ್ರೈಲೋಕ್ಯದುರ್ವಾರಮಾರವೀರಮದಚ್ಛಿದೇ
ಮಹಾವೀರಾಯ ಭೂಪೇಂದ್ರಸ್ತೂಯಮಾನಜಯಶ್ರೀಯೇ ೩೪

॥ ಪುಷ್ಪಿತಾಗ್ರಾ ॥

ಸವಹತಿ ಕವಿತಾಗುಣಾರ್ಣವಾಖ್ಯಾಂ
ನನು ಭುವನತ್ರಿತಯೇಪ್ಯನನ್ಯರೂಢಾಂ
ವಿಷಯ[೧]ಮವತರೇದ್ಯದೀಯ ವಾಚಾಂ
ಚತುರಧಿಕಾ ಜಿನವಿಂಶತಿಶ್ಶುಭಾಯ ೩೫

ನಯವಿನಯಧಿಯಃ ಸಮಂತಭದ್ರಾಃ
ವಿದಧತು ವಾಙ್ಮಯದಾಮ ಪೂಜ್ಯಪಾದಾಃ
ನಮಇತಿ ಪರಮಾಕ್ಷರದ್ವಯಂ ತೇ
ಮಮ ಜಪತಃಪದಮಕ್ಷರಂ ಜಿನೇಂದ್ರಾಃ ೩೬

ಭುಜಂಗಿಯ ಮಹಾಭೋಗವೂ ಹುಲ್ಲಿಗಿಂತ ನಿಕೃಷ್ಟವೆಂದು ಯಾರಿಂದ ಭಾವಿಸಲ್ಪಟ್ಟಿತೋ ಅಂಥ ನೇಮಿನಾಥನಿಗೆ ನಮಸ್ಕಾರ. (ಭುಜಂಗೀ = ಹೆಣ್ಣು ಸರ್ಪ; ಕುಲಟೆ. ಭೋಗ = ದೇಹ; ಅನುಭವ). ೩೩. ಧರಣೇಂದ್ರನ ಪತ್ನಿಯು ಹಿಡಿದ (ವಜ್ರದ) ಕೊಡೆಯು ಮೂರು ಲೋಕಗಳಲ್ಲಿಯೂ ಯಾರ ಸಾಮ್ರಾಜ್ಯವು ಏಕಚ್ಛತ್ರವೆಂದು ಹೇಳುವಂತೆ ತೋರುವುದೋ ಆ ಪಾರ್ಶ್ವನಾಥನಿಗೆ ನಮಸ್ಕಾರ. (ಶಂಬರದೇವನೆಂಬವನು ಪಾರ್ಶ್ವನಾಥನ ಮೇಲೆ ದೊಡ್ಡ ಮಳೆಯನ್ನು ಸುರಿಸಿ ಒಂದು ಪರ್ವತವನ್ನು ತಳ್ಳಿದನು. ಅದನ್ನು ತಡೆಯಲು ಧರಣೇಂದ್ರನ ಪತ್ನಿಯು ಪಾರ್ಶ್ವನಾಥನ ಮೇಲೆ ವಜ್ರದ ಕೊಡೆಯನ್ನು ಹಿಡಿದಳು. (ನೋಡಿ ಉ. ಪು. ೭೩-೧೩೭-೧೪೦). ೩೪. ಮೂರು ಲೋಕಗಳಲ್ಲಿಯೂ ವಿಕ್ರಾಂತನೆಂದು ವಿಖ್ಯಾತನಾದ ಮನ್ಮಥನ ಮದವನ್ನು ಮುರಿದವನೂ ರಾಜೇಂದ್ರರಿಂದ ಸ್ತುತಿಸಲ್ಪಡುವ ಜಯಲಕ್ಷ್ಮಿಯುಳ್ಳವನೂ ಆದ ಮಹಾವೀರನಿಗೆ ನಮಸ್ಕಾರ. ೩೫. ಯಾರ ಮಾತುಗಳಿಗೆ ಶುಭಕ್ಕಾಗಿ ಇಪ್ಪತ್ತು ನಾಲ್ಕು ತೀರ್ಥಂಕರ ಸಮುದಾಯವು ವಿಷಯವಾಗುತ್ತದೆಯೋ ಆತನು (ಪಂಪನೆಂದು ಸೂಚ್ಯ) ಲೋಕತ್ರಯದಲ್ಲಿಯೂ ಇನ್ನೊಬ್ಬರಿಗೆ ದೊರಕದಿರುವ 'ಕವಿತಾಗುಣಾರ್ಣವ' ಎಂಬ ಬಿರುದನ್ನು ಧರಿಸಿದ್ದಾನೆ. ಟಿಪ್ಪಣಿ :- 'ಶುಭಾಯಾ' ಎಂದು ಆಕಾರಾಂತವಾದ ಶುದ್ಧಪಾಠವಿರುವುದೂ ಸಾಧ್ಯ. ಆ ಪಕ್ಷದಲ್ಲಿ ಅದು 'ಜಿನವಿಂಶತಿಃ' ಎಂಬುದಕ್ಕೆ ವಿಶೇಷಣ. ಶುಭಮಾರ್ಗವನ್ನನುಸರಿಸಿದ ತೀರ್ಥಂಕರ ಸಮುದಾಯವೆಂದು ಅರ್ಥ. ೩೬. ವಾಙ್ಮಯದಾಮ ಪೂಜ್ಯಾಪಾದಾ : = ವಾಙ್ಮಯಮಾಲೆಯಿಂದ ಪೂಜಿಸಲ್ಪಡುವ ಪಾದಗಳುಳ್ಳ, ಸಮಂತಭದ್ರಾ = ಸಮಂತಭದ್ರರೆನಿಸಿದ, ತೇ = ಆ

---

೧ 'ನ ವಿಷಯ' - ಎಂದು ಸಾರ್ವತ್ರಿಕ ಪಾಠವಿದೆ. ಛಂದೋಭಂಗವಾಗುವುದರಿಂದ ಇಲ್ಲಿ 'ನ' ಶಬ್ದವು ಅಧಿಕವೆಂದು ಕೈಬಿಡಲಾಗಿದೆ. ಈ ಪಾಠವನ್ನು ದೊರಕಿಸಿಕೊಟ್ಟ ಡಾ॥ ಎಲ್. ಬಸವರಾಜು ಅವರಿಗೆ ಕೃತಜ್ಞತೆ ಸಲ್ಲುತ್ತದೆ.

ವ॥ ಎಂದನೇಕಸ್ತವನಂಗಳಿಂ ಸ್ತುತಿಯಿಸಿ ತದನಂತರಸಮಯದೊಳ್,

ಭರತಂ ಕಾಯೋತ್ಸರ್ಗದೊ
ಳಿರೆ ಚಿತ್ತನಿರೋಧದಿಂ ಸಡಿಲಲ್ವೊಡೆ ತನು ಭಾ
ಸುರರತ್ನಾಭರಣಂಗಳ್
ಶರೀರದಿಂದುದಿರ್ದುವಮರತರುಕುಸುಮದವೊಲ್ ೩೭

ವ॥ ಮತ್ತಂ ಸಾಕೇತನಗರಮಂ ಬಳಸಿದ ಕನಕಪ್ರಾಕಾರದ ಬಾಗಿಲ್ವಾಡಂಗಳೊಳಂ ರಾಜಮಂದಿರದ ಗೋಪುರದ್ವಾರಂಗಳೊಳಂ ತನ್ನ ಪುರದ ಪೋಪ ಬರ್ಪ ರಾಜಮಾರ್ಗದೊಳಂ ಚತುರ್ವಿಂಶದರ್ಹತ್ಪ್ರತಿಮಾವಿರಾಜಮಾನ ಹೇಮದಾಮವಿಳಂಬಿತಮಣಿಘಂಟಾಸಮನ್ವಿತ ವಂದನಮಾಲೆಗಳೊಳಂ,

ಪುಗೆ ಪೊಱಮಡೆ ತನ್ನ ಮನಂ
ಬುಗುವಂತಿರೆ ತನ್ನ ಮಕುಟಶಿಖರಮನವು ನೆ
ಟ್ಟಗೆ ತಾಗುವಂತುಮಾಗಿರೆ
ಜಗದಧಿಪನುದಾತ್ತಭಕ್ತಿಯಿಂ ಮಾಡಿಸಿದಂ ೩೮

ಪ್ರಸಿದ್ಧರಾದ, ಜಿನೇಂದ್ರಾ : = ತೀರ್ಥಂಕರರು, ನಮ ಇತಿ ಪರಮಾಕ್ಷರದ್ವಯಂ = 'ನಮಃ' ಎಂಬ ಶ್ರೇಷ್ಠವಾದ ಎರಡು ಅಕ್ಷರಗಳನ್ನು, ಜಪತಃ = ಜಪಿಸುವ, ಮಮ = ನನಗೆ, ನಯವಿನಯಧಿಯ : = ನಯ ವಿನಯ ಮತ್ತು ಬುದ್ಧಿಗಳನ್ನೂ, ಅಕ್ಷರಂ ಪದಂ = ಅಕ್ಷಯವಾದ ಮೋಕ್ಷಪದವನ್ನೂ, ವಿದಧತು = ಉಂಟುಮಾಡಲಿ. ವಿಶೇಷ ; ನಯ ವಿನಯಧಿಯ; = ಇದು ದ್ವಂದ್ವಸಮಾಸದ ದ್ವಿತೀಯಾ ಬಹುವಚನವೆಂದು ಭಾವಿಸಲಾಗಿದೆ. ಅಥವಾ ನಯ ವಿನಯಗಳಲ್ಲಿ ಧೀ ಉಳ್ಳವರು ಎಂದು ಬಹುವ್ರೀಹಿಯಾಗಬಹುದು. ಆ ಪಕ್ಷದಲ್ಲಿ ಪ್ರಥಮಾ ಬಹುವಚನ. ಜಿನೇಂದ್ರರಿಗೆ ವಿಶೇಷಣ. ಅಥವಾ ಇದು ಬಹುವ್ರೀಹಿಯ ಷಷ್ಠ್ಯೇಕವಚನ. 'ಮಮ' ಎಂಬುದಕ್ಕೆ ವಿಶೇಷಣ. ನಯ ವಿನಯಗಳಲ್ಲಿ ಬುದ್ಧಿಯುಳ್ಳ ನನಗೆ ಎಂದರ್ಥ. ಬಹುವ್ರೀಹಿಯು ವ್ಯಧಿಕರಣಪದವಾಗುವುದರಿಂದ ದ್ವಂದ್ವ ಸಮಾಸವೆನ್ನುವುದೇ ಹೆಚ್ಚು ಸಮಂಜಸ. ವ॥ ಎಂದು ಅನೇಕ ಸ್ತೋತ್ರಗಳಿಂದ ಸ್ತುತಿಸಿ ಬಳಿಕ ೩೭. ಭರತನು ಚಿತ್ತನಿರೋಧದಿಂದ ದೇಹತ್ಯಾಗಕಾರ್ಯದಲ್ಲಿರುವಾಗ ದೇಹವು ಸಡಿಲಿತು. ಪ್ರಕಾಶಿಸುತ್ತಿದ್ದ ರತ್ನಾಭರಣಗಳು ಕಲ್ಪದ್ರುಮದ ಪುಷ್ಪಗಳಂತೆ ಅವನ ಶರೀರದಿಂದ ಕೆಳಕ್ಕುದುರಿದುವು. ವ॥ ಸಾಕೇತ (ಅಯೋಧ್ಯೆ) ನಗರಿಯನ್ನು ಸುತ್ತುಹಾಕಿದ ಸುವರ್ಣಪ್ರಾಕಾರದ ಬಾಗಿಲ್ವಾಡಗಳಲ್ಲಿಯೂ ರಾಜಮಂದಿರದ ಗೋಪುರದ್ವಾರಗಳಲ್ಲಿಯೂ ತನ್ನ ಪಟ್ಟಣಕ್ಕೆ ಬಂದು ಹೋಗುವ ರಾಜಮಾರ್ಗಗಳಲ್ಲಿಯೂ ಇಪ್ಪತ್ನಾಲ್ಕು ಅರ್ಹತ್ಪ್ರತಿಮೆಗಳಿಂದ ಶೋಭಿಸುವ ಸುವರ್ಣಮಯವಾದ ಸರಪಳಿಗೆ ಸೇರಿಸಿದ ಗಂಟೆಗಳುಳ್ಳ ವಂದನಮಾಲೆಗಳನ್ನು ಕಟ್ಟಿಸಿದನು. ೩೮. ತನ್ನ ಇಷ್ಟಬಂದಂತೆ ಪ್ರವೇಶಿಸಿ ಹೊರಬರುವಾಗ ತನ್ನ ಕಿರೀಟದ ತುದಿಗೆ ತಾಗುವಂತೆ, ಅದರಿಂದ ಜಿನೇಶ್ವರನ ಸ್ಮರಣೆಯಾಗುವಂತೆ, ಅವನ್ನು ಮಹಾರಾಜನು ಉದಾತ್ತಭಕ್ತಿಯಿಂದ ಮಾಡಿಸಿದನು.

ತನಗೆ ಭರತೇಶ್ವರಂ ವಂ
ದನಾರ್ಥದಿಂ ಸಮೆದ ಮಾಲೆ ಭರತದೊಳದು ವಂ
ದನಮಾಲೆಯೆಂಬ ಪೆಸರಂ
ತನಗೆ ಪೆಸರ್ಮಾಡಿ ಕೂಡೆ ಸಂದಪುದಿನ್ನುಂ ೩೯

ಪ್ರಿಯಧರ್ಮನೃಪತಿಯಂ ನೋ
ಡಿ ಯಥಾ ರಾಜಾ ತಥಾ ಪ್ರಜಾ ಎಂಬವೋಲೋ
ಜೆಯೊಳೋಜೆಗೊಂಡು ಧರ್ಮ
ಪ್ರಿಯರಾದರ್ ಪ್ರಜೆಗಳುಂ ಸಮಸ್ತಾವನಿಯೊಳ್ ೪೦

ವ॥ ಮತ್ತಿತ್ತ ವೃಷಭನಾಥನುಂ ವೃಷಭಸೇನನುಂ ಕುಂಭ [ಸೇನ] ದೃಢರಥ ಶತಧನು ದೇವಶರ್ಮ ದೇವಭವ ನಂದನ ಸೋಮದತ್ತ ಶೂರದತ್ತ ವಾಯುಶರ್ಮ ಯಶೋಬಾಹು ದೇವಾಗ್ನಿ ಅಗ್ನಿದೇವ ಅಗ್ನಿಗುಪ್ತ ಮಿತ್ರಾಗ್ನಿ ಹಳಧರ ಮಹೀಧರ ಮಹೇಂದ್ರ ವಸುದೇವ ವಸುಂಧರಾಚಳ ಮೇರು ಮೇರುಧನ ಮೇರುಭೂತಿ ಸರ್ವಯಶ ಸರ್ವಯಜ್ಞ ಸರ್ವಗುಪ್ತ ಸರ್ವಪ್ರಿಯ ಸರ್ವದೇವ ಸರ್ವವಿಜಯ ವಿಜಯಗುಪ್ತ ವಿಜಯಮಿತ್ರ ವಿಜಯಿಲ ಅಪರಾಜಿತ ವಸುಮಿತ್ರ ವಿಶ್ವಸೇನ ಸಾಧುಷೇಣ ಸತ್ಯದೇವ ದೇವಸತ್ಯ ಸತ್ಯಗುಪ್ತ ಸತ್ಯಮಿತ್ರ ಶರ್ಮಳ ವಿನೀತ ಸಂವರ ಮುನಿಗುಪ್ತ ಮುನಿದತ್ತ ಮುನಿಯಜ್ಞ ಮುನಿದೇವ ಗುಪ್ತಯಜ್ಞ ಮಿತ್ರಯಜ್ಞ ಸ್ವಯಂಭು ಭಗದೇವ ಭಗದತ್ತ ಭಗಫಲ್ಗು ಗುಪ್ತಫಲ್ಗು ಮಿತ್ರಫಲ್ಗು ಪ್ರಜಾಪತಿ ಸರ್ವಸಂಘ ವರುಣ ಧನಪಾಲ ಮಘವ ತೇಜೋರಾಶಿ ಮಹಾವೀರ ಮಹಾರಥ ವಿಶಾಲಾಕ್ಷ ಮಹಾಬಲ ಸುವಿಶಾಲ ವಜ್ರ ವಜ್ರಸಾರ ಚಂದ್ರಚೂಲ ಜಯ

೩೯. ಭರತೇಶ್ವರನು ವಂದನಕ್ಕಾಗಿ ಮಾಡಿಸಿದ ಮಾಲೆಯು ಭರತಖಂಡದಲ್ಲಿ ವಂದನಮಾಲೆಯೆಂದು ಈಗಲೂ ಪ್ರಸಿದ್ಧಿಗೊಂಡಿದೆ.[1] ೪೦. ಪ್ರಿಯನೂ ಧರ್ಮಪರನೂ ಆದ ಆ ರಾಜನನ್ನು ಕಂಡು ಅವನ ತೇಜಸ್ಸಿನಿಂದ ತೇಜಸ್ಸನ್ನು ಪಡೆದು "ಯಥಾ ರಾಜಾ ತಥಾ ಪ್ರಜಾ" ಎನ್ನುವಂತೆ ಅವನ ಪ್ರಜೆಗಳೂ ಧರ್ಮಪರರಾದರು. ವ॥ ಮತ್ತೆ ಇತ್ತ ವೃಷಭನಾಥನಾದರೋ ವೃಷಭಸೇನ, ಕುಂಭಸೇನ, ದೃಢರಥ, ಶತಧನು, ದೇವಶರ್ಮ, ದೇವಭವ, ನಂದನ, ಸೋಮದತ್ತ, ಶೂರದತ್ತ, ವಾಯುಶರ್ಮ, ಯಶೋಬಾಹು, ದೇವಾಗ್ನಿ, ಅಗ್ನಿದೇವ, ಅಗ್ನಿಗುಪ್ತ, ಮಿತ್ರಾಗ್ನಿ, ಹಲಧರ, ಮಹೀಧರ, ಮಹೇಂದ್ರ, ವಸುದೇವ, ವಸುಂಧರ, ಅಚಲ, ಮೇರು, ಮೇರುಧನ, ಮೇರುಭೂತಿ, ಸರ್ವಯಶ, ಸರ್ವಯಜ್ಞ, ಸರ್ವಗುಪ್ತ, ಸರ್ವಪ್ರಿಯ, ಸರ್ವದೇವ, ಸರ್ವವಿಜಯ, ವಿಜಯಗುಪ್ತ, ವಿಜಯಮಿತ್ರ, ವಿಜಯಿಲ, ಅಪರಾಜಿತ, ವಸುಮಿತ್ರ, ವಿಶ್ವಸೇನ, ಸಾಧುಷೇಣ, ಸತ್ಯದೇವ, ದೇವಸತ್ಯ, ಸತ್ಯಗುಪ್ತ, ಸತ್ಯಮಿತ್ರ, ಶರ್ಮಳ, ವಿನೀತ, ಸಂವರ, ಮುನಿಗುಪ್ತ, ಮುನಿದತ್ತ, ಮುನಿಯಜ್ಞ, ಮುನಿದೇವ, ಗುಪ್ತಯಜ್ಞ, ಮಿತ್ರಯಜ್ಞ, ಸ್ವಯಂಭು, ಭಗದೇವ, ಭಗದತ್ತ, ಭಗಫಲ್ಗು, ಗುಪ್ತಫಲ್ಗು, ಮಿತ್ರಫಲ್ಗು, ಪ್ರಜಾಪತಿ, ಸರ್ವಸಂಘ, ವರುಣ, ಧನಪಾಲ, ಮಘವ, ತೇಜೋರಾಶಿ, ಮಹಾವೀರ, ಮಹಾರಥ, ವಿಶಾಲಾಕ್ಷ, ಮಹಾಬಲ,

1 ವಂದನಮಾಲೆಯೆಂಬ ಹೆಸರಿನ ವ್ಯುತ್ಪತ್ತಿ ಇದು.

**ಮಹಾರಸ ಕಚ್ಛ ಮಹಾಕಚ್ಛ ನಮಿ ವಿನಮಿ ಬಳ ಅತಿಬಳ ವಜ್ರಬಳ ಭದ್ರಬಳ ನಂದಿ ಮಹಾಭಾಗಿ ನಂದಿಮಿತ್ರ ಕಾಮದೇವ ಅನುಪಮರೆಂಬೆಣ್ಬತ್ತುನಾಲ್ವರ್ ಗಣಧರದೇವರುಂ, ನಾಲ್ಸಾಸಿಱದೇೞ್ನೂಱಯ್ವ ದಿಂಬರ್ ಸಕಳಪೂರ್ವಧರರುಂ, ನಾಲ್ಸಾಸಿರದೆೞ್ನೂಱಯ್ವದಿಂಬರ್ ಶಿಕ್ಷಕರುಂ ಒಂಬೈಸಾಸಿರ್ವರವಧಿ ಜ್ಞಾನಿಗಳುಂ ಇರ್ಪತ್ತುಛಾಸಿರ್ವರ್ಕೇವಳಜ್ಞಾನಿಗಳುಂ [ಇರ್ಪತ್ತುಛಾಸಿರದಱುನೂರ್ವರ್] ವಿಕ್ರಿಯರ್ಧಿ ಪ್ರಾಪ್ತರುಂ ಪನ್ನಿರ್ಛಾಸಿರದೆೞ್ನೂಱಯ್ವದಿಂಬರ್ ಮನಃಪರ್ಯಯಜ್ಞಾನಿಗಳುಂ ಅನಿಬರೆ ವಾದಿಗಳುಂ ಮೊದಲಾಗೆ ಎಣ್ಬತ್ತನಾಲ್ಸಾಸಿರದೆಣ್ಬತ್ತನಾಲ್ವರ್ ಮುನಿಪತಿಗಳುಂ ಮೂಱುಲಕ್ಕೆಯುಮಯ್ವತ್ತುಸಾಸಿರ ಬ್ರಾಹ್ಮಿ ಮುಖ್ಯಾರ್ಯಿಕಾಗಣಮುಂ ಮೂಱುಲಕ್ಕೆ ದೃಢವ್ರತಾದಿ ಶ್ರಾವಕರುಂ ಅಯ್ದುಲಕ್ಕೆ ಸುವ್ರತೆ ಮೊದಲಾಗೆ ಪರಮಶ್ರಾವಕಿಯರುಂ ಅಯ್ದುಲಕ್ಕೆ ಭವನಾಮರಾದಿ ಚತುರ್ವಿಧದೇವನಿಕಾಯಮುಂ ಪಕ್ಷಿಚತುಷ್ಪದಸರೀ ಸೃಪಾದಿತಿರ್ಯಗ್ಜಾತಿಗಳುಂ ಬೆರಸು ಧರ್ಮಾಮೃತವರ್ಷದಿಂ ಧರ್ಮಕ್ಷೇತ್ರಂಗಳೊಳ್ ಭವ್ಯಸಸ್ಯಂಗಳನನೇಕ ವ್ರತಫಲಭರವಿನತಂಗಳ್ ಮಾಡಿ ಚತುರುತ್ತರಾಶೀತಿಲಕ್ಷಪುರ್ಬಂಗಳೊಳಗೆ ಪದಿನಾಲ್ಕುದಿವಸದಾಯುಷ್ಯಮುಂಟೆನೆ ಕೈಳಾಸಪರ್ವತದ ಸಿದ್ಧಕೂಟದೊಳ್ ಪೌಷ್ಯಮಾಸದ ಪೌರ್ಣಮಿ ದಿನದಂದು ಯೋಗಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ; ಅನ್ನೆಗಮಿತ್ತಲ್,**

ಸುವಿಶಾಲ, ವಜ್ರ, ವಜ್ರಸಾರ, ಚಂದ್ರಚೂಡ, ಮೇಘೇಶ್ವರ, ಮಹಾಸ್ವರ, ಕಚ್ಛ, ಮಹಾ ಕಚ್ಛ, ನಮಿ, ವಿನಮಿ, ಬಲ, ಅತಿಬಲ, ವಜ್ರಬಲ, ಭದ್ರಬಲ, ನಂದಿ, ಮಹಾಭಾಗಿ, ನಂದಿಮಿತ್ರ, ಕಾಮದೇವ, ಅನುಪಮರೆಂಬ ಎಂಬತ್ತುನಾಲ್ಕು ಜನ ಗಣಧರದೇವರುಗಳೂ ನಾಲ್ಕುಸಾವಿರದೇಳ್ನೂರೈವತ್ತು ಸಕಲಪೂರ್ವಧರರೂ ನಾಲ್ಕು ಸಾವಿರದೈನೂರೈವತ್ತು ಶಿಕ್ಷಕರೂ ಒಂಬತ್ತು ಸಾವಿರ ಅವಧಿಜ್ಞಾನಿಗಳೂ ಇಪ್ಪತ್ತುಸಾವಿರ ಕೇವಲಜ್ಞಾನಿಗಳೂ ಇಪ್ಪತ್ತುಸಾವಿರದಾರುನೂರು ವಿಕ್ರಿಯರ್ಧಿಪ್ರಾಪ್ತರೂ (ಶರೀರಕ್ಕೆ ಸಂಕೋಚ ವಿಕಾಸಗಳನ್ನು ಮಾಡಿಕೊಳ್ಳಲರ್ಹರಾದ) ಹನ್ನೆರಡು ಸಾವಿರದೇಳ್ನೂರೈವತ್ತು ಮನಃಪರ್ಯಯಜ್ಞಾನಿಗಳೂ ಅಷ್ಟೇಜನ ವಾದಿಗಳೂ ಸೇರಿ ಒಟ್ಟು ಎಂಬತ್ತುನಾಲ್ಕು ಸಾವಿರದ ಎಂಬತ್ನಾಲ್ಕು (೮೪೦೮೪) ಮುನಿಪತಿಗಳೂ ಮೂರುಲಕ್ಷದ ಐವತ್ತುಸಾವಿರ ಬ್ರಾಹ್ಮೀಮುಖ್ಯಾರ್ಯಿಕಾಗಣವೂ ಮೂರುಲಕ್ಷ ದೃಢವ್ರತನೇ ಮೊದಲಾದ ಅಧಿಶ್ರಾವಕರೂ ಐದುಲಕ್ಷ ಸುವ್ರತೆಯರೇ ಮೊದಲಾದ ಪರಮಶ್ರಾವಕಿಯರೂ ಐದುಲಕ್ಷ ಭವನಮರಾದಿ ಚತುರ್ವಿಧ ದೇವನಿಕಾಯವೂ ಪಕ್ಷಿ, ಪ್ರಾಣಿ, ಸರೀಸೃಪಾದಿ = (ತೆವಳುವ ಪ್ರಾಣಿ) ತಿರ್ಯಗ್ಜಾತಿಗಳೇ ಮೊದಲಾದವರೊಡನೆ ಧರ್ಮಾಮೃತವರ್ಷದಿಂದ ಧರ್ಮಕ್ಷೇತ್ರಗಳಲ್ಲಿ ಭವ್ಯರೆಂಬ ಸಸ್ಯಗಳನ್ನು ಅನೇಕ ವ್ರತಗಳೆಂಬ ಹಣ್ಣುಗಳ ಭಾರದಿಂದ ಬಾಗಿದುವನ್ನಾಗಿ ಮಾಡಿ, ಎಂಬತ್ನಾಲ್ಕು ಲಕ್ಷ ಪೂರ್ವಕಾಲಗಳಲ್ಲಿ ಕೇವಲ ಹದಿನಾಲ್ಕು ದಿನಗಳ ಕಾಲ ಆಯುಷ್ಯವಿರಲು, ಕೈಲಾಸಪರ್ವತದ ಸಿದ್ಧಕೂಟದಲ್ಲಿ ಪುಷ್ಯಮಾಸದ ಹುಣ್ಣಿಮೆಯಂದು ಯೋಗನಿರೋಧಪೂರ್ವಕವಾಗಿ ಯೋಗಪಲ್ಯಂಕಾಸನದಲ್ಲಿ ಪೂರ್ವಾಭಿಮುಖನಾಗಿ ಕುಳಿತನು. ಆಗ ೪೧. ಮಂದರಪರ್ವತವು[1] ಪ್ರಾಗ್ಭಾರಭೂಮಿಯವರೆಗೆ[2] ನೀಳವಾಗಿ ಹರಡಿ ನಿಂತಂತೆ ಭರತನು ಕನಸಿನಲ್ಲಿ ಕಂಡು ಅದಕ್ಕಾಗಿ ಹೆದರಿದನು. ಮೇಲಾಗಿ ಬಹಳ

---

1 ಮೇರುಪರ್ವತ 2 ಸಿದ್ಧಕ್ಷೇತ್ರ

ಭರತಂ ದರ್ಶನದೊಳ್ ಮಂ
ದರಮಾ ಪ್ರಾಗ್ಭಾರಭೂತಳಂಬರೆಗಂ ನೀ
ಳ್ದಿರೆ ಕಂಡು ವಿಸ್ಮಿತಾಂತಃ
ಕರಣನದರ್ಕಗಿದು ನಾಡೆಯುಂ ಚಿಂತಿಸಿದಂ ೪೧

ದಿವದಿನಿಟಿದೋಷಧಿದ್ರುಮ
ಮವನೀತಳಮನುಜಮರಣಜನ್ಮಜರಾಸಂ
ಭವಭಯಮಂ ಕಿಡಿಸಿ ದಿವ
ಕ್ಕವಯವದಿಂದಡರೆ ನೋಡಿದಂ ಯುವರಾಜಂ ೪೨

ನರಸಮಿತಿಗೆ ಬೇಡಿದುದಂ
ನಿರಂತರಂ ಕೊಟ್ಟು ಕಲ್ಪವೃಕ್ಷಂ ಪೋಗಲ್
ಸುರಲೋಕಕ್ಕುದ್ಯತಮಾ
ಗಿರೆ ಕಂಡಂ ಸ್ವಪ್ನಸಮಯದೊಳ್ ಗೃಹಪತಿಯುಂ ೪೩

ಪರರತ್ನದ್ವೀಪಂ ಭಾ
ಸುರರತ್ನಾಳಿಯನನಾರತಂ ಕೊಟ್ಟು ವಸುಂ
ಧರೆಗಭ್ರದತ್ತ ನೆಗೆಯು
ಲ್ಕಿರೆ ಕಂಡಂ ಭರತಮಂತ್ರಿಮುಖ್ಯನುಮಾಗಳ್ ೪೪

ನೆಲಸಿರ್ದ ವಜ್ರಪಂಜರ
ಮಲಱುವಿನಂ ಪಾಯ್ದು ಸಿಂಧುರಾರಾತಿಯನು
ಜ್ಜ್ವಲತನುವನಭ್ರಪಥದ
ತ್ತ ಲಂಘಿಸಲ್ಕಿರ್ದುದಂ ಚಮೂಪತಿ ಕಂಡಂ ೪೫

ವ।। ಮತ್ತಂ ಜಯಪ್ರಿಯತನೂಜಂ,

ಚಿಂತಿಸಲಾರಂಭಿಸಿದನು. ೪೨. ಔಷಧಿವೃಕ್ಷವು ಸ್ವರ್ಗದಿಂದ ಭೂಮಿಗಿಳಿದು ಬಂದು ಇಲ್ಲಿರುವ ಮನುಷ್ಯರಿಗೆ ಸಾವು, ಹುಟ್ಟು, ಮುಪ್ಪುಗಳಿಂದ ಉಂಟಾಗಲಿರುವ ಭಯವನ್ನು ಹೋಗಲಾಡಿಸಿ ಉಪೇಕ್ಷೆಯಿಂದ ಸ್ವರ್ಗವನ್ನೇರಲು ಪ್ರಯತ್ನಿಸಿದಂತೆ ಯುವರಾಜನು (ಅರ್ಕಕೀರ್ತಿಯು) ಕಂಡನು. ೪೩. ಕಲ್ಪವೃಕ್ಷವು ನರಸಮಿತಿಗೆ ಬೇಡಿದುದನ್ನು ಕೊಟ್ಟು ಪುನಃ ಸ್ವರ್ಗಲೋಕಕ್ಕೆ ಹೋಗಲುದ್ಯುಕ್ತವಾದಂತೆ ಆ ಗೃಹಪತಿರತ್ನನಾದ (ಕಾಮವೃಷ್ಟಿಯು) ಸ್ವಪ್ನದಲ್ಲಿ ಕಂಡನು. ೪೪. ರತ್ನದ್ವೀಪವು ಭಾಸುರವಾದ ರತ್ನಸಮೂಹವನ್ನು ವಸುಂಧರೆಗೆ ನಿರಂತರವಾಗಿತ್ತು ಆಕಾಶದೆಡೆಗೆ ನೆಗೆಯುತ್ತಿರುವಂತೆ ಭರತನ ಮಂತ್ರಿ ಮುಖ್ಯನು ಕಂಡನು. ೪೫. ತಾನು ನೆಲಸಿದ್ದ ವಜ್ರಪಂಜರವನ್ನು ನಾಶಪಡಿಸಿ ಹೊರಬಂದ ಉಜ್ವಲ ದೇಹವುಳ್ಳ ಸಿಂಹವು ಆಕಾಶಕ್ಕೆ ನೆಗೆಯುತ್ತಲಿರುವುದನ್ನು ಸೈನ್ಯಾಧಿಪತಿಯು ಕಂಡನು. ವ।। ಮತ್ತೆ ಜಯಕುಮಾರನ ಪುತ್ರನಾದ ಅನಂತವೀರ್ಯನು

ತಾರಾನಿಕರಾವೇಷ್ಟಿತ
ತಾರಾಪತಿಯಂ ಸಮಸ್ತ ನರಲೋಕಮುಮಂ
ನೇರಿಸ್ತು ಬೆಳಗಿ ಪೋಪುದ
ನಾರಾತ್ರಿಯೊಳಿಂತನಂತವೀರ್ಯಂ ಕಂಡಂ ೪೬

ಸುರರಾಜಮನಃಪ್ರಿಯೆ ಶಚಿ
ವೆರಸು ಯಶಸ್ವತಿಯುಮಾಸುನಂದೆಯುಮಾಗಳ್
ಪಿರಿದುಂ ಶೋಕದೊಳಿರೆ ಯುವ
ತಿರತ್ನಮೆನಿಸಿದ ಸುಭದ್ರ ಕನಸಂ ಕಂಡಳ್ ೪೭

ವ॥ ಮತ್ತಂ ವಾರಾಣಸೀನಗರಾಧೀಶ್ವರನಕಂಪನತನಯಂ,

ಧರಣೀತಳಘನತಮಮಂ
ಕರಗಿಸಿ ಭಾಸ್ವತ್ಕರಂಗಳಿಂ ಗಗನತಳ
ಕ್ಕಿರದಡರ್ವ ವಿಸ್ಫುರದ್ದಿನ
ಕರನಂ ಚಿತ್ರಾಂಗದಾವನೀಶಂ ಕಂಡಂ ೪೮

ವ॥ ಅಂತು ಭರತಾದಿಗಳನಿಬರುಂ ತಂತಮ್ಮ ಕಂಡ ಕನಸುಗಳಂ ಪ್ರಭಾತಸಮಯದೊಳ್ ಪುರೋಹಿತಂಗಱಿಪಿದೊಡೆ ನಿಮ್ಮ ಕಂಡ

ಕನಸುಗಳಿವು ಪೆಱಪೆಱತೇ
ನನಂತಗುಣನಿಳಯನಾದಿದೇವಂ ಪಲಬರ್
ಮುನಿಪತಿಗಳ್ ವೆರಸಡರ್ದಪ
ನನಶ್ವರಾಸ್ಪದಮನೆಂಬುದಂ ಸೂಚಿಸುಗುಂ ೪೯

ವ॥ ಎಂಬುದುಮಾ ಪ್ರಸ್ತಾವದೊಳ್ ಆದಿಭಟ್ಟಾರಕವ್ಯತಿಕರಸ್ಥಿತಿಯನಾನಂದನೆಂಬಂ

೪೬. ನಕ್ಷತ್ರಸಮೂಹದಿಂದ ಪರಿವೃತನಾದ ನಕ್ಷತ್ರರಾಜನು (ಚಂದ್ರನು) ಎಲ್ಲ ನರಲೋಕವನ್ನೂ ವ್ಯಾಪಿಸಿ ಬೆಳಗಿ ಹೋದುದನ್ನು ಆ ರಾತ್ರಿಯಲ್ಲಿ ಕಂಡನು. ೪೭. ದೇವೇಂದ್ರನ ಮನಃಪ್ರಿಯೆಯಾದ ಶಚೀದೇವಿಯೊಡನೆ ಯಶಸ್ವತೀ ಸುನಂದೆಯರು ಅತ್ಯಂತ ಶೋಕಾಕ್ರಾಂತರಾಗಿದ್ದಂತೆ ಯುವತಿರತ್ನಗಳಾದ ಸುನಂದೆಯು ಕನಸಿನಲ್ಲಿ ಕಂಡಳು. ವ॥ ಮತ್ತೆ ವಾರಾಣಸೀ ನಗರದ ರಾಜನಾದ ಅಕಂಪನನ ಮಗನು (ಚಿತ್ರಾಂಗದನು) ೪೮. ಭೂತಳದಲ್ಲಿ ದಟ್ಟವಾಗಿ ಹರಡಿದ್ದ ಕತ್ತಲೆಯನ್ನು ತನ್ನ ಕಿರಣಗಳ ಜಾಲದಿಂದ ಕರಗಿಸಿ ಆಕಾಶತಳವನ್ನೇರುತ್ತಿದ್ದ ಪ್ರಕಾಶಮಾನನಾದ ಸೂರ್ಯನನ್ನು ತನ್ನ ಕನಸಿನಲ್ಲಿ ಕಂಡನು. ವ॥ ಭರತನೇ ಮೊದಲಾದವರೆಲ್ಲರೂ ತಾವು ಕಂಡ ಕನಸುಗಳನ್ನು ಪ್ರಭಾತ ಸಮಯದಲ್ಲಿ ಪುರೋಹಿತನಿಗೆ ತಿಳಿಸಿದರು. ೪೯. "ನೀವು ಕಂಡ ಕನಸುಗಳು ಇನ್ನೇನು, ಅನಂತಗುಣನಿಲಯನಾದ ಆದಿದೇವನು ಕೆಲವು ಮುನಿಪತಿಗಳೊಡನೆ ಶಾಶ್ವತವಾದ ಮೋಕ್ಷವನ್ನು ಹೊಂದುವನೆಂದು ಸೂಚಿಸುವುದಾಗಿ" ಪುರೋಹಿತನು ತಿಳಿಸಿದನು. ವ॥ ಆ ಪ್ರಸ್ತಾವದಲ್ಲಿ ಆದಿಭಟ್ಟಾರಕರ ಸ್ಥಿತಿಯನ್ನು ಆನಂದನೆಂಬುವನು ಧರ್ಮಕಾರ್ಯ

ಧರ್ಮಕಾರ್ಯನಿಮಿತ್ತಂ ಬಂದಱಿಪಿದೊಡೆ, ಭರತೇಶ್ವರಚಕ್ರವರ್ತಿಯುಂ ವಿನೇಯಜನಸಮೇತಂ ಬಂದು ಭಟ್ಟಾರಕರಂ ಮೂಱುಸೂೞ್ ಬಲವಂದು ಕೃತಾಭೀಷ್ಟಸ್ತವನಪರಂ ಮಹಾಮಹಮೆಂಬ ಮಹಾ ಪೂಜೆಯಂ ಮಹಾವಿಭೂತಿಯಿಂ ಪದಿನಾಲ್ಕುದಿವಸಂಬರಂ ನಿರಂತರಂ ಮಾಡೆ ವೃಷಭನಾಥಂ ಸ್ವಸ್ಥಾನಯೋಗಕೇವಲಿ ಕೇವಲಿಪ್ರದೇಶನಿರ್ಜರೆಯಂ ಮಾಡುತ್ತುಮಂತರ್ಮುಹೂರ್ತಕಾಲದಿಂ ಶರೀರತ್ರಿಗುಣಬಹುಳತೆಯಿಂ ಚತುರ್ದಶರಜ್ವಾಯಾಮಾತ್ಮತ್ರಿಗುಣಪ್ರಮಾಣಾತ್ಮಪ್ರದೇಶವಿಸರ್ಪಣದಿಂ ದಂಡಕ್ರಿಯಾಕರಣಾನಂತರ ಸಮಯದೊಳ್ ಪೂರ್ವೋಕ್ತಬಾಹುಲ್ಯದಿಂ ಲೋಕಾಕಾಶವ್ಯಾಪಕಕವಾಟ ಕ್ರಿಯೆಯಂ ನೆಱಪಿ ತದನಂತರ ಸಮಯದೊಳ್ ವಾತವಳಯಮುೞಿಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿ ನಿರ್ವರ್ತಿತ ಪ್ರತರಕ್ರಿಯಾವಿಶೇಷಂ ತದನಂತರಕ್ಷಣದೊಳ್ ವ್ಯಾಪ್ತಸಪ್ತಘನರಜ್ಜು ಪ್ರಮಾಣಶೇಷ ಜಗತ್ಪ್ರದೇಶಲೋಕಪೂರಣಕ್ರಿಯಾಪರಿಸಮಾಪ್ತಿಯಂ ಮಾಡಿ ಮತ್ತಂ ಪ್ರವರ್ತಿತಪ್ರತರ ಕವಾಟದಂಡಕ್ರಿಯಾ ವಿಶೇಷಂಗಳಿಂ ಖಂಡಿತಾಘಾತಿಚತುಷ್ಕಸ್ಥಿತ್ಯನುಭಾಗನಪಗತ ಮೂಲಶರೀರ ಪ್ರಮಾಣಾತ್ಮಕಪ್ರದೇಶ ನಾಯುಷ್ಯಸ್ಥಿತಿಸಮೀಕೃತಾಶೇಷಾಘಾತಿತ್ರಯಸ್ಥಿತಿಕನಂತರ್ಮುಹೂರ್ತ ನಿರುದ್ಧಾಶೇಷ ಮನೋವಾಗ್ಬಾದರ ಕಾಯಯೋಗಂ ಸೂಕ್ಷ್ಮಕಾಯಯೋಗಪರಿಣತನುಪಯೋಗಪರಿಕಲ್ಪಿತ ಸೂಕ್ಷ್ಮ ಕ್ರಿಯಾಪ್ರತಿಪಾತ್ಯಭಿಧಾನ ತೃತೀಯಶುಕ್ಲಧ್ಯಾನಪರಾಯಣಂ ನಿರುದ್ಧಸೂಕ್ಷ್ಮ ಶರೀರಯೋಗನನಂತರ ಸಮಯದೊಳ್ ಪಂಚಹ್ರಸ್ವಾಕ್ಷ ರೋಚ್ಚಾರಣ ಮಾತ್ರ ಕಾಲಪ್ರಮಿತಾಯೋಗಗುಣಸ್ಥಾನಸ್ಥಿತಂ ಸಮುಚ್ಛಿನ್ನಕ್ರಿಯಾಪ್ರತಿಪತ್ತಿಧ್ಯಾನ ಪರಿಪೂರ್ಣಾಶೇಷ ಶೀಲಗುಣಗಣನಿಳಯಂ ನಿಜದ್ವಿಚರಮಸಮಯ ದೊಳ್ ಅನ್ಯತರವೇದನೀಯ, ದೇವಗತಿ, ತತ್ಪ್ರಯೋಗ್ಯಾನುಪೂರ್ವ್ಯ, ಶರೀರಬಂಧನಸಂಘಾತವರ್ಣ ರಸಪಂಚಕ, ಸಂಸ್ಥಾನಸಂಹನನಷಟ್ಕಾಂಗೋ ಪಾಂಗತ್ರಿಕ್ರ, ಗಂಧದ್ವಿಕ, ಸ್ಪರ್ಶಾಷ್ಟಕ, ಅಗುರುಲಘುಷ್ಕ, ವಿಹಾಯೋಗತಿದ್ವಿಕ, ಸ್ಥಿರಾಸ್ಥಿರ, ಶುಭಾಶುಭ, ಸುಸ್ವರ, ದುಸ್ವರ, ಸುಭಗ ದುರ್ಭಗ, ಪ್ರತ್ಯೇಕ ಶರೀರಾಯಶಸ್ಕೀರ್ತ್ಯನಾದೇಯ, ನಿರ್ಮಾಣ, ಪರ್ಯಾಪ್ತ, ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ

ನಿಮಿತ್ತವಾಗಿ ಬಂದು ಅರುಹಿದನು. ಒಡನೆ ಭರತೇಶ್ವರ ಚಕ್ರವರ್ತಿಯು ಶಿಷ್ಯಸಮೇತನಾಗಿ ಬಂದು ಭಟ್ಟಾರಕರನ್ನು ಮೂರುಬಾರಿ ಪ್ರದಕ್ಷಿಣೆಮಾಡಿದನು. ಅಭೀಷ್ಟಸ್ತೋತ್ರಪರನಾಗಿ ಮಹಾಮಹವೆಂಬ ಮಹಾಪೂಜೆಯನ್ನು ಮಹಾವಿಜೃಂಭಣೆಯಿಂದ ಹದಿನಾಲ್ಕು ದಿನಗಳವರೆಗೆ ನಿರಂತರವಾಗಿ ಸಲ್ಲಿಸಿದನು. ಸ್ವಸ್ಥಾನಯೋಗಕೇವಲಿಯಾದ ವೃಷಭನಾಥನು ಕೇವಲಿಪ್ರದೇಶನಿರ್ಜರೆಯಲ್ಲಿ ತೊಡಗಿ, ಅಂತರ್ಮುಹೂರ್ತಕಾಲದಲ್ಲಿ ಶರೀರ ತ್ರಿಗುಣ ಬಹುಳತೆಯಿಂದ ಹದಿನಾಲ್ಕು ರಜ್ಜುಗಳಷ್ಟು ಉದ್ದವಾಗಿ ಆತ್ಮಪ್ರದೇಶವನ್ನು ವಿಸ್ತರಿಸಿ ದಂಡಕ್ರಿಯೆಯನ್ನು ಮಾಡಿದನು. ಅನಂತರ ಹಿಂದೆ ಹೇಳಿದ (ಶರೀರತ್ರಿಗುಣ) ಬಹುಳತೆಯಿಂದ ಲೋಕಾಕಾಶವನ್ನು (ಅಗಲವಾಗಿ) ವ್ಯಾಪಿಸುವ ಕವಾಟಕ್ರಿಯೆಯನ್ನು ನಡೆಸಿದನು. ಅನಂತರ ವಾತವಲಯವನ್ನು ಬಿಟ್ಟು ಉಳಿದ ಲೋಕಪ್ರದೇಶವನ್ನು ಆತ್ಮಪ್ರದೇಶಗಳಿಂದ (ಎಲ್ಲೆಡೆಯೂ) ವ್ಯಾಪಿಸಿ ಪ್ರತರಕ್ರಿಯೆಯನ್ನು ಮಾಡಿ, ಮುಂದಿನ ಕ್ಷಣದಲ್ಲಿ ಏಳು ಘನರಜ್ಜು ಪ್ರಮಾಣವುಳ್ಳ ಅವಶಿಷ್ಟ ಜಗತ್ ಪ್ರದೇಶಗಳನ್ನು (ವಾತವಲಯವನ್ನೂ ಸಹ) ವ್ಯಾಪಿಸುವ ಲೋಕಪೂರಣಕ್ರಿಯೆಯನ್ನು ಸಮಾಪ್ತಿಗೊಳಿಸಿ, ಮತ್ತೆ ಪ್ರತರ-ಕವಾಟ-ದಂಡ ಕ್ರಿಯಾವಿಶೇಷಗಳಿಂದ ಖಂಡಿಸಿದ ನಾಲ್ಕು ಅಘಾತಿಕರ್ಮಗಳ (ನಾಮ, ಗೋತ್ರ, ಆಯು, ವೇದನೀಯ) ಸ್ಥಿತ್ಯನುಭಾಗನಾಗಿ ಮೂಲಶರೀರ ಪ್ರಮಾಣದ

**ನಿರವಶೇಷಂ ಕಿಡಿಸಿ ಸ್ವಕೀಯಚರಮಸಮಯದೊಳ್ ಅನ್ಯತರ ವೇದನೀಯ, ಮನುಷ್ಯಾಯುಷ್ಯ, ಮನುಷ್ಯಗತಿ, ತತ್ಪ್ರಾಯೋಗ್ಯಾನುಪೂರ್ವ್ಯ, ಪಂಚೇಂದ್ರಿಯಜಾತಿ, ತ್ರಸನಾಮ, ಸುಭಗಾದೇಯ, ಪರ್ಯಾಪ್ತ ಬಾದರಯಶಸ್ಕೀರ್ತಿರುಚ್ಚೈರ್ಗೋತ್ರ, ತೀರ್ಥಕರ ನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ ಬೞಿಯಂ ಕ್ಷಾಯಿಕಸಮ್ಯಕ್ತ್ವಾನಂತ ಜ್ಞಾನದರ್ಶನವೀರ್ಯಸೂಕ್ಷ್ಮಾವಗಾಹಾಗುರುಲಘುತ್ವಾವ್ಯಾಬಾಧಂಗಳೆಂಬ,**

ಆತ್ಮವುಳ್ಳವನಾದನು.[1] (ಜೀವನನ್ನು ಹಿಗ್ಗಿಸಿ ಸಮಸ್ತಲೋಕ ಪ್ರದೇಶವನ್ನೂ ವ್ಯಾಪಿಸಿ ಮತ್ತೆ ಮೂಲಶರೀರದಲ್ಲಿ ಅಡಕಮಾಡಿದನು.) ಹೀಗೆ (ನಾಮ, ಗೋತ್ರ, ವೇದನೀಯ) ಎಂಬ ಮೂರು ಅಘಾತಿಕರ್ಮಗಳ ಸ್ಥಿತಿಯನ್ನು ತನ್ನ ಆಯುಷ್ಯಕರ್ಮದ ಸ್ಥಿತಿಗೆ ಸಮೀಕೃತವಾಗಿ ಮಾಡಿ ಅಂತರ್ಮುಹೂರ್ತದಲ್ಲಿ ಸಮಸ್ತ ಮನೋ-ವಾಕ್-ಬಾದರಕಾಯಯೋಗವನ್ನು ನಿರೋಧಿಸಿ ಸೂಕ್ಷ್ಮಕಾಯಯೋಗವನ್ನವಲಂಬಿಸಿ ಉಪಯೋಗಕಲ್ಪಿತವಾದ 'ಸೂಕ್ಷ್ಮಕ್ರಿಯಾಪ್ರತಿಪಾತಿ' ಎಂಬ ತೃತೀಯ ಶುಕ್ಲಧ್ಯಾನದಲ್ಲಿ ನಿರತನಾದನು. ಆಮೇಲೆ ಸೂಕ್ಷ್ಮಶರೀರವನ್ನೂ ನಿರೋಧಿಸಿ ಐದು ಹ್ರಸ್ವಾಕ್ಷರಗಳನ್ನು (ಅ, ಇ, ಉ, ಋ, ಲೃ) ಉಚ್ಚರಿಸುವಷ್ಟು ಕಾಲದ ಆಯೋಗಗುಣಸ್ಥಾನದಲ್ಲಿ (ಹದಿನಾಲ್ಕನೆಯ ಗುಣಸ್ಥಾನದಲ್ಲಿ) ಇದ್ದು ಸಮುಚ್ಛಿನ್ನ ಕ್ರಿಯಾಪ್ರತಿಪತ್ತಿಧ್ಯಾನದಿಂದ[2] ಸಮಸ್ತ ಶೀಲ ಗುಣಗಣಗಳಿಂದ ಪರಿಪೂರ್ಣನಾದನು. ಆ ಸ್ವಾಮಿಯು ನಿಜದ್ವಿಚರಮ[3] ಸಮಯದಲ್ಲಿ ಅನ್ಯತರವೇದನೀಯ (ಘಾತಿ ಕರ್ಮಗಳ ನಾಶದಿಂದ ದುಃಖಫಲವನ್ನು ನೀಡಲು ಅಸಮರ್ಥನಾಗಿ ದಗ್ಧಬೀಜದಂತೆ ಉಳಿದು ಕೊಂಡಿರುವ ಅನುದಯವೆಂಬ (ಅಸಾತಾವೇದನೀಯ), ದೇವಗತಿ, ದೇವಗತಿ ಪ್ರಯೋಗ್ಯಾನುಪೂರ್ವ್ಯ, ೫ ಶರೀರ, ೫ ಬಂಧನ, ೫ ಸಂಘಾತ, ೫ ವರ್ಣ, ೫ ರಸ, ೬ ಸಂಸ್ಥಾನ, ೬ ಸಂಹನನ, ೩ ಅಂಗೋಪಾಂಗ, ೨ ಗಂಧ, ೮ ಸ್ಪರ್ಶ, ಅಗುರುಲಘುತ್ವ, ೨ ವಿಹಾಯೋಗತಿ (ಪ್ರಶಸ್ತ + ಅಪ್ರಶಸ್ತ), ಸ್ಥಿರ, ಅಸ್ಥಿರ, ಶುಭ, ಅಶುಭ, ಸುಸ್ವರ, ದುಸ್ವರ, ಸುಭಗ, ದುರ್ಭಗ, ಪ್ರತ್ಯೇಕಶರೀರ, ಅಯಶಸ್ಕೀರ್ತಿ, ಅನಾದೇಯ, ನಿರ್ಮಾಣ, ಅಪರ್ಯಾಪ್ತ, ನೀಚೈರ್ಗೋತ್ರ ಎಂಬ ಎಪ್ಪತ್ತೆರಡು ಪ್ರಕೃತಿಗಳನ್ನು ನಿಃಶೇಷವಾಗಿ ನಾಶಗೊಳಿಸಿ ತನ್ನ ಚರಮ (ಅಂತ್ಯ) ಸಮಯದಲ್ಲಿ ಅನ್ಯತರವೇದನೀಯ (ಸೋದಯವಾದ

---

1. ಹದಿಮೂರನೆಯ ಗುಣಸ್ಥಾನದಲ್ಲಿದ್ದ ವೃಷಭಸ್ವಾಮಿಯು ವಿಹಾರವನ್ನು ಮುಗಿಸಿ ಯೋಗಸ್ಥಿತನಾಗಿ ಸ್ವಸ್ಥಾನಕೇವಲಿಯಾಗಿದ್ದನು (ನೋಡಿ, ಗೊಮ್ಮಟಸಾರ, ಜೀವಕಾಂಡ, ಗಾಥಾ ೬೭ರ ಹಿಂದೀ ಟೀಕೆ ಮತ್ತು ಟಿಪ್ಪಣಿ) ಈಗ ಸಮುದ್ಘಾತಕೇವಲಿಯಾಗಿ ಕೇವಲಿನಿರ್ಜರೆಯಲ್ಲಿ ತೊಡಗುತ್ತಾನೆ. ದಂಡ, ಕವಾಟ, ಪ್ರತರ, ಲೋಕಪೂರಣ-ಇವು ನಾಲ್ಕು ಸಮುದ್ಘಾತ ಕ್ರಿಯೆಗಳು, ಶರೀರತ್ರಿಗುಣ ಬಹುಳತೆಯೆಂದರೆ ಪೂರ್ವಶರೀರವನ್ನು ಬಿಡದೆ ತೈಜಸ, ಕಾರ್ಮಣ ಶರೀರಗಳನ್ನು ಹಿಗ್ಗಿಸುವುದು. "ಆತ್ಮತ್ರಿಗುಣ ಪ್ರಮಾಣ" ಎಂಬುದರ ಅರ್ಥ ಸ್ಪಷ್ಟವಾಗಲಿಲ್ಲ, ಶರೀರತ್ರಯ ಸಂಬಂಧದಿಂದಲೇ 'ಆತ್ಮತ್ರಿಗುಣ ಪ್ರಮಾಣ' ಎಂದು ಹೇಳಿರಬಹುದು.

2. ಇದು ಸರ್ವೋತ್ಕೃಷ್ಟವಾದ ನಾಲ್ಕನೆಯ ಶುಕ್ಲಧ್ಯಾನ. 'ಸಮುಚ್ಛಿನ್ನಕ್ರಿಯಾನಿವರ್ತಿ' ಎಂದು ಇದನ್ನು ಕರೆಯಲಾಗಿದೆ (ರಾಜವಾರ್ತಿಕ ೯-೪೪)

3. ನಿರ್ವಾಣವನ್ನು ಹೊಂದುವುದಕ್ಕೆ ಮೊದಲು ಕಡೆಯ ಎರಡುಕ್ಷಣ. (ದ್ವೌಚರಮೌಯಸ್ಯ ಸಃ ದ್ವಿಚರಮಃ) ಪ್ರಕೃತದಲ್ಲಿ ಉಪಾಂತ್ಯಕ್ಷಣ

ಗುಣಮೆಂಟುಂ ಬಂದು ತನ್ನೊಳ್ ಪೆಣೆದಿರೆ ಸುಖಸಾದ್ಭೂತನುಂ ಲೋಕಚೂಡಾ
ಮಣಿಯುಂ ಶಶ್ವತ್ತ್ರಿಲೋಕೀಪ್ರಣುತನುಮತಿವಿಖ್ಯಾತನುಂ ಭವ್ಯಚಿಂತಾ
ಮಣಿಯುಂ ತಾನಾಗಿ ತನ್ನೊಳ್ ನೆಱೆಯೆ ಪಡೆದು ತನ್ನಂದಮಂ ತಾನೆ ತನ್ನ
ತ್ತಣಿನಾದಿಬ್ರಹ್ಮನೇಕಕ್ಷಣದೊಳೆ ಪರಮಬ್ರಹ್ಮಸದ್ಮಕ್ಕೆ ಸಂದಂ ೫೦

ದೊರೆಕೊಂಡ ಮಾಘಮಾಸಂ
ಬರೆ ಕೃಷ್ಣಚತುರ್ದಶೀದಿನಂ ಸಮನಿಸೆ ತ
ತ್ಪುರುದೇವಂ ಮುಕ್ತಿವಧೂ
ವರತೆಯನಭಿಜಿನ್ಮುಹೂರ್ತದೊಳ್ ಕೈಕೊಂಡಂ ೫೧

ವ|| ಅಂತು ವೃಷಭೇಶ್ವರಂ ಲೋಕಶಿಖರಿಶಿಖರಶೇಖರಾಯಮಾನಮುಂ ಕ್ರಮೋನ್ನತಮಾಗಿ ಮಧ್ಯಪ್ರದೇಶದೊಳಷ್ಟಯೋಜನಬಾಹುಲ್ಯಮುಂ ಧವಳಚ್ಛತ್ರಾಕಾರಮುಂ ನಾಲ್ವತ್ತೈದುಲಕ್ಷಯೋಜನ ದಗಲಮುಂ ಸಮವೃತ್ತಮುಂ ಎನಿಸಿದೀಷತ್ಪ್ರಾಗ್ಭಾರದ ಮೇಗಣ ಘನೋದಧಿಘನಾನಿಲತನುವಾತ [ತೃತೀಯ][1]ಭಾಗದೊಳ್ ಅವ್ಯಾಬಾಧನುಮನಂತಸುಖಾಂಬುಧಿನಿಳಯನುಮಾಗಿ ನೆಲಸಿರ್ದಂ, ಇತ್ತ ಚತುರ್ವಿಧದೇವನಿಕಾಯಮುಂ ಪುರುದೇವಪರಿನಿರ್ವಾಣಮಹಾಕಲ್ಯಾಣಪೂಜಾನಿರ್ವರ್ತನಾಭಿಲಾಷಿಯಾಗಿ ನಿರ್ವಾಣಭೂಮಿಯನನೇಕಸುರಭಿಸುರತರುಕುಸುಮಸುಗಂಧಾಕ್ಷತಂಗಳಿಂದಮರ್ಚಿಸಿ,

ಸಾತಾವೇದನೀಯ), ಮನುಷ್ಯಾಯುಷ್ಯ, ಮನುಷ್ಯಗತಿ, ಮನುಷ್ಯಗತಿ ಪ್ರಯೋಗ್ಯಾನು ಪೂರ್ವ್ಯ, ಪಂಚೇಂದ್ರಿಯಜಾತಿ, ತ್ರಸನಾಮ, ಸುಭಗ, ಆದೇಯ, ಪರ್ಯಾಪ್ತ, ಬಾದರ, ಯಶಸ್ಕೀರ್ತಿ, ಉಚ್ಚೈರ್ಗೋತ್ರ, ತೀರ್ಥಂಕರನಾಮ ಎಂಬ ಹದಿಮೂರು ಪ್ರಕೃತಿಗಳನ್ನೂ ನಿರ್ಮೂಲವಾಗಿ ನಾಶಮಾಡಿದನು. ಬಳಿಕ ಕ್ಷಾಯಿಕಸಮ್ಯಕ್ತ್ವ, ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಸೂಕ್ಷ್ಮ, ಅವಗಾಹ, ಅಗುರುಲಘುತ್ವ, ಅವ್ಯಾಬಾಧಗಳೆಂಬ ೫೦. ಎಂಟು ಗುಣಗಳೂ ಅವನಲ್ಲಿ ಸೇರಿಕೊಂಡವು. ಆಗ ಆದಿಬ್ರಹ್ಮನು ಸುಖಸ್ವರೂಪನಾಗಿ, ಲೋಕಚೂಡಾಮಣಿಯಾಗಿ, ತ್ರಿಲೋಕದ ಜನರಿಂದ ಸ್ತುತಿಸಲ್ಪಟ್ಟವನಾಗಿ, ಅತಿಪ್ರಖ್ಯಾತನಾಗಿ, ಭವ್ಯಚಿಂತಾಮಣಿಯೆನಿಸಿಕೊಂಡು, ತನ್ನಲ್ಲಿ ತಾನಾಗಿ ತನ್ನಂದವನ್ನು ಪೂರ್ಣವಾಗಿ ತಾನೆ ಕಂಡುಕೊಂಡು ಒಂದು ಕ್ಷಣದಲ್ಲಿಯೇ ಪರಬ್ರಹ್ಮಸದ್ಮಕ್ಕೆ ಸಂದನು. ೫೧. ಮಾಘಮಾಸದ ಕೃಷ್ಣಚತುರ್ದಶಿಯು ಪ್ರಾಪ್ತವಾದಾಗ, ಅಂದಿನ ಅಭಿಜಿನ್ಮುಹೂರ್ತದಲ್ಲಿ ಪುರುದೇವನು ಮುಕ್ತಿವಧುವಿನ ವರಣಕ್ಕೆ ಪಾತ್ರನಾದನು. ವ|| ಅಂತು ವೃಷಭೇಶ್ವರನು ಲೋಕವೆಂಬ ಪರ್ವತದ ಶಿಖರಕ್ಕೆ ಕಿರೀಟಪ್ರಾಯವೂ, ಕ್ರಮೋನ್ನತವಾಗಿ ಮಧ್ಯಪ್ರದೇಶದಲ್ಲಿ ಎಂಟು ಯೋಜನಾಧಿಕವೂ ಶ್ವೇತಚ್ಛತ್ರಾಕಾರವೂ ನಲವತ್ತೈದು ಲಕ್ಷ ಯೋಜನದಗಲವೂ ಸಮವೃತ್ತವೂ ಎನಿಸಿದ 'ಈಷತ್ಪ್ರಾಗ್ಭಾರದ (ಸಿದ್ಧಕ್ಷೇತ್ರ) ಮೇಲಿನ ಘನೋದಧಿ. ಘನಾನಿಲ ಮತ್ತು ತನುವಾತಗಳೆಂಬ ಮೂರು ವಲಯಗಳಲ್ಲಿ ಮೂರನೆಯ ತನುವಾತದ ಮೇಲೆ (ಸಿದ್ಧಶಿಲೆಯಲ್ಲಿ) (ವೇದನೀಯ ಕರ್ಮರಹಿತನಾದ್ದರಿಂದ) ಅವ್ಯಾಬಾಧನಾಗಿ ಅನಂತ ಸುಖಾಂಬುಧಿಯನ್ನು ಆಶ್ರಯಿಸಿ

---

೧ ತ್ರಿತಯ (ಅನ್ಯತ್ರ)

ಸ್ಫುರಿತಾಗ್ನೀಂದ್ರಕಿರೀಟಕೋಟಿಮಣಿಸಂಭೂತಾಗ್ನಿಯಿಂ ಚಂದನಾ
ಗುರು ಕರ್ಪೂರಲವಂಗಕುಂಕುಮಘೃತಕ್ಷೀರಾನಲದ್ರವ್ಯಸಂ
ಕರಸಂಪರ್ಕದೊಳೆಯ್ದೆ ಪೆರ್ಚಿದುದಱಿಂ ರೂಪಾಂತರಕ್ಕೊಯ್ದು ಭಾ
ಸುರದಿಂ ತತ್ಸುರರಾಜನಂದು ಪಿರಿದೊಂದುತ್ಸಾಹಮಂ ಮಾಡಿದಂ ೫೨

ವ॥ ಅಂತು ಸುರಭಿಕುಸುಮಗಂಧಾಕ್ಷತಂಗಳಿಂದಮರ್ಚಿಸಿ ಭಗವಚ್ಛರೀರಹೋಮಕುಂಡ ದಕ್ಷಿಣಭಾಗದೊಳ್ ಗಣಧರಶರೀರಸಂಸ್ಕಾರಕುಂಡಮನಿಱಿಸಿ ತದಪರದಿಗ್ಭಾಗದೊಳನಗಾರಕೇವಳಿಹುತಾಶನ ಕುಂಡಮಂ ಸ್ಥಾಪನಂಗೆಯ್ದು ಆಗಾರ್ಹಪತ್ಯದಕ್ಷಿಣಾಗ್ನ್ಯಾಹವನೀಯಾಭಿಧಾನಕುಂಡಂಗಳಿಂ ಕೊಂಡು ಲಲಾಟಕಂಠಭುಜಶಿಖರಗಳ ಹೃದಯಪ್ರದೇಶದೊಳಂ,

ಭೂತಿಗಳೊಳ್ ಕಲ್ಯಾಣವಿ
ಭೂತಿಗಳೆಮಗಕ್ಕೆ ಬೇಗಮಿನ್ನೆಂದು ಮನೋ
ಜಾತಮಹೋತ್ಸಾಹರ್ ತ
ದ್ಭೂತಿಯಿನಿಟ್ಟರ್ ತ್ರಿಪುಂಡ್ರಮಂ ದಿವಿಜೇಂದ್ರರ್ ೫೩

ವ॥ ಅಂತು ತ್ರಿಪುಂಡ್ರಂಗಳನಿಟ್ಟೊಸಗೆಯಿಂದೊಸಗೆ ಮರುಳ್ಗೊಂಡು,

ನೆಲಸಿದನು. ಚತುರ್ವಿಧದೇವನಿಕಾಯವು ಪುರುದೇವನ ಪರಿನಿರ್ವಾಣವೆಂಬ ಮಹಾಕಲ್ಯಾಣಪೂಜೆಯನ್ನು ನಡೆಯಿಸಬೇಕೆಂಬ ಇಚ್ಛೆಯಿಂದ 'ನಿರ್ವಾಣಭೂಮಿ'ಯನ್ನು ಸುವಾಸನಾಯುಕ್ತವಾದ ಕಲ್ಪವೃಕ್ಷದ ಹೂವುಗಳಿಂದಲೂ, ಗಂಧಾಕ್ಷತೆಗಳಿಂದಲೂ ಅರ್ಚಿಸಿದರು. ೫೨. ಅಗ್ನಿಕುಮಾರನ ಪ್ರಕಾಶಮಾನವಾದ ಕಿರೀಟಕೋಟಿಗಳಲ್ಲಿನ ಮಣಿಗಳಿಂದೊಗೆದ ಬೆಂಕಿಯೊಡನೆ ಅಗರು, ಕರ್ಪೂರ, ಲವಂಗ, ಕುಂಕುಮ, ತುಪ್ಪ, ಹಾಲು ಮುಂತಾದ ದ್ರವ್ಯಗಳ ಸಂಪರ್ಕವೊದಗಲು, ತತ್ಫಲವಾಗಿ ವರ್ಧಿಸಿದ ಅಗ್ನಿಯಿಂದ (ಆದಿದೇವನ ದೇಹವನ್ನು) ರೂಪಾಂತರಗೊಳಿಸಿ (ಭಸ್ಮಮಾಡಿ) ಸುರರಾಜನು ಅಂದಿನ ದಿನ ಹಿರಿದಾದೊಂದು ಉತ್ಸಾಹವನ್ನು ತಳೆದನು. ವ॥ ಸುವಾಸನಾಯುಕ್ತವಾದ ಕುಸುಮ ಗಂಧಾಕ್ಷತೆಗಳಿಂದ ಅಗ್ನಿಕುಂಡವನ್ನು ಅರ್ಚಿಸಿದನು. ಬಳಿಕ ಭಗವಚ್ಛರೀರದ ಹೋಮ ಕುಂಡದ (ಆಹವನೀಯದ) ದಕ್ಷಿಣಭಾಗದಲ್ಲಿ ಗಣಧರ ಶರೀರಸಂಸ್ಕಾರಕುಂಡವನ್ನು ನಿರ್ಮಿಸಿ, ಅದರ ಇನ್ನೊಂದು ದಿಗ್ಭಾಗದಲ್ಲಿ (ಉತ್ತರದಲ್ಲಿ) ಅನಗಾರಕೇವಲಿಗಳ ಬೆಂಕಿಯ ಕುಂಡವನ್ನು ಸ್ಥಾಪನೆ ಮಾಡಿದನು. ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯ ಎಂಬ ಆ ಕುಂಡಗಳಿಂದ (ಭಸ್ಮವನ್ನು) ತೆಗೆದುಕೊಂಡು ಹಣೆ, ಕತ್ತು, ಭುಜ, ಶಿಖರ ಮತ್ತು ಹೃದಯ ಪ್ರದೇಶಗಳಲ್ಲಿ ಹಚ್ಚಿಕೊಂಡನು. ೫೩. ದೇವೇಂದ್ರರು ಈ ಭಸ್ಮಗಳಿಂದ ನಮಗೆ ಕಲ್ಯಾಣಕಾರಕವಾದ ವಿಭೂತಿ (ಐಶ್ವರ್ಯ)ಗಳುಂಟಾಗುವುವೆಂದು ಭಾವಿಸಿದರು. ಒಡನೆ ಮಹೋತ್ಸಾಹದಿಂದ ಆ ದಿವಿಜೇಂದ್ರರು ಆ ಭಸ್ಮದಿಂದ ತ್ರಿಪುಂಡ್ರವನ್ನಿಟ್ಟು ಕೊಂಡರು. ವ॥ ಹೀಗೆ ತ್ರಿಪುಂಡ್ರಧಾರಿಗಳಾಗಿ ಸಂತೋಷಪರವಶರಾದರು.

ಆನಂದನಾಟಕಂ ಪರ
ಮಾನಂದಮನಂದು ಮಾಡೆ ದಿವಿಜಾಧೀಶರ್
ನಾನಾಪ್ರಕಾರದಿಂದಮ
ದೇನೆಂಬುತ್ಸವಮನಟ್ಟೆಯಿಂ ಮಾಡಿದರೋ ೫೪

ವ|| ಆಗಳಾತ್ಮೀಯಗುರುವಿಯೋಗಶೋಕಾನಳದಹ್ಯಮಾನಸನಾಗಿರ್ದ ಭರತಪತಿಯ ಶೋಕಾವೇಗಮಂ ವೃಷಭಸೇನಗಣಾಗ್ರಣಿಗಳಿಂತೆಂದಾಱೆಸಿದರ್,

ಖಿಳಕರ್ಮಾಷ್ಟಕಮಂ ಪಡಲ್ವಡಿಸಿ ಸಂಸಾರಾಬ್ಧಿಯಂ ದಾಂಟಿ ನಿ
ಶ್ಚಳಸೌಖ್ಯಾಸ್ಪದಮಂ ತ್ವದೀಯಜನಕಂ ಕೈಕೊಂಡೊಡೀದೇವಸಂ
ಕುಳಮಿಂದ್ರಂಬೆರಸಾಡಿದಪ್ಪುದಿದಱೊಳ್ ನೀಂ ರಾಗಿಸಲ್ವೇಕ್ಕುಮೇ
ಕೊಳಕೊಳ್ವೈ ಜಡರಂತೆ ಶೋಕರಸಮಂ ಷಟ್ಖಂಡಧಾತ್ರೀಶ್ವರಾ ೫೫

ನಿನಗೆ ವೃಷಭೇಶ್ವರಂ ಲೋ
ಚನಗೋಚರನಿನ್ನೆವರೆಗಮೀಗಳ್ ನಿಂದಂ
ಮನುಕುಲಲಲಾಮ ನೆಟ್ಟನೆ
ಮನದೊಳ್ ಕಡುಸಾರೆಯಲ್ತೆ ಮುನ್ನಿಂದೀಗಳ್ ೫೬

ಭರತೇಶ್ವರ ನಾಮಪ್ಪೊಡೆ
ಚರಮಾಂಗರುಮಖಿಳಮಲವಿಲೋಪನದಿಂದಂ
ಪುರುಪರಮೇಶ್ವರನೈದಿದ
ಪರಮಪದಂ ನಮಗಮದುವೆ ನೆಲೆ ಪೆಱತುಂಟೇ ೫೭

೫೪. ಅನಂತರ ಆನಂದನಾಟಕವು ಪರಮಾನಂದವನ್ನು ತಂದಿತು. ದಿವಿಜಾಧೀಶರು ನಾನಾ ಪ್ರಕಾರಗಳಲ್ಲಿ ಪ್ರೀತಿಯಿಂದ ಉತ್ಸವವನ್ನು ಆಚರಿಸಿದರು. ವ|| ಆಗ ತನ್ನ ಗುರುವಿಯೋಗವೆಂಬ ಶೋಕಾಗ್ನಿಯಿಂದ ಸುಡಲ್ಪಟ್ಟ ಮನಸ್ಸುಳ್ಳವನಾದ ಭರತರಾಜನ ಶೋಕಾವೇಗವನ್ನು ವೃಷಭಸೇನಗಣಾಗ್ರಣಿಗಳು ಇಂತೆಂದು ಹೇಳಿ ಶಾಂತಗೊಳಿಸಿದರು. ೫೫. "ಜ್ಞಾನಾವರಣಾದಿ ಎಂಟು ಕಿಲ್ಬಿಷಗಳನ್ನು ಕಳೆದುಕೊಂಡು ಸಂಸಾರಸಮುದ್ರವನ್ನು ದಾಟಿ ನಿನ್ನ ಜನಕನು ನಿಶ್ಚಲವಾದ ಸೌಖ್ಯಕ್ಕೆ ಪಾತ್ರನಾದನು. ಇದನ್ನು ನೋಡಿ ದೇವಸಮೂಹವು ಇಂದ್ರನೊಡಗೂಡಿ ನರ್ತಿಸುತ್ತಿದೆ. ಇದರಿಂದ ನೀನು ಸಂತೋಷಿಸಬೇಕು. ಷಟ್ಖಂಡಮಂಡಿತವಾದ ಭೂಮಿಗೊಡೆಯನೇ! ನೀನು ಏಕೆ ಜಡರಂತೆ ಶೋಕರಸವನ್ನಪ್ಪುವೆ? ೫೬. ಇಲ್ಲಿಯವರೆಗೆ ವೃಷಭೇಶ್ವರನು ನಿನ್ನ ಕಣ್ಣುಗಳಿಗೆ ಕಾಣಿಸುತ್ತಿದ್ದನು. ಹೇಮನು ಕುಲಶ್ರೇಷ್ಠ, ಈಗ ನಿನ್ನ ಮನದಲ್ಲಿಯೇ ನಿಂತು ಮೊದಲಿಗಿಂತಲೂ ಹತ್ತಿರದಲ್ಲಿದ್ದಾನಷ್ಟೆ. ೫೭. ಭರತೇಶ್ವರ! ನಾವೂ ಕೂಡ ನಿಖಿಲಕರ್ಮಗಳಿಂದ ವಿಮುಕ್ತರಾಗಿ ಚರಮಶರೀರಿಗಳಾಗಿ ನಿಂತಿದ್ದೇವೆ. ಪುರು ಪರಮೇಶ್ವರ ನಾದರೊ ಅಖಿಲ ಮಲವಿಮೋಚನೆಯನ್ನು ಮಾಡಿಕೊಂಡು ಪರಮ ಪದವನ್ನು ಮುಟ್ಟಿದ್ದಾನೆ. ನಮಗೂ ಸಹ ಅದೇ ನೆಲೆಯಲ್ಲದೆ ಬೇರೆಯುಂಟೆ?

ವ।। ಅದಲ್ಲದೆಯುಂ ಜೀವಂಗಳ್ ಶುಭಾಶುಭಕರ್ಮಶೈಲೂಷಪ್ರೇರಿತಂಗಳಾಗಿ ಚತುರ್ಗತಿ ಸಂಸಾರಂಗಳೊಳನೇಕರಸಪರಿಣತಂಗಳ್ ನಾನಾಶರೀರೋಪಾಧಾನಪರಿತ್ಯಜನಪುರಸ್ಸರಂ ಪರಿಭ್ರಮಿಸುಗುಂ, ಅದು ನಮ್ಮಿನಿಬರ ಭವಾಳಿಯಿಂದೆ ನಮಗನುಭೂತಪೂರ್ವಮದೆಂತೆಂದೊಡೆ ಭವದೀಯ ಜನಕಂ ಪುರುಪರಮೇಶ್ವರಂ,

॥ ಅಕ್ಕರ ॥

ಭೋಗಕಾಂಕ್ಷೆಯೊಳ್ ಜಯವರ್ಮಂ ಬಳಿಕೀ ಮಹಾಬಲಂ ಲಲಿತಾಂಗಂ ವಜ್ರಜಂಘಂ
ಭೋಗಭೂಮಿಜಂ ಶ್ರೀಧರದೇವಂ ಸುವಿಧಿನರಾಧಿಪನಚ್ಯುತೇಂದ್ರಂ
ಸಾಗರಾಂತಂ ನೆಲನನಿತುಮಂ ಚಕ್ರದಿಂ ಬೆಸಕೈಸಿದ ವಜ್ರನಾಭಿ
ಯಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿ ಬಂದಿಲ್ಲಿ ತಾನಾದಿದೇವನಾದಂ ೫೮

ವ।। ಮತ್ತಂ ಧನಶ್ರೀಯುಂ ನಿರ್ನಾಮಿಕೆಯುಂ ಸ್ವಯಂಪ್ರಭಾದೇವಿಯುಂ ಶ್ರೀಮತಿಯುಂ ಆರ್ಯೆಯುಂ ಸ್ವಯಂಪ್ರಭದೇವನುಂ ಕೇಶವಮಹೀಶನುಂ ಅಚ್ಯುತಪ್ರತೀಂದ್ರನುಂ ಧನದೇವನುಂ ಅಹಮಿಂದ್ರನುಂ ಆಗಿ ಬಂದೀಗಳಾದಿದಾನತೀರ್ಥಪ್ರವರ್ತಕ ಶ್ರೇಯಾಂಸನಾದಂ; ಅತಿಗೃಧ್ರಮಹೀಶನುಂ ನಾರಕನುಂ ವ್ಯಾಘ್ರನುಂ ಈಶಾನಕಲ್ಪಜನುಂ ಮತಿವರಮಂತ್ರಿಯುಂ ಅಧೋಗ್ರೈವೇಯಕದಿವಿಜನುಂ ಸುಬಾಹುಮಹೀಪತಿಯುಂ ಸರ್ವಾರ್ಥಸಿದ್ಧೀಶ್ವರನುಂ ಅಹಮಿಂದ್ರನುಮಾಗಿ ಬಂದು ನೀನೀಗಳ್ ಭರತೇಶ್ವರಚಕ್ರವರ್ತಿಯಾದೈ ; ಪ್ರೀತಿವರ್ಧನಸೇನಾನಾಯಕನುಂ ಭೋಗಭೂಮಿಜನುಂ

ವ।। ಅದಲ್ಲದೆಯೆ ಜೀವಗಳು ಶುಭಾಶುಭರೂಪವಾದ ಕರ್ಮಗಳೆಂಬ ನಟರಿಂದ ಪ್ರೇರಿತಗಳಾಗಿ ದೇವ ಮಾನುಷ ತಿರ್ಯಗಾದಿ ನಾಲ್ಕು ಬಗೆಯ ಸಂಸ್ಕೃತಿಗಳಲ್ಲಿ ಅನೇಕವಿಧ ಸುಖದುಃಖಾನುಭವಗಳಲ್ಲಿ ಪರಿಣತಗಳಾಗಿ ನಾನಾವಿಧ ಶರೀರಗಳನ್ನಪ್ಪುವುದು ಬಿಡುವುದೇ ಮುಂತಾದವುಗಳಿಂದ ಅಲೆದಾಡುತ್ತಿರುವುವು. ಅವು ನಮ್ಮಿಬ್ಬರ ಭವಾವಳಿಯಿಂದಲೇ ಅನುಭವಕ್ಕೆ ಬಂದಿವೆ. ಹೇಗೆಂದರೆ, ನಿನ್ನ ತಂದೆಯಾದ ಪುರುಪರಮೇಶ್ವರನು. ೫೮. ಭೋಗೇಚ್ಛೆಯಿಂದ ಜಯವರ್ಮನಾಗಿದ್ದು ಬಳಿಕ ಕ್ರಮವಾಗಿ ಮಹಾಬಲ, ಲಲಿತಾಂಗ, ವಜ್ರಜಂಘ, ಭೋಗಭೂಮಿಜ, ಶ್ರೀಧರದೇವ, ಸುವಿಧಿ, ಅಚ್ಯುತೇಂದ್ರ ಜನ್ಮಗಳಲ್ಲಿ ಬಂದು, ಬಳಿಕ ಅವನೇ ಕಡಲುಡಿಗೆಯಾದ ನೆಲವೆಲ್ಲವನ್ನೂ ಚಕ್ರದಿಂದ ವಶಪಡಿಸಿಕೊಂಡ ವಜ್ರನಾಭಿಯಾಗಿ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನೂ ಆಗಿ ಹುಟ್ಟಿಬಂದು ಆಮೇಲೆ ಇಲ್ಲಿ ಆದಿದೇವನಾದನು. ವ।। ಮತ್ತೆ ಧನಶ್ರೀಯೂ ನಿರ್ನಾಮಿಕೆಯೂ ಸ್ವಯಂಪ್ರಭಾದೇವಿಯೂ, ಶ್ರೀಮತಿಯೂ ಆರ್ಯೆಯೂ ಸ್ವಯಂಪ್ರಭದೇವನೂ ಕೇಶವಮಹೀಶನೂ ಅಚ್ಯುತಪ್ರತೀಂದ್ರನೂ ಧನದೇವನೂ ಅಹಮಿಂದ್ರನೂ ಆಗಿಬಂದು ಈಗ ಆದಿದಾನ ತೀರ್ಥಪ್ರವರ್ತಕನಾದ ಶ್ರೇಯಾಂಸನಾಗಿರುವನು. ಅತಿಗೃಧ್ರಮಹೀಶನೂ ನಾರಕನೂ ವ್ಯಾಘ್ರನೂ, ಈಶಾನಕಲ್ಪಜನೂ (ದಿವಾಕರಪ್ರಭನೂ) ಮತಿವರನೆಂಬ ಮಂತ್ರಿಯೂ ಅಧೋಗ್ರೈವೇಯಕ ದಿವಿಜನೂ (ಅಹಮಿಂದ್ರ) ಸುಬಾಹುಮಹೀಪತಿಯೂ ಅಹಮಿಂದ್ರನೂ ಆಗಿಬಂದು ನೀನೀಗ ಭರತಚಕ್ರವರ್ತಿಯಾಗಿ ಜನ್ಮ ತಳೆದಿರುವೆ. ಪ್ರೀತಿವರ್ಧನ ಸೇನಾನಾಯಕನೂ

ಕನಕಪ್ರಭಾಮರನುಂ ಲಲಿತಾಂಗದೇವಸಾಮಾನಿಕನುಂ ಪ್ರಭಂಕರನುಂ ವಜ್ರಜಂಘಸೇನಾಧೀಶ್ವರನಕಂಪನನುಂ ಅಧೋಗ್ರೈವೇಯಕನುಮಹಮಿಂದ್ರನುಂ ಮಹಾಬಾಹುಮಹೀಪತಿಯುಂ ಸರ್ವಾರ್ಥಸಿದ್ಧಿಜನನುಮಾಗಿ ಬಂದು ಋಷಭೇಶ್ವರತನೂಜನೀಗಳ್ ಬಾಹುಬಲಿಕುಮಾರನಾದಂ, ದಿವಿಜನುಂ, ಪ್ರೀತಿವರ್ಧನ ಮಂತ್ರಿಯುಂ ಭೋಗಭೂಮಿಜನುಂ ಕನಕಪ್ರಭಾಮರನುಂ ವಜ್ರಜಂಘಪುರೋಹಿತನಾನಂಗನುಂ ಅಧೋಗ್ರೈವೇಯಕನುಮಹಮಿಂದ್ರನುಂ ಪೀಠನುಂ ಸರ್ವಾರ್ಥಸಿದ್ಧೀಶನುಮಾಗಿ ಬಂದು ನಾನೀಗಳ್ವೃಷಭ ನಾಥಂಗೆ ಪ್ರಥಮಗಣಧರನಾದೆಂ, ಪ್ರೀತಿವರ್ಧನಪುರೋಹಿತನುಂ ಭೋಗಭೂಮಿಜನುಂ ಲಲಿತಾಂಗದೇವಸಾಮಾನಿಕಪ್ರಭಂಜನದೇವನುಂ ವಜ್ರಜಂಘಶ್ರೇಷ್ಠಧನಮಿತ್ರನುಂ ಅಧೋಗ್ರೈವೇಯಕಾಹ ಮಿಂದ್ರನುಂ ಮಹಾಪೀಠನುಂ ಸರ್ವಾರ್ಥಸಿದ್ಧೀಶ್ವರನುಮಾಗಿ ಬಂದೀಗಳನಂತವಿಜಯನಾದಂ; ಶಾರ್ದೂಲನುಂ ಶಾರ್ದೂಲಾರ್ಯನುಂ ಚಿತ್ರಾಂಗದೇವನುಂ ವರದತ್ತನೃಪನುಂ ಅಚ್ಯುತ ಸಾಮಾನಿಕದೇವನುಂ ವಿಜಯಭೂಪನುಂ ಸರ್ವಾರ್ಥಸಿದ್ಧೀಶ್ವರನುಮಾಗಿ ಬಂದೀಗಳನಂತವೀರ್ಯನಾದಂ; ವರಾಹನುಂ ವರಾಹಾರ್ಯನುಂ ಮಣಿಕುಂಡಲಾಮರನುಂವರಸೇನಭೂಪನುಂ ಅಚ್ಯುತಸಾಮಾನಿಕದೇವನುಂ ವೈಜಯಂತಭೂಪನುಂ ಸರ್ವಾರ್ಥಸಿದ್ಧೀಶ್ವರನುಮಾಗಿ ಬಂದೀಗಳ್ ಅಚ್ಯುತ[೧]ನಾದಂ; ವಾನರನುಂ ವಾನರಾರ್ಯನುಂ ಮನೋಹರಾಮರನುಂ ಚಿತ್ರಾಂಗದನೃಪನುಂ ಅಚ್ಯುತಸಾಮಾನಿಕನುಂ ಜಯಂತನೃಪನುಂ ಸರ್ವಾರ್ಥಸಿದ್ಧಿಯೊಳಹಮಿಂದ್ರನಾಗಿ ಬಂದೀಗಳ್ ವೀರ[೨]ನಾದಂ ನಕುಲನುಂ ನಕುಲಾರ್ಯನುಂ ಮನೋರಥದಿವ್ಯನುಂ ಶಾಂತಮದನನೃಪನುಂ ಅಚ್ಯುತಸಾಮಾನಿಕನುಂ ಅಪರಾಜಿತನೃಪನುಂ ಸರ್ವಾರ್ಥಸಿದ್ಧಿಯೊಳೆ ಆಹಮಿಂದ್ರನಾಗಿ ಬಂದೀಗಳ್ ಸುವೀರ[೩]ನಾದಂ,

ಭೋಗಭೂಮಿಜನೂ ಲಲಿತಾಂಗದೇವ ಸಾಮಾನಿಕನೂ ಪ್ರಭಂಕರನೂ ವಜ್ರಜಂಘನ ಸೇನಾಧೀಶನಾದ ಅಕಂಪನನೂ ಅಧೋಗ್ರೈವೇಯಕಾಹಮಿಂದ್ರನೂ ಮಹಾಬಾಹು ಮಹೀಪತಿಯೂ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನೂ ಆಗಿ ಹುಟ್ಟಿಬಂದ ವೃಷಭೇಶ್ವರನ ಮಗನು ಈಗ ಬಾಹುಬಲಿಕುಮಾರನಾದನು ಪ್ರೀತಿವರ್ಧನಮಂತ್ರಿಯೂ ಭೋಗಭೂಮಿಜನೂ ಕನಕಪ್ರಭಾಮರನೂ ವಜ್ರಜಂಘನ ಪುರೋಹಿತನಾದ ಆನಂದನೂ ಅಧೋಗ್ರೈವೇಯಕಾಹಮಿಂದ್ರದೇವನೂ, ಪೀಠನೂ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನೂ ಆಗಿ ಬಂದು ನಾನು ಈಗ ವೃಷಭನಾಥನಿಗೆ ಪ್ರಥಮಗಣಧರನಾದೆನು. ಪ್ರೀತಿವರ್ಧನನ ಪುರೋಹಿತನೂ ಭೋಗಭೂಮಿಜನೂ ಲಲಿತಾಂಗದೇವ ಸಾಮಾನಿಕ ಪ್ರಭಂಜನದೇವನೂ ವಜ್ರಜಂಘನ ಶ್ರೇಷ್ಠಿಯಾದ ಧನಮಿತ್ರನೂ, ಅಧೋಗ್ರೈವೇಯಕಾಹ ಮಿಂದ್ರನೂ ಮಹಾಪೀಠನೂ ಸರ್ವಾರ್ಥಸಿದ್ಧೀಶ್ವರನೂ ಆಗಿ ಬಂದು ಈಗ ಅನಂತ ವಿಜಯ[1]ನಾಗಿರುವನು. ಶಾರ್ದೂಲನೂ ಶಾರ್ದೂಲಾರ್ಯನೂ ಚಿತ್ರಾಂಗದೇವನೂ ವರದತ್ತನೃಪನೂ ಅಚ್ಯುತ ಸಾಮಾನಿಕದೇವನೂ ವಿಜಯನೃಪನೂ ಸರ್ವಾರ್ಥಸಿದ್ಧೀಶ್ವರ ನಾಗಿ ಬಂದು ಈಗ ಅನಂತವೀರ್ಯನಾಗಿರುವನು. ವರಾಹನೂ ವರಾಹಾರ್ಯನೂ ಮಣಿಕುಂಡಲಾಮರನೂ ವರಸೇನಭೂಪನೂ ಅಚ್ಯುತ-ಸಾಮಾನಿಕದೇವನೂ ವೈಜಯಂತ ಭೂಮಿಪನೂ ಸರ್ವಾರ್ಥಸಿದ್ಧೀಶ್ವರನಾಗಿ ಬಂದು ಈಗ ಅಚ್ಯುತನಾದನು. ವಾನರನೂ ವಾನರಾರ್ಯನೂ ಮನೋಹರಾಮರನೂ ಚಿತ್ರಾಂಗದನೃಪನೂ ಅಚ್ಯುತ ಸಾಮಾನಿಕನೂ ಜಯಂತನೃಪನೂ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾಗಿ ಬಂದು ಈಗ

೧ ಶ್ರೀಷೇಣ (ಪೂ. ಪು. ೪೭-೩೭೩) ೨ ಗುಣಸೇನ (ಪೂ. ಪು. ೪೭-೩೭೯) ೩ ಜಯಸೇನ (ಪೂ. ಪು. ೪೭-೩೭೭) 1 ಇವನು ಭರತನ ತಮ್ಮ

ಭವರಾಶಿಯೊಳಿಂತು ಜೀವನಿವಹಂ ಬರ್ದುತ್ತುಮಿರ್ಕುಂ ಮಹೋ
ತ್ಸವಮಲ್ತೇ ಗುರುವಿಂತು ದಾಂಟಿದೊಡಿದಂ ಬೇಡೀವಿಷಾದಂ ನಿರ
ಸ್ತವಿವೇಕಂಬೊಲಿದೇಕೆ ಮೋಹಿಸಿದಪೈ [ನಿರ್ವಾಣಸಕ್ತಂಗೆ][೧] ವ
ಸ್ತುವಿದರ್ ನಿನ್ನವೊಲಾರ್ಪೆಱಿರ್ಭುವನದೊಳ್ ಷಟ್ಖಂಡಧಾತ್ರೀಶ್ವರಾ ೫೯

ಎನೆ ದಾವದಗ್ಧಗಿರಿ ನೂ
ತನಜಳದಜಳಂಗಳಿಂದಮಾಱುವವೋಲ್ ಭೋಂ
ಕನೆ ಭರತನಾಱಿದಂ ಮುನಿ
ವಿನುತಗಣಾಧಿನಾಥವಚನಾಮೃತದಿಂ ೬೦

ವ|| ಅಂತಪಗತಗುರುಶೋಕವೇಗನಾಗಿ ಗಣಧರಚರಣಸರಸಿಜಂಗಳ್ಗೆಱಗಿ ತನ್ನ ಭೋಗತೃಷ್ಣೆಯಮಂ ತಾನೆ ತನ್ನ ಮನದೊಳ್ ನಿಂದಿಸುತ್ತುಂ ಮುಕ್ತ್ಯಂಗನಾನುರಕ್ತಚಿತ್ತನಾಗುತ್ತುಂ ಬಂದಯೋಧ್ಯಾಪುರಮಂ ಪೊಕ್ಕು, ಕೆಲವುದಿವಸಮಿರ್ದೊಂದು ದಿವಸಂ,

ಪರಮಪದದಿಂದಮಟ್ಟಿದ
ಪುರುಪರಮೇಶ್ವರನ ದೂತನಂ ಕಾಣ್ಬವೊಲಾ
ಭರತಂ ಕಂಡಂ ಕನ್ನೆಯ
ನೆರೆಯಂ ತಳದಳಿಸಿ ಪೊಳೆವ ಮಣಿದರ್ಪಣದೊಳ್ ೬೧

ವೀರನೆನಿಸಿರುವನು. ನಕುಲನೂ ನಕುಲಾರ್ಯನೂ ಮನೋರಥದಿವಿಜನೂ ಶಾಂತಮದನನೃಪನೂ ಅಚ್ಯುತಸಾಮಾನಿಕನೂ ಅಪರಾಜಿತನೃಪನೂ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾಗಿ ಬಂದು ಈಗ ಸುವೀರನಾಗಿರುವನು. ೫೯. ಹೀಗೆ ಭವರಾಶಿಯಲ್ಲಿ ಜೀವಸಮೂಹವು ಸುತ್ತುತ್ತಲಿದೆ. ಗುರುವಾದ ಪುರುಪರಮೇಶ್ವರನು ಸಂಸ್ಕೃತಿಯಿಂದ ಬಿಡುಗಡೆ ಹೊಂದಿದುದು ಮಹಾನಂದಕರವಲ್ಲವೇ? ಈ ವಿಷಾದವು ಬೇಡ. ನಿರ್ವಾಣಹೊಂದಿದವನಿಗಾಗಿ ವಿವೇಕವಿಲ್ಲದವನಂತೆ ನೀನೇಕೆ ಮೋಹಗೊಳ್ಳುವೆ? ಹೇ ಚಕ್ರವರ್ತಿ, ವಸ್ತುತತ್ತ್ವವನ್ನು ಬಲ್ಲವರು ನಿನ್ನಂತೆ ಮತ್ತಾರು ಈ ಜಗತ್ತಿನಲ್ಲಿದ್ದಾರೆ?" ಎಂದನು. ೬೦. ಕಾಳ್ಗಿಚ್ಚಿನಿಂದ ಸುಟ್ಟುಹೋದ ಬೆಟ್ಟವು ಹೊಸ ಮೋಡಗಳ ನೀರಿನಿಂದ ಆರುವಹಾಗೆ, ಗಣಾಧಿನಾಥನ ವಚನಾಮೃತದಿಂದ ಭರತನು ಭೋಂಕನೆ ಶಾಂತಿಯನ್ನು ಪಡೆದನು. ವ|| ಹೀಗೆ ಭರತನು ಶೋಕಾವೇಗವನ್ನು ಕಳೆದುಕೊಂಡು ವೃಷಭಸೇನ ಗಣಧರನ ಚರಣಕಮಲಗಳಿಗೆರಗಿದನು. ತನ್ನ ಭೋಗಾಭಿಲಾಷೆಯನ್ನು ತನ್ನ ಮನದಲ್ಲಿ ನಿಂದಿಸಿಕೊಂಡನು. ಮುಕ್ತಿಯೆಂಬ ಸ್ತ್ರೀಯಲ್ಲಿ ಅನುರಕ್ತವಾದ ಮನಸ್ಸುಳ್ಳವನಾಗಿ ಅಯೋಧ್ಯಾಪುರವನ್ನು ಹೊಕ್ಕು ಕೆಲವು ದಿನಗಳನ್ನು ಕಳೆದನು. ಒಂದು ದಿನ ೬೧. ತನ್ನ ಕೆನ್ನೆಯಲ್ಲಿನ ನರೆಯನ್ನು ಹೊಳೆವ ಮಣಿದರ್ಪಣದಲ್ಲಿ ಭರತನು ಕಂಡನು. ಅದು ಪುರುಪರಮೇಶ್ವರನು ಪರಮಪದದಿಂದ ಅಟ್ಟಿದ ದೂತನೋ ಎಂಬಂತಿದ್ದಿತು.

---

೧ ನೀಂ ಮಾಣಿಕ್ಕಕ್ಕಂಗೆ, ಇತ್ಯಾದಿ (ಅನ್ಯತ್ರ)

ವ॥ ಅಂತದಂ ಕಂಡಪಗತಮೋಹರಸನುಮುಪಗತನಿರ್ವೇಗರಸನುಮಾಗಿ,

ಹೇಯಂ ಸಾಮ್ರಾಜ್ಯಮುಪಾ
ದೇಯಂ ಪ್ರವ್ರಜ್ಯಮೆಂದು ಮಾಣದೆ ರಾಜ್ಯ
ಶ್ರೀಯಂ ಕೊಟ್ಟಂ ಮುಕ್ತಿ
ಶ್ರೀಯಂ ಬಗೆದರ್ಕಕೀರ್ತಿಗಾ ಭರತೇಶಂ ೬೨

ವ॥ ಅಂತು ಪರಿತ್ಯಕ್ತಸಾಮ್ರಾಜ್ಯಪರಿಚ್ಛೇದನಾಗಿ ಸಮಸ್ತಧಾರ್ಮಿಕಜನಂಗಳಂ ಬರಿಸಿ ಸರ್ವತೋಭದ್ರವೆಂಬ ಮಹಾಮಹಿಮೆಯಂ ಮಹೋತ್ಸವದಿಂದೆಂಟುದಿವಸಂಬರಂ ಮಾಡಿ ತತ್ಪೂಜಾಸಮೇತಂ ಕೈಲಾಸಶೈಲಕ್ಕೆ ಪೋಗಿ ತದಗ್ರಸ್ಥಿತಚೈತ್ಯಾಲಯಂಗಳನನೇಕವಿಧಾರ್ಚನೆ ಗಳಿಂದಮರ್ಚಿಸಿ,

ಕೋಟ್ಯಸ್ಸಪ್ತ ಗಹಾಸ್ತ್ರಿವಿಷ್ಟಪಗುರೋಃ ಲಕ್ಷಾಃ ಪುನಸ್ಸಪ್ತತಿಃ
ದ್ವಾಭ್ಯಾಮಭ್ಯಧಿಕಾ ಭವಂತಿ ಭವನಾವಾಸೇಷು ತೇಭ್ಯೋ ನಮಃ
ನಿಸ್ಸಂಖ್ಯಾಶ್ಶಿಖರೀಂದ್ರಕಂದರಸರಿದ್ದ್ವೀಪಾಧಿಷು ವ್ಯಂತರ
ಸ್ಥಾನೇಷು ಪ್ರಣಮಾಮಿ ಜೈನವಸತೀರ್ಜ್ಯೋತಿರ್ವಿಮಾನೇಷು ಚ ೬೩

ವ॥ ಆಗ ಮೋಹವನ್ನು ಕಳೆದುಕೊಂಡು ಭರತನು ನಿರ್ವಿಣ್ಣನಾಗಿ ೬೨. "ಸಾಮ್ರಾಜ್ಯವು ಹೇಯವಾದುದು. ಸಂನ್ಯಾಸವು ಸ್ವೀಕಾರ್ಯವಾದುದು" ಎಂದು ನಿಶ್ಚಯಿಸಿ ರಾಜ್ಯಲಕ್ಷ್ಮಿಯನ್ನೊಲ್ಲದೆಯೆ ಅದನ್ನು ತನ್ನ ಮಗನಾದ ಅರ್ಕಕೀರ್ತಿಗೆ ಕೊಟ್ಟು ಮುಕ್ತಿಶ್ರೀಯನ್ನು ಬಯಸಿದನು. ವ॥ ಅವನು ಸಮಸ್ತ ಸಾಮ್ರಾಜ್ಯವನ್ನೂ ತೊರೆಯಲು ನಿಶ್ಚಯಿಸಿದನು. ಎಲ್ಲ ಧಾರ್ಮಿಕಜನರನ್ನು ಬರಮಾಡಿಕೊಂಡು ಸರ್ವತೋಭದ್ರವೆಂಬ ಮಾಹಮಹವನ್ನು ಮಹೋತ್ಸವದಿಂದ ಎಂಟು ದಿನಗಳ ಕಾಲ ನಡೆಯಿಸಿದನು. ತತ್ಪೂಜಾಸಮೇತನಾಗಿ ಕೈಲಾಸಶಿಖರಕ್ಕೆ ಹೋಗಿ ಅಲ್ಲಿರುವ ಚೈತ್ಯಾಲಯಗಳನ್ನು ಬಹುವಿಧಾರ್ಚನೆಗಳಿಂದ ಅರ್ಚಿಸಿದನು. (ಅನಂತರ ಹೀಗೆ ಸ್ತುತಿಸಿದನು). ೬೩. ಭವನ ಮತ್ತು ಆವಾಸಗಳಲ್ಲಿ ಸ್ವರ್ಗೇಶ್ವರನಾದ ಜಿನೇಂದ್ರನಿಗೆ ಏಳು ಕೋಟಿ ಎಪ್ಪತ್ತೆರಡು ಲಕ್ಷ (೭,೭೨,೦೦,೦೦೦) ಮಂದಿರಗಳಿವೆ. ಅವುಗಳಿಗೆ ನಮಸ್ಕಾರ ಅಲ್ಲದೆ ಪರ್ವತಗಳು, ಕಂದರಗಳು, ದ್ವೀಪಗಳೇ ಮೊದಲಾದ ವ್ಯಂತರ ದೇವತಾಸ್ಥಾನಗಳಲ್ಲಿಯೂ ಜ್ಯೋತಿರ್ವಿಮಾನಗಳಲ್ಲಿಯೂ ಇರುವ ಅಸಂಖ್ಯ ಜಿನಮಂದಿರಗಳನ್ನೂ ವಂದಿಸುತ್ತೇನೆ. ಟಿಪ್ಪಣಿ: ಭವನವಾಸಿದೇವತೆಗಳಿಗೆ ಭವನ, ಭವನಪುರ, ಆವಾಸ-ಎಂಬ ಮೂರು ಬಗೆಯ ನಿವಾಸಗಳಿರುತ್ತವೆ. (ನೋಡಿ : ತ್ರಿಲೋಕಪ್ರಜ್ಞಪ್ತಿ (ತಿಲೋಅ ಪಣ್ಣತ್ತಿ), ೩-೧೨) ಇಲ್ಲಿ ಆ ಮೂರು ಬಗೆಯ ನಿವಾಸಗಳನ್ನೂ ಗ್ರಹಿಸಬಹುದು. 'ತ್ರಿವಿಷ್ಟಪಗುರು' ಎಂಬುದಕ್ಕೆ ತ್ರಿಲೋಕಗುರು ಎಂದು ಅರ್ಥ ಹೇಳಲೂ ಸಾಧ್ಯ. ವಿಷ್ಟಪ = ಲೋಕ, ಜ್ಯೋತಿರ್ವಿಮಾನ = ಸೂರ್ಯಚಂದ್ರಾದಿಗ್ರಹಗಳ ಮತ್ತು ತಾರಾನಕ್ಷತ್ರಗಳ ವಿಮಾನ.

ದ್ವಾತ್ರಿಂಶತ್ಪ್ರಥಮೇ ಜಿನೇಂದ್ರನಿಲಯಾಃ ಕಲ್ಪೇ ದ್ವಿತೀಯೇ ಭವಂ
ತ್ಯಷ್ಟಾವಿಂಶತಿರಗ್ರತೋ ನಿಗದಿತೇ ಲಕ್ಷಾಸ್ತತೋ ದ್ವಾದಶ
ಮಾಹೇಂದ್ರೇಽಷ್ಟತತೋರ್ದ್ವಯೋರಪಿ ದಿವೋರ್ಲಕ್ಷಾಶ್ಚತಸ್ರಃ ಪೃಥಕ್
ಲಕ್ಷಾರ್ಧಂ ವಿಲಸಂತಿ ಚ ಪ್ರಥಿತಯೋರೂರ್ಧ್ವಂ ತತಃ ಕಲ್ಪಯೋಃ ೬೪

ಚತ್ವಾರಿಂಶದಥೋತ್ತರೇ ದಶಶತ್ಯಾನ್ಯಾಭಾಂತಿ ಕಲ್ಪದ್ವಯೇ
ತಸ್ಯಾನಂತರವರ್ತಿನೋಸ್ತ್ರಿದಿವಯೋರ್ದ್ವಂದ್ವೇ ಸಹಸ್ರಾಣಿ ಷಟ್
ಸಪ್ತಘ್ನಂ ಶತಮಾನತಪ್ರಭೃತಿಷು ಸ್ವರ್ಗೇಷು ತೇಷ್ವಚ್ಯುತ
ಪ್ರಾಂತೇಷು ತ್ರಿದಶಾರ್ಚಿತಾ ಜಿನಗೃಹಾಸ್ತಾನಂಜಸೋಪಾಸ್ಮಹೇ ೬೫

ಭಾಂತ್ಯೇಕಾದಶಭಿಶ್ಶತಂ ಸಮಧಿಕಂ ಪ್ರಾಚ್ಯಾಂ ತದಗ್ರೇಶತಂ
ಸಪ್ತಾಗ್ರಂ ಚರಮೇ ಸಹೈಕನವತಿಗ್ರೈವೇಯಕಾಣಾಂ ತ್ರಿಕೇ
ವಿಖ್ಯಾತಾವಸತೀರ್ನವಸ್ವನುದಿಶಾವಾಸೇಷು ತತ್ಸಂಖ್ಯಯೋಃ
ಪಂಚಾನುತ್ತರಭಾಗಿನೋ ಜಿನಗೃಹಾಃ ಪಂಚೈವ ತಾನರ್ಚಯೇ ೬೬

ವಂದೇ ಪಂಚಸು ಮಂದರಾದ್ರಿಷು ವನಾಂತಭ್ರಾಜಿನಃ ಷೋಡಶ
ಪ್ರತ್ಯೇಕಂ ಜಿನಮಂದಿರಾಣಿ ದಿವಿಜೈಃ ಸೇವ್ಯಾನಿ ವಂದಾರುಭಿಃ
ಕುರ್ಮಶ್ಚೇತಸಿ ಕುಂಡಲಾದ್ರಿರುಚಕಕ್ಷೋಣಿಧ್ರಯೋರ್ವಿಶ್ರುತೇ
ನೃಣಾಂ ಸೀಮನಿ ಮಾನುಷೋತ್ತರಗಿರೌ ಚತ್ವಾರಿ ಚತ್ವಾರಿ ಚ ೬೭

೬೪. ಮೊದಲನೆಯ ಸೌಧರ್ಮಕಲ್ಪದಲ್ಲಿ ೩೨ ಲಕ್ಷ ಜಿನೇಂದ್ರನಿಲಯಗಳಿವೆ. ಎರಡನೆಯ ಈಶಾನಕಲ್ಪದಲ್ಲಿ ೨೮ ಲಕ್ಷ, ಅದರ ಮುಂದೆ ಉಕ್ತವಾದ ಸನತ್ಕುಮಾರಕಲ್ಪದಲ್ಲಿ ೧೨ ಲಕ್ಷ, ಮಾಹೇಂದ್ರಕಲ್ಪದಲ್ಲಿ ೮ ಲಕ್ಷ, ಆಮೇಲೆ ಬ್ರಹ್ಮಕಲ್ಪ ಮತ್ತು ಬ್ರಹ್ಮೋತ್ತರಕಲ್ಪ ಎಂಬ ಎರಡು ಸ್ವರ್ಗಗಳಲ್ಲಿ ಒಟ್ಟು ೪ ಲಕ್ಷ, ಅಲ್ಲಿಂದ ಮುಂದೆ ಪ್ರಸಿದ್ಧವಾದ ಲಾಂತವ, ಕಾಪಿಷ್ಠ ಎಂಬ ಎರಡು ಕಲ್ಪಗಳಲ್ಲಿ ಒಟ್ಟು ಅರ್ಧಲಕ್ಷ (೫೦,೦೦೦) ಜಿನೇಂದ್ರನಿಲಯಗಳು ವಿರಾಜಿಸುತ್ತಿವೆ. ೬೫. ಅಲ್ಲಿಂದ ಮೇಲಿರುವ ಶುಕ್ರ ಮತ್ತು ಮಹಾಶುಕ್ರವೆಂಬ ಎರಡು ಕಲ್ಪಗಳಲ್ಲಿ ಒಟ್ಟು ೪೦ ಸಾವಿರ ಜಿನಮಂದಿರಗಳು ಪ್ರಕಾಶಿಸುತ್ತಿವೆ. ಅವುಗಳ ಮೇಲಿರುವ ಶತಾರ, ಸಹಸ್ರಾರ ಎಂಬ ಸ್ವರ್ಗಗಳಲ್ಲಿ ಒಟ್ಟು ಆರು ಸಾವಿರ ಜಿನಮಂದಿರಗಳಿವೆ. ಆನತದಿಂದ ಹಿಡಿದು ಅಚ್ಯುತದವರೆಗಿರುವ ಆನತ, ಪ್ರಾಣತ, ಆರಣ, ಅಚ್ಯುತಕಲ್ಪಗಳಲ್ಲಿ ಒಟ್ಟು ಏಳುನೂರು ಜಿನಗೃಹಗಳು ದೇವತೆಗಳಿಂದ ಅರ್ಚಿತವಾಗಿ ವಿರಾಜಿಸುತ್ತಿವೆ. ಅವನ್ನು ವಿಧಿವತ್ತಾಗಿ ಸೇವಿಸುತ್ತೇವೆ. ೬೬. ಮೂರು ಗ್ರೈವೇಯಕ ವಿಮಾನಗಳಲ್ಲಿ-ಅಧೋಗ್ರೈವೇಯಕ ದಲ್ಲಿ ೧೧೧, ಮಧ್ಯಮಗ್ರೈವೇಯಕದಲ್ಲಿ ೧೦೭, ಉಪರಿಗ್ರೈವೇಯಕದಲ್ಲಿ ೯೧-ಹೀಗೆ ಜಿನಗೃಹಗಳು ವಿರಾಜಿಸುತ್ತವೆ. (ಒಂಬತ್ತು) ಅನುದಿಶಾವಿಮಾನಗಳಲ್ಲಿ ಅಷ್ಟೇ ಸಂಖ್ಯೆಯ (ಒಟ್ಟು ಒಂಬತ್ತು) ಜಿನಮಂದಿರಗಳೂ, ಐದು ಅನುತ್ತಾರ ವಿಮಾನಗಳಲ್ಲಿ ಒಟ್ಟು ಐದು ಜಿನ ಮಂದಿರಗಳೂ ಇವೆ. ಅವನ್ನು ಪೂಜಿಸುತ್ತೇನೆ. ೬೭. ಐದು ಸುಮೇರುಪರ್ವತಗಳಲ್ಲಿ ಒಂದೊಂದರಲ್ಲಿಯೂ ವನಾಂತವಿರಾಜಿಗಳಾದ ೧೬-೧೬ ಜಿನಮಂದಿರಗಳು (ಒಟ್ಟು

ತ್ರಿಂಶದ್ವರ್ಷಧರಾಧರೇಷು ವಿಜಯಾರ್ಧೋರ್ವೀಧರಾಣಾಂ ಶತೇ
ಸಪ್ತತ್ಯಭ್ಯಧಿಕೇ ದಶಸ್ವಪಿ ಕುರುಕ್ಷೋಣೀರುಹೇಷು ಸ್ಥಿತಾಃ
ಇಷ್ವಾಕಾರಚತುಷ್ಟಯೇ ಕ್ಷಿತಿಭೃತಾಂ ವಕ್ಷಾರನಾಮ್ನಾಂ ಶತೇ
ವಂದೇ ತತ್ಪರಿಸಂಖ್ಯಯೈವ ಭುವನಖ್ಯಾತಾನ್ ಜಿನೇಂದ್ರಾಲಯಾನ್ ೬೮

ಚತ್ವಾರೋಽಂಜನಪರ್ವತಾ ದಧಿಮುಖಕ್ಷೋಣೀಧರಾಃ ಷೋಡಶ
ದ್ವಾತ್ರಿಂಶದ್ಧರಣೀಭೃತೋ ರತಿಕರಾಸ್ತೇಷಾಂ ಶಿರಶ್ಶೇಖರಾನ್
ದ್ವಾಪಂಚಾಶತಮರ್ಹತಾಂ ಮಣಿಗೃಹಾನ್ ನಂದೀಶ್ವರಾಖ್ಯಾಷ್ಟಮ
ದ್ವೀಪೇ ಪುಣ್ಯಮಹೇ ಮಹೇಂದ್ರಮಹಿತಾನಭ್ಯರ್ಚ್ಯ ವಂದಾಮಹೇ ೬೯

ಕಲ್ಪಾತೀತಸಮೇತಕಲ್ಪಕಥಿತಾಸ್ಸರ್ವೇ ತ್ರಯೋವಿಂಶತಿಃ
ಸಪ್ತಾಂತಾ ನವತಿಃ ಸಹಸ್ರಗುಣಿತಾಶೀತಿಶ್ಚತುರ್ಭಿಃಶ್ರಿತಾ
ಲಕ್ಷಾಶ್ಚೈತ್ಯಗೃಹಾಶ್ಚತುಶ್ಶತಯುತಾ ಪಂಚಾಶದಷ್ಟೋತ್ತರಾ
ತೇ ನಂದೀಶ್ವರಕುಂಡಲಾದ್ರಿರುಚಕೇಷ್ವಧ್ಯರ್ಧಯೋರ್ದ್ವೀಪಯೋಃ ೭೦

ಜ್ಯೋತಿರ್ವ್ಯಂತರಚೈತ್ಯಗೇಹರಚಿತಾ ದ್ವಿಘ್ನಾಶ್ಚತುಷ್ಕೋಟಯೋ
ಲಕ್ಷೈಸ್ಸಂಘಟಿತಾಶ್ಚ ಷಟ್ಸಹಿತಯಃ ಪಂಚಾಶದರ್ಹದ್ಗೃಹಾಃ
ಸಾಹಸ್ರಾಣಿ ಭವಂತಿ ಸಪ್ತನವತಿಃ ಯುಕ್ತಾಶ್ಚತುರ್ಭಿಶ್ಶತೈಃ
ಏಕಾಶೀತಿರಕೃತ್ರಿಮಾಸ್ತ್ರಿದಿವಗಾ ಈಶಸ್ಯ ವಾ ಗೋಚರಾಃ ೭೧

೮೦) ವಂದನಶೀಲರಾದ ದಿವಿಜರಿಂದ ಸೇವಿತವಾಗಿವೆ. ಅವನ್ನು ವಂದಿಸುತ್ತೇನೆ. ಕುಂಡಲಾದ್ರಿಜ, ರುಚಕಾದ್ರಿಗಳಲ್ಲಿಯೂ, ಮನುಷ್ಯರ ವಾಸಕ್ಕೆ ಗಡಿಯೆಂದು ವಿಶ್ರುತವಾದ ಮಾನುಷೋತ್ತರಗಿರಿಯಲ್ಲಿಯೂ ೪-೪ ಜಿನಮಂದಿರಗಳು (ಒಟ್ಟು ೧೨) ಇವೆ. ಅವನ್ನು ಮನಸ್ಸಿನಲ್ಲಿ ಧ್ಯಾನಿಸುತ್ತೇನೆ. ೬೮. ೩೦ ವರ್ಷಪರ್ವತಗಳಲ್ಲಿ, ೧೭೦ ವಿಜಯಾರ್ಧಪರ್ವತಗಳಲ್ಲಿ ೧೦ ಕುರುದೇಶ ವೃಕ್ಷಗಳಲ್ಲಿ ೪ ಇಷ್ವಾಕಾರಗಿರಿಗಳಲ್ಲಿ, ೧೦೦ (?) ವಕ್ಷಾರಗಿರಿಗಳಲ್ಲಿ ಅಷ್ಟೇ ಸಂಖ್ಯೆಯಲ್ಲಿ (೩೦, ೧೭೦, ೧೦, ೪, ೧೦೦) ಭುವನವಿಖ್ಯಾತವಾಗಿರುವ ಜಿನೇಂದ್ರಗೃಹಗಳನ್ನು ವಂದಿಸುತ್ತೇನೆ. ೬೯. ನಂದೀಶ್ವರವೆಂಬ ಎಂಟನೆಯ ದ್ವೀಪದಲ್ಲಿ ೪ ಅಂಜನಗಿರಿಗಳೂ, ೧೬ ದಧಿಮುಖಗಿರಿಗಳೂ, ೩೨ ರತಿಕರಪರ್ವತಗಳೂ ಇವೆ. ಅವುಗಳ ಶಿರೋಭೂಷಣಗಳಾಗಿಯೂ ಪುಣ್ಯಮಹದಲ್ಲಿ ಮಹೇಂದ್ರಪೂಜಿತಗಳಾಗಿಯೂ ಇರುವ ೩೨ ಮಣಿಗೃಹಗಳನ್ನು ಪೂಜಿಸಿ ವಂದಿಸುತ್ತೇನೆ. ೭೦. ಕಲ್ಪಾತೀತ ಸಹಿತವಾಗಿ ಕಲ್ಪಗಳಲ್ಲಿ ಕಥಿತವಾದ ಎಲ್ಲವೂ ಸೇರಿ (ಅಕೃತ್ರಿಮ) ಜಿನಗೃಹಗಳು ಎಂಬತ್ತುನಾಲ್ಕುಲಕ್ಷ ತೊಂಬತ್ತೇಳುಸಾವಿರದ ಇಪ್ಪತ್ತುಮೂರು (೮೪, ೯೭, ೦೨೩) ಆಗುತ್ತವೆ. ನಂದೀಶ್ವರದ್ವೀಪ, ಕುಂಡಲಾದ್ರಿ, ರುಚಕದ್ವೀಪಗಳಲ್ಲಿ ಮತ್ತು ಅಧ್ಯರ್ಧದ್ವೀಪದ್ವಯಗಳಲ್ಲಿ ಒಟ್ಟು ನಾನೂರು ಐವತ್ತೆಂಟು (೪೫೮) ಚೈತ್ಯಾಲಗಳಿವೆ. ೭೧. ಜ್ಯೋತಿರ್ವಿಮಾನ ಮತ್ತು ವ್ಯಂತರಭವನಗಳಲ್ಲಿ ಚೈತ್ಯಾಲಯಗಳು ಮತ್ತು (ಹಿಂದಿನ ಶ್ಲೋಕದಲ್ಲಿ ಹೇಳಿದವೂ ಸೇರಿ) ಒಟ್ಟು ಎಂಟುಕೋಟಿ ಐವತ್ತಾರುಲಕ್ಷ ತೊಂಬತ್ತೇಳು

ಭೂಪಾಲೇಂದ್ರಮಹಾಮಹೈರಹರಹಸ್ಸಂಪಾದ್ಯಮಾನೈರ್ನವೈಃ
ಭ್ರಾಜಂತೇ ಜಿನರಾಜಕೃತ್ರಿಮಗೃಹಾಸ್ತೇಭ್ಯೋ ನಮಸ್ಕುರ್ಮಹೇ
ಅಸ್ಮಾಕಂ ಕವಿತಾಗುಣಾರ್ಣವನುತಾಃ ಕುರ್ವಂತು ಚೈತ್ಯಾಲಯಾಃ
ತೇ ಲೋಕತ್ರಯತುಂಗಮಂಗಲಮಹಾಶ್ರೀಭಾಗ್ಯಯೋಗ್ಯಂ ಪದಂ ೭೨

ವ|| ಎಂದು ಜಗತ್ತ್ರಯಚೈತ್ಯಸ್ತೋತ್ರಪವಿತ್ರಮುಖಾರವಿಂದನಾಗಿ ಭಗವದಾದಿಭಟ್ಟಾರಕರ ನಿರ್ವಾಣಭೂಮಿಸಮೀಪಸ್ಥಿತವಿಶಾಲಸ್ಫಟಿಕಶಿಲಾತಳಾರೂಢನುತ್ತರಾಭಿಮುಖನಾಗಿ ಸಿದ್ಧಭಕ್ತಿಪೂರ್ವಕಂ ತ್ರಿಜಗದ್ಗುರುವೇ ಗುರುವೆಂದು ತತ್ಪದಸರಸಿಜಧ್ಯಾನಪರಾಯಣನಾಗಿ,

ಶ್ರೀನಾರೀಪತಿ ದೀಕ್ಷೆಯಂ ಕೊಳಲೊಡಂ ಭೋಂಕಲ್ ಮನಃಪರ್ಯಯ
ಜ್ಞಾನಂ ಪುಟ್ಟಿದುದಂತು ಪುಟ್ಟಿದ ಬಟಿಕ್ಕಂತರ್ಮುಹೂರ್ತಕ್ಕೆ ಭ
ವ್ಯಾನಂದಪ್ರದಮಿಂದ್ರವೃಂದಕೃತಕಲ್ಯಾಣಾಸ್ಪದಂ ಕೇವಲ
ಜ್ಞಾನಂ ಪುಟ್ಟಿದುದಿಂತು ಭವ್ಯತೆ ಜಗಕ್ಕಾಶ್ಚರ್ಯಮಾಯ್ತೊಶನಾ ೭೩

ನರಲೋಕಮೊಂದೆ ಮುನ್ನಿನ
ಚರಣಾಬ್ಜಕ್ಕೆಱಗೆ ನೆಗಟ್ದ ಕೇವಳಬೋಧಂ
ದೊರೆಕೊಳೆ ಸುರನರಲೋಕಂ
ಚರಣಾಬ್ಜಕ್ಕೆಱಗೆ ಭರತಯತಿಪತಿ ನೆಗಟ್ದಂ ೭೪

ಸಾವಿರದ ನಾನೂರ ಎಂಬತ್ತೊಂದು (೮,೫೬,೯೭,೪೮೧) ಅಕೃತ್ರಿಮವಾದ ಜಿನಮಂದಿರಗಳಾಗುತ್ತವೆ. ಅಥವಾ ಸ್ವರ್ಗದಲ್ಲಿರುವ ಜಿನಮಂದಿರಗಳೆಷ್ಟೆಂಬುದು ಜಿನೇಶನಿಗೆ ಮಾತ್ರ ಗೋಚರ! ೭೨. ಅಲ್ಲದೆ ಕೃತ್ರಿಮವಾದ (ದೇವಾದಿಗಳಿಂದ ನಿರ್ಮಿತವಾದ) ಜಿನರಾಜಗೃಹಗಳು, ರಾಜರು ಪ್ರತಿದಿನವೂ ಹೊಸ ಹೊಸತಾಗಿ ನೆರವೇರಿಸುತ್ತಿರುವ ಮಹಾಮಹಗಳಿಂದ ರಾರಾಜಿಸುತ್ತಿವೆ. ಅವುಗಳಿಗೆ ನಮಸ್ಕಾರ ಮಾಡುತ್ತೇನೆ. ಕವಿತಾ ಗುಣಾರ್ಣವನೆನಿಸಿದ ಪಂಪನಿಂದ ಸ್ತುತವಾದ ಚೈತ್ಯಾಲಯಗಳು ನಮಗೆ ಲೋಕತ್ರಯಗಳಲ್ಲಿ ಶ್ರೇಷ್ಠವಾದ ಮಹಾಶ್ರೀಭಾಗ್ಯಯೋಗ್ಯವೂ ಮಂಗಲವೂ ಆದ ಪದವನ್ನು ಅನುಗ್ರಹಿಸಲಿ".[1] ವ|| ಹೀಗೆ ಭರತನು ಲೋಕತ್ರಯದಲ್ಲಿನ ಚೈತ್ಯಾಲಯಗಳ ಸ್ತೋತ್ರದಿಂದ ಪವಿತ್ರವಾದ ಮುಖಕಮಲವುಳ್ಳವನಾಗಿ ಭಗವತ್ಸ್ವರೂಪರಾದ ಆದಿಭಟ್ಟಾರಕರ ನಿರ್ವಾಣಭೂಮಿಯ ಸಮೀಪದಲ್ಲಿರುವ ಪಟಿಕದ ಶಿಲಾತಲವನ್ನೇರಿ ಉತ್ತರಾಭಿಮುಖನಾಗಿ ನಿಂತು ಸಿದ್ಧಭಕ್ತಿಯುತನಾಗಿ ತ್ರಿಜಗದ್ಗುರುವಾದ ಆದಿಭಟ್ಟಾರಕರೇ ತನ್ನ ಗುರುವೆಂದು ಭಾವಿಸಿ ಅವರ ಕಾಲ್ದಾವರೆಗಳ ಧ್ಯಾನದಲ್ಲಿ ಆಸಕ್ತನಾದನು. ೭೩. ಶ್ರೀವನಿತೆಯ ಕಾಂತನಾದ ಭರತಚಕ್ರವರ್ತಿಯು ದೀಕ್ಷೆಯನ್ನು ಕೈಕೊಳ್ಳಲು ಒಡನೆ ಮನಃಪರ್ಯಯಜ್ಞಾನವು ಮೂಡಿತು. ಬಳಿಕ ಅಂತರ್ಮುಹೂರ್ತದಲ್ಲಿ ಭವಜನಕ್ಕೆ ಆನಂದಪ್ರದವೂ ಇಂದ್ರಕೃತಕಲ್ಯಾಣಕ್ಕೆ ಆಸ್ಪದವೂ ಆದ ಕೇವಲಜ್ಞಾನವು ಹುಟ್ಟಿತು. ಭರತೇಶನ ಈ ಭವ್ಯತೆಯು ಜಗಕ್ಕೆ ಆಶ್ಚರ್ಯವನ್ನುಂಟುಮಾಡಿತು. ೭೪. ನರಲೋಕವು ಮಾತ್ರ ಮೊದಲು ಭರತನ ಚರಣಾಬ್ಜಕ್ಕೆ

1 ಈ ಎಲ್ಲ ಸಂಸ್ಕೃತ ಶ್ಲೋಕಗಳಿಗೆ ಸಂಬಂಧಿಸಿದ ವಿವರಕ್ಕೆ ಅನುಬಂಧವನ್ನು ನೋಡಿ.

ವ॥ ಅಂತನಂತಚತುಷ್ಟಯವಿರಾಜಮಾನನುಂ ದೇವಮಾನವಪರಿಷತ್ಪರಿವೃತನುಂ ಸಪ್ತರ್ಧಿಸಮನ್ವಿತಯತಿಪತಿಸಮೇತನುಂ ಅಮೃತಕರಕರಧವಳೈಕಚ್ಛತ್ರಚಾಮರಚತುಷ್ಟಯವಿಭ್ರಾಜಿತನುಂ ಸುರೇಂದ್ರಗಿರಿಶಿಖರವಿರಾಜಮಾನಮೃಗೇಂದ್ರಾಸನವಿಭಾಸಿಯುಂ ಸರಿತ್ಸರೋವರವಿಮಳಗಗನತಳವಿಹರಣ ಪರಿಣತನುಮಾಗಿ ನಾನಾವಿಧ ಧರ‍್ಮಕ್ಷೇತ್ರಂಗಳೊಳೊಂದುಲಕ್ಕ ಪೂರ್ವಂಬರಂ ಧರ‍್ಮಾಮೃತಾಂಬುಸೇಕದಿಂ ವಿನೇಯಜನಸಸ್ಯಸಂಪತ್ಪರಂಪರೆಯಂ ಮಾಡಿ ಕೈಳಾಸಶೈಲಶಿಖರಾಲಂಕಾರನಿರುದ್ಧಯೋಗನುಂ ಅಪಗತ ಯೋಗಗುಣಸ್ಥಾನನುಂ ಚತುರ್ಥಧ್ಯಾನಾನಳದಗ್ಧಶೇಷಾಶೇಷಕರ್ಮೇಂಧನನುಮಾಗಿ,

ಪರಮಶ್ರೀಸಂತತಾವಾಸದೊಳಖಿಳಸುಖಸ್ವಚ್ಛಸಂಪನ್ನ ತೋಯಾ
ಕರದೊಳ್ ಶಶ್ವದ್ಗುಣಾಂಭೋರುಹವಿಳಸನವಿಭ್ರಾಜಿಯೊಳ್ ಸಿದ್ಧಹಂಸೋ
ತ್ಕರಲೀಲಾರಮ್ಯದೊಳ್ ಸಂದಮೃತನಿಳಯನೀರೇಜಿನೀಷಂಡದೊಳ್ ಸೌಂ
ದರಕೇಳೀಹಂಸನಾದಂ ಸುಕವಿಜನಮನೋಮಾನಸೋತ್ತಂಸಹಂಸಂ ೭೫

ವ॥ ಭರತಯತಿಪತಿಯ ತದನಂತರದೊಳ್ ತದ್ವೃಷಭಸೇನಗಣನಾಥ ಪುರಸ್ಸರಂ ಪುರುತನಯರ್ ಕ್ರಮದೊಳ್ ಪರಮಸುಖಾಸ್ಪದಮನನಿಬರುಂ ಕೈಕೊಂಡರ್,

ನಮಸ್ಕರಿಸುತ್ತಿತ್ತು. ಕೇವಲಜ್ಞಾನವು ಕೈಸೇರಿದ ಮೇಲೆ ದೇವ ಮಾನವಲೋಕಗಳೂ ಅವನಿಗೆ ನಮಸ್ಕರಿಸಲಾರಂಭಿಸಿದವು. ಹೀಗೆ ಭರತಮುನೀಶ್ವರನು ಖ್ಯಾತಿವೆತ್ತನು. ವ॥ (ಅನಂತಜ್ಞಾನ, ಅನಂತದರ್ಶನ, ಅನಂತಸುಖ, ಅನಂತವೀರ್ಯಗಳೆಂಬ) ಅನಂತ ಚತುಷ್ಟಯಗಳಿಂದ ಪ್ರಕಾಶಿಸುತ್ತ ದೇವ ಮಾನುಷಸಮೂಹದಿಂದಲೂ (ಬುದ್ಧಿ, ಋದ್ಧಿ, ತಪರ್ಧಿ, ಔಷಧರ್ಧಿ, ರಸರ್ಧಿ, ಜ್ಞಾನರ್ಧಿ, ಚಾರಣರ್ಧಿಗಳೆಂಬ) ಸಪ್ತರ್ಧಿಗಳಿಂದ ಕೂಡಿದ ಯತಿಪತಿಗಳ ಗುಂಪಿನಿಂದಲೂ ಪರಿವೃತನಾಗಿ ಚಂದ್ರನ ಕಿರಣಗಳಂತೆ ಬೆಳ್ಳಗಿರುವ ಏಕಚ್ಛತ್ರ ಚಾಮರಾದಿ ಚತುಷ್ಟಯಗಳಿಂದ ವಿಭ್ರಾಜಿತನಾಗಿ ಆ ಭರತಮುನಿಯು ಸುರೇಂದ್ರಪರ್ವತದ ಶಿಖರದಲ್ಲಿ ಶೋಭಿಸುತ್ತಿರುವ ಸಿಂಹಾಸನದಲ್ಲಿ ವಿರಾಜಿಸುತ್ತಲೂ ಹೊಳೆ, ಕೊಳ, ಗಗನಗಳಲ್ಲಿ ವಿಹರಣಪರಿಣತನಾಗಿಯೂ ನಾನಾವಿಧ ಧರ್ಮಕ್ಷೇತ್ರಗಳಲ್ಲಿ ಒಂದು ಲಕ್ಷ ಪೂರ್ವಗಳ ಕಾಲ ಧರ್ಮಾಮೃತವೆಂಬ ನೀರಿನ ಸೇಚನದಿಂದ ಶಿಷ್ಯಜನರೆಂಬ ಸಸ್ಯಸಂಪತ್ಪರಂಪರೆಯನ್ನು ಬೆಳೆಸಿದನು. ಬಳಿಕ ಕೈಲಾಸಪರ್ವತದ ಶಿಖರಕ್ಕೆ ಅಲಂಕಾರಪ್ರಾಯನಾಗಿ ನಿರುದ್ಧಯೋಗನಾಗಿ ಯೋಗಗುಣಸ್ಥಾನವನ್ನು (ಹದಿಮೂರನೆಯ ಗುಣಸ್ಥಾನವನ್ನು) ಕಳೆದುಕೊಂಡು ಚತುರ್ಥಧ್ಯಾನವೆಂಬ ಬೆಂಕಿಯಿಂದ ಕಳೆದುಳಿದ ಸಮಸ್ತ ಕರ್ಮಗಳೆಂಬ ಕಟ್ಟಿಗೆಗಳನ್ನು ಸುಟ್ಟು, ೭೫. ಶ್ರೇಷ್ಠಳಾದ ಮೋಕ್ಷಲಕ್ಷ್ಮಿಗೆ ಸಂತತವಾಸಸ್ಥಾನವೂ ಅನಂತಜ್ಞಾನಾದಿ ಶಾಶ್ವತ ಗುಣಗಳೆಂಬ ಕಮಲಗಳ ವಿಲಾಸದಿಂದ ಶೋಭಿಸತಕ್ಕುದೂ ಸಿದ್ಧರೆಂಬ ಹಂಸಗಳ ಲೀಲೆಯಿಂದ ರಮ್ಯವೂ ಅಮೃತನಿಲಯಸ್ಥಾನಗಳೆಂಬ ಕಮಲಿನೀ ಸಮೂಹವುಳ್ಳದ್ದೂ ಆದ ನಿರಂತರಸುಖವೆಂಬ ಸಮೃದ್ಧವಾದ ತಿಳಿನೀರಿಗೆ ಆಕರವಾದ ಸರೋವರದಲ್ಲಿ ಸುಕವಿಜನ ಮನೋಮಾನಸೋತ್ತಂಸಹಂಸನಾದ ಭರತಯತೀಶ್ವರನು ಸುಂದರವಾಗಿ ಕ್ರೀಡಿಸುವ ಹಂಸನಾದನು. ವ॥ ಭರತಯತಿಪತಿಯ ಅನಂತರ ವೃಷಭಸೇನಗಣನಾಥರೇ ಮೊದಲಾಗಿ ಪುರುರಾಜನ ಮಕ್ಕಳೆಲ್ಲರೂ ಕ್ರಮವಾಗಿ

ಶಕವರ್ಷಮೆಂಟುನೂಱ
ಕ್ಕೆ ಕಡೆಯೊಳಱುವತ್ತುಮೂಱು ಸಂದಂದು ಬಳಿ
ತ್ತಕಟಪ್ಲವಸಂವತ್ಸರ
ದ ಕಾರ್ತಿಕಂ ಮುದಮನೀಯೆ ನಂದೀಶ್ವರದೊಳ್ ೭೬

ಸಿತಪಕ್ಷದ ಪಂಚಮಿದಿನ
ಪತಿವಾರಂ ಶುಭದಮೂಲನಕ್ಷತ್ರದೊಳ
ನ್ವಿತಮಾಗೆ ನೆಗಱ್ದೀಮ
ತ್ಕೃತಿ ಜಗದೊಳ್ ಪುದಿದು ಸಾಗರಾಂತಕ್ಷಿತಿಯಂ ೭೭

ತ್ರಿದಶಸ್ತುತ್ಯಮಿಂದಾದಿದೇವಚರಿತಂ ಕರ್ಣಾಮೃತಸ್ಯಂದಿಯ
ಕ್ಕಿದು ಭವ್ಯಾವಳಿಗೆಂದು ಪೇೞೆಸೆ ಬುಧರ್ ಸ್ವರ್ಗಾಪವರ್ಗಕ್ಕಮಾ
ಸ್ಪದಮಪ್ಪಾದಿಪುರಾಣವಸ್ತುಕೃತಿಯಂ ಪೇೞ್ದಂ ಬೆಡಂಗಪ್ಪಮಾ
ರ್ಗದೊಳಂ ದೇಸೆಯೊಳಂ ಪೊದಱ್ದೆಸೆವಿನಂ ಸಂಸಾರಸಾರೋದಯಂ ೭೮

ರಸಭಾವವ್ಯೋಪೇತಧರ್ಮಾಮೃತರಸಮಯದೊಳ್ ಘೋರಸಂಸಾರನಾನಾ
ವ್ಯಸನವ್ಯುಚ್ಛಿತ್ತಿಯೊಳ್ ಧಾರ್ಮಿಕಜನಜನಿತಾನಂದಸಂದೋಹವಿದ್ಯಾ
ರಸದೊಳ್ ಸಂಸಾರಸಾರೋದಯವಿರಚಿತದೊಳ್ ವಾಗ್ವಧೂಮುದ್ರೆಯೊಳ್ ಮು
ದ್ರಿಸಿ ನಿಂದತ್ತಾದಿತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯಕೋಶಂ ೭೯

ಪರಮಸುಖಾಸ್ಪದರಾದರು. ೭೬. ಶಕವರ್ಷದಲ್ಲಿ ಎಂಟುನೂರ ಅರವತ್ಮೂರು ವರ್ಷಗಳು ಕಳೆದಾಗ ಪ್ಲವಸಂವತ್ಸರದ ಕಾರ್ತಿಕಮಾಸವು ನಂದೀಶ್ವರದಲ್ಲಿ[1] (ಕಲ್ಪಜರಿಗೆ) ಸಂತೋಷವನ್ನು ಕೊಟ್ಟಿತು. ಆಗ ೭೭. ಶುಕ್ಲಪಕ್ಷದ ಪಂಚಮಿ, ಅಂದು ಆದಿತ್ಯವಾರ ಶುಭಕರವಾದ ಮೂಲನಕ್ಷತ್ರವು ಕೂಡಿಸಲು ನನ್ನೀ ಕಾವ್ಯವು - ಅಂದರೆ ಆದಿಪುರಾಣವು ಪೂರ್ಣಗೊಂಡು ಸಾಗರಾಂತವಾದ ಕ್ಷಿತಿಯಲ್ಲಿ ಪ್ರಸಿದ್ಧವಾಯಿತು. ೭೮. ಈ ಆದಿದೇವಚರಿತೆಯು ತ್ರಿದಶಸ್ತುತ್ಯವಾದುದು. ಭವ್ಯಜನರ ಕಿವಿಗಳಿಗೆ ಅಮೃತವನ್ನೆರೆಯಲೆಂದು ವಿದ್ವಾಂಸರು ಪ್ರೇರಿಸಲು ಸ್ವರ್ಗಮೋಕ್ಷಗಳಿಗೆ ಆಸ್ಪದವಾದ ಆದಿಪುರಾಣವೆಂಬ ಈ ವಸ್ತುಕೃತಿಯನ್ನು ಸೊಗಸಾದ ದೇಸಿಮಾರ್ಗದಲ್ಲಿ ಸಂಸಾರಸಾರೋದಯನಾದ ಪಂಪನು ರಚಿಸಿದನು. ೭೯. ರಸಭಾವಸಮೇತವೂ ಧರ್ಮವೆಂಬ ಅಮೃತರಸವನ್ನೊಳಕೊಂಡುದೂ ಭಯಂಕರವಾದ ಸಂಸಾರದ ಬಹುಮುಖವಾದ ವ್ಯಸನಗಳನ್ನು ವಿನಾಶಗೊಳಿಸಬಲ್ಲುದೂ ಧಾರ್ಮಿಕಜನರಿಗೆ ಆನಂದವನ್ನು ತರಬಲ್ಲುದೂ ಹೃದ್ಯವಾದ ವಿದ್ಯಾವೈಭವವನ್ನು ಪ್ರಕಾಶಗೊಳಿಸಬಲ್ಲುದೂ ಸಂಸಾರಸಾರೋದಯನಾದ ಪಂಪನಿಂದ ವಿರಚಿತವಾದುದೂ ಆದ ಆದಿತೀರ್ಥೇಶ್ವರನ ಚರಿತ್ರೆಯಲ್ಲಿ ವಾಕ್ಯಗಳೆಂಬ ಮಾಣಿಕ್ಯಗಳ ಕೋಶವು ವಾಗ್ವಧೂ

---

1 ನಂದೀಶ್ವರದ್ವೀಪದಲ್ಲಿ ಕಲ್ಪಜರು ಕಾರ್ತಿಕಮಾಸದಲ್ಲಿ ವೈಭವದಿಂದ ಜಿನೋತ್ಸವವನ್ನು ಆಚರಿಸುತ್ತಾರೆ. ಆ ಸಂದರ್ಭಕ್ಕೆ ಹೊಂದುವಂತೆ ಈ ಕಾವ್ಯದ ರಚನೆಯಾಯಿತೆಂದು ಅಭಿಪ್ರಾಯ.

ಭಾಸುರದೇವಕೋಟಿವಿಭುವಪ್ಪ ಮಹರ್ಧಿಕನಪ್ಪ ವಾಸವಂ
ಗಾಸನಕಂಪಮಂ ಪಡೆದು ತೀರ್ಥಕರತ್ವಮನಿತ್ತನಶ್ವರಾ
ವಾಸಮನೆಯ್ದಿಸಲ್ಕಿದುವೆ ಷೋಡಶಭಾವನೆಯಿಂದೆ ಷೋಡಶಾ
ಶ್ವಾಸಮನೆಯ್ದೆ ಭಾವಿಸುಗೆ ಭವ್ಯರನಂತಸುಖಾಭಿಲಾಷಿಗಳ್ ೮೦

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ ವಾಕ್ಚಂದ್ರಿಕಾ
ಪ್ರಸರಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಪರಿನಿರ್ವಾಣಕಲ್ಯಾಣವರ್ಣನಂ

**ಷೋಡಶಾಶ್ವಾಸಂ**

ಮುದ್ರೆಯಿಂದ ಮುದ್ರಿತವಾಗಿದೆ. ೮೦. ಪ್ರಕಾಶಮಾನರಾದ ದೇವಕೋಟಿಗಳಿಗೆ ಒಡೆಯನೂ (ಔಷಧರ್ಧಿಯೇ ಮೊದಲಾದ ಏಳು) ಮಹಾಋದ್ಧಿಗಳಿಂದ ವಿಭೂಷಿತನೂ ಆದ ಇಂದ್ರನಿಗೆ ಆಸನಕಂಪವನ್ನು ಉಂಟುಮಾಡಿ ಆದಿರಾಜನಿಗೆ ತೀರ್ಥಂಕರತ್ವವನ್ನು ಇತ್ತು ಶಾಶ್ವತವಾದ ಮೋಕ್ಷವನ್ನು ದೊರಕಿಸಲು ಈ ಷೋಡಶಭಾವನೆಗಳೇ ಸಮರ್ಥವಾದುವು. ಆದ್ದರಿಂದ ಈ ಷೋಡಶಾಶ್ವಾಸಗಳನ್ನು ಅನಂತಸುಖಾಭಿಲಾಷಿಗಳಾದ ಜನರು ಷೋಡಶ ಭಾವನೆಗಳೆಂದೇ ತಿಳಿದು ಪರಿಶೀಲಿಸಲಿ.

ಇಂತು ಆದಿಪುರಾಣದಲ್ಲಿ ಪರಿನಿರ್ವಾಣಕಲ್ಯಾಣವರ್ಣನವೆಂಬ
ಹದಿನಾರನೆಯ ಆಶ್ವಾಸ ಮುಗಿಯಿತು.

**ಆದಿಪುರಾಣಂ ಸಂಪೂರ್ಣಂ**

# ಕಠಿಣ ಶಬ್ದಗಳ ಅರ್ಥ

## ಅ

ಅಕೃಷ್ಟಪಚ್ಯ (೬-೭೨ವ) - ಕೃಷಿಮಾಡದೆ ಬೆಳೆಯುವ

ಅಕ್ಷೂಣ (೧೦-೬)- ಕೊರತೆಯಿಲ್ಲದ, ಕಡಿಮೆಯಿಲ್ಲದ

ಅಗಲ್ (೭-೨೧ ವ)- ಊಟದ ತಟ್ಟೆ, ಬಡಿಸಿದ ತಟ್ಟೆ,

ಅಗುಂದಲೆ (೧-೫೦) (೪-೮೮) - ಅತಿಶಯ, ಆಧಿಕ್ಯ

ಅಗುರ್ವು (೧-೭) (೮-೮೨) - ಭಯಂಕರ

ಅಗ್ಗಲಿಸು (೭-೧೧೩) - ಹೆಚ್ಚಿಸು, (೮-೪) ಉನ್ನತಿ ಹೊಂದು.

ಅಂಕ (೬-೮೯) - ಪ್ರಸಿದ್ಧ.

ಅಂಕೆಗೊಳ್ (೪-೧೮) - ಕೈವಶವಾಗು, ಹತೋಟಿಗೆ ಬರು

ಅಂಗದ (೭-೧೦೬ ವ) - ತೋಳುಬಳೆ

ಅಂಗಹಾರ (೯-೨೯) - ನಟನೆ, ನೃತ್ಯಭಂಗಿ

ಅಚ್ಚಿಗ (೧೨-೨೨) - ವ್ಯಥೆ, ಖೇದ

ಅಚ್ಚಿಜೆ (೧೨-೬) ಅಚ್ಚೊತ್ತು, ಮುದ್ರೆ ಹಾಕು

ಅಂಜಮೆ (೧೪-೭೫) - ಅಂಜಿಕೆ, ಅಂಜುಬುರುಕುತನ

ಅಟ್ಟಾಲ (೬-೧೦೪) - ಬುರುಜು ; ಕೊತ್ತಳ

ಅಡಗು (೫-೮೫ವ) - ಮಾಂಸ

ಅಡಪ (೩-೨೩ ವ) - ಸಂಚಿ, ಎಲೆಅಡಕೆ ಹಾಕುವ ಚೀಲ

ಅಡರ್ಪು (೬-೨೨ವ) - ಆಶ್ರಯ

ಅಣ್ಪು (೧೨-೧೨) - ಲೇಪನ

ಅತಸಿ (೬-೭೨ ವ) - ಅಗಸೆ

ಅತ್ತಳಗ (೪-೧೦) - ವ್ಯಥೆ, ಕಳವಳ

ಅದವಳಲ್ (೧೨-೨೨) - ದುಃಖ, ಸಂತಾಪ

ಅದಿರ್ಮುತ್ತೆ (೧೧-೧೭೮) - ಅದಿರ್ಗಂತಿ, ಮಾಧವಿ, ವಸಂತದೂತಿ

ಅಧಿವಾಸಿತ (೧೨-೭೪) - ಪ್ರತಿಷ್ಠೆಮಾಡಿದ, ಪೂಜಿಸಿದ

ಅಧ್ಯಾಸಿತ (೯-೬೦ವ) - ಕೂಡಿದ, ವ್ಯಾಪ್ತವಾದ

ಅನಪವರ್ತ್ಯ (೮-೪ವ) - ಶಸ್ತ್ರಹತಿ ಮುಂತಾದ ಕಾರಣಗಳಿಂದ ಕ್ಷೀಣವಾಗದ

ಅನಾಗತಮತಿ (೫-೭) - ಭವಿಷ್ಯಜ್ಞ

ಅನುವಿಸು (೧೨-೪೧; ೯-೧೦೬)- ಅನುನಯದಿಂದ ಕೇಳಿಕೊ, ಬೇಡಿಕೊಳ್ಳು

ಅನೂಪ (೮-೬೩ ವ) - ಜೌಗುನೆಲ

ಅನೇಕಪ (೩-೪೦ವ) - ಆನೆ

ಅಂತರೀಯ (೧೧-೧೪೮)- ಉಟ್ಟುಕೊಳ್ಳುವ ವಸ್ತ್ರ, ಉಡುಪು

ಅಂತರ್ಮುಹೂರ್ತ (೧೬-೪೯ವ) - ಮುಹೂರ್ತದಲ್ಲಿ ಅಂತರ್ಭಾವವಾಗುವ ಕಾಲ

ಅಂತರ್ವತ್ನಿ (೭-೩೧) - ಗರ್ಭಿಣಿ

ಅಂತರ್ವಂಶಿಕ (೨-೨ ವ) - ಬಂಧುಜನ, ಬಾಂಧವ

ಅನ್ವವಾಯ (೪-೫೫) - ವಂಶ

ಅಪಘನ (೪-೬೫) - ಅವಯವ

ಅಪ್ಪಯಿಸು (೫-೨೧ ವ) - ಒಪ್ಪಿಸು, ಅರ್ಪಿಸು

ಅಭವ (೯-೧೧೧) - ಜನ್ಮವಿಲ್ಲದವ; ಜಿನ

ಅಭವ್ಯ (೨-೩೪) - ಮೋಕ್ಷಗಾಮಿಯಲ್ಲದವನು

ಅಭಿಚಾರ (೧೧-೫) - ಮಾರಣ

ಅಮರ್ (೧-೩) - ಹೊಂದಿಕೊಂಡಿರು

ಅಯುತ (೬-೧೩ ವ) - ಹತ್ತು ಸಾವಿರ

ಅರರೀಪುಟ (೧೩-೩.೭) - ಕವಾಟಪುಟ, ಬಾಗಿಲ ಹಲಗೆ

ಅರಿವುರಂ (೪-೧೭) - ಅರ್ಧಮರ್ಧ (?)

ಅರೆವೊರೆಕ (೧೧-೬೮ ವ) - ಅರೆಬರೆಯಾದ, ಅರ್ಧವ್ಯಾಪಿಸಿದುದು

ಅಱ (೨-೧೧) - ಧರ್ಮ
ಅಱಿಕೆ (೬-೫) - ಪ್ರಸಿದ್ಧಿ, ಶ್ರೇಷ್ಠತೆ
ಅಱಿಯಮೆ (೫-೯೫) - ಅಜ್ಞಾನ, ಮರೆವು
ಅಱೆ (೧-೫೨) - ಹೊಡೆತ
ಅರ್ತಿವಡು (೧೪-೪೩ ವ) - ಪ್ರೀತಿಸು
ಅರ್ಧಗುಚ್ಛ (೮-೫೪ ವ) - ಇಪ್ಪತ್ತುನಾಲ್ಕು ಎಳೆಗಳುಳ್ಳ ಹಾರ
ಅರ್ಧಮಾಣವಕ (೮-೫೪ ವ) - ಹತ್ತು ಎಳೆಗಳುಳ್ಳ ಮುತ್ತಿನ ಹಾರ
ಅರ್ಧಹಾರ (೮-೫೪ ವ) - ಅರವತ್ತುನಾಲ್ಕು ಎಳೆಗಳುಳ್ಳ ಹಾರ
ಅಲಂಪು (೭-೪೭) - ಸೊಗಸು
ಅಲಾಬೂ (೨-೯ ವ) - ಸೋರೆಕಾಯಿ
ಅವಗಾಹ (೧-೬೨ ವ) - ಉದ್ದಳತೆ
ಅವಚೆಱ್ತು (೨-೩೭) - ಜುಗುಪ್ಸೆಪಟ್ಟು,
ಅಸಹ್ಯಪಟ್ಟು
ಅವಿನಾಣ (೩-೪೩ ವ) - ಗುರುತು, ಕುರುಹು,
ಅಭಿಜ್ಞಾನ
ಅವ್ವಳಿಸು (೪-೧೨) - ಮೇಲೆ ಬೀಳು,
ಮುಸುಕು, ವ್ಯಾಪಿಸು, ಹರಡು
ಅಸಕಟಿ (೮-೧೫ ವ)-ಕೈ ಮೀರು, ಮೀರು, ದಾಟು
ಅಸವಸ (೩-೩೬ ವ) - ತ್ವರೆ
ಅಸಿಧೇನು (೨-೧೪ವ ) ಕತ್ತಿ
ಅಸಿಯ (೭-೩೧) - ತೆಳುವಾದ (೧೨-೧೫)
ಅಸುನೆಱ (೭-೯೧) - ಮೃದು, ಸುಕುಮಾರ
ಅಳಱು (೧೦-೧೫) - ನಾಶವಾಗು, ಭಯಪಡು
ಅಳಿಪು (೪-೬೬)- ಆಸೆ, ಇಚ್ಛೆ.
ಅಳುಂಬಂ (೭-೧೦೧) - ಅತಿಶಯ, ವಿಶೇಷ
ಅಳ್ಕು (ಅಬ್ಬು) (೮-೬೨) - ಸುಡು;
ಅತಿಕ್ರಮಿಸು
ಅಳ್ಳಿಱೆ(೮-೨೪ ವ) - ಅದುರು; ತಿವಿ
ಅಳ್ಳೆರ್ದೆ (೨-೭೩) - ನಡುಗುವ ಹೃದಯ
ಅಳ್ಳೆವಿಳ್ಳೆಯಾಗು (೧೧-೬೮ ವ)- ಅತ್ಯಾಯಾಸ
ಹೊಂದು

ಅಬಿವೆ (೬-೯೫) - ನೀರಿನ ತೂಬು
ಅಬ್ಬಿಮೆ (೧೧-೧೧೫) - ಅಜೀರ್ಣ
ಅಳ್ಕು (೧೩-೮೬) - ಸುಡು

ಆ

ಆಕಾಶಸ್ಫಟಿಕ (೨-೩೨ ವ) - ಆಕಾಶದಲ್ಲಿ ನಿರ್ಮಾಣಗೊಳ್ಳುವುದೆಂದು ಹೇಳಲಾದ ಒಂದು ಸ್ಫಟಿಕ
ಆಗುಳಿ (೩-೩) - ಆಕಳಿಕೆ (?)
ಆಘಾಟ (೬-೫೭ ವ) - ಸೀಮೆ, ಮೇರೆ
ಆಜಿ (೧೪-೮೨) - ಯುದ್ಧ
ಆಟಂದು (೯-೬೦) - ಮೇಲೆ ಬಿದ್ದು
ಆಟಿಸು (೫-೭೯) - ಬಯಸು, ಇಚ್ಛಿಸು
ಆಢಕೀ (೬-೭೨ ವ) - ಅವರೆ
ಆನಕ (೭-೩೯) - ದುಂದುಭಿ
ಆಂಗೊಳಗು (೧೩-೪) - ಹಸುವಿನ ಗೊರಸು
ಆಂದೋಳ (೪-೫೪ ವ) - ಪಲ್ಲಕ್ಕಿ
ಆಪೊತ್ತುಂ (೮-೧) - ಸದಾಕಾಲ
ಆಯಿಲ (೧-೫೨) - ರೋಗ (?)
ಆರ (೩-೪೮) - ಹಾರ
ಆರಯ (೧೨-೪೫) - ವಿಚಾರಣೆ
ಆರ್ಮ (೨-೨೦) - ಶ್ರೇಯಸ್ಕರ
ಆಲಾನಸ್ತಂಭ (೭-೧೨೪) - ಆನೆ ಕಟ್ಟುವ
ಕಂಬ
ಆಲೀಢ (೫-೭೧) - ನಿಲ್ಲುವ ಒಂದು ಕ್ರಮ
ಆವರ್ಕೆ (೧೧-೯೫) - ಪರಿವಿಡಿಯಿಂದ
ಆಸ್ಥಾಯಿಕೆ (೯-೫) - ಆಸ್ಥಾನ, ಸಭೆ
ಆಳಿಸು (೮-೨೪ ವ) - ಬಂಧಿಸು, ಕಟ್ಟಿಹಾಕು
ಆಳುಮಿರ್ (೩-೩೦) - ಸೇವಕನಾಗು

ಇ

ಇಡುವು (೭-೭೩) - ರಾಶಿ; ಇಕ್ಕಟ್ಟು
ಇಂದೋಳ (೪-೯) - ರಾಗವಿಶೇಷ
ಇಂದ್ರಕೋಶ (೧೩-೫೭ವ) - ವೇದಿಕೆ,
ಮನೆಯ ಚಜ್ಜ
ಇಂದ್ರಚ್ಛಂದ (೮-೫೪ವ) - ಸಾವಿರದ ಎಂಟು

ಎಳೆಗಳುಳ್ಳ ಹಾರವು, ಇದನ್ನು ದೇವೇಂದ್ರ, ಚಕ್ರವರ್ತಿ ಮತ್ತು ತೀರ್ಥಂಕರರು ಧರಿಸುತ್ತಾರೆ
ಇಮ್ಮನೆ (೬-೨೦) - ಸುಮ್ಮನೆ
ಇಱಿಸಲ್ (೧೧-೭೭) - ಇಳಿಜಾರಾದ ಮನೆಯ ಹೊದಿಕೆ, ತಂಗುಮನೆ
ಇಱುಂಬು (೪-೯೨ ವ) - ಇಕ್ಕಟ್ಟಾದ ಪ್ರದೇಶ
ಇರ್ಕುಳಿಗೊಳ್ (೮-೨೫) - ಆಕರ್ಷಿಸು
ಇರ್ಕೆ (೫-೪೫) ಮನೆ, ವಾಸಸ್ಥಳ
ಇರ್ಪೋಡು (೩-೩) - ಬಾಡು
ಇಸುವೆಸ (೭-೨೧ ವ) - ಅಜ್ಞಾಕಾರ್ಯ
ಇಟಿಸು (೯-೧೫) - ಕೀಳುಮಾಡು
ಇಟ್ಟೆ(೧-೫೨) - ಲೂಟಿ

ಈ

ಈರಣ (೧೧-೬೪) - ಬೀಸುವುದು
ಈಟಿಕ್ಕೊಳ್ (೧-೮೪) - ಸೆಳೆದುಕೊಳ್ಳು

ಉ

ಉಗಿಬಗಿಮಾಡು (೯-೪)- ಭೇದಿಸು, ಛಿದ್ರಿಸು
ಉಚ್ಛಿತ್ತಿ (೧೦-೬೩ ವ) ತುಂಡರಿಸುವುದು, ನಾಶ
ಉಡುಕ (೬-೫೧) - ಕುಂದುವಿಕೆ, ಹ್ರಾಸ
ಉಡುಕು (೧೪-೧೦೩) - ಗರ್ವ
ಉಂಡಿಗೆ ಸಾಧ್ಯಂಮಾಡು (೧೫-೩ವ)- ಮುದ್ರೆಗೆ ಅಧೀನವಾಗಿ ಮಾಡು
ಉತ್ಕ (೧-೬೩) - ಬಯಸುವ
ಉತ್ಥಾಪಿತ (೪-೭೮ ವ) - ನಿಲ್ಲಿಸಿದ
ಉತ್ಸೇಧ (೧-೬೨ವ) - ಎತ್ತರ
ಉದಂತ (೩-೮೮ವ) - ವಾರ್ತೆ
ಉದ್ಘ (೧೩-೩೨) - ಶ್ರೇಷ್ಠ
ಉದ್ದಬಿದ್ದ (೬-೬೨) - ಜಲಸಾಂದ್ರ
ಉದ್ದಾನಿ (೫-೯೦) - ಹೋಲಿಕೆ, ಸಾಟಿ
ಉದ್ದೇಸ (೭-೮೫) - ಹೇತು (ತ್ಸ) ಉದ್ದೇಶ
ಉಂತೆ (೭-೯೦) - ವ್ಯರ್ಥವಾಗಿ, ಸುಮ್ಮನೆ
ಉಪಧಾನ (೫-೨೨ ವ) - ದಿಂಬು
ಉಪಪಾತತಳ್ಪ (೨-೭೨ ವ) - ಕಲ್ಪಗಳಲ್ಲಿ ದಿವಿಜರು ಹುಟ್ಟುವ ಹಾಸಿಗೆ
ಉಪಶೀರ್ಷಕ (೮-೫೪ವ) - ಮಧ್ಯದಲ್ಲಿ ಕ್ರಮವಾಗಿ ಒಂದಕ್ಕಿಂತ ಒಂದು ದೊಡ್ಡದಾಗಿರುವ ಮೂರು ಮುತ್ತುಗಳುಳ್ಳ ಹಾರ
ಉರಚೆಲ್ಲಿ (೭-೧೯) - ಕನ್ನಡಿಯಿರುವ ಎದೆಕಟ್ಟು
ಉಱುಗುಂ (೧೨-೧೦೮) - ಹಿಡಿಸುತ್ತದೆ, ಯೋಗ್ಯವಾಗುತ್ತದೆ.
ಉರ್ಚು (೬-೨೩) - ಹೊರದೆಗೆ
ಉಳ್ಕು (೧೨-೯೦) (ಕ್ರಿ) - ಬೀಳು; (ನಾ) ಉಲ್ಕೆ

ಊ

ಊಡು (೩-೩೯) - ತಿನ್ನಿಸು
ಊಳ್ (೧೧-೯೪) - ಕೂಗು
ಉಕ್ಕೆಕ್ಕೆ (೪-೩೪ವ) - ಉತ್ಸಾಹ

ಎ

ಎಗ್ಗ (೧೧-೧೩೭) - ಮೂಢ
ಎಂಜಲೆವುಟು (೩-೩೪ ವ) - ತಿಂದುಳಿದುದು
ಎಡಗಲಿಸು (೪-೮೫) - ಹಿಂದೆ ಹಾಕು
ಎಡೆಗಿಡೆ (೭-೩೭ ವ) - ತುಂಬು
ಎಡೆಯುಡುಗು (೩-೬೧) - ಸಮಯ ಕಳೆ
ಎಡೆಯುಡುಗದೆ (೫-೩೨) - ಒಂದೇ ಸಮನೆ, ಸಮಯ ತಪ್ಪಿಸದೆ.
ಎಡೆವೆತ್ತು (೨-೩೮ವ) - ಸಮಯ ಸಾಧಿಸು
ಎರೆ (೩-೪೩) - ಬೇಡು (೮-೧೫ ವ)
ಎಱಿಕ (೭-೪೫) - ಪ್ರೀತಿ
ಎಱಂಕೆ(೧೧-೬೦) - ಪಕ್ಕ, ರೆಕ್ಕೆ
ಎಱೆವಿಱಿನಾಗು (೧೧-೬೮ ವ) - ಬಾಡು, ಕಾಂತಿಹೀನವಾಗು
ಎಳೆ (೭-೧೨೧) - ಭೂಮಿ
ಎಟಿಲ್ (೯-೩೧) - ದಣಿ, ಕುಗ್ಗು, ನೇತಾಡು

ಏ

ಏಕಜ್ಜಂ (೬-೧೦೪) - ಏನು ಕೆಲಸ? ನಿಷ್ಫಲ
ಏಲಾ (೬-೧೦೧) - ಏಲಕ್ಕಿ
ಏವ (೭-೫೫) - ಮತ್ಸರ, ವ್ಯಥೆ
ಏವಯಿಸು (೪-೬೭ ವ) - ಬೇಸರಪಡು

ಒ

ಒಕ್ಕು (೬-೭೭ವ) - ರಾಶಿಮಾಡು
ಒಟ್ಟಜೆ (೪-೫೨ ವ) - ಅತಿಶಯ, ಆಧಿಕ್ಯ
ಒಡರಿಸು (೭-೯೪) - ಉಂಟುಮಾಡು

ಒಡವೇಱು (೧-೫೯) - ತುಂಬ ತುಂಬಿಕೊಳ್ಳು
ಒಡೆಗಳೆ (೫-೨೪) - ಏಕಕಾಲದಲ್ಲಿ ಮರಣ ಹೊಂದು
ಒಡ್ಡಣ (೪-೪೧ ವ) - ಸೈನ್ಯ, ಯುದ್ಧರಂಗ, ವ್ಯೂಹ
ಒಣರ್ (೨-೪೫) - ತಿಳಿ, ಭಾವಿಸು
ಒತ್ತಂಬ (೪-೫೧) - ಬಲಾತ್ಕಾರ, ಒತ್ತಾಯ
ಒತ್ತ (೯-೩೩) - (ಸಂಗೀತ) ಕಾಲ
ಒದವಿ (೧೩-೮೦) - ಕೊಡುಗೆ, ದಾನ
ಒನಲ್ (೩-೮೬) - ಸಿಟ್ಟಾಗು
ಒರ್ವಳಿ (೬-೪) - ಒಂದು ಕಡೆ
ಒವಜ (೧೧-೧೨೬) - ಗುರು (ತ್ಭ), ಉಪಾಧ್ಯಾಯ
ಒಸಗೆ (೧೧-೭) - ಉತ್ಸವ, ಆನಂದ
ಒಸೆ (೨-೧೪) - ಸಂತೋಷಿಸು; ಸಂಭ್ರಮಿಸು

ಓ

ಓಗಡಿಸದ (೪-೯೨) - ಆಲಸ್ಯದಿಂದಿರದ, ಲವಲವಿಕೆಯುಳ್ಳ
ಓಗಂಬಾಡುವ (೧೨-೫೦) - ಹೊಗಳಿ ಹಾಡುವ
ಓಘವೇಘ (೧೪-೭೧) - ಧಾರಕಾರದ ಮಳೆ
ಓವರಿ (೩-೨೧ ವ) - ಕೋಣೆ (ತ್ಭ) ಅಪವರಕ.
ಓರನ್ನವು (೧೨-೯೪) - ಒಂದೇ ಅಳತೆಯಲ್ಲಿರುವ, ಓರಣವಾದ

ಔ

ಔಪರಿಷ್ಟಕ (೪-೧೨) - ಮೇಲ್ಭಾಗ

ಕ

ಕಂಕೇಲಿ (೪-ರಗಳೆ) - ಅಶೋಕವೃಕ್ಷ
ಕಂಗು (೬-೭೨ವ) - ನವಣೆ
ಕಟಕ (೪-೪೦) - ಕಡಗ, ೨, (೧೧-೩ವ) ದಂಡು ೩, (೧೪-೧ವ) - ಬೆಟ್ಟದ ತಪ್ಪಲು
ಕಟ್ಟಿಱುಂಪೆ (೫-೧೩) - ಕಟ್ಟಿರುವೆ, ದೊಡ್ಡ ಇರುವೆ
ಕಡಂಗು (೧-೮೧) - ಆವೇಶಗೊಳ್ಳು, ಸಿಟ್ಟಾಗು
ಕಡ್ಡು (೧೪-೧೨೬) - ಮನಸ್ತಾಪ
ಕಣಿ (೯-೯೦) - ತೊಡಕು
ಕಂಡೂಯ (೧೧-೧೦) - ನವೆ, ತುರಿಕೆ
ಕಣ್ಬೊಲ (೫-೬೫) - ದೃಷ್ಟಿಪಥ, ನೋಟ
ಕದಲಿಕಾ (೪-೨೪) - (೧೧-೬೫ ವ) - ಧ್ವಜ
ಕಂದಳಿ (೧೪-೧೨೨ವ) - ಬಾವುಟ
ಕನ್ನಡಿಸು (೭-೧೦) - ಅಭಿನಯಿಸು
ಕಪಿತ್ಥ (೧೧-೨೬ವ) - ಬೆಳವಲ
ಕಮ್ಮರಿಯೋಜ (೨-೬೧) - ಕಮ್ಮಾರ
ಕಯ್ಗೆಯ್ (೧೧-೧೨೪) - ಅಲಂಕರಿಸು
ಕರಗ (೯-೧೨೬) ಕೊಡ, (೭-೨೧ ವ) ಕಲಶ
ಕರಟ (೭-೨ವ ರಗಳೆ) - ಕುಂಭಸ್ಥಳ
ಕರಟಿ (೧-೭೬) - ಆನೆ
ಕರಣ (೭-೧೨೦) - ನೃತ್ಯಭಂಗಿ
ಕರರುಹ (೧೨-೧೫) - ಉಗುರು
ಕರೆವೆರಸಿದ (೪-೩೬) - ಬಟ್ಟೆಯ ಕರೆಸಹಿತವಾದ
ಕರ್ಣಿಕಾರ (೧೧-೧೧೩) - ಕೊಸಗು, ಬೆಟ್ಟದಾವರೆ
ಕರ್ಬಾಳ (೧೧-೧೨೩) - ಬಾಳದ ಬೇರು
ಕಲಿಲ (೫-೪೧ವ) - ಬೆರೆತಿರುವ, ಕೂಡಿದ
ಕಲ್ಲುರಿಗ (೫-೧೮ವ) - ಮಿಠಾಯಿಗಾರ (?) ಇಟ್ಟಿಗೆ ಸುಡುವವನು (?)
ಕವರ್ (೨-೧೫) - ಕಳವುಮಾಡು, ಸುಲಿ, ಸೂರೆಗೊಳ್ಳು
ಕವರ್ತೆಪೋ (೩-೩೪ವ) - ಲೂಟಿಯಾಗಿ ಹೋಗು, ಕಳವಾಗಿ ಹೋಗು
ಕವ್ವರೆಗೊಳ್ (೧೧-೨೨) - ಭ್ರಮೆಗೊಳ್ಳು
ಕಸಕಳಿ (೨-೧೧) - ಪೊರಕೆ, ಕಸಬರಿಗೆ
ಕಳಮ (೬-೭೨) - ಬತ್ತ
ಕಳ್ (೫-೮೬) - ಹೆಂಡ, ಮದ್ಯ
ಕಱಲ್ (೨-೪೩) - ಬಡವಾಗು, ಸೊರಗು
ಕಱೆವೂ (೧-೬೧) - ಅರಳಿದ ಹೂ
ಕಾಕಲಿ (೧೩-೬) - ಇಂಪಾದ ಕಿರುದನಿ
ಕಾಂಡಪಟ (೧-೭೧) - ಪರದೆ
ಕಾಂಡಾಸನ (೬-೬೦ವ) - ಬಿಲ್ಲು
ಕಾಯಮಾನ (೧೧-೭೨ವ) - ಗೂಡಾರ, ಚಪ್ಪರ
ಕಾರ್ಪಾಸ (೬ - ೭೨ವ ) - ಹತ್ತಿ

ಕಾರಿವ (೧೨-೩೫) - ಕೃತ್ರಿಮವಾದ, ಕೃತಕವಾದ
ಕಾವಣ (೧೧-೭೧ವ) - ಮಂಟಪ, ಚಪ್ಪರ
ಕಾಶ್ಮೀರ (೧೧-೧೨೪) - ಕೇಸರಿಹೂ
ಕಾಶ್ಯ (೮-೭೫ವ) - ತೇಜ
ಕಿಂಕಿರಾತ (೭-೧೧೪) - ಗೋರಂಟೆ
ಕಿಂಜಲ್ಕ (೧-೫೮) - ಹೂವಿನ ಪರಾಗ, ಕುಸುರು
ಕಿತ್ತಮ್ಮ (೯-೧೦೨) - ಸಣ್ಣತನ (?)
ಕಿಂಪಾಕ (೪-೭೪) - ವಿಷವೃಕ್ಷ
ಕಿಱಿಯಂದು (೪-೨೧ವ) - ಚಿಕ್ಕಂದು, ಬಾಲ್ಯ
ಕಿಸುರ್ (೧೧-೧೨೯) - ಕಲಹ; ಹಿಂಸೆ, ಪಾಪಕಾರ್ಯ
ಕೀಱು(೧೩-೮೫) - ಘೋಷಿಸು
ಕೀಟೆಲ್ (೮-೩೪ವ) - ಮನೆಯ ಸೇವಕರಿರುವ ಸ್ಥಳ
ಕುಕ್ಕು (೬-೭೧) - ಕೊಕ್ಕರೆ
ಕುಟ್ಟಿಮ (೮-೬೭ ವ) - ನೆಲಗಟ್ಟು
ಕುಡುಪು (೯-೩೨) - ಪಿಟೀಲು ಬಾರಿಸುವ ಬಿಲ್ಲು, ವಾದನ ದಂಡ
ಕುತಪಿ (೯-೧೨) - ವಾದ್ಯಕಾರ
ಕುತ್ಕೀಲ (೧-೫೪) (೬-೩ವ) - ಪರ್ವತ
ಕುತ್ತು (೨-೪೦) - ಸೇರಿಸು; ಗುದ್ದು
ಕುನುಂಗು (೧೦-೧೪) - ಕುಗ್ಗು
ಕುಪ್ಯ (೧೨-೬೬) - ತಾಮ್ರ ಮೊದಲಾದ ಸಾಮಾನ್ಯಲೋಹ
ಕುಂಭೀರ (೧೪-೯೨) - ಮೊಸಳೆ
ಕುಮ್ಮು (೧-೮೧) - ಕುಟ್ಟು
ಕುರರ (೧-೫೭) - ಪಕ್ಷಿವಿಶೇಷ, ಕುರವಕ್ಕಿ
ಕುಱುಂಬ ೧೨-೬೮ವ) - ಎತ್ತರ ಪ್ರದೇಶ, ದಿಬ್ಬ, ಬೆಟ್ಟ
ಕುಲತ್ಥ (೬-೭೨ ವ) - ಹುರುಳಿ
ಕುಲ್ಯಾ (೮-೪೧ವ) - ಹಳ್ಳ, ಕಾಲುವೆ
ಕುಶೇಶಯ (೬-೬೬) - ಕಮಲ
ಕುಸುಂಭ (೬-೭೨ವ) - ಕುಸುಬೆ
ಕುಳುಂಪೆ (೯-೧೦೮ವ) - ನೀರು ನಿಂತಿರುವ ಗುಂಡಿ
ಕೂಪಾರ (೯-೧೨೩) - ಸಮುದ್ರ
ಕೂರ್ಚಾಲ (೪-೯೧ವ) - ಗಡ್ಡಮೀಸೆಗಳುಳ್ಳ
ಕೂರ್ಮೆ (೨-೩೭) - ಪ್ರೇಮ
ಕೇರ್ (೪-೩೧) - ಗೋಡೆ
ಕೇಸರದ್ರುಮ (೧೧-೧೨೭) - ಬಕುಳವೃಕ್ಷ, ಸುರಗಿಮರ
ಕೈಗಣ್ಮು(೧೩-೪೩) - ಮಿತಿಮೀರು, ಅತಿಕ್ರಮಿಸು
ಕೈಗೆಯ್ (೧-೭೧) - ಸಿಂಗರಿಸು
ಕೈಪಿಡಿ (೨-೭೪) - ಕನ್ನಡಿ
ಕೈಪೊಡೆ (೩-೧೫) - ಬಾಣದ ಪುಂಖ
ಕೈಶಿಕೆ (೯-೨೬) - ಗೀತ, ನೃತ್ಯ, ವಿಲಾಸಾದಿ ಶೃಂಗಾರ ಚೇಷ್ಟೆಗಳಿಂದ ಕೂಡಿ ಮೃದುವಾಗಿರುವುದು
ಕೊಕ್ಕರಿಕೆ (೯-೭೪) - ಜುಗುಪ್ಸೆ, ಬೇಸರ, ಸಂಶಯ
ಕೊಕ್ಕರಿಸು (೨-೪೩ವ) - ಜುಗುಪ್ಸೆಪಡು
ಕೊಂಚೆಯ (೪-೯೨ವ) - ಲತಾಗೃಹ
ಕೊಪ್ಪು (೫-೩೩) - ಆಭರಣ ವಿಶೇಷ, ಬುಗುಡಿ
ಕೊಸಗು (೧೧-೮೩) - ಬೆಟ್ಟದಾವರೆ
ಕೊಸೆ (೧೧-೫೫) - ಕುದುರೆಯ ಸವಾರಿಯ ಒಂದು ರೀತಿ
ಕೋದ್ರವ (೬-೭೨ವ) - ಒಂದು ಧಾನ್ಯ, ಹಾರಕ
ಕೋಳ್ (೪-೫೧) - ಹೊಡೆತ, ಪೆಟ್ಟು
ಕೋಟಿಸ್ಸಗು (೬-೫೬) - ಕೊಳ್ಳೆಗಾಗಿ ವಿಜೃಂಭಿಸು
ಕೌಂಗು (೧-೬೭) - ಅಡಕೆ
ಕ್ರಮುಕ (೧೩-೩ವ) - ಅಡಕೆ
ಕ್ಷುತ (೫-೬೯ವ) - ಶೀನು
ಕ್ಷೋದ (೧೨-೧೩೫ವ) - ಹುಡಿ
ಕ್ಷೌಮಾಂಬರ (೮-೫೫ವ) - ರೇಶ್ಮೆಯ ಬಟ್ಟೆ, ನಾರಿನ ಬಟ್ಟೆ

ಖ

ಖಡ್ಗಧೇನುಕ (೧೩-೪೫ವ) - ಚೂರಿ, ಕಿರುಗತ್ತಿ

ಗ

ಗಗ್ಗರಿಕೆ (೧೨-೨೫) - ಧ್ವನಿವಿಕಾರ
ಗಸಣೆ (೧-೪೬) - ತಿಕ್ಕಾಟ
ಗಾಣ (೧೩-೫) - ಗಾಯಕ
ಗಾವರಿಸು (೨-೫) - ಧ್ವನಿಮಾಡು, ಝೇಂಕರಿಸು
ಗಾಳಿಸು (೬-೨೪ವ) - ಉದುರಿಸು

ಗುಚ್ಛ (೮-೫೪ವ) - ಮೂವತ್ತೆರಡು ಎಳೆಗಳುಳ್ಳ ಹಾರ
ಗುಂಡು (೪-೩) - ಗುಂಪು, ಸಮೂಹ
ಗುಣ್ಪು (೧-೫೫) - ಆಳ
ಗೆಡೆಗೊಳ್ (೪-೪) - ಸಹಕರಿಸು
ಗೊಜ್ಜೆ (೧೧-೧೨೬) - ಶ್ರೇಷ್ಠ; ಕುಲೀನ
ಗೊಜ್ಜಗೆ (೧೧-೧೦೫) - ಸೇವಂತಿಗೆ
ಗೊಲೆ (೧-೬೭) - ಗೊನೆ
ಗೊಲೆಗೊಂಡ (೧೨-೨೦) - ಗೊನೆಬಿಟ್ಟ
ಗೋತ್ರಸ್ಖಲನೆ (೪-೯) - ಹೆಸರನ್ನು ತಪ್ಪಾಗಿ ಹೇಳುವುದು
ಗೋಧ (೧೪-೯೩ ವ) - ಉಡು
ಗೋರಿ (೧೪-೮೦) - ಬೇಟೆಗಾರನ ಹಾಡು
ಗೋಲಾಂಗೂಲ (೫-೨ವ) - ಕೋಡುಗ, ವಾನರ
ಗೋಶೀರ್ಷ (೭-೧೦೧ವ) - ಒಂದು ಬಗೆಯ ಶ್ರೀಗಂಧ
ಗೋಸನೆವಿಡಿಸು (೧೦-೭ವ) - ಡಂಗುರ ಹೊಯ್ಯಿಸು
ಗ್ರಾಮಕೂಟ (೩-೩೮ವ) - ಗವುಡ, ಗ್ರಾಮದ ಮುಖ್ಯಸ್ಥ

ಘ

ಘನ (೫-೩೫) - ತಾಳ
ಘನಾಘನ (೪-೬೫) - ಮೋಡ

ಚ

ಚಕ್ರಾಪ್ಪ (೩-೬೮) - ಚಕ್ರವಾಕ
ಚಚ್ಚಾ (೧೨-೧೧೧) - ಪುಂಗಿ
ಚಣಕ (೬-೭೨ವ) - ಕಡಲೆ
ಚಂದ್ರಕಿ (೧೧-೧೦) - ನವಿಲು
ಚಪೇಟ (೫-೧೬) - ಅಂಗೈ
ಚಪ್ಪರಿಸು (೪-೮೨) - ಗದರಿಸು, ಪ್ರತಿಭಟಿಸು
ಚರಮದೇಹ (೮-೪೫) - ಕೊನೆಯ ಜನ್ಮ ಧಾರಿಯ ದೇಹ
ಚರಿಗೆ (೯-೧೨೯) - ಜಿನಮುನಿಗಳು ಆಹಾರಕ್ಕೆಂದು ಅಲೆಯುವುದು (ತ್ಸ) ಚರ್ಯಾ
ಚಲ್ಲಿ (೯-೩೯) - ಚಲನೆ (?)
ಚಾದಗೆ (೯-೧೦೯) - ಚಾತಕಪಕ್ಷಿ
ಚಾರಿ (೯-೩೯) - ನೃತ್ಯದಲ್ಲಿ ಹೆಜ್ಜೆ ಹಾಕುತ್ತ ಮುಂದೆ ಸಾಗುವಿಕೆ
ಚಿತ್ರಾವಳಿ (೫-೩೪) - ವಸ್ತ್ರವಿಶೇಷ
ಚೂಚುಕ (೭-೩೧) - ಸ್ತನದ ತುದಿ
ಚೂಲಿಕೆ (೧೨-೫೬ವ) - ಹಸ್ತಿಕರ್ಣದ ಮೂಲ
ಚೌತ (೧೧-೧೧೫) (?)

ಜ

ಜಗುಲ್ (೩-೮೯) - ಜಾರು
ಜಟಮಟಿಕ (೩-೪೫) - ವಂಚಕ, ಮೋಸಗಾರ
ಜಂಘಾಳ (೪-೯೧) - ತೀವ್ರಗತಿಯುವ, ಓಡುವುದಕ್ಕೆ ಬಲವಾದ ಕಾಲುಗಳುಳ್ಳವನು
ಜಟಿಳಿತ (೬-೧೮) - ಜಡೆಯಂತೆ ಒಂದನ್ನೊಂದು ಅಂಟಿಕೊಂಡ
ಜಡಿ (೧೪-೩೬) - ಗದರಿಸು
ಜತಿ (೯-೩೧) ಮೇಳ; ಜತಿಸ್ವರ
ಜತ್ತವಟ್ಟ (೭-೧೨೫) - ಒಂದು ಆಟದ ಯಂತ್ರ
ಜಪಾಪ್ರಸವ (೧೬-೩) - ದಾಸವಾಳದ ಹೂವು
ಜಜುಚು (೧೩-೮೫)- ವ್ಯರ್ಥಾಲಾಪ, ಬಡಬಡಿಕೆ
ಜಲಕನೆ (೮-೧೫) - ಕೂಡಲೆ (ಗ್ರಾ. ಜಟಕ್ಕನೆ, ಜಟ್ಟನೆ)
ಜಲಕ್ಕನೆ (೭-೨) - ಶುದ್ಧವಾಗಿ; ಕೂಡಲೆ; ತಟ್ಟನೆ
ಜಲ್ಲಿಳಿ (೧೩-೬೫) - ಜಲ್ಲರಿ, ವಂದರಿ
ಜವನಿಕೆ (೯-೨೦) - ಪರದೆ
ಜಳದೆ (೨-೧೪) - ಬಾಳದ ಬೇರಿನ ಬೀಸಣಿಕೆ
ಜಾಗ (೪-೩೧) - ಮರಕತ, ಹಸುರುರತ್ನ
ಜಾಗಂಬೊಯ್ (೪-೩೧) - ಅಂಕುರಾರ್ಪಣ ಮಾಡು
ಜಾಂಗಲ (೫-೮೭ ವ) - ಮಾಂಸ
ಜಾಂಗಲ (೮-೬೩ವ) - ಬಂಜರುನೆಲ
ಜಾತರೂಪಧರ (೪-೬೭ವ) - ದಿಗಂಬರ
ಜಾದಿ (೧೧-೮೭) - ಜಾತಿ, ಜಾಜಿ
ಜಾನುದಘ್ನ (೮-೪೧ವ) (೧೪-೫೨ವ) - ಮೊಳಕಾಲುದ್ದ
ಜಾಯಿಲ (೧೧-೩೧) - ಕುದುರೆ (ತ್ಸ) ಯಾಯಿನ್

ಜಗಿಲ್ತಂತೆ (೩-೫) - ಅಂಟಿಕೊಂಡಂತೆ
ಜಿನುಂಗು (೧೧-೬೦) - ಝೇಂಕರಿಸು
ಜೀರಕ (೬-೭೨ವ) - ಜೀರಿಗೆ
ಜುಂಬುಕ (೮-೧೫ವ) - ಕುಚ್ಚು, ಗೊಂಡೆಯ, ಲಂಬಣ
ಜೋಗ (೫-೩೪) - ವಸ್ತ್ರವಿಶೇಷ
ಜೋಂಪ (೧೩-೮೬) - ಮರಗಳ ಗುಂಪು, ನೆರಳು
ಜ್ಯೋತಿರಿಂಗಣಂ (೮-೧೦) - ಮಿಂಚುಹುಳ

### ಝ

ಝುಲ್ಲರಿ (೧-೪೭) - ಡಮರು

### ಟ

ಟಂಕ (೧೪-೫೯ವ, ೧೦೩ವ) - ಕಲ್ಲನ್ನು ಒಡೆಯುವ ಉಳಿ

### ಡ

ಡವಕೆ (೩-೨೩ವ) - ಪೀಕದಾನಿ

### ತ

ತಗವು (೭-೮೨) - ಯೋಗವಲ್ಲ
ತಗುಳ್ (೨-೩೨ವ) - ಆರಂಭಿಸು (೧೦-೬೩ವ) ಹಿಂದಿಡು, ತಡೆ
ತಗುಳ್ಚು (೭-೧೦೬ವ) - ತೊಡಿಸು
ತಗುಳ್ಪು (೬-೨೨) - ಸಂಗತಿ, ಸಂಬಂಧ
ತಡವರು (೯-೩೨) - ತಡಬಡಿಸು
ತಣ್ಮಲೆ (೨-೫೭) - ವ್ಯಾಪಿಸು, ದಟ್ಟವಾಗು
ತತ (೫-೩೫) - ವೀಣೆ ಮೊದಲಾದ ತಂತೀ ವಾದ್ಯ
ತಂದಲ್ (೧೩-೫೯) - ಜಲಕಣ
ತಮಸ್ತಮ (೩-೭೫) - ಅಜ್ಞಾನವೆಂಬ ಕತ್ತಲು
ತರಳತರಬಂಧ (೮-೫೪ವ) - ಎಲ್ಲ ಕಡೆಯಲ್ಲಿ ಸಮಾನವಾದ ಮುತ್ತುಗಳುಳ್ಳ ಹಾರ
ತುಱುಂಬು (೧೪-೩ ವ) - ನಿಲ್ಲಿಸು, ತಡೆ
ತವು (೫-೪) - ಕಳೆದುಹೋಗು, ನಾಶವಾಗು, ನಿಲ್ಲು
ತಳರ್ (೪-೭೬) - ಹೆದರು, ನಡುಗು (೭-೬೩) - ಹೊರಡು, ಚಲಿಸು
ತಳರ್ನಡೆ (೮-೨) - ತಪ್ಪುಹೆಜ್ಜೆಯ ನಡಿಗೆ
ತಳ್ಪೊಯ್ (೭-೧೦) - ಒತ್ತಾಗಿ ಸೇರು
ತಳ್ಳಂಕ (೧೦-೧೭) - ತಳಮಳ, ಭೀತಿ
ತಱಿ (೧೧-೩೯) - ಛತ್ರಿ, ಕೊಡೆ
ತಾಟಿಸು (೫-೧೭) - ಅಪ್ಪಳಿಸು
ತಾಱಿಲಾಗು (೯-೮೯) - ಒಣಗು
ತಿರೀಟ (೭-೩೯) - ಕಿರೀಟ
ತಿಱಿ(೧೧-೧೦೦) - ಕೂಯ್
ತೀಟ (೭-೪೭) - ಸ್ಪರ್ಶ
ತುಱುಗಲ್ (೧-೬೭) - ಗೊಂಚಲು, (೭-೧೧೯, ೧೧-೩೯) - ಸಮೂಹ, ಗುಂಪು, ರಾಶಿ
ತುಱುಂಬು (೧೧-೧೦೭) (೭-೧೧೪) - ಧರಿಸು, ಸೂಡು
ತುಲಾಕೋಟಿ (೧೧-೨೦ ವ) - ಕಾಲಂದುಗೆ
ತೂಳ್ (೧-೬೨) - ತೂರು, ಹಾರಿಸು, ಓಡಿಸು
ತೆಗಟ್ (೧-೨೧) - ನಿಂದೆ
ತೆಮಳ್ (೫-೪೧ ವ) - ತಳ್ಳಿಹೋಗು, ತೆವಳು
ತೆಮಳ್ದಿಕೊಂಡು (೨-೩೯ ವ) - ಕೂಡಿ ಹಾಕಿಕೊಂಡು
ತೆಱಪು (೪-೭೬) - ಸಮಯ
ತೆಲ್ಲಂಟಿ (೧೨-೪೩) - ಕಾಣಿಕೆ, ಬಹುಮಾನ
ತೊವಱ್ (೧೨-೫೦) - ಸುವಾಸನೆಯ ಮಣ್ಣು
ತೋಡು (೧೨-೯) - ಸಮ, ಸದೃಶ
ತ್ರಪು (೧೩-೪೫ ವ) - ತವರ

### ದ

ದಗುಂತಿ (೨-೭೫) (೫-೬೩) - ಅತಿಶಯ
ದಡ್ಡಸ (೩-೬೦) - ಡೊಂಬರವನ ಡೋಲು
ದಂದುಗ (೧-೫) - ವ್ಯಥೆ, ಶ್ರಮ
(೭-೨೨) - ವ್ಯವಹಾರ
(೪-೨೭) - ಗೊಡವೆ, ರಗಳೆ
ದಶನವಸನ (೧೧-೧೧೦ ವ) - ತುಟಿ
ದಳಿಂಬ (೪-೪೭ ವ) - ಹಾಸುಬಟ್ಟೆ, ಮೆತ್ತೆ
ದಳಿವಿಡಿ (೪-೪೨) - ಸಾಣೆಹಿಡಿ; ಮೆರಗು ಕೊಡು
ದಳ್ಳಿಸು (೧೧-೮೦) - ವ್ಯಾಪಿಸು, ಗರ್ವದಿಂದ ಮೆರೆ

ದಾಂಗುಡಿ (೨-೨೪) - ಉದ್ದವಾಗಿ ಬೆಳೆದ ಚಿಗುರು
ದಾರಕ (೮-೧) - ಬಾಲಕ, ಕುಮಾರ
ದಾಸೇರಕ (೮-೪೧ ವ) - ದಾಸಿಯ ಮಗ
ದೀವದ (೪-೫೪) - ಸಾಕಿ ಪಳಗಿಸಿದ
ದೀಹ (೩-೮೬ ವ) ೪-೪೫ - ಬೇಟೆ ಹಿಡಿಯಲು ಬಳಸುವ ಸಾಕಿದ ಮೃಗ; ಸಾಕಿ ಪಳಗಿಸಿದ
ದೃಷ್ಟಿವಿಭವ (೫-೫೩) - ಸಮ್ಯಗ್‌ಜ್ಞಾನದ ವೈಭವ
ದೇವಚ್ಛಂದ (೮-೫೪ ವ) - ಎಂಬತ್ತೊಂದು ಮುತ್ತಿನ ಯಷ್ಟಿಗಳುಳ್ಳ ಹಾರ,
ದೇವಾಂಗ (೫-೩೪) - ವಸ್ತ್ರವಿಶೇಷ
ದೇಸೆ (೪-ರಗಳೆ) - ಸೊಗಸು
ದೋಹಳ (೮-೩೩ ವ) - ಬಯಕೆ

## ನ

ನಕ್ಕು (೯-೫೭) - ನೆಕ್ಕು
ನಕ್ಷತ್ರಮಾಲಾ (೮-೫೪ ವ) - ಇಪ್ಪತ್ತೇಳು ಎಳೆಗುಳುಳ್ಳ ಮುತ್ತಿನ ಹಾರ
ನಟ್ಟುವ (೪-೧೫) - ನಟಿ, ಸೂತ್ರಧಾರ
ನಮೆ (೫-೧೩) - ಬಡವಾಗು, ನವೆ
ನಾಣ್ (೪-೧೫) - ನಾಚಿಕೆ
ನಾರಾಚ (೧೪-೯೦ ವ) - ಬಾಣ
ನಾಳಿಕಾ (೬-೪೮ ವ) - ಗಳಿಗೆ
ನಾಟ್ಟಿ ರ್ತನ (೪-೪೪) - ದೇಶದ ಗುಣಧರ್ಮ
ನಿಕೇತನ (೧೧-೧೦೪) - ಮನೆ
ನಿಗುಂಬಿಸು (೪-೩) - ಗುಂಪುಗೂಡು
ನಿಗೋದ (೫-೭೬) - ನರಕ
ನಿಧುವನ (೪-೫೨ ವ) - ಸ್ತ್ರೀಸಂಯೋಗ
ನಿಪ್ಪುಟಂ (೮-೬೨) - ಸಂಪೂರ್ಣವಾಗಿ
ನಿಮಿರಲ್ (೧೨-೫೨) - ಪಸರಿಸಲು
ನಿಮಿರ್ಚು (೮-೩೦) (೪-೨೨ ವ) - ವಿಸ್ತರಿಸು
ನಿಜೆ (೯-೨೪) - ನೆರಿಗೆ (೬-೯೮)
ನಿಜೆ (೭-೫೨) - ಚಾಚು, ಅಲ್ಲಾಡು
ನಿಜೆಗ (೬-೯೮) - ಇಮ್ಮಾವು
ನಿಜೆಸು (೫-೧೧) - ನಿಲ್ಲಿಸು (೮-೭೪ ವ);
ನಿಯಮಿಸು, ಸ್ಥಾಪಿಸು (೮, ೭೩ವ) - ವಿಧಿಸು
ನಿಷ್ಪಾವ (೬-೭೨ ವ) - ಅವರೆ
ನೀಡಿಲ್ಲದೆ (೨-೧೪ ವ) - ತಡಮಾಡದೆ
ನೀರಂಜಿಸು (೪-೪೨) - ಅತಿಶೋಭೆಗೊಳಿಸು
ನೀಜಿ (೧೧-೯೬) - ಸುಂದರ, ಚೆಲುವ
ನೀರ್ವರಿ (೧೨-೭೫) - ಕಾಲುವೆ, ಪ್ರವಾಹ
ನೀವಾರ (೬-೭೨ ವ) - ಕಾಡುಬತ್ತ
ನೀಹಾರ (೧೦-೧೯) - ಹಿಮ, ಮಂಜು, ಬರ್ಫ
ನುಗುಳ್ (೪-೨೫ ವ) - ಪ್ರವೇಶಿಸು
ನುಣ್ಚರಲ್ (೧೧-೧೧೨) - ನುಣುಪಾದ ಸರಳು, (ಬಾಣ)
ನುನ್ನಂ (೭-೧೦) - ಅತಿಶಯವಾಗಿ
ನೆಗಪು (೪-೫೬) - ಸುರಿಸು
ನೆಗಟ್ (೬-೧೨) - ಆಚರಿಸು
ನೆರಪು (೪-೨೬) - ನೆರವೇರಿಸು, ಮದುವೆ ಮಾಡು
ನೆಜಿ (೧೧-೮೯) - ಮರ್ಮ, ಆಯ, ಪರಿಣತಿ
ನೆಜೆ (೬-೨೩) (೧೧-೩೪) - ಸಾಕಾಗು, ಸಾಲು, ಪೂರ್ಣವಾಗು, ಯೋಗ್ಯವಾಗು
ನೆಜೆಗೊಳ್ (೪-೯) - ಸೂರೆಗೊಳ್ಳು
ನೆರ್ಮ (೫-೭೮) - ಆಶ್ರಯ
ನೆಲೆ (೧-೫೨) - ಎತ್ತರ, ಉತ್ಸೇಧ
ನೆಲೆವೆರ್ಚಿಸು (೧೨-೧೧ ವ) - ಹೆಚ್ಚಿಸು, ಅತಿಶಯಗೊಳಿಸು
ನೆಲೆವೊಟ್ಟು (೪-೪೧ವ) - ಎತ್ತರವಾದ ರಾಶಿ
ನೇತ್ರ (೫-೨೨ ವ) - ರೇಶ್ಮೆಬಟ್ಟೆ; ಕಣ್ಣು
ನೇಜು (೩-೪೫ ವ) - ಬಿಚ್ಚು, ಪಸರಿಸು, ತೂಗುಹಾಕು (ನೆಲ್)
ನೇರ್ಪಡು (೬-೯) - ಹೊಂದಿಕೆಯಾಗು

## ಪ

ಪಕ್ಕುಮಾಡು (೭-೪೯ ವ) - ಬದಿಗೆ ತರು
ಪಚ್ಚುಗೊಡು (೯-೭೨ ವ) - ಹಂಚಿಕೊಡು
ಪಟಲಿಕೆ (೯-೭೯) - ಹರಿವಾಣ
ಪಟವಾಸ (೧೧-೧೫) - ಬುಕ್ಕಿಟ್ಟು (೭-೩೮)
ಪಟ್ಟೆಗೆ (೧೨-೧೨) - ರೇಶ್ಮೆವಸ್ತ್ರ

ಪಡಲ್ವಡಿಸು (೯-೬೧) - ಚೆಲ್ಲಾಪಿಲ್ಲಿಯಾಗಿ ಕೆಡಹು

ಪಡಿ (೨-೬೩) - ಬಾಗಿಲು

ಪಡಿಸಣ (೭-೨೧ ವ) - ಗಮನ, ಲಕ್ಷ್ಯ, ವಿಚಾರಣೆ

ಪಡೆಪು (೫-೬) - ಲಾಭ, ಪ್ರಾಪ್ತಿ

ಪಣೆ (೧೧-೯೫) - ಗಿಡದ ಬುಡದಲ್ಲಿ ಚಿಗುರುವ ಸ್ಥಳ

ಪತ್ತುಗೆ (೬-೨) - ದೊರೆಯುವಿಕೆ, ಲಾಭ

ಪತ್ತಿದ (೮-೬೧) - ಕೂಡಿದ

ಪತ್ತುವಿಡು (೫-೭೦ ವ) - ಕಳೆದುಕೊಳ್ಳು

ಪದನು (೧-೫೧) - ಸರಿಯಾಗಿ, ಹದವಾಗಿ

ಪದ (೧೧-೪) - ಸಮಯ

ಪದಪು (೬-೭) - ಭಕ್ತಿ

ಪದಬಡು (೧೪-೪೩) - ಅನುಕೂಲವಾಗು

ಪದೆ (೭-೪) - ಪ್ರೀತಿಸು, ಬಯಸು

ಪರಪುಷ್ಟ (೫-೨೯) - ಕೋಗಿಲೆ

ಪರಭಾಗ (೬-೫೧ವ) - ಹೆಚ್ಚಾದ ಕಾಂತಿ; ಶೋಭಾತಿಶಯ

ಪರಾಸು (೫-೪೧ ವ) - ನಿರ್ಜೀವ

ಪರಿಚು (೨-೬೦) - ರೂಪ, ಆಕೃತಿ

ಪರಿಣತ (೧೧-೨೬ ವ) - ಹಣ್ಣಾದ, ಪಕ್ವ

ಪರಿವೆಸ (೩-೨) - ಸೇವೆ, ನಾನಾ ತರದ ಸೇವೆ

ಪರೆಪು (೫-೨೩) - ವಿಸ್ತಾರ

ಪರೇತವನ (೩-೩೪ ವ) - ಶ್ಮಶಾನ, ಮಸಣ

ಪರೆ (೭-೧೦೪) - ಮೃದಂಗ ಮುಂತಾದ ವಾದ್ಯ

ಪಲಾಲ (೧೪-೩೩) - ಜೊಳ್ಳು, ಬೂಸ

ಪವಣ (೨-೪೩) - ಆಧಾರ (ತ್ಸ) ಪ್ರಮಾಣ

ಪಸದನಂಗೊಳಿಸು (೪-೧೧ ವ) - ಅಲಂಕರಿಸು, (ತ್ಸ) ಪ್ರಸಾಧನ

ಪಸಲೆ - (೮-೧೫ ವ) - ಎಳೆಹಲ್ಲು

ಪಸವಟ್ಟಂತೆ (೧೧-೯೯) - ಬರಗೆಟ್ಟ ಹಾಗೆ, ಕ್ಷಾಮಪೀಡಿತರಂತೆ

ಪಸವು (೭-೭೦) - ಬಯಕೆ, ಆಸೆ

ಪಸುಗೆ (೯-೨೭) - ಭಾಗ, ಪಾಲು

ಪಸೆ (೮-೧೬) - ಹಸೆ, ಜಗಲಿ

ಪಳಚ್ಚನೆ (೬-೩೭) - ಅಕಸ್ಮಾತ್ತಾಗಿ

ಪಳಂಚು (೨-೫) - ಅಪ್ಪಳಿಸು, ಹೊರಸೂಸು

ಪಳ್ಳಿವಳ್ಳಿ-ಪಳವಳಿ-ಪೞುವೞಿ (೧೨-೨೮ ವ) - ಅರಣ್ಯಪ್ರದೇಶ

ಪೞಿ (೫-೩೪) ವಸ್ತ್ರವಿಶೇಷ

ಪೞಿಕೆಯ್ದು (೪-೮೭, ೧೨-೨೮ ವ) - ನಿಂದಿಸಿ, ತಿರಸ್ಕರಿಸಿ

ಪೞುವೞಿ = ವ್ಯಸನ

ಪಾಂಗು (೮-೧೫ ವ) (೮-೪೪) - ಹೊಂದಿಕೆ, ರೀತಿ

ಪಾಟಿಸು (೯-೩೮) - ಕಲಿಸು

ಪಾಠೀನ (೧೪-೯೭) - ಮೀನು

ಪಾದಾತ (೧೧-೩೩) - ಕಾಲಾಳು

ಪಾರ್ಷ್ಣಿಗ್ರಾಹಕ (೪-೮೨ ವ) - ಹಿಂದೆ ಬರುವ ವೈರಿ

ಪಾಳ್‌ಪಕ್ಕೆ (೪-೨೧) - ಹಾಳುಮನೆ

ಪಿಂಜರಿತ (೭-೧೧೪) - ಹಳದಿ ಕೆಂಪಾದ

ಪಿಹಿತ (೧೨-೬೧) - ಮುಚ್ಚಿದ

ಪುಗಿಲ್ (೯-೨೫) - ಪ್ರವೇಶ

ಪುರುಳಿ (೬-೯೨) - ಹೆಣ್ಣುಗಿಳಿ

ಪುಷ್ಕರ (೯-೯೭) - ಆನೆಯ ಸೊಂಡಿಲಿನ ತುದಿ

ಪೂಗ (೪-೨೮) - ಅಡಕೆ

ಪೂದುಡುಗೆ (೧೧-೧೨೪ ವ) - ಹೂವಿನ ಆಭರಣ

ಪೂಸು (೭-೧೦೬ ವ) - ತೊಡೆ, ಲೇಪಿಸು

ಪೃತನಾ (೧೪-೮೭) - ಸೈನ್ಯ

ಪೃಷತ್ಕ (೬-೬೧ ವ) - ಬಾಣ

ಪೆಂಡವಾಸ (೧೧-೪೫) - ಅಂತಃಪುರ

ಪೆಳಱು (೬-೮೨) - ಭಯಪಡು

ಪೊಗಡ (೧೧-೧೦೨) - ವೃಕ್ಷವಿಶೇಷ

ಪೊಗಸು (೩-೬೩) - ಬೆಳಗು, ಮುಂಜಾನೆ

ಪೊಂಕ (೧೧-೧೧೮) - ಬಿಂಕ, ಉಬ್ಬು

ಪೊಂಗು (೮-೪೬) - ಉಬ್ಬು

ಪೊಡರ್ (೨-೨೪) - ಪ್ರಕಾಶಿಸು, ಸಾಮರ್ಥ್ಯ ತೋರಿಸು

ಪೊಡರ್ಪು (೭-೫) - ಹೊಳಪು, ಕಾಂತಿ

ಪೊದಟಿಚ್ (೮-೩೧) - ವಿಸ್ತಾರವಾಗು, ಹೊರ
ಹೊಮ್ಮು ವ್ಯಾಪಿಸು
ಪೊದಟ್ಕೆವಡೆ (೩-೯ ವ) - ಹೊರಹೊಮ್ಮು
ಪೊಲ್ಲಮೆ (೧೫-೩೬) - ಅಯೋಗ್ಯವಾದುದು
ಪೋತ (೯-೫೮) - ದೋಣಿ, ನಾವೆ
ಪ್ರಕಾಂಡಕ (೮-೫೪ ವ) - ಮಧ್ಯದಲ್ಲಿ ಕ್ರಮವಾಗಿ
ದೊಡ್ಡ ದೊಡ್ಡ ಐದು ಮುತ್ತುಗಳಿರುವ ಹಾರ
ಪ್ರತಿಪತ್ತಿ (೪-೮೯ ವ) (೮-೭೪ ವ)-ಮರ್ಯಾದೆ
ಪ್ರತೋಲಿ (೧೧-೨೩ ವ) - ರಾಜಮಾರ್ಗ
ಪ್ರತ್ಯವಾಯ (೧೩-೫೮ ವ) - ಕೇಡು; ಪಾಪ
ಪ್ರಸೂನ (೮-೩ ವ) - ಹೂವು
ಪ್ರಾತಿಹಾರ್ಯ (೧೨-೫೩) - ಮಹಿಮೆ
ಪ್ರಿಯಂಗು (೧೩-೪೫ ವ) - ಒಂದು ಧಾನ್ಯ
ಪ್ರೇಂಖಿತ್ (೧೪-೯೨) - ತೂಗುತ್ತಿರುವ
ಪ್ರೇಂಖೋಲಿತ (೧೨-೬೦ ವ) - ತೂಗುತ್ತಿದ್ದ
ಪ್ಲೋಷ (೫-೮೭ ವ) - ಸುಡುವ ಬಿಸಿ

ಬ

ಬಗೆದರ್ಪುದು (೮-೧೧) - ಗಮನ ಕೊಡಬೇಕು
ಬಗ್ಗಿಸು (೭-೧೫) - ಗದರಿಸು
ಬಜ್ಜರಿಗಟ್ಟಿ (೪-೫೪ ವ) - ಹೇಸರಗತ್ತೆ
ಬಟ್ಟಿಗೆವಲಗೆ (೪-೬೩ ವ) - ಪಾಟಿ (Slate)
(ತ್ಸ) ಮೃತ್ತಿಕಾಫಲಕ
ಬಡಿ (೫-೨೦) - ಬಡಿಗೆ, ದೊಣ್ಣೆ
ಬಣ್ಣವಣ್ಣಿಗೆ (೧೧-೧೨೬) - ಬಣ್ಣಬಣ್ಣ
ವಾಗಿರುವುದು
ಬಣ್ಣಸರ (೯-೩೧) - ಬಣ್ಣದ ಮಣಿಗಳ ಸರ
ಬತ್ತಲೆಗ (೨-೯) - ದಿಗಂಬರ ಮುನಿ
ಬದ್ದವಣ (೭-೭೩) - ಮಂಗಳವಾದ್ಯ (ತ್ಸ)
ವರ್ಧಮಾನ
ಬಂಧೂಕ (೧೬-೩) - ಕೆಂಪುದಾಸಿವಾಳದ
ಹೂವು
ಬಯ್ಕೆ (೩-೩೩) - ಗುಟ್ಟು, ಬಚ್ಚಿಟ್ಟ ವಸ್ತು
(೧೪-೪೩) ನಿಧಿ, ರತ್ನ
ಬರಗಲೆ (೭-೬೯) - ಆಭರಣ ವಿಶೇಷ
ಬರ್ದು (೨-೬೫ವ) - ಪ್ರೌಢಿ
ಬವರಿಸು (೧೧-೧೪೧) - ಸುತ್ತುಗಟ್ಟು

ಬಳ್ಳವಳ್ಳಿ (೨-೫೦) - ಅತಿಶಯ, ಆಧಿಕ್ಯ
ಬಳ್ವಳ (೭-೧೧೮) - ಬಳಬಳ,
ಒಂದೇಸಮನೆ, ಹೆಚ್ಚಾಗಿ
ಬಳ್ವಳಿಕೆ (೧೨-೩೮) - ಬಳುಕುವಿಕೆ
ಬಳ್ಳವಳ್ಳಿ (೨-೫೦) - ಹಬ್ಬುಗೆ
ಬಳಿ (೩-೪೬ವ) - ದೂತ
ಬಾಣಧಿ (೧೨-೮೮ ವ) - ಬತ್ತಳಿಕೆ
ಬಾದುಗೆಯ್ (೩-೭೫ ವ) - ವಾದಮಾಡು
ಬಾಯಟಿ (೩-೧೬) ಬಾಯಿ ಸೋತುಹೋಗು,
(೩-೫೩) - ದುಃಖಿಸು
ಬಾಯಿನ (೧೧-೧೧೩) - ಬಾಗಿನ
ಬಾಯ್ಕೇಳಿಸು (೬-೨೪ ವ) - ಆಜ್ಞಾಧೀನ
ಮಾಡು
ಬಾರಿಸು (೯-೭೬) - ತಡೆ, ನಿಲ್ಲಿಸು
ಬಾಸಿಗ (೩-೩) - ದಂಡೆ, ಮಾಲೆ
ಬಾಸೆ (೭-೩೧) - ಹೊಟ್ಟೆಯ ಮೇಲಿನ ಕೂದಲು
ಬಾಟ್ (೨-೭೪) - ಖಡ್ಗ
ಬಾಟೆವಾಟೆ (೫-೮೫ ವ) - ಬದುಕಿರುವಾಗಲೆ
ಬಿಚ್ಚತಂ (೨-೯) - ವಿಸ್ತಾರವಾಗಿ
ಬಿಚ್ಚಳಿಸು (೯-೯೪) - ಧ್ವನಿಮಾಡು, ಕೂಗು
ಬಿಜ್ಜೆ (೯-೭೫) - ವಿದ್ಯೆ, ಮಾಯೆ
ಬಿಡೆ (೩-೭೫) - ಅತಿಶಯವಾಗಿ
ಬಿನ್ನನೆ (೭-೧೦೮) - ಸುಮ್ಮನೆ
ಬಿಯ (೧೨-೧೭) - ವೆಚ್ಚ (ತ್ಸ) ವ್ಯಯ
ಬಿಸವಂದ (೪-೫) (೧೨-೨೯) - ಆಶ್ಚರ್ಯ
ಬಿಸುಗೆ (೧೪-೯೦ ವ) - ಅಂಬಾರಿ
ಬೀಟ್ಗುಂಡು (೧೨-೮೫ ವ) - ಹಡಗಿನ ಲಂಗರು
ಬೆಟ್ಟು (೫-೮೫ ವ) - ಚುಚ್ಚು, ಇರಿ
ಬೆಸನ (೧-೬೯) (೩-೪೪) - ಅಪ್ಪಣೆ
ಬೆಳ್ಪನವೋಗು (೩-೩ ವ) - ಹೆದರು, ಅಂಜು
ಬೆಳ್ಕುಜು (೬-೪೯) - ಭಯಪಡು
(ಬೆಳ್ಕುತ್ತು-ಭಯೋ)
ಬೆಳ್ತನ (೯-೪೯) - ಮೂಢತನ
ಬೆಳ್ಳಕ್ಕರಿಗ (೧-೨೪) - ಮೂರ್ಖಪಂಡಿತ
ಬೆಳ್ಳಂಗೆಡೆ (೧-೮೨) - ಪ್ರವಾಹವಾಗಿ ಹರಿ
ಬೆಳ್ವಾಸ (೬-೩೩) - ನೀರಿನಲ್ಲಿ ನಿಂತು ತಪಸ್ಸು
ಮಾಡುವುದು

ಬೇಟ (೧೨-೨೩) - ಪ್ರೀತಿ, ಆಸೆ
ಬೇವಸ (೩-೩೩) - ಆಯಾಸ, ವ್ಯಥೆ
ಬೈತುಗ (೧೧-೧೨೪) - ಪಿತ್ತರೋಗ
ಬೈತ್ರ (೧೨-೮೩ವ) - ಹಡುಗು (ತ್ಸ) ವಹಿತ್ರ
ಬೊಜಂಗ (೧೨-೧೭) - ವಿಟ
ಬೊಂದರಿಗೆ (೧೧-೮೬) - ಹಾಸಿಗೆ

ಭ

ಭದ್ರಮನ (೧೧-೧೯) - ಲಕ್ಷಣಾನ್ವಿತವಾದ ಒಂದು ಜಾತಿಯ ಆನೆ
ಭವ್ಯ (೧-೮೦ ವ) - ಮೋಕ್ಷಗಾಮಿ
ಭಾಗಿನೇಯ (೫-೨೧ವ) - ಅಕ್ಕನ ಅಥವಾ ತಂಗಿಯ ಮಗ, ಸೋದರಳಿಯ
ಭಾರತಿ (೯-೨೬) - ನಟರು ಆಡುವ ಮಾತಿನ ವೈಚಿತ್ರ್ಯ ವಿಶೇಷ (ಭಾರತೀ ಸಂಸ್ಕೃತಿ ಪ್ರಾಯೋವಾಗ್ವ್ಯಾಪಾರೋ ನವಾಶ್ರಯಃ ದಶರೂಪಕ (೩-೫) - 'ಭಾರತೀ'ತು ಶಬ್ದ ವೃತ್ತಿಃ (ದಶರೂಪಕ ೨-೬೦ ವ್ಯಾಖ್ಯಾನ)
ಭಾರತಿಕ (೯-೧೨) - ಸೂತ್ರಧಾರ
ಭೃಂಗಾರ (೪ ರಗಳೆ) - ಚಿನ್ನದ ಪಾತ್ರೆ

ಮ

ಮಗ್ಗ (೧೫-೧೯) - ಬಾಡು
ಮಜ್ಜನವಳ್ಳ (೭-೧೦೩) - ಸ್ನಾನಾಧಿಕಾರಿ
ಮಂಜೀರಕ (೮-೧೮) - ಕಾಲಂದುಗೆ
ಮಟ್ಟನಾಗು (೧೧-೧೨೫) - ಸರಿಯಾಗು, ಹೊಂದಿಕೆಯಾಗು
ಮಡ (೯-೮೪) - ಹಿಮ್ಮಡ
ಮಡಗೂೞ್ (೧೪-೩೨) - ಎಂಜಲು
ಮಡಲ್ತು (೨-೪) (೯-೨೦) - ಚಿಗಿತು
ಮನಕತ (೬-೫೫) - ಚಿಂತೆ
ಮನಂಗಲ್ (೩-೨೬ ವ) - ಮನದೊಳಗಿನದನ್ನು ತಿಳಿ
ಮಂದೈಸು (೫-೨೩) - ದಟ್ಟವಾಗು
ಮಮ್ಮ (೨-೨೦) - ಮೊಮ್ಮಗ
ಮರವಡು (೬-೫೦) - ಮರಗಟ್ಟು, ಶಕ್ತಿಹೀನವಾಗು
ಮರುಳ್ಚು (೮-೩೮) - ಬೆರಗುಗೊಳಿಸು
ಮಱಲುಂದು (೨-೬೨) - ಮೈಮರೆತು ನಿದ್ದೆ ಪೋಗು, ಗಾಢವಾಗಿ ನಿದ್ರಿಸು
ಮಲರ್ (೧-೬೮) - ಮುಖ ತಿರುಗು
ಮಲೆಪು (೧೧-೧೧೮) - ಗರ್ವ
ಮಸುರಿಗೆ (೧೧-೭೬) - ದಿಂಬು
ಮಸೂರಿಕಾ (೬-೭೨ ವ) - ಒಂದು ಬಗೆಯ ಧಾನ್ಯ (ಚಿನ್ನಂಗಿ ?)
ಮಸೃಣ (೭-೨೭ ವ) - ನುಣುಪಾದ, ಹೊಳೆಯುವ
ಮಹ (೨-೪೯ ವ) - ಪೂಜೆ, ಉತ್ಸವ
ಮೞ್ಗು (೯-೫೬) - ಕಾಂತಿಹೀನವಾಗು, ನಾಶವಾಗು.
ಮಾಕಂದ (೧೧-೧೨೮ ವ); - ಮಾವಿನ ಮರ
ಮಾಣವಕ (೮-೫೪ವ) - ಇಪ್ಪತ್ತು ಎಳೆಗಳುಳ್ಳ ಹಾರ
ಮಾಣಿಕಚಟ್ಟ (೪-೪೨) - ರತ್ನಪರೀಕ್ಷಕ
ಮಾತುಲುಂಗ (೧೬-೧೦) - ಮಾದಳ ಹಣ್ಣು
ಮಾಧವ (೪-೨೩) - ವೈಶಾಖಮಾಸ, ವಸಂತಋತು
ಮಾಧವಿ (೧೧-೧೦೮) - ಅದಿರ್ಗಂತಿ, ವಸಂತ ದೂತಿ,
ಮಾಂದಿಸು (೩-೪೯) - ತಡೆಮಾಡು, ನಿಲ್ಲಿಸು
ಮಾಱಾನ್ (೩-೬) - ಎದುರಾಗು, ಎದುರಿಸು
ಮುಕುಂದ (೯-೬೬) - ಮದ್ದಳೆ
ಮುಂಗುರಿ (೫-೧೪) - ಮುಂಗಲಿ
ಮುಟ್ಟಲ್ಲನ್ (೨-೩೮) - ಅಸಮರ್ಥ
ಮುಡಿಗೆ (೧೧-೧೦೫) - ಟೊಪ್ಪಿ, ಕಿರೀಟ
ಮುದುಗಣ್ (೧೯-೧೦೫) - ಮುದುಕ
ಮುದ್ಗ (೬-೭೨ ವ) - ಹೆಸರು
ಮುಯ್ಯು (೧೪-೧೧೭) - ಹೆಗಲು, ಭುಜ
ಮುಱುಕ (೧೧-೯೩) - ಒಯ್ಯಾರ
ಮುಸು (೨-೪೫) - ಕೋಡಗ, ಕಪಿ
ಮೂಗುವಡು (೩-೨೬) - ಸುಮ್ಮನಿರು, ಮಾತಾಡದಿರು
ಮೆಟ್ಟು (೭-೧೨೩) - ಹೆಜ್ಜೆ

ಮೆಳ್ಪಡು (೧-೭೯) - ಭ್ರಾಂತಿ, ಮರುಳುತನ
ಮೆಳ್ಪಡು (೩-೭೨) - ತಬ್ಬಿಬ್ಬಾಗು, ಭ್ರಾಂತನಾಗು
ಮೇಚಕ (೮-೨೩ವ) - ನೀಲ, ಕಪ್ಪಾದ
ಮೊಕ್ಕಳಂ (೭-೬೭) - ಅತಿಶಯವಾಗಿ
ಮೊಗಸು (೧೧-೭೦) - ಮುತ್ತಿಕೊಳ್ಳು, (೨) (೧೪-೨) ಬಯಸು, ಸಿದ್ಧನಾಗು

ಯ

ಯವ (೬-೭೨ ವ) - ಜವೆಗೋದಿ
ಯವನಿಕಾ (೬-೭೨) - ಪರದೆ
ಯಾವನಾಳ (೬-೭೨ ವ) - ಜೋಳ

ರ

ರಥಾಂಗ (೧೦-೧೯) - ಚಕ್ರ, ಚಕ್ರವಾಕಪಕ್ಷಿ
ರಯ್ಯ (೭-೫೮) ರಮ್ಯ
ರಶ್ಮಿಕಲಾಪ (೮-೫೪ವ) - ಐವತ್ತು ನಾಲ್ಕು ಯಷ್ಟಿಗಳುಳ್ಳ ಹಾರ
ರಸಿತ (೮-೩ವ) - ದನಿಯಿಂದ ಕೂಡಿದ
ರಾಜನ್ಯ (೮-೬೭) - ಅರಸು
ರಾಜಮಾಷ (೬-೭೨ ವ) - ಅಲಸಂದಿ
ರುಂದ್ರ (೧೧-೧೦ವ) - ವಿಶಾಲ, ಮನೋಹರ
ರೇಚಕ (೭-೧೨೦) - ನೃತ್ಯದಲ್ಲಿ ಕೈಯನ್ನು ಒಮ್ಮೆಲೆ ಚಾಚುವುದು
ರೈವೃಷ್ಟಿ (೭-೨೪) - ಧನವೃಷ್ಟಿ
ರೋದೋಂತರ್ಭಾಗ (೧೧-೧೪) - ಭೂಮ್ಯಾಕಾಶಗಳ ನಡುವಿನ ಪ್ರದೇಶ

ಲ

ಲಟಹ (೭-೫೧) - ಸೌಂದರ್ಯ
ಲಪನ (೬-೧೦೬ವ) - ಮುಖ
ಲಂಬಣಿಗೆ (೧೩-೧೩) - ಉದ್ದವಾದ ಕೊರಳ ಹಾರ
ಲಂಬೂಷ (೭-೭೬ವ) - ಏಳು ಎಳೆಗಳಿರುವ ಹಾರ
ಲಯ (೯-೩೩) - ಸಂಗೀತದೊಳಗಿನ ಕಾಲ
ಲುಂದುವ (೧೨-೨೩) - ಮಲಗುವ

ವ

ವಸುಧಾರೆ (೭-೩) - ಸುವರ್ಣವೃಷ್ಟಿ
ವಳಭಿ (೬-೧೦೬ ವ) - ಇಳಿಜಾರಾದ ಚಾವಣಿ
ವಾಲಧಿ (೧೨-೫೬ ವ) - ಕೂದಲುಗಳುಳ್ಳ ಬಾಲ
ವಾಸವಾಸೆ (೮-೩೦) - ಪೂರ್ವದಿಕ್ಕು
ವಿಜಯಚ್ಛಂದ (೮-೫೪ವ) - ೫೦೪ ಎಳೆಗಳುಳ್ಳ ಹಾರವು, ಇದನ್ನು ಅರ್ಧಚಕ್ರವರ್ತಿಗಳೂ ಬಲದೇವ, ಕಾಮದೇವ ಮೊದಲಾದವರೂ ಧರಿಸುತ್ತಾರೆ.
ವಿತಾನ (೧೦-೪೭) - ಮೇಲ್ಕಟ್ಟು
ವಿಸ್ರಂಭ (೧೧-೨೫ವ) - ವಿಶ್ವಾಸ
ವಿಷ್ಕಂಭ (೭-೭೩ ವ) - ಎತ್ತರ
ವಿಷ್ಟಪ (೧೪-೪೬ ವ) - ಲೋಕ
ವೈಶಾಖಸ್ಥಾನ (೭-೧೧೬) - ಎರಡೂ ಪಾದಗಳನ್ನು ಬಿಡಿಸಿ ನಿಲ್ಲುವುದು
ವ್ಯಂಜನ (೬-೭೭) (೧) - ನಂಜಿಕೊಳ್ಳುವ ಪದಾರ್ಥ (೨) - ಲಕ್ಷಣ (೮-೪ವ)
ವ್ಯತಿಕರ (೪-೮೧) - ಸಂದರ್ಭ
ವ್ಯತಿಹಾರ (೪-೨೩ವ) - ವಿಸ್ತರ, ಸಂದರ್ಭ

ಶ

ಶಫರ (೧೨-೭೮) - ಮೀನು
ಶಾಕ್ವರ (೧೫-೩೨) - ಹೋರಿ, ಎತ್ತು
ಶಾಲ (೬-೧೦೫) - ವಿಶಾಲ, ದೊಡ್ಡ
ಶಿಖರಿಣಿ (೧೧-೨೬ವ) - ಮೊಸರು ಸಕ್ಕರೆ ಸೇರಿಸಿ ಮಾಡಿದ ಭೋಜ್ಯ
ಶಿಶುಮಾರ (೯-೬೦) - ಮೊಸಳೆ
ಶಿಂಶುಮಾರ (೫-೮೭ ವ) - ಮೊಸಳೆ
ಶುದ್ಧಾತ್ಮ (೧-೮೦) (೧೧-೪೨) - ಅಂತಃಪುರ
ಶೃಂಗಾಟಕ (೧೩-೫೭ ವ) - ಚೌಕ
ಶ್ವಯು (೨-೧೫) - ಅಜಗರ

ಷ

ಷಷ್ಟಿಕಾ (೬-೭೨ವ) - ಅರವತ್ತು ದಿವಸಕ್ಕೆ ಬೆಳೆ ಬರುವ ಧಾನ್ಯ

ಸ

ಸಕ್ಕಿ (೯-೧೧೫) - ಸಾಕ್ಷಿ
ಸಣ್ಣಿಗೆ (೫-೯೩) - ರುಬ್ಬುಗಲ್ಲು
ಸತ್ತಿ (೮-೧೫ ವ) (ತ್ಪ) - ಛತ್ರಿ, ಕೊಡೆ

ಸಂತ (೧೪-೪೮) - ಕ್ಷೇಮ
ಸನಾಭಿ (೯-೭೨ ವ) - ಸಂಬಂಧಿ, ಆಪ್ತ
ಸನ್ನಣ (೧೪-೯೦) - ಕವಚ
ಸಪರ್ಯಾ (೨-೨೪ ವ) - ಸೇವೆ, ಪೂಜೆ
ಸಪ್ತಚ್ಛದ (೧೨-೬೧ ವ) - ಏಳೆಲೆಬಾಳೆ, ಸಪ್ತಪರ್ಣ
ಸಬ್ಬವ (೨-೭೧) - ಪರಿಹಾಸ; ಪ್ರೀತಿ
ಸಮಚುವ (೭-೮) - ಅಂದಗೊಳಿಸುವ
ಸಮವಕಾರ (೭-೧೧೫ ವ) - ನಾಟಕಭೇದ
ಸಮವಾಯ (೫-೫೪) - ಸಂಗ, ಪರಿಗ್ರಹಾಸಕ್ತಿ
ಸರುಗ (೧೫-೪೨) - ಅನ್ನ
ಸಲ್ಲಕಿ (೧೩-೫೫) - ತದುಕಿನ ಮರ
ಸವಂಗ (೧೧-೭೩) - ಕುಪ್ಪುಸ
ಸವಡಿ (೧೧-೪೧) - ಜೋಡಿ, ಅವಳಿ
ಸವನ (೭-೬೫) - ಅಭಿಷೇಕ
ಸಾತ್ವತಿ (೯-೨೬) - ಸತ್ವ, ಶೌರ್ಯ, ತ್ಯಾಗ, ದಯೆ, ಹರ್ಷ ಮುಂತಾದುವುಗಳಿಂದ ಕೂಡಿ ಗೆಲುವಾಗಿರುವುದು
ಸಿಂಧು (೧೧-೧೨೭) - ಪೂತ್ಕರಿಸಿದ ಬಾಯಿನೀರು
ಸಿಂಧುರ (೪-೨೩ವ) - ಆನೆ
ಸಿಂಧುವಾರ (೧೧-೧೧೭ವ) - ಲಕ್ಕಿ
ಸಿವಿಗೆ (೯-೭೬ ವ) - ಪಲ್ಲಕ್ಕಿ
ಸಿವುಚು (೧೨-೫೯) - ಗೀರು, ಪರಚು
ಸೀಂಟು (೧೩-೭೧ ವ) - ತಿಕ್ಕು, ಉಜ್ಜು
ಸುಗಿ (೫-೧೩) - ಅಂಜು
ಸುಟ್ಟುರೆ (೨-೫) - ಸುಂಟರಗಾಳಿ
ಸುತ್ರಾಮ (೬-೧೦೬ವ) - ಇಂದ್ರ
ಸುರಯಿ (೬-೧೦೦) - ಸುರಗಿ
ಸುಷಿರ (೫-೩೫) - ಕೊಳಲು ಮೊದಲಾದ ವಾದ್ಯ
ಸುಸಿಲ್ (೪-೧೨ ವ) - ಕಾಮಕ್ರೀಡೆ, ಸಂಭೋಗ (೧೨-೨೩)
ಸೆಜ್ಜೆವಳ (೫-೨೨ ವ) - ಶಯ್ಯಾಗೃಹಪತಿ
ಸೆರಗು (೧-೭೯ ವ) - ಸಹಾಯ
ಸೇತ (೧೨-೧೨) ಶ್ವೇತ, ಬೆಳ್ಳನೆಯ
ಸೇದೆಗಿಡು (೨-೯ವ) ಬಳಲಿಸು
ಸೊಡರ್ (೧೧-೧೦೫) - ದೀಪ
ಸೊನ್ನಲಿಗೆ (೬-೭೧) - ಕಲಶ
ಸೊಯಂಬರ (೧೦-೨೦) - (ತ್ರ) ಸ್ವಯಂವರ
ಸೊವಡು (೨-೫) - ವಾಸನೆ, ಪರಿಮಳ
ಸೋಗೆ ೪-೨೦ - ಗಂಡುನವಿಲು
ಸ್ತಂಬಕರಿ (೬-೭೭ವ) - ನೆಲ್ಲು
ಸ್ಥಪುಟಿತ (೧೩-೫೫) - ಏರಿಳಿತವಾದ
ಸ್ಪಂದ (೧೧-೧೧) - ಅದರುವಿಕೆ
ಸ್ಥಾಸಕ (೧೧-೪೧) - ಸುಗಂಧಲೇಪನ
ಸ್ಥೂರಿಪೃಷ್ಠ (೧೧-೧೨ ವ) - ಹೊಸಕುದುರೆ
ಸ್ಯಾಮಾಕ (೬-೭೨ವ) - ಸಾವೆ

ಹ

ಹಯ್ಯಂಗವೀನ (೧೧-೨೬ ವ) - ನಿನ್ನೆ ಹಾಲು ಕಾಸಿ, ಹೆಪ್ಪ ಹಾಕಿ, ಇಂದು ಕಡೆದು ಬೆಣ್ಣೆ ತೆಗೆದು, ಅದನ್ನು ಕಾಸಿದ ತುಪ್ಪ
ಹರಿ (೧೨-೮೧) - ಕುದುರೆ
ಹಾರ (೮-೫೪ ವ) - ನೂರೆಂಟು ಎಳೆಗಳುಳ್ಳ ಸರ
ಹೊನ್ನ (೪-ರಗಳೆ ೬) - ಪುಣ್ಯ

# ಆದಿಪುರಾಣದಲ್ಲಿ ಸ್ವತಃ ತಿದ್ದಿದ ಸ್ಥಳ

| | ಮುದ್ರಿತಪಾಠ | ತಿದ್ದಿದ ಪಾಠ |
|---|---|---|
| ೧. | ಪಂಚಷಡ್ಯೋಜನ (೧-೬೨ವ) | ಪಂಚಾಶದ್ಯೋಜನ (ಆಧಾರ ಪೂರ್ವಪುರಾಣ) |
| ೨. | ವಿಕಾರಮಲ್ಲದೆ (೨-೧೦ವ) | ವಿಕಾರಮನಲ್ಲದೆ |
| ೩. | ಉಪಾದೇಯ ಧರ್ಮಮುಂ (೨-೧೦ವ) | ಉಪಾದೇಯಂ |
| ೪. | ಏವಣ್ಣೆಪೆಂ ಬಣ್ಣಿಪೆಂ (೨-೭೬) | ಏವಣ್ಣಿಪಂ ಬಣ್ಣಿಪನ್ |
| ೫. | ನಿರ್ಜರಾರಣ್ಯ (೩-೧೩) | ನಿರ್ಜನಾರಣ್ಯ |
| ೬. | ಕೆಚ್ಚುವಿರ್ದ (೪-೫೨ವ) | ಕೆಚ್ಚುವೀಳ್ದಿ |
| ೭. | ಅಳಕೋತ್ಸಾರಿತ (೪-೬೦) | ಅಳಿಕೋತ್ಸಾರಿತ |
| ೮. | ಪದಗಳಿಪದೆ (೪-೮೭) | ಪದಕಳಿಪದೆ |
| ೯. | ಮರ್ತ್ಯನಿಳಾಕ್ರಾಂತ (೧-೯೧) | ಮ್ । ಅತ್ಯನಿಳಾಕ್ರಾಂತ |
| ೧೦. | ದುರ್ಜಯ ಮರಸ್ಕಾಂದ (೧-೯೧) | ದುರ್ಜಯಮವಸ್ಕಂದ |
| ೧೧. | ಸೌಖ್ಯಮೆನುತುಂ (೧೦೨-೯೯) | ಸೌಖ್ಯಮೆನಿತುಂ |
| ೧೨. | ವಿಷಯದ ಪ್ರತಿಬದ್ಧ (೬-೨೦ವ) | ವಿಷಯ ಪ್ರತಿಬದ್ಧ |
| ೧೩. | ಪರಿಣಾಮದ್ರವ್ಯ (೬-೧೮ವ) | ಪರಿಣಾಮಿದ್ರವ್ಯ |
| ೧೪. | ಕುಕ್ಕಿಲದಪ್ರಾಗ್‌ದಿಗ್‌ದೇಶ (೭-೩ವ) | ಕುಕ್ಕಿಲ್ಲದಪಾಗ್‌ದಿಗ್ದೇಶ (ಪೂ. ಪು. ಮತ್ತು ರಾಜವಾರ್ತಿಕ) (ಅಪಾಗ್ = ದಕ್ಷಿಣ) |
| ೧೫. | ತಳಕೆ (೭-೫೬) | ದಳಕೆ |
| ೧೬. | ಅಂತಃಕರಣರಾದಾಗಳ್ (೭-೭೭ವ) | ಅಂತಃಕರಣನಾದಾಗಳ್ |
| ೧೭. | ವೇದಿಕೆಗಳ್ಗೆತ್ತು (೭-೧೦೯) | ವೇಳಿಗೆಗಳ್ಗೆತ್ತು |
| ೧೮. | ಮರುದ್ಧೃತ (೭-೧೧೬) | ಮರುದ್ವೃತ |
| ೧೯. | ಅತಿಪ್ರಾಜ್ಯಸಂಜನಿತ (೮-೮ವ) | ಅತಿಪ್ರಾಜ್ಯನಂ, ಜನಿತ |
| ೨೦. | ಚೈತ್ರಪತಾಕೆಯರೊಳ್ (೮-೨೩ವ) | ಜೈತ್ರಪತಾಕೆಯರೊಳ್ |
| ೨೧ | ಪ್ರತ್ಯಗೋಚಿತಾತ್ಯಂಗ (೮-೫೧ವ) | 'ಅತ್ಯಂಗ' ಎಂಬುದನ್ನು ಬಿಟ್ಟಿದೆ |
| ೨೨ | ಸಾರಜಲ (೮-೬೯ವ) | ಸಾರವಜಲ |
| ೨೩. | ಒಂಭತ್ತೊಬಂತ್ತು, ತೊಂಭತ್ತೊಂಭತ್ತು (೧೦-೩೧) | ಒಂಭತ್ತು (ಪೂ. ಪು. ಮತ್ತು ರಾಜವಾರ್ತಿಕ) |
| ೨೪. | ಸ್ಥೂಲಪೃಷ್ಠ (೧೧-೧೨ವ) | ಸ್ಥೂರಿಪೃಷ್ಠ |
| ೨೫. | ಉಪರಿಮತಳ (೧೧-೧೭ವ) | ಉಪರಿತಳ |
| ೨೬. | ಸಾಮಜಂಗಳ (೧೨-೧ವ) | ಸಮಜಂಗಳ |
| ೨೭. | ಮನೋವಲ್ಲಭಾ (೧೨-೨೧) | ಮನೋವಲ್ಲಭೇ |

42/A

| | |
|---|---|
| ೨೮. ಮಗ್ನಜಾನಸೆಂದವ (೧೨-೧೨) | ದೃಜ್ಞೆಜಾನಸೇಂದುವ |
| ೨೯. ಗಗಣಾಭಾಗ (೧೩-೧೦) | ಗಗನಾಭೋಗ |
| ೩೦. ಏವೆಮೊ (೧೩-೨೬) | ಏವೆವೊ |
| ೩೧. ಸೌಂದರ್ಯಮಂ (೧೧-೮೧) | ಸೌದರ್ಯಮಂ |
| ೩೨. ವಿಧ್ಯುಚ್ಚಮೂ (೧೧-೯೮ವ) | ವಿದ್ವಿಷ್ಟಚಮೂ |
| ೩೩. ನಿಧಿಯಂ (೧೫-೧೧ವ) | ನಿಧಿಯಿಂ |
| ೩೪. ದೆಸೆಯದು (೧೫-೩೩) | ಎಸೆಯದು |
| ೩೫. ಮಹಾಮಹಿಮಾ (೧೫-೧೮ವ) | ಮಹಾಮಹ |
| ೩೬. ವಿಷಯಮವತರೇದ್ಯದೀಯ ವಾಚಂ ನ ವಿಷಯಮಮತಿರ್ಯದೀಯ ಚಿಂತಾ (೧೬-೩೫) | ವಿಷಯಮವತರೇದ್ಯದೀಯ ವಾಚಂ |
| ೩೭. ತ್ರಿತಯಭಾಗದೊಳ್ (೧೬-೫೧ವ) | ತೃತೀಯಭಾಗದೊಳ್ |
| ೩೮. ನೀಂ ಮಾಣ ಶಕ್ರಂಗೆ (೧೬-೫೯) | ನಿರ್ವಾಣಸಕ್ತಂಗೇ |

# ಜೈನಪಾರಿಭಾಷಿಕ ಶಬ್ದಗಳು

## ಅ

ಅಕ್ಷೀಣಾಭಿಧಾನ-ಇದು ಒಂದು ಋದ್ಧಿ. ಇದು ಪ್ರಾಪ್ತವಾದ ಮುನಿ ಯಾವ ಶ್ರಾವಕರ ಮನೆಯಲ್ಲಿ ಆಹಾರವನ್ನು ತೆಗೆದುಕೊಳ್ಳುವರೋ ಅವರ ಮನೆಯಲ್ಲಿ ಆಹಾರ ಅಕ್ಷಯವಾಗಿರುತ್ತದೆ.

ಅಗುರುಲಘು-ಒಂದು ಕರ್ಮವಿಶೇಷ. ಇದರ ಉದಯದಿಂದ ದೇಹವು ಭಾರವೂ ಹಗುರವೂ ಆಗಿರುವುದಿಲ್ಲ.

ಅಘಾತಿಕರ್ಮ-ನಾಮಕರ್ಮ, ಗೋತ್ರಕರ್ಮ, ವೇದನೀಯಕರ್ಮ.

ಅಣುವ್ರತ-ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ.

ಅಧರ್ಮ-(೧) ಜೀವ ಮತ್ತು ಪುದ್ಗಲಗಳ ಸ್ಥಿತಿಗೆ ಸಹಾಯಮಾಡುವ ಒಂದು ದ್ರವ್ಯ. (೨) ಮಿಥ್ಯಾಜ್ಞಾನ, ಮಿಥ್ಯಾದರ್ಶನ, ಮಿಥ್ಯಾಚಾರಿತ್ರಗಳು.

ಅಧೋಗ್ರೈವೇಯಕ-ಹದಿನಾರು ಕಲ್ಪಗಳ ಮೇಲೆ ೯ ಗ್ರೈವೇಯಕ ವಿಮಾನಗಳಿವೆ. ಅವುಗಳಲ್ಲಿ ಕೆಳಗಿನ ೩ ವಿಮಾನಗಳು.

ಅನಗಾರ ಕೇವಲಿ-ತೀರ್ಥಂಕರರೂ ಗಣಧರರೂ ಅಲ್ಲದ ಸಾಮಾನ್ಯಕೇವಲಿ. ಕೇವಲ ಜ್ಞಾನ ಬಂದವರು ಕೇವಲಿಗಳು.

ಅನಂತಚತುಷ್ಟಯ-ಅನಂತಜ್ಞಾನ, ಅನಂತದರ್ಶನ, ಅನಂತಸುಖ ಮತ್ತು ಅನಂತವೀರ್ಯ.

ಅನುಪ್ರೇಕ್ಷೆ-ಅನಿತ್ಯತ್ವಭಾವನೆ, ಅಶರಣತ್ವಭಾವನೆ-ಮುಂತಾದ ದ್ವಾದಶ ಭಾವನೆಗಳು.

ಅಂತರಾಯ ಪಂಚಕ-ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ, ವೀರ್ಯಾಂತರಾಯ-ಎಂಬ ಐದು ವಿಘ್ನಗಳು.

ಅಭವ್ಯ-ಸಮ್ಯಗ್‌ಜ್ಞಾನಾದಿಗಳಿಲ್ಲವನು-ಮೋಕ್ಷಕ್ಕೆ ಅನಧಿಕಾರಿ.

ಅವಸರ್ಪಿಣಿ-(ಕಾಲವಿಭಾಗವನ್ನು ನೋಡಿ)

ಅವಧಿಜ್ಞಾನ-ಕಾಲದೇಶಗಳ ನಿರ್ಬಂಧವಿಲ್ಲದೆ ಎಲ್ಲವನ್ನೂ ಜನ್ಮಾಂತರ ವಿಷಯವನ್ನೂ ಸಹ ತಿಳಿಯುವಿಕೆ.

ಅಷ್ಟಮಂಗಳ-ಛತ್ರ, ಧ್ವಜ, ಕಲಶ, ಚಾಮರ, ಸುಪ್ರತಿಷ್ಠಕ (ಒಂದು ಬಗೆಯ ಪಾತ್ರೆ), ಭೃಂಗಾರ (ಚಿನ್ನದ ಕಲಶ), ಕನ್ನಡಿ, ಬೀಸಣಿಗೆ.

ಅಷ್ಟಮಹಾಪ್ರಾತಿಹಾರ್ಯ-ಅಶೋಕವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚತುಃಷಷ್ಟಿ ಚಾಮರ, ಸುವರ್ಣಸಿಂಹಾಸನ, ಪ್ರಭಾವಲಯ, ದೇವದುಂದುಭಿ, ಛತ್ರತ್ರಯ.

ಅಷ್ಟಾಹ್ನಿಕ-ಆಷಾಢ, ಕಾರ್ತಿಕ, ಫಾಲ್ಗುಣ ಶುದ್ಧ ಅಷ್ಟಮಿಯಿಂದ ಹುಣ್ಣಿಮೆಯವರೆಗೆ ನಡೆಯುವ ಜಿನಪೂಜೆ.

ಅಹಮಿಂದ್ರ-ಕಲ್ಪಾತೀತವೆನಿಸಿದ ಗ್ರೈವೇಯಕ, ಅನುದಿಶ ಮತ್ತು ಅನುತ್ತರ ವಿಮಾನಗಳಲ್ಲಿರುವ ದೇವತೆ.

## ಆ

ಆದಿಬ್ರಹ್ಮ-ವೃಷಭತೀರ್ಥಂಕರ.

ಆರ್ತಧ್ಯಾನ-ಸುಖದುಃಖಾದಿ ಲೌಕಿಕ ವಿಚಾರ ಚಿಂತನೆ.

ಆರ್ಯ-ಭೋಗಭೂಮಿನಿವಾಸಿ; ಹಿಂದೆ ಭರತಖಂಡದಲ್ಲಿಯೂ ಭೋಗಭೂಮಿಸ್ಥಿತಿ ಇದ್ದಿತು. ಇಲ್ಲಿದ್ದವರೂ ಆರ್ಯರಾಗಿದ್ದರು.

ಆರ್ಯಷಟ್ಕರ್ಮ-ಇಜ್ಯಾ, ವಾರ್ತಾ, ದತ್ತಿ, ಸ್ವಾಧ್ಯಾಯ, ಸಂಯಮ, ತಪಸ್ಸು-ಇವು ಬ್ರಾಹ್ಮಣರಿಗೆ ಭರತಚಕ್ರವರ್ತಿ ಗೊತ್ತುಪಡಿಸಿದ ಆರು ಕರ್ಮಗಳು. ಜೀವನೋಪಾಯಕ್ಕೆ ಆದಿತೀರ್ಥಂಕರನು ಗೊತ್ತುಪಡಿಸಿದ ಆರು ಕರ್ಮಗಳು. ಅಸಿ (ಸೇವಾಕರ್ಮ), ಮಸಿ (ಬರವಣಿಗೆ), ವಿದ್ಯೆ, ವಾಣಿಜ್ಯ, ಶಿಲ್ಪ, ಕೃಷಿ.

ಆವಲಿ-(ಕಾಲ ವಿಭಾಗವನ್ನು ನೋಡಿ)

ಆಸನಕಂಪ-ತೀರ್ಥಂಕರರ ಅವತಾರವಾದಾಗ, ಮುನಿಗಳಿಗೆ ಕೇವಲಜ್ಞಾನವಾದಾಗ ಇಂಥ ವಿಶೇಷ ಸಂದರ್ಭದಲ್ಲಿ ಇಂದ್ರನ ಪೀಠವು ಅಲ್ಲಾಡುತ್ತದೆ. ಇದಕ್ಕೆ ಆಸನಕಂಪವೆಂದು ಹೆಸರು.

ಆಸನ್ನಭವ್ಯ-ಕೆಲವೇ ಜನ್ಮಗಳಲ್ಲಿ ಮುಕ್ತಿಯನ್ನು ಪಡೆಯತಕ್ಕವನು.

ಆಸ್ರವ-ಜೀವನಿಗೆ ಶುಭಾಶುಭ ಕರ್ಮಗಳು ಸೇರಿಕೊಳ್ಳುವುದು.

## ಇ

ಇಂದ್ರೋಪಪಾದ-ಇಂದ್ರನು ಹುಟ್ಟುವ ದಿವ್ಯತಲ್ಪ. ಇಂದ್ರನು ಇದರಲ್ಲಿ ಹುಟ್ಟಿದೊಡನೆ ತಾರುಣ್ಯವನ್ನೂ ಅವಧಿಜ್ಞಾನವನ್ನೂ ಪಡೆಯುತ್ತಾನೆ.

## ಈ

ಈರ್ಯಾಗೋಚರಶುದ್ಧಿ (ಈರ್ಯಾಸಮಿತಿ)-ನಡೆಯುವಾಗ ಯಾವ ಪ್ರಾಣಿಗೂ ಹಿಂಸೆಯಾಗದಂತೆ ನೋಡಿಕೊಳ್ಳುವುದು.

ಈಶಾನಕಲ್ಪ-ಎರಡನೆಯ ಸ್ವರ್ಗ.

ಈಷತ್‌ಪ್ರಾಗ್ಭಾರ-ಅನುತ್ತರ ವಿಮಾನಗಳ ಮೇಲಿರುವ ಸಿದ್ಧಕ್ಷೇತ್ರ, ಮುಕ್ತರಾದ ಸಿದ್ಧರು ಇಲ್ಲಿರುವ ಸಿದ್ಧಶಿಲೆಯಲ್ಲಿ ನೆಲಸುತ್ತಾರೆ.

## ಉ

ಉತ್ತರಕುರು-ವಿದೇಹಕ್ಷೇತ್ರದಲ್ಲಿ ಮೇರುಪರ್ವತದ ಉತ್ತರದಿಕ್ಕಿನಲ್ಲಿರುವ ಉತ್ತಮ ಭೋಗಭೂಮಿ.

ಉತ್ಸರ್ಪಿಣಿ-(ಕಾಲವಿಭಾಗವನ್ನು ನೋಡಿ)

ಉಪಪಾತತಲ್ಪ-ದೇವತೆಗಳು ಹುಟ್ಟುವ ಶಯ್ಯೆ.

ಉಪಶಮಶ್ರೇಣಿ-ಚಾರಿತ್ರಮೋಹದ ಇಪ್ಪತ್ತೊಂದು ಪ್ರಕೃತಿಗಳನ್ನು ಉಪಶಮಗೊಳಿಸುವ ಹಂತ.

ಉಪಶಾಂತ ಗುಣಸ್ಥಾನ-ಹನ್ನೊಂದನೆಯ ಗುಣಸ್ಥಾನ.

ಉಪಾಸಕ-ಶ್ರಾವಕ, ಜೈನಗೃಹಸ್ಥ.

ಉಪಾಸಕಾಧ್ಯಯನ-ಜೈನಗೃಹಸ್ಥರಾದ ಉಪಾಸಕರ ಆಚಾರಾದಿಗಳನ್ನು ಕುರಿತ ಶಾಸ್ತ್ರಭಾಗ. ಅಂಗಶಾಸ್ತ್ರಗಳಲ್ಲಿ ಏಳನೆಯದು.

## ಊ

ಊರ್ಧ್ವಲೋಕ-ಮೇರುಪರ್ವತದ ಚೂಲಿಕೆಯ ಮೇಲೆ ಸೌಧರ್ಮಕಲ್ಪದ ಋತುವೆಂಬ ವಿಮಾನವಿದೆ. ಅಲ್ಲಿಂದ ಮೇಲೆ ಊರ್ಧ್ವಲೋಕ ಆರಂಭವಾಗುತ್ತದೆ. ಸ್ವರ್ಗ, ಗ್ರೈವೇಯಕಾದಿಗಳು ಊರ್ಧ್ವಲೋಕದಲ್ಲಿ ಸೇರುತ್ತವೆ.

## ಋ

ಋದ್ಧಿ-ತಪಸ್ಸಿನಿಂದ ಪ್ರಾಪ್ತವಾಗುವ ಮಹಿಮೆ.

## ಎ

ಎಂಟು ಕಷಾಯ-ಕ್ರೋಧ, ಮಾನ, ಮಾಯಾ, ಲೋಭ-ಇವು ನಾಲ್ಕು ಕಷಾಯಗಳು, ನಾಲ್ಕರಲ್ಲಿಯೂ ಪ್ರತ್ಯಾಖ್ಯಾನ-ಅಪ್ರತ್ಯಾಖ್ಯಾನ ಎಂಬ ಎರಡು ಭೇದಗಳಿಂದಾಗಿ ಎಂಟು ಕಷಾಯಗಳಾಗುತ್ತವೆ.

ಎಂಟು ಕಿಲ್ಬಿಷ-ನಾಲ್ಕು ಘಾತಿಕರ್ಮಗಳು ಮತ್ತು ನಾಲ್ಕು ಅಘಾತಿಕರ್ಮಗಳು.

ಎಂಟು ಗುಣ-ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ, ಸಮ್ಯಕ್ತ್ವ, ಪರಮಸೂಕ್ಷ್ಮತೆ, ಅವಗಾಹನ, ಅಗುರುಲಘುತ್ತ್ವ-ಇವು ಆತ್ಮಗುಣಗಳು.

## ಏ

ಏಕಾದಶನಿಲಯ-ಶ್ರಾವಕರು ತಮ್ಮ ಸಾಧನೆಗಳಿಂದ ಅಧ್ಯಾತ್ಮಮಾರ್ಗದಲ್ಲಿ ಮೇಲೇರುವ ಹನ್ನೊಂದು ಸೋಪಾನಗಳು. ಈ ನಿಲಯಗಳಿಗೆ ನೆಲೆಗಳೆಂದೂ ಪ್ರತಿಮೆಗಳೆಂದೂ ಹೆಸರು.

ಕನಕಾವಳೀತಪ-ಒಂದು ವರ್ಷದಲ್ಲಿ ಎಪ್ಪತ್ತೆರಡು ಉಪವಾಸಗಳನ್ನು ಮಾಡಬೇಕಾದ ಒಂದು ವ್ರತ.

ಕರ್ತ್ರನ್ವಯ ಕ್ರಿಯೆ-ಭವ್ಯಜೀವನಿಗೆ ಪ್ರಾಪ್ತವಾಗುವ ಕ್ರಿಯೆ.

ಕರ್ಮಾಷ್ಟಕ-ನಾಲ್ಕು ಘಾತಿ ಮತ್ತು ನಾಲ್ಕು ಅಘಾತಿಕರ್ಮಗಳು.

ಕರ್ಮನಿರ್ಜರೆ-ಕರ್ಮಕ್ಷಯ.

ಕಲ್ಪ-(೧) ಸ್ವರ್ಗ. (೨) ಒಂದು ಅವಸರ್ಪಿಣಿ, ಒಂದು ಉತ್ಸರ್ಪಿಣಿ ಸೇರಿದಷ್ಟು ಕಾಲ.

ಕಲ್ಪವೃಕ್ಷ-ಕಲ್ಪಿಸಿಕೊಂಡದ್ದನ್ನು ಕೊಡುವ ವೃಕ್ಷ. ಇದರಲ್ಲಿ ಹತ್ತು ಬಗೆ:

೧. ಮದ್ಯಾಂಗವು ಉತ್ತಮಪಾನೀಯವನ್ನೂ ೨. ಭೂಷಣಾಂಗವು ಒಡವೆಯನ್ನೂ ೩. ವಸ್ತ್ರಾಂಗವು ವಸ್ತ್ರವನ್ನೂ ೪. ತೂರ್ಯಾಂಗವು ವಾದ್ಯವನ್ನೂ ೫. ಮಾಲ್ಯಾಂಗವು ಹೂಮಾಲೆಗಳನ್ನೂ ೬. ಗೃಹಾಂಗವು ವಾಸಕ್ಕೆ ಮನೆಯನ್ನೂ ೭. ಭಾಜನಾಂಗವು ಪಾತ್ರೆಯನ್ನೂ ೮. ಭೋಜನಾಂಗವು ಅಮೃತಮಯವಾದ ಆಹಾರವನ್ನೂ ೯. ದೀಪಾಂಗವು ದೀಪವನ್ನೂ ೧೦. ಜ್ಯೋತಿರಂಗವು ಬೆಳಕನ್ನೂ ಕೊಡುತ್ತವೆ.

ಕಾಂತಾರಚರ್ಯಾ-'ಅರಣ್ಯದಲ್ಲಿ ಆಹಾರವು ಸಿಕ್ಕಿದರೆ ಮಾತ್ರ ಸ್ವೀಕರಿಸುತ್ತೇನೆ' ಎಂದು ಪ್ರತಿಜ್ಞೆ ಮಾಡಿ ಮುನಿಗಳು ಹೊರಡುವ ಚರಿಗೆ.

ಕಾಯಪ್ರವೀಚಾರ-ಶರೀರದಿಂದ ಮೈಥುನ ಸೇವೆಗೆ.

ಕಾಲಲಬ್ಧಿ-ಕಾರ್ಯವು ನೆರವೇರುವ ಸಮಯದ ಪ್ರಾಪ್ತಿ.

ಕುಲಕರ-ಮನು, ಆರ್ಯಕುಲಕ್ಕೆ ಉಂಟಾದ ಅಂಜಿಕೆಯನ್ನು ದೂರಮಾಡಿದವನು.

ಕುಲಧರ-ಕುಲಕರ, ಮನು.

ಕುಲಿಂಗಿ-ಪಾಷಂಡಿ, ಮಿಥ್ಯಾವಾದಿ

ಕೇವಲಜ್ಞಾನ-ಸರ್ವಜ್ಞತೆ.

ಕೇವಲಿ-ಕೇವಲಜ್ಞಾನವುಂಟಾದವನು.

ಕ್ಷಾಯಿಕಸಮ್ಯಕ್ತ್ವ-ದರ್ಶನಮೋಹನೀಯಕರ್ಮ ಮತ್ತು ಕಷಾಯಗಳ ಸಂಪೂರ್ಣಕ್ಷಯದಿಂದ ಉಂಟಾಗುವ ಶ್ರದ್ಧೆ. ಈ ಶ್ರದ್ಧೆಯುಳ್ಳವನು ಕ್ಷಾಯಿಕ ಸಮ್ಯಗ್ ದೃಷ್ಟಿ.

ಕ್ಷೇತ್ರೋದೀರಿತ-ನರಕಭೂಮಿಯಲ್ಲುಂಟಾಗುವ ದುಃಖ.

## ಗ

ಗಂಧಕುಟಿ-ಸಮವಸರಣದಲ್ಲಿ ತೀರ್ಥಂಕರರು ಕುಳಿತು ಉಪದೇಶ ಮಾಡುವ ಮಂಟಪ.

ಗಣಗ್ರಹಣ-ದೀಕ್ಷೆ ಪಡೆದ ಭವ್ಯನು ಮಿಥ್ಯಾದೇವತೆಗಳನ್ನು ಬೀಳ್ಕೊಟ್ಟು ಜಿನಮತದ ದೇವತೆಗಳನ್ನು ಪೂಜಿಸುವುದು.

ಗಣಧರ-ತೀರ್ಥಂಕರರ ಮುಖ್ಯ ಶಿಷ್ಯನಾದ ಧರ್ಮಾಚಾರ್ಯ.

ಗಣನಾಯಕ-ಮುನಿ, ಆರ್ಯಿಕಾ, ಶ್ರಾವಕ ಮತ್ತು ಶ್ರಾವಿಕ-ಈ ನಾಲ್ಕು ಸಂಘಗಳ ಅಧಿಪತಿ.

ಗಣಿನಿ-ಮುಖ್ಯ ಆರ್ಯಿಕೆ.

ಗತಿ-ಗತಿಚತುಷ್ಟಯ-ದೇವಗತಿ, ಮಾನುಷಗತಿ, ನಾರಕಗತಿ, ತಿರ್ಯಗ್ಗತಿ.

ಗುಣಂಗಳ್-

೧. (ಹಿಂದೆ ಹೇಳಿದ 'ಎಂಟು ಗುಣ'ಗಳನ್ನು ನೋಡಿ)

೨. ಅಣಿಮಾದ್ಯಷ್ಟಗುಣಗಳು-ಅಣಿಮಾ, ಮಹಿಮಾ, ಲಘಿಮಾ, ಪ್ರಾಪ್ತಿ, ಪ್ರಾಗಮ್ಯ (ನೀರಿನೊಳಗೆ, ನೀರಿನ ಮೇಲೆ ಮತ್ತು ಭೂಮಿಯೊಳಗೆ ಪ್ರವೇಶಿಸುವ ಶಕ್ತಿ), ಈಶಿತ್ವ, ವಶಿತ್ವ, ಕಾಮರೂಪಿತ್ವ.

೩. ಷಡ್ಗುಣಗಳು-ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಂಶ್ರಯ.

೪. ಮೂವತ್ತಾರು ಗುಣಗಳು-ಆಚಾರ್ಯರಿಗೆ ಇರುವ ಗುಣಗಳು.

೫. ಏಳು ಗುಣಗಳು - ಶ್ರದ್ಧಾ, ಭಕ್ತಿ, ಸಂತೋಷ, ವಿಜ್ಞಾನ, ನಿರ್ಲೋಭ, ಕ್ಷಮಾ ಮತ್ತು ಸತ್ಯ. ಇವು ದಾತೃಗುಣಗಳು.

ಗುಣವ್ರತ-ದಿಗ್‌ವ್ರತ, ಅನರ್ಥದಂಡವ್ರತ, ಭೋಗೋಪಭೋಗ, ಪರಿಮಾಣವ್ರತ-ಎಂದು ಮೂರು ವಿಧ.

ಗುಣಶ್ರೇಣಿನಿರ್ಜರಾ-ಕರ್ಮಪುದ್ಗಲಗಳು ಅಸಂಖ್ಯಾತಗುಣಿತಕ್ರಮದಿಂದ ಕ್ಷಯಿಸುವುದು.

ಗುಪ್ತಿ-ಆತ್ಮರಕ್ಷಣೆ; ಮನೋಗುಪ್ತಿ, ಕಾಯಗುಪ್ತಿ, ವಾಗ್‌ಗುಪ್ತಿ ಎಂದು ಮೂರು ವಿಧ.

ಗುರುಪಂಚಕ-ಅರ್ಹತ್, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸಾಧು.

## ಘ

ಘನೋದಧಿ, ಘನಾನಿಳ, ತನುವಾತ - ಲೋಕವನ್ನು ಆವರಿಸಿರುವ ಮೂರು ವಾತವಲಯಗಳು.

ಘಾತಿ-ಜ್ಞಾನಾದಿ ಗುಣಗಳನ್ನು ನಾಶಗೊಳಿಸುವ ಕರ್ಮ. ಇದು ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ ಮತ್ತು ಅಂತರಾಯ ಎಂದು ನಾಲ್ಕು ವಿಧ.

## ಚ

ಚತುರ್ಮುಖಮಹ - ನಾಲ್ಕು ಬಾಗಿಲಿರುವ ಜಿನಮಂದಿರಗಳಲ್ಲಿ ಮಾಡುವ ಜಿನಪೂಜೆ.

ಚತುರ್ಥಧ್ಯಾನ-ಶುಕ್ಲಧ್ಯಾನ, ಮೋಕ್ಷವನ್ನೇ ಕುರಿತು ಪ್ರವೃತ್ತವಾದ ಪರಿಶುದ್ಧಧ್ಯಾನ. ಇದು ನಾಲ್ಕು ವಿಧ.

ಚತುರ್ನಿಕಾಯಾಮರರ್-ಭವನವಾಸಿ, ವ್ಯಂತರ, ಜ್ಯೋತಿಷ್ಕ, ವೈಮಾನಿಕ - ಎಂಬ ನಾಲ್ಕು ಬಗೆಯ ದೇವತೆಗಳು.

ಚರಮದೇಹಿ-ಕಡೆಯ ಶರೀರವನ್ನು ಧರಿಸಿದವನು. ಇವನಿಗೆ ಮೋಕ್ಷವಾಗುವುದರಿಂದ ಮತ್ತೆ ಶರೀರಧಾರಣವಿಲ್ಲ. ಚರಮತನು, ಚರಮಾಂಗ, ಚರಮಶರೀರಿ-ಎಂದರೂ

ಈತನೇ.

ಚರ್ಯಾ (ಚರಿಗೆ) - ಮುನಿಯ ಭಿಕ್ಷಾಟನೆ.

ಚಾರಣ-ಆಕಾಶದಲ್ಲಿ ನಡೆಯುವ ತಪಃಶಕ್ತಿಯನ್ನು ಗಳಿಸಿದ ಮುನಿ.

ಚೈತ್ಯ-ಜಿನಮಂದಿರ, ಬಸದಿ.

ಛ

ಛೇದೋಪಸ್ಥಾಪನಾ-ಪ್ರಮಾದದಿಂದ ಹಿಂಸಾದಿ ದೋಷಗಳು ಸಂಭವಿಸಿದರೆ ಪ್ರಾಯಶ್ಚಿತ್ತ ಮಾಡಿಕೊಂಡು ಮತ್ತೆ ಅಹಿಂಸಾದಿ ಮಾರ್ಗದಲ್ಲಿ ನಡೆಯುವುದು.

ಜ

ಜನನೀಚರ-ಹಿಂದಿನ ಜನ್ಮದಲ್ಲಿ ತಾಯಿಯಾಗಿದ್ದವನು. ಹೀಗೆಯೇ ಶಾರ್ದೂಲಚರ ಎಂದರೆ ಹಿಂದಿನ ಜನ್ಮದಲ್ಲಿ ಶಾರ್ದೂಲನಾಗಿ ಹುಟ್ಟಿದ್ದವನು ಎಂದರ್ಥ. 'ಚರ' ಎಂಬುದು ಒಂದು ಪ್ರತ್ಯಯ.

ಜ್ಞಾನಚತುಷ್ಟಯ-ಮತಿ, ಶ್ರುತ, ಅವಧಿ, ಅನಃಪರ್ಯಾಯ-ಎಂಬ ನಾಲ್ಕು ಜ್ಞಾನಗಳು.

ತ

ತ್ರಸಕಾಯ-ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯಗಳುಳ್ಳ ಜೀವಿ.

ತ್ರಿಕರಣ-ಅಧಃಕರಣ, ಅಪೂರ್ವಕರಣ ಮತ್ತು ಅನಿವೃತ್ತಿಕರಣ.

ತ್ರಿಗುಪ್ತಿ-ಮನೋಗುಪ್ತಿ, ವಚನಗುಪ್ತಿ ಮತ್ತು ಕಾಯಗುಪ್ತಿ.

ತ್ರಿಜ್ಞಾನಧರ-ಮತಿ, ಶ್ರುತ, ಅವಧಿಜ್ಞಾನಗಳುಳ್ಳವನು. ಜಿನೇಶ್ವರರಿಗೆ ಜನ್ಮತಃ ಈ ಮೂರು ಜ್ಞಾನಗಳಿರುತ್ತವೆ.

ತ್ರಿಪಲ್ಯೋಪಮ-(ಕಾಲವಿಭಾಗವನ್ನು ನೋಡಿ)

ತ್ರಿಸಾಕ್ಷಿಕ-ಆತ್ಮ, ಇಂದ್ರ, ಸಿದ್ಧರು-ಇವರೇ ಸಾಕ್ಷಿಯಾಗಿರುವ.

ದ

ದಿವ್ಯಧ್ವನಿ-ಕೇವಲಜ್ಞಾನ ಹುಟ್ಟಿದಾಗ ತೀರ್ಥಂಕರರ ಮುಖದಿಂದ ಹುಟ್ಟುವ ಧ್ವನಿ.

ದೀಕ್ಷಾನ್ವಯಕ್ರಿಯಾ-ಜೈನದೀಕ್ಷೆ ಕೊಡುವ ಕ್ರಿಯೆ.

ದುಃಷಮ, ದುಃಷಮ ಸುಷಮ-(ಕಾಲ ವಿಭಾಗವನ್ನು ನೋಡಿ)

ದ್ವಾದಶಸಂಗ್ರಹಕೃಷ್ಟಿ-ದ್ವಾದಶ ಕಷಾಯಗಳ ಫಲ ಕೊಡುವ ಸಾಮರ್ಥ್ಯವನ್ನು ಕಡಿಮೆ ಮಾಡುವುದು.

## ಧ

ಧರ್ಮ-(೧) ಜೀವ ಮತ್ತು ಪುದ್ಗಲಗಳ ಗತಿಗೆ ಸಾಧನವಾದ ದ್ರವ್ಯ.

(೨) ಶ್ರೇಯಃಸಾಧನವಾದ ಒಳ್ಳೆಯ ನಡೆವಳಿಕೆ.

ಧ್ಯಾನ-ಚಿಂತನೆ, ಇದು ನಾಲ್ಕು ವಿಧ-ಆರ್ತಧ್ಯಾನ, ರೌದ್ರಧ್ಯಾನ, ಧರ್ಮಧ್ಯಾನ, ಶುಕ್ಲಧ್ಯಾನ, ಆರ್ತಧ್ಯಾನ, ರೌದ್ರಧ್ಯಾನಗಳು ಕೆಟ್ಟವು. ಧರ್ಮಧ್ಯಾನ, ಶುಕ್ಲಧ್ಯಾನಗಳು ಒಳ್ಳೆಯವು.

## ನ

ನಾಡಿಕಾ- (ಕಾಲ ವಿಭಾಗವನ್ನು ನೋಡಿ)

ನಿರ್ಜರೆ-ಕರ್ಮಕ್ಷಯ.

ನೋಂಪಿ-ವ್ರತ.

## ಪ

ಪಂಕಪ್ರಭೆ-ನಾಲ್ಕನೆಯ ನರಕ.

ಪಂಚಪದ-ಪಂಚಪರಮೇಷ್ಠಿಗಳ ನಮಸ್ಕಾರಮಂತ್ರ.

ಪಂಚಾಶ್ಚರ್ಯ-ಐದು ಆಶ್ಚರ್ಯಗಳು ದೇವದುಂದುಭಿ ಮೊಳಗುವುದು, ಪುಷ್ಪವೃಷ್ಟಿ, ಸುವರ್ಣವೃಷ್ಟಿ, ತಂಗಾಳಿ ಬೀಸುವುದು, ದೇವತೆಗಳು ಮಾಡುವ ಸ್ತುತಿ.

ಪಳಿತ-ಪಲ್ಯೋಪಮ (ಕಾಲವಿಭಾಗವನ್ನು ನೋಡಿ)

ಪರಿಣಾಮಶುದ್ಧಿ-ಮನಃಪರಿಪಾಕ.

ಪರಿನಿರ್ವಾಣಪೂಜೆ-ತೀರ್ಥಂಕರರು ಮೋಕ್ಷವನ್ನು ಪಡೆದ ಮೇಲೆ ಅವರ ಶರೀರಕ್ಕೆ ದೇವತೆಗಳು ಮಾಡುವ ಪೂಜೆ.

ಪರಿನಿಷ್ಕ್ರಮಣ-ತೀರ್ಥಂಕರರು ದೀಕ್ಷೆ ತೆಗೆದುಕೊಳ್ಳಲು ವನಕ್ಕೆ ಹೋಗುವುದು.

ಪರೀಷಹ-ಹಸಿವು, ಬಾಯಾರಿಕೆ ಮೊದಲಾದ ಇಪ್ಪತ್ತೆರಡು ಉಪದ್ರವಗಳು.

ಪಲ್ಯಂಕಾಸನ-ಬಲಗಾಲನ್ನು ಎಡತೊಡೆಯ ಮೇಲೆ ಇಟ್ಟು ಕುಳಿತುಕೊಳ್ಳುವುದು.

ಪಾರಾವಾರ- (೧) ಸಮುದ್ರ (೨) ಸಾಗರ, ಸಮುದ್ರ - ಇವು ಸಂಖ್ಯಾವಾಚಿಗಳು (ಕಾಲ ವಿಭಾಗವನ್ನು ನೋಡಿ)

ಪುದ್ಗಲ-ರೂಪ, ರಸ, ಗಂಧ, ಸ್ಪರ್ಶಗಳುಳ್ಳ ದ್ರವ್ಯ. ಇದಕ್ಕೆ ಅಣು, ಸ್ಕಂಧ ಎಂಬ ಎರಡು ರೂಪಗಳುಂಟು. ಅಣುವನ್ನು ಪರಮಾಣುವೆನ್ನಬಹುದು. ಅಣುಗಳ ಸಂಘಾತ ಪುದ್ಗಲ.

ಪೂರ್ವ (ಪುರ್ಬ) - (೧) (ಕಾಲವಿಭಾಗವನ್ನು ನೋಡಿ) (೨) ಜೈನಶಾಸ್ತ್ರ-ಚತುರ್ದಶ ಪೂರ್ವಗಳು.

ಪ್ರತಿಮಾಯೋಗ - ಆಹಾರವನ್ನು ವರ್ಜಿಸಿ ಒಂದು ವರ್ಷದವರೆಗೆ ಒಂದೇ ಸ್ಥಳದಲ್ಲಿ ನಿಂತು ತಪಸ್ಸುಮಾಡುವುದು.

ಪ್ರತೀಂದ್ರ-ಇಂದ್ರನಂತೆಯೇ ಆಯುಷ್ಯ ಮೊದಲಾದ್ದನ್ನು ಪಡೆದು ಯುವರಾಜನಂತೆ ಇರುವವನು.

ಪ್ರಾಗ್ಭಾರ-ಈಷತ್‌ಪ್ರಾಗ್ಭಾರ, ಅನುತ್ತರವಿಮಾನದ ಮೇಲೆ ಸಿದ್ಧಶಿಲೆಯಿರುವ ಸಿದ್ಧಕ್ಷೇತ್ರ.

ಬ

ಬಲದೇವ-ಅರುವತ್ತುಮೂರು ಶಲಾಕಾಪುರುಷರಲ್ಲೊಬ್ಬ.

ಬಾದರಕಾಯಯೋಗ-ವಿಹಾರಮಾಡುವ ಕೇವಲಿಗಳ ಕಾಯಯೋಗ.

ಬಾದರ-ಸ್ಥೂಲ.

ಬ್ರಹ್ಮೇಂದ್ರ-ಬ್ರಹ್ಮ ಮತ್ತು ಬ್ರಹ್ಮೋತ್ತರಕಲ್ಪಗಳ ಅಧಿಪತಿ.

ಭ

ಭವನಾಮರ-ಚತುರ್ನಿಕಾಯಾಮರರಲ್ಲಿ ಒಂದು ಭೇದ.

ಭವಪ್ರತ್ಯಯಜ್ಞಾನ-ದೇವತೆಗಳಿಗೂ ನಾರಕಿಗಳಿಗೂ ಬರುವ ಸಹಜವಾದ ಅವಧಿಜ್ಞಾನ.

ಭವಾವಳಿ-ಜನ್ಮಾಂತರಗಳು.

ಭವ್ಯ-ಸಮ್ಯಗ್‌ಜ್ಞಾನಾದಿಗಳನ್ನು ಪಡೆಯಲು ಯೋಗ್ಯತೆಯನ್ನು ಗಳಿಸಿಕೊಂಡಿರುವ ಸುಕೃತಿ.

ಭವ್ಯಸಸ್ಯಸಮೃದ್ಧಿ-ಭವ್ಯಜೀವಗಳ ಸಮೃದ್ಧಿ.

ಮ

ಮಂದರಪರ್ವತ-ಮೇರುಪರ್ವತ, ಒಟ್ಟು ಹದಿನಾರು ಮೇರುಪರ್ವತಗಳಿವೆ.

ಮನಃಪರ್ಯಯ-ಮತಿ, ಶ್ರುತ, ಅವಧಿ, ಮನಃಪರ್ಯಾಯ-ಎಂಬ ಜ್ಞಾನಗಳಲ್ಲಿ ನಾಲ್ಕನೆಯದು. ಇನ್ನೊಬ್ಬರ ಮನಸ್ಸಿನಲ್ಲಿರುವುದನ್ನರಿಯುವುದು.

ಮನು-ಜನರಿಗೆ ವಿವೇಕವನ್ನು ಹೇಳಿ ಅಭಯವನ್ನಿತ್ತು ಅವರನ್ನು ರಕ್ಷಿಸಿದ ಮಹಾಪುರುಷ. ಒಟ್ಟು ಹದಿನಾರು ಮನುಗಳು. ಪ್ರತಿಶ್ರುತಿ ಮೊದಲನೆಯ ಮನು. ಭರತಚಕ್ರವರ್ತಿ ಹದಿನಾರನೆಯ ಮನು.

ಮಹತ್ತರದೇವಿ-ವೃದ್ಧರೂ ಪೂಜ್ಯರೂ ಆದ ದೇವತೆಗಳಿಗೆ ಸಾಮಾನಿಕದೇವರೆಂದೂ ಮಹತ್ತರದೇವರೆಂದೂ ಹೆಸರು. ಅಂಥ ದೇವಿಯರು ಮಹತ್ತರ ದೇವಿಯರು.

ಮಹಾತಮಃಪ್ರಭಾ-ಏಳನೆಯ ನರಕ.

ಮಹಾಹಿಮವತ್‌ಪರ್ವತ-ಹೈಮವತ ಹರಿಕ್ಷೇತ್ರಗಳ ಮೇರೆಯಲ್ಲಿರುವ ಪರ್ವತ. ಇದು ಹಿಮವತ್‌ಪರ್ವತಕ್ಕಿಂತ ಬೇರೆಯಾದದ್ದು.

ಮಾಧ್ಯಮಿಕಮತ-ಬೌದ್ಧಮತದ ಒಂದು ಶಾಖೆ; ಶೂನ್ಯವಾದ.

ಮುಕ್ತಾವಲೀತಪ-ಇಪ್ಪತ್ತೈದು ಉಪವಾಸ, ಒಂಬತ್ತು ಪಾರಣೆ ಇರುವ ಒಂದು ವ್ರತ.

ಮೂಢತ್ರಯ-೧. ದೇವಮೂಢ-ಮಿಥ್ಯಾದೇವರ ಉಪಾಸನೆ. ೨. ಲೋಕಮೂಢ-ನದೀಸ್ನಾನ, ಕ್ಷೇತ್ರಯಾತ್ರೆ-ಮುಂತಾದ್ದು ಪುಣ್ಯಕರವೆಂಬ ಭಾವನೆ, ೩. ಗುರು ಮೂಢ-ವಿಷಯವಾಸನೆಯುಳ್ಳ ಪಾಖಂಡಿಯನ್ನು ಮುನಿಯೆಂದು ತಿಳಿಯುವುದು.

## ಯ

ಯೋಗಾಚಾರಮತ-ಬೌದ್ಧಮತದ ಒಂದು ಶಾಖೆ. ವಿಜ್ಞಾನವಾದ.

## ರ

ರತ್ನತ್ರಯ-ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ ಮತ್ತು ಸಮ್ಯಕ್‌ಚಾರಿತ್ರ.

ರತ್ನಪ್ರಭಾ-ಮೊದಲನೆಯ ನರಕ.

ರತ್ನಾವಳೀತಪ-ಮೂವತ್ತು ಉಪವಾಸ, ಹತ್ತು ಪಾರಣೆಗಳಿರುವ ಒಂದು ವ್ರತ.

ರಸರ್ಧಿ-ಒಂದು ತಪಃಸಿದ್ಧಿ, ಇದು ಪ್ರಾಪ್ತವಾದ ಮುನಿಗಳ ಕೈಯಲ್ಲಿರುವ ನೀರಸ ಆಹಾರವು ಹಾಲು ತುಪ್ಪಗಳಂತೆ ರಸಯುಕ್ತವಾಗುತ್ತದೆ.

ರೈವೃಷ್ಟಿ-ಸುವರ್ಣರತ್ನಗಳ ವೃಷ್ಟಿ.

## ಲ

ಲಾಂತವೇಂದ್ರ-ಲಾಂತವ ಮತ್ತು ಕಾಪಿಷ್ಠಕಲ್ಪಗಳ ಅಧಿಪತಿ.

ಲೇಶ್ಯಾವಿಶುದ್ಧಿ-ಪುಣ್ಯ ಪಾಪಕರ್ಮಗಳಿಗೆ ಅನುಗುಣವಾಗಿ ಜೀವಕ್ಕೆ ಅಂಟಿಕೊಳ್ಳುವ ಒಂದು ಬಗೆಯ ಬಣ್ಣಕ್ಕೆ ಲೇಶ್ಯಾ ಎಂದು ಹೆಸರು. ಇದು ಕಪ್ಪು, ನೀಲಿ, ಬೂದು, ಕೆಂಪು, ಪದ್ಮ, ಶುಕ್ಲ ಎಂದು ಆರು ವಿಧ. ಇದನ್ನು ಕಳೆದುಕೊಳ್ಳುವುದು ಲೇಶ್ಯಾವಿಶುದ್ಧಿ.

## ವ

ವಜ್ರವೃಷಭನಾರಾಚಸಂಹನನ-ಮೂಳೆ, ಕೀಲು, ನರಗಳು ವಜ್ರದಂತೆ ಪ್ರಬಲವಾಗಿರುವ ದೇಹ.

ವರ್ತನಾ-ದ್ರವ್ಯವನ್ನು ಪರ್ಯಾಯಧರ್ಮದಲ್ಲಿ ಪ್ರವರ್ತನೆಗೊಳಿಸುವ ಸಾಮರ್ಥ್ಯ. ಇದು ಕಾಲದ ಗುಣ.

ವಾಲುಕಪ್ರಭಾ-ಮೂರನೆಯ ನರಕ.

ವಿಪಾಕವಿಚಯ-ಮೂರನೆಯ ಧರ್ಮಧ್ಯಾನ.

ವೃತ್ತಿಲಾಭ-ಜಿನದೀಕ್ಷೆಯನ್ನು ತೆಗೆದುಕೊಂಡ ಮೇಲೆ ಮಾಡುವ ಪಾರಣೆ.

ವೈಕ್ರಯಿಕ-ಅನೇಕ ರೂಪಗಳನ್ನು ಧರಿಸುವ ಸಾಮರ್ಥ್ಯ.

ವೈಯಾವೃತ್ಯ-ಮುನಿಗಳ ಶುಶ್ರೂಷೆ.

ವ್ಯುತ್ಸರ್ಗ-ಸರ್ವವಿಧಪರಿಗ್ರಹತ್ಯಾಗ.

## ಶ

ಶರ್ಕರಾಪ್ರಭಾ-ಎರಡನೆಯ ನರಕ.

ಶಿವಪದ-ಮುಕ್ತರು ನೆಲಸುವ ಸಿದ್ಧಶಿಲೆ.

ಶ್ರುತಸ್ಕಂಧ-ಗಣಧರರು ರಚಿಸಿದ ದ್ವಾದಶಾಂಗವುಳ್ಳ ಜೈನಶಾಸ್ತ್ರ.

ಶ್ರೇಢೀಬದ್ಧ-ಇಂದ್ರಕಬಿಲದ ನಾಲ್ಕು ಕಡೆಗಳಲ್ಲಿ ಸಾಲಾಗಿರುವ ಬಿಲಗಳು ಶ್ರೇಢೀಬದ್ಧ ಬಿಲಗಳು.

ಷ

ಷೋಡಶಭಾವನೆಗಳು-ತೀರ್ಥಂಕರತ್ವವನ್ನು ಸಾಧಿಸಿಕೊಡತಕ್ಕ ದರ್ಶನವಿಶುದ್ಧಿ, ವಿನಯಸಂಪನ್ನತೆ-ಮುಂತಾದ ಹದಿನಾರು ಭಾವನೆಗಳು.

ಸ

ಸಪ್ತರ್ಧಿ-ಏಳು ಋದ್ಧಿಗಳು. ಋದ್ಧಿಯೆಂದರೆ ತಪಸ್ಸಿನಿಂದ ಪ್ರಾಪ್ತವಾಗುವ ಸಿದ್ಧಿ. ೧. ಬುದ್ಧಿ ೨. ಕ್ರಿಯೆ ೩. ವಿಕ್ರಿಯೆ ೪. ತಪ ೫. ಬಲ ೬. ಔಷಧ ೭. ರಸ.

ಸಮವಸರಣ-ತೀರ್ಥಂಕರನು ಧರ್ಮೋಪದೇಶ ಮಾಡಲೆಂದು ಕುಬೇರನು ನಿರ್ಮಿಸಿದ ಮಂಟಪ.

ಸರ್ವಾರ್ಥಸಿದ್ಧಿ-ಅನುತ್ತರವಿಮಾನಗಳಲ್ಲಿ ಶ್ರೇಷ್ಠವಾದ ವಿಮಾನ.

ಸಂವರ-ಒಂದು ತತ್ತ್ವ. ಜೀವನಲ್ಲಿ ಕರ್ಮಾಣುಗಳು ಸೇರದಂತೆ ತಡೆಯುವುದು.

ಸರ್ವತೋಭದ್ರ-(೧) ಎಪ್ಪತ್ತೈದು ಉಪವಾಸಗಳೂ ಇಪ್ಪತ್ತೈದು ಪಾರಣೆಗಳೂ ಇರುವ ಒಂದು ವ್ರತ (೨) ಭರತಚಕ್ರವರ್ತಿಯ ಅರಮನೆಯ ಗೋಪುರ (೩) ಅರ್ಧಮಾಂಡಲಿಕರು ಮಾಡುವ ಜಿನಪೂಜೆ (೪) ವರ್ತುಲಾಕಾರದಲ್ಲಿ ಕಟ್ಟಿದ ಒಂದು ಆಕೃತಿವಿಶೇಷವಿರುವ ಮನೆ.

ಸಾಗರ-(ಕಾಲ ವಿಭಾಗವನ್ನು ನೋಡಿ)

ಸಿದ್ಧ-ಕರ್ಮಮಲಗಳಿಲ್ಲದ ಶುದ್ಧಜೀವ.

ಸಿದ್ಧಪರಮೇಷ್ಠಿ-ಜ್ಞಾನಾವರಣಾದಿ ಅಷ್ಟಕರ್ಮಗಳನ್ನು ನಾಶಪಡಿಸಿದ ಶುದ್ಧಾತ್ಮ

ಸಿದ್ಧಾಯತನ-ಅಕೃತ್ರಿಮ ಜಿನಾಲಯ.

ಸಿಂಹವಿಕ್ರೀಡಿತ-ಹಲವಾರು ಉಪವಾಸ, ಪಾರಣೆಗಳಿಂದ ಜಟಿಲವಾದ ಒಂದು ಕಠಿಣ ವ್ರತ.

ಸುಷಮ-(ಕಾಲವಿಭಾಗವನ್ನು ನೋಡಿ)

ಸ್ಥಾನಲಾಭ-ಜಿನದೀಕ್ಷೆ ಪಡೆದ ಭವ್ಯನು ಪಾರಣೆಗಾಗಿ ಮನೆಗೆ ಹೋಗುವುದು.

# ಅನುಬಂಧ-೧

## ಜೈನಸಿದ್ಧಾಂತದಲ್ಲಿ ಕಾಲ ಮತ್ತು ಕಾಲವಿಭಾಗ

ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಎಂಬ ಆರು ದ್ರವ್ಯಗಳಲ್ಲಿ ಕಾಲ ಸೇರಿದೆ. ಈ ಕಾಲದ್ರವ್ಯವು ಅಮೂರ್ತ, ಸೂಕ್ಷ್ಮ ಮತ್ತು ಅಣುಪ್ರಮಾಣ ಉಳ್ಳದ್ದು. ಕಾಲಾಣುಗಳು ಅನಂತವಾಗಿದ್ದು ರತ್ನರಾಶಿಯಂತೆ ಲೋಕಾಕಾಶದಲ್ಲಿ ತುಂಬಿಕೊಂಡಿವೆ. ಇವು ಒಂದಕ್ಕೊಂದು ಸೇರಿ ಸಂಘಾತವಾಗುವುದಿಲ್ಲ. ಜೀವಾಜೀವಗಳ ವರ್ತನೆಗೆ ಎಂದರೆ ಪರಿಣಾಮಕ್ಕೆ ಕಾರಣವಾದದ್ದು ಕಾಲ. ಇದರಲ್ಲಿ ಕ್ರಿಯೆ ಇಲ್ಲ. ವಸ್ತುರೂಪದಲ್ಲಿರುವ ಇದು ಮುಖ್ಯಕಾಲ. ಇದು ನಿತ್ಯ, ಸಮಯ, ನಾಡಿ, ಮುಹೂರ್ತ, ದಿನ-ಮುಂತಾದ ವಿಭಾಗವು ವ್ಯವಹಾರಕ್ಕಾಗಿ ಕಲ್ಪಿತವಾಗಿದೆ. ಇದು ವ್ಯವಹಾರಕಾಲ.

ಅತಿಸೂಕ್ಷ್ಮವಾದ ಸ್ಥಳಾವಕಾಶಕ್ಕೆ ಪ್ರದೇಶವೆಂದು ಹೆಸರು. ಒಂದು ಪರಮಾಣು ಮಂದಗತಿಯಿಂದ ಒಂದು ಪ್ರದೇಶಕ್ಕೆ ಸರಿಯುವಷ್ಟು ಕಾಲಕ್ಕೆ ಸಮಯ ಎಂದು ಸಂಜ್ಞೆ. ಕಾಲವಿಭಾಗದಲ್ಲಿ ಸಮಯದಲ್ಲಿ ಅತ್ಯಂತ ಚಿಕ್ಕದು. ಕಲ್ಪ (ಯುಗ) ಅತ್ಯಂತ ದೊಡ್ಡದು. ಸಂಖ್ಯಾಗಣನೆಯಲ್ಲಿ ಸಂಖ್ಯಾತ, ಅಸಂಖ್ಯಾತ, ಅನಂತ - ಎಂದು ಮೂರು ಸಂಖ್ಯೆಗಳಿವೆ. ಇವು ಕ್ರಮವಾಗಿ ಒಂದಕ್ಕಿಂತ ಒಂದು ದೊಡ್ಡದು ಎಂದು ಮಾತ್ರ ಇಲ್ಲಿ ಹೇಳಬಹುದು.

### ಕಾಲವಿಭಾಗದ ಕೋಷ್ಟಕ

೧ ಸಮಯ-ಒಂದು ಪರಮಾಣು ಮಂದಗತಿಯಿಂದ ಒಂದು ಪ್ರದೇಶಕ್ಕೆ ಸರಿಯುವಷ್ಟು ಕಾಲ

ಅಸಂಖ್ಯಾತ ಸಮಯ-೧ ಆವಲಿ

ಸಂಖ್ಯಾತ ಆವಲಿ-೧ ಉಚ್ಛ್ವಾಸ (ಸುಮಾರು ೩/೪ ಸೆಕೆಂಡ್)

೭ ಉಚ್ಛ್ವಾಸ-೧ ಸ್ತೋಕ

೭ ಸ್ತೋಕ-೧ ಲವ (ನಿಮೇಷ)

೩೮೧/೨ ಲವ-೧ ನಾಡಿ (೨೪ ಮಿನಿಟ್) (ನಾಡಿಕಾ, ನಾಲೀ, ಘಟೀ)

೨ ನಾಡಿ-೧ ಮುಹೂರ್ತ

೩೦ ಮುಹೂರ್ತ-೧ ಅಹೋರಾತ್ರ (ದಿನ)

೧೫ ಅಹೋರಾತ್ರ-೧ ಪಕ್ಷ

೨ ಪಕ್ಷ - ೧ ಮಾಸ

೨ ಮಾಸ - ೧ ಋತು

೩ ಋತು- ೧ ಅಯನ

೨ ಅಯನ-೧ ವರ್ಷ

ಹತ್ತು ಸಾವಿರ ವರ್ಷ-೧ ಆಯುತ

ಹತ್ತು ಆಯುತ-೧ ಲಕ್ಷ

೮೪ ಲಕ್ಷ ವರ್ಷ-೧ ಪೂರ್ವಾಂಗ

೧ ಪೂರ್ವಾಂಗ X ೮೪ ಲಕ್ಷ - ೧ ಪೂರ್ವ (ಪುಬ್ಬ, ಪುವ್ವ) ೭೦೫೬೦೦೦೦೦೦೦೦೦೦ ವರ್ಷ)

ಈ ಗಣನೆ ೮೪ ಲಕ್ಷಗಳಿಂದ ಗುಣಿತವಾಗುತ್ತ ಉತ್ತರೋತ್ತರ ಅಧಿಕವಾಗುತ್ತದೆ. ಕ್ರಮವಾಗಿ ಅಧಿಕಸಂಖ್ಯೆಗಳ ಹೆಸರು ಹೀಗೆ-ಪೂರ್ವಾಂಗ, ಪೂರ್ವ, ನವುತಾಂಗ, ನವುತ (ನಯುತ), ಕುಮುದಾಂಗ, ಕುಮುದ, ಪದ್ಮಾಂಗ, ಪದ್ಮ, ನಲಿನಾಂಗ, ನಲಿನ, ಕಮಲಾಂಗ, ಕಮಲ, ತುಟ್ಯಂಗ, ತುಟಿ (ತುಟಿಕ), ಅಟಟಾಂಗ, ಅಟಟ, ಅಮಮಾಂಗ, ಅಮಮ, ಹಾಹಾಂಗ, ಹಾಹಾ, ಹೂಹ್ವಂಗ, ಹೂಹೂ, ಲತಾಂಗ ಲತಾ, ಮಹಾಲತಾಂಗ, ಮಹಾಲತಾ, ಶಿರಃಪ್ರಕಂಪಿತ, ಹಸ್ತಪ್ರಹೇಲಿತ, ಅಚಲ. (ಉದಾ:- ಪೂರ್ವ X ೮೪ ಲಕ್ಷ = ನವುತಾಂಗ. ನವುತಾಂಗ X ೮೪ ಲಕ್ಷ - ನವುತ ಇತ್ಯಾದಿ). ಇವಿಷ್ಟು ಸಂಖ್ಯಾತ, ಇದಕ್ಕೂ ಹೆಚ್ಚಿನದು ಅಸಂಖ್ಯಾತ, ಕೇವಲಜ್ಞಾನಿ ಗೋಚರವಾಗತಕ್ಕ ಸಂಖ್ಯೆ ಅನಂತ. ಕೋಟಾಕೋಟಿ-ಒಂದು ಕೋಟಿಯನ್ನು ಒಂದು ಕೋಟಿಯಿಂದ ಗುಣಿಸಿದರೆ ಬರುವ ಗುಣಲಬ್ಧ.

ಪಲ್ಯೋಪಮ-ಎರಡು ಸಾವಿರ ಕ್ರೋಶ ಆಳವೂ ವರ್ತುಲವೂ ಆದ ತಗ್ಗನ್ನು ತೆಗೆದು ಅದರಲ್ಲಿ ಭೋಗಭೂಮಿಯಲ್ಲಿ ಹುಟ್ಟಿದ ಕುರಿಯ ಕೂದಲನ್ನು ಚಿಕ್ಕದಾಗಿ ಕತ್ತರಿಸಿ ತುಂಬಬೇಕು. ನೂರು ವರ್ಷಕ್ಕೆ ಒಂದು ಕೂದಲಿನಂತೆ ಹೊರಗೆ ತೆಗೆಯಬೇಕು! ಎಲ್ಲ ಕೂದಲನ್ನೂ ಹೊರದೆಗೆಯಲು ಎಷ್ಟು ವರ್ಷ ಬೇಕೋ ಅಷ್ಟು ಕಾಲಕ್ಕೆ ವ್ಯವಹಾರಪಲ್ಯವೆಂದು ಹೆಸರು. ಇದರ ಅಸಂಖ್ಯಾತ ಗುಣಿತವು ಉದ್ಧಾರಪಲ್ಯ. ಉದ್ಧಾರಪಲ್ಯದ ಅಸಂಖ್ಯಾತ ಗುಣಿತವು ಪಲ್ಯೋಪಮ. ಪಲ್ಯೋಪಮಕ್ಕೆ ಅದ್ಧಾಪಲ್ಯ ಎಂದೂ ಹೆಸರು. ಭೋಗಭೂಮಿಜರ ಆಯುಸ್ಸು ತ್ರಿಪಲ್ಯೋಪಮ (ಆದಿ, ೫-೪೧ವ) (ಪಲ್ಯ-ಪಲಿತ) ಸಾಗರ-ಹತ್ತು ಕೋಟಾಕೋಟಿ ಅದ್ಧಾಪಲ್ಯ.

ಅದ್ಧಾಸಾಗರ-ಸಾಗರೋಪಮ.

೧ ಭಿನ್ನಮುಹೂರ್ತ-ಮುಹೂರ್ತದ ಅಂತ್ಯದಲ್ಲಿರುವ ಒಂದು ಸಮಯವನ್ನು ಕಳೆದರೆ ಆಗುವ ಕಾಲ.

ಅಂತರ್ಮುಹೂರ್ತ-ಮುಹೂರ್ತದ ನಡುವಿನ ಕಾಲ ಎಂದು ಶಬ್ದಾರ್ಥ. ಮುಹೂರ್ತದ

ಆದಿಸಮಯ ಮತ್ತು ಅಂತ್ಯಸಮಯವನ್ನು ಬಿಟ್ಟು ನಡುವಿನ ಕಾಲ. ಇದು ಆವಲಿಗಿಂತ ಚಿಕ್ಕದೆಂದೂ, ದೊಡ್ಡದೆಂದೂ ಉಭಯವೂ ಅಂತ ರ್ಮುಹೂರ್ತವೇ ಎಂದೂ ಮತಭೇದವಿರುವಂತೆ ಕಾಣುತ್ತದೆ.

ದ್ವಿಚರಮಸಮಯ-ಒಂದು ಕಾರ್ಯವು ನೆರವೇರುವಾಗ ಕಡೆಯ ಎರಡು ಸಮಯ.

ಒಂದು ಕಲ್ಪವು (ಯುಗವು) ಅವಸರ್ಪಿಣೀ, ಉತ್ಸರ್ಪಿಣೀ ಎಂದು ಎರಡು ವಿಭಾಗವಾಗಿದೆ. ಅವಸರ್ಪಿಣಿಯಲ್ಲಿ ಆರು ಭೇದಗಳಿವೆ:-

| ಹೆಸರು | ಕಾಲಪ್ರಮಾಣ |
|---|---|
| ೧. ಸುಷಮಾ-ಸುಷಮಾ | ೪ ಸಾಗರೋಪಮ ಕೋಟಿಕೋಟಿ ವರ್ಷ |
| ೨. ಸುಷಮಾ | ೩ - " - |
| ೩. ಸುಷಮಾ-ದುಃಷಮಾ | ೨ - " - |
| ೪. ದುಃಷಮಾ-ಸುಷಮಾ | ೧ ಸಾಗರೋಪಮ ಕೋಟಿ ಕೋಟಿಗೆ ೪೨ ಸಾವಿರ ವರ್ಷ ಕಡಿಮೆ |
| ೫. ದುಃಷಮಾ | ೨೧ ಸಾವಿರ ವರ್ಷ |
| ೬. ಅತಿದುಃಷಮಾ (ದುಃಷಮಾ-ದುಃಷಮಾ) | ೨೧ ಸಾವಿರ ವರ್ಷ |
| ೧ ಅವಸರ್ಪಿಣಿ-ಒಟ್ಟು | ೧೦ ಸಾಗರೋಪಮ ಕೋಟೀಕೋಟಿ ವರ್ಷ |

ಅವಸರ್ಪಿಣಿಯು ಕಳೆದ ಮೇಲೆ ವ್ಯತ್ಕ್ರಮದಿಂದ ಉತ್ಸರ್ಪಿಣಿಯು ಪ್ರಾರಂಭವಾಗಿ ಸುಷಮಾ-ಸುಷಮಾ ಪರ್ಯಂತ ಏರುತ್ತದೆ. ಇದೂ ಅವಸರ್ಪಿಣಿಯಷ್ಟೇ ಕಾಲಪ್ರಮಾಣ ಉಳ್ಳದ್ದು. ಈ ಕಾಲಚಕ್ರವು ಭರತ, ಐರಾವತಕ್ಷೇತ್ರಗಳಲ್ಲಿ ಸುತ್ತುತ್ತ ಇದೆ. ಮನುಷ್ಯನ ಆಯುಸ್ಸು, ಎತ್ತರ, ಆಕೃತಿ, ಸುಖ-ಇವು ಸುಷಮಾ-ಸುಷಮಾ ಕಾಲದಲ್ಲಿ ಅತ್ಯುನ್ನತ ಸ್ಥಿತಿಯಲ್ಲಿದ್ದು ಕ್ರಮವಾಗಿ ಹ್ರಾಸವಾಗುತ್ತ ಅತಿದುಃಷಮದಲ್ಲಿ ತುಂಬ ಕೆಳಮಟ್ಟವನ್ನು ಪಡೆಯುತ್ತದೆ. ಇದರ ವಿಸ್ತಾರವಾದ ವರ್ಣನೆ ಜೈನಶಾಸ್ತ್ರಗಳಲ್ಲಿ ದೊರೆಯುತ್ತದೆ. ಭರತ-ಐರಾವತಕ್ಷೇತ್ರಗಳನ್ನುಳಿದು ಇತರ ಕ್ಷೇತ್ರಗಳಲ್ಲಿ ಅವಸರ್ಪಿಣೀ-ಉತ್ಸರ್ಪಿಣಿಗಳಿಲ್ಲ. ಎಂದರೆ ಅಲ್ಲಿರತಕ್ಕವರ ಸುಖಭೋಗಾದಿಗಳು ನಿಯತವಾಗಿ ಅವರಿಗೆ ಗೊತ್ತಾದ ಒಂದೇ ಸ್ಥಿತಿಯಲ್ಲಿರುತ್ತವೆ.

ಈಗ ನಾವಿರುವುದು ಅವಸರ್ಪಿಣೀ ಕಾಲದಲ್ಲಿ. ಇದರ ಸುಷಮಾ-ದುಃಷಮಾ ಎಂಬ ಮೂರನೆಯ ಕಾಲದ ಅಂತಿಮಭಾಗದಲ್ಲಿ ಸನ್ಮತಿಯಿಂದ ಹಿಡಿದು ನಾಭಿರಾಜನವರೆಗೆ ಹದಿನಾಲ್ಕು ಮಂದಿ ಕುಲಂಕರರು ಜನಿಸಿ ಕರ್ಮಭೂಮಿಗೆ ಸಂಬಂಧಿಸಿದ ಯುಗಧರ್ಮವನ್ನು ಕ್ರಮವಾಗಿ ಬೋಧಿಸಿದರು. ಅದಕ್ಕೂ ಹಿಂದೆ ಭೋಗಭೂಮಿಯ

ಸ್ಥಿತಿಯೇ ಇದ್ದುದರಿಂದ ಯುಗಧರ್ಮದ ವಿವೇಚನೆ ಬೇಕಾಗಿರಲಿಲ್ಲ. ಅನಂತರ ದುಃಷಮಾ-ಸುಷಮಾ ಎಂಬ ನಾಲ್ಕನೆಯ ಕಾಲದ ಆರಂಭದಲ್ಲಿ ಮೊದಲನೆಯ ವೃಷಭ ತೀರ್ಥಂಕರರು ಜನಿಸಿದರು. ಹೀಗೆ ೨೪ ತೀರ್ಥಂಕರರು, ೧೨ ಚಕ್ರವರ್ತಿಗಳು, ೯ ಬಲದೇವರು, ೯ ವಾಸುದೇವರು, ೯ ಪ್ರತಿವಾಸುದೇವರು-ಒಟ್ಟು ಈ ೬೩ ಶಲಾಕಾಪುರುಷರು ದುಃಷಮಾ-ಸುಷಮಾ ಕಾಲದಲ್ಲಿ ಆಗಿಹೋದರು. ಅಂತಿಮ ತೀರ್ಥಂಕರರಾದ ಮಹಾವೀರರ ನಿರ್ವಾಣವಾದ ಮೇಲೆ ದುಃಷಮಾ ಎಂಬ ಐದನೆಯ ಕಾಲ ಪ್ರಾಪ್ತವಾಯಿತು. ಈಗ ನಡೆಯುತ್ತಿರುವುದು ದುಃಷಮಾ.

# ಅನುಬಂಧ - ೨

(ಹದಿನಾರನೆಯ ಆಶ್ವಾಸದ ೬೩ ರಿಂದ ೭೨ರ ಪರ್ಯಂತ ಇರುವ ಸಂಸ್ಕೃತ ಶ್ಲೋಕಗಳಿಗೆ ಸಂಬಂಧಿಸಿದ ವಿವರಣೆ)

**ಶ್ಲೋಕ ೬೩**

ಭವನಾವಾಸಗಳಲ್ಲಿರುವ ಜಿನಮಂದಿರಗಳನ್ನು ಈ ಶ್ಲೋಕದಲ್ಲಿ ಎಣಿಸಿ ಹೇಳಲಾಗಿದೆ. ಅಲ್ಲದೆ ವ್ಯಂತರದೇವತೆಗಳಿರುವ ಪರ್ವತಾದಿಗಳಲ್ಲಿಯೂ ಜ್ಯೋತಿರ್ವಿಮಾನಗಳಲ್ಲಿಯೂ ಅಸಂಖ್ಯಾತವಾಗಿ ಜಿನಮಂದಿರಗಳಿವೆ. ಇವೆಲ್ಲವೂ ಅಕೃತ್ರಿಮ. ಅಕೃತ್ರಿಮವೆಂದರೆ ಸ್ವತಃಸಿದ್ಧವಾಗಿ ಅನಾದಿನಿಧನವಾದ ಜಿನಮಂದಿರ, ಕೃತ್ರಿಮವೆಂದರೆ ಮನುಷ್ಯ ನಿರ್ಮಿತವಾದದ್ದು. ಜ್ಯೋತಿರ್ವಿಮಾನ-ಜ್ಯೋತಿರ್ಲೋಕ.

ಪೃಥಿವಿಯಿಂದ ೭೯೦ ಯೋಜನದ ಮೇಲೆ ಕ್ರಮವಾಗಿ ತಾರಾ, ಸೂರ್ಯ, ಚಂದ್ರ, ನಕ್ಷತ್ರ, ಶುಕ್ರ, ಗುರು, ಮಂಗಳ, ಶನಿ- ಮುಂತಾದ ಜ್ಯೋತಿರ್ಮಂಡಲವಿದೆ. ಚಂದ್ರನನ್ನು ಇಂದ್ರನೆಂದೂ ಸೂರ್ಯನನ್ನು ಪ್ರತೀಂದ್ರನೆಂದೂ ತಿಳಿಯಲಾಗಿದೆ.

**ಚಂದ್ರನ ಪರಿವಾರ**

| | |
|---|---|
| ಚಂದ್ರ | ೧ |
| ಸೂರ್ಯ | ೧ |
| ಗ್ರಹ | ೮೮ |
| ನಕ್ಷತ್ರ | ೨೮ |
| ತಾರಾ | ೬೬೯೭೫ |

ಒಂದು ಸ್ಥೂಲಗಣನೆಯ ಪ್ರಕಾರ ೯೧೧೪೪ ಚಂದ್ರರು ಈ ರೀತಿ ಪರಿವಾರ ಸಹಿತರಾಗಿ ಇದ್ದಾರೆಂದು ತಿಳಿದುಬರುತ್ತದೆ. ಜಂಬೂದ್ವೀಪದಿಂದ ಪುಷ್ಕರಾರ್ಧದವರೆಗೆ ೧೩೨ ಚಂದ್ರರಿದ್ದಾರೆ. ಈ ಜ್ಯೋತಿರ್ವಿಮಾನಗಳು ಚರ. ಅದಕ್ಕೂ ಮುಂದಿರತಕ್ಕವು ಅಚರ.

**ಶ್ಲೋಕ ೬೪, ೬೫**

ಇಲ್ಲಿ ಸೌಧರ್ಮದಿಂದ ಅಚ್ಯುತಕಲ್ಪದವರೆಗಿರುವ ೧೬ ಸ್ವರ್ಗಗಳಲ್ಲಿರುವ ಜಿನಮಂದಿರಗಳನ್ನು ಗಣಿಸಲಾಗಿದೆ. ಆನತ-ಆವರಣಕಲ್ಪಗಳನ್ನು ಒಂದೆಂದೂ ಪ್ರಾಣತ-ಅಚ್ಯುತಕಲ್ಪಗಳನ್ನು ಒಂದೆಂದೂ ತಿಳಿದು ಒಟ್ಟು ೧೪ ಕಲ್ಪಗಳೆಂದು ಗಣಿಸಿರುವುದೂ ಉಂಟು (ನೋಡಿ, ರಾಜವಾರ್ತಿಕ, ತ.ಸೂ. ೪-೧೯ರ ವ್ಯಾಖ್ಯಾನ)

**ಶ್ಲೋಕ ೬೬**

ಪ್ರಾಚ್ಯಾಂ-ಅಧೋಗ್ರೈವೇಯಕದ ವಿಮಾನಶ್ರೇಣಿಯಲ್ಲಿ, ತದಗ್ರೇ-ಅದರ ಮೇಲಿರುವ ಮಧ್ಯಮಗ್ರೈವೇಯಕದಲ್ಲಿ, ಚರಮೇ-ಉಪರಿಗ್ರೈವೇಯಕದಲ್ಲಿ.

ಅನುದಿಶಾವಾಸ-ಎಂಟುದಿಕ್ಕುಗಳು ಮತ್ತು ನಡುವೆ-ಹೀಗೆ ಒಂಬತ್ತು ಸ್ಥಳಗಳು.

ಅನುತ್ತರ-ಯಾವುದಕ್ಕೆ ಉತ್ತರ (ಮೇಲ್ಗಡೆ) ಇಲ್ಲವೋ ಆ ಸ್ಥಳ ಅನುತ್ತರ. ಇದರಲ್ಲಿ

ನಾಲ್ಕು ಕಡೆ ವಿಜಯ, ವೈಜಯಂತ, ಜಯಂತ, ಅಪರಾಜಿತ-ಎಂಬ ವಿಮಾನಗಳೂ (ಜಿನಮಂದಿರಗಳೂ) ನಡುವೆ ಸರ್ವಾರ್ಥಸಿದ್ಧಿಯೆಂಬ ವಿಮಾನವೂ ಇವೆ. ಒಟ್ಟು ಐದು ವಿಮಾನಗಳು.

**ಶ್ಲೋಕ ೬೭**

ಮಂದರಾದ್ರಿ-ಮೇರುಪರ್ವತ. ಇವು ಐದು ಇವೆ. ಮೇರುವಿನ ನಾಲ್ಕು ದಿಕ್ಕಿನಲ್ಲಿಯೂ ವನಗಳಿದ್ದು ಒಂದೊಂದು ವನದಲ್ಲಿ ನಾಲ್ಕು ಮಂದಿರಗಳಂತೆ ಒಂದು ಮೇರುವಿನಲ್ಲಿ ೧೬ ಮಂದಿರಗಳಿವೆ. ೧೬ X ೫ = ೮೦ ಮಂದಿರಗಳು. ಕುಂಡಲಾದ್ರಿ, ರುಚಕಾದ್ರಿಗಳು ಕುಂಡಲವರ ಮತ್ತು ರುಚಕವರದ್ವೀಪಗಳಲ್ಲಿವೆ. ಮಾನುಷೋತ್ತರಗಿರಿ ಪುಷ್ಕರಾರ್ಧದ್ವೀಪದ ನಡುವೆ ಇದೆ.

**ಶ್ಲೋಕ ೬೮**

ವರ್ಷಪರ್ವತ = ಕುಲಪರ್ವತ. ಕುರುಕ್ಷೋಣೀರುಹ = ಕುರುಕ್ಷೇತ್ರದಲ್ಲಿರುವ ವೃಕ್ಷ. ಇವು ಹತ್ತು ಇವೆ.

ವಿವರ

| | |
|---|---|
| ೧. ಜಂಬೂದ್ವೀಪದಲ್ಲಿ ದೇವಕುರು, ಉತ್ತರಕುರು ಎಂದು ಎರಡು ಕುರುಕ್ಷೇತ್ರಗಳು | ೧ ಜಂಬೂವೃಕ್ಷ<br>೧ ಶಾಲ್ಮಲೀವೃಕ್ಷ |
| ೨. ಧಾತಕೀದ್ವೀಪದಲ್ಲಿ ದೇವಕುರು, ಉತ್ತರ ಕುರು. | ೪ ಧಾತಕೀವೃಕ್ಷಗಳು |
| ೩. ಪುಷ್ಕರದ್ವೀಪದಲ್ಲಿ ೧ನೇ ಅರ್ಧದಲ್ಲಿ ೨ ಕುರುದೇಶಗಳು ೨ನೇ ಅರ್ಧದಲ್ಲಿ ೨ ಕುರುದೇಶಗಳು. | ೪ ಪುಷ್ಕರವೃಕ್ಷಗಳು |
| | ಒಟ್ಟು ೧೦ |

ಹೀಗೆ ಹತ್ತು ಕುರುಕ್ಷೇತ್ರಗಳಲ್ಲಿ ಹತ್ತು ವೃಕ್ಷಗಳಿವೆ. ಈ ವೃಕ್ಷಗಳಲ್ಲಿ ಒಂದೊಂದು ಜಿನಮಂದಿರವಿದೆಯೆಂದು ಅಭಿಪ್ರಾಯ. (ಜೈನಸಿದ್ಧಾಂತಕೋಶದಲ್ಲಿ ಜಂಬೂವೃಕ್ಷದ ಮೇಲೆ ೫, ಶಾಲ್ಮಲೀವೃಕ್ಷದ ಮೇಲೆ ೫ ಮಂದಿರಗಳಿವೆಯೆಂದು ಬರೆದಿದೆ) ಇಷ್ವಾಕಾರ ಪರ್ವತಗಳು ನಾಲ್ಕು.

**ಕ್ಷಿತಿಭೃತಾಂ ವಕ್ಷಾರನಾಮ್ನಾಂಶತೇ**

ಒಂದು ಮೇರುವಿಗೆ ಐದು ವಕ್ಷಾರಗಳಾದ್ದರಿಂದ ಐದು ಮೇರುಗಳಿಗೆ ೮೦ ವಕ್ಷಾರಗಳಾಗುತ್ತವೆ. ಜೈನಗ್ರಂಥಗಳಲ್ಲಿ ೮೦ ವಕ್ಷಾರಗಳೆಂದೇ ಇದೆ. ಪಂಪನು ೧೦೦ ವಕ್ಷಾರಗಳೆಂದು ಹೇಳಿದ್ದಾನೆ. ೭೧ನೇ ಶ್ಲೋಕದ ಟಿಪ್ಪಣಿಯಲ್ಲಿರುವ ವಿವರಣೆಯನ್ನು ನೋಡಿ.

**ಶ್ಲೋಕ ೬೯**

ಎಂಟನೆಯ ನಂದೀಶ್ವರದ್ವೀಪದಲ್ಲಿ ಅಂಜನ, ದಧಿಮುಖ, ರತಿಕರ ಎಂಬ ಪರ್ವತಗಳಿವೆ. ಇವುಗಳಲ್ಲಿ ೫೨ ಮಣಿಮಯ ಚೈತ್ಯಾಲಯಗಳುಂಟು.

ಆಷಾಢ, ಕಾರ್ತಿಕ, ಫಾಲ್ಗುಣಮಾಸಗಳ ಕಡೆಯ ಎಂಟು ದಿನಗಳಿಗೆ ಅಷ್ಟಾಹ್ನಿಕ ಪುಣ್ಯಪರ್ವಕಾಲವೆಂದು ಹೆಸರು. ಈ ಸಮಯದಲ್ಲಿ ಮಹೇಂದ್ರಾದಿ ದೇವತೆಗಳು ಮಹಗಳಿಂದ ಅರ್ಚನೆಯನ್ನು ಸಲ್ಲಿಸುತ್ತಾರೆ. ಆದ್ದರಿಂದಲೇ 'ಪುಣ್ಯಮಹೇ ಮಹೇಂದ್ರ ಮಹಿತಾನ್' ಎಂದು ಕವಿಯು ವಿಶೇಷವಾಗಿ ಹೇಳಿರುವುದು. ಈ ದೃಷ್ಟಿಯಿಂದ 'ಪುಣ್ಯಮಹಾಮಹೀಂದ್ರ ಮಹಿತಾನ್' ಎಂಬ ಸಾರ್ವತ್ರಿಕ ಪಾಠವನ್ನು ಅನುಗುಣವಾಗಿ ತಿದ್ದಲಾಗಿದೆ.

**ಶ್ಲೋಕ ೬೦**

ಈ ಶ್ಲೋಕದ ಪೂರ್ವಾರ್ಧದಲ್ಲಿ ೧೬ ಕಲ್ಪಗಳಲ್ಲಿಯೂ ಕಲ್ಪಾತೀತಗಳಾದ ಗ್ರೈವೇಯಕಾದಿಗಳಲ್ಲಿಯೂ ಇರುವ ಜಿನಗೃಹಗಳ ಮೊತ್ತವನ್ನು ಕೊಡಲಾಗಿದೆ. ಮೊತ್ತ ೮೪,೯೭,೦೨೩. ದ್ವಿತೀಯಾರ್ಧದಲ್ಲಿ ನಂದೀಶ್ವರಾದಿಗಳಲ್ಲಿರುವ ಚೈತ್ಯಗಳ ಮೊತ್ತವಿದೆ. ಮೊತ್ತ ೪೫೮. ಇದಕ್ಕೆ ವಿವರಣೆ.

**ಅಧ್ಯರ್ಧದ್ವೀಪ (ದ್ವಯ)**

ಜಂಬೂದ್ವೀಪ, ಧಾತಕೀದ್ವೀಪ, ಪುಷ್ಕರದ ಮೊದಲನೆಯ ಅರ್ಧದ್ವೀಪ-ಈ ೨೧/೨ ದ್ವೀಪಗಳು ಅಧ್ಯರ್ಧದ್ವೀಪದ್ವಯ. ಇದರಲ್ಲಿ ಮಾತ್ರ ಮನುಷ್ಯರ ವಾಸವಿದೆ. ಪುಷ್ಕರ ದ್ವೀಪದ ನಡುವೆ ಮಾನುಷೋತ್ತರ ಗಿರಿಯಿದ್ದು, ಅಲ್ಲಿಂದ ಆಚೆ ಮನುಷ್ಯವಾಸವಿಲ್ಲ. ಆದ್ದರಿಂದ ಈ ೨೧/೨ ದ್ವೀಪಗಳನ್ನು ಪ್ರತ್ಯೇಕಿಸಿ ಹೇಳಲಾಗುತ್ತದೆ. ಅಧ್ಯರ್ಧದ್ವೀಪದ್ವಯ = ಮನುಷ್ಯಲೋಕ.

**ಚೈತ್ಯಾಲಯಗಳ ವಿವರ**

| | |
|---|---|
| ೧. ನಂದೀಶ್ವರದ್ವೀಪದಲ್ಲಿ (ಅಂಜನ, ದಧಿಮುಖ, ರತಿಕರಗಿರಿಗಳಲ್ಲಿ) | ೫೨ |
| ೨. ಕುಂಡಲಾದ್ರಿಯಲ್ಲಿ | ೪ |
| ೩. ರುಚಕಾದ್ರಿಯಲ್ಲಿ | ೪ |
| | ಒಟ್ಟು ೬೦ |

| | |
|---|---|
| **೪. ಅಧ್ಯರ್ಧದ್ವೀಪದ್ವಯದಲ್ಲಿ** | |
| ಮಂದರಾದ್ರಿಗಳಲ್ಲಿ | ೮೦ |
| ಕುಲಾಚಲಗಳಲ್ಲಿ | ೩೦ |
| ವಕ್ಷಾರಗಿರಿಗಳಲ್ಲಿ | ೧೦೦ |
| ಇಷ್ವಾಕಾರಗಿರಿಗಳಲ್ಲಿ | ೪ |
| ಮಾನುಷೋತ್ತರಗಿರಿಯಲ್ಲಿ | ೪ |
| ವಿಜಯಾರ್ಧಪರ್ವತಗಳಲ್ಲಿ | ೧೭೦ |
| ಕುರುವೃಕ್ಷಗಳಲ್ಲಿ | ೧೦ |
| | ಒಟ್ಟು ೩೯೮ |

೩೯೮ + ೬೦ = ೪೫೮ ಚೈತ್ಯಾಲಯಗಳು

**ಶ್ಲೋಕ ೭೧**

೬೩ನೆಯ ಶ್ಲೋಕದಲ್ಲಿ ಜ್ಯೋತಿರ್ವಿಮಾನ, ವ್ಯಂತರಗೇಹಗಳಲ್ಲಿರುವ ಜಿನಾಲಯಗಳು ಅಸಂಖ್ಯ (ನಿಃಸಂಖ್ಯಾಃ) ವೆಂದು ಹೇಳಿದೆ. ಅಸಂಖ್ಯಾತವಾದವನ್ನು ಇಷ್ಟೇ ಎಂದು ನಿರ್ದೇಶಿಸುವುದು ಹೇಗೆ? ಆದ್ದರಿಂದ 'ಜ್ಯೋತಿರ್ವ್ಯಂತರಗೇಹ ರಚಿತವಾದವುಗಳು ಮತ್ತು' ಎಂದು ಇಲ್ಲಿ ಅರ್ಥವನ್ನು ಹೇಳಬೇಕಾಗಿದೆ. ಭವನವಾಸಿದೇವತೆಗಳ ಭವನಗಳಲ್ಲಿರುವ ಜಿನಮಂದಿರಗಳನ್ನು ಮಾತ್ರ ಇಲ್ಲಿ ಗಣಿತಕ್ಕೆ ಸೇರಿಸಿಕೊಳ್ಳಬೇಕಾಗುತ್ತದೆ.

| | | |
|---|---|---|
| ೧. ಕಲ್ಪಾತೀತಸಮೇತಕಲ್ಪಕಥಿತವಾದವು. | } ೭೦ನೇ ಶ್ಲೋಕ | ೮೪,೯೭,೦೨೩ |
| ೨. ನಂದೀಶ್ವರಾದಿಗಳಲ್ಲಿರತಕ್ಕವು. | | ೪೫೮ |
| ೩. ಭವನಾವಾಸಗಳಲ್ಲಿ (೬೩ನೇ ಶ್ಲೋಕ). | | ೭,೭೨,೦೦,೦೦೦ |
| | ಒಟ್ಟು | ೮,೫೬,೯೭,೪೮೧ |

ಹೀಗೆ ಈ ಶ್ಲೋಕದಲ್ಲಿ ಹೇಳಿದ ಒಟ್ಟು ಸಂಖ್ಯೆ ಸರಿಹೋಗುತ್ತದೆ.

**ವಿಚಾರ**

'ಕ್ಷಿತಿಭೃತಾಂ ವಕ್ಷಾರನಾಮ್ನಾಂ ಶತೇ' (ಶ್ಲೋ. ೬೮) ಇಲ್ಲಿ ಪಂಪನು ೧೦೦ ವಕ್ಷಾರ ಪರ್ವತಗಳೆಂದು ಹೇಳಿದ್ದಾನೆ. ೫ ಮಂದರಾದ್ರಿಗಳು (ಮೇರು) ಇವೆಯೆಂದೂ ಒಂದೊಂದು ಮಂದರಾದ್ರಿಗೆ ೧೬ವಕ್ಷಾರಗಳಂತೆ ಒಟ್ಟು ೮೦ ವಕ್ಷಾರಗಳಿವೆಯೆಂದೂ ಜೈನಗ್ರಂಥಗಳಲ್ಲಿ ವರ್ಣನೆಯುಂಟು. ಅಲ್ಲದೆ ಒಂದೊಂದು ಮಂದರಾದ್ರಿಗೆ 'ಗಜದಂತ' ಎಂಬ ೪ ಗಿರಿಗಳಿದ್ದು ಒಟ್ಟು ೨೦ ಗಜದಂತ ಗಿರಿಗಳಿವೆಯೆಂದೂ ಇವುಗಳಲ್ಲಿ ೨೦ ಚೈತ್ಯಾಲಯಗಳಿವೆಯೆಂದೂ ಹೇಳಿದೆ. ಪಂಪನು 'ಗಜದಂತ' ಗಿರಿಗಳನ್ನು ಹೇಳಿಲ್ಲ. ಆದ್ದರಿಂದ ಈ ೨೦ ಗಜದಂತಗಳನ್ನೂ ಸೇರಿಸಿ ೧೦೦ ವಕ್ಷಾರಗಳೆಂದು ಕವಿಯು ಹೇಳಿದ್ದಾನೆಂದು ಅನುಮಾನಿಸಬೇಕಾಗಿದೆ. ಗಜದಂತಕ್ಕೂ ವಕ್ಷಾರವೆಂಬ ವ್ಯವಹಾರ ಇರಬಹುದು.

ಇವಿಷ್ಟು (೮,೫೬,೯೭,೪೮೧) ಅಕೃತ್ರಿಮಚೈತ್ಯಾಲಯಗಳು. ವ್ಯಂತರಾವಾಸಗಳಲ್ಲಿಯೂ ಜ್ಯೋತಿರ್ವಿಮಾನಗಳಲ್ಲಿಯೂ ಇರತಕ್ಕವು ಅಸಂಖ್ಯವಾದ್ದರಿಂದ ಮಾತಿಗೆ ನಿಲುಕುವುದಿಲ್ಲವೆಂದು 'ಈಶಸ್ಯ ವಾ ಗೋಚರಾ:' ಎಂದು ಕವಿಯು ಉದ್ಗಾರವನ್ನೆತ್ತಿದ್ದಾನೆ. ಒಂದುವೇಳೆ 'ನಿಃಸಂಖ್ಯಾ :' ಎಂದೇ ವರ್ಣಿಸಲು ಸಾಧ್ಯವೆಂಬ ಅಭಿಪ್ರಾಯವಾದರೆ, 'ವಾಗ್ಗೋಚರಾ:' ಎಂದೇ ಶುದ್ಧಪಾಠವಿರಬಹುದು. ಈ ಪಕ್ಷದಲ್ಲಿ 'ಈಶಸ್ಯ' ಎಂಬುದಕ್ಕೆ ಪೂರ್ವಾನ್ವಯ. 'ಜಿನೇಶನ ಅಕೃತ್ರಿಮ ಗೃಹಗಳು ಈ ಪ್ರಕಾರ ವಾಗ್ಗೋಚರವಾಗಿವೆ' ಎಂದರ್ಥ.

**ಶ್ಲೋಕ ೭೨**

ಈ ಶ್ಲೋಕದಲ್ಲಿ ಚಕ್ರವರ್ತಿಗಳು ಅರ್ಚಿಸುವ ಕೃತ್ರಿಮ ಚೈತ್ಯಾಲಯಗಳನ್ನು ಪ್ರಸ್ತಾಪಿಸಲಾಗಿದೆ.






ಪ್ರಿಯ ಕನ್ನಡ ಬಂಧುಗಳೆ, ೧೯೧೫ರಲ್ಲಿ ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತು ಶತಮಾನೋತ್ಸವವನ್ನು ಪೂರೈಸಿದೆ. ಸ್ಥಾಪನೆಗೊಂಡಂದಿನಿಂದ ಇಂದಿನವರೆಗೂ ಕನ್ನಡ - ಕನ್ನಡಿಗ - ಕರ್ನಾಟಕದ ಒಳಿತಿಗೆ ಶ್ರಮಿಸುತ್ತಾ, ಕನ್ನಡಿಗರಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಎಚ್ಚರ ಮೂಡಿಸುವಲ್ಲಿ ಪರಿಷತ್ತಿನ ಪ್ರಕಟಣೆಗಳು ಮಹತ್ವದ ಪಾತ್ರ ವಹಿಸುತ್ತಾ ಬಂದಿವೆ. ನಮ್ಮ ಪ್ರಕಟಣೆಗಳು ಓದುಗರ ಜೇಬಿಗೆ ಭಾರವೆನಿಸುವಂಥವಲ್ಲ, ಆದಷ್ಟೂ ಕಡಿಮೆ ಬೆಲೆಯಲ್ಲಿ ಮೌಲಿಕ ಕೃತಿಗಳನ್ನು ಸಹೃದಯರಿಗೆ ಕೊಡಬೇಕೆನ್ನುವ ನೀತಿಗೆ ಪರಿಷತ್ತು ಈಗಲೂ ಬದ್ಧವಾಗಿದೆ. ಕನ್ನಡಿಗರನ್ನು ಪ್ರಜ್ಞಾವಂತರಾಗಿ, ಅಭಿಮಾನ ಧನರಾಗಿ, ವಿಶ್ವಮಾನವರಾಗಿ ರೂಪಿಸಲು ಪರಿಷತ್ತು ಪ್ರಕಟಿಸುವ ಸಾಹಿತ್ಯವು ಪೂರಕವಾಗಿರಬೇಕೆನ್ನುವ ಆಶಯ ನನ್ನದು.

ಪರಿಷತ್ತು ಈಗಾಗಲೇ ಪ್ರಕಟಿಸಿ ಅತ್ಯಂತ ಜನಪ್ರಿಯವಾಗಿರುವ ಪುರುಮುದ್ರಣ ಪುಸ್ತಕಗಳು ಹಾಗೂ ಹೊಸ ಪುಸ್ತಕಗಳನ್ನು ರಾಯಚೂರಿನಲ್ಲಿ ನಡೆಯುತ್ತಿರುವ ಅಖಿಲ ಭಾರತ ೮೦ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮುದ್ರಣಗೊಳಿಸಿ ಕನ್ನಡಿಗರ ಕೈಗೊಪ್ಪಿಸುವುದಕ್ಕೆ ನಮಗೆ ಹೆಮ್ಮೆಯೆನಿಸುತ್ತದೆ. ಸಹೃದಯರು ಈ ಪುಸ್ತಕಗಳನ್ನು ಎಂದಿನ ಪ್ರೀತ್ಯಾದರಗಳಿಂದ ಬರಮಾಡಿ ಕೊಳ್ಳುವರೆಂಬ ಭರವಸೆ ನನಗಿದೆ.

ಡಾ. ಮನು ಬಳಿಗಾರ್
ಅಧ್ಯಕ್ಷರು



**ಕನ್ನಡ ಸಾಹಿತ್ಯ ಪರಿಷತ್ತು**
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು-೫೬೦೦೧೮